# ಪ್ರಬುದ್ಧ ಕರ್ಣಾಟಕ

---

ಸಂಪುಟ ೩೯

(ಹೇವಿಳಂಬಿ ಸಂವತ್ಸರ)

ಮೈಸೂರು:

ಮೈಸೂರು ವಿಶ್ವವಿದ್ಯಾನಿಲಯ

೧೯೫೭-೧೯೫೮

# ವಿಷಯ ಸೂಚಿಕೆ

---

# ಪ್ರಬುದ್ಧ ಕರ್ಣಾಟಕ

| ಹೇವಿಳಂಬಿ ಸಂವತ್ಸರ | ೧೫೧ | ಚೈತ್ರ ಸಂಚಿಕೆ |
|---|---|---|

## ಕರ್ಣಾಟಕ ರಾಜ್ಯೋದಯ ಶ್ರೀಗೀತೆ

೧

ಓಂ ದ್ಯೌಃ ಶಾಂತಿರಂತರಿಕ್ಷಂ ಶಾಂತಿಃ |
ಪೃಥಿವೀ ಶಾಂತಿರಾಪಃ ಶಾಂತಿರೋಷಧಯಃ ಶಾಂತಿಃ |
ವನಸ್ಪತಯಃ ಶಾಂತಿರ್ವಿಶ್ವೇದೇವಾಃ ಶಾಂತಿರ್ಬ್ರಹ್ಮ ಶಾಂತಿಃ |
ಸರ್ವಂ ಶಾಂತಿಃ ಶಾಂತಿರೇವ ಶಾಂತಿಃ ||

ಬಾರಮ್ಮ ದೇವಿ,
ಓ ತಾಯಿ ಭಾರತಿಯೆ, ನಿನ್ನ ಮಗಳನು ಹರಸು.
ವರುಷ ಒಂಬತ್ತರಾಚೆಯಲಿ ಬಂಧನಮುಕ್ತಳಾದಂದು
ನೀ ಕಂಡ ಕನಸು,
ಎರಡು ಕೋಟಿಯ ಹೃದಯದಲಿ ಶತಮಾನದಿಂ ಕುದಿದ ಒಮ್ಮನಸು,
ದುರ್ಮುಖಿಯೆ ಸುಮುಖಿ ತಾನಾದ ದೀವಳಿಯ ಸುದಿನದಿಂದು
ತಾನಾಗಿಹುದು ನನಸು!
ಪುಲಕಿಸುತ್ತಿದೆ ಪಡುಗಡಲ್ ;
ರೋಮಾಂಚನದಿ ನಿಮಿರುತಿದೆ ಸಹ್ಯಾದ್ರಿ ;

ಗಂಧ ಚವರಿಯ ಬೀಸುತಿದೆ ಮಲಯ ವನಸೀಮೆ;
ಪಕ್ಷಿ ಕೋಟಿಯ ಕಂಠ ಘೇಘೋಷಮುಕ್ಕುತಿದೆ
ದಿಕ್ಕು ಕಿವಿಗೆಡುವಂತೆ, ದೇವರ್ಕಳೊಲಿವಂತೆ,
ಕಾರ್ತಿಕದ ಬಾನ್ನೀಲಿ ತಾಂ ಶಾಂತಿಯಾಲಿಂಗನದಿ
ಕನ್ನಡದ ನೆಲಮಗಳಸಪ್ಪಿ ಚುಂಬಿಸುವಂತೆ!
ನಮಿಸುತಿದೆ ತುಹಿನಗಿರಿ ಚಾಮುಂಡಿಯಂ;
ಗಂಗೆ ಓಲೈಸಿಹಳು ಕಾಣ್ ತಾಯಿ ತುಂಗೆಯಂ;
ನಿನ್ನ ಮಗಳಭ್ಯುದಯ ನಿನಗಭ್ಯುದಯಮಲ್ತೆ?
ಬಾರಮ್ಮ ದೇವಿ,
ಓ ತಾಯೆ ಭಾರತಿಯೆ, ನಿನ್ನ ಮಗಳನು ಹರಸಿ,
ಹಾಡು ಓಂ ಶಾಂತಿಯಂ!
ನಿನ್ನ ಋಷಿಜನ ಬರಲಿ,
ನಿನ್ನ ಕವಿಜನ ಬರಲಿ,
ನಿನ್ನ ಗುರುಜನ ಬರಲಿ,
ನಿನ್ನಖಿಲ ಶ್ರೀವಿಭೂತಿಗಳೆಲ್ಲರೈತರಲಿ,
ಕನ್ನಡಾಂಬೆಯ ಹರಸಿ ಹಾರೈಸಲಿ!

೨

ಬರಿಯ ಚದರ ಮೈಲಿಗಳಲ್ತು ಕರ್ಣಾಟಕದ ದೇಶವಿಸ್ತೀರ್ಣಂ;
ನೆನೆ, ನೆನೆ, ಮನೋಮಯದ ಸಂಸ್ಕೃತಿಯ ಕೋಶವಿಸ್ತೀರ್ಣಮಂ.
ಮರೆಯದಿರು ಚದರ ಸಂವತ್ಸರದ ಶತಮಾನಗಳ ಕಾಲವಿಸ್ತೀರ್ಣಮಂ,
ಪ್ರಾಣಮಯ ಭಾವಪ್ರದೇಶವಿಸ್ತೀರ್ಣಮಂ,
ಚಿದಾಕಾಶ ವಿಜ್ಞಾನವಿಸ್ತೀರ್ಣಮಂ!

೩

ಓ ಏಳು, ನೃಪತುಂಗ ದೇವ,
ಕೃಪೆಯಿಟ್ಟು ಕವಿರಾಜಮಾರ್ಗದರಮನೆಯ ಸಿಂಹಾಸನವನಿಳಿದು ಬಾ
ಕರ್ಣಾಟಕದ ನಿನ್ನ ಈ ಹೆಸರ ತಾಯ್ನೆಲಕೆ.
ನೀನಂದು ಹಾಡಿದಾ ಕನ್ನಡದ ನಾಡು
ಒಂದುಗೂಡಿದೆ ಇಂದು ಇದೊ ಬಂದು ನೋಡು.

ಸಂವತ್ಸರ ಸಹಸ್ರ ಸೋಪಾನ ಪಂಕ್ತಿಗಳನಿಳಿದು ಬಿಜಯಗೈ
ಪುಣ್ಯ ದೀಪಾವಳಿಯ ದಿನದ ಈ ರಾಜ್ಯೋದಯ ಮಹೋತ್ಸವಕ್ಕೆ.
ಇಳಿದು ಬರುವಾ ದಾರಿಯೊಳೆ ನಿಂತಿಹರು ಸಾಲುಸಾಲಾಗಿ
ಕನ್ನಡದ ಕುಲದೀಪಧಾರಿಗಳು, ಅವರನೂ ಕರೆದು ತಾ.
ಅಲ್ಲಿ ದೊರೆ, ಇಲ್ಲಿ ಕವಿ, ಅಲ್ಲಿ ಸೇನಾನಿ;
ಇಲ್ಲಿ ಗಾಯಕ, ಅಲ್ಲಿ ಶಿಲ್ಪಿ;
ಇಲ್ಲಿ ಗುರು, ಅಲ್ಲಿ ರಸಋಷಿ ಮತ್ತೆ ಅನುಭಾವಿ;
ದಾರ್ಶನಿಕ, ದ್ರಷ್ಟಾರ, ಸರ್ವಶಾಸ್ತ್ರಜ್ಞಾನಿ;
ಒಬ್ಬರೆಯೆ? ಇಬ್ಬರೆಯೆ? ಕೋಟಿ ಕೋಟಿ!
ಕಡುಗ, ಕುಡುಗೋಲು, ಲೆಕ್ಕಣಿ, ಮೇಟಿ!
ಹೆಸರಾಂತವರಿಗಿಂತಲೂ ಹೆಸರ ದೌರ್ಬಲ್ಯವನು ದಾಟಿ
ನಿಂತಾ ಮಹಾತ್ಮರೆಯೆ ಕೋಟಿ ಕೋಟಿ!
ಎಲ್ಲರನು ಕರೆದು ತಾ ಇಂದಿನೀ ಉತ್ಸವಕ್ಕೆ.
ನಿಮಗೆಲ್ಲ ಸೊಗಮಕ್ಕೆ, ನಿಮಗೆಲ್ಲ ಜಯಮಕ್ಕೆ,
ನಿಮ್ಮ ಆಶೀರ್ವಾದ ನಮಗೆ ಶುಭಮಕ್ಕೆ!

ಓಂ ದ್ಯೌಃ ಶಾಂತಿರಂತರಿಕ್ಷಂ ಶಾಂತಿಃ |
ಪೃಥಿವೀ ಶಾಂತಿರಾಪಃ ಶಾಂತಿರೋಷಧಯಃ ಶಾಂತಿಃ |
ವನಸ್ಪತಯಃ ಶಾಂತಿರ್ವಿಶ್ವೇದೇವಾಃ ಶಾಂತಿರ್ಬ್ರಹ್ಮ ಶಾಂತಿಃ |
ಸರ್ವಂ ಶಾಂತಿಃ ಶಾಂತಿರೇವ ಶಾಂತಿಃ ||

೧–೧೧–೫೬ —ಕುವೆಂಪು
ಮೈಸೂರು.

## ಗಾಥಾಸಪ್ತಶತಿಯಿಂದ

೧

ಗಂಡನು—ಬಡತನವಡರಿದ ಮನೆಯೊಳು—
ಆಕುಲಗೊಳದಿರಲೆಂದು;
ಬಯಕೆಯ ಕೇಳಿದರಿನಿಯಳು ನುಡಿವಳು
ಮತ್ತೊಮ್ಮೆ, ಬರಿಯ ನೀರೆಂದು.

೨

ಮೇಲೆತ್ತಿ ಕಣ್ಣನು ಸಡಿಲಿಸಿ ಬೆರಳನು
ಪಥಿಕನು ತಡೆತಡೆದೀಂಟುವನೆಂತು
ತೆಳ್ಳನೆ ಧಾರೆಯನಿನ್ನಷ್ಟು ತೆಳುಗೈದು
ಬಿಡುವಳು ಅರವಟಿಗೆಯ ಬಾಲೆಯಂತು.

೩

ಹೊತ್ತಿಳಿವಂದು ಬಂದಳಿಯನ ಮೋಹದು-
ತ್ಕಂಠೆಯ ನಿಮ್ಮಡಿಸುವುದು
ಛಿತ್ತ್ರಲಿನೊಳು ವಧು ಮೀಯುತಲಿಹಳೆಂದು
ಪಿಸುಗುಡುವ ಕೈಬಳೆ ಸದ್ದು.

೪

ಆಕೆ ತಾ ನಿನ್ನನೆ ಒಲ್ಲೆನೆಂದೆನುವಳು;
ಅವಳೆಯೆ ನನಗಿಷ್ಟವೆಂದೆನ್ನುವೆ.
ನನಗೆ ನೀನಿಷ್ಟನು, ನೀ ಒಲ್ಲೆಯೆನ್ನುವೆ;
ನೋಡುವೊಡೊಲುಮೆಯೆ ಕೊಂಕಲ್ಲವೆ?

ಎಸ್. ವಿ. ಪರಮೇಶ್ವರಭಟ್ಟ

# ಶ್ರೀ ರಾಮಾಯಣ ದರ್ಶನಂ

## (ಒಂದು ರಸವಿಮರ್ಶೆ)

### ೧

"ರಾಮಾಯಣ"—ಎಂದೊಡನೆ ನಮ್ಮಲ್ಲಿ ಏನೋ ಒಂದು ಪವಿತ್ರ ಭಾವ ಸ್ಫುರಿಸುತ್ತದೆ; ಒಂದು ದರ್ಶನ ಮೂಡುತ್ತದೆ. ಅದು ಸುಶಿಕ್ಷಿತರೆಂಬುವವರಲ್ಲಿ ಅಷ್ಟೇ ಅಲ್ಲ. ಅಕ್ಷರ ವಿದ್ಯೆಯನ್ನು ಅರಿಯದ ಅಶಿಕ್ಷಿತರಲ್ಲಿಯೂ ಇಂಥ ದರ್ಶನವೊಂದು ಮೂಡಿ, ಮೂರ್ತರೂಪ ತಾಳುವುದನ್ನು ನಾವು ಕಾಣುತ್ತೇವೆ. ಭಾರತದ ಈ ತುದಿಯಿಂದ ಆ ತುದಿಯ ವರೆಗೂ ರಾಮಾಯಣದ ಇಂಥದೊಂದು ದಿವ್ಯಪ್ರಭಾವವನ್ನು ಕಾಣಬಹುದಾಗಿದೆ. ಜನಸಾಮಾನ್ಯರಿಗೆ ವಾಲ್ಮೀಕಿ ಗೊತ್ತಿಲ್ಲ, ತುಲಸೀದಾಸ ಗೊತ್ತಿಲ್ಲ. ನಾಗಚಂದ್ರ, ಕೃತ್ತಿವಾಸ, ಕಂಬ ಮತ್ತು ಶ್ರೀಧರರನ್ನು ಅವರು ಅರಿತಿಲ್ಲ. ಆದರೆ ರಾಮಕಥೆಯನ್ನು ಅವರು ತಿಳಿದಿದ್ದಾರೆ. ಅವರ ಜೀವನವನ್ನು ಅವರಿಗರಿಯದಂತೆಯೇ ಅದು ಮೇಲಕ್ಕೆತ್ತಿದೆ. ಅವರವರ ಹಳ್ಳಿಯ ಹತ್ತಿರ ರಾಮ-ಸೀತೆಯರು ಸಂಚರಿಸಿದುದನ್ನು ಅವರಿಂದಿಗೂ ಕಥೆಮಾಡಿ, ಹೇಳುತ್ತಾರೆ; ಕೇಳಿ ಹರ್ಷಪುಳಕಿತರಾಗುತ್ತಾರೆ. ರಾಮಗಿರಿಯನ್ನು ತೋರಿಸುತ್ತಾರೆ. ಸೀತಾಕುಂಡದಲ್ಲಿ ಮೀಯುತ್ತಾರೆ. ಕಲ್ಲಿನಲ್ಲಿ ಮೂಡಿದ ಸೀತೆಯ ಸೆರಗನ್ನು ಗುರುತಿಸುತ್ತಾರೆ, ಗೋಳಿಡುತ್ತಾರೆ. ಅಲ್ಲಲ್ಲಿ ನದಿಯ ತೀರಗಳಲ್ಲಿ ರಾಮದೇವರ ಮಠಗಳಿವೆ. ಗೋದಾವರಿ, ಪಂಚವಟಿಗಳು ಭಾರತೀಯರ ಯಾತ್ರಾಸ್ಥಳಗಳಾಗಿವೆ; ಕಾಶಿ ಕೋಸಲಗಳಿಂದ ಸಿಂಹಳದ ರಾಮೇಶ್ವರ-ರಾಮಸೇತುವೆಯ ವರೆಗೆ ರಾಮತ್ವ ಎಲ್ಲರಲ್ಲಿಯೂ ಇನ್ನೂ ಮನೆ ಮಾಡಿಕೊಂಡಿದೆ; ಮುಂದೆಯೂ ಮನೆಮಾಡಿಕೊಂಡಿರುತ್ತದೆ. ದಕ್ಷಿಣ ಭಾರತದಲ್ಲಿ ರಾಮಭಕ್ತನಾದ ಹನುಮಂತನ ಗುಡಿಯಿಲ್ಲದ ಹಳ್ಳಿಯೇ ಇಲ್ಲ. ಹೀಗೆ ರಾಮಾಯಣ ಭಾರತೀಯರ ಭಾವಜೀವನದಲ್ಲಿ ಹಾಸುಹೊಕ್ಕಾಗಿ ನಿಂತ ಕಾವ್ಯವಾಗಿದೆ, ಒಂದು ಚೈತನ್ಯಶಕ್ತಿಯಾಗಿದೆ. ಇಂದು ರಾಮ ಒಬ್ಬ ವ್ಯಕ್ತಿಯಾಗಿಲ್ಲ, ಶಕ್ತಿಯಾಗಿದ್ದಾನೆ, ಭಾರತೀಯರಲ್ಲಿ—ಅದೂ ರಾಮಾಯಣದ ಸೃಷ್ಟಿಯಿಂದ.

ಭಾರತೀಯರಲ್ಲಿ ರಾಮನಿಗಿಂತ 'ರಾಮನಾಮ'ದ ಮಹಿಮೆ ಇನ್ನೂ ಹೆಚ್ಚು. ರಾಮತ್ವದ ಅರಿವು ಮಿಗಿಲಾದುದು. ಕನ್ನಡ ಕವಿಚೂತವನ ಚೈತ್ರನೆನಿಸಿದ ಲಕ್ಷ್ಮೀಶನಂತೂ ರಾಮಾಯಣದ ಪಠಣವು,

" ಮುಲೋಕಕಿದು ಪುಣ್ಯವತಿರಮ್ಯಮಾಗಿರ್ಪು |
ದಾಲಿಪರ್ಗಾಯುರಾರೋಗ್ಯವೈಶ್ವರ್ಯಂ ವಿ |
ಶಾಲಮತಿ ಸತ್ಕೀರ್ತಿ, ವಿಮಲ ಸಂತತಿ ಸುಗತಿ ದೊರೆಕೊಂಬುದಿಹ ಪರದೊಳು "

—ಜೈಮಿನಿ ೨೧-೬೬

ಎಂದು ಸಾರಿ ಹೇಳಿದ್ದಾನೆ. ರಾಮಸಂತಾಸವೆನಿಸಿದ ಲವ-ಕುಶರಿಗೂ ಕೂಡ ಅಂದು ವಾಲ್ಮೀಕಿಯು ತನ್ನ ಆಶ್ರಮದಲ್ಲಿ, "ರಾಮಾಯಣವನಿರ್ವರುಂ ಪಾಡು ವಂತೋದಿಸಿದನತಿಮಧುರಭಾವದಿಂ ತುದಿಮೊದಲ್ಗೆ." ಅದರಿಂದ ಆತ್ಮ ಪುಷ್ಟಿಯನ್ನು ಅವರು ಪಡೆದರು. ಮುಂದೆ, ರಾಮನಿಗೂ ಸಂತುಷ್ಟಿಯನ್ನು ನೀಡಿದರು. ಹೀಗೆ ರಾಮಭಕ್ತರನ್ನು ಮೊದಲುಮಾಡಿಕೊಂಡು, 'ಮರಾಮರಾ' ಎನ್ನುವ ರಾಕ್ಷಸ ಸಂತತಿಯ ವರೆಗೂ ರಾಮಾಯಣವು ಒಂದು ದಿವ್ಯದರ್ಶನವಾಗಿದೆ. ಅದು ಆಗಾಗ ವಿವಿಧ ಭಾಷೆಗಳಲ್ಲಿ ಋಷಿಮುನಿಗಳಿಂದ ವ್ಯಕ್ತವಾಗುತ್ತಲಿದೆ. ಜಡಮತಿಗಳನ್ನು ಮೇಲಕ್ಕೆ ಎತ್ತುತ್ತಲಿದೆ. ರಾಮನವತಾರವಾದುದು ಹಿಂದನಿಂದ; ರಾಮಾಯಣದ ಅವತಾರವು ಮಾತ್ರ ಮೊದಲಿನಿಂದಲೂ ಜನಮನದಲ್ಲಿ ಆಗುತ್ತಲೇ ಬಂದಿದೆ. ಆಯಾ ಯುಗದ ಜನಾಂಗದಲ್ಲಿಯ ರಾಮತ್ವವನ್ನು ಗ್ರಹಿಸಿ, ರಾಮಾಯಣ ದರ್ಶನವನ್ನು ನಿರೂಪಿಸುವ ಮಹಾ ಸತ್ವರೂ ಭಾರತದಲ್ಲಿ ಜನಿಸುತ್ತ ಬಂದಿದ್ದಾರೆ. ಅಂಥವರಲ್ಲಿ ಈ ಯುಗದ ಕನ್ನಡಿಗರ ಪುಣ್ಯದಿಂದ ಮಹಾ ಕವಿ 'ಕುವೆಂಪು' ಅವರೊಬ್ಬರಾಗಿದ್ದಾರೆ. ಇವರಿಂದ ಕನ್ನಡದ ಕಾಂತಿ, ಸಿರಿ, ಸಂಪತ್ತುಗಳೆಲ್ಲ ಹೆಚ್ಚಿವೆ.

ಶ್ರೀ 'ಕುವೆಂಪು' ಅವರದು ರಾಮಾಯಣವಲ್ಲ, 'ಶ್ರೀ ರಾಮಾಯಣ ದರ್ಶನಂ'. ರಾಮಾಯಣವನ್ನು ಹಲವರು ಬರೆದಿದ್ದಾರೆ, ರಾಮಕಥೆಯನ್ನು ಹೇಳಿದ್ದಾರೆ. ರಾಮಾಯಣಗಳ ಭಾರಕ್ಕೆ ಆದಿಶೇಷನ ತಲೆಯೂ ಕೂಡ ಹೊಯ್ದಾಡಿತಂತೆ. ಆದರೆ ರಾಮಾಯಣ ದರ್ಶನವನ್ನು ನಮ್ಮ ನಾಡಿನ ಕವಿ 'ಕುವೆಂಪು' ಅವರಂತೆ ಕಂಡರಿಸಿ ದವರು ಲೋಕದಲ್ಲಿ ವಿರಳ. ರಾಮಾಯಣದ ಕಥೆಯನ್ನು ಸ್ಮರಿಸಿದಾಗ, ಅಲ್ಲಿಯ ಕಾವ್ಯವಸ್ತುವಿನ ಹರವನ್ನು ನೆನೆದಾಗ, ಭಾರತೀಯರ ಪುರಾತನ ಚರಿತ್ರೆಯನ್ನು ಗಮನಿಸಿದಾಗ 'ಪಉಮ ಚರಿಉ'ದ ರಾವಣನ ಚಾರಿತ್ರವು ನಮ್ಮ ಭಾವತಂತಿ ಗಳನ್ನು ಮಿಡಿದಾಗ, ಸುತ್ತಲಿನ ಜನರು ರಾಮಕಥೆಯನ್ನು ವಿವಿಧರೀತಿಯಲ್ಲಿ ಹೇಳು ವುದನ್ನು ಕೇಳಿದಾಗ, ನಮಗೆ ಯಾವುದೋ ಒಂದು ಕಥೆ ಹೊಳೆಯುತ್ತದೆ.

'ಸೀತೆ ಜನಕನ ಸಾಕುಮಗಳು. ಜನಕರಾಜನು ಯಜ್ಞಕ್ಕಾಗಿ ಭೂಮಿಯನ್ನು ಶೋಧಿಸ ಹೋದಾಗ ನೆಲದಲ್ಲಿ ನೇಗಿಲ ಕುಳಕ್ಕೆ ಸಿಕ್ಕಿ, ಮೇಲೆದ್ದ ಹೆಣ್ಣಿವಳು. ಮೂಲದಲ್ಲಿ ಇವಳು ರಾವಣನ ಮಗಳೇ ಆಗಿದ್ದಳಂತೆ. ಇವಳನ್ನು ಮದುವೆಯಾಗು

ವವರು ಶಿವಧನುಸ್ಸನ್ನು ಎತ್ತುವ ವೀರನಿರಬೇಕು. ಈ ಪ್ರಯತ್ನವನ್ನು ರಾವಣ ಮೊದಲು ಮಾಡಿ, ಸೋತುಹೋಗಿದ್ದ. ಪಾಪ! ತನ್ನ ಮಗಳನ್ನು ತಾನು ಸಂಪಾದಿಸಲು ಹೆಣಗಿದ್ದ. ಇಂಥ ಅನಾರ್ಯಪ್ರಯತ್ನವು ಜನಕನನ್ನು ಹೆದರಿಕೆಗೆ ಒಳಗುಮಾಡಿರಬೇಕು. ಅದರಿಂದ ಆರ್ಯನಾದ ರಾಮನನ್ನು ಕಂಡೊಡನೆ ಅವನಿಗೆ ಸಂತಸವಾಯಿತು. ಬಲಿಷ್ಠನಾದ ಅವನಿಗೆ ಸೀತೆಯನ್ನು ಸ್ವಾಧೀನಪಡಿಸಿದ. ರಾಮನು ಶಿವಧನುಸ್ಸನ್ನು ಎತ್ತಿ, ಅದಕ್ಕೆ ಬಾಣವನ್ನು ಹೂಡಿದನಿಷ್ಟೇ ಅಲ್ಲ, ಅದನ್ನು ಮಧ್ಯದಲ್ಲಿ ಮುರಿದೂಬಿಟ್ಟ.'

ಏನು ಅದ್ಭುತ ಕಥೆಯಿದು? ಇದರ ಸತ್ಯಾಸತ್ಯ ಸತ್ಯವೇನಿದ್ದೀತು, ಇದರಲ್ಲಿ ವಾಲ್ಮೀಕಿ ನುಡಿದದ್ದು ಎಷ್ಟೋ ಏನೋ. ಭಾರತೀಯರ ಮನೆಮನೆಯ—ಮನಮನದ ಮಾತಾಗಿ, ಬೆಳೆದು ಸೇರಿದ್ದು ಎಷ್ಟೋ. ಅಂತೂ ಒಂದು ದರ್ಶನ ರೂಪುಗೊಳ್ಳುವುದು. ಕವಿ 'ಕುವೆಂಪು' ಅವರೇ ಒಂದು ಸಂದರ್ಶನದಲ್ಲಿ ಹೇಳಿದಂತೆ 'ಯಜ್ಞ' ಎಂಬುದು ಕೇವಲ ಹಾಲು-ತುಪ್ಪಗಳನ್ನು ಹಾಕಿ, ಅಗ್ನಿಯನ್ನು ಪ್ರಜ್ವಲಿಸುವದಲ್ಲ, ಕರ್ಮಮಾತ್ರವಲ್ಲ. ಅದು ಆತ್ಮಯಜ್ಞ. ಇಂಥ ಯಜ್ಞಕ್ಕೇನೇ ಜನಕನು ಭೂಮಿಯನ್ನು ಶೋಧಿಸುತ್ತಿರಬೇಕಲ್ಲ. ಆ ಭೂಶೋಧನೆಗೆ ನೇಗಿಲೇ ಅವನಿಗೆ ಸಾಧನವಾಗಿತ್ತು. ಜನಕನೊಬ್ಬ ಯೋಗಿ. ಕೃಷಿಕರ್ಮವೇ ಒಂದು ಮಹಾ ಯಜ್ಞ ಜನಕನಿಗೆ. ಅವನಿಗೆ ಆಗ ಸೀತೆ ಲಭಿಸಿದಳು. ಸೀತೆ ಭೂಮಿತಾಯಿಯ ಮಗಳು. ನೆಲಮಗಳನ್ನು ಜನಕ ಪಡೆದ, ಸಲಹಿದ, ಬೆಳೆಯಿಸಿದ, ಅವಳ ಸಾಕುತಂದೆಯಾದ. ಸೀತೆಯ ನಿಜವಾದ ತಂದೆ—ರಾವಣ—ಶಿವಧನುಸ್ಸನ್ನು ಎತ್ತಿ, ಅವಳನ್ನು ತಿರುಗಿ ಸಂಪಾದಿಸಲಿಕ್ಕೆ ಯತ್ನಿಸಿದನು. ಆಗಲಿಲ್ಲ. ಮತ್ತೊಮ್ಮೆ ತಪಸ್ಸುಮಾಡಿ, ಶಕ್ತಿಯನ್ನು ಸಂಪಾದಿಸಿಕೊಂಡು, ರಾವಣನು ತಿರುಗಿ ಬರುವಷ್ಟರಲ್ಲಿ, ಜನಕರಾಜನು ಅವಳನ್ನು ರಾಮನಿಗೆ ಅರ್ಪಿಸಿಬಿಟ್ಟಿದ್ದನು. ರಾಮನ ರಕ್ಷಣೆಯಲ್ಲಿ ಆ ಮಣ್ಣಿನ ಮಗಳಿದ್ದಳು. ಮುಂದೆ ರಾಮಾಯಣದ ಕಥೆಯು ಬೆಳೆದುಬರುತ್ತದೆ. ಅದು ಎಲ್ಲರಿಗೂ ಪರಿಚಿತವಾದುದು. ಆದರೆ ಮೂಲದಲ್ಲಿ ಇದೊಂದು ನೆಲದ ಒಡೆತನಕ್ಕಾಗಿ, ಎರಡು ಜನಾಂಗಗಳಲ್ಲಿ ನಡೆದ ಹೋರಾಟದ ಕಥೆಯಾಗಿದ್ದು ಪ್ರತಿಮಾರೂಪವನ್ನು ಕವಿಪ್ರತಿಭೆಯಲ್ಲಿ ತಾಳಿ ಜನಾಂಗದ ಮಹಾ ಕಾವ್ಯವಾಗಿ ಅವತರಿಸಬಾರದೇಕೆ?

ಇದೊಂದು ರಾಮಾಯಣ ದರ್ಶನದ ರೀತಿ. ಇಂಥ ಹಲವು ದರ್ಶನಗಳ ರೂಪು, ಭಂಗಿಗಳೆಲ್ಲ ಸೇರಿ, ಒಂದು ಅಖಂಡ ಮಹಾ ದರ್ಶನವಾಗಬಹುದಾಗಿದೆ. ಅದು ಇಂದಿನ ಯುಗದ ವಾಣಿಯಾಗಿ ಮೂಡಿ ನಿಲ್ಲಬಹುದು. ಅದರಲ್ಲಿ ರಾಮತ್ವದ ದಿವ್ಯದರ್ಶನವಿರಬಹುದು, ಇತಿಹಾಸದ ಸತ್ಯದರ್ಶನವಿರಬಹುದು, ಸಾಹಿತ್ಯಕಲೆಗಳ

ರಸದರ್ಶನವಾಗಬಹುದು. ಅದರಂತೆ ಧರ್ಮ, ಧ್ಯಾನ, ದರ್ಶನ ಮತ್ತು ಯೋಗಗಳಿಗೆಲ್ಲ ದಾರ್ಶನಿಕ ಜನನಿಯಾಗಬಹುದಾಗಿದೆ. ಆ ಮಹಾ ಮಾತೆಯಲ್ಲಿ ನಾವು ಇಂದಿನ ವಿಶ್ವದರ್ಶನವನ್ನು ಪಡೆಯಬಲ್ಲೆವು. ಇಂಥ ವಿರಾಡ್ ದರ್ಶನದ ಒಂದು ದಿವ್ಯವೂ ಭವ್ಯವೂ ಆದ ಚಿತ್ರಣವು ಶ್ರೀ ಕುವೆಂಪು ಅವರ 'ರಾಮಾಯಣ ದರ್ಶನಂ' ಆಗಿದೆ.

೨

ಕವಿ ಕ್ರಾಂತದರ್ಶಿ. ಅವನು ಕಂಡ ಸತ್ಯ, ನಿತ್ಯ ಸತ್ಯ. ಸತ್ಯಸ್ಯ ಸತ್ಯ. ಅದರಿಂದ ಅದು ಐಂದ್ರಿಕವಲ್ಲ. ಅನ್ನಮಯ, ಪ್ರಾಣಮಯ, ಮನೋಮಯ ಕೋಶಗಳನ್ನು ಮೀರಿ ಆತ್ಮಕ್ಕೆ ಸಂಬಂಧಿಸಿದ ಚಿರಂತನ ಸತ್ಯವನ್ನು ಕವಿಯು ಚಿತ್ರರಿಸುವನು. ಆ ಸತ್ಯವು ಲೋಕೋತ್ತರವಾದುದು. ಲೋಕಸಂಜೀವಿನಿಯಾಗಿ, ಲೋಕವ್ಯಾಪ್ತಿಯುಳ್ಳುದು. ಇದರಲ್ಲಿ ಪೂರ್ವ-ಪಶ್ಚಿಮ, ಹಳೆ-ಹೊಸ, ಪ್ರವೃತ್ತಿ-ನಿವೃತ್ತಿ—ಇವೇ ಮೊದಲಾದ ಯಾವ ದ್ವಂದ್ವಗಳೂ ಇಲ್ಲ. ಇದು ಅಖಂಡವಾದುದು, ಸನಾತನವಾದುದು; ಭವ್ಯವಾದುದು, ಭೂಮವಾದುದು. ಇಂಥ ವಿಶ್ವಸತ್ಯವನ್ನೂ ಅನುಭವಿಸಿ, ಕೃತಿಯಲ್ಲಿ ಮೂಡಿಸುವ ಭಾಗ್ಯವು ಬಹುಜನರಿಗೆ ಇರುವುದಿಲ್ಲ. ಈ ಸೌಭಾಗ್ಯವನ್ನು ಪಡೆಯುವ ವ್ಯಕ್ತಿಗೆ ತಪಸ್ಸು, ಧ್ಯಾನ, ಯೋಗಗಳ ಅಖಂಡ ಸಾಧನೆ ಬೇಕು. ಪೂರ್ವಭವಗಳ ಪುಣ್ಯವಿಶೇಷವು ಒಂದುಗೂಡಿ ಬಂದಿರಬೇಕು. ಇಂಥ ಮಹಾ ವ್ಯಕ್ತಿಯನ್ನು ಆ ವಿಶ್ವಸತ್ಯವೇ ತನ್ನ ಪ್ರಕಾಶನಕ್ಕಾಗಿ ಸೃಷ್ಟಿಸಿಯೂಕೊಳ್ಳಬಹುದು. ಅಂಥ ಒಂದು ಮಹತ್ ಸಂಕೇತ ಇಂದು ಕನ್ನಡನಾಡಿನಲ್ಲಿ ನೆರವೇರಿದೆ.

'ಶ್ರೀ ಕುವೆಂಪುವ ಸೃಜಿಸಿದೀ ಮಹಾಛಂದಸಿನ
ಮೇರುಕೃತಿ, ಮೇಣ್ ಜಗದ್‌ಭವ್ಯ ರಾಮಾಯಣಂ!'

ಎಂದು ರಾಮಾಯಣ ದರ್ಶನದಲ್ಲಿ ಮೂಡಿಬಂದ ಕವಿವಾಣಿಯು ಕಾವ್ಯೋದಯದ ಕಾರಣಗಳಲ್ಲೊಂದಾಗಿದೆ. ಕವಿ ಕುವೆಂಪು ರಾಮಾಯಣವನ್ನು ಬರೆಯುಲಿಲ್ಲ! ಅವರನ್ನೇ ರಾಮಾಯಣದ ದಿವ್ಯಶಕ್ತಿ ಸೃಜಿಸಿದೆ. ಈ ಶಕ್ತಿಯು ಭಾರತದಲ್ಲಿ ಮೊದಲಿನಿಂದಲೂ ಜನಾಂಗದ ಸತ್‌ಶಕ್ತಿಯನ್ನು ಪೋಷಿಸುತ್ತಲಿದೆ. ಇದರ ಕಾರ್ಯವು ವಿಶ್ವವ್ಯಾಪಿಯೂ ಆಗಿದೆ. ಅದರ ಪ್ರಬಲ ಇಚ್ಛೆಯೆ ಇಂದಿನ 'ರಾಮಾಯಣ ಪರ್ಶನಂ'ದ ಉಗಮಸ್ಥಾನವಾಗಿದೆ. ಕನ್ನಡನುಡಿಯ ಭಾಗ್ಯವಾಗಿದೆ.

ತೀರ್ಥಹಳ್ಳಿ ತಾಲೂಕಿನ ಕುಪ್ಪಳ್ಳಿ ಕನ್ನಡಿಗರ ಯಾತ್ರಾಸ್ಥಳವಾದೀತು. ಕುಪ್ಪಳ್ಳಿಯನ್ನು ನಾನು ಕಂಡಿಲ್ಲವಾದರೂ ತೀರ್ಥಹಳ್ಳಿ ತಾಲೂಕಿನಲ್ಲಿ ಕೆಲವು ಕಡೆಗೆ ಸುತ್ತಾಡಿದ್ದೇನೆ. ತೀರ್ಥಹಳ್ಳಿಯ ದರ್ಶನ ಮಾಡಿದ್ದೇನೆ. ಅದರಿಂದ ಈ ಕವಿಯು

ಬೆಳೆದ ಆವರಣದ ಕಲ್ಪನೆಯು ಇದೆ. ಕುಪ್ಪಳ್ಳಿಯ ವೆಂಕಟಪ್ಪಗೌಡರ ಮಗನಾಗಿ, ಸೀತಮ್ಮನ ಉದರದಿಂದ ಜನಿಸಿದ ಪುಟ್ಟಪ್ಪನವರು ಆ ಹಳ್ಳಿಯ ಶಾಲೆ ಹಾಗೂ ತೀರ್ಥಹಳ್ಳಿಯಲ್ಲಿ—ತಮ್ಮ ಬಾಲ್ಯದ ವಿದ್ಯಾಭ್ಯಾಸವನ್ನು ಕಲಿತು ಮುಗಿಸಿರಬೇಕು. ಆದರೆ ಆ ಜೀವನ ಅಲೌಕಿಕ ವಿದ್ಯೆಯ ಅಭ್ಯಾಸವು ವಿಶ್ವಶಕ್ತಿಯ ಸಂಕೇತದಂತೆ ಸೃಷ್ಟಿ ಸೌಂದರ್ಯದ ತವರ್ಮನೆಯಾದ ಮಲೆನಾಡಿನ ಆ ಆವರಣದಲ್ಲಿಯೇ ನಡೆದಿರಬೇಕು. ಆಗಲೇ ಆತ್ಮಾನುಭೂತಿ, ರಸಾವೇಶಗಳು ಕವಿಯಲ್ಲಿ ಸ್ಫುರಿಸಿರಬೇಕು. ಇದನ್ನು ಗಮನಿಸಿದಲ್ಲಿ, ಆ ಯುಗದಲ್ಲಿ ರಾಮಾಯಣಾವತಾರಕ್ಕೆ ಪ್ರಣಾಲಿಕೆಯೆನಿಸಿದ ವಾಲ್ಮೀಕಿಗೆ ಇದ್ದ ಗಿರಿ, ವನ, ನಿರ್ಝರಿಣಿಗಳ ಆವರಣವೇ ಇಂದೂ ಮಹಾಕವಿ ಪುಟ್ಟಪ್ಪನವರಿಗೆ ಹುಟ್ಟಿದಾಗಿನಿಂದಲೂ ಲಭಿಸಿವೆ. ಇದು ಆ ದೈವೀಶಕ್ತಿಯ ಒಂದು ಪೂರ್ವ ಸಂಕೇತವೇ ಇದ್ದಂತಿದೆ. ಮಹಾಭಾರತವನ್ನಾಗಲಿ, ಆದಿಪುರಾಣವನ್ನಾಗಲಿ, ಇನ್ನಾವುದೋ ಕವಿ ಶಕ್ತಿ, ಅಭ್ಯಾಸ, ನಿಷ್ಠೆಗಳ ಬಲದಿಂದ ಬರೆದು ಮುಗಿಸಬಹುದಾಗಿದೆ. ಆದರೆ ರಾಮ, ಸೀತೆ, ಲಕ್ಷ್ಮಣರು ಕಾಡುಪಾಲಾಗಿ ವಿಹರಿಸಿದ ಚಿತ್ರಕೂಟ, ಅಗಸ್ತ್ಯರ ಆಶ್ರಮಗಳು, ಪಂಚವಟಿ, ಕಿಷ್ಕಿಂಧೆ, ಸಂಪಾತಿಯ ಶಿಲೆಗಳನ್ನೆಲ್ಲ ಅಂದು ವಾಲ್ಮೀಕಿ ಋಷಿ ವರ್ಣಿಸುವುದಕ್ಕೆ ಸಮರ್ಥನಾಗಿದ್ದರೆ ಇಂದು ಕುವೆಂಪು ಅನುಭವಿಸಿ, ಹೇಳುವುದಕ್ಕೆ ಸಮರ್ಥರಾಗಿದ್ದಾರೆ. ಅದಕ್ಕನುಕೂಲವಾದ ಜೀವನವನ್ನು ನಮ್ಮ ಮಹಾಕವಿ ಬಾಲ್ಯದಲ್ಲಿಯೇ ಬಾಳಿದ್ದಾರೆ, ಅನುಭವಿಸಿದ್ದಾರೆ. ಕುಪ್ಪಳ್ಳಿ, ತೀರ್ಥಹಳ್ಳಿಗಳ ಸುತ್ತ ಸ್ವಲ್ಪ ಸುತ್ತಿ ಬಂದರೆ ಸಾಕು. ಕವಿಯ ಜೀವನದರ್ಶನ ಹೇಗೆ ವಿಕಾಸಗೊಂಡಿರಬೇಕೆಂಬುದು ಹೊಳೆದುಹೋಗುವುದು. ಅಲ್ಲಿಯ ಗಿಡ, ಮರ, ಬಳ್ಳಿ, ಗಿರಿ, ಕಂದರ, ನದಿ, ನಿರ್ಝರಿಣಿ, ಕಾಜಾಣ, ಕೋಗಿಲೆ, ಗಿಳಿ, ತೇನೆ, ಕಾಮಳ್ಳಿ, ಸೀತಾಳಿ, ಕೇದಗೆ, ಬಕುಳ, ಮಲ್ಲಿಗೆ, ಹುಲಿ, ಹಂದಿ, ಮಿಗ, ಮುಸಿಯ, ಕೋಡಗ, ಎರಳೆ, ಸಾರಗ, ಬಕ, ಉಡ ಇವಲ್ಲದೆ ಪ್ರಕೃತಿಮಾತೆಯ ನಿತ್ಯ ನೈವೇದ್ಯಗಳೆನಿಸುವ ಸೂರ್ಯಾಸ್ತ, ಸೂರ್ಯೋದಯ, ಶಶಿಮಂಡಲ, ಋತು ಪರಿವರ್ತನೆಗಳೆಲ್ಲ ಕವಿಯ ಮನೋಮಯ ಭೂಮಿಕೆಯನ್ನು ಭೂಮಕ್ಕೇರಿಸಿ ರಾಮಾಯಣ ದರ್ಶನೋದಯಕ್ಕೆ ಕವಿಯ ಭಾವ ಭೂಮಿಕೆಯಲ್ಲಿ ಮಹಾ ಬೀಜವನ್ನು ಬಿತ್ತಿವೆ.

ಮುಂದೆ ಮೈಸೂರಿನಲ್ಲಿ ನೆಲಸಿದ ಕವಿ ವಿಶಾಲ ಲೋಕಾನುಭವವನ್ನೂ ಪಾಂಡಿತ್ಯವನ್ನೂ ಗಳಿಸಿದರು. ತಾವು ಈ ಮೊದಲು ಬಿಂದುವಿನಲ್ಲಿ ಕಂಡ ಸತ್ಯವನ್ನು ಸಿಂಧುವಿನಲ್ಲಿಯೂ ಕಂಡು ಅನುಭವಿಸುವಂತಾಯಿತು. ಶ್ರೀ ರಾಮಕೃಷ್ಣಾಶ್ರಮದ ಆವರಣದಲ್ಲಿ ಬೆಳೆದು, ಭಾರತದ ದಿವ್ಯ ಆಧ್ಯಾತ್ಮಿಕ ದರ್ಶನವನ್ನು ಪಡೆಯ

ಲಿಕ್ಕೆ ಸದವಕಾಶ ಲಭಿಸಿತು. ಪರಮಹಂಸ, ವಿವೇಕಾನಂದರ ದಿವ್ಯವಾಣಿಯು ಇವರ ಹೃದಯವನ್ನು ಹದಗೊಳಿಸಿತು. ಭಾವವನ್ನು ರೂಪಿಸಿತು. ಅವರ ಅನುಭವ ಇವರ ಅನುಭೂತಿಯಾಯಿತು. ಪೌರ್ವಾತ್ಯ ಹಾಗೂ ಪಾಶ್ಚಾತ್ಯ ಸಾಹಿತ್ಯಾಕಾಶದಲ್ಲಿ ಇವರ ಆತ್ಮ ವಿಹರಿಸಿತು. ವಿಶಾಲ ವಿಶ್ವದಂಚಿನ ಆಚೆಗೂ ದೃಷ್ಟಿಯು ಹರಿಯಿತು. ಇವೆಲ್ಲವುಗಳಿಂದ ರಾಮಾಯಣದ ಅವತರಣಕ್ಕೆ ಇಂದಿನ ಯುಗಧರ್ಮಕ್ಕನುಗುಣ ವಾದ ಮಹಾಪಾತ್ರ ನಿರ್ಮಿತಿಯು ಪುಟಪ್ಪನವರ ಹೃದಯದಲ್ಲಾಯಿತು. ಪುಟ್ಟಪ್ಪ ನವರು ಬೆಳೆದು, ವಿಶ್ವಸತ್ಯದ ಮಹಾ ದರ್ಶನಾವತಾರಕ್ಕೆ ತಕ್ಕ ಪ್ರಣಾಳಿಕೆಯಾದ ಕವೀಂದ್ರ 'ಕುವೆಂಪು' ಆದರು. ಅವರ ಜನ್ಮಾಂತರದ ಹಲವು ವರ್ಷಗಳ ತಪಸ್ಸಿದ್ಧಿ, ಈಗ ಹತ್ತೆಂಟು ವರ್ಷಗಳ ಯೋಗಧಾರಣೆಯಲ್ಲಿ—'ಕವಿಕ್ರತು'ವಿನಲ್ಲಿ—ರಾಮಾಯಣ ದರ್ಶನಂ ರೂಪುಗೊಂಡು, ವಿಶ್ವಸತ್ಯ ಭೂಮಿಗೆ ಅವತರಿಸಿತು. ಅಂದು ದಶರಥ, ವಸಿಷ್ಠ, ವಾಲ್ಮೀಕಿ, ಜನಕರಷ್ಟೇ ಅಲ್ಲ, ಅಖಂಡ ಲೋಕದ ಮಾನವಜನಾಂಗದ ತೀವ್ರ ಬಯಕೆಯಿಂದ, ವಿಶ್ವಶಕ್ತಿಯು ದಶರಥನ ಅಹಿಂಸಾಮಯ ಯಜ್ಞದ ಸಾಧನೆ ಯಿಂದ ಅಯೋಧ್ಯೆಯಲ್ಲಿ ರಾಮರೂಪದಿಂದ ಅವತರಿಸಿದಂತೆ; ಇಂದು ಲೋಕದ ಜನದ ಬಯಕೆ ಪುಟ್ಟಪ್ಪನವರು ಕಾರಣವಾಗಿ ರಾಮಾಯಣದ ಅವತಾರವಾಗಿದೆ, 'ರಾಮಾಯಣ ದರ್ಶನಂ' ನಮ್ಮ ಎದುರಿಗೆ ಮೂಡಿ, ಪ್ರತ್ಯಕ್ಷವಾಗಿ ನಿಂತಿದೆ. ಅದನ್ನು ಪಡೆದ ನಾಡು ಧನ್ಯ. ಅದಕ್ಕೆ ಕಾರಣರಾದ ಪುಟ್ಟಪ್ಪನವರು ಪುಣ್ಯವಂತರು.

೩

ರಾಮಕಥೆ ಜನಜನಿತವಾದುದು. ಭಾರತೀಯರ ಕಣ್ಮನಗಳು ಕಾಂತಿ ಗೊಂಡುದು ರಾಮಕಥೆಯಿಂದ. ವಿವಿಧ ರಾಮಾಯಣಗಳ ಪರಂಪರೆಗಳನ್ನೂ ಅವವುಗಳ ಧಾರ್ಮಿಕ ಪ್ರಭಾವಳಿಗಳನ್ನೂ ಜನಸಾಮಾನ್ಯರು ಅರಿಯದಿದ್ದರೂ ಸ್ಥೂಲವಾಗಿ ರಾಮಕಥೆಯು ಎಲ್ಲರಿಗೂ ಪರಿಚಿತವಾದುದು. ರಾಮಕಥೆಯ ಜೋಗುಳವನ್ನು ಕೇಳುತ್ತಲೇ ಭಾರತದ ಮಕ್ಕಳು ತೊಟ್ಟಿಲಲ್ಲಿ ಬೆಳೆದು ಬರುವುದುಂಟು. ಅದರಿಂದ ಪುಟ್ಟಪ್ಪನವರ 'ರಾಮಾಯಣ ದರ್ಶನಂ'ದ ಸ್ಥೂಲ ರಸದರ್ಶನಕ್ಕೆ ಅಖಂಡ ರಾಮ ಕಥೆಯ ವಿವರಣವು ಇಲ್ಲಿ ಆವಶ್ಯಕವಿಲ್ಲ.

ರಾಮಾಯಣವು ಪುರಾಣಕಾವ್ಯ. ಅದೇ ದಶರಥ, ಅದೇ ಕೌಸಲ್ಯೆ, ಕೈಕೇಯಿ. ಅದೇ ರಾಮ, ಲಕ್ಷ್ಮಣ, ಸೀತೆ. ಅದೇ ಭರತಶತ್ರುಘ್ನರು. ಅದೇ ವಾಲಿ, ಸುಗ್ರೀವ, ಹನುಮ, ನೀಲರು. ಅದೇ ರಾವಣ, ಕುಂಭಕರ್ಣ, ವಿಭೀಷಣರು—ಹೀಗೆ ಯಾರಾ ದರೂ ಹೇಳಿಬಿಡಬಹುದು. ಹಳೆಯ ಪುರಾಣವನ್ನು ಹೊಸಭಾಷೆಯಲ್ಲಿ ಹೊಸೆದು ಬಿಟ್ಟರಾಯಿತು. ಈ ತಿಳುವಳಿಕೆಯು ಭರತಖಂಡದ ಹಲವು ರಾಮಾಯಣಗಳಿಗೆ

ಅನ್ವಯಿಸುವಂತಿರಬಹುದು. ಆದರೆ ಪುಟ್ಟಪ್ಪನವರ ರಾಮಾಯಣ ದರ್ಶನವು ಇದಕ್ಕೆ ಹೊರತಾಗಿದೆ. ಅದೊಂದು ವಿಶಿಷ್ಟ ವಿಶ್ವಶಕ್ತಿ ಸಂಚಾರದ ಸಜೀವ ಶಬ್ದ ಶರೀರವಾಗಿದೆ. ಸುಂದರ ಶರೀರವಾಗಿದೆ.

ಇದಕ್ಕೆ 'ಕವಿಕ್ರತುದರ್ಶನ'ವೇ ಒಂದು ಭೂಮಿಕೆ. ಅದು ರಾಮಾಯಣ ದರ್ಶನ ಮಹಾ ಕಾವ್ಯವೃಕ್ಷದ ಮಹಾ ಬೀಜವಿದ್ದಂತೆ. ಕನ್ನಡದ ಹೊಸ ಸುಗ್ಗಿಯಲ್ಲಿ ಬನದ ಕೋಗಿಲೆಯಾಗಿ, ವಿಶ್ವದಾದ್ಯಂತ ಕವಿಶಕ್ತಿಗೆ ಮಣಿದು,

'ಮಡಿಯಾಗಿರಲಿ ಬಾಳ್ವೆ. ಜಯಿಸುಗೆ ರಸತಪಸ್ಯೆ ;
ದೊರೆಕೊಳುಗೆ ಚಿರಶಾಂತಿ ; ಸಿರಿಗನ್ನಡಂ ಗೆಲ್ಗೆ !'

ಎಂಬ ಪ್ರತಿಜ್ಞೆಯನ್ನು ಗೈದು, ಕೋಸಲದೇಶದ ಪ್ರಜಾಮತಕೆ ತಾನು ಪ್ರತಿನಿಧಿಯೆಂದು ಆಳುವ ದಶರಥನ ಜೀವನ ಸನ್ನಿವೇಶಕ್ಕೆ ಕವಿಯು ಬಂದು ನಿಲ್ಲುತ್ತಾನೆ. ತನ್ನ ನವನವೀನ ದರ್ಶನವನ್ನು ಚಿತ್ರಿಸಲಾಗುತ್ತಾನೆ. ಒಂದು ದಿನ ನೃಪತಿ ಅರಮನೆಯ ಸಿರಿದೋಟದಲ್ಲಿರುವಾಗ, ತಾಯ್ವಕ್ಕಿಯೊಂದು, 'ತನ್ನ ಕೊಕ್ಕಂ, ಮರಿಯ ತೆರವಾಯ್ಗೆ ಇಡುತ ಕುಟುಕು ಕೊಡುತಿರ್ದುದ'ನ್ನು ಕಂಡನು. ಮಕ್ಕಳನ್ನು ಪಡೆದ ಪಕ್ಕಿಯ ಸಿರಿತನವು ಅವನ ಬಡತನದ ಅರಿವನ್ನುಂಟುಮಾಡಿತು. ಸಂತಾನಕ್ಕಾಗಿ ಹಂಬಲಿಸಿದನು. ತಮ್ಮ ವಂಶದ ಗುರು ವಸಿಷ್ಠ ಮೊದಲಾದವರಿಗೆ ತನ್ನ ಬಯಕೆಯನ್ನು ತಿಳಿಸಿದನು. ಗುರು ವಸಿಷ್ಠನು ದಶರಥನಿಗೆ ಪುತ್ರಕಾಮೇಷ್ಠಿಯಾಗವನ್ನು ಮಾಡಲಿಕ್ಕೆ ತಿಳಿಸಿದನು. ಅದರಿಂದ ಮಕ್ಕಳಾಗುವವೆಂದು ಹೇಳಿ ಸಂತೈಸಿದನು. ಆದರೆ ಜಾಬಾಲಿ ಋಷಿವರೇಣ್ಯನು ಅಲ್ಲಿಗೆ ಬಂದು,

'. . . ಹಿಂಸಾ ಕ್ರೌರ್ಯವಿಲ್ಲದಿಹ ಪ್ರೇಮಕ್ಕೆ
ನೋಂತು, ದೇವರ್ಕಳಂ ಪೂಜಿಸಲ್ ಮೆಚ್ಚುವುದು
ಜಗವನಾಳುವ ಋತಂ. . . .'

ಎಂದು ಹೇಳಿ, ಅಹಿಂಸಾಮಯ, ಭೋಜನ ದಾನದಕ್ಷಿಣೆಗಳ ರೂಪದಿಂದ ಯಜ್ಞ ನಡೆಯಿಸುವಂತೆ ಉಪದೇಶಿಸಿದನು. ಬಹುಜನರ ಪೆರ್ಬಯಕೆಯೆ ವಿಶ್ವಶಕ್ತಿಯನ್ನು ಭುವಿಗೆ ಅವತರಿಸುವಂತೆ ಮಾಡಿತು. ಸೃಷ್ಟಿಶಕ್ತಿಯ ದೂತನು ಆತ್ಮಧ್ಯಾನದಲ್ಲಿ ರತನಾದ ದಶರಥನಿಗೆ ಕಾಮಧೇನುವಿನ ಹಾಲಿನಲ್ಲಿ ಮಾಡಿದ ಪಾಯಸವನ್ನು ತಂದು ನೀಡುವನು. ಅದರ ಸೇವನೆಯಿಂದ ಮಹಾ ಸತಿಯರಾದ ಕೌಸಲ್ಯೆ, ಸುಮಿತ್ರೆ, ಕೈಕೇಯಿಯರು ಮಕ್ಕಳನ್ನು ಪಡೆಯುವರು. ರಾಮನಾಗಮನದಿಂದ ಇಳೆಗೆ ಇಳೆಯೇ ಪುಳಕಗೊಂಡಿತು. ಒಮ್ಮೆ ಕೌಸಲ್ಯೆ

> ಮಗನ ಕಂಗಳ ನೋಡಿ,
> ಬಾನನೀಕ್ಷಿಸಿದಂತೆ, ಮಗನ ತೊದಲಂ ಕೇಳಿ
> ಕಡಲನಾಲಿಸಿದಂತೆ ಬೆಚ್ಚುವಳು ತಾಯ್ ಸುಯ್ದು.
> ಒರ್ಮೆ ಆ ಹೂಹಗುರ ಶಿಶುವಿದ್ದಕಿದ್ದಂತೆ
> ಗಿರಿ ಭಾರವಾಗಿ ಬರೆ, ನೆಗಹಲಾರದೆ ತಾಯಿ
> ತೇಂಕಿದಳು, ಕಾತರಿಸಿ ಮಗನಭ್ಯುದಯ ಶಂಕೆಯಿಂ.''

ಇನ್ನೊಮ್ಮೆ ತೊಟ್ಟಿಲಲ್ಲಿ ತನ್ನ ಕಂದನಲ್ಲಿ ಮಹಾ ಮೂರ್ತಿಯನ್ನೂ ಕಂಡು, ಆ ತಾಯಿ—ಕೌಸಲ್ಯೆ—ಗುರು ವಸಿಷ್ಠನ ಹತ್ತಿರ ತನ್ನ ಮನದ ಸಂಶಯವನ್ನು ಬಿತ್ತರಿಸಿದಳು. ಗುರು ಕೌಸಲ್ಯೆಯನ್ನು ಸಮಾಧಾನಗೊಳಿಸುತ್ತ 'ನಿನ್ನ ಮಗನ—ಪ್ರಾಕೃತಂ' ಎಂದು ಹೇಳಿ, ವಿಶ್ವಶಕ್ತಿಯೇ ನಂದನನಾಗಿ ನಿನ್ನಲ್ಲಿ ಅವತರಿಸಿದೆಯೆಂದು ಸೂಚಿಸಿದನು. ಅಲ್ಲದೆ 'ಧನ್ಯ ನಾಂ! ಧನ್ಯೆ ನೀಂ! ಧನ್ಯಮೀ ರವಿಕುಲಂ!' ಎಂದು ಸಾರಿದನು.

ಮುಂದೆ ಒಂದು ದಿನ ಬಾಲ ರಾಮನು, ಹುಣ್ಣಿಮೆಯ ದಿನ ಉದ್ಯಾನದಲ್ಲಿ ಕೌಸಲ್ಯೆಯ ಬಳಿ 'ಆಗಸದಿ ಮೆರೆವ ಪೂರ್ಣೇಂದುವಂ ನೋಡಿ, ಮೋಹಿಸಿ, ಪಡೆಯೆ ಹಲುಬಿ, ಹಂಬಲಿಸಿ ಕಾಡಿದನು ಕೌಸಲ್ಯೆಯಂ'. ಏನು ಮಾಡಿದರೂ ಸಮಾಧಾನವನ್ನು ಹೊಂದಲಿಲ್ಲ. ಕೈಕೆ ಬಂದು ಕಂಬನಿ ಮಿಡಿದಳು. ದಶರಥನು ಬಂದು ಮಗನನ್ನು ಸಂತೈಸಲಿಕ್ಕೆ ಯತ್ನಿಸಿದನು. ದಾಸ-ದಾಸಿಯರು ಚಂದ್ರನನ್ನೇ ಬೈದರು. ಮಂತ್ರಿ ಸುಮಂತ್ರನ ಮನಸ್ಸಿಗೂ, ರಾಮನನ್ನು ಸಮಾಧಾನಗೊಳಿಸುವ ಮಾರ್ಗ ಹೊಳೆಯದೆ ಹೋಯಿತು. ಆಗ ಜಗದ ವಿಕಾರವೇ ಮೂರ್ತಿವೆತ್ತು ಬಂದಂತೆ ಕೈಕೆಯ ದಾಸಿ, ಮಂಥರೆ ಅಲ್ಲಿಗೆ ಬಂದು, ತನ್ನ ಒಡತಿಯ ಕೈಗೆ ಕನ್ನಡಿಯೊಂದನ್ನು ಕೊಟ್ಟು, ರಾಮನನ್ನು ಸಮಾಧಾನಪಡಿಸುವ ಯುಕ್ತಿಯನ್ನು ಕಿವಿಯಲ್ಲಿ ಉಸುರಿದಳು. ಕೈಕೆಯು ನಕ್ಕು, ದಶರಥನ ತೋಳಿನಲ್ಲಿರುವ ರಾಮನಿಗೆ ಕನ್ನಡಿಯಲ್ಲಿಯ ಚಂದ್ರನನ್ನೂ ತೋರಿಸಿ, ಸಂತೈಸುವಳು. ಮಗು ನಲಿದು, ಆಡತೊಡಗಿತು. ಆಗ

> 'ಸಂತಸದೊಳಾ ದಾಸಿ, ಮುದಿಗೂನಿ, ರಾಮನಂ
> ಮುದ್ದಿಸಲ್ ಬಯಸಿ ತೋಳ್ ಚಾಚಲಾ ಕೌಸಲ್ಯೆ:
> ಕಂದಂಗಮಂಗಳಂ. ಮುಟ್ಟದಿರ್ ಮುಟ್ಟದಿರ್!
> ಬೇಡವೇಡೆನ್ನುತೆ ನಿವಾರಿಸಿದಳಾಕೆಯಂ,
> ಮುದಿ ಮಂಥರೆಯ ಮೈತ್ರಿ ಜಜ್ಜರಿತಮಪ್ಪಂತೆವೋಲ್.
> ಮುರಿದೊಲ್ಮೆಯವಮಾನದಿಂದೆ ಕಣ್ಬನಿ ಚಿಮ್ಮಿ
> ನಿಲ್ಲದಲ್ಲಿಂ ನಡೆದಳಯ್ ಭರತನಂ ಬಿಗಿದಪ್ಪಿ,

ತುಳಿದ ಸರ್ಪಿಣಿಯಂತೆ ಮುಳಿಸಿನುರಿಯಿಂ ಪೊಗೆದು,
ಸುಯ್ದು, ಹೆಡೆಯೆತ್ತಿ.'

ಇವೆಲ್ಲ ಮುಂದಿನ ಮಹಾಕೃತಿಯ ಅಸ್ತಿವಾರದಂತೆ 'ಕವಿಕ್ರತುದರ್ಶನ'ದಲ್ಲಿ ಮೂಡಿ ನಿಂತಿವೆ. ಮಂಥರೆಯು ತನ್ನ ಕೈಕೆಯ ಮೂಲಕ ರಾಮನಿಗೆ ಆಕಾಶದಲ್ಲಿಯ ಚಂದ್ರನನ್ನು ಒದಗಿಸುವಂತೆ ಮಾಡಿದ ಸನ್ನಿವೇಶವಂತೂ ರಾಮಾಯಣ ದರ್ಶನದಲ್ಲಿ ಒಂದು ಮುಖ್ಯ ಘಟನೆ. ಮುಂದಿನ ಮಹಾ ಕಾವ್ಯಸೌಧದ ನೆರಳು ಕವಿಯ ಪ್ರಜ್ಞಾ ಸಾಗರದಲ್ಲಿ ಪ್ರತಿಫಲಿಸಿ, ಇಲ್ಲಿ ನಿಂತಿದೆ.

೪

'ಮಮತೆಯ ಸುಳಿ ಮಂಥರೆ'ಯ ಪಾತ್ರವು ಈ ರಾಮಾಯಣ ದರ್ಶನದ ಮಹತಿ ವೆತ್ತ ಕಲಾಪ್ರತಿಭೆಯ ದ್ಯೋತಕವಾಗಿದೆ. ಕೈಕೆಯ ತಂದೆಗೆ ಕಾಡಿನಲ್ಲಿ ಸಿಕ್ಕ ಕೂಸು ಮಂಥರೆ, ಗೂನಿ, ಲೋಕವೇ ಹೀಯಾಳಿಸಿ, ತ್ಯಜಿಸಿದಂಥ—ನೋಡಲೂ ಆಗದ ಕುರೂಪಿ, ಆದರೆ ಅವಳ ಆತ್ಮಪ್ರಭೆ ಎಂಥದು? ದಶರಥನ ಮನೆಯ ರಾಮನನ್ನು ಲೋಕಕ್ಕೆ ನೀಡಿದ ಮಹಾ ತಾಯಿ ಮಂಥರೆ! ಕೋಸಲ ದೇಶಕ್ಕೆ ದೇಶವೇ ಮಂಥರೆಯ ಮುಖಕ್ಕೆ ಮಣ್ಣೆರಚಿ, ಹೀಯಾಳಿಸಿ, ಮುಖದಿರುಹಿ ಹೋಗುತ್ತಿರುವಾಗ ಕವಿ ಎಂಥ ಉದಾತ್ತತೆಯನ್ನು ಅವಳಲ್ಲಿ ಕಂಡಿದ್ದಾನೆ! ಮುಂದಿನ ಮಹಾ ರಾಮಾವ ತಾರದ ಸೂತ್ರಧಾರಳನ್ನಾಗಿ ಅವಳನ್ನು ನಿರ್ಮಿಸಿದ್ದಾನೆ! ಇಂಥ ಉದಾತ್ತತೆಯನ್ನು ಕಂಡಾಗ ಕವಿಚಕ್ರವರ್ತಿ ರನ್ನನ ಮಹಾನುಭಾವತೆಯನ್ನು ಪುಟ್ಟಪ್ಪನವರಲ್ಲಿ ನಾವು ಕಾಣುತ್ತೇವೆ. ಅಲ್ಲಿ ರನ್ನನ ದುರ್ಯೋಧನ ಅಭಿಮನ್ಯುವಿನ ಪಾದಕ್ಕೆರಗಿ ಸುಯೋಧನ ನಾದ. ಇಲ್ಲಿ ಮಂಥರೆ ರಾಮಧ್ಯಾನದಲ್ಲಿ—ರಾಮನನ್ನು ಕೋಸಲಕ್ಕೆ ತಿರುಗಿ ತರುವ ಯತ್ನದಲ್ಲಿ—ಪಂಚತ್ವವನ್ನು ಐದಿ ಮಹಾದೇವಿಯಾದಳು. ಏನು ಅದ್ಭುತ ಸೃಷ್ಟಿಯಿದು!

ನಾಳೆ ರಾಮನಿಗೆ ಪಟ್ಟಾಭಿಷೇಕ. ಆ ಇರುಳು ಮಂಥರೆಗೆ ಒಂದು ಕನಸು. ಕೈಕೆ ವಿಧವೆಯಾಗಿರುವಳು. ಕಾಡಿನಲ್ಲಿ ಭರತನ ಕೈ ಹಿಡಿದುಕೊಂಡು, ಬಡ ಹೆಂಗಸಿ ನಂತೆ, ದಾರಿಗಾಣದೆ ಅಲೆಯುತ್ತಿದ್ದಾಳೆ! ಆ ಅಶುಭ ಕನಸಿನಿಂದ ಅವಳು ಎಚ್ಚರಾಗು ವುದು, ರಾಮಪಟ್ಟಾಭಿಷೇಕದ ಮಂಗಲವಾದ್ಯದಿಂದ! ಅದೆಂಥ ಅಮೂಲ್ಯ ಭಾವ ಸೃಷ್ಟಿ ಕವಿಯದು. ಈಗ ಮಂಥರೆ ಭರತನ ಮೇಲಿನ ಮಮತೆಯಿಂದ, ಕೈಕೆಯ ಮೇಲಿನ ಅಭಿಮಾನದಿಂದ ರಾಮನು ಕಾಡಿಗೆ ಹೋಗುವಂತೆಯೂ ಭರತನು ರಾಜನಾಗುವಂತೆಯೂ ಯೋಜಿಸುವಳು. ಅವಳ ಯೋಜನೆಯು ಫಲಕಾರಿಯಾಗು ತ್ತದೆ. ಆದರೆ ಇದು ಭರತನಿಗೇ ಒಪ್ಪಿಗೆಯಾಗಲಿಲ್ಲ. ಅವನಿಗೆ ಸುಖವನ್ನು ತರಲಿಲ್ಲ. ಕೋಸಲಕ್ಕೇ ಹಾನಿಯನ್ನುಂಟುಮಾಡಿತು. ಆಗ ಮಂಥರೆ ಏನು ಮಾಡಿದಳು? ಬಾಲ

ಋಷಿ ಭರತನು ರಾಮನನ್ನು ಕಾಡಿನಿಂದ ತಿರುಗಿ ಕರೆದುತರಲೆಂದು ಹೊರಡುವ ಪೂರ್ವದಲ್ಲಿಯೇ ತಾನು ತರಲು ಹೊರಡುವಳು. ತಾನು ಮಾಡಿದ—ತಿಳಿಯದ ಬುದ್ಧಿ ಎಸಗಿದ—ತಪ್ಪನ್ನು ತಿದ್ದಿಕೊಳ್ಳಲು ತೆರಳುವಳು. ಈ ವರೆಗೆ,

'. . . ದಶರಥಂ
ಕೈಕೆ ಭರತರಿಗಾಗಿ ; ಕೈಕೆ ಭರತರಿಗಾಗಿ
ಕೋಸಲಮಯೋಧ್ಯೆಗಳ್, ಭರತನಾಳ್ವಿಕೆಗಾಗಿ ಈ
ಪೃಥಿವಿ !'

ಎಂದು ನಂಬಿ, ಬಾಳಿದ ಮಂಥರೆಯು ಇಂದು ರಾಮದರ್ಶನಕ್ಕಾಗಿ ಕಾಡನ್ನು ಸೇರಿದ್ದಾಳೆ. ಅವಳಿಗೆ ಈಗ ರಾಮನಿಲ್ಲದೆ ವಿಶ್ವದಲ್ಲಿ ಇನ್ನೇನೂ ಇಲ್ಲ. 'ಅಡವಿಯೇ ಕಿವುಡಾಗಿ' ಕೇಳಿತೆನ್ನುವಂತೆ, ಕಾಡಿನಲ್ಲಿ ರಾಮನನ್ನು ಅರಸುತ್ತ, ಕರೆಯುತ್ತ, ಹಂಬಲಿಸುತ್ತ ತಿರುಗುವಳು. ಆ ನಿಃಸಹಾಯಕ ದಾಸಿಯ ಕೂಗೊಂದು ರಾಮ ಧ್ಯಾನವಾಗಿ ನಮಗೆ ಪರಿಣಮಿಸುವುದು. ಅವಳಿಗೂ ಹಾಗೆಯೇ. ಕೇಳಿ, ಕವಿ ವಾಣಿಯನ್ನು !

"'. . . ಓ ನನ್ನ ಭರತನಣ್ಣಯ್ಯ ! ಓ
ರಾಮಯ್ಯ ! ಹೇಳೆಲ್ಲಿರುವೆಯಯ್ಯ ? ದಮ್ಮಯ್ಯ !—
ಓ ನನ್ನ ಭರತನಣ್ಣಯ್ಯ ! ಓ ರಾಮಯ್ಯ !
ಹೇಳೆಲ್ಲಿರುವೆಯಯ್ಯ ? ದಮ್ಮಯ್ಯ !—ಓ ನನ್ನ
ಭರತನಣ್ಣಯ್ಯ ! ಓ ರಾಮಯ್ಯ ! ದಮ್ಮಯ್ಯ !
ಹೇಳೆಲ್ಲಿರುವೆಯಯ್ಯ ? "

ಈಗ ಮಂಥರೆ 'ಕರುಣಧ್ವನಿಯ ಛಂದಸ್ಸಿಗೆಂಬಂತೆ' ಚಲಿಸುತಿರ್ದಳು, 'ತಾರಾ ಸಹಸ್ರಾಕ್ಷಿಯಾ ವ್ಯೋಮದೇವಿಯ ಮನಕೆ ರೋಮೋದ್ಗಮಂ ಪಲ್ಲವಿಸುವಂತೆ.' ಹೊರಗಿನ ಲೋಕ ತಿಳಿಯದಿದ್ದರೇನು ? ವಿಶ್ವಶಕ್ತಿಯ ಆತ್ಮವು ಅವಳ ಅಂತರಂಗದ ಪರಿವರ್ತನೆಯನ್ನು ತಿಳಿಯದೆ ಇದ್ದೀತೆ ? ಅವಳ ಅಗ್ನಿಯಾತ್ರೆಯ ಮಹತಿಯೇನು ಕಿರಿದೆ ? ಅವಳಿಗೆ ಈಗ ರಾಮನೊಬ್ಬ ದೈವ. ಅವಳನ್ನಷ್ಟೇ ಅಲ್ಲ, ಕೋಸಲವನ್ನು ಜಗತ್ತನ್ನೆಲ್ಲವನ್ನು ಉದ್ಧರಿಸುವ ದೈವ. ಆದರೆ ಅವಳಿಗೆ ಮಾತ್ರ ಯಾವಾಗಲೂ ಅವನು 'ಭರತನಣ್ಣಯ್ಯ !' ಮಹಾತ್ಮ ಗಾಂಧೀಜಿಯವರೊಮ್ಮೆ ಹೇಳಿದರಂತೆ : ದೇವರು ನನ್ನ ಭೆಟ್ಟಿಗೆ ಬರುವುದಾದರೂ ಅವನಿಗೆ 'ಖಾದಿಯನ್ನು ಧರಿಸಿರುವೆಯಾ ?' ಎಂದು ಕೇಳುವೆನೆಂದು. ಇದೊಂದು ಅಮೌಲ್ಯ ನಿಷ್ಠೆ. ತತ್ವದಲ್ಲಿ ಅದೇ ನಿಷ್ಠೆ, ಆಗ ಮಂಥರೆಯಲ್ಲಿಯೂ ಕಾಣುವೆವು. ಕಾಡಿನ ದಾವಾನಲವನ್ನೇ ರಾಮನೆಂದು ಭಾವಿಸಿ,

ಅದರಲ್ಲಿ ತುಡುಕಿ ಆ ಮಹಾ ಮಾತೆ ಮಂಥರೆಯು ಪಂಚತ್ವವನ್ನು ಹೊಂದುವಳು. ವಿಶ್ವಕ್ಕೆ ರಾಮತ್ವವನ್ನು ಪಡೆದುಕೊಡುವಳು.

ಈ ಮಂಥರೆಯು ತಿರುಗಿ ನಮಗೆ ದರ್ಶನವೀಯುವುದು ದಿವ್ಯಮೂರ್ತಿಯಾಗಿ, ಸುರಾಂಗನಾಮೂರ್ತಿಯಾಗಿ. 'ತಪಸ್ಸಿದ್ಧಿ'ಯಲ್ಲಿ ಭರತನು ನಂದಿಗ್ರಾಮದಲ್ಲಿ, ರಾಮನು ಇನ್ನು ಬಾರದೆಹೋದರೆ ಅಗ್ನಿಪ್ರವೇಶ ಮಾಡಬೇಕೆಂದು ನಿರ್ಧರಿಸುತ್ತಿರು ವಾಗ ಅವನ ಬಗೆಗೆಣ್ಣಿನೆದುರಿಗೆ ತಪೋಲಕ್ಷ್ಮಿಯಂತೆ ಸುಳಿದು, ಸೂಚಿಸುವಳು :

"ಕಂದ, ನಿನ್ನಗ್ರಜಂ
ಇಂದೊ ನಾಳೆಯೊ ದಿಟಂ ಪಿಂತಿರುಗಿ ಬಂದಪನ್.
ಮಾಣ್ ಮನದ ತರಿಸಲ್ಕೆಯಂ."
"ದೇವಿ, ನೀನಾರ್ ?
ಸುಧಾ ಸುಖವನೆರೆಯುತಿಹೆ ಬೆಂದೆರೆಗೆ!"
"ಮತ್ತಾರ್
ಸದಾ ನಿನ್ನ ಸುಕ್ಷೇಮ ಚಿಂತನೆಯೊಳಿರ್ಪರಾ
ಮಂಥರೆ ವಿನಾ ?"
"ಬೇಡಮಾ ಪೆಸರನೊರೆಯದಿರ್,
ಪೂಜ್ಯೆ. ಆ ಗೂನಿ ಕಾರಣಮಾಗೆ ನಾನಿಂತು,
ಇಂದಿಲ್ಲಿ, ಕೈಕೊಂಡೆನೈಸೆ ಕಡುಗಜ್ಜಮಂ."
"ವತ್ಸ, ಕಾರಣಳಲ್ತು ; ಬರಿ ಕರಣಮಾ ಕುಬ್ಜೆ.
ಮಂಥರಾ ಪ್ರೇಮದಂತಃಕರಣಮಂ ಕಾಣೆ
ನೀಂ. ರಾಮನಂ ಮತ್ತೆ, ನಿನ್ನಭ್ಯುದಯಕಾಗಿ,
ಪಿಂ ಮರಳ್ಚುವುದ್ಯೋಗದೊಳ್ ತೊಡಗಿರಲ್ಕವಳ್
ದವಾಗ್ನಿಗಾಹುತಿಯಾದಳಲ್ತೆ ? . . . ನಾನೆಯೆ, ನೋಡು,
ನಿನ್ನ ಮಂಥರೆಯಂತರಾತ್ಮದ ಪುಣ್ಯಲಕ್ಷ್ಮಿ !"

ಭರತ ಮಂಥರೆಯ ಆತ್ಮಶ್ರೀಯನ್ನು ಒಂದು ವೇಳೆ ಅರಿಯದಿದ್ದರೂ ನಾವೆಲ್ಲ ಅರಿಯುವಂತೆ ಮಹಾ ಕವಿ ಮಾಡುತ್ತಾರೆ. ರಾಮಾಯಣದ ಈ ಚಿಕ್ಕ ಒಂದು ಪಾತ್ರ ದಲ್ಲಿ ಮೂಡಿನಿಂತ ಕವಿಯ ಈ ಕಲಾಪ್ರತಿಭೆ, ಉದಾತ್ತ ಹೃದಯಗಳು ಕನ್ನಡದ ಕಾಣ್ಕೆ ಯಾಗಿವೆ. ವಿಶ್ವಸಾಹಿತ್ಯಕ್ಕೆ ಶ್ರೇಯಸ್ಸನ್ನುಂಟುಮಾಡುವ ಭಾವಸಂಪತ್ತಿಯಾಗಿದೆ.

ಇಂಥ ಒಂದು ದಾಸಿಯ ಆತ್ಮದಾನವೊಂದೇ ರಾಮನ ಪುಣ್ಯಚರಿತೆಯ ವಿಕಾ ಸಕ್ಕೆ ಸಾಕು. ಆದರೆ ಇಂಥ ಅನೇಕ ವ್ಯಕ್ತಿಗಳ ತಪಃಪ್ರಭಾವದಿಂದ ರಾಮತ್ವದ ಸೃಷ್ಟಿಯಾಗಿದೆ, ಜಗತ್ತಿನಲ್ಲಿ. ವಾಲ್ಮೀಕಿಯ ರಾಮಾಯಣದಲ್ಲಿ ಎಲ್ಲಿಯೋ ಮೂಡಿ,

ಮಾಯುವಾಗುವ ಊರ್ಮಿಳಾ—ಲಕ್ಷ್ಮಣನ ಮಡದಿ—ಈ ರಾಮಾಯಣ ದರ್ಶನದಲ್ಲಿ ಉಜ್ವಲಪಾತ್ರವಾಗಿ ನಮ್ಮ ಕಣ್ಣುಮುಂದೆ ನಿಲ್ಲುವಳು. ಸೀತೆಗಿಂತಲೂ ಇವಳ ಜೀವನ ಕಷ್ಟತರ. ಕಾಡಿನಲ್ಲಿ ಹಲವು ದಿನ ರಾಮನ ಜೊತೆಯಲ್ಲಿಯಾದರೂ ಸೀತೆ ಇದ್ದಾಳೆ. ಸತಿ-ಪತಿಯರು ಹಲವು ದಿನ ಕೂಡಿ ಕಳೆದಿದ್ದಾರೆ, ನಲಿದಿದ್ದಾರೆ! ಆ ಸುಖವೂ ಇಲ್ಲ, ಊರ್ಮಿಳೆಗೆ! ರಾಮ-ಲಕ್ಷ್ಮಣರು ಕಾಡಿಗೆ ಹೊರಡುವಂದೇ ಸರಯೂ ತೀರದಲ್ಲಿ ಎಲೆವನೆಯನ್ನು ಕಟ್ಟಿಕೊಂಡು, ಸೀತಾರಾಮರಿಗೂ, ಲಕ್ಷ್ಮಣನಿಗೂ ಕ್ಷೇಮವನ್ನು ಚಿಂತಿಸುವ ತಪೋಮೂರ್ತಿಯಾಗುತ್ತಾಳೆ. ಲಂಕೆಯ ರಣಭೂಮಿಯಲ್ಲಿ ಇಂದ್ರಜಿತುವಿನ ಯೋಗಮಾಯೆಯನ್ನು ಭೇದಿಸಲು ಹೋಗಿ ಲಕ್ಷ್ಮಣನು ಗತಪ್ರಾಣನಾದಾಗ ಅವನ ಈ ಸತಿಯ ತಪಸ್‌ಶಕ್ತಿಯೇ ತಿರುಗಿ ಬದುಕಿಸಿ ಕೊಟ್ಟದ್ದನ್ನು ಕವಿಯು ಬಹು ಕುಶಲತೆಯಿಂದ ಚಿತ್ರಿಸಿದ್ದಾರೆ. ಇದರಂತೆ ಅಶೋಕ ವನದಲ್ಲಿಯ ಸೀತೆಯ ತಪಸ್ಸೂ ಕೂಡ ರಾಮವಿಜಯಕ್ಕೆ ಕಾರಣವಾಗುತ್ತದೆ. ಇಂಥ ಒಂದು ತಪಸ್‌ಶಕ್ತಿಯ ಅರಿವನ್ನೂ ಅನುಭವವನ್ನೂ ಈ ರಾಮಾಯಣ ದರ್ಶನದಲ್ಲಿ ಎಲ್ಲೆಡೆಗೂ ನಾವು ಕಾಣುತ್ತೇವೆ. ಅದರ ಒಂದು ಮುಖ ಊರ್ಮಿಳೆ. ರಾಮ ಲಕ್ಷ್ಮಣರು ಊರಿಗೆ ತಿರುಗಿ ಬಂದಾಗ, ತಂಗಿ ಮಾಂಡವಿ, ಭರತ ಸತಿ, ಊರ್ಮಿಳೆಯನ್ನೂ ಕರೆಯಲಿಕ್ಕೆ ಬರುತ್ತಾಳೆ. ಆಗ ಊರ್ಮಿಳೆಯು ಸ್ನಾನಮಾಡಿ, ಉಡಿಗೆ ತೊಡಿಗೆಗಳನ್ನು ತೊಟ್ಟು, ಹೋಗುವ ಸಿದ್ಧತೆ ನಡೆಯಿಸುವಳು. ಆಗ ಮಾಂಡವಿಯು,

> "ನೋಡಬಾರದೆ ಅವರ್
> ನಿನ್ನ ನಿಡು ಕಡುನೋಂಪಿಯಿಂ?"

ಎನ್ನುವಳು ಅದಕ್ಕೆ ಊರ್ಮಿಳೆಯು :

> "ಚಿಃ! ಕಡಲ್ಗಿದಿರ್
> ಪನಿಗೇಂ ಪ್ರದರ್ಶನಂ? ದೇವರ ತಪಕ್ಕಿದಿರ್
> ನಮ್ಮದೊರ್ ತೃಣಮಲ್ತೆ! . . . ತನ್ನ ತಾನ್
> ಇಲ್ಲಗೈವುದೆ ಎಲ್ಲ ಸಾಧನೆಗೆ ಕೊನೆಯ ಗುರಿ;
> ಮೇಣ್ ತಪಕೆ ಕೇಳ್, ತಂಗೆ, ಪರಮ ಪ್ರಯೋಜನಂ!"

ಇಲ್ಲಿಯ ಸತೀತ್ವ ನಮ್ಮನ್ನು ಬೆರಗುಗೊಳಿಸುತ್ತದೆ. ಇವಳಂತೆಯೇ ಅನಲೆ, ಶಬರಿ, ಅಹಲ್ಯೆಯರೆಲ್ಲ ಒಂದು ನವನವೀನ ಕಾಂತಿಯಿಂದ ತಪೋಮೂರ್ತಿಗಳಾಗಿ, ಪುಟ್ಟಪ್ಪನವರ ಪ್ರತಿಭೆಯಿಂದ ಇಲ್ಲಿ ಬೆಳಗಿದ್ದಾರೆ. ಕವಿ ಪ್ರತಿಭೆ ಕಂಡ ಸತ್ಯದರ್ಶನವನ್ನು ನಾವೂ ಸಂದರ್ಶಿಸಿ ಮುಗ್ಧರಾಗುತ್ತೇವೆ. ಇಂಥ ಮಹಿಮಾದರ್ಶನ ಪುಟ್ಟಪ್ಪನವರಂಥ ಕ್ರಾಂತದರ್ಶಿಗಳಿಗೇ ಸಾಧ್ಯ. ಅದನ್ನವರು ತಮ್ಮ ದೀರ್ಘ ತಪಸ್ಸಿನಿಂದ, ಅನುಪಮ

ಪ್ರತಿಭೆಯಿಂದ, ಮಿಗಿಲಾದ ಧೀಶಕ್ತಿಯಿಂದ ಸಾಧಿಸಿ, ರಾಮಾಯಣ ದರ್ಶನದಲ್ಲಿ ಸಿದ್ಧಿಯನ್ನು ಹೊಂದಿದ್ದಾರೆ.

ಇದು ವಿಚಾರಕ್ರಾಂತಿಯ ಯುಗ. ಜನಸಾಮಾನ್ಯರ ಕಾಲ. ಹೆಣ್ಣು ಗಂಡುಗಳೆಲ್ಲ ಸಮಭಾವದಿಂದ ಬಾಳುವ ಇಪ್ಪತ್ತನೆಯ ಶತಮಾನ. ಇಂಥ ಕಾಲದಲ್ಲಿ ಈ 'ರಾಮಾಯಣ ದರ್ಶನ' ಮೂಡಿಬಂದಿದೆ. ಅದರಲ್ಲೂ ಮಹಾಕವಿಯ ಮನಸ್ಸು, ಪ್ರತಿಭೆಗಳು ಲೋಕದ ಪ್ರತಿನಿಧಿಗಳಾಗಿ ಕೆಲಸಮಾಡುವುವು. ಎಲ್ಲರ ಭಾವನೆಗಳನ್ನೂ ಪ್ರತಿಫಲಿಸುವವು. ಅದರಿಂದಲೇ ಇಂಥ ಅಮೂಲ್ಯ ಕಲಾಕೃತಿಗಳಲ್ಲಿಯ ದಿವ್ಯ ದರ್ಶನ ಸಾರ್ವತ್ರಿಕವಾಗುವುದು. ಇಲ್ಲಿ, ಸೀತೆಯ ಶುದ್ಧಿಯನ್ನು ಹೆಣ್ಣಿನ ಹದಿಬದೆಯ ತನವನ್ನು ಅಗ್ನಿಪರೀಕ್ಷೆಯಿಂದ ಅರಿಯಲು ಬಯಸಿದ ಜಗತ್ತಿನ ಪೌರುಷವು ತಾನೂ ಅಗ್ನಿಯ ದಿವ್ಯದಲ್ಲಿ ತೇರ್ಗಡೆಯನ್ನು ಹೊಂದಬೇಕಾಗುತ್ತದೆ. ಅನಲೆ ಸ್ತ್ರೀಯ ಪ್ರತಿನಿಧಿಯಾಗಿ ಅಂದು ಒಡೆದು ಆಡದಿದ್ದರೇನಾಯಿತು? ಅವಳ ಹೃದಯವನ್ನು ತಿಳಿದು, ರಾಮನೇ ಅಗ್ನಿಯನ್ನು ಪ್ರವೇಶಿಸಿ, ಸೀತೆಯನ್ನು ಮರಳಿ ಪಡೆಯಬೇಕಾಯಿತು. ಇಂಥ ಅನೇಕ ಸಂಗತಿಗಳಲ್ಲಿ, ಸಾಮಾನ್ಯವೆಲ್ಲ ಅಸಾಮಾನ್ಯವಾಗಿ ಮೂಡಿಬಂದುದೊಂದು ಈ ರಾಮಾಯಣ ದರ್ಶನದ ವೈಶಿಷ್ಟ್ಯವೇ ಆಗಿದೆ. ಇದನ್ನು ವಹ್ನಿ-ರಂಹರ ಚಿತ್ರಣದಲ್ಲಿಯೂ ನಾವು ಕಾಣಬಹುದಾಗಿದೆ.

ವಾನರ ಸೈನ್ಯವೆಲ್ಲ ಪ್ರಯಾಣದ ಮೇಲೆ ಪ್ರಯಾಣ ಬೆಳಸಿ, ದಕ್ಷಿಣ ಸಮುದ್ರದ ತೀರಕ್ಕೆ ಹೋಗಿ, ಬೀಡುಬಿಟ್ಟಿದೆ. ರಾಮನು ಸಾಗರವನ್ನು ದಾಟುವ ಬಗೆಯನ್ನು ನೀಲನೊಡನೆ ಮಾತನಾಡುತ್ತಲಿದ್ದಾನೆ. ಅಷ್ಟರಲ್ಲಿ ಸಾಮಾನ್ಯರೆಂದು ತೋರುವ ಇಬ್ಬರು ಅತ್ತ ಬರುತ್ತಾರೆ. ಕಪಿಕುಲೋತ್ತಮನಾದ ದಧಿಮುಖನ ಧೀರದಳದವರವರು. ರಾಮಚಂದ್ರನು ಅವರನ್ನು ಹತ್ತಿರ ಕರೆದು ಮಾತನಾಡಿಸುತ್ತಾನೆ. ಅವರ ಪರಿಚಯ ಕೇಳುತ್ತಾನೆ. ವಹ್ನಿ, ರಂಹರೆಂಬ ಸೈನಿಕರವರು. ಗಗನ ಗಮನ ಹಾಗೂ ಮಲ್ಲಯುದ್ಧಗಳಲ್ಲಿ ಹೆಸರಾದ ಕಲಿಗಳವರು. ಆದರೂ ದಧಿಮುಖನ ಸೇನೆಯಲ್ಲಿ ತಾವು ಅಲ್ಪ ಬಲರೆಂಬ ವಿನಯ ಅವರಲ್ಲಿ. ಅಂಥವರಲ್ಲಿ ದೇವ ರಾಮಚಂದ್ರನು, ನಿಮ್ಮ ಹೆಂಡರು ಮಕ್ಕಳಿಗೆ ಯಾರು ರಕ್ಷಕರು? ರಣಭೂಮಿಯೊಂದು ಮರಣಭೂಮಿ—ಎಂದು ಕೇಳುವನು. ಅದಕ್ಕೆ ವಹ್ನಿ ಹೇಳುವುದನ್ನು ಕೇಳಬೇಕು:

> "ಆವ ಧರ್ಮಕೆ ಸಾವನಪ್ಪುವೆವೊ ಪೊರೆವುದಾ
> ಧರ್ಮವೀ ಲೋಕಮುಂ. ನನ್ನ ಸತಿಸುತರೊಂದು
> ಹೊರತೆ? ಕೇಳ್, ರಾಜೇಂದ್ರ, ಸರ್ವಸೇನಾಧಿಪತಿ
> ಈ ನೀಲದೇವನೆಮ್ಮಂ ನಡಸೆ, ಬಾಳ್ವೆರಸಿ

ಕಾಣ್ಬೆವೆಲ್ಲರ್ ಮನೆಯ ಮಂಗಳವ. ಅಲ್ಲದಿರೆ,
ಬಿದಿ ಬಗೆಯಲನ್ಯಮಂ, ಬಿದಿ ಬಗೆಯಲನ್ಯಮಂ,
(ಬಿದಿಗಿಲ್ಲಮೆರ್ದೆ ಬಲ್ಲೆ !) ಸಾವೆ ಮೇಲ್ ಬರ್ದುಕಿಗಿಂ !
ದಶಶಿರಂ ಪೊತ್ತೊಯ್ದುದೊರ್ಬನ ಸತಿಯನಲ್ತು ;
ಸತಿತನವನುಯ್ದಿಹನ್ ! ಪುರುಷನಿರಲಾಗದೀ
ಧರೆಯ ಮೇಲೊರ್ವನುಂ ಪೊರೆಯದನ್ನೆಗಮಾ
ಸತೀತ್ವಮಂ! ರಘುವರ, ಸುರಕ್ಷಿತರ್ ನನ್ನವರ್
ನಿನ್ನ ಈ ಕೇಳ್ದ ಕುಶಲಪ್ರಶ್ನ ಕೃಪೆಯಿಂದಮುಂ ! ”

ಇಲ್ಲಿಯ ಸೈನಿಕರ ಪ್ರತಿನಿಧಿಗಳಿವರು. ಧರ್ಮ ರಕ್ಷಣೆಗಾಗಿ ಸಾಯಲೂ ಸಿದ್ಧರು. ರಾಮ ಸತಿಯಾದ ಸೀತೆಯ ಅಪಹರಣ ಒಂದು ವ್ಯಕ್ತಿಗೆ ಆದ ಅಪಚಾರವಲ್ಲ, ವಿಶ್ವದೊಳಗಿನ ಪೌರುಷಕ್ಕೇನೇ ಅಪಮಾನ. ಎಂಥ ಉದಾತ್ತ ವಿಚಾರಗಳಿವು ! ಧರ್ಮ, ಪಾತಿವ್ರತ್ಯಗಳ ಬಗ್ಗೆ ಯಾವ ಕಾಲಕ್ಕೂ ನಿಲ್ಲುವ ಮಾತುಗಳಿವು. ವಿಶ್ವಸತ್ಯದ ರಹಸ್ಯವೇ ಇದು. ಇಂಥ ಸತ್ಯವಾಣಿಯನ್ನು ಬಿತ್ತರಿಸುವುದರಿಂದಲೇ ಅಲ್ಲವೇ, ಕಾವ್ಯ ಅಜರಾಮರವಾಗುವುದು ?

ಇಲ್ಲಿ ಸೈನಿಕರ ನಿಷ್ಠೆಯನ್ನು ನಾವು ಗಮನಿಸಬೇಕು. ರಾಮಚಂದ್ರನನ್ನು ಕಂಡು ಮಾತನಾಡಿದ ಪುಣ್ಯಬಲದಿಂದಲೇ ತಾವು ಸುರಕ್ಷಿತರೆಂಬ ಶ್ರದ್ಧೆ ಅವರಲ್ಲಿ. ಈ ಅಪಾರ ಶ್ರದ್ಧೆಯೇ ಅವರನ್ನು ಎಂಥ ಸಂಕಟದಲ್ಲಿಯೂ ಕಾಯುತ್ತದೆ. ಮುಂದೆ ರಣಭೂಮಿಯಲ್ಲಿ ರಾಮ-ರಾವಣರ ಯುದ್ಧ ನಡೆದಿದೆ. ಕಪಿಸೈನ್ಯದ ಪ್ರತಿಯೊಬ್ಬನಲ್ಲೂ ರಾಮನೇ ಕಾಣುತ್ತಿದ್ದಾನೆ ರಾಮಭಕ್ತನಾದ ಹನುಮನಿಗೆ. ಅದರಂತೆ ರಾವಣನ ಮೂಲಬಲವೆಲ್ಲ ರಾವಣತ್ವದಿಂದ ಕೂಡಿದೆ. ನಡೆದಿದೆ ರಾಮ-ರಾವಣರ ತುಮುಲಯುದ್ಧ ! ರಾಕ್ಷಸರ ಪೆಟ್ಟಿಗೆ ಹೋರಾಡುವ ರಂಹ ಕೆಳಗೆ ಬೀಳುತ್ತಾನೆ. ಇದನ್ನು ಕಂಡ ವಹ್ನಿ ತನ್ನ ಸ್ನೇಹಿತನನ್ನು ಎತ್ತಿಕೊಂಡು, ಕಪಿಸೈನ್ಯದೊಡನೆ ಸೋತು ಹಿಂದಿರುಗಿ ಓಡುತ್ತಿದ್ದಾನೆ! ಆಗ ವಹ್ನಿ ಕಂಡ ಆಂಜನೇಯನನ್ನು. ವಹ್ನಿಯ ಕೃತಿ ಅನುಚಿತವೆಂದು ಅವನ ದೃಷ್ಟಿ ಸೂಚಿಸಿತು. ಅಷ್ಟರಲ್ಲಿ ಕಂಕುಳಲ್ಲಿಯ ರಂಹನು ಮಿತ್ರನಿಗೆ ನುಡಿದ :

“. . . ವಹ್ನಿ, ಬಿಸುಡೆನ್ನ ದೇಹಮಂ
ಇಂದೊ ನಾಳೆಯೊ ಸಾವೆನಾಂ. ಓಡಿ ಬರ್ದುಕುವುದೆ ?
ಸುಡಲಿ ಆ ಬಾಳ್ಕೆಯಂ. ಬಿಸುಡು, ಬಿಸುಡೆನ್ನೊಡಲ
ಭಾರಮಂ. ತಾರದಿರ್ ಸ್ವಾಮಿ ಕಾರ್ಯಕೆ ವಿಘ್ನಮಂ.
ಕೊಳೆತೊಡೇಂ ನನ್ನೊಡಲ್ ? ರಾಮಕಾರ್ಯಂ ಗೆಲ್ಗೆ !

. . . ಕೈದುಗೊಳ್ ! ತಿರುಗು ! ತಿವಿ ! ಕೂಗಿ ಕರೆ
ಓಡುವವರಂ . . . ವಹ್ನಿ."

ವಹ್ನಿ ರಂಹನನ್ನು ತೊರೆದು ಯುದ್ಧಕ್ಕೆ ತೊಡಗಿದ. ಆಗ ಅವನಲ್ಲಿ ರಾಮತ್ವ ಆಂಜನೇಯನಿಗೆ ಕಂಡಿತು. ಮೋಹ, ಹೇಡಿತನ ವ್ಯಕ್ತಿಯ ಅಶಕ್ತಿಗಳಾದರೆ ಅವರಲ್ಲಿಯ ನಿರ್ಮೋಹತೆ, ವೀರತ್ವಗಳು ರಾಮತ್ವದ ಗುರುತುಗಳು—ಈ ಸಂಗತಿಯನ್ನು ಎಷ್ಟು ಸೂಕ್ಷ್ಮವಾಗಿ, ಸುಂದರವಾಗಿ ನಿರೂಪಿಸಿದ್ದಾರೆ ಕವಿ. ವಿಶ್ವದಲ್ಲೆಲ್ಲ ಸತ್ಯಕ್ಕೂ ಅಸತ್ಯಕ್ಕೂ ಚೇತನಕ್ಕೂ ಜಡಕ್ಕೂ ಸದಾ ನಡೆದ ಹೋರಾಟವನ್ನು ಇಲ್ಲಿ ಕವಿಯು ಬಹು ಮನೋಹರವಾಗಿ ಚಿತ್ರಿಸಿದ್ದಾರೆ.

ಸೃಷ್ಟಿಯಲ್ಲಿ ಈ ಹೋರಾಟಕ್ಕೆ ಎಷ್ಟು ಮಹತ್ವವೋ ಅಷ್ಟೇ ನಿಯತಿಗೂ ಮಹತ್ವ. ವೇದಕಾಲದಿಂದಲೂ ಭಾರತೀಯ ಜೀವನದ ಜೀವಾಳವಾಗಿ 'ಋತ'ವು ನಿಂತಿದೆ. 'ಋತವೊಂದೆ ಗೆಲ್ಲುವುದು ; ಅನೃತಮಲ್ತು' ಎಂದು ಹಿರಿಯರೂ ಹೇಳುತ್ತ ಬಂದಿದ್ದಾರೆ. ವಿಶ್ವಚಾಲನೆಯ ಉಸಿರೇ ಅದು. ಇದನ್ನು ಕವಿ ಬಹು ಸುಂದರವಾಗಿ ಈ ಕಾವ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

ವಹ್ನಿ, ಯುದ್ಧ ಮುಗಿದ ಮೇಲೆ ಮಡಿದ ರಂಹನ ಕಳೇಬರವನ್ನು ದಹನ ಮಾಡಿ, ಬೈಗಿನಲ್ಲಿ ಶಿಬಿರಕ್ಕೆ ಮರಳುತ್ತಿದ್ದಾನೆ. ಸಾಗರದ ತೀರದ ಉಸುಬಿನ ಬೈಲಿನಲ್ಲಿ ಎದುರಿಗೆ ಶ್ರೀರಾಮನನ್ನು ಕಾಣುವನು. ಆಗ ನಡೆಯುವ ಸಂಭಾಷಣೆಯು ಅತ್ಯಮೂಲ್ಯವಾದುದು. ರಂಹ ಕಲಿ, ಅವನ ಸಾವೂ ಹಿರಿದು. ಅವನ ಬಾಳು ಧನ್ಯ ; ಸಾರ್ಥಕ. ಇಷ್ಟೆಲ್ಲ ರಾಮಚಂದ್ರ ನುಡಿದು,

"ದುಃಖಮೆ, ವಹ್ನಿ,
ಮಿತ್ರಮರಣಂ ನಿನಗೆ ?"

ಎಂದು ಹೇಳುತ್ತಾನೆ. ಅದಕ್ಕೆ ವಹ್ನಿಯು,

"ಬರ್ದುಕಿರ್ದೊಡಾತನುಂ
ಸುಖಮಿರ್ಕ್ಕಡಿಸುತಿರ್ದುದೆಂಬೆನ್, ಮಹಾಪ್ರಭೂ,"
"ಪೇಳ್ ಅವಂ ಬರ್ದುಕಿ ಬರ್ಪುದು ನಿನಗೆ ಸಮ್ಮತಮೆ ?"
"ಸತ್ತವರ್ ಬರ್ದುಕಿ ಬರ್ಪುದದೆಂತು, ನನ್ನೊಡೆಯ ?"
"ನಿನಗೇಕದೆಲ್ಲ ? ನಿನಗೊಪ್ಪಿಗೆಯೆ ಪೇಳ್ ? . . ."
"ಮಾಣ್,
ಮಾಣ್, ಮಹಾಪುರುಷ, ಮಾಣ್ ! ನೀನ್ ಕರೆಯೆ ಬರದಿರನ್ !
. . . ಕಾಳ್ಮರಗಳಡಿ ಬಯಸುವೋಲ್ ಕಲ್ಪವೃಕ್ಷದಡಿ

ಬಯಸುವೊಡೆ, ಬಯಕೆಗೆಳ್ಚರಿಕೆ ವೇಳ್ಕುಂ! ಮತ್ತೆ
ತಪ್ಪಿದೆನ್. ಏನ್ ಬಯಕೆ ಬಯಸಿದೆನ್! ಭೀಕರಂ!"
"ಪ್ರಾಜ್ಞನೈ ನೀಂ,. . . . . .
ಅನನ್ವಯಕ್ಕಳ್ಕುತಿದೆ ನಿನ್ನ ಮರ್ತ್ಯಪ್ರಜ್ಞೆ."

ಎಂದು 'ಭುವನಗುರು, ರಾಮಚಂದ್ರ ಸೂಚಿಸಿ, ವಹ್ನಿಗೆ ರಂಹನು ಮಗನಾಗಿ ಜನಿಸುವಂತೆ ಹರಸುವನು. ಆತ್ಮದ ಅಮರತ್ವದ ಕಲ್ಪನೆ, ವಿಶ್ವದ ನಿಯತಿಯನ್ನು ಮೀರದೆ ಬಾಳುವ ವಿಚಾರಗಳು ಇಲ್ಲಿ ಬಹು ಸುಂದರವಾಗಿ ಮೂಡಿಬಂದಿವೆ. ಇಲ್ಲಿ ವಹ್ನಿಯೇ ಮಡಿದು, ರಂಹನೇ ಬಾಳಿದ್ದರೆ ಅಂದಿನ ಮಾತಿಗೂ ಇಂದಿನ ಘಟನೆಗೂ ಒಂದು ಸಾಂಕೇತಿಕ ಧ್ವನಿಯು ಕಾವ್ಯದಲ್ಲಿ ಮೂಡಿಬರುತ್ತಿತ್ತೇನೋ—ಎಂದೆನಿಸುವುದು. ಆದರೆ ರಾಮಾಯಣದ ಮಹಾದಾರ್ಶನಿಕನಾದ ಕವಿಯ ಹೃದಯವು ಸತಿ-ಸುತರ ಮೇಲಿನ ಕರುಣೆಯಿಂದ ರಂಹನನ್ನು ಒಯ್ದು, ವಹ್ನಿಯನ್ನು ಹಿಂದೆ ಉಳಿಸಿತೋ ಏನೋ! ಅಂತೂ ಸಾಮಾನ್ಯವಾದುದೆಲ್ಲ ಅಸಾಮಾನ್ಯವಾಗಿ, ಬಹು ಅದ್ಭುತವಾಗಿ ಸತ್ಯಸ್ಪರ್ಶಿಯಾಗಿ ಈ ಕಾವ್ಯದಲ್ಲಿ ಮೂಡಿ ನಿಂತುದಕ್ಕೆ ಇದೊಂದು ಉದಾಹರಣೆಯಾಗಿದೆ.

೩

ರಾಮಾಯಣವು ಭರತಖಂಡದ ಮಹಾಕಾವ್ಯವಾಗಿದೆ. ಒಂದು ಕಾಲದಲ್ಲಿ ಮಲಯ, ಬ್ರಹ್ಮದೇಶ, ಇಂಡೋಚೀನ, ಇಜಿಪ್ತ, ಮೊದಲಾದ ದಕ್ಷಿಣ ಏಷಿಯದ ಭೂಭಾಗವೆಲ್ಲ ಈ ವಿಶಾಲ ಭಾರತದಲ್ಲಿ ಸಮಾವೇಶವಾಗಿತ್ತು. ಇದಕ್ಕೆ ಜಂಬೂದ್ವೀಪವೆಂದೂ ಹೆಸರು. ಈ ವಿಶಾಲ ಭೂಭಾಗದಲ್ಲೆಲ್ಲ ರಾಮಾಯಣವು ಪ್ರಚಾರದಲ್ಲಿತ್ತು. ಅಲ್ಲದೆ ಅದು ಭರತಖಂಡದ ಜನಜೀವನವನ್ನು ಪ್ರತಿನಿಧಿಸುವುದು. ಉತ್ತರ ಭಾರತದ ಕೋಸಲ, ದಕ್ಷಿಣ ಭಾರತದ ಕಿಷ್ಕಿಂಧಾಪ್ರದೇಶ, ಸಾಗರ ಮಧ್ಯದ ಸಿಂಹಲ ದ್ವೀಪ ಇವುಗಳಲ್ಲಿಯ ಆರ್ಯ, ಆರ್ಯೇತರ ಜನಾಂಗಗಳೆಲ್ಲರ ಜೀವನ ಇದರಲ್ಲಿ ಮೂಡಿದೆ. ವಿಶಾಲ ಜೀವನಚಿತ್ರಣ ಹಾಗೂ ವಿವಿಧಪ್ರದೇಶಗಳಲ್ಲಿಯ ಪ್ರಭಾವ, ಅನೇಕ ಧರ್ಮಗಳ ಕೈವಾಡಗಳಿಂದಾಗಿ ರಾಮಾಯಣ ಕಥೆಯು ವಿವಿಧ ಮುಖಗಳಲ್ಲಿ ಬೆಳೆದುನಿಂತಿದೆ. ಜೈನ, ಬೌದ್ಧ, ವೈದಿಕ ಧರ್ಮಗಳ ಪರಂಪರೆಯಲ್ಲಿ ಬಹು ಪ್ರಾಚೀನಕಾಲದಿಂದಲೂ ರಾಮಕಥೆಯ ವಿವಿಧರೂಪಗಳುಂಟಾಗಿವೆ. ಇಂದಿನ ವಿಶಾಲವಾದ ಅಭ್ಯಾಸ, ಅಗಾಧವಾದ ಜೀವನಪ್ರಜ್ಞೆಗಳಿಂದ ಆ ವಿವಿಧ ರಾಮಾಯಣಗಳ ಮಧ್ಯದಲ್ಲಿಟ್ಟು ಈ 'ರಾಮಾಯಣ ದರ್ಶನ'ವನ್ನು ಸಮಾಲೋಚಿಸಬಹುದಾಗಿದೆ.

ಇಂಥ ವಿಶಾಲವಾದ ವಿಮರ್ಶೆಗಾಗಿ ಒಂದು ಸ್ವತಂತ್ರ ಗ್ರಂಥವನ್ನೇ ಬರೆಯಬೇಕಾದೀತು. ಇಲ್ಲಿ ಅದಕ್ಕೆ ಅವಕಾಶವಿಲ್ಲ. ಆದರೆ ಭಾರತೀಯ ರಾಮಾಯಣಗಳಲ್ಲಿ

ವಾಲ್ಮೀಕಿಯಂತೆಯೇ ವಿಮಲಸೂರಿಯೂ ಒಬ್ಬ ಸುಪ್ರಸಿದ್ಧ ರಾಮಾಯಣಕಾರ ನಾಗಿದ್ದಾನೆ. ವಾಲ್ಮೀಕಿ ರಾಮನನ್ನು ಆದರ್ಶಪುರುಷನನ್ನಾಗಿ ಚಿತ್ರಿಸಿದ್ದರೆ ವಿಮಲ ಸೂರಿಯು ರಾವಣನನ್ನೂ ಶ್ರೇಷ್ಠ ಮಾನವನಂತೆ ಕಾಣಲು ಯತ್ನಿಸಿದ್ದಾನೆ. ಈ ಎರಡೂ ಪರಂಪರೆಗಳಲ್ಲಿ ಅನೇಕ ರಾಮಾಯಣಗಳು ಹುಟ್ಟಿ ಬೆಳೆದಿವೆ. ದಾಕ್ಷಿಣಾತ್ಯರ ಜೀವನ ವನ್ನು ಕಾಣುವ ದೃಷ್ಟಿಯು ವಾಲ್ಮೀಕಿಯ ಪರಂಪರೆಯ ರಾಮಾಯಣಗಳಲ್ಲಿ ಒಂದಾ ದರೆ ವಿಮಲಸೂರಿಯ ಕ್ರಮದ ವಿಕಾಸದಲ್ಲಿ ಇನ್ನೊಂದು ರೀತಿಯದಾಗಿದೆ. ಈ ಎರಡು ಕ್ರಮಗಳ ಸಮನ್ವಯದಿಂದ ಒಂದು ಅಪೂರ್ವ ಸೃಷ್ಟಿಯು ಇಂದಿನ ಈ 'ರಾಮಾಯಣ ದರ್ಶನ'ದಲ್ಲಿ ಆಗಿದೆಯೆಂದೆನ್ನಬಹುದು. ಇದರ ಸ್ಥೂಲಕಲ್ಪನೆಯನ್ನು ರಾವಣ ಪಾತ್ರ ಸೃಷ್ಟಿಯನ್ನು ಸ್ಥೂಲವಾಗಿ ಅವಲೋಕಿಸುವರಿಂದ ಓದುಗರಿಗೆ ಮಾಡಿಕೊಡಬಹು ದಾಗಿದೆ.

ಮಹಾಕಾವ್ಯದ ಇಂಥ ಒಂದು ಸಮಾಲೋಚನೆಯಲ್ಲಿ ರಾವಣನಂಥ ಹಿರಿಯ ಪಾತ್ರವನ್ನು ಸಮಗ್ರವಾಗಿ ಅವಲೋಕಿಸುವುದೂ ಸಾಧ್ಯವಾಗದ ಮಾತು. ಅದರಲ್ಲೂ ಪುಟ್ಟಪ್ಪನವರ ಕಾವ್ಯ ಗಂಗೆಯೊಳಗಿನ ರಸ, ಧ್ವನಿರಮ್ಯತೆ, ವೈಶಾಲ್ಯಗಳನ್ನೆಲ್ಲ ರಸಿಕರಿಗೆ ಸ್ಥೂಲವಾಗಿಯೇ ತೋರಿಸಲು ಯತ್ನಿಸಲಾಗುವುದು. ರಾವಣನ ವಿಸ್ತಾರವಾದ ರಾಜ್ಯದ ಒಂದು ಭಾಗದಲ್ಲಿ ತನ್ನ ಆಪ್ತರಿಗಾದ ರಾಮನ ಉಪದ್ರವ ದಿಂದಾಗಿ ರಾವಣನ ದೃಷ್ಟಿಯು ಸೀತೆಯ ಕಡೆಗೆ ಮತ್ತೆ ಹರಿಯುವಂತಾಗುತ್ತದೆ. 'ದಶಶಿರ' ಎಂದು ಬಿರುದುಳ್ಳ ರಾವಣನನ್ನು ಔತ್ತರೇಯರು ಹತ್ತು ತಲೆಯುಳ್ಳವ ನೆಂದು ಹೇಳುವುದು, ರಾಕ್ಷಸರೆಂದು ಕರೆಯುವುದು ರಾವಣನಿಗೆ ಸಹನವಾಗದ ಸಂಗತಿಗಳಾಗಿರುತ್ತವೆ. ರುದ್ರನನ್ನೂ ತಪಸ್ಸಿನಲ್ಲಿ ಒಲಿಸಿ, ತಿರುಗಿ ಹೋಗಿ ಜನಕನ ಆಸ್ಥಾನದಲ್ಲಿ ಹರಧನುಸ್ಸನ್ನು ಮುರಿಯಬೇಕೆಂದಿರುವಾಗ ಸೀತೆಯನ್ನು ಜನಕನು ರಾಮನಿಗೆ ಕೊಟ್ಟುಬಿಟ್ಟಿರುವನು. ಇವೆಲ್ಲವುಗಳಿಂದಾಗಿ ಸೀತೆಯನ್ನು ರಾವಣನು ತಂದು, ಮಂಡೋದರಿಗೆ ದಾಸಿಯನ್ನಾಗಿ ಮಾಡುತ್ತೇನೆಂದು ಹೇಳುತ್ತಾನೆ. ತಂಗಿಗೆ ಆದ ಅವಮಾನವೂ ಅವನನ್ನು ಸೀತೆಯನ್ನು ತರಲು ಪ್ರೇರೇಪಿಸುತ್ತದೆ. ಸೀತೆಯ ಸೌಂದರ್ಯವೂ ಅವನನ್ನು ಆಕರ್ಷಿಸುತ್ತದೆ. ಇವೆಲ್ಲವುಗಳಿಗಿಂತಲೂ ಅವನ ಹೆಚ್ಚಿನ ಆಕಾಂಕ್ಷೆಯೊಂದು ಹೃದಯದ ಅಂತರ್ಯದಲ್ಲಿ ಹುದುಗಿಕೊಂಡಿರುತ್ತದೆ. ಅದನ್ನು ಮಾರೀಚನ ಮುಂದೆ ಉಸುರುವನು :

"... ಕೇಳೊರೆವೆನೆನ್ನಾತ್ಮಚರಿತಮಂ,
ಮನ್ಮನೋದುರಿತಮಂ. ಪುಟ್ಟುವಾಗಳೆಯೆ ನಾಂ
ನೆತ್ತರೊಳೆ ಪೆಣ್ಣೊಡಲಿನಾಸೆಯಾ ಬೇಟಮಂ

ಪೊತ್ತು ಪುಟ್ಟಿದೆನ್ನೆಸೆ! ಜನ್ಮದೌರ್ಬಲ್ಯಮಂ
ಜಯಿಸಲೆಂದಾನೆನಿತೆನಿತೊ ನಿಟ್ಟೆಯಂ ಪಟ್ಟು
ಬೇಯಿಸಿದೆನಾತ್ಮಮಂ. ಪಾತಿವ್ರತ್ಯವ ನಂಬಿ,
ಪತ್ನೀವ್ರತಕ್ಕೆಳಸಿ ಕಳೆದೆನಯ್ ತಾರುಣ್ಯಮಂ
ಮುಗ್ಧಬುದ್ಧಿಯಲಿ. . .'

"ಹದಿಬದೆಯರೆಂದು ಹೆಸರಾಂತ ಹೆಣ್ಮಣಿಗಳಂ
ಪರಿಕಿಸಿದೆನವರುಂ ಸುಲಭಮಾದರಯ್, ಕಡೆಗೆ, ಕೇಳ್,
ಹದಿಬದಿಯರಿಹರೆಂಬ ನಂಬುಗೆ ಸತ್ತುದೆನ್ನೆದೆಗೆ!"

"ರಾಮನಂ ನಿಸ್ತೇಜನಂ ಮಾಡೆ ಸೀತೆಯಂ
ತರ್ಪೆನದು ರಾಜಕೀಯಂ; ಧರ್ಮದ ವಿಷಯಮಲ್ತು."

ಹೀಗೆ ರಾವಣನು ಹುಟ್ಟಿನಿಂದಲೇ ಕಾಮಿಯಾದರೂ ಸಂಯಮಿಯಾಗಿ ಪವಿತ್ರ ಬಾಳನ್ನು ಬಾಳಲು ಯತ್ನಿಸಿದನು. ಪತಿವ್ರತೆಯರಾರಾದರು ದೊರಕಿದರೆ ಪಾದಕ್ಕೆ ಎರಗುವೆನೆಂದು ಹಂಬಲಿಸಿದನು. ಅಂಥ ಪೆಣ್ಮಣಿಗಳೇ ಅವನಿಗೆ ಲಭಿಸಲಿಲ್ಲ. ಹಲವರನ್ನು ಪರಿಕಿಸಿದನು. ಅವನ ಪರೀಕ್ಷೆಯಲ್ಲಿ ಯಾರೂ ತೇರ್ಗಡೆ ಹೊಂದಲಿಲ್ಲ. ಕೊನೆಗೆ ಸೀತೆಯನ್ನಾದರೂ ನೋಡುವೆನೆಂದ. ರಾಜಕಾರಣಕ್ಕಾಗಿ ಅವಳನ್ನು ತಂದ.

ಇನ್ನು ಸೀತೆಯನ್ನು ತಂದಾದ ಮೇಲೆ ಲಂಕೆಯಲ್ಲಿ ಶಿವಮಂದಿರದೊಳಗೆ ಮಂಡೋದರಿಯ ಮುಂದೆ ರಾವಣನನ್ನು ನಾವು ಕಾಣಬೇಕು. ಮಂಡೋದರಿಯು ಪತಿಗೆ, "ಶಿವನ ಕೃಪೆಯಿಂದ ಸೀತೆಯ ಪಾತಿವ್ರತ್ಯವು ಗೆಲ್ಲುವುದು. ಅವಳು ನಿನಗೆ ವಶವಾಗಳು" ಎಂದು ಹೇಳಿದಾಗ ರಾವಣನು ಹೃತ್‌ಪೂರ್ವಕವಾಗಿ ಹೇಳುತ್ತಾನೆ: "ನನ್ನ ಇಚ್ಛೆ ಸೋಲಲಿ; ಹದಿಬದೆ ಗೆಲ್ಲಲಿ; ನಿನ್ನಾಸೆ ಸಲ್ಲಲಿ" ಎಂದು. ಇಲ್ಲಿ ರಾವಣನ ಪವಿತ್ರ ಹೃದಯದ ಅರಿವು ನಮಗಾಗುತ್ತದೆ. ಆದರೂ ಅವನು ಪರೀಕ್ಷಕನು. ಅವನಿಗೆ ಲೋಕದಲ್ಲಿ ಹೆಂಗಸಿನ ಹದಿಬದೆತನವನ್ನು ಪರೀಕ್ಷಿಸಬೇಕಾಗಿದೆ.

ಹನುಮಂತನು ಸೀತೆಯನ್ನು ಎಲ್ಲ ಕಡೆಗೂ ಶೋಧಿಸುತ್ತ ರಾವಣನ ರಾಜಗೃಹವನ್ನು ಸೇರುತ್ತಾನೆ. ಅದೇ ಆವಾರದಲ್ಲಿ ಸುಂದರ ಶಿವಮಂದಿರ. ಶಿವಸಾನ್ನಿಧ್ಯದಲ್ಲಿ ಮಂಡೋದರಿ ರಾವಣರಿಗೆ ಸಂವಾದ ನಡೆದಿದೆ. ಅದೃಶ್ಯರೂಪದಿಂದ ಅಲ್ಲಿ ನಿಂತು, ವಾಯುಕುಮಾರನು ಆ ಸತಿಪತಿಯರ ಮಾತನ್ನು ಆಲಿಸುತ್ತಿದ್ದಾನೆ, ನಡೆಯನ್ನು ನಿರೀಕ್ಷಿಸುತ್ತಿದ್ದಾನೆ. ಆಗ ರಾವಣನು ಹೇಳುವನು:

"ನನ್ನ ಹೃದಯ ರಣರಂಗವಾಗಿದೆ. ಪ್ರೇಯಸ್ಸು, ಶ್ರೇಯಸ್ಸು; ರುಚಿ, ಶುಚಿಗಳ ತಿಕ್ಕಾಟ ನಡೆದಿದೆ. ನೀನು ಮುಂದಿದ್ದರೆ ಒಂದು ಭಾವನೆ. ಸೀತೆಯನ್ನು ನೆನೆದಾಗ ಮತ್ತೊಂದು ಭಾವನೆ."

"ಹೃದಯೇಶ್ವರ, ಈಗಲೆ ಅಶೋಕವನಕ್ಕೆ ಹೋಗುವ ನಡೆ . . ." ಮಂಡೋದರಿಗೆ ರಾವಣನಲ್ಲಿಯ ಶುಭಭಾವನೆಯನ್ನು ಈಗಲೇ ಉಪಯೋಗಿಸಿಕೊಂಡು, ಸೀತೆಯನ್ನು ಬಿಡಿಸಬೇಕೆಂದು ಹಂಬಲ. ಆದರೆ ರಾವಣನು:

"ನಾಳೆ ಸೂರ್ಯೋದಯಕ್ಕೆ ಕೊನೆಯ ಬಾರಿ ನಾನೊಬ್ಬನೇ ಹೋಗುವೆ. ನಿನ್ನ ರಾವಣ ಇಷ್ಟು ಸುಲಭವಾಗಿ ಸೋಲುವನೆಂದು ಭಾವಿಸಿದೆಯಾ?"
"ರಾಜೇಂದ್ರ! ಈ ಹಟವನ್ನು ಸಾಕುಮಾಡು. ಮಂಗಳಕ್ಕೆ ಸೋಲುವುದು, ಸೋಲೆ? ಇಂದ್ರನನ್ನು ಗೆದ್ದವನಿಗೆ ಇಂದ್ರಿಯಗಳನ್ನು ಗೆಲ್ಲಲು ಆಗದೆ, ಧರ್ಮಕ್ಕೆ ಸೋಲುವುದೇ ಗೆಲುವು."

ಪ್ರಿಯೆ, ಕ್ಷಾತ್ರತೇಜಸ್ಸು ತಾನಾಗಿಯೇ ಸೋಲನ್ನು ಬಯಸುವದಿಲ್ಲ. ವೀರರು ಬಯಸುವುದು ಗೆಲುವನ್ನೇ ಹೊರತಾಗಿ ಸೋಲನ್ನಲ್ಲ. ಸೋಲು ತಾನಾಗಿ ಬಂದರೆ ಬರಲಿ. ಮೊದಮೊದಲು ಸೀತೆಯನ್ನು ಸೌಂದರ್ಯಕ್ಕೆ ಮೋಹಿಸಿದೆ. ಸ್ನಾನ, ಭೋಜನಗಳನ್ನು ತೊರೆದು, ಅದನ್ನವಳು ಖಂಡಿಸಿದಳು. ಈಗ ಛಲಮಾತ್ರ ನನ್ನಲ್ಲಿ ಉಳಿದಿದೆ. ಅವಳನ್ನು ಕಂಡರೆ ಕನಿಕರಿಸಿ, ನನ್ನ ನಿಶ್ಚಯ ಕದಲೀತೋ ಎಂಬ ಹೆದರಿಕೆ, ಈಗ ನನಗೆ ರಾಮನನ್ನು ಗೆಲ್ಲಬೇಕೆಂಬುದೇ ನನ್ನ ಪ್ರತಿಜ್ಞೆ."

ಇಂಥ ಪ್ರತಿಜ್ಞಾರೂಢನಾದ ರಾವಣನನ್ನು ಮುಂದೆ ಅಶೋಕವನದ ಸೀತೆಯ ಎದುರಿಗೆ ಕಾಣಬೇಕು. ತನ್ನ ಕಾರ್ಯಸಾಧನೆಗಾಗಿ, ಸುಳ್ಳು ನುಡಿದರು ಅವನ ಹೃದಯದ ಔನ್ನತ್ಯ ಎದ್ದು ಕಾಣುವುದು. ಮುಂದೆ ಯುದ್ಧಪೂರ್ವದ ರಾಜಸಭೆ, ಯುದ್ಧಸನ್ನಾಹಗಳಲ್ಲೆಲ್ಲ ಅವನೊಬ್ಬ ಶ್ರೇಷ್ಠ ರಾಜನಂತೆ, ಯೋಧನಂತೆ ವರ್ತಿಸುವನು. ಅವನ ರಾಜಠೀವಿಯೇ ಠೀವಿ. ಯಾರ ಸಲಹೆಯನ್ನೂ ಮನ್ನಿಸದೆ ರಾಮ ಸೈನ್ಯದೊಡನೆ ಯುದ್ಧ ಹೂಡಿದ. ಮಹಾ ಮಹಾ ಶೂರರೆಲ್ಲ ಮಡಿದರು. ಕುಂಭಕರ್ಣ, ಇಂದ್ರಜಿತುಗಳೆಲ್ಲ ರಣಭೂಮಿಯಲ್ಲಿ ದೇಹವಿಟ್ಟರು. ಆಗ ರಾವಣ ತನ್ನ ಮೂಲಬಲದೊಡನೆ ರಣರಂಗಕ್ಕೆ ತೆರಳಿದ. ಬ್ರಹ್ಮನನ್ನು ಮೆಚ್ಚಿಸಿ, ಪಡೆದ ವರದಿಂದ ತನ್ನೆಲ್ಲ ಸೈನಿಕರ ಶರೀರದಲ್ಲೂ ತಾನು ಪ್ರವೇಶಿಸಿ, ಒಂದು ರೂಪ ಸಹಸ್ರರೂಪಾಗಿ ಸಹಸ್ರಮಡಿ ಶಕ್ತಿಯಾಗಿ ತನ್ನ ರಾವಣತ್ವದ ಬಲ ಪ್ರಯೋಗಿಸಿ ಹೋರಾಡಿದ. ಅನೇಕ ವೈರಿಗಳನ್ನು ಸಂಹರಿಸಿದ. ಲೋಕವೇ ಮೆಚ್ಚುವಂತೆ ಯುದ್ಧವಾಡಿದ. ಸಾಯಂಕಾಲ ಅರಮನೆಗೆ ತೆರಳಿದ. ಅವನ ಮನಸ್ಸಿಗೆ ಸಮಾಧಾನವಿಲ್ಲ. ಇರುಳು ತಪಶ್ಚರ್ಯೆಗೆ ತೊಡಗಿದ. ಧ್ಯಾನಿ ರಾವಣ, ಲಂಕಾಲಕ್ಷ್ಮಿಗೆ ಮರುದಿನ ತಾನೊಬ್ಬನೇ ವೈರಿಗಳೊಡನೆ ಹೋರಾಡುವೆ, ಇನ್ನು ಲಂಕೆಯ ಒಬ್ಬ ಪ್ರಜೆಯೂ ಸಾಯದಂತೆ ನೋಡಿಕೊಳ್ಳುವೆ ಎಂಬ ವಚನವನ್ನು ಕೊಡುತ್ತಾನೆ. ಶಿವಾಣಿಯ ಹತ್ತಿರ ರಾಮನನ್ನು

ಸೋಲಿಸುವ ಸಾಮರ್ಥ್ಯವನ್ನು ಯಾಚಿಸುತ್ತಾನೆ. 'ಆಗಲಿ'—ಎನ್ನುವಳು ದೇವಿ. ಮರಳಿ 'ಸೀತೆ ವಶವಾಗಲಿ'—ಎಂದೂ ಬೇಡುವನು. ಅದಕ್ಕೆ ದೇವಿ 'ಆಗಲಿ'—ಎಂದಳು. ಈಗ ರಾವಣನಿಗೆ ತಡೆಯಲಾಗಲಿಲ್ಲ. ಶಿವಾಣಿಯ ಹರಕೆಯಲ್ಲೂ ಅವನಿಗೆ ಸಂಶಯ ಉಂಟಾಯಿತು. ತಟ್ಟನೆ ಕೇಳಿದ:

"ನೀಂ ತಾಯ್ ದಿಟಂ!
ನೀಂ ಕೃಪಾಬ್ಧಿಯೆ ದಿಟಂ! ರಾಮು ಜಯಕಿಂ ವಿಗಿಲ್
ಸೀತೆ ಸೋಲ್ವುದೆ ಸೋಜಿಗಂ!"
"ಸೋಜಿಗಮದೇಕೆ,
ಒಲಿದ ಕಂದಗೆ ತಾಯಿ ಸೋಲ್ವುದೇನಚ್ಚರಿಯೆ,
ಸಹಜಂ!"
"ಅದೇನ್ ಮತ್ತೆ ವಕ್ರೋಕ್ತಿ!"
"ವಕ್ರಮೇನ್!
ನಿನ್ನೆರ್ದೆಯ ಗೂಢವೃತ್ತಿಗೆ ನನ್ನದುಕ್ತಿಯಯ್!"
"ಸೀತೆ ಸೋಲ್ವಳೆ? ರಾಮನಂ ಗೆಲ್ವೆನಿದು ದಿಟಮೆ?"
"ಸೀತೆಯಾಲಿಂಗಿಪಳ್, ಚುಂಬಿಸೆರ್ದೆಗೊತ್ತುವಳ್;
ರಣದಿ ರಾಮನ ಸೋಲಿಪಯ್, ಪುನರ್ ಜನ್ಮದೊಳ್!..."

ವಾಲ್ಮೀಕಿಯ ರಾಮಾಯಣವು ರಾಮಪಟ್ಟಾಭಿಷೇಕದಲ್ಲಿ ಮುಗಿಯುವುದು. ಈ ರಾಮಾಯಣ ದರ್ಶನವೂ ಅಷ್ಟಕ್ಕೇನೇ ಮುಗಿಯುವುದು. ಆದರೂ ಪುಟ್ಟಪ್ಪನವರ ಪ್ರತಿಭೆಯು ಮುಂದಿನ ಕಥೆಯನ್ನು ಇಲ್ಲಿ ಸೂಕ್ಷ್ಮವಾಗಿ ಪ್ರತಿಫಲಿಸುತ್ತದೆ. ಅದರಲ್ಲೂ ಕವಿಯ ಕಲ್ಪನೆ ಎಷ್ಟು ಉದಾತ್ತತೆಗೆ ಮುಟ್ಟಿದೆ ಇಲ್ಲಿ ನೋಡಿ! ಸೀತೆಯನ್ನು ಮೋಹಿಸಿ ತಂದ ರಾವಣ ಮುಂದಿನ ಭವದಲ್ಲಿ ಅವಳಿಗೆ ಮಗನಾಗಿ ಹುಟ್ಟುವುದು! ಆಗ ರಾಮನನ್ನು ಸೋಲಿಸುವುದು! ಇವೆಲ್ಲ ಎಂಥ ಅಮೂಲ್ಯ ಕಲ್ಪನೆಗಳು! ಈ ಎಲ್ಲ ಭಾವಗಳು ರಾವಣನ ಹೃದಯದ 'ಗೂಢವೃತ್ತಿ'ಗಳೆಂದು ಶಿವಾಣಿಯೇ ಹೇಳುವಲ್ಲಿ ಔಚಿತ್ಯವಿದೆ! ರಾವಣಪಾತ್ರ ಚಿತ್ರಣದಲ್ಲಿ ಈ ಉಕ್ತಿಗೆ ಇರುವ ಅರ್ಥವೈಶಾಲ್ಯವನ್ನು ಗಮನಿಸಿದಲ್ಲಿ ಮಹಾಕವಿಯ ಶಕ್ತಿ, ಸಾಮರ್ಥ್ಯಗಳ ಅರಿವು ನಮಗೆ ಆಗದೆ ಹೋಗುವುದಿಲ್ಲ.

ಇನ್ನು ರಾಮ ಸೋಲಬಹುದು, ಸೀತೆ ಸೋಲಲಾರಳು—ಎನ್ನುವ ರಾವಣನ ಅಭಿಪ್ರಾಯದಲ್ಲಿಯೂ ಮಿಗಿಲಾದ ಅರ್ಥವಿದೆ. ಸೀತೆಯ ಹದಿಬದೆತನವನ್ನು ರಾವಣನು ಅರಿತ ಅರ್ಥವಿದೆ; ಇಂಥ ರಾವಣನು ಸೀತೆಯ ಸೇವೆಗೆ ಮಂಡೋದರಿಯನ್ನು ನಿಲ್ಲಿಸಿ, ರಾಮನನ್ನು ಸೆರೆಹಿಡಿದು ತರಲಿಕ್ಕೆಂದು, ಪವಿತ್ರವಾದ ವಿಜಯಯಾತ್ರೆಗೆ

ಹೊರಡುತ್ತಾನೆ. ಮರುದಿನ ತಾನೊಬ್ಬನೇ ರಾಮನೊಡನೆ ಸಾಯಂಕಾಲದ ವರೆಗೆ ಆದರ್ಶವೀರನಾಗಿ ಹೋರಾಡುತ್ತಾನೆ. ರಾಮನನ್ನು ಹಿಡಿದು, ತರುವುದೇ ಅವನ ಪರಮ ಉದ್ದೇಶ. ವಿವಿಧಾಸ್ತ್ರಗಳನ್ನು ಪ್ರಯೋಗಿಸಿ, ಪ್ರಯೋಗಿಸಿ, ಕೊನೆಗೆ ಮಹಾಶೂಲವನ್ನು ಕೈಗೆತ್ತಿಕೊಂಡು ಪ್ರಾರ್ಥಿಸುತ್ತಾನೆ: 'ನೀನು ವೈರಿಯನ್ನು ಸಂಹರಿಸುವ ಶಕ್ತಿಯುಳ್ಳವ. ಆದರೂ ಈಗ ರಾಮನನ್ನು ಸೆರೆ ಹಿಡಿಯಲಿಕ್ಕೆ ನೆರವಾಗು.' ಮಹಾ ಶೂಲ ಹೋಗುತ್ತಿದೆ. ರಾಮ ವಿಚಾರದಲ್ಲಿದ್ದಾನೆ. ಮಹಾ ಪತಿವ್ರತೆಯಾದ ಮಂಡೋದರಿಯ ಪತಿಯನ್ನು ಸಂಹರಿಸುವುದು ಹೇಗೆ, ಮೂಲೋಕಗಳೂ ಮಹಾ ಶೂಲದ ಉಗ್ರತೆಗೆ ನಡಗುತ್ತಿವೆ. ಕೊನೆಗೆ ರಾಮನು ಅಜ, ಹರಿ, ಪಿನಾಕಿಗಳ ಸತ್ವವನ್ನು ಬ್ರಹ್ಮಾಸ್ತ್ರಕ್ಕೆ ಸಂಜನಿಸಿ, ರಾಮತ್ವವನ್ನು ಹರಿ ಬಿಟ್ಟು, ಅದನ್ನು ರಾವಣನ ಮೇಲೆ ಪ್ರಯೋಗಿಸುತ್ತಾನೆ. ಮೂಲೋಕ ನಡುಗಿತು. ರಾವಣನ ಆಯುಧ—ಮಹಾಶೂಲ—ಎರಡು ತುಂಡಾಯಿತು. ಅದರಲ್ಲೊಂದು ತುಂಡು 'ಲಕ್ಷ್ಮಣಾಗ್ರಜನ ಮಹಾವಕ್ಷ ವೈಕುಂಠಮಂ!' ಸೇರಿತು. ರಾವಣಾತ್ಮಕೆ ಬ್ರಹ್ಮಾಂಡದಲ್ಲಿ ಅದೇ ಪವಿತ್ರತಮಸ್ಥಾನ! ಇರಲಿ. ಆ ಶೂಲದ ಪೆಟ್ಟಿಗೆ ರಾಮನು ಮೈಮರೆತು ಒರಗಿದ. ಆ ರಾಮಮೂರ್ತಿಯನ್ನೇ ನೋಡುತ್ತ, ಅವನನ್ನು ಸೆರೆ ಹಿಡಿಯು ಲೆಂದು ರಾವಣನು ರಥದಿಂದ ಇಳಿದು ಓಡುತ್ತಿದ್ದಾನೆ. ಬ್ರಹ್ಮಾಸ್ತ್ರ ಬಂದು ಎದೆಯಲ್ಲಿ ನಾಟಿತು, ಅದು ಪಾರಾಗಿ ಆಚೆಗೆ ಹೋಗದಂತೆ ರಾವಣ ಒಂದು ಕೈಯಿಂದ ಗಟ್ಟಿ ಯಾಗಿ ಹಿಡಿದಿದ್ದಾನೆ. ರಾವಣನ ಹೃದಯದಲ್ಲಿ ರಾಮಚಂದ್ರನ ಮೂರ್ತಿ ಮೆರೆಯಿತು. ಕೂಡಲೆ 'ಸಿಕ್ಕಿದನಲಾ ಶತ್ರು!' ಎಂದು ತಿರುಗಿ, ರಾವಣ ರಥವನ್ನು ಏರಿದನು. ಸಾರಥಿಗೆ:

"ಸೆರೆ ಸಿಲ್ಕಿದನೊ ವೈರಿ! ತಿರುಗಿಸು ವರೂಥಮಂ ಪುರಕೆ!"

ಎಂದು ಆಜ್ಞಾಪಿಸಿದನು. ಬ್ರಹ್ಮಾಸ್ತ್ರಸಂಗದಿಂದ ಪುಣ್ಯಹೃದಯಿಯಾದ ರಾವಣನು, ರಕ್ತರಂಜಿತನಾಗಿ ಅರಮನೆಗೆ ಬಂದ. ಎಲ್ಲೆಲ್ಲೂ ಕಳವಳ, ವೈದ್ಯರು ಬಾಣವನ್ನು ತೆಗೆಯಲಾರದೆ ಹೋದರು. ದೊರೆಯನ್ನು ಮಂಚದಲ್ಲಿ ಮಲಗಿಸಿದರು. ಮಂಡೋ ದರಿಯು ಪತಿಯ ಅವಸ್ಥೆಯನ್ನು ಕಂಡು, ಗೋಳಿಟ್ಟಳು. 'ಪ್ರತಿಜ್ಞೆ ನೆರವೇರಿತೆ? ಸೀತಾನಾಥನನ್ನು ಸೆರೆಹಿಡಿದು ತಂದೆಯಾ?'—ಎಂದು ಕೇಳಿ, ರೋದಿಸತೊಡಗಿದಳು. ಅದಕ್ಕೆ ರಾವಣನು ಪ್ರತಿಯಾಗಿ ಹೇಳುವನು:

"ಗೆಲ್ದೆನಾ ರಾಮನಂ! ಸೆರೆವಿಡಿದೆ ತಂದಿಹೆನ್!. . ."
"ನೋಡಿಲ್ಲಿ! ಭದ್ರಮುಷ್ಟಿಯೊಳೆಂತು ಪಿಡಿದಿಹೆನ್
ಭುವನೈಕವೀರನಂ! ಕೊಳ್ಳಿದಂ ಕಪ್ಪಮಂ

ಕಾಣ್ಕೆಗೊಡು ಮಾತೆ ಸೀತೆಗೆ ' ನಿನಗೆ ಸೋಲ್ತವಂ,
ನಿನಗೆ ತಾನೆಯೆ ಸೋಲ್ತು, ನೀಂ ಸೋಲ್ತಾತನಂ
ಗೆಲ್ದೊಪ್ಪಿಸಿಹನದಕೆ ತಪ್ಪಂ ಕ್ಷಮಿಪು 'ದೆಂದು !''

ನಿಜ! ರಾವಣನಿಗೆ ಭ್ರಾಂತಿಯಲ್ಲ. ಅವನು ರಾಮನನ್ನು ಪ್ರಾಣರೂಪದಲ್ಲಿ ಭದ್ರವಾಗಿಯೆ ಹಿಡಿದಿದ್ದನು. ಅಲ್ಲಿ ರಣಭೂಮಿಯಲ್ಲಿ ವಾನರ ಸೈನ್ಯವೆಲ್ಲ ರಾಮನ ಕಳೇಬರದ ಸುತ್ತ ನೆರೆದು, ಗೋಳಿಡುತ್ತಲಿದೆ. ಇಲ್ಲಿ ಮಂಡೋದರಿಯು ಪತಿಯ ಆಜ್ಞೆಯನ್ನು ಮೀರದೆ, ಬ್ರಹ್ಮಾಸ್ತ್ರವನ್ನು ರಾವಣನ ಹೃದಯದಿಂದ ಕಿತ್ತು ತೆಗೆಯು ವಳು. ರಾಮತ್ವದಿಂದ ಪುನೀತವಾದ ಆ ಅಸ್ತ್ರವನ್ನು ಮುಟ್ಟಲು ಮಹಾ ಪತಿ ವ್ರತೆಯರಾದ ಮಂಡೋದರಿ, ಸೀತೆಯರೇ ಸಮರ್ಥರು. ಇದನ್ನು ರಾವಣನೇ ಹೇಳುತ್ತಾನೆ. ಎಂಥ ಪವಿತ್ರಭಾವ ಆ ಸಮಯದಲ್ಲಿ ರಾವಣನಲ್ಲಿ! ಇಲ್ಲಿ ರಾವಣನ ಆತ್ಮಪಕ್ಷಿ ಆ ದೇಹಪಂಜರದಿಂದ ಹಾರಿಹೋಗುವುದು. ಅಲ್ಲಿ ರಾಮ ತಿರುಗಿ ಚೇತರಿಸಿ ಕೊಳ್ಳುವನು. ಅಲೌಕಿಕ ಕಲ್ಪನೆ ಕಾವ್ಯವನ್ನು ಮುನ್ನಡೆಯಿಸಿದೆ! ಆದನ್ನು ನೆನೆದಷ್ಟೂ ಹೃದಯವರಳುವುದು. ಧ್ಯಾನಿಸಿದಷ್ಟೂ ಆತ್ಮಾನಂದ ಉಂಟಾಗುವುದು. ಕವಿ ಪುಟ್ಟಪ್ಪ ನವರ ದಿವ್ಯ ಪ್ರತಿಭಾಜ್ಯೋತಿಯೊಂದನ್ನು ಇಲ್ಲಿ ಅನುಭವಿಸುವೆವು.

ರಾಮನ ಬತ್ತಳಿಕೆಯಲ್ಲಿ ಜಟಾಯುವಿನ ಅಣ್ಣ ಸಂಪಾತಿಯು ಬಾಣರೂಪದಿಂದ ನೆಲೆಸುವುದು, ಇಂದೂ ರಾಮನು ಮಹಾಶೂಲವನ್ನು ತುಂಡರಿಸಿ—ಅಂದು ಸ್ವಯಂವರದಲ್ಲಿ ಶಿವನ ಬಿಲ್ಲನ್ನು ಮುರಿದಂತೆ—ಮತ್ತೆ ಸೀತೆಯನ್ನು ಸಂಪಾದಿಸು ವುದು—ಇವೆಲ್ಲ ಸಂಗತಿಗಳು ರಾವಣನ ಪೂರ್ವಕರ್ಮಗಳ ಫಲವನ್ನೂ ಕವಿಯ ಅದ್ಭುತ ಧೀಶಕ್ತಿಯನ್ನೂ ಪ್ರದರ್ಶಿಸುವ ಸನ್ನಿವೇಶಗಳಾಗಿವೆ. ರಾವಣನ ಕೊನೆಯ ಭಾವಪರಿಪಾಕವನ್ನು ಸತಿ ಮಂಡೋದರಿಯನ್ನು ಉಳಿದು ಇನ್ನಾರೂ ಅರಿಯದೆ ಹೋದರಲ್ಲ—ಎಂಬ ಕರುಣೆಯು ನಮ್ಮಲ್ಲಿ ಜನಿಸಿ, ರಾವಣನ ವಿಷಯಕ್ಕೇ ಉತ್ಕಟ ವಾದ ಸಹಾನುಭೂತಿಯನ್ನುಂಟುಮಾಡುತ್ತದೆ. ವಿಶ್ವದಲ್ಲಿ ಕರುಣವೊಂದೆ ಎಂದೆಂದು ಮೆರೆಯುವ ಸತ್ವತತ್ತ್ವವೆಂದು ಸಾರುವಂತಾಗಿದೆ; ಜಗದ ಜೀವಿಗಳೆಲ್ಲ ಇದು ನಿಜವೆನ್ನು ವಂತಾಗಿದೆ. ಈ ಸಮ್ಮತಿಯೇ ಮಹಾಕಾವ್ಯದ ಸಿದ್ಧಿಯಲ್ಲವೆ?

೭

ಶ್ರೀ ಪುಟ್ಟಪ್ಪನವರ ಈ 'ರಾಮಾಯಣ ದರ್ಶನ'ವೊಂದು ಮೂಡಬಿದರೆಯ ಸಾವಿರ ಕಂಬದ ಬಸದಿಯಿದ್ದಂತೆ. ಇದರ ಭವ್ಯತೆಯು ನಮ್ಮನ್ನು ದಂಗುಗೊಳಿಸುತ್ತದೆ. ಅಂಗಾಂಗಗಳ ಸೌಂದರ್ಯದಲ್ಲಿ ರಾಮಾಯಣ ದರ್ಶನವು ಬೇಲೂರಿನ ಚೆನ್ನಕೇಶವ ದೇವಾಲಯವನ್ನು ನೆನಪಿಗೆ ತರುತ್ತದೆ. ಎಲ್ಲೆಲ್ಲೂ ಚೆಲುವು ಚೆಲ್ಲುವರಿದಿದೆ. ಅದು

ಪರಿಪೂರ್ಣವೂ ಆಗಿದೆ. ಯಾವ ಮೂಲೆಯೊಳಗಿನ ಯಾವ ಶಿಲಾಮೂರ್ತಿಯನ್ನು ನಿರೀಕ್ಷಿಸಿದರೂ ಕಲಾಂಶದಿಂದ ಪೂರ್ಣತ್ವವನ್ನು ಪಡೆದಿದೆ. ಅದರಂತೆಯೆ ಇಲ್ಲಿಯ ಭರತಮಾತೆ, ಮಾರೀಚನ ಅಂತರಂಗ, ವಾಲಿಯ ಕೊನೆ, ಧಾನ್ಯಮಾಲಿನಿಯ ಪಾತಿವ್ರತ್ಯ, ಅನಲೆಯ ಭಕ್ತಿ ಸತ್ಯನಿಷ್ಠೆಗಳು, ಸ್ವಪ್ನದೇವಿ—ತಪೋಲಕ್ಷ್ಮಿಗಳ ಸಂವಾದ, ಮಹಾಪಾರ್ಶ್ವನ ದೈವಿಕತೆ, ಪರದಾರ ಸೋದರ ಕುಂಭಕರ್ಣ, ತ್ರಿಜಟೆಯ ತ್ಯಾಗ, ರಾಮಸೀತೆಯರ ಪುನರ್‌ಮಿಲನಗಳಲ್ಲೆಲ್ಲ ಒಂದು ಅನುಪಮ ಸೌಂದರ್ಯ ಸೃಷ್ಟಿಯಾಗಿದ್ದು, ಅದರಿಂದ ಅವು ಪೂರ್ಣವಾಗಿವೆ. ಇಡೀ ಕಾವ್ಯವಸ್ತುವಿನ ಸೌಂದರ್ಯಾತಿಶಯವನ್ನೂ ಅವು ಹೆಚ್ಚಿಸುತ್ತವೆ, ವಿಶ್ವಸತ್ಯದ ವಿವಿಧ ಮುಖಗಳನ್ನು ಬಿತ್ತರಿಸುತ್ತವೆ.

ಇನ್ನು ತ್ರಿಕೂಟಾಚಲದ ಮೇಘನಾದನ ಯಾಗಮಂಟಪದ ಸನ್ನಿವೇಶವೊಂದು ಅಪೂರ್ವವಾದುದು. ಭಾರತೀಯ ಸಾಹಿತ್ಯದಲ್ಲಿಯೇ ವಿಶಿಷ್ಟವಾದುದು. ಅಲ್ಲಿಯ ಯಾಗವು ಯೋಗಜೀವನದ—ಅಂತರಂಗಜೀವನದ—ಬೃಹದ್‌ಚಿತ್ರವಾಗಿದೆ. ಮನಸ್ಸು, ಪ್ರಾಣ ಮೊದಲಾದವುಗಳ ವಿವಿಧ ತರಗಳು, ಸಾಧಕನು ಆಯಾ ತರಗತಿಗೆ ಹೋದಾಗ ಅವನನ್ನು ದಾರಿತಪ್ಪಿಸುವ ಅಸುರಭಾವನೆಗಳು, ಸಿದ್ಧಿಯ ಮಾರ್ಗ ಇವೆಲ್ಲ ಬಹು ಮನೋಹರವಾಗಿ ಚಿತ್ರಿಸಲ್ಪಟ್ಟಿವೆ. ಇದರಿಂದ ಕವಿಯ ಯೋಗಜೀವನಾನುಭವದ ಕಲ್ಪನೆಯು ಸಮಗಾಗುತ್ತದೆ. ಅಂಥ ಧ್ಯಾನಶೀಲರಾದುದರಿಂದಲೇ ಹತ್ತು ವರ್ಷದ ಅಖಂಡ ಸಾಧನೆಯಿಂದ ಇಂಥ ಮಹಾಕಾವ್ಯ ಪುಟ್ಟಪ್ಪನವರಿಂದ ನಿರ್ಮಾಣವಾದುದು, ಇಲ್ಲದಿದ್ದರೆ ಅನ್ಯಶಕ್ತಿಯಿಂದ ಇಂಥ ಅವಿರತ ತಪಸ್ಸು ಸಾಧ್ಯವಿಲ್ಲ. ಇಂಥ ತಪೋಮಯ ಜೀವನದಿಂದ ಈ ಕವಿಶ್ರೇಷ್ಠರು ಕನ್ನಡ ಸಾಹಿತ್ಯಕ್ಕೊಂದು ಅಪೂರ್ವ ಕಾಂತಿಯನ್ನು ನೀಡಿದ್ದಾರೆ. ಕೀರ್ತಿಯನ್ನು ತಂದಿದ್ದಾರೆ. ವಿಶ್ವಸಾಹಿತ್ಯದಲ್ಲಿ ಕನ್ನಡಕ್ಕೊಂದು ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆ.

ಈ ಕಾವ್ಯದೇವಿಯ ಕಿರೀಟದಲ್ಲಿ ಅನೇಕ ರತ್ನಗಳ ಕಾಂತಿಯು ನೆಲಸಿ, ವಿಶ್ವಸತ್ಯವನ್ನು ಬೆಳಗುತ್ತಿದೆ. ಬಾಲಋಷಿ ಭರತನು ಮಾತೃವಕ್ಷವನ್ನರಸುವ ಮಗುವಿನಂತೆ, ರಾಮನನ್ನು ಶೋಧಿಸುತ್ತ ಕಾಡಿಗೆ ಹೋಗಿ, ಅಯೋಧ್ಯೆಗೆ ಮರಳಿ ಕರೆದುತರಲಿಕ್ಕೆ ಯತ್ನಿಸುತ್ತಾನೆ. ಆಗ ವಸಿಷ್ಠನು, ಅನಂತವನ್ನು ಸಾಂತಕ್ಕೆಳೆವ ಸಾಹಸ ಬೇಡವೆಂದು ಎಚ್ಚರಿಸುವನು, ಜಾಬಾಲಿಯ ಸತ್ಯದೃಷ್ಟಿಯನ್ನು ಬಿತ್ತರಿಸುವನು. ಆ ಯುಗದ ವಾಣಿಯನ್ನೂ—ಹೃದಯಾಂತರಾಳವನ್ನೂ—ಅರುಹುವನು. ಹಾಗೆಯೇ ಸಾಗರೋಲ್ಲಂಘನಕ್ಕೆ ಸಿದ್ಧನಾದ ವಾಯುಸುತನು ತನ್ನ ಸಾಮರ್ಥ್ಯವನ್ನು ನುಡಿಯುವನು: ಬಾಲದ ಚವರಿಯಿಂದ ಲೀಲಾಜಾಲವಾಗಿ, ಆಕಾಶದ ನಕ್ಷತ್ರಗಳನ್ನು ಗುಡಿಸಿ, ಪಾತಾಳಕ್ಕೆ ಉದುರಿಸುವ ಶಕ್ತಿ ನನಗಿದೆ. ಇದನ್ನು ಪ್ರೇಕ್ಷಕರು ಯೋಗವಿಜ್ಞಾನ

ದಿಂದಲೇ ಕಾಣಬಲ್ಲರು. ಈ ಚರ್ಮಚಕ್ಷುಗಳು ಅದನ್ನು ಕಾಣಲು ಸಾಧ್ಯವೆ? ಬ್ರಹ್ಮಚರ್ಯದ ಬೃಹದ್‌ಶಕ್ತಿಯದು. ಇಂಥ ಅಪಾರ ಶಕ್ತಿನಿಧಿಯಾದ ಹನುಮಂತನು ಅಶೋಕವನದಲ್ಲಿ 'ಅಶ್ರುಗಂಗೋತ್ರಿ' ಸನ್ನಿಹಿತವಾಗಲು ಕಂಡುದನ್ನು ಕವಿಯು, ಮಸಿಹಿಡಿದ ಕೈ ಸುಂದರ ಚಿತ್ರಪಟವನ್ನು ಹಿಸುಕಿ ಬಿಸುಟಂತೆ, ಎಂದು ಒಂದೇ ಮಾತಿನಲ್ಲಿ ಹೇಳುವರು. ಇದು ಸೀತೆಯ ಚಿತ್ರ. ಕವಿವಾಣಿಯನ್ನು ಆಲಿಸಿ :

'ಚಲ್ವೆಸೆವ ಚಿತ್ರಪಟಮಂ ಮಸಿಯ ಕೈ ಹಿಸುಗಿ
ಬಿಸುಟಂತೆ ತೋರ್ದಳೀ ಮಹಿಳೆ |''

ಇಲ್ಲಿ ಚೆಲುವಾದ ಚಿತ್ರಪಟಕ್ಕೆ ಪ್ರಾಮುಖ್ಯತೆಯಿದೆ. ಮಸಿಯ ಕೈ ಅದನ್ನು ಹಿಸುಕಿಬಿಟ್ಟಿದೆ. 'ಹಿಸುಗು'ಪದದಲ್ಲಿ ಕಾಣುವವನ ಕ್ರೋಧವಿದೆ, ರಾವಣನ ದುಡುಕೂ ಇದೆ. ಇನ್ನೂ ಏನೇನೋ ಭಾವವಿದೆ. ಅದನ್ನೆಲ್ಲ ಭಾವಿಸಿ ಅರಿಯುವುದು ಸಾಧ್ಯ. ವಿಮರ್ಶೆಯಲ್ಲಿ ಲೆಕ್ಕಣಿಕೆ ಒಡಮೂಡಿಸುವುದು ಕಷ್ಟತರ. ಇಂಥ ಅನೇಕ ಉಕ್ತಿಗಳು ಕಾವ್ಯದುದ್ದಕ್ಕೂ ಪಸರಿಸಿವೆ. ಅವುಗಳ ಹಿಂದೆ ವಿಶಾಲವಾದ ಕವಿಯ ಅನುಭವ ನಿಂತು, ಅವುಗಳನ್ನು ನುಡಿಸಿದೆ. ಅವುಗಳಲ್ಲೆಲ್ಲ ಕವಿಯ ದರ್ಶನ ಒಡಮೂಡಿದೆ.

ಭಾರತೀಯ ವಾಙ್ಮಯ ಪ್ರಪಂಚದಲ್ಲಿ 'ದರ್ಶನ' ಎಂಬ ಪದಕ್ಕೆ ಬಹು ವಿಶಾಲವಾದ ಅರ್ಥಸಂಪತ್ತಿಯಿದೆ. ಅದು ವಿಶ್ವಸತ್ಯದ ಅನುಭವ, ಅನುಭಾವಗಳ ರೂಪದಲ್ಲಿ ಮಹಾವ್ಯಕ್ತಿಗಳಲ್ಲಿ ಒಡಮೂಡಬಹುದಾಗಿದೆ. ಆ ಅನುಭಾವ ನುಡಿಗಳೇ, ಅನುಭೂತಿಯ ಕಿಡಿಗಳೇ ವೇದಾಗಮಗಳಲ್ಲಿ, ಉಪನಿಷತ್ತು, ಗೀತೆಗಳಲ್ಲಿ, ಆಳ್ವಾರುಗಳ ಭಕ್ತಿಗೀತೆಗಳಲ್ಲಿ ಶರಣರ ವಚನಗಳಲ್ಲಿ, ಸಂತರ ವಾಣಿಯಲ್ಲಿ, ಸಿದ್ಧರ ನುಡಿಯಲ್ಲಿ, ಅಲ್ಲಲ್ಲಿ ಪ್ರಕಟಗೊಳ್ಳುವುದುಂಟು. ಅಂಥ ವಿಶ್ವದನುಭೂತಿಯ ಒಂದು ವಿರಾಟ್ ದರ್ಶನವನ್ನು ವ್ಯಕ್ತಪಡಿಸಲು ಈ ರಾಮಾಯಣ ದರ್ಶನವು ಪ್ರಯತ್ನಿಸಿದೆ. ಅನಂತವನ್ನು ಸಾಂತದಲ್ಲಿ ಸಾಧಿಸಿದೆ. ಇದೇ ಮಹಾಕಾವ್ಯದ ಪರಮ ಉದ್ದೇಶವಲ್ಲವೆ!

ವಿಂರ್ಜಿ ಅಣ್ಣಾರಾಯ

# ತೆಲುಗು ಸಾಹಿತ್ಯ ಚರಿತ್ರೆ

ದಕ್ಷಿಣ ಭಾರತದ ಪ್ರಧಾನ ಭಾಷೆಗಳಲ್ಲಿ ತೆಲುಗೂ ಒಂದು. ಇದು ದ್ರಾವಿಡ ಭಾಷಾವರ್ಗಕ್ಕೆ ಸೇರಿದುದು. ಅಖಂಡಭಾರತದಲ್ಲಿ ಸುಮಾರು ಎರಡೂವರೆ ಕೋಟಿ ಜನ ತೆಲುಗು ಭಾಷೆಯನ್ನಾಡುವರು. ಇದರಲ್ಲಿ ಮುಕ್ಕಾಲು ಪಾಲುಗಿಂತ ಹೆಚ್ಚು ಜನ ಆಂಧ್ರದೇಶದಲ್ಲಿಯೂ ಉಳಿದ ಭಾಗ ಮೈಸೂರು, ತಂಜಾವೂರು, ಪುದುಕ್ಕೋಟ ಗಳಲ್ಲಿಯೂ ವಾಸಿಸುತ್ತಾರೆ. ಆಂಧ್ರದೇಶವು ಇತ್ತೀಚಿನ ವರೆಗೆ ಮದ್ರಾಸ್ ಪ್ರಾಂತದ ಭಾಗವಾಗಿದ್ದು ಈಗ ಸ್ವತಂತ್ರ ಸಂಸ್ಥಾನವಾಗಿದೆ. ಆಂಧ್ರ ಅಥವಾ ತೆಲುಗು ದೇಶಕ್ಕೆ ವೇಂಗಿನಾಡು ಅಥವಾ ವೆಂಗಿಮಂಡಲ ಅಥವಾ ತ್ರಿಲಿಂಗವೆಂಬ ಬೇರೆ ಹೆಸರೂ ಉಂಟು. ಆಂಧ್ರರ ಚರಿತ್ರೆ ಬಹು ಪ್ರಾಚೀನವಾದುದು. ಅಶೋಕನ ಕಾಲ ದಿಂದ ಅವರ ಇತಿಹಾಸವನ್ನು ಗುರುತಿಸಬಹುದು. ಶಾತವಾಹನರು, ಪಲ್ಲವರು, ಚಾಳು ಕ್ಯರು, ರೆಡ್ಡಿಗಳು, ವಿಜಯನಗರದವರೇ ಮೊದಲಾದ ಅರಸುಗಳು ಅಲ್ಲಿ ರಾಜ್ಯಾಧಿ ಪತ್ಯವನ್ನು ನಡಸಿ ಅನೇಕರು ಸ್ವತಃ ಗ್ರಂಥಗಳನ್ನು ರಚಿಸಿ ನಾಡನುಡಿಯ ಬೆಳ ವಣಿಗೆಗೆ ಸಹಾಯಮಾಡಿದ್ದಾರೆ. ಬೌದ್ಧರು, ಜೈನರು, ವೈದಿಕರು—ಶೈವವೈಷ್ಣವರು ತಮ್ಮ ತಮ್ಮ ಪಂಥಗಳನ್ನು ಅಲ್ಲಲ್ಲಿ ಪ್ರಚಾರಮಾಡಿ ಅವುಗಳಿಗೆ ಸಹಾಯಕವಾಗಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಆದರೂ ತೆಲುಗು ಭಾಷಾಸಾಹಿತ್ಯಗಳ ಸ್ಪಷ್ಟವಾದ ರೂಪವನ್ನು ಹನ್ನೊಂದನೆಯ ಶತಮಾನಕ್ಕಿಂತ ಹಿಂದಕ್ಕೆ ತೆಗೆದುಕೊಂಡು ಹೋಗುವುದು ಕಷ್ಟವಾಗುತ್ತದೆ. ನನ್ನಯ್ಯನೇ ಅದರ ಪ್ರಥಮಕವಿ. ೧೦೨೦ರ ಶಾಸನವೇ ಮೊತ್ತಮೊದಲನೆಯ ಆಂಧ್ರ ಶಾಸನ. ಇದಕ್ಕೆ ಹಿಂದೆ ಶಾಸನಗಳಿಲ್ಲ ವೆಂದಲ್ಲ; ಅವು ಸಾಮಾನ್ಯವಾಗಿ ಸಂಸ್ಕೃತ ಅಥವಾ ಪ್ರಾಕೃತ ಭಾಷೆಯವು. ನನ್ನಯ್ಯನ ಹಿಂದೆ ಇದ್ದಿರಬಹುದಾದ ಸಾಹಿತ್ಯವೆಲ್ಲವೂ ಗ್ರಂಥಸ್ಥವಲ್ಲದ ಲಾಲಿ ಪಾಟ, ಮೆಲುಕೊಲುಪು, ಮಂಗಳಾರ್ತಿ, ಜಾವಳಿ, ಕೀರ್ತನ, ಉಡುಪು, ಕೂಲಿ, ಕಳ್ಳು, ಆಟ, ಕಥೆಗಳಿಗೆ ಸಂಬಂಧಪಟ್ಟ ಗೀತೆಗಳು. ಇವೆಲ್ಲ ಸಾಮಾನ್ಯವಾಗಿ ಶುದ್ಧವಾದ ದೇಶೀಮಾರ್ಗಕ್ಕೆ ಸೇರಿದುವು. ಬಹುಶಃ ಬಾಯಿಂದ ಬಾಯಿಗೆ ಬೆಳೆದುಬಂದಿರಬೇಕು.

ಈಚೆಗೆ 'ಕವಿಜನಾಶ್ರಯ'ವೆಂಬ ತೆಲುಗು ಛಂದೋಗ್ರಂಥದ ಒಂದು ಭಾಗವು (ಸಂಸ್ಕೃತ ಭಾಷೆಯಲ್ಲಿ ರಚಿಸಿರುವುದು) ಸಿಕ್ಕಿದೆ. ಇದರ ಕರ್ತೃ ಯಾರೆಂದು ತಿಳಿದಿಲ್ಲ. ಜನಾಶ್ರಯನೆಂಬ ಬಿರುದು ವಿಷ್ಣುಕುಂಡಿ ವಂಶದ ಮಾಧವವರ್ಮನೆಂಬ ದೊರೆಯದು.

ಈತನ ಕಾಲ ಆರನೆಯ ಶತಮಾನ. ಬುದ್ಧಘೋಷನು ಬೌದ್ಧ ಪಿಟಿಕಗಳ ವ್ಯಾಖ್ಯಾನದಲ್ಲಿ ಆಂಧ್ರ ಅರ್ಥಕಥೆಗಳಿಗೆ ಸೂಚನೆಯಿತ್ತಿದ್ದಾನೆ. ಗುಣಕವಿಜಯಾದಿತ್ಯಾನ ೯ ನೆಯ ಶತಮಾನದ ಶಾಸನವೊಂದರಲ್ಲಿ ಕೆಲವು ತೆಲುಗು ಪದ್ಯಗಳು ಸಿಕ್ಕುತ್ತವೆ. ಅಲ್ಲದೆ ಶ್ರೀ ಎಂ. ರಾಮಕೃಷ್ಣಕವಿ ಅವರ ವಿಶೇಷ ಪ್ರಯತ್ನದಿಂದ ನನ್ನೆಚೋಡಕೃತವಾದ 'ಕುಮಾರಸಂಭವ'ವೆಂಬ ಗ್ರಂಥವೊಂದು ಬೆಳಕಿಗೆ ಬಂದಿದೆ. ಈ ಗ್ರಂಥವು ಹತ್ತನೆಯ ಶತಮಾನದ್ದೆಂದು ಅವರ ವಾದ. ಮತ್ತು ಕೆಲವರು ಸೋದರೀಭಾಷೆಗಳಾದ ತಮಿಳು ಕನ್ನಡಗಳಲ್ಲಿ ಇರುವ ಹಾಗೆ ತೆಲುಗಿನಲ್ಲಿಯೂ ಒಂದು ಜೈನ ಸಾಹಿತ್ಯವೂ ಅದಕ್ಕೆ ಹಿಂದೆ ಬೌದ್ಧ ಸಾಹಿತ್ಯವೂ ಇದ್ದು ಆ ಮೇಲೆ ಬಂದ ವೈದಿಕರಿಂದ ಅವು ಸಂಪೂರ್ಣವಾಗಿ ನಾಶವಾಗಿರಬೇಕು ಎಂದು ವಾದಮಾಡುತ್ತಾರೆ. ಈ ಎಲ್ಲ ಕಾರಣಗಳಿಂದ ತೆಲುಗಿನಲ್ಲಿಯೂ ಕ್ರಿ.ಶ. ೬ ನೆಯ ಶತಮಾನದಿಂದ ಅವಿಚ್ಛಿನ್ನವಾಗಿ ೧೧ ನೇ ಶತಮಾನದ ವರೆಗೆ ಗ್ರಂಥರಚನೆಯಾಗಿ ಸಾಹಿತ್ಯ ಬೆಳೆದುಬಂದಿರಬೇಕು ಎಂಬ ಪೂರ್ವಪಕ್ಷವಿದೆ. ಆದರೆ ಅದಕ್ಕೆ ಸಾಕಷ್ಟು ಆಧಾರಗಳಿಲ್ಲ. 'ಕವಿಜನಾಶ್ರಯ'ವು ಅಷ್ಟು ಹಿಂದಿನದೆಂದು ಹೇಳುವುದಕ್ಕಾಗುವುದಿಲ್ಲ. ಹತ್ತನೆಯ ಶತಮಾನಕ್ಕಿಂತ ಹಿಂದಿನ ತೆಲುಗು ಭಾಷೆಯ ಶುದ್ಧ ಸಾಹಿತ್ಯರೂಪ ಎಲ್ಲಿಯೂ ಸಿಕ್ಕುವದಿಲ್ಲ. ಈಚಿನ ಸಂಶೋಧನೆಗಳಿಂದ ಕುಮಾರಸಂಭವವೂ ನನ್ನಯ್ಯನಿಗಿಂತ ಈಚಿನದೆಂದು ತೀರ್ಮಾನವಾಗಿದೆ. ಜೈನ ಬೌದ್ಧ ಸಾಹಿತ್ಯಗಳ ಅಸ್ತಿತ್ವಕ್ಕೆ ಆಧಾರವೇ ಇಲ್ಲ. ವಿಶೇಷಮತೀಯ ತಿಕ್ಕಾಟವಿದ್ದ ಕನ್ನಡ ತಮಿಳು ಸಾಹಿತ್ಯಗಳಲ್ಲಿ ಅವುಗಳು ಉಳಿದುಕೊಂಡಿರುವಾಗ ಶಾಂತವಾತಾವರಣದಿಂದ ಕೂಡಿದ ತೆಲುಗಿನಲ್ಲಿ ಅದು ಮಾಯವಾಗುವುದಕ್ಕೆ ಕಾರಣವಿಲ್ಲ. ಒಂದು ವೇಳೆ ಗ್ರಂಥಗಳು ನಾಶವಾಗಿದ್ದರೂ ಕವಿಗಳ ಮತ್ತು ಗ್ರಂಥಗಳ ಹೆಸರುಗಳೂ ಮನುಷ್ಯರ ಸ್ಮೃತಿಪಥದಿಂದ ಅಳಿಸಿಹೋಗುವುದು ಅಸಂಭವ. ಅಲ್ಲದೆ ೧೧ ನೆಯ ಶತಮಾನದ ಹಿಂದಿನ ಆಂಧ್ರಕವಿಗಳು ಕೆಲವರು ಕನ್ನಡದೇಶಕ್ಕೆ ಹೋಗಿ ಅಲ್ಲಿ ಗ್ರಂಥರಚನೆ ಮಾಡಿದ್ದಾರೆ. ತೆಲುಗಿನಲ್ಲಿ ಗ್ರಂಥರಚನೆಯ ರೂಢಿ ಇದ್ದರೆ ಅವರು ಅನ್ಯಭಾಷೆಯ ಕಡೆಗೆ ತಿರುಗುತ್ತಿರಲಿಲ್ಲವೆಂದು ಹೇಳಬಹುದು. ನನ್ನಯ್ಯನನ್ನು ತೆಲುಗಿನ ಆದಿಕವಿಯೆಂದೂ 'ವಾಗಾನುಶಾಸನ'ನೆಂದೂ ಸಂಪ್ರದಾಯಾನುಸಾರವಾಗಿ ಕರೆಯುತ್ತಿರುವುದು ಅವನೇ ಮೊದಲನೆಯ ಕವಿಯೆಂಬ ವಾದವನ್ನೇ ಪರಿಪೋಷಿಸುತ್ತದೆ. ಆದಿಯ ವ್ಯಾಕರಣಗಳು ಸಂಸ್ಕೃತದಲ್ಲಿವೆ. ತಿಕ್ಕನನು ತನಗೆ ಹಿಂದೆ ಆಂಧ್ರ ವ್ಯಾಕರಣವೇ ಇರಲಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಇವೆಲ್ಲಕ್ಕಿಂತಲೂ ಮಿಗಿಲಾಗಿ ಆಂಧ್ರಲಿಪಿ ಪ್ರತ್ಯೇಕರೂಪವನ್ನು ತಾಳಿದುದು ೧೧ ನೆಯ ಶತಮಾನದಿಂದೀಚೆಗೆ ಎಂಬುದು ಪಂಡಿತರ ಸಿದ್ಧಾಂತ. ಈ ಎಲ್ಲ ಕಾರಣಗಳಿಂದ ನನ್ನಯ್ಯನ

ಗಿಂತ ಹಿಂದೆ ಅಂದರೆ ೧೦೨೦ ಕ್ಕಿಂತ ಪೂರ್ವಭಾವಿಯಾಗಿ ತೆಲುಗಿನಲ್ಲಿ ಸ್ಪಷ್ಟವಾಗಿ ಸುಸಂಸ್ಕೃತ ಸಾಹಿತ್ಯವಿರಲಿಲ್ಲವೆಂದೂ ಒಂದು ವೇಳೆ ಇದ್ದರೆ ದೇಶೀಮಾರ್ಗದಲ್ಲಿ ಕೆಲವು ಗ್ರಂಥಸ್ಥವಲ್ಲದ ಸಂಸ್ಕೃತ ಮಿಶ್ರವಿಲ್ಲದ ಶುದ್ಧ ಗ್ರಾಮ್ಯಗುಣಗಳಿಂದ ಕೂಡಿದ ಕೆಲವು ಗೀತೆಗಳೂ ಜಾನಪದ ಸಾಹಿತ್ಯವೂ ಇದ್ದಿರಬಹುದೆಂದೂ ಇಟ್ಟುಕೊಳ್ಳ ಬಹುದು.

ತೆಲುಗು ಸಾಹಿತ್ಯ ಚರಿತ್ರೆಯನ್ನು ಆಗಿನ ಗ್ರಂಥಗಳ ಆಕಾರದ ಮೇಲೆ ಸ್ಥೂಲ ವಾಗಿ ನಾಲ್ಕು ಭಾಗಗಳಾಗಿ ವಿಭಾಗಿಸಬಹುದು. ಮೊದಲನೆಯದು ಭಾಷಾಂತರ ಯುಗ. ಈ ಕಾಲದಲ್ಲಿ ಸಂಸ್ಕೃತದ ಮೂಲಗಳನ್ನು—ಮತಪ್ರಚಾರದೃಷ್ಟಿಯಿಂದ—ಆರ್ಯಸಂಸ್ಕೃತಿಯ ಪ್ರಚಾರಕ್ಕಾಗಿಯೇ—ಅವುಗಳ ಕೈಪಿಡಿಯಂತಿರುವ ಇತಿಹಾಸ ಪುರಾಣಗಳನ್ನು—ತೆಲುಗಿಗೆ ಭಾಷಾಂತರಿಸುವ ಕಾರ್ಯವು ನಡೆದಿದೆ. ಇಲ್ಲಿ ಕವಿಗಳು ಯಾವ ವಿಶೇಷವಾದ ಸ್ವಾತಂತ್ರ್ಯವನ್ನೂ ವಹಿಸದೆ, ಮೂಲವನ್ನೂ ಅತಿ ನಿಕಟವಾಗಿ ಅನುಸರಿಸದೆ, ತಮ್ಮ ಪ್ರಚಾರಕಾರ್ಯಕ್ಕೆ ಅನುಕೂಲವಾಗುವಂತೆ ದೇಶೀಯ ಆವಶ್ಯ ಕತೆಗೆ ಹೊಂದುವ ಹಾಗೆ ಭಾಷಾಂತರಿಸಿದ್ದಾರೆ. ಇವುಗಳಲ್ಲಿ ಭಾರತ ರಾಮಾಯಣ ಗಳು ಪ್ರಧಾನಸ್ಥಾನವನ್ನಾಕ್ರಮಿಸಿವೆ. ಈ ಕಾಲವನ್ನು ೧೧ ನೆಯ ಶತಮಾನದಿಂದ ೧೫ ನೆಯ ಶತಮಾನದ ವರೆಗೆಂದು ನಿಷ್ಕರ್ಷಿಸಬಹುದು. ಎರಡನೆಯದು ಪ್ರಬಂಧ ಯುಗ (ತೆಲುಗಿನ ಪ್ರಬಂಧಗಳನ್ನು ಸಂಸ್ಕೃತದ ಮಹಾಕಾವ್ಯಗಳಿಗೆ ಹೋಲಿಸ ಬಹುದು). ಈ ಯುಗವನ್ನು ತೆಲುಗಿನ ಸುವರ್ಣಯುಗವೆಂದು ಕರೆಯಬಹುದು. ಈ ಕಾಲದ ಕವಿಗಳೂ ವಿಶೇಷ ಮೇಧಾವಿಗಳಾಗಿ ಸ್ವತಂತ್ರಮಾರ್ಗದಲ್ಲಿ ಹೊರಟು ಹೊಸ ವಸ್ತುಗಳನ್ನು ಆಯ್ದುಕೊಂಡು ಸ್ಫೂರ್ತಿದಾಯಕಗಳಾದ ಗ್ರಂಥಗಳನ್ನು ರಚಿಸಿದರು. ಪ್ರಬಂಧಯುಗವು ಸುಮಾರು ೨೦೦ ವರ್ಷಗಳ ಕಾಲ ಪ್ರಸರಿಸಿತು. ೧೭-೧೮ ನೆಯ ಶತಮಾನಗಳನ್ನು ತೆಲುಗು ಸಾಹಿತ್ಯದ ತಾಮಸಯುಗವೆಂದು ಕರೆಯಬಹುದು. ಈ ಕಾಲದಲ್ಲಿ ಶ್ರೇಷ್ಠ ಕವಿಗಳಾರು ಅವತರಿಸದೆ ಶುಷ್ಕವಾದ ಶಾಸ್ತ್ರವ್ಯಾಸಂಗಕ್ಕೂ ಚಿತ್ರ ಕವಿತೆಗಳಿಗೂ ಪ್ರಾಶಸ್ತ್ಯವು ದೊರೆತು ಕಾವ್ಯವಾಹಿನಿಯು ಇಳಿಮುಖವಾಯಿತು. ೧೯ ನೆಯ ಶತಮಾನದಿಂದ ಆಧುನಿಕ ಸಾಹಿತ್ಯಯುಗವು ಪ್ರಾರಂಭವಾಗಿ ಪಾಶ್ಚಾತ್ಯ ಸಾಹಿತ್ಯದ ಸಂಸರ್ಗದಿಂದ ವಿಶೇಷ ಮಾರ್ಪಾಟನ್ನು ಹೊಂದಿ ವಿಶ್ವ ಸಾಹಿತ್ಯದ ಎಲ್ಲ ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಜನಕ್ಕೂ ದೇಶಕ್ಕೂ ಉಪಯೋಗಕರವೂ ಸರ್ವಾದರಣೀಯವೂ ಆದ ಸಜೀವ ಸಾಹಿತ್ಯ ನಿರ್ಮಾಣಕ್ಕೆ ಮಾರ್ಗದರ್ಶಕವಾಗಿದೆ.

ಕವಿಗಳಿಗೂ ಕಾವ್ಯಗಳಿಗೂ ಆಂಧ್ರದೇಶದಲ್ಲಿರುವಷ್ಟು ಗೌರವವೂ ಪ್ರೋತ್ಸಾ

ಹವೂ ಮತ್ತಾವ ದೇಶದಲ್ಲಿಯೂ ಇಲ್ಲ. ರಾಜರೂ ಜನಗಳೂ ಸಾಹಿತ್ಯವನ್ನು ನಾನಾ ರೀತಿಯಲ್ಲಿ ಅಭಿವೃದ್ಧಿಗೆ ತಂದಿದ್ದಾರೆ. ಪ್ರಾರಂಭಕಾಲದಿಂದಲೂ ಆಂಧ್ರರಾಜರನೇಕರು ಸ್ವಯಂಕವಿಗಳಾಗಿ ದೇಶೀಯ ಸ್ವತಂತ್ರಸಾಹಿತ್ಯಕ್ಕೆ ಪೋಷಕರಾಗಿದ್ದಾರೆ. ಹಾಲನು ತನ್ನ 'ಶಾಲಿವಾಹನ ಸಪ್ತಶತಿ'ಯನ್ನು ಪ್ರಾಕೃತದಲ್ಲಿ ರಚಿಸಿದನು. ರಾಜರಾಜ ನರೇಂದ್ರನು ಮಹಾಭಾರತವನ್ನು ತೆಲುಗಿಗೆ ಭಾಷಾಂತರಮಾಡಿಸಿದನು. ನನ್ನೆ ಚೋಡ ನೆಂಬ ದೊರೆಯು 'ಕುಮಾರಸಂಭವ'ವನ್ನು ರಚಿಸಿದನು. ಚಕ್ರವರ್ತಿಯಾದ ಕೃಷ್ಣ ದೇವರಾಯನು 'ಆಮುಕ್ತ ಮಾಲ್ಯದ'ವೆಂಬ ಬಹು ಉತ್ತಮವಾದ ಗ್ರಂಥದ ಕರ್ತೃ. ರಾಜರುಗಳು ಕವಿಗಳಿಗೆ ಮಾಡಿರುವ ಗೌರವವು ಬಹು ಶ್ಲಾಘನೀಯವಾದುವು. ಕವಿ ಪೆದ್ದನ್ನನಿಗೆ ಕೃಷ್ಣದೇವರಾಯನು ವಿಶೇಷ ಗೌರವವನ್ನು ಸೂಚಿಸಿ ಕವಿಗಂಡ ಪೆಂಡೀರವನ್ನು ತಾನೇ ಕಾಲಿಗೆ ತೊಡಿಸಿ ನಡುಬೀದಿಯಲ್ಲಿ ಎಲ್ಲರೆದುರಿಗೆ ತಾನೇ ಅವನನ್ನು ಅಂಬಾರಿಗೆ ಹತ್ತಿಸಿದನು. ಇವನಿಗೆ ಹಿಂದೆ ಪ್ರೌಢದೇವರಾಯನು ಶ್ರೀನಾಥನಿಗೆ ಕನಕಾಭಿಷೇಕವನ್ನು ಮಾಡಿಸಿದನು. ತನ್ನ ಅಧಿಪತಿಯಾದ ಮನುಮ ಸಿದ್ಧಿಯ ಕೈಬಿಟ್ಟಿದ್ದ ರಾಜ್ಯವನ್ನು ಸಂಪಾದಿಸಲು ಯೋಗ್ಯವಾದ ಒಂದು ದೊಡ್ಡ ಸೈನ್ಯವನ್ನೇ ಓರಗಲ್ಲಿನ ಚಕ್ರವರ್ತಿ ಗಣಪತಿದೇವನು ತಿಕ್ಕಣನಿಗೆ ಕಳುಹಿಸಿಕೊಟ್ಟನು. ವಾಸ್ತವವಾಗಿ ಕವಿತೆಗಳು ಬೆಲೆ ಕೊಟ್ಟು ಕೊಂಡುಕೊಳ್ಳುವ ಅಮೂಲ್ಯ ರತ್ನವೆಂಬ ಭಾವನೆ ಜನರಲ್ಲಿ ಮೂಡಿದ್ದಿತು. ಕೃಷ್ಣದೇವರಾಯನ ಮಗಳಾದ ಮೋಹನಾಂಗಿಯು ಒಬ್ಬ ಬಡಕವಿಯಿಂದ ಕೆಲವು ಪದ್ಯಗಳನ್ನು ಬಹು ಹೆಚ್ಚಿನ ಬೆಲೆಗೆ ಕೊಂಡು ಕೊಂಡಳೆಂಬ ಪ್ರತೀತಿ ಇದೆ. ಗ್ರಂಥಗಳನ್ನು ಬರೆಸಿ ಅಂಕಿತ ಮಾಡಿಸಿಕೊಳ್ಳುವುದು ರಾಜರಿಗೂ ಶ್ರೀಮಂತರಿಗೂ ಒಂದು ಸಂಪ್ರದಾಯವೂ ಗೌರವವೂ ಆಗಿದ್ದುವು. ಹಾಗೆಯೇ ಗ್ರಂಥವಿಕ್ರಯಮಾಡಿ ರಾಜನ ಆಸ್ಥಾನಕವಿಯಾಗಿದ್ದು ನರಸ್ತುತಿ ಮಾಡುವುದು ಮಹಾ ಪಾಪಕಾರ್ಯವೆಂದು ಭಾವಿಸಿದ್ದ ಪೋತನನಂತಹವರು ಇಲ್ಲದಿರಲಿಲ್ಲ. ಆದುದರಿಂದಲೇ ಕೆಲವು ರಾಜರುಗಳು ಕವಿಗಳು ತಮ್ಮ ಇಚ್ಛೆಯಂತೆ ಧನಧಾನ್ಯಾದಿಗಳಿಗೆ ಮಾರುಹೋಗದೇ ಇದ್ದಾಗ ಬಲಾತ್ಕಾರ ಪ್ರಯೋಗಮಾಡಿದ ಸನ್ನಿವೇಶಗಳೂ ಇವೆ. ಜನಗಳಿಗಂತೂ ಕವಿಗಳಿಗೆ ನಿಗ್ರಹಾನುಗ್ರಹ ಶಕ್ತಿಯಿದೆ ಯೆಂಬ ಭಾವನೆ ಖಚಿತವಾಗಿದ್ದಿತು. ಭೀಮಕವಿಯು ಕಳಿಂಗಗಂಗುವನ್ನು ಶಪಿಸಿದ್ದುದ ರಿಂದ ಆತನು ಸಿಂಹಾಸನದಿಂದ ಪದಚ್ಯುತನಾದನು. ಪೋತರಾಜುವಿನ ಪತ್ನಿಗೆ ಆಶೀ ರ್ವಾದ ಮಾಡಿದ್ದುದರಿಂದ ಆಕೆಯ ಸತ್ತುಹೋಗಿದ್ದ ಪತಿಯೂ ಬದುಕಿಕೊಂಡನು. ಕೆಲವು ಕವಿಗಳು ತಾತ್ಕಾಲಿಕವಾಗಿ ಸಿಂಹಾಸನವನ್ನು ಹತ್ತಿದ್ದಾರೆ. ಪೋತನನಂತಹ ಅಮಾತ್ಯರಾಗಿದ್ದವರೂ ಕೆಲವರುಂಟು. ನಂದಿ ತಿಮ್ಮನನು 'ಪಾರಿಜಾತಾಪಹರಣ'

ವನ್ನು ರಚಿಸಿ ರಾಜರಾಣಿಯರಿಗುಂಟಾಗಿದ್ದ ಮನಸ್ತಾಪವನ್ನು ಹೋಗಲಾಡಿಸಿದನು : ಕವಿಗಳು ಕಲಿಗಳಾಗಿದ್ದು ಯುದ್ಧದಲ್ಲಿ ಭಾಗವಹಿಸಿದ್ದ ಸನ್ನಿವೇಶಗಳನೇಕವಿವೆ. ಆದುದರಿಂದ ಸ್ವತಃ ಕವಿಗಳಾಗಿಯೋ ಕವಿಜನಾಶ್ರಯರಾಗಿಯೋ ಇರಬೇಕೆಂಬುದು ಅನೇಕ ತೆಲುಗರ ಬಹುಮಹತ್ವದ ಬವಣೆ.

**ನನ್ನಯ**—ಮೇಲೆಯೇ ತಿಳಿಸಿರುವಂತೆ ನನ್ನಯನೇ ಈಗಿನಮಟ್ಟಿಗೆ ತೆಲುಗು ಸಾಹಿತ್ಯದ ಪ್ರಥಮ ಕವಿ. ಈತನ ಕಾಲಕ್ಕೆ ಆಂಧ್ರದೇಶದಲ್ಲಿ ಜೈನಬೌದ್ಧಮತದ ಪ್ರಭಾವಗಳೆಲ್ಲ ಅಳಿದುಹೋಗಿ ವೈದಿಕಮತ ಪ್ರಬಲವಾಗುತ್ತಿತ್ತು. ಹಿಂದಿನ ನಾಸ್ತಿಕ ಧರ್ಮಗಳು ಪುನಃ ತಲೆಯೆತ್ತದಂತೆ ಜನಗಳಲ್ಲಿ ಸರಿಯಾದ ಅಸ್ತಿಭಾರವನ್ನು ಹಾಕುವುದಕ್ಕೆ ಆಸ್ತಿಕಮತದ ಕೈಪಿಡಿಯಂತಿದ್ದ ರಾಮಾಯಣ ಭಾರತಗಳು ಜನರಿಗೆ ತಿಳಿಯುವ ಭಾಷೆಯಲ್ಲಿ ರಚಿತವಾಗುವುದು ಆವಶ್ಯಕವಾಯ್ತು. ಆ ಕಾರ್ಯವನ್ನು ಮೊದಲು ಕೈಗೊಂಡವನು ನನ್ನಯ. ಇದನ್ನು ಮುಗಿಸಲು ಮೂರು ಬೇರೆ ಬೇರೆ ಕವಿಗಳಿಗೆ ಮೂರು ಶತಮಾನಗಳೇ ಬೇಕಾದುವು. ೧೧ ನೆಯ ಶತಮಾನದಲ್ಲಿ ನನ್ನಯನು ಮಹಾಭಾರತದ ಭಾಷಾಂತರವನ್ನು ಪ್ರಾರಂಭಿಸಿ ಮೂರು ಪರ್ವಗಳನ್ನು ರಚಿಸಿದನು. ೧೩ ನೆಯ ಶತಮಾನದಲ್ಲಿ ತಿಕ್ಕನನು ಅದನ್ನು ಮುಂದುವರಿಸಿದನು. ೧೪ ನೆಯ ಶತಮಾನದಲ್ಲಿ ಎರ್ರಾಪ್ರೆಗ್ಗಡನು ಪೂರ್ಣಗೊಳಿಸಿದನು. ಇವರುಗಳನ್ನು ಮುಂದಿನವರು ಕವಿತ್ರಯವೆಂದು ಕರೆದು ಗೌರವಿಸಿ ತಮ್ಮ ಗ್ರಂಥಾದಿಯಲ್ಲಿ ವಿಶೇಷವಾಗಿ ಸ್ತೋತ್ರಮಾಡಿರುವರು.

ನನ್ನಯನು ಮಹಾಭಾರತದ ಭಾಷಾಂತರವನ್ನು ಚಾಳುಕ್ಯರಾಜನಾದ ರಾಜರಾಜನರೇಂದ್ರ (೧೦೨೨-೬೩) ನ ಆಜ್ಞೆಯ ಪ್ರಕಾರ ಪ್ರಾರಂಭಿಸಿ ಆದಿ, ಸಭಾಪರ್ವಗಳನ್ನೂ ಅರಣ್ಯಪರ್ವದ ಕೆಲವು ಭಾಗವನ್ನೂ ರಚಿಸಿದನು. ಒಂದು ದಂತಕಥೆಯು ಅಥರ್ವಣನೆಂಬ ಜೈನನೂ ಒಂದು ಭಾರತವನ್ನೂ ರಚಿಸಿದ್ದಂತೆಯೂ ಅದು ನನ್ನಯನ ಭಾರತಕ್ಕಿಂತ ಉತ್ತಮವಾಗಿದ್ದಂತೆಯೂ ಅದರ ಪ್ರಕಾಶನದಿಂದ ತನ್ನ ಭಾರತದ ಮೇಲ್ಮೆ ಕಡಿಮೆಯಾಗುವುದೆಂದು ನನ್ನಯನು ಅದನ್ನು ನಾಶಪಡಿಸಿದಂತೆಯೂ ಅದಕ್ಕಾಗಿ ಅಥರ್ವಣನು ಶಾಪಗೊಡಲಾಗಿ ನನ್ನಯನಿಗೆ ಮುಂದುವರಿಸಲಾಗಲಿಲ್ಲವೆಂಬುದಾಗಿಯೂ ನಿರೂಪಿಸುತ್ತದೆ. ಅಥರ್ವಣನು ನನ್ನಯನಿಗಿಂತ ಎರಡು ಶತಮಾನಗಳು ಈಚಿನವನೆಂಬುದು ಇತ್ತೀಚಿನ ಸಂಶೋಧನೆಯಿಂದ ಖಚಿತವಾಗಿರುವುದರಿಂದ ಈ ದಂತಕಥೆಯು ವಿಶ್ವಾಸಾರ್ಹವಾದುದಲ್ಲ. ನನ್ನಯನು ಮುದ್ಗಲಗೋತ್ರದವನು ; ವೇಂಗಿನಾಡಿನ ತನುಕ ಎಂಬ ಸ್ಥಳದವನು. ರಾಜರಾಜನರೇಂದ್ರನ ಕುಲಗುರುವಾಗಿದ್ದಿರಬೇಕು ; 'ವಾಗಾನುಶಾಸನ'ನೆಂಬುದು, ಆತನ

ಬಿರುದು. ಆತನು 'ಆಂಧ್ರಶಬ್ದಚಿಂತಾಮಣಿ' 'ಲಕ್ಷಣಸಾರ' 'ಇಂದ್ರವಿಜಯ' 'ಚಾಮುಂಡೀವಿಲಾಸ' ಮತ್ತು 'ರಾಘವಾಭ್ಯುದಯ' ಎಂಬ ಐದು ಗ್ರಂಥಗಳನ್ನು ರಚಿಸಿರುವಂತೆ ಪ್ರತೀತಿ ಇದೆ. ಕೊನೆಯ ನಾಲ್ಕು ಗ್ರಂಥಗಳು ಈಗ ಇಲ್ಲ.

ನನ್ನಯನ ಶೈಲಿ ಸರಳವೂ ಮಧುರವೂ ಆದ ಬಹು ಆಕರ್ಷಕವಾದ ಶೈಲಿ. ಈ ಶೈಲಿಯನ್ನು ದ್ರಾಕ್ಷಾಪಾಕವೆಂದು ಕರೆಯಬಹುದು. ಭಾಷೆ ಅವನ ಹಿಡಿತಕ್ಕೆ ಸಿಕ್ಕಿದೆ. ಸಂದರ್ಭಕ್ಕೂ ಪಾತ್ರಕ್ಕೂ ಹೊಂದಿಕೊಳ್ಳುವಂತೆ ಬಹು ನಾದಮಯವಾಗಿ ಬರೆದಿದ್ದಾನೆ. ವಿಷಯವೈವಿಧ್ಯಕ್ಕೆ ಅನುಸಾರವಾಗಿ ಭಿನ್ನ ಭಿನ್ನ ಛಂದಸ್ಸುಗಳನ್ನು ಉಪಯೋಗಿಸಿಕೊಂಡಿದ್ದಾನೆ. ಈತನ ಭಾರತವು ಭಾಷಾಂತರವಾದರೂ ಸ್ವತಂತ್ರ ಗ್ರಂಥದಂತೆಯೇ ಇದೆ; ಚಂಪೂರೂಪದಲ್ಲಿದೆ. ಸಂಸ್ಕೃತ ಭೂಯಿಷ್ಠವಾಗಿದೆ*. ಮುಂದೆ ಬಂದ ಜಕ್ಕನ್ನನು ಈತನ ಶೈಲಿಯನ್ನು 'ರಸಬಂಧುರಭಾವಾಭಿರಾಮಮು' ಎಂದು ಕರೆದಿದ್ದಾನೆ. ನನ್ನಯನು ತನ್ನ ಭಾರತ ರಚನಕ್ಕೆ ಸಹಾಯಮಾಡಿದ ಕನ್ನಡ ಕವಿ ನಾರಾಯಣ ಭಟ್ಟನೆಂಬುವನೆಂದೂ ಕೃಷ್ಣನು ಅರ್ಜುನನಿಗೆ ಸಹಾಯ ಮಾಡಿದ ಹಾಗೆ ನಾರಾಯಣ ಭಟ್ಟನು ತನ್ನ ಕಾರ್ಯದಲ್ಲಿ ನೆರವಾಗಿದ್ದನೆಂದೂ ಹೇಳಿ ಕೊಂಡಿದ್ದಾನೆ. ನಾರಾಯಣ ಭಟ್ಟನ ನೆರವು ಯಾವ ರೀತಿಯದೆಂದು ನಿರ್ಧರಿಸಲು ಸಾಧ್ಯವಿಲ್ಲ. ನನ್ನಯನು ಬಾಯಿ ತುಂಬ ಹೊಗಳಿರುವುದರಿಂದ ಆತನೂ ಶ್ರೇಷ್ಠ ವರ್ಗದ ಕವಿಯಿದ್ದಿರಬೇಕು. ಆತನ ಗ್ರಂಥಗಳಾವುವೂ ಉಪಲಬ್ಧವಾಗಿಲ್ಲ. ನಂದಿಮ ಪೂಡಿ ಶಾಸನದಲ್ಲಿ ಈತನು ಸಂಸ್ಕೃತ ಕನ್ನಡ ಪ್ರಾಕೃತ ಪೈಶಾಚಿಕ ಭಾಷೆಗಳಲ್ಲಿ ಪಂಡಿತನಾಗಿದ್ದನೆಂದೂ ಅವನ ವಿದ್ವತ್ತಿಗೆ ಪ್ರತಿಫಲವಾಗಿ ಈತನಿಗೆ ಅಗ್ರಹಾರವೊಂದು ಚಕ್ರವರ್ತಿಯಿಂದ ದಾನವಾಗಿ ಕೊಡಲ್ಪಟ್ಟಿತೆಂದೂ 'ಕವಿಭಾವವಜ್ರಾಂಕುಶನೆಂಬ' ಬಿರುದು ಈತನಿಗಿತ್ತೆಂದೂ ಉಕ್ತವಾಗಿದೆ.

**ತಿಕ್ಕನ** :—ನನ್ನಯನು ಪ್ರಾರಂಭಿಸಿದ ಭಾರತವನ್ನು ಮುಂದುವರಿಸುವುದಕ್ಕೆ ಶಕ್ತನಾದ ಕವಿಯೊಬ್ಬನ ಬರವು ಆವಶ್ಯಕವಾಗಿದ್ದಿತು. ನಾನಾಕಾರಣಗಳಿಂದ ಆ ಕಾರ್ಯಕ್ಕೆ ಕೈಹಾಕಲು ಅನೇಕರು ಹೆದರುತ್ತಿದ್ದರು. ಪಂಚಮವೇದವೆಂದು ಗಣ್ಯ ವಾಗಿದ್ದ ಭಾರತವನ್ನು ಭಾಷಾಂತರಿಸುವುದು ಮಹಾ ಪಾಪಕರವೆಂದು ಒಂದು ಪಕ್ಷದವರು ವಾದಮಾಡುತ್ತಿದ್ದರು. ನನ್ನಯನಿಗುಂಟಾದ ಬುದ್ಧಿಭ್ರಮಣವು ಕಾಕತಾಳೀಯವಾಗಿ ಅನೇಕರನ್ನು ಧೈರ್ಯಹೀನರನ್ನಾಗಿ ಮಾಡಿತ್ತು. ಅಲ್ಲದೆ

* ಈ ಗ್ರಂಥ ರಚನೆ ಮಾಡುವುದರಲ್ಲಿ ನನ್ನಯನು ಕನ್ನಡದ ಅದಿಕವಿಯಾದ ಪಂಪನಿಂದ ಸ್ಫೂರ್ತಿ ಪಡೆದಿದ್ದಾನೆ. ಅವನ 'ವಿಕ್ರಮಾರ್ಜುನ ವಿಜಯ'ದ ಅನೇಕ ಸನ್ನಿವೇಶ ಛಂದಸ್ಸು ಮತ್ತು ಪದಪ್ರಯೋಗಗಳ ಅನುಕರಣವನ್ನು ಇಲ್ಲಿ ಕಾಣಬಹುದು.

ನನ್ನಯನು ಉದ್ದಾಮಪಂಡಿತನಾದುದರಿಂದ ಅವನ ಕೆಲಸವನ್ನು ಮುಂದುವರಿಸುವುದಕ್ಕೆ ಸರಿಯಾದ ಶಕ್ತಿಯೂ ಗುಂಡಿಗೆಯೂ ಬೇಕು. ಅಂತಹವರು ಸುಮಾರು ಎರಡು ಶತಮಾನದ ವರೆಗೆ ಯಾರೂ ದೊರೆಯಲಿಲ್ಲ. ೧೩ ನೆಯ ಶತಮಾನದಲ್ಲಿರುವ ತಿಕ್ಕನನು ಈ ಕಾರ್ಯವನ್ನು ಮುಂದುವರಿಸಿದನು.

ತಿಕ್ಕನನು ನಿಯೋಗಿಬ್ರಾಹ್ಮಣ. ಕಾಕತೀಯ ಗಣಪತಿದೇವನ ಸಾಮಂತನಾದ ನೆಲ್ಲೂರಿನ ಮನುಮಸಿದ್ಧಿಯ ಆಶ್ರಯದಲ್ಲಿದ್ದವನು. ಸುಪ್ರಸಿದ್ಧವಾದ ಕೊಟ್ಟರುವು ಮನೆತನಕ್ಕೆ ಸೇರಿದವನು. ಆತನ ಅಜ್ಜನಾದ ಭಾಸ್ಕರನು ಉದ್ದಾಮಕವಿಯಾಗಿದ್ದು ತೆಲುಗು ರಾಮಾಯಣವನ್ನು ರಚಿಸಿದ್ದಾನೆಂದು ಪ್ರತೀತಿ. ಆತನ ತಂದೆಯಾದ ಕೊಮ್ಮ ಮಂತ್ರಿ ಗುಂಟೂರು ನಾಯಕನ ಸೇನಾಧಿಪತಿಯಾಗಿದ್ದನು. ಆತನ ಜ್ಞಾತಿಯಾದ ಖಡ್ಗತಿಕ್ಕನನು ತನ್ನ ಯಜಮಾನನನ್ನು ಅನೇಕ ಸಲ ಯುದ್ಧದಲ್ಲಿ ಕಾಪಾಡಿದ್ದಾನೆ. ತಿಕ್ಕನನೇ ಒಂದಾನೊಂದು ಕಾಲದಲ್ಲಿ ಅಮಾತ್ಯನಾಗಿದ್ದು ಕೋಪಾವಿಷ್ಟನಾಗಿದ್ದ ಗಣಪತಿಯನ್ನು ಸಮಾಧಾನಮಾಡಿ ಮನುಮಸಿದ್ಧಿಗೆ ಪೂರ್ವಸ್ಥಾನವನ್ನು ಗಳಿಸಿಕೊಟ್ಟನು.

ಭಾರತವನ್ನು ಭಾಷಾಂತರಿಸುವುದಕ್ಕೆ ಪೂರ್ವಭಾವಿಯಾಗಿ ತಿಕ್ಕನನು 'ನಿರ್ವಚನೋತ್ತರರಾಮಾಯಣ'ವೆಂಬ ಉತ್ತರರಾಮಾಯಣದ ಕಥೆಯನ್ನು ಪದ್ಯಗ್ರಂಥವಾಗಿ ರಚಿಸಿದನು. ಇದರ ಕೊನೆಯ ಎರಡು ಸರ್ಗಗಳನ್ನು ಜಯಂತಿ ರಾಮಭಟ್ಟನೆಂಬುವನು ರಚಿಸಿದನು. 'ಕವಿವಾಕ್ಬಂಧನ'ವೆಂಬ ಛಂದೋಗ್ರಂಥವೂ 'ವಿಜಯಸೇನ'ವೆಂಬ ಗ್ರಂಥವೂ ತಿಕ್ಕನ ಕೃತವೆಂದು ಪ್ರತೀತಿಯಿದೆ. ಆದರೆ ಇವೆರಡೂ ಉಪಲಬ್ಧವಲ್ಲದುದರಿಂದ ಇವುಗಳ ವಿಷಯವಾಗಿ ಸ್ಪಷ್ಟವಾಗಿ ಏನನ್ನೂ ಹೇಳಲಾಗುವುದಿಲ್ಲ.

ಭಾರತವೇ ತಿಕ್ಕನನಿಗೆ ನಿಜವಾದ ಗೌರವವನ್ನು ತಂದಿರುವ ಗ್ರಂಥ. ಆತನು ನನ್ನಯನು ಉಳಿಸಿದ್ದ ಅರಣ್ಯಪರ್ವವನ್ನು ಮುಂದುವರಿಸದೆ ಬಿಟ್ಟು ಮುಂದಿನ ೧೫ ಪರ್ವಗಳನ್ನು ರಚಿಸಿ ಪೂರ್ಣಮಾಡಿದ್ದಾನೆ. (ಅರಣ್ಯಪರ್ವದ ಕಥೆಯನ್ನು ಬರೆಯುವವರಿಗೆ ಕೇಡು ತಪ್ಪಿದ್ದಲ್ಲವೆಂಬ ಜನಜನಿತವಾದ ಭಾವನೆ ಇವನನ್ನು ಹೆದರಿಸಿತೋ ಏನೋ!) ಈತನ ವಾಗ್ಧರಿಯ ವಿಷಯವಾಗಿ ಅನೇಕ ದಂತಕಥೆಗಳಿವೆ. ಈತನು ಭಾರತವನ್ನು ತಾನು ಅಕ್ಷರಸ್ಥವಾಗಿ ಬರೆಯಲಿಲ್ಲವೆಂತಲೂ ಬಹು ಶಕ್ತಿವಂತನಾದ ಕುಮಾರಗುರುನಾಥನೆಂಬ ಮೇಧಾವಿಯಾದ ಕುಂಬಾರನೊಬ್ಬನು ಈತನು ಲೀಲಾಜಾಲವಾಗಿ ಹೇಳುತ್ತಾ ಹೋಗುತ್ತಿದ್ದ ಕವನವನ್ನು ಬರೆದುಕೊಂಡನೆಂತಲೂ ಒಂದು ಕಥೆ ಸೂಚಿಸುತ್ತದೆ. ಈತನು ಬಹು ಸರಳವಾಗಿ ಲಲಿತವಾದ ಛಂದಸ್ಸಿನಲ್ಲಿ

ಬರೆಯುತ್ತಿದ್ದುದನ್ನು ನೋಡಿ ಕೆಲವರು ಇವನನ್ನು ಘನವಾದ ರೀತಿಯಲ್ಲಿ ಬರೆಯಲು ಅಶಕ್ತನೆಂದು ಹಾಸ್ಯಮಾಡಲು ಸೌಪ್ತಿಕ ಮತ್ತು ಸ್ತ್ರೀಪರ್ವಗಳನ್ನು ಬಹು ಕಠಿಣವಾದ ಶೈಲಿಯಲ್ಲಿ ರಚಿಸಿದನೆಂಬುದು ಮತ್ತೊಂದು ಕಥೆಯ ಸೂಚನೆ. ಇವುಗಳ ಸತ್ಯಾಂಶ ವೆಷ್ಟಾದರೂ ಇರಲಿ; ತಿಕ್ಕನನು ಪ್ರತಿಭಾಶಾಲಿಯೆಂಬುದರಲ್ಲಿ ಸಂದೇಹವಿಲ್ಲ. ಆತನ ಅನೇಕ ಹೊಸ ಸಂಪ್ರದಾಯಗಳು ಮುಂದಿನ ಕವಿಗಳಿಗೆ ಮಾರ್ಗದರ್ಶಿಗಳಾದುವು.

ತಿಕ್ಕನನ ಕಾವ್ಯಗಳಲ್ಲಿ ಎರಡು ಪ್ರಧಾನಗುಣಗಳು ಎದ್ದು ಕಾಣುತ್ತವೆ. ಮೊದಲ ನೆಯದು, ಆತನ ಶಬ್ದ ಪ್ರಯೋಗದಲ್ಲಿರುವ ಬಿಗಿ ಅಥವಾ ಮಿತವ್ಯಯ. ಆತನು ಒಂದು ಶಬ್ದವನ್ನೂ ಹೆಚ್ಚಾಗಿ ಅಪ್ರಯೋಜಕವಾಗಿ ಉಪಯೋಗಿಸುವುದಿಲ್ಲ. ಅರ್ಥಕ್ಕೆ ಊನ ಬರದಂತೆ ಒಂದು ಶಬ್ದವನ್ನೂ ತೆಗೆದುಹಾಕಲಾಗುವುದಿಲ್ಲ. ತನ್ನ ಪದ್ಯಗಳನ್ನು ಬಹು ಮಟ್ಟಿಗೆ ಶೋಧಿಸಿ ಬಹು ಅರ್ಥಪೂರ್ಣವಾಗಿ ಮಾಡಿದ್ದಾನೆ. ಅಲ್ಲದೆ ಆತನ ಪಾತ್ರ ಗಳು ಸಜೀವವ್ಯಕ್ತಿಗಳು. ಸನ್ನಿವೇಶಗಳು ಜೀವಪೂರ್ಣವಾದುವು. ಈ ಗುಣಗಳನ್ನು ಆತನ ವಿರಾಟಪರ್ವದಲ್ಲಿ ಕಾಣಬಹುದು. ಈ ಅದ್ಭುತಶಕ್ತಿಯು ಇವನಿಗೆ ಕವಿಬ್ರಹ್ಮ ಎಂಬ ಬಿರುದನ್ನು ದೊರಕಿಸಿದೆ.

ಎರ್ರಾಪ್ರೆಗ್ಗಡ—ತಿಕ್ಕನನಿಂದ ಸುಮಾರು ಅಯ್ವತ್ತು ವರ್ಷಗಳಾದ ಮೇಲೆ ಗುಡಲೂರಿನ ನಿಯೋಗಿಬ್ರಾಹ್ಮಣನಾದ ಎರ್ರಾಪ್ರೆಗ್ಗಡನು ನನ್ನಯನು ರಚಿಸದೆ ಬಿಟ್ಟಿದ್ದ ಅರಣ್ಯಪರ್ವವನ್ನು ಭಾಷಾಂತರಿಸಿ ತೆಲುಗು ಭಾರತದ ಭಾಷಾಂತರವನ್ನು ಪೂರ್ಣಗೊಳಿಸಿದನು. ಈತನು ನೆಲ್ಲೂರು ಜಿಲ್ಲೆಯ ನಾಯಕನಾಗಿದ್ದ ಪ್ರೊಲಯ ವೇಮಾರೆಡ್ಡಿಯ ಆಶ್ರಿತ. ಈತನು 'ಹರಿವಂಶ'ವೆಂಬ ಮತ್ತೊಂದು ಗ್ರಂಥವನ್ನು ರಚಿಸಿದ್ದಾನೆ. ಅದರ ಉಪೋದ್ಘಾತದಲ್ಲಿ ತನ್ನ ತಂದೆಯ ಹೆಸರು ಸೂರ್ಯನೆಂದೂ ತಿಕ್ಕನನು ಕನಸಿನಲ್ಲಿ ಬಂದು ಆಜ್ಞೆಮಾಡಿದುದರಿಂದ ತಾನು ಭಾರತವನ್ನು ರಚಿಸಿದ ನೆಂದೂ ಹೇಳಿಕೊಂಡಿದ್ದಾನೆ. ಈತನು 'ರಾಮಾಯಣ' ಮತ್ತು 'ನೃಸಿಂಹ ಪುರಾಣ' ಅಥವಾ 'ಅಹೋಬಿಲ ಮಾಹಾತ್ಮ್ಯ' ಎಂಬ ಗ್ರಂಥಗಳನ್ನು ರಚಿಸಿರುವಂತಿದೆ. ಈತನು ಉದ್ದಾಮ ಶೈವಭಕ್ತ. ಈತನಿಗೆ ಶಂಭುದಾಸನೆಂಬ ಬಿರುದುಂಟು. ಈತನ ಕವಿತಾಶಕ್ತಿ ಶ್ಲಾಘನೀಯವಾದುದು. ತಾನು ರಚಿಸಿರುವ ಅರಣ್ಯಪರ್ವಭಾಗವನ್ನು ನನ್ನಯ್ಯನ ಶೈಲಿಯಲ್ಲಿ ಪ್ರಾರಂಭಿಸಿ ತಿಕ್ಕನನ ಶೈಲಿಯಲ್ಲಿ ಮುಗಿಸಿ ಮಧ್ಯೆ ಬೇರೆ ಕೈವಾಡವಿರುವು ದೆಂಬ ಭಾವವೇ ಇಲ್ಲದಂತೆ ಗ್ರಂಥರಚನೆ ಮಾಡಿದ್ದಾನೆ. ಈತನಿಗೆ 'ಪ್ರಬಂಧ ಪರಮೇಶ್ವರ' ಎಂಬ ಮತ್ತೊಂದು ಬಿರುದೂ ಉಂಟು. ಮುಂದೆ ಶ್ರೀನಾಥನು ಈತನ ಸೂಕ್ತಿವೈಚಿತ್ರ್ಯವನ್ನು ಕೊಂಡಾಡಿದ್ದಾನೆ.

ಈ ಮೂರು ಶತಮಾನಗಳ ಕಾಲದಲ್ಲಿ ಭಾರತದ ಭಾಷಾಂತರಕಾರರೇ ಅಲ್ಲದೆ

ಇನ್ನು ಕೆಲವು ಕವಿಗಳೂ ಶಾಸ್ತ್ರಕಾರರೂ ತೆಲುಗು ಸಾಹಿತ್ಯವನ್ನು ಬೆಳಸಿದ್ದಾರೆ. ಅವರಲ್ಲಿ ಒಂದನೆಯ ಪ್ರತಾಪರುದ್ರ, ಪಾಲ್ಕುರಿಕಿ ಸೋಮನಾಥ, ನನ್ನೆಚೋಡ, ರಂಗನಾಥ, ಅಥರ್ವಣ, ಮೂಲಘಟಿಕ ಕೇತನ, ಬೇಡಣ್ಣ, ಮಾರನ, ಮಂಚನ್ನ, ಹುಳಕ್ಕಿ ಭಾಸ್ಕರ, ನಾಚಿನ ಸೋಮ, ಶ್ರೀನಾಥ, ಪೋತನ ಮೊದಲಾದವರು ಮುಖ್ಯರಾದವರು.

ಪ್ರತಾಪರುದ್ರನು ೧೨ನೆಯ ಶತಮಾನದವನು : ಕಾಕತೀಯ ರಾಜಕುಮಾರ. ವೀರಪುರುಷ; ವಿಶೇಷ ಜೈತ್ರಯಾತ್ರೆಯನ್ನು ಕೈಗೊಂಡು ರಾಜ್ಯವನ್ನು ವಿಸ್ತರಿಸಿದನು. ತನ್ನ ಕಾಲದಲ್ಲಿ ಕರ್ಣಾಟಕದಲ್ಲಿ ಬಸವೇಶ್ವರನಿಂದ ಜೀರ್ಣೋದ್ಧಾರವಾದ ವೀರಶೈವ ಮತದ ಪ್ರಭಾವಕ್ಕೆ ಒಳಗಾಗಿ ಅದರ ಪ್ರಚಾರಕ್ಕಾಗಿ ಅನೇಕ ಕವಿಗಳಿಗೆ ಸಹಾಯ ವಿತ್ತು ತಾನೂ ಗ್ರಂಥಗಳನ್ನು ರಚಿಸಿದನು. ಈತನ ನೀತಿಸಾರ ತೆಲುಗು ಭಾಷೆಯಲ್ಲಿ ಸಿಕ್ಕುವ ಮೊದಲನೆಯ ರಾಜ್ಯಶಾಸ್ತ್ರ.

ಪಾಲ್ಕುರಿಕಿ ಸೋಮನಾಥನು ಪ್ರತಾಪರುದ್ರನಂತೆಯೇ ವೀರಶೈವ, ಧರ್ಮ ಪ್ರಚಾರಕ; ಗ್ರಂಥರಚನೆ, ವಾದಪ್ರತಿವಾದಗಳ ಮೂಲಕ ವೀರಶೈವಮತವನ್ನು ಬಹುಮಟ್ಟಿಗೆ ಪ್ರಚಾರಮಾಡಿದನು*. ಕನ್ನಡ, ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿ ಈತನು ಗ್ರಂಥರಚನೆ ಮಾಡಿದ್ದಾನೆ. 'ಪಂಡಿತಾರಾಧ್ಯಚರಿತ್ರ,' 'ದ್ವಿಪದ ಬಸವ ಪುರಾಣ', 'ಅನುಭವಸಾರ' ಈ ಮೂರೂ ಆತನ ತೆಲುಗು ಗ್ರಂಥಗಳು. ಸೋಮೇಶ್ವರ ಶತಕವನ್ನು ಕನ್ನಡದಲ್ಲಿ ಬರೆದಿದ್ದಾನೆ.

ನನ್ನೆಚೋಡನು ಪಾಕನಾಡಿನ ಆಂಧ್ರಚೋಡ. ಈತನಿಗೆ 'ಕವಿರಾಜ ಶಿಖಾ ಮಣಿ', 'ತೆಂಕಣಾಮಾತ್ಯಾ' ಎಂಬ ಬಿರುದುಗಳಿದ್ದವು. 'ಕುಮಾರ ಸಂಭವ' ಈತನ ಗ್ರಂಥ. ಎಂ. ರಾಮಕೃಷ್ಣರು ಇದನ್ನು ಹತ್ತನೆಯ ಶತಮಾನದ್ದೆಂದು ವಾದಿ ಸುತ್ತಾರೆ. ವಾಸ್ತವವಾಗಿ ಸುಮಾರು ೧೧೫೦ ರಲ್ಲಿ ರಚಿತವಾಗಿರಬಹುದು. ನನ್ನೆ ಚೋಡನು 'ಕಲಾವಿಲಾಸ'ವೆಂಬ ಮತ್ತೊಂದು ಗ್ರಂಥವನ್ನು ರಚಿಸಿರುವಂತೆ ಕಾಣುತ್ತದೆ. ಅದು ಉಪಲಬ್ಧವಲ್ಲ. ಈತನು ತನ್ನ ಗ್ರಂಥದಲ್ಲಿ ತಮಿಳು ಮತ್ತು ಕನ್ನಡ ಶಬ್ದಗಳನ್ನು ವಿಶೇಷವಾಗಿ ಉಪಯೋಗಿಸಿಕೊಂಡಿದ್ದಾನೆ. ಈತನಿಗೆ ಕನ್ನಡ ವೃತ್ತಗಳಲ್ಲಿ ಹೆಚ್ಚಿನ ಒಲವು. ಈತನು ಕಾವ್ಯರಚನೆಯಲ್ಲಿ ಹಿಂದಿನ ಸಂಪ್ರದಾಯಗಳಾ

---

* ಈತನ ಪ್ರಭಾವವು ಕನ್ನಡ ವೀರಶೈವರ ಮೇಲೆ ವಿಶೇಷವಾಗಿದೆ. ಭೀಮ ಕವಿಯು ಈತನ ತೆಲುಗು ಬಸವ ಪುರಾಣದ ಆಧಾರದ ಮೇಲೆಯೇ ತನ್ನ ಕನ್ನಡ ಬಸವ ಪುರಾಣವನ್ನು ರಚಿಸಿರುವುದು. ಅಲ್ಲದೆ ಮುಂದೆ ಬಂದ ೧೨ ಜನ ಕನ್ನಡ ಕವಿಗಳು ಪಾಲ್ಕುರಿಕೆ ಸೋಮನನ್ನು ಮುಕ್ತಕಂಠದಿಂದ ಸ್ತೋತ್ರಮಾಡಿದ್ದಾರೆ.

ವುದನ್ನು ಲಕ್ಷಿಸದೆ ಸ್ವೇಚ್ಛೆಯಾಗಿ ಗ್ರಂಥರಚನೆ ಮಾಡಿದನು. ವೃತ್ತರಚನೆಯಲ್ಲಿ ಶುಭಾಶುಭ ಗಣಗಳ ಅರಿವಿಲ್ಲದೆ ಅವುಗಳಿಗೆ ಲಕ್ಷ್ಯಕೊಡದೆ ಮನಸ್ಸುಬಂದಂತೆ ಕಾವ್ಯ ಸೃಷ್ಟಿ ಮಾಡಿದುದರಿಂದಲೇ ಈತನು ಅಕಾಲಮೃತ್ಯುವಿಗೆ ತುತ್ತಾದನೆಂಬುದು ಅಥರ್ವ ಣನ ವಾದ. ಹೇಗಾದರೂ ನನ್ನೆಚೋಡನು ಉತ್ತಮಕವಿ ಎಂಬುದರಲ್ಲಿ ಸಂದೇಹವಿಲ್ಲ.

ಹದಿಮೂರನೆಯ ಶತಮಾನವನ್ನು ರಾಮಾಯಣದ ಭಾಷಾಂತರ ಕಾಲವೆಂದು ಕರೆಯಬಹುದು. ರಂಗನಾಥ ಮತ್ತು ಭಾಸ್ಕರರು ಎರಡು ರಾಮಾಯಣಗಳನ್ನು ರಚಿ ಸಿದರು. 'ರಂಗನಾಥ ರಾಮಾಯಣ'ವೆಂದು ಪ್ರಸಿದ್ಧಿಯಾಗಿದ್ದರೂ ಅದನ್ನು ರಚಿಸಿದ ವನು ರಂಗನಾಥನ ಆಶ್ರಯದಾತನೂ ಇಮ್ಮಡಿ ಪ್ರತಾಪರುದ್ರನ ಸಾಮಂತನೂ ಆದ ಬುದ್ಧರಾಜುವಾಗಿರಬೇಕೆಂದು ಅಂತರ್ಯಪ್ರಮಾಣದಿಂದ ವಿಶದಪಡುತ್ತದೆ. ರಂಗ ನಾಥನೇ ಬರೆದು ದೊರೆಯ ಹೆಸರಿನಲ್ಲಿ ಪ್ರಚಾರಪಡಿಸಿದನೋ ಬುದ್ಧರಾಜನೇ ರಚಿಸಿ ರಂಗನಾಥನಿಗೆ ಅಂಕಿತಮಾಡಿದನೋ ಹೇಳುವುದು ಕಷ್ಟ. ಆದರೂ ಮುಂದೆ ಅಪೂರ್ಣವಾದ ಆ ಗ್ರಂಥವನ್ನು ಬುದ್ಧರಾಜುವಿನ ಮಕ್ಕಳಾದ ಕಚವಿಬುಧ ಮತ್ತು ವಿಠ್ಠಲರಾಜು ಎಂಬುವರು ಪೂರ್ಣಮಾಡಿರುವುದರಿಂದ ಮೂಲಗ್ರಂಥವನ್ನು ಬುದ್ಧರಾಜುವೇ ರಚಿಸಿರಬಹುದು. ಈ ಭಾಷಾಂತರವು ಬಹು ಲಲಿತವಾಗಿ ಪಂಡಿತಪಾಮರರಿಗೂ ಆಬಾಲವೃದ್ಧರಿಗೂ ಸುಖಬೋಧವಾಗಿದೆ.

ಸುಮಾರು ಇದೇ ಕಾಲದಲ್ಲಿ ಅಥರ್ವಣನು (ಅಥರ್ವಣ ಕಾರಿಕಲು) 'ತ್ರಿಲಿಂಗ ಶಬ್ದಾನುಶಾಸನ'ವೆಂಬ ತೆಲುಗು ವ್ಯಾಕರಣವನ್ನು ರಚಿಸಿದನು. ಇದರಲ್ಲಿ ಆತನು ಆಂಧ್ರ ಭಾಷೆಯ ಪ್ರಾಚೀನತೆಯನ್ನು ಸ್ಥಿರಪಡಿಸಲು ಪ್ರಯತ್ನಪಟ್ಟಿದ್ದಾನೆ. ಈತನು ಕೆಲವರಿಂದ ನನ್ನಯನಿಗೆ ಸಮಕಾಲೀನನೆಂದು ಗಣಿಸಲ್ಪಟ್ಟಿದ್ದಾನೆ. ಈತನ ಕಾಲದ ವಿಷಯದಲ್ಲಿ ವಿಶೇಷ ಭಿನ್ನಾಭಿಪ್ರಾಯಗಳಿವೆ. ಸುಮಾರು ೧೩ ನೆಯ ಶತಮಾನದ ಮಧ್ಯಕಾಲದವ ನಿರಬಹುದು. ತೆಲುಗು ಸಾಹಿತ್ಯದಲ್ಲೆಲ್ಲ ಈತನೊಬ್ಬನೇ ಜೈನಕವಿ. ಈತನಿಗೆ 'ದ್ವಿತೀಯಾ ಚಾರ್ಯ' ಎಂಬ ಬಿರುದುಂಟು. ಈತನು ಒಂದು ಛಂದೋಗ್ರಂಥವನ್ನೂ ನನ್ನಯನ ಭಾರತದ ಮುಂದಿನ ಭಾಗವನ್ನೂ ರಚಿಸಿದ್ದನೆಂದು ಪ್ರತೀತಿ ಇದೆ. ಈತನ ವ್ಯಾಕರಣವು ತೆಲಗುಭಾಷೆಯ ವಿಷಯಕವಾದ ಸಂಸ್ಕೃತಗ್ರಂಥ. ಮುಂದಿನ ಗ್ರಂಥಕರ್ತರು ಈತನನ್ನು ಪ್ರಮಾಣಗ್ರಂಥಕಾರನನ್ನಾಗಿ ಉದಹರಿಸಿದ್ದಾರೆ.

ಹದಿಮೂರನೆಯ ಶತಮಾನದ ಮಧ್ಯಭಾಗದಲ್ಲಿ ಅಭಿನವದಂಡಿಯೆಂಬ ಬಿರು ದಾಂಕಿತನಾದ ಮೂಲಘಟಿಕ ಕೇತನನು ದಂಡಿಯ 'ದಶಕುಮಾರ ಚರಿತೆ'ಯನ್ನು ತೆಲುಗಿಗೆ ಭಾಷಾಂತರಿಸಿದನು. ಈತನು 'ಆಂಧ್ರ ಭಾಷಾಭೂಷಣ'ವೆಂಬ ವ್ಯಾಕರಣ ಗ್ರಂಥವನ್ನೂ ಯಾಜ್ಞವಲ್ಕ್ಯಸ್ಮೃತಿಯ ವ್ಯಾಖ್ಯಾನವಾದ 'ಮಿತಾಕ್ಷರಿ'ಯ

ಆಂಧ್ರಾನುವಾದವನ್ನೂ ರಚಿಸಿದನು. ಈತನು ತನ್ನ 'ದಶಕುಮಾರ ಚರಿತೆ'ಯನ್ನು ತಿಕ್ಕನನಿಗೆ ಅಂಕಿತಮಾಡಿದ್ದಾನೆ.

ಶತಮಾನದ ಉತ್ತರಾರ್ಧದಲ್ಲಿ ಆಂಧ್ರಚೋಡನಾಯಕನಾದ ಬೇಡಣ್ಣನು 'ನೀತಿಶಾಸ್ತ್ರ ಮುಕ್ತಾವಳಿ'ಯೆಂಬ ನೀತಿಗ್ರಂಥವನ್ನೂ ಮಾರಣ್ಣನು 'ಮಾರ್ಕಂಡೇಯ ಪುರಾಣ'ವನ್ನೂ ಮಂಚಣ್ಣನು 'ಕೇಯೂರುಬಾಹು ಚರಿತ್ರೆ'ಯನ್ನೂ ರಚಿಸಿದರು. ಶತಮಾನಾಂತ್ಯದಲ್ಲಿ ಭಾಸ್ಕರನು 'ವಾಲ್ಮೀಕಿ ರಾಮಾಯಣವನ್ನು' ಚಂಪೂಶೈಲಿಯಲ್ಲಿ ರಚಿಸಿ ಸಾಹಿನೀಮಾರನೆಂಬುವನಿಗೆ ಅಂಕಿತಮಾಡಿದನು. ಸಾಹಿನೀಮಾರನೆಂಬ ಶಬ್ದಕ್ಕಿರುವ ಕುದುರೆಯ ಸವಾರ ಎಂಬ ಅರ್ಥದ ಮೇಲೆ ಇವನ ವಿಷಯವಾಗಿ ಅನೇಕ ಕಥೆಗಳು ಹುಟ್ಟಿಕೊಂಡಿವೆ. ಅವುಗಳಿಗೆ ವಿಶೇಷ ಪೂಜ್ಯತೆಯಿಲ್ಲ.

ಹದಿನಾಲ್ಕನೆಯ ಶತಮಾನದಲ್ಲಿ 'ಉತ್ತರ ಹರಿವಂಶ'ದ ಕರ್ತೃವೂ ಬುಕ್ಕನ ಆಸ್ಥಾನ ಕವಿಯೂ ಆದ ನಾಚಿನಸೋಮ, ಭಾರತ ಕರ್ತೃವಾದ ಎಱ್ಱಪ್ರಗಡ, ಕಾವ್ಯಾಲಂಕಾರ ಚೂಡಾಮಣಿ (ವ್ಯಾಕರಣ) ಯ ಕರ್ತೃವಾದ ವಿನ್ನಕೋಟಿ ಪೆದ್ದಣ್ಣ, 'ತ್ರಿಪುರಾಂತಕೋದಾಹರಣ', 'ಮದನವಿಜಯ', 'ಅಂಬಿಕಾಶತಕ'ಗಳನ್ನು ರಚಿಸಿದ ರಾವಿಪಾಟಿ ತಿಪ್ಪನ್ನ ಇವರು ಗಣ್ಯರು.

**ಶ್ರೀನಾಥ**—ಆದರೂ ಆದಿಕಾಲದ ತೆಲುಗುಸಾಹಿತ್ಯದಲ್ಲಿ ವಾಸ್ತವವಾಗಿ ಹಿರಿಯ ಹೆಸರೆಂದರೆ ಶ್ರೀನಾಥನದು. ಯೋಗ್ಯತೆಯಲ್ಲಿ ಈತನು ಕವಿತ್ರಯಕ್ಕೆ ಯಾವ ದೃಷ್ಟಿಯಿಂದಲೂ ಕಡಿಮೆಯಿಲ್ಲ. ಈತನ ಕಾಲ ೧೩೬೫-೧೪೪೦. ಅಖಂಡ ತೆಲುಗು ಸಾಹಿತ್ಯದಲ್ಲಿ ಇಂತಹ ಮೇಧಾವಿಗಳು ಅತಿ ವಿರಳವೆಂದು ಹೇಳಬಹುದು. ಶ್ರೀನಾಥನು ಒಂದು ಸಾಮಾನ್ಯ ಮನೆತನದಲ್ಲಿ ಜನಿಸಿ ತನ್ನ ಪ್ರತಿಭಾವಿಶೇಷದಿಂದ ಬಹು ಬೇಗ ಪ್ರಸಿದ್ಧನಾದನು. ಈತನು ಉಚ್ಚ ಶಿವಭಕ್ತ. 'ಭೀಮಖಂಡಂ,' 'ಕಾಶೀಖಂಡಂ', 'ಶಿವರಾತ್ರೀ ಮಾಹಾತ್ಮ್ಯಂ' ಎಂಬ ಗ್ರಂಥಗಳನ್ನು ರಚಿಸಿದ್ದಾನೆ. ಬಾಲ್ಯದಲ್ಲಿ 'ಮರುತ್ರಾಟ್ ಚರಿತ್ರ'ವನ್ನು ಯವ್ವನದಲ್ಲಿ ಶಾಲೀವಾಹನನ 'ಸಪ್ತಶತಿ'ಯ ಭಾಷಾಂತರವನ್ನೂ ರಚಿಸಿರುವಂತೆ ಹೇಳಿಕೊಂಡಿದ್ದಾನೆ. ಇವೂ ಇವನ 'ಪಂಡಿತಾರಾಧ್ಯ ಚರಿತ್ರ'ವೂ ನಷ್ಟವಾಗಿವೆ. 'ಶೃಂಗಾರದೀಪಿಕೆ'ಯೆಂಬ ಅಲಂಕಾರಗ್ರಂಥವೂ ಏತತ್ಕೃತವೆಂದು ಪ್ರತೀತಿ. ಆದರೆ ಅದು ಕುಮಾರಗಿರಿರೆಡ್ಡಿವಿರಚಿತವೆಂಬ ಅಭಿಪ್ರಾಯವೂ ಇದೆ. ಶ್ರೀನಾಥನ 'ಕ್ರೀಡಾಭಿರಾಮ'ಕ್ಕೆ ವೀಧೀನಾಟಕವೆಂಬ ಹೆಸರೂ ಉಂಟು. ಇದರಲ್ಲಿ ಒಬ್ಬನು ಓರುಗಲ್ಲಿನ ತನ್ನ ಅನುಭವವನ್ನು ತಿಳಿಸುತ್ತಿರುತ್ತಾನೆ. ಮತ್ತೊಬ್ಬನು ಶ್ರೋತೃವಾಗಿ ಕೇಳುತ್ತಿರುತ್ತಾನೆ. ಈ ವೀಧೀನಾಟಕವು ಸಂಸ್ಕೃತದ ಈ ಮಾದರಿಗಿಂತ ಭಿನ್ನವಾಗಿದೆ. ಈತನ 'ಪಲ್ನಾಟೀ ವೀರಚರಿತ'ವೂ ದೇಶೀಯ

ವೀರರನ್ನು ಕೊಂಡಾಡುವ ಮೊದಲನೆಯ ಗ್ರಂಥ. ಇಂತಹ ಗ್ರಂಥಗಳಿಗೆ ವೀರಗೀತ ಗಳೆಂದು ಹೆಸರು. ಮುಂದೆ ಕಾಟಮರಾಜು, ಖಡ್ಗ ತಿಕ್ಕನ, ಮಹಾರಾಜಾ ರಂಗರಾವ್ ಮೊದಲಾದವರ ಮೇಲೆ ಇಂತಹ ಗೀತೆಗಳು ರಚಿತವಾಗಿವೆ.

ಆಂಧ್ರಕವಿಗಳಲ್ಲಿ ಶ್ರೀನಾಥನು ಪಂಡಿತ, ಧೈರ್ಯಶಾಲಿ, ಗಾಂಭೀರ್ಯಯುತ. ಅವನ ಹಾಗೆ ಸೀಸಪದ್ಯವನ್ನು (ಸಂಸ್ಕೃತದ ಶೀರ್ಷಕ ಛಂದಸ್ಸು) ಲೀಲಾಜಾಲವಾಗಿ ಉಪಯೋಗಿಸುವವರು ಮತ್ತೊಬ್ಬರಿಲ್ಲ. ವ್ಯಕ್ತಿತ್ವದೃಷ್ಟಿಯಿಂದಾಗಲಿ ಕವಿತ್ವದೃಷ್ಟಿ ಯಿಂದಾಗಲಿ ಅವನನ್ನು ಯಾರೂ ಮೀರಿಸಲಾರರು. ಅವನ ಬಂಧದ ಸರಳತೆ, ಪ್ರತಿಭಾ ಸೌಂದರ್ಯ, ಶೈಲಿಯ ಗಾಂಭೀರ್ಯ, ಹಾಸ್ಯದ ಪ್ರಖರತೆ ಆತನ ವಾಚಕರಿಗೆ ಚಿರಪರಿಚಿತವಾದುದು. ಆತನು ಸಂಸ್ಕೃತಪಂಡಿತನಾದ ಡಿಂಡಿಮಭಟ್ಟನನ್ನು ಸೋಲಿಸಿದನು. ತಾರ್ಕಿಕರನ್ನು ಗೇಲಿಮಾಡುತ್ತಾನೆ. ಆತನ ಕಾಲದ ಯಾವ ಆಂಧ್ರ ರಾಜರ ಆಸ್ಥಾನದಲ್ಲಿಯೂ ಆತನಿಗೆ ಮನ್ನಣೆ ದೊರೆಯದೇ ಇಲ್ಲ.

ಪಂಡಿತಪಾಮರರಿಗೂ, ಬಡವಬಲ್ಲಿದರಿಗೂ, ಆಸ್ತಿಕನಾಸ್ತಿಕರಿಗೂ, ಸಾಂಪ್ರ ದಾಯಕ ಸ್ವತಂತ್ರ ಮಾರ್ಗಾವಲಂಬಿಗಳಿಗೂ ಬಹು ಪ್ರಿಯನಾದವನು ಅವನು. ಜೀವನದಲ್ಲಿ ಅವನಷ್ಟು ಏರಿಳಿತಗಳನ್ನು ಮತ್ತಾರೂ ಅನುಭವಿಸಿರಲಾರರು. ರಾಜರಾಜ ಮಹಾರಾಜರುಗಳಿಂದ ಗೌರವಿಸಲ್ಪಟ್ಟು ಕೊಡುಗೈಗಳಿಂದ ಬಹುಮಾನವನ್ನು ಪಡೆದು ಪ್ರೌಢದೇವರಾಯನಿಂದ ಕನಕಾಭಿಷಿಕ್ತನಾಗಿ ತುಂಬುಜೀವನವನ್ನು ಬಾಳಿ ಶ್ರೀಮಂತ ನಾಗಿ ಬದುಕಿ ಬಡವನಂತೆ ಕಾಲವಾದನು. ಇದಕ್ಕೆ ಕಾರಣ ಅವನ ಆಶ್ರಯದಾತ ರಾದ ರೆಡ್ಡಿ ದೊರೆಗಳು ಅರಸಿಕರಾದ ಗಜಪತಿಗಳಿಂದ ಸೋತುಹೋದುದೇ. ಆತನ ಚಾಟುಪದ್ಯಗಳು ಎಲ್ಲ ವಿಷಯಕವಾಗಿವೆ. ತೆಲುಗು ಪಂಡಿತಪಾಮರರಲ್ಲಿ ಇವುಗಳಲ್ಲಿ ಕೆಲವನ್ನಾದರೂ ಕಂಠಪಾಠ ಮಾಡದವರು ಅತಿ ವಿರಳ. ಪಂಡಿತರು ಅವನ ಅತ್ಯುತ್ತಮವಾದ ಶ್ರೀ ಹರ್ಷನ ನೈಷಧದ ಭಾಷಾಂತರವನ್ನು ಕೊಂಡಾಡುತ್ತಾರೆ. ಆಧುನಿಕರು ಅವನ ಕ್ರೀಢಾಭಿರಾಮಕ್ಕೆ ಮಾರುಹೋಗಿದ್ದಾರೆ.

ಆಬಾಲವೃದ್ಧರಿಗೂ ಚಿರಪರಿಚಿತನಾದವನು ತಾತ್ವಿಕಶಿರೋಮಣಿಯಾದ ವೇಮನ. ಸ್ಥಳದಲ್ಲಲ್ಲದೆ ದೇಶಾಂತರಗಳಲ್ಲಿಯೂ ಬಹು ಪ್ರಸಿದ್ಧನಾಗಿದ್ದನು. ಆತನ ಪದ್ಯಗಳನೇಕ ಪಾಶ್ಚಾತ್ಯ ಭಾಷೆಗಳಿಗೂ ಪರಿವರ್ತಿತವಾಗಿವೆ. ಆತನ ಭಾಷೆಯಲ್ಲಿರುವ ಸರಳತೆ ಎಂತಹವರನ್ನೂ ಮುಗ್ಧರನ್ನಾಗಿ ಮಾಡುತ್ತದೆ. ಇವನು ೧೫ ಶತಮಾನದ ಆದಿಭಾಗದಲ್ಲಿದ್ದಿರಬೇಕು.

ಭಾಗವತ ಕರ್ತೃವಾದ ಬೊಮ್ಮೆರ ಪೋತನನು ಕಾಲದೃಷ್ಟಿಯಿಂದ ಮುಂದಿ ನವನು. ವಯಸ್ಸಿನಲ್ಲಿ ಬಹಳ ಚಿಕ್ಕವನಾದರೂ ಶ್ರೀನಾಥನ ಭಾವಮೈದ. ಈತನ

ಭಾಗವತ ಮೂಲಕ್ಕಿಂತಲೂ ಬೃಹದಾಕಾರವನ್ನು ತಾಳಿದೆ. ಆತನ ಭಾವಲಹರಿಯ ವೈಶದ್ಯವೇ ಇದಕ್ಕೆ ಕಾರಣ. ಈ ಭಾಗವತವು ತೆಲುಗು ರಾಮಾಯಣಕ್ಕಿಂತ ಹೆಚ್ಚು ಜನಪ್ರಿಯವಾಗಿದೆ. ಈತನ ಗ್ರಂಥದ ಭಾಗಗಳಾದ 'ಗಜೇಂದ್ರಮೋಕ್ಷ,' 'ರುಕ್ಮಿಣೀ ಕಲ್ಯಾಣ, 'ಪ್ರಹ್ಲಾದ ಚರಿತ್ರೆ' ಮೊದಲಾದುವು ಪಾಮರರಿಂದಲೂ ಪ್ರತಿನಿತ್ಯವೂ ಅನುಸಂಧಾನಮಾಡಲ್ಪಡುತ್ತಿವೆ. ಗಜೇಂದ್ರಮೋಕ್ಷದ ಕೆಲವು ಭಾಗವನ್ನು ಸ್ವರ ಯುಕ್ತವಾಗಿ ಆನಂದಭೈರವಿ ರಾಗದಲ್ಲಿ ಉದಯಕಾಲದಲ್ಲಿ ಅನೇಕ ಕಡೆ ಹಾಡುತ್ತಿರು ವುದನ್ನು ಈಗಲೂ ಕೇಳಬಹುದು. ಭಕ್ತ್ಯಾಧಿಕ್ಯದಲ್ಲಾಗಲಿ ಭಾವದ ಆಳದಲ್ಲಾಗಲಿ ಅವನನ್ನು ಯಾರೂ ಮೀರಿಸಲಾರರು. ಭಾವಮಗ್ನನಾದಾಗ ಆತನು ವ್ಯಾಕರಣದ ಮರ್ಯಾದೆಯನ್ನು ಮೀರಿ ಹಾಡಿ ಕೆಲವು ಶುಷ್ಕ ವೈಯ್ಯಾಕರಣಿಗಳ—ವಿಮರ್ಶಕರ ಆಕ್ಷೇಪಣೆಗೂ ಒಳಗಾಗಿದ್ದಾನೆ. ಪೋತನನು 'ವೀರಭದ್ರ ವಿಜಯ'ವೆಂಬ ಮತ್ತೊಂದು ಗ್ರಂಥವನ್ನೂ ರಚಿಸಿದ್ದಾನೆ. ಯುವಕನಾಗಿದ್ದಾಗ ಈತನು ರಾವ್‌ಸಿಂಗನ ಆಶ್ರಿತ ನಾಗಿದ್ದು ಆತನ ಪ್ರೇಯಸಿಯ ವಿಷಯವಾಗಿ 'ಭೋಗಿನೀದಂಡಕ'ವನ್ನು ರಚಿ ಸಿದ್ದನು. ಆದರೆ ಆತನು ಭಾಗವತವನ್ನು ರಚಿಸುವ ವೇಳೆಗೆ ಪರಿಶುದ್ಧನಾಗಿ ರಾವ್ ಸಿಂಗನಿಗೆ ಅಂಕಿತಮಾಡಲು ಇಷ್ಟಪಡದೆ ಅವನ ಕೋಪಕ್ಕೂ ಪಾತ್ರನಾದನು. ಅಂತಹ ಪವಿತ್ರಗ್ರಂಥವನ್ನು ಈ ಸಾಮಾನ್ಯ ನರನಿಗೆ ಅಂಕಿತಮಾಡುವುದು ಪರಮಾಪರಾಧವೆಂದು ಅದನ್ನು ಶ್ರೀ ರಾಮನಿಗೆ ಅರ್ಪಣೆ ಮಾಡಿದನು. ಈ ಸಂದರ್ಭ ದಲ್ಲಿ ಆತನು ರಚಿಸಿದ ಪದ್ಯವು ಸರ್ವವಿದಿತವಾಗಿದೆ. ಪೋತನನ ದಂಡಕವೇ ತೆಲುಗಿ ನಲ್ಲಿ ಮೊದಲನೆಯ ದಂಡಕ. ಅದರ ನಡೆ ಬಹು ಗಂಭೀರವಾಗಿದ್ದು ವಾಚಕರ ಮನ ಸ್ಸಿನ ಮೇಲೆಯೂ ಕಿವಿಯ ಮೇಲೆಯೂ ವಿಶೇಷ ಪರಿಣಾಮವನ್ನುಂಟುಮಾಡುತ್ತದೆ.

ಹದಿನೈದನೆಯ ಶತಮಾನದ ಮತ್ತೊಬ್ಬ ಪ್ರಸಿದ್ಧ ಕವಿ ಪಿಲ್ಲಲಮರ್ರಿಪಿನ ವೀರಭದ್ರ. ಆತನ 'ಜೈಮಿನೀಭಾರತಮ್', 'ಶೃಂಗಾರ ಶಾಕುಂತಲಮ್' ಇವೆರಡೂ ಉಪಲಬ್ಧವಾಗಿವೆ. ಅವನ 'ಅವಸಾರ ದರ್ಪಣಮ್', 'ನಾರದೀಯಮ್', 'ಮಾಘ ಮಾಹಾತ್ಮ್ಯಮ್', 'ಪುರುಷಾರ್ಥ ಸುಧಾನಿಧಿ', 'ಮಾನಸೋಲ್ಲಾ ಸಸಾರಮ್'—ಇವು ನಷ್ಟವಾಗಿವೆ. ಪಾಂಡಿತ್ಯದೃಷ್ಟಿಯಿಂದ ಈತನು ಶ್ರೀನಾಥನಿಗಿಂತ ಉನ್ನತಸ್ಥಾನವನ್ನು ಪಡೆಯುತ್ತಾನೆ.

ಈ ಕಾಲದಲ್ಲಿ ಇನ್ನೂ ಅನೇಕ ಗ್ರಂಥಗಳು ರಚಿತವಾಗಿವೆ. ಅವುಗಳೆಲ್ಲ ಪುರಾಣಗಳು, ಲಕ್ಷಣಗ್ರಂಥಗಳು ಅಥವಾ ಶಾಸ್ತ್ರಗ್ರಂಥಗಳು. ಒಟ್ಟಿನಲ್ಲಿ ತೆಲುಗು ಸಾಹಿತ್ಯದ ಹನ್ನೊಂದನೆಯ ಶತಮಾನದಿಂದ ಹದಿನೈದನೆಯ ಶತಮಾನದ ವರೆಗಿನ ಕಾಲವನ್ನು ಪುರಾಣ ಯುಗ ಅಥವಾ ಭಾಷಾಂತರ ಯುಗವೆಂದು ಕರೆಯುತ್ತಾರೆ.

ಆದರೆ ಆ ಕಾಲವು ಪೂರ್ಣವಾಗಿ ಅದೇ ಆಗಿರಲಿಲ್ಲ. ಇದುವರೆಗೆ ಗೊತ್ತಿರುವ ಹಾಗೆ ನನ್ನೆ ಚೋಡನ 'ಕುಮಾರಸಂಭವ' ಶ್ರೀನಾಥನ 'ಹರಿವಿಲಾಸ' 'ಕ್ರೀಡಾಭಿರಾಮಂ,' ಶತಕ, ದಂಡಕ ಮೊದಲಾದುವುಗಳು ಪುರಾಣಗಳೂ ಅಲ್ಲ ಭಾಷಾಂತರಗಳೂ ಅಲ್ಲ. ಈ ಶತಮಾನಗಳಲ್ಲೆಲ್ಲಾ ಆರ್ಷೇಯವಾದ ವೈದಿಕಧರ್ಮವನ್ನು ಪ್ರಚಾರಮಾಡುವುದು ಮುಖ್ಯಧ್ಯೇಯವಾಗಿದ್ದುದರಿಂದ ಪುರಾಣೇತಿಹಾಸಗಳ ಭಾಷಾಂತರವಾಗಿರುವುದು ನಿಜ. ಆದುದರಿಂದಲೇ ಆಗಿನ ಕಾವ್ಯಗಳು ಪ್ರಪಂಚವಿಷಯುಗಳನ್ನು ಸ್ಪಷ್ಟವಾಗಿ ತಿಳಿಸುವ ಪುರಾಣೇತಿಹಾಸಗಳನ್ನು ಮಾರ್ಪಡಿಸಿ ಸ್ವತಂತ್ರಮಾರ್ಗದಲ್ಲಿ ಹೊರಡಲು ಇಷ್ಟಪಡಲಿಲ್ಲ.

**ಪ್ರಬಂಧ ಕವಿಗಳ:**—೧೬ ನೆಯ ಶತಮಾನದಿಂದ ೧೯ ನೆಯ ಶತಮಾನದ ವರೆಗಿನ ಕಾಲಕ್ಕೆ ತೆಲುಗು ಸಾಹಿತ್ಯದಲ್ಲಿ ಪ್ರಬಂಧ ಯುಗವೆಂದು ಹೆಸರು. ಇದಕ್ಕೆ ಹಿಂದೆ ಪ್ರಬಂಧಗಳಿರಲಿಲ್ಲವೆಂದಲ್ಲ; ಈಗಿನ ಕಾಲದ ಪ್ರತಿಯೊಬ್ಬ ಕವಿಯೂ ಒಂದು ಪ್ರಬಂಧವನ್ನು ರಚಿಸಬೇಕೆಂಬ ಹಿರಿಯಾಸೆಯಿಂದಲೇ ಹೊರಟಿರುವ ಹಾಗೆ ಕಾಣುತ್ತದೆ. ಹಿಂದೆಯೇ ತಿಳಿಸಿರುವಂತೆ ತೆಲುಗು ಪ್ರಬಂಧಗಳು ಸಂಸ್ಕೃತದ ಮಹಾಕಾವ್ಯಗಳಂತಹುವು. ೧೮ ವರ್ಣನೆಗಳಿಂದ ಕೂಡಿದುವು. ಮಹಾಕಾವ್ಯವನ್ನು ಮಾಡಬೇಕೆಂಬ ಛಲದಿಂದ ಕೆಲವು ಕೃತಕಗಳಾಗಿರುವುದೂ ಉಂಟು. ಅನೇಕವು ಸ್ವಾತಂತ್ರ್ಯಮಾರ್ಗದಲ್ಲಿ ಹೊರಟು ಉತ್ತಮ ಕಾವ್ಯಗಳಾಗಿವೆ. ರಾಮರಾಜಭೂಷಣನ 'ವಸುಚರಿತ'ವು ಸಂಸ್ಕೃತಕ್ಕೂ ಭಾಷಾಂತರವಾಗುವ ಗೌರವವನ್ನು ಪಡೆಯಿತು. ಆರಂಭಕಾಲದ ಕವಿಗಳು ಪ್ರಬಂಧಲಕ್ಷಣಗಳನ್ನು ವಿಶೇಷವಾಗಿ ಪಾಲಿಸಲು ಪ್ರಯತ್ನಿಸದಿದ್ದುದರಿಂದ ಅವರ ಗ್ರಂಥಗಳಲ್ಲಿ ಒಂದು ನವೀನತೆ, ಸೌಲಭ್ಯ, ಮುಂದಿನ ಕಾವ್ಯಗಳಲ್ಲಿಲ್ಲದ ಒಂದು ಸಹಜತೆ ಕಾಣುತ್ತವೆ. ಮುಂದೆ ಮುಂದೆ ನಿಯಮಪಾಲನೆ ಹೆಚ್ಚಿದಷ್ಟೂ ಕೃತಕತೆಯೂ ಸ್ಪಷ್ಟವಾಗಿದೆ.

ಆಂಧ್ರಭೋಜನೆಂದು ಪ್ರಸಿದ್ಧನಾದ ಕೃಷ್ಣದೇವರಾಯನೂ ಆತನ ಆಸ್ಥಾನ ಕವಿಗಳೂ ಪ್ರಬಂಧಮಾರ್ಗದ ಸ್ಥಾಪಕರು ಮತ್ತು ಪೋಷಕರು. ಪ್ರಬಂಧಕಾರರಲ್ಲೆಲ್ಲಾ 'ಮನುಚರಿತ'ದ ಕರ್ತೃವಾದ ಅಲ್ಲಸಾನಿ ಪೆದ್ದನ್ನನೇ ಅಗ್ರೇಸರ. ಈತನು ಕೃಷ್ಣದೇವರಾಯನ ಆಸ್ಥಾನಕವಿ. 'ಸ್ವಾರೋಚಿಷ ಮನುಸಂಭವಮ್' ಎಂಬುದು 'ಮನುಚರಿತ'ದ ಮತ್ತೊಂದು ಹೆಸರು. ಮಾರ್ಕಂಡೇಯ ಪುರಾಣಾಂತರ್ಗತವಾದ ಸ್ವಾರೋಚಿಷ ಮನುವಿನ ಜನನಕ್ಕೆ ಸಂಬಂಧಪಟ್ಟದು. ಪ್ರವರನೆಂಬ ವೈದಿಕಬ್ರಾಹ್ಮಣ ಯುವಕನು ಸಿದ್ಧಮುಖ್ಯನೊಬ್ಬನಿಂದ ದತ್ತವಾದ ದಿವ್ಯಮಂತ್ರಶಕ್ತಿಯ ಸಹಾಯದಿಂದ ಹಿಮಾಲಯಕ್ಕೆ ಹೋಗುತ್ತಾನೆ. ಅಲ್ಲಿ ಮಂಜಿನ ಮೇಲೆ ಓಡಾಡುತ್ತಿದ್ದಾಗ

ಮಂತ್ರಶಕ್ತಿಯು ಮಾಯವಾಗಿ ತನ್ನ ನಿವಾಸಕ್ಕೆ ಹಿಂತಿರುಗುವುದಕ್ಕೆ ಅಶಕ್ತನಾಗುತ್ತಾನೆ. ಈ ಸಂದರ್ಭದಲ್ಲಿ ವರೂಥಿನಿ ಎಂಬ ಅಪ್ಸರ ಕನ್ಯೆಯೊಬ್ಬಳು ಅವನನ್ನು ನೋಡಿ ಮೋಹಿತಳಾಗುವಳು. ಆದರೆ ಪ್ರವರನು ಸಂಯಮಿಯಾದುದರಿಂದ ಅವಳಲ್ಲಿ ಮನಸ್ಸುಮಾಡದೆ ಅಗ್ನಿದೇವತೆಯ ಸಹಾಯದಿಂದ ತನ್ನ ಮನೆಯನ್ನು ಸೇರುವನು. ಇದೇ ವೇಳೆಯಲ್ಲಿ ಆ ಗಂಧರ್ವಕನ್ಯೆಯಲ್ಲಿ ಆಸಕ್ತನಾಗಿ ಅವಳಿಂದ ತಿರಸ್ಕೃತನಾದ ಗಂಧರ್ವನೊಬ್ಬನು ಪ್ರವರನ ವಿಷಯವನ್ನರಿತು ಅವನ ಆಕಾರವನ್ನು ತಾಳಿ ಅವಳ ಪ್ರೇಮವನ್ನು ಪಡೆಯುವುದರಲ್ಲಿ ಜಯಶೀಲನಾಗುವನು. ಅವರಿಗೆ ಸ್ವಾರೋಚಿಷಮನುವಿನ ತಂದೆಯಾದ ಸ್ವಾರೋಚಿಷನು ಜನಿಸುವನು. ಕುಮಾರ ಸಂಭವದಲ್ಲಿ ಹೇಗೆ ವಾಚಕರು ಕುಮಾರನನ ಜನನಕ್ಕಿಂತ ಶಿವಪಾರ್ವತಿಯರ ಪ್ರಣಯ ಪ್ರಸಂಗದಲ್ಲಿ ಹೆಚ್ಚು ಆಸಕ್ತರಾಗುವರೋ ಹಾಗೆಯೇ ಇಲ್ಲಿಯೂ ಸ್ವಾರೋಚಿಷ ಮನುವಿನ ಜನನಕ್ಕಿಂತ ಪ್ರವರವರೂಥಿನಿಯರ ಪ್ರಣಯದಲ್ಲಿ ಮೋಹಿತರಾಗುವರು. ಈ ಎರಡು ಪಾತ್ರಗಳ ರಚನೆಗಾಗಿಯೇ ಪೆದ್ದನ್ನನಿಗೆ ವಿಶೇಷ ಪ್ರಶಸ್ತಿ ದೊರೆತಿರುವುದು. ಈ ಗ್ರಂಥವು ಕೃಷ್ಣದೇವರಾಯನಿಗೆ ಅಂಕಿತವಾಗಿದೆ. ಇದನ್ನು ಅವನು 'ಕಾವ್ಯರತ್ನ'ವೆಂದು ಗೌರವಿಸಿದನು. ಅಷ್ಟೇ ಅಲ್ಲದೆ ಪರಿತುಷ್ಟನಾದ ಚಕ್ರವರ್ತಿಯು ಈತನಿಗೆ 'ಆಂಧ್ರಕವಿತಾಪಿತಾಮಹ' ಎಂಬ ಬಿರುದನ್ನಿತ್ತು ಕವಿಗಂಡಪೆಂಡೆಯವನ್ನು ತಾನೇ ತೊಡಿಸಿ ತನ್ನ ಕೈಯಿಂದಲೇ ಆನೆಯ ಮೇಲಕ್ಕೇರಿಸಿ ಕವಿಯನ್ನು ಬೀದಿಯಲ್ಲೆಲ್ಲ ಮೆರವಣಿಗೆ ಮಾಡಿಸಿದನು. ಪೆದ್ದನ್ನನು 'ಹರಿಕಥಾಸಾರಮು' ಎಂಬ ಮತ್ತೊಂದು ಗ್ರಂಥವನ್ನೂ ರಚಿಸಿದ್ದಾನೆ. ಆದರೆ ಅದು ಸಿಕ್ಕಿಲ್ಲ. ಇವನ ಶೈಲಿಯು ಸರಳವೂ ಗಂಭೀರವೂ ಆಗಿದೆ. ರಸಚಿತ್ರಣ, ಭಾವಕಲ್ಪನದೃಷ್ಟಿಗಳಿಂದ ಇವನನ್ನು ಮೀರಿಸುವವರು ಇವನ ಕಾಲದಲ್ಲಾರೂ ಇರಲಿಲ್ಲ.

ಕೃಷ್ಣದೇವರಾಯನ ಆಸ್ಥಾನಕವಿಗಳಲ್ಲಿ ಮತ್ತೊಬ್ಬನಾದ ನಂದೀತಿಮ್ಮಣ್ಣನೆಂಬುವನು 'ಪಾರಿಜಾತಾಪಹರಣ'ವೆಂಬ ಪ್ರಬಂಧವನ್ನು ರಚಿಸಿದ್ದಾನೆ.* ಸತ್ಯಭಾಮೆಯ ಪಾತ್ರ ನಿರ್ಮಾಣದಲ್ಲಿ ಆತನು ತನ್ನ ಸರ್ವಶಕ್ತಿಯನ್ನೂ ವಿನಿಯೋಗ ಮಾಡಿದ್ದಾನೆ. ವಸ್ತುವನ್ನು ಹರಿವಂಶದಿಂದ ಆರಿಸಿಕೊಂಡಿದ್ದರೂ ಸತ್ಯಭಾಮೆಯ ಪಾತ್ರದಲ್ಲಿ ವಾಚಕರಿಗೆ ಆತ್ಮೀಯತೆಯುಂಟಾಗಿರುವುದು ತಿಮ್ಮಣ್ಣನ ಪ್ರತಿಭಾವೈಖರಿಯಿಂದ. ಭಾಗವತದಲ್ಲಿ ರಾಧಾ ಪಾತ್ರ ನಿರ್ಮಾಣವು ಆಂಧ್ರರಿಗೆ ವಿಶಿಷ್ಟವಾದ ರೀತಿ

---

* ಈ ಗ್ರಂಥವನ್ನು ರಚಿಸುವುದರಲ್ಲಿ ತಿಮ್ಮಣ್ಣನು ಕನ್ನಡ ಕವಿಯಾದ ರುದ್ರಭಟ್ಟನಿಗೆ ಬಹುಮಟ್ಟಿಗೆ ಋಣಿಯಾಗಿದ್ದಾನೆ. ಆತನ 'ಜಗನ್ನಾಥವಿಜಯದ' ಛಾಯೆ ಈತನ ಗ್ರಂಥದಲ್ಲಿ ಅನೇಕ ಕಡೆ ಕಾಣುತ್ತದೆ.

ಯಲ್ಲಿದೆಯೆಂದು ಕೆಲವರ ಮತ. ಸತ್ಯಳ ನಿರ್ಮಾಣವೂ ಆಂಧ್ರರದೇ ಆಗಿರುವುದು ಇನ್ನೂ ವಿಶೇಷ. ರಾಧೆಯು ನಿಸ್ವಾರ್ಥಪ್ರೇಮಿ, ಅಸೂಯಾರಹಿತಳು. ರುಕ್ಮಿಣಿಯ ಪ್ರೇಮದಲ್ಲಿ ಮಹೋನ್ನತವಾದ ಭವ್ಯತೆಯಿದೆ; ದೈವತ್ವವಿದೆ. ಅವಳು ನಮ್ಮ ಒಳ ಗಣ್ಣಿಗೆ ಪವಿತ್ರಮೂರ್ತಿಯಂತೆ ಭಾಸವಾಗುತ್ತಾಳೆ. ತನ್ನ ದೈವತ್ವವನ್ನೂ ಪತಿಯ ದೌರ್ಬಲ್ಯವನ್ನೂ ಲೋಕಕ್ಷೇಮವನ್ನೂ ಅರಿತವಳು. ಸತ್ಯಳಾದರೋ ಸ್ವಾರ್ಥಳು, ಆತ್ಮಾಭಿಮಾನಿ, ಪತಿಯ ಪ್ರೇಮ ತನಗೇ ಮೀಸಲು; ಪರಸ್ಪರ್ಶ ಕೂಡ ಆಗದೆಂಬ ಅಸೂಯಾಪ್ರಕೃತಿಯವಳು. ಕಥೆಯ ಪ್ರಕಾರ ಕೃಷ್ಣನು ಒಂದು ಸಲ ರುಕ್ಮಿಣಿಗೆ ಒಂದು ಪಾರಿಜಾತಪುಷ್ಪವನ್ನು ಕೊಡುವನು. ಈ ವಿಷಯವು ನಾರದಮುಖೇನ ಸತ್ಯಳಿಗೆ ತಿಳಿಯುವುದು. ಸರಿ; ಪ್ರೇಮಕಲಹ ಪ್ರಾರಂಭವಾಗುವುದು. ಅವಳನ್ನು ತೃಪ್ತಿಪಡಿಸುವುದಕ್ಕಾಗಿ ಕೃಷ್ಣನು ಅವಳ ಕಾಲಿಗೆ ಬಿದ್ದು ಪಾರಿಜಾತವೃಕ್ಷವನ್ನೇ ತರುವುದಾಗಿ ವಾಗ್ದಾನಮಾಡಿ ಇಂದ್ರನೊಡನೆ ಹೋರಾಡಿ ಆ ವೃಕ್ಷವನ್ನೇ ತಂದು ಅವಳ ಅಂಗಳದಲ್ಲಿ ಪ್ರತಿಷ್ಠಿಸುವನು. ಒಂದು ಸಲ ಕೃಷ್ಣದೇವರಾಯನ ಮಹಿಷಿಯೊಬ್ಬಳು ರಾಜನ ಕಡೆ ಕಾಲುಚಾಚಿ ಮಲಗಲು ರಾಜನಿಗೆ ಕೋಪಬಂದಿ ತೆಂದೂ ಕ್ರುದ್ಧನಾದ ರಾಜನನ್ನು ಸಮಾಧಾನಮಾಡುವುದಕ್ಕಾಗಿ ಪುರಾಣದಲ್ಲಿಯೂ ಇಂತಹ ಪ್ರಸಂಗವುಂಟೆಂದು ತೋರಿಸುವ ಈ ಪ್ರಬಂಧವನ್ನು ಬರೆಯಬೇಕೆಂದು ರಾಣಿಯು ಕವಿಯನ್ನು ಕೇಳಿಕೊಂಡಳೆಂದೂ ಅದರಂತೆ ಈ ಪ್ರಬಂಧವನ್ನು ಕೇಳಿ ರಾಜನ ಆಗ್ರಹ ಪರಿಹಾರವಾಯಿತೆಂದೂ ಒಂದು ದಂತ ಕಥೆಯುಂಟು. ಆದರೆ ಅದಕ್ಕೆ ವಿಶೇಷ ಆಧಾರವಿಲ್ಲ. ಆದರೂ ಸತ್ಯಳ ಪಾತ್ರರಚನೆ ಬಹು ಆಕರ್ಷಕವಾಗಿದೆ. ತಿಮ್ಮಣ್ಣನ ಶೈಲಿ ಸುಲಭವಾದುದು. ಭಾವ ಅತಿ ಕೋಮಲ, ಪ್ರತಿಭೆ ಸುಸಂಸ್ಕೃತ ವಾದುದು. ತೆಲುಗು ಸಾಹಿತ್ಯದಲ್ಲಿ ಆತನ ಗ್ರಂಥಕ್ಕೆ ಉತ್ತಮಸ್ಥಾನವಿದೆ.

ಧೂರ್ಜಟಿಯೆಂಬುವನು ಕೃಷ್ಣದೇವರಾಯನ ಆಸ್ಥಾನದ ಬೇರೊಬ್ಬ ಕವಿ. ಇವನು 'ಕಾಳಹಸ್ತಿ ಮಹಾತ್ಮ್ಯಂ', 'ಕಾಳಹಸ್ತೀಶ್ವರ ಶತಕಂ' ಎಂಬ ಎರಡು ಗ್ರಂಥ ಗಳನ್ನು ರಚಿಸಿದ್ದಾನೆ. ಶತಕವು ಹೆಚ್ಚು ಭಾವನಾಮಯವಾಗಿದೆ. ಧೂರ್ಜಟಿಯು ವಿಶೇಷ ಧಾರ್ಮಿಕನಾದುದರಿಂದ ತನ್ನ ಕಾವ್ಯವನ್ನು ತನ್ನ ಆಶ್ರಯದಾತನಿಗೆ ಅಂಕಿತ ಮಾಡದೆ ಕಾಳಹಸ್ತೀಶ್ವರನಿಗೆ ಅರ್ಪಣೆ ಮಾಡಿದನು. ಆತನ ಮೊಮ್ಮಗನಾದ ಧೂರ್ಜಟಿಯು 'ಕೃಷ್ಣದೇವರಾಯ ವಿಜಯಮ್' ಎಂಬ ಐತಿಹಾಸಿಕ ಕಾವ್ಯವನ್ನು ರಚಿಸಿ ರಾಜನಿಗೆ ಅಂಕಿತಮಾಡಿದನು.

ಅಯ್ಯಲುರಾಜು ರಾಮಭದ್ರನೂ ಈ ಕಾಲದವನೇ. 'ಸಕಲ ಕಥಾಸಾರ ಸಂಗ್ರಹಂ,' 'ರಾಮಾಭ್ಯುದಯಮ್' ಇವೆರಡೂ ಈತನ ಗ್ರಂಥಗಳು. ಮಾದಯ್ಯ

ಗಾರಿ ಮಲ್ಲನ್ನನು 'ರಾಜಶೇಖರಚರಿತ್ರ'ದ ಕರ್ತೃ. ಇದು ಅಷ್ಟು ಜನಪ್ರಿಯ ವಾಗಿಲ್ಲ.

ಅಲ್ಲಸಾನಿ ಪೆದ್ದಣ್ಣ, ನಂದೀ ತಿಮ್ಮಣ್ಣ, ಅಯ್ಯಲುರಾಜು ರಾಮಭದ್ರಯ್ಯ, ಧೂರ್ಜಟಿ, ಮಾದಯ್ಯಗಾರಿ ಮಲ್ಲನ್ನ, ಪಿಂಗಳೀ ಸೂರನ್ನ, ರಾಮರಾಜಭೂಷಣ, ತೆನಾಲಿ ರಾಮಕೃಷ್ಣ ಇವರು ಕೃಷ್ಣದೇವರಾಯನ ಆಸ್ಥಾನದ ಅಷ್ಟದಿಗ್ಗಜಗಳೆಂದು ಪ್ರತೀತಿ. ಆದರೆ ಐತಿಹಾಸಿಕ ದೃಷ್ಟಿಯಿಂದ ನೋಡಿದರೆ ಕೊನೆಯ ಮೂವರು ಕೃಷ್ಣದೇವರಾಯನ ಕಾಲದವರಲ್ಲ. ಸಾಮಾನ್ಯಜನ ಉತ್ತಮ ಕವಿವರ್ಗವನ್ನು ಒಟ್ಟುಗೂಡಿಸಿ ಚಕ್ರವರ್ತಿಯ ಆಸ್ಥಾನದಲ್ಲಿದ್ದಂತೆ ಭಾವಿಸಿದೆ.

ಕವಿಜನಾಶ್ರಯನಾದ ಕೃಷ್ಣದೇವ ಸಾರ್ವಭೌಮನು ಸ್ವತಃ ಉದ್ದಾಮಕವಿ ಪುಂಗವ. ಆತನ 'ಆಮುಕ್ತಮಾಲ್ಯದ' ಅಥವಾ 'ವಿಷ್ಣುಚಿತ್ತೀಯಮ್' ತೆಲುಗು ಪಂಚಮಹಾಕಾವ್ಯಗಳಲ್ಲೊಂದು. ಪೆದ್ದನ್ನನ 'ಮನುಚರಿತ', ಕೃಷ್ಣದೇವ ರಾಯನ 'ಆಮುಕ್ತಮಾಲ್ಯದ,' ರಾಮರಾಜಭೂಷಣನ 'ವಸುಚರಿತ', ಶ್ರೀನಾಥನ 'ಶೃಂಗಾರನೈಷಧ' ತೆನಾಲಿ ರಾಮಕೃಷ್ಣನ 'ಪಾಂಡುರಂಗ ಮಾಹಾತ್ಮ್ಯ' ಇವು ತೆಲುಗುಭಾಷೆಯ ಪಂಚಮಹಾಕಾವ್ಯಗಳು. ಕೊನೆಯದರ ಸ್ಥಾನದಲ್ಲಿ ಕೆಲವರು ಪಿಂಗಳೀ ಸೂರನ್ನನ 'ಕಲಾಪೂರ್ಣೋದಯ' ಅಥವಾ 'ಪ್ರಭಾವತೀ ಪ್ರದ್ಯುಮ್ನ' ವನ್ನೋ ಅಥವಾ ಚಮಕೂರಿ ವೆಂಕಟಕವಿಯ 'ವಿಜಯ ವಿಲಾಸ'ವನ್ನೋ ಸೇರಿಸು ತ್ತಾರೆ. ತೆಲುಗು ಪಂಡಿತರಾಗಬೇಕಾದರೆ ಸಂಸ್ಕೃತ ಪಂಚಮಹಾಕಾವ್ಯಗಳಾದ 'ರಘುವಂಶ,' 'ಕುಮಾರಸಂಭವ', 'ಕಿರಾತಾರ್ಜುನೀಯ', 'ಶಿಶುಪಾಲವಧ', 'ನೈಷಧ'—ಇವುಗಳನ್ನೂ ತೆಲುಗು ಪಂಚಮಹಾಕಾವ್ಯಗಳನ್ನೂ ಅಭ್ಯಾಸಮಾಡಿರ ಬೇಕೆಂಬುದು ಇಂದಿಗೂ ಪದ್ಧತಿಯಾಗಿದೆ.

'ಆಮುಕ್ತಮಾಲ್ಯದ' ಕರ್ತೃತ್ವದ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಪೀಠಿಕಾ ಭಾಗದಲ್ಲಿ ಕೃಷ್ಣದೇವರಾಯನ ವಿಜಯಯಾತ್ರಾ ಸಂಬಂಧವಾದ ವರ್ಣನೆಗಳ ಸಂಬಂಧದಲ್ಲಿ ಪೆದ್ದಣ್ಣನ ಕೈವಾಡವು ಕಾಣುವುದು ನಿಜ. ಆದರೂ ಇತರ ಭಾಗಗಳಲ್ಲಿ ಕೃಷ್ಣದೇವರಾಯನ ಮುದ್ರೆ ಪೆದ್ದಣ್ಣನಿಗಿಂತ ಭಿನ್ನವಾಗಿ ಕಂಡುಬರುತ್ತದೆ. ಪೆದ್ದಣ್ಣನ ಗಾಂಭೀರ್ಯವಿದ್ದರೂ ಕೃಷ್ಣದೇವರಾಯನ ಶೈಲಿ ಬಳಸು ; ಪೆಡಸು ; ಅಪೂರ್ವ ಪದಪ್ರಯೋಗಗಳು ಹೆಚ್ಚು ; ವರ್ಣನೆಯೇನೋ ಸ್ವಾಭಾವಿಕವಾದುವೂ ಪರಿಚಿತ ವಾದುವುಗಳೂ ಆಗಿವೆ. ಭಾವಗಳ ಓಟ, ಸಂಪ್ರದಾಯಬದ್ಧವಾದ ವರ್ಣನೆ, ಧಾರ್ಮಿಕ ಮನೋಭಾವನೆ, ಶಾಂತವಾದ ಗ್ರಾಮಜೀವನ, ಪವಿತ್ರವಾದ ದೇವಾ ಲಯಗಳ ವಾತಾವರಣ ಇವುಗಳ ಅನುಭವಕ್ಕೆ 'ಆಮುಕ್ತಮಾಲ್ಯದ'ವನ್ನು ಓದ

ಬೇಕು. ಈ ವಿಷಯುಗಳಲ್ಲೆಲ್ಲ ಪೆದ್ದಣ್ಣನ ಅಭಿರುಚಿಯೂ ದೃಷ್ಟಿಯೂ ತೀರ ಭಿನ್ನ, ಆದುದರಿಂದ ಇದರ ಕರ್ತೃತ್ವದಲ್ಲಿ ಶಂಕಿಸಬೇಕಾದುದಿಲ್ಲ.

'ಆಮುಕ್ತಮಾಲ್ಯದ'ವು ಆಗ ತಾನೇ ರೂಢಿಗೆ ಬರುತ್ತಿದ್ದ ಕಾವ್ಯಶೈಲಿಯಲ್ಲಿ ರಚಿತವಾಗಿದೆ. ವಿಷ್ಣುಭಕ್ತರಾದ ಶ್ರೀವಿಲ್ಲಿಪುತ್ತೂರಿನ ಪೆರಿಯಾಳ್ವಾರ್ರವರ ಪುತ್ರಿಯಾದ ಆಂಡಾಳ್ ಅಥವಾ ಗೋದಾದೇವಿಯೆಂಬ ಭಕ್ತೆಗೂ ಶ್ರೀ ರಂಗನಾಥನಿಗೂ ನಡೆದ ವಿವಾಹವೇ ಇದರ ಮುಖ್ಯಕಥಾಗರ್ಭ. ಕೃಷ್ಣದೇವರಾಯನು ಕಳಿಂಗದೇಶದ ವಿಜಯಯಾತ್ರೆಗೆ ಹೋಗುತ್ತಾ ದಾರಿಯಲ್ಲಿ ಶ್ರೀಕಾಕುಳದ ಆಂಧ್ರ ಮಧುಸೂದನ ಸ್ವಾಮಿಯನ್ನು ದರ್ಶನಮಾಡುವುದಕ್ಕಾಗಿ ಹೋಗಿ ರಾತ್ರಿ ಅಲ್ಲಿ ತಂಗಿರಲು ದೇವರು ಸ್ವಪ್ನದಲ್ಲಿ ಬಂದು ಗೋದಾದೇವಿಯ ಚರಿತ್ರೆಯನ್ನು ದೇಶಭಾಷೆಯಲ್ಲೆಲ್ಲಾ ಉತ್ತಮವಾದ ತೆಲುಗುಭಾಷೆಯಲ್ಲಿ ರಚಿಸೆಂದು ಆಜ್ಞೆ ಮಾಡಲು ತದನುಗುಣವಾಗಿ ತಾನು 'ಆಮುಕ್ತಮಾಲ್ಯದ'ವನ್ನು ರಚಿಸಿರುವಂತೆ ಕೃಷ್ಣದೇವರಾಯನೇ ಗ್ರಂಥಾರಂಭದಲ್ಲಿ ಹೇಳಿಕೊಂಡಿದ್ದಾನೆ. ಸ್ವಪ್ನದಲ್ಲಿ ಕಾಣಿಸಿಕೊಂಡ ದೇವರೂ ತೆಲುಗೇ ದೇಶಭಾಷೆಯಲ್ಲೆಲ್ಲಾ ಉತ್ತಮವಾದುದೆಂದು ಹೇಳಿದರೆಂದು ಉಲ್ಲೇಖಮಾಡಿರುವುದರಿಂದ ಆ ಭಾಷೆಯಲ್ಲಿ ಅವನಿಗೆ ಎಷ್ಟು ಅಭಿಮಾನವಿತ್ತೆಂಬುದು ಸ್ಪಷ್ಟವಾಗುವುದು. ಐತಿಹಾಸಿಕದೃಷ್ಟಿಯಿಂದಲೂ 'ಆಮುಕ್ತಮಾಲ್ಯದ'ವು ಬಹು ಪ್ರಮುಖವಾದ ಗ್ರಂಥ. ಈಗ್ರಂಥದ ಆಶ್ವಾಸಾಂತ್ಯಗದ್ಯಗಳು ಇತಿಹಾಸಗಳ ವಿಷಯಕವಾದ ಭಂಡಾರದಂತಿವೆ. ಇವುಗಳಲ್ಲಿ ಕವಿಯು ತನ್ನ ದಂಡಯಾತ್ರೆಗಳನ್ನೆಲ್ಲ ಕ್ರಮವಾಗಿ ವರ್ಣಿಸಿದ್ದಾನೆ. ದಕ್ಷಿಣಭಾರತದ ಐತಿಹಾಸಿಕ ಹಿನ್ನೆಲೆಯಲ್ಲಿ ಅನೇಕ ವೈಷ್ಣವಾಚಾರಗಳ ಪದ್ಧತಿಗಳು ಇಲ್ಲಿ ಚಿತ್ರಿತವಾಗಿವೆ. ನಾಲ್ಕನೆಯ ಸರ್ಗದಲ್ಲಿ ತನಗೆ ಅಭಿಮತವಾದ ರಾಜನೀತಿಯನ್ನು ವಿವರಿಸಿದ್ದಾನೆ.

ಪಂಚಮಹಾಕಾವ್ಯದಲ್ಲಿ ಒಂದಾದ 'ವಸುಚರಿತ್ರ'ವು ಶೈಲಿಯ ಕ್ಲಿಷ್ಟತೆಯ ದೃಷ್ಟಿಯಿಂದ 'ಮನುಚರಿತ್ರ'ಕ್ಕೂ 'ಆಮುಕ್ತಮಾಲ್ಯದ'ಕ್ಕೂ ಮಧ್ಯಸ್ಥಾನವನ್ನು ಆಕ್ರಮಿಸಿದೆ. ಇದರ ಕರ್ತೃವಾದ 'ರಾಮರಾಜಭೂಷಣ'ನೆಂಬ ಹೆಸರುಳ್ಳ ಭಟ್ಟಮೂರ್ತಿಯು ಸದಾಶಿವನ ಪೋಷಕರಾದ ಆರುವೀಡು ಸಹೋದರರ ಆಸ್ಥಾನಕವಿ. 'ರಾಮರಾಜಭೂಷಣ' ಎಂಬುದು ರಾಮರಾಯನು ಕವಿಗೆ ಕೊಟ್ಟ ಬಿರುದು. ರಾಮರಾಜ ಭೂಷಣನೂ ಭಟ್ಟಮೂರ್ತಿಯೂ ಏಕವ್ಯಕ್ತಿಯೇ ಭಿನ್ನವ್ಯಕ್ತಿಗಳೇ ಎಂಬ ವಿಷಯದಲ್ಲಿ ಭಿನ್ನಾಭಿಪ್ರಾಯವುಂಟಾಗಿ ಏಕವ್ಯಕ್ತಿಯೆಂಬುದಾಗಿಯೇ ತೀರ್ಮಾನವಾಗಿರುವಂತೆ ತೋರುತ್ತದೆ. ಈತನು 'ವಸುಚರಿತ್ರಮು', 'ಹರಿಶ್ಚಂದ್ರ ನಳೋಪೋಖ್ಯಾನಮು', 'ನರಸಭೂಪಾಲೀಯಮು' ಎಂಬ ಮೂರು ಗ್ರಂಥಗಳನ್ನು

ರಚಿಸಿದ್ದಾನೆ. ಇವುಗಳಲ್ಲಿ 'ವಸುಚರಿತ್ರ'ವು ಪ್ರಸ್ಥಾನದೇಶದ ರಾಜನಾದ ವಸುಮಹಾರಾಜನಿಗೂ ಕೋಲಾಹಲಪರ್ವತ ರಾಜಪುತ್ರಿಯಾದ ಗಿರಿಕನ್ಯೆಗೂ ನಡೆದ ವಿವಾಹವನ್ನು ವರ್ಣಿಸುವ ಕಾವ್ಯ. ಪೆದ್ದನ್ನನ 'ಮನುಚರಿತ್ರ'ದ ಮಾದರಿಯಲ್ಲಿ ರಚಿತವಾದುದು. ಪ್ರಬಂಧಮಾರ್ಗದಲ್ಲಿ 'ವಸುಚರಿತ್ರೆ'ಯು ಮತ್ತೊಂದು ಮೆಟ್ಟಲನ್ನು ಮುಂದುವರಿದು ಮುಂದಿನ ಗ್ರಂಥಕಾರರಿಗೆ ಮಾರ್ಗದರ್ಶಕವಾಗಿದೆ. ಆದುದರಿಂದಲೇ ಮುಂದಿನ ತೆಲುಗು ಗ್ರಂಥಗಳನ್ನು 'ಪಿಲ್ಲವಸುಚರಿತ್ರಮು' ಎಂಬ ಹೆಸರಿನಿಂದ ಕರೆಯಲ್ಪಡುವ ರೂಢಿಯುಂಟಾದುದು. ಇದು ತಿರುಮಲರಾಯನಿಗೆ ಅರ್ಪಿಸಲ್ಪಟ್ಟಿದೆ. 'ಹರಿಶ್ಚಂದ್ರನಳೋಪಾಖ್ಯಾನ'ವು ಹರಿಶ್ಚಂದ್ರ ನಳಮಹಾರಾಜರ ಕಥೆಗಳನ್ನು ಏಕಾಕಾರವಾದ ಶಬ್ದಗಳಿಂದ ವರ್ಣಿಸುವ ದ್ವ್ಯರ್ಥಕಾವ್ಯ. 'ನರಸಭೂಪಾಲೀಯ'ವು ಅಲಂಕಾರಗ್ರಂಥ. ಕವಿಯು ಇದನ್ನು ತಿರುಮಲರಾಯನ ಅಳಿಯನಾದ ಪೋಚಿರಾಜನರಸರಾಜು ಎಂಬುವನಿಗೆ ಅಂಕಿತಮಾಡಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಇದಕ್ಕೆ 'ಕಾವ್ಯಾಲಂಕಾರ ಚೂಡಾಮಣಿ' ಎಂಬ ಹೆಸರೂ ಉಂಟು.

ಕೃಷ್ಣದೇವರಾಯನ ಆಸ್ಥಾನಕವಿಗಳಲ್ಲಿ ಒಬ್ಬನೆಂದು ಪ್ರತೀತಿ ಇರುವ ಪಿಂಗಳಿ ಸೂರನ್ನನೂ ತಿರುಮಲರಾಯನ ಕಾಲದಲ್ಲಿದ್ದವನು. 'ಪ್ರಭಾವತೀ ಪ್ರದ್ಯುಮ್ನಮು', 'ಕಳಾಪೂರ್ಣೋದಯಮು', 'ರಾಘವಪಾಂಡವೀಯಮು'—ಈ ಮೂರೂ ಈತನ ಗ್ರಂಥಗಳು. ಈತನು ಗಂಡೀಕೋಟೆಯ ನಂದ್ಯಾಲಕೃಷ್ಣರಾಜನ ಆಸ್ಥಾನಕವಿ. 'ಕಲಾಪೂರ್ಣೋದಯ'ದ ಕಥೆ ಪೂರ್ಣವಾಗಿ ಕವಿಯಿಂದ ಕಲ್ಪಿತವಾದುದು. ಪೌರಾಣಿಕವಲ್ಲ. ಆದರೂ ಬಹು ಸ್ವಾರಸ್ಯವಾಗಿದೆ. ದೇವೇಂದ್ರನ ಆಸ್ಥಾನವೇಶ್ಯೆಯಾದ ರಂಭೆಯು ನಳಕೂಬರನಲ್ಲಿ ಮನಸೋತು ತನ್ನ ರೂಪನ್ನು ಹೊಗಳಿಕೊಂಡು ಅವನಲ್ಲಿ ತನ್ನ ಪ್ರೇಮವನ್ನು ಹೇಳಿಕೊಳ್ಳುತ್ತಾಳೆ. ತನ್ನನ್ನು ತನ್ನ ಪ್ರಿಯನಿಂದ ಯಾರೂ ಬೇರ್ಪಡಿಸಲಾಗದಷ್ಟು ಆಳವಾದ ಪ್ರೇಮ ತಮ್ಮದೆಂದು ಜಂಬಕೊಚ್ಚಿಕೊಳ್ಳುತ್ತಾಳೆ. ಆದರೆ ನಾರದನು ಮಧ್ಯೆ ಬಂದು ಅವಳು ಬಹು ಬೇಗ ಮೋಸಹೋಗುವಳೆಂದು ಸೂಚಿಸುವನು. ದೇವತೆಗಳ ನಟರಾದ ಕಲಭಾಷಿಣಿ ಮತ್ತು ಮಣಿಕಂಧರರು ರಂಭಾನಳಕೂಬರರ ಪಾತ್ರವನ್ನು ಧರಿಸಿ ಮೂಲವ್ಯಕ್ತಿಗಳಿಗೆ ಮೋಸಮಾಡುವರು. ರಂಭೆಯು ಕೃತಕ ನಳಕೂಬರನಲ್ಲಿಯೂ ನಳಕೂಬರನು ಕೃತಕ ರಂಭೆಯಲ್ಲಿಯೂ ಅನುರಕ್ತರಾಗಿ ಕೊನೆಯಲ್ಲಿ ವಾಸ್ತವಾಂಶ ತಿಳಿದಾಗ ಇಬ್ಬರೂ ಪೆಚ್ಚಾಗುವರು. ಕಾವ್ಯದ ಮಧ್ಯೆ ಸೊಗಸಾದ ಹಾಸ್ಯ ಸನ್ನಿವೇಶಗಳು ಬರುತ್ತವೆ. ಇದು ಕವಿಕಲ್ಪಿತವಾಗಿ ಪ್ರಬಂಧ ಶೈಲಿಯಲ್ಲಿದ್ದರೂ ಬಹು ನಾಟಕೀಯವಾಗಿದೆ. ದಿವಂಗತ ಡಾ|| ಸಿ. ಆರ್. ರೆಡ್ಡಿಯವರು ಇದು ಬಹು ಉತ್ತಮಕಾವ್ಯವೆಂದು ಕೊಂಡಾಡಿದ್ದಾರೆ. 'ರಾಘವಪಾಂಡ

ವೀಯ'ವು, ಪಾಂಡಿತ್ಯಭೂಯಿಷ್ಠವಾಗಿದ್ದರೂ ಓದುವುದಕ್ಕೆ ಇಂಪಾಗಿದೆ. ಇದು ದ್ವ್ಯರ್ಥಕಾವ್ಯ. 'ರಾಮಾಯಣ ಭಾರತ ಕಥೆಗಳು ಒಟ್ಟಾಗಿ ಶ್ಲೇಷೆಯಿಂದ ವರ್ಣಿತವಾಗಿವೆ. 'ಪ್ರಭಾವತೀ ಪ್ರದ್ಯುಮ್ನ'ವು ಪೌರಾಣಿಕವಾದರೂ ಹೊಸರೀತಿಯಲ್ಲಿ ವರ್ಣಿತವಾಗಿದೆ. ರಾಕ್ಷಸರಾಜನಾದ ವಜ್ರನಾಭನ ಮಗಳು ಪ್ರಭಾವತಿಗೂ ಪ್ರದ್ಯುಮ್ನನಿಗೂ ನಡೆದ ವಿವಾಹ ಇದರ ವಸ್ತು. ಸರಳವಾದ ಶೈಲಿ, ಹಾಸ್ಯಭರಿತವಾದ ಸನ್ನಿವೇಶ, ಸಜೀವವಾದ ಪಾತ್ರ, ಆಕರ್ಷಕವಾದ ಸಂಭಾಷಣೆ, ಹೃದಯಗ್ರಾಹಕವಾದ ನಾಟಕೀಯತೆ ಇವುಗಳಿಂದ ಸೂರನ್ನನ ಕಾವ್ಯಗಳು ಜನಪ್ರಿಯವಾಗಿವೆ.

ಸುಪ್ರಸಿದ್ಧನಾದ ತೆನಾಲಿ ರಾಮಕೃಷ್ಣನು ವೆಂಕಟಪತಿರಾಯನ ಆಸ್ಥಾನಕವಿ. ಇವನನ್ನು ಕೃಷ್ಣದೇವರಾಯನ ಅಷ್ಟದಿಗ್ಗಜಗಳಲ್ಲಿ ಸೇರಿಸಿರುವುದು ಸರಿಯಲ್ಲ. ಈತನು ಮೊದಲು ವೀರಶೈವನಾಗಿದ್ದು ತನ್ನ ಪೋಷಕನ ಇಷ್ಟಾನುಸಾರ ಇಳಿವಯಸ್ಸಿನಲ್ಲಿ ವೈಷ್ಣವನಾದಂತೆ ತೋರುತ್ತದೆ. 'ಪಾಂಡುರಂಗ ಮಾಹಾತ್ಮ್ಯ', 'ಘಟಿಕಾಚಲ ಮಾಹಾತ್ಮ್ಯ', 'ಉದ್ಭಟಾರಾಧ್ಯಚರಿತ್ರೆ' ಏತತ್ಕೃತವಾದುವು. ಮೊದಲನೆಯದು ತೆಲುಗು ಪಂಚಮಹಾಕಾವ್ಯಗಳಲ್ಲೊಂದು. ಈತನು ಅದ್ಭುತ ಹಾಸ್ಯಗಾರ. ಆದರೆ ಕಾವ್ಯಗಳಲ್ಲಿ ಅದರ ವೈಶಿಷ್ಟ್ಯವು ಸ್ಫುಟವಾಗಿ ಕಾಣುವುದಿಲ್ಲ. ಈತನು ಅಂತಹ ಉತ್ತಮ ಜೀವನವನ್ನೂ ಬಾಳಲಿಲ್ಲ. ಸತ್ತಮೇಲೆ ಯಮನಿಗೂ ವೈಷ್ಣವರಿಗೂ ಜಗಳವಾಗಿ ಫಂಡರಪುರದಲ್ಲಿ ವಾಸಮಾಡುತ್ತಿದ್ದುದರಿಂದ ವೈಷ್ಣವಲೋಕ ಪ್ರಾಪ್ತಿಯಾಯಿತೆಂದು ಜನರ ನಂಬಿಕೆ.

'ಕವಿಕರ್ಣರಸಾಯನ'ದ ಕರ್ತೃವಾದ ಸಂಕುಸಾಲೆ ನೃಸಿಂಹಕವಿಯೂ 'ರಾಮಾಯಣ'ದ ಕರ್ತೃವಾದ ಕುಮಾರಿಮೊಲ್ಲಿ (ಕವಿಯಿತ್ರಿ) ಈ ಇಬ್ಬರೂ ಕೃಷ್ಣದೇವರಾಯನ ಕಾಲದವರು. ರಾಮಾಯಣವು ಜನಪ್ರಿಯವಾಗಿದೆ.

ಕೃಷ್ಣದೇವರಾಯನ ಮಗಳಾದ ಮೋಹನಾಂಗಿಯು 'ಮರೀಚಿ ಪರಿಣಯಮ್' ಎಂಬ ಗ್ರಂಥವನ್ನು ರಚಿಸಿ ಪಂಡಿತ ಮಂಡಳಿಗೆ ಪರೀಕ್ಷಾರ್ಥವಾಗಿ ಅರ್ಪಿಸಿದಳೆಂದು ಪ್ರತೀತಿ. ಆದರೆ ಇದು ಸಿಕ್ಕಿಲ್ಲ. ಇದೇ ಸಂದರ್ಭದಲ್ಲಿ ಮುಂದೆ ಬಂದ ಆಂಧ್ರ ಸಾಹಿತ್ಯದಲ್ಲಿ ಪ್ರಸಿದ್ಧರಾದ ಮತ್ತಿಬ್ಬರು ಕವಿಯತ್ರಿಯರನ್ನು ಹೆಸರಿಸಬಹುದು. ಮುದ್ದುಪಲಿನಿ (೧೮ ನೆಯ ಶತಮಾನ) ತರಿಕೊಂಡ ವೆಂಕಮ್ಮ (೧೯ ನೆಯ ಶತಮಾನ) ಇವರಿಬ್ಬರೂ ಅನುಸಂಧೇಯರು. ಮೊದಲನೆಯವಳು 'ರಾಧಿಕಾಸ್ವಾಂತಮ್,' ಎಂಬ ಗ್ರಂಥವನ್ನೂ ಎರಡನೆಯವಳು 'ಭಾಗವತಮು' 'ರಾಜಯೋಗ ಸಾರಮು,' 'ವೆಂಕಟಾಚಲ ಮಾಹಾತ್ಮ್ಯಮು' ಎಂಬ ಗ್ರಂಥಗಳನ್ನೂ ರಚಿಸಿದ್ದಾರೆ.

ಅಡ್ಡಂಕಿ ಗಂಗಾಧರನ 'ತಪತೀಸಂವರಣ'ವೂ ಪೊನ್ನಗಂಟಿ ತೆಲುಗಣಾರ್ಯನ 'ಯಯಾತಿ ಚರಿತ್ರ'ವೂ ಗೋಲ್ಕೊಂಡದ ನವಾಬನಾದ ಇಬ್ರಾಹಿಂ ಮುಲ್ಕ (೧೬ ನೆಯ ಶತಮಾನ) ನಿಗೆ ಅಂಕಿತವಾಗಿವೆ. 'ಯಯಾತಿ ಚರಿತ್ರ'ವು ಸಂಸ್ಕೃತ ಶಬ್ದ ಸಂಪರ್ಕವೇ ಇಲ್ಲದೆ ಶುದ್ಧ ತೆಲುಗಿನಲ್ಲಿಯೇ ರಚಿತವಾಗಿದೆ. ಇಂತಹ ಶುದ್ಧ ತೆಲುಗು ಗ್ರಂಥವು ಆಧುನಿಕ ಆಂಧ್ರ ವಿದ್ಯಾರ್ಥಿಗಳಿಗೆ ಅರ್ಥವೇ ಆಗುವುದಿಲ್ಲ.

**ನಿರಾಶಾ ಅಥವಾ ತಾಮಸಯುಗ**—ವಿಜಯನಗರದ ಪತನವಾದ ಮೇಲೆ ಆಂಧ್ರರ ವೈಭವವು ಮಂಕಾಯಿತು. ಅವರು ತಮ್ಮ ಆತ್ಮನಂಬಿಕೆಯನ್ನು ಕಳೆದು ಕೊಂಡರು. ಕವಿತಾಶಕ್ತಿಯು ೧೭ ನೆಯ ಶತಮಾನದ ವರೆಗೆ ಕುಂಟಿಕೊಂಡು ಬೆಳೆ ದರೂ ಕಾಂತಿಹೀನವಾಯಿತು. ಆಧುನಿಕ ಯುಗವು ೧೯ ನೆಯ ಶತಮಾನದ ಮೂರ ನೆಯ ಪಾದದಿಂದ ಪ್ರಾರಂಭವಾಗುತ್ತದೆ. ಈ ಮಧ್ಯಕಾಲವನ್ನು ನಿರಾಶಾಯುಗ ಅಥವಾ ತಾಮಸಯುಗವೆಂದು ಕರೆಯಬಹುದು. ಈ ಹೆಸರನ್ನು ಸಾರ್ಥಕಗೊಳಿಸಲು ಈ ನಿರಾಶೆಯನ್ನು ಚಿತ್ರಿಸುತ್ತಿರುವ ಅನೇಕ ಶತಕಗಳನ್ನು ಉದಹರಿಸಬಹುದು. 'ಭದ್ರಾದ್ರಿ ರಾಮಶತಕಮು', 'ಆಂಧ್ರನಾಯಕ ಶತಕಮು', 'ಸಿಂಹಾದ್ರಿ ನರಸಿಂಹ ಶತಕಮು' ಮೊದಲಾದುವು ಈ ಜಾತಿಗೆ ಸೇರಿದುವು. ಇವುಗಳಲ್ಲಿ ಆಂಧ್ರರ ದುರವಸ್ಥೆ, ಮುಸಲ್ಮಾನರ ಮುತ್ತಿಗೆ, ಅವರಿಂದ ಆದ ವಿಗ್ರಹಭೇದನ, ಧರ್ಮನಾಶ, ಸ್ತ್ರೀಯರ ಮಾನಭಂಗ ಮೊದಲಾದವು ವರ್ಣಿತವಾಗಿರುವುದಲ್ಲದೆ ಇದನ್ನು ಉದಾಸೀನದಿಂದ ನೋಡುತ್ತಿರುವ ದೈವವನ್ನು ಮೂದಲಿಸಿ ತಕ್ಷಣ ಉದ್ಧಾರಮಾಡಬೇಕೆಂಬ ಮೊರೆಯೂ ಸ್ಪಷ್ಟವಾಗಿ ಕೇಳುತ್ತಿದೆ. ಈ ಮೂರು ಶತಕಗಳೂ ಬಹು ಶಕ್ತಿಯುಕ್ತ ವಾಗಿವೆ; ಭಾವಪೂರ್ಣವಾಗಿವೆ. ಎಲ್ಲ ಭಾರತೀಯರಿಗೂ ಆಕರ್ಷಕವಾಗಿವೆ. ಈ ಶತಕಗಳ ಭಾವನಾಶಕ್ತಿಯ ಫಲವಾಗಿ ಅಲ್ಲಿಯ ಉಪಾಸ್ಯದೇವತೆಗಳು ನಾನಾ ರೂಪದಲ್ಲಿ ಪ್ರತ್ಯಕ್ಷವಾಗಿ ಆಯಾಯ ಹಿಂಸೆಗಳಿಂದ ಪಾರುಮಾಡಿವೆಯೆಂದು ಜನ ಸಾಮಾನ್ಯರ ಪೂರ್ಣವಾದ ನಂಬಿಕೆ.

ಈ ಕಾಲಕ್ಕೆ ಪುರಾಣಮೋಹ ಮಾಯವಾಯಿತು. ರಚಿತವಾದ ಕೆಲವು ಗಣ್ಯ ವಾದುದೇನೂ ಅಲ್ಲ. ಆದರೂ ನಿಜವಾದ ಕಾವ್ಯಶಕ್ತಿ ಮಾಯವಾಗಲಿಲ್ಲ. ಅವು ಶತಕಗಳಲ್ಲಿ ಕಾಣಿಸಿಕೊಂಡವು. ೧೭ ನೆಯ ಶತಮಾನದಿಂದ ೧೯ ನೆಯ ಶತಮಾನದ ಮೂರನೆಯ ಪಾದದ ವರೆಗೆ ಶತಕಗಳ ಯುಗ. ವಿ. ಸುಬ್ಬರಾಯರ 'ಶತಕ ಕಾವ್ಯಲ ಚರಿತ್ರಮು' ಎಂಬ ಗ್ರಂಥದ ಆಧಾರದ ಮೇಲೆ ೧೭ ನೆಯ ಶತಮಾನದ ಅಂತ್ಯದ ವರೆಗೆ ತೆಲುಗಿನಲ್ಲಿ ೩೫ ಶತಕಗಳೂ ೧೯ ರ ಕೊನೆಯ ವೇಳೆಗೆ ೧೬೫ ಶತಕಗಳೂ ರಚಿತವಾಗಿವೆಯೆಂದು ಸ್ಥೂಲವಾಗಿ ತಿಳಿಯಬಹುದಾಗಿದೆ.

ಹದಿನೇಳನೆಯ ಶತಮಾನದ ಕವಿಗಳಲ್ಲಿ ಚಮಕೂರಿ ವೆಂಕಟಕವಿಯು ಪ್ರಸಿದ್ಧನಾದವನು. ಈತನು 'ವಿಜಯವಿಲಾಸಮು', 'ಶಾರ್ಙ್ಗಧರ' ಎಂಬ ಎರಡು ಪ್ರಬಂಧಗಳನ್ನು ರಚಿಸಿದ್ದಾನೆ. ಮೊದಲನೆಯದರಲ್ಲಿ ಅರ್ಜುನನ ವಿಜಯಯಾತ್ರೆಯ ಕಾಲದಲ್ಲಿ ನಡೆದ ಉಲೂಪಿ, ಚಿತ್ರಾಂಗದೆ, ಸುಭದ್ರಾವಿವಾಹಗಳ ಕಥೆಯು ವರ್ಣಿತವಾಗಿದೆ. ಎರಡನೆಯದರಲ್ಲಿ ಮಾಳವರಾಜನಾದ ರಾಜಮಹೇಂದ್ರ ಅಥವಾ ರಾಜರಾಜನರೇಂದ್ರನ ಮಗನಾದ ಶಾರ್ಙ್ಗಧರನ ಕಥೆ ಉಕ್ತವಾಗಿದೆ. ಈ ಕಥೆಯು ಸ್ವಾರಸ್ಯವಾಗಿದೆ. ರಾಜನಿಗೆ ಚಿತ್ರಾಂಗಿ ಎಂಬ ರಾಜಕನ್ಯೆ ಇದ್ದಳು. ಆಕೆಗೆ ರಾಜಕುಮಾರನಲ್ಲಿ ಮೋಹವುಂಟಾಯಿತು. ಪರಿಶುದ್ಧನಾದ ರಾಜಕುಮಾರನು ಅವಳ ಬಲೆಗೆ ಬೀಳಲಿಲ್ಲ. ಅಸಂತುಷ್ಟಳಾದ ಚಿತ್ರಾಂಗಿಯು ಸೇಡು ತೀರಿಸಿಕೊಳ್ಳುವುದಕ್ಕಾಗಿ ರಾಜಕುಮಾರನು ತನ್ನಲ್ಲಿ ಅಕ್ರಮರೀತಿಯಾಗಿ ವರ್ತಿಸಿದನೆಂದು ದೂರು ಹೇಳಿದಳು. ಮೋಹಾಂಧನಾದ ರಾಜನು ವಿವೇಕಶೂನ್ಯನಾಗಿ ಕೋಪದಿಂದ ಮಗನ ಕೈಕಾಲುಗಳನ್ನು ಕತ್ತರಿಸಿ ಕಾಡಿನಲ್ಲಿ ಬಿಡಬೇಕೆಂದು ಆಜ್ಞೆಮಾಡಿದನು. ಆದರೆ ಅಲ್ಲಿ ಮತ್ಸ್ಯೇಂದ್ರನಾಥನೆಂಬ ಸಿದ್ಧನಿಂದ ಶಾರ್ಙ್ಗಧರನು ತನ್ನ ಕೈಕಾಲುಗಳನ್ನು ಪಡೆದನು. ಈ ಕಾವ್ಯದಲ್ಲಿ ರಾಜಕುಮಾರನ ಸ್ಫಟಿಕಶುದ್ಧ ಪವಿತ್ರತೆಯೂ ಪ್ರಶಾಂತ ಮನೋಭಾವವೂ ರಾಜನ ಮಾನಸಿಕ ತಿಕ್ಕಾಟ ಕ್ಷೋಭೆಗಳೂ ಬಹು ಹೃದಯಂಗಮವಾಗಿ ಚಿತ್ರಿತವಾಗಿವೆ.

ವೆಂಕಟಕವಿಯು ತಂಜಾವೂರಿನ ರಘುನಾಥರಾಯನ ಆಸ್ಥಾನದಲ್ಲಿದ್ದವನು. ವಿಜಯನಗರದ ಪತನವಾದಮೇಲೆ ಕೃಷ್ಣದೇವರಾಯನ ಸಾಮಂತರು ಸ್ವತಂತ್ರರಾದರು ಮತ್ತು ಅವರ ಆಸ್ಥಾನಗಳಲ್ಲಿ ಮೊದಲಿನ ವೈಭವವಿಲ್ಲದಿದ್ದರೂ ತೆಲುಗು ಸಾಹಿತ್ಯವು ಅಭಿವೃದ್ಧಿಯಾಯಿತು. ತಂಜಾವೂರು, ಮಧುರೆ, ಪುದುಕೋಟೆ, ಮೈಸೂರು ಆಸ್ಥಾನಗಳು* ಯಥಾಶಕ್ತಿ ಪ್ರೋತ್ಸಾಹವಿತ್ತುವು. ಆದರೆ ಈ ನಾಯಕ ಸಾಹಿತ್ಯದ ದೃಷ್ಟಿ ಮತ್ತು ಲಕ್ಷಣಗಳು ಭಿನ್ನವಾದುವು. ರಾಜಕೀಯ ಅವನತಿಯೊಡನೆ ಸಾಮಾಜಿಕ ಅವನತಿಯೂ ಕಾಲಿಟ್ಟಿತು. ನಾಯಕರ ಆಸ್ಥಾನವು ಕಾಮಪಿಪಾಸಿಗಳಾದ ವೇಶ್ಯಾಸ್ತ್ರೀಯರ ಕೇಂದ್ರವಾಯಿತು. ಅವರ ಸಹವಾಸದಲ್ಲಿ ನಾಯಕರು ಶೃಂಗಾರಮಗ್ನರಾದರು. ಶಾರೀರಕ ಸೌಖ್ಯವೇ ಅವರ ಧ್ಯೇಯರತ್ನ

---

* ತೆಲುಗಿನ ಮೊದಲನೆಯ ವಚನಗ್ರಂಥವಾದ 'ಆಂಧ್ರ ವಚನಭಾರತ'ವನ್ನು ಮೈಸೂರು ಚಿಕ್ಕದೇವರಾಜ ಭೂಪಾಲನ ದಳವಾಯಿಯಾದ ಕಳಲೆ ವೀರರಾಜನು ರಚಿಸಿದನು. ಈತನ ಮಗನಾದ ನಂಜರಾಜನು ತೆಲುಗು 'ಹಾಲಾಸ್ಯಮಾಹಾತ್ಮ್ಯ'ವನ್ನು ರಚಿಸಿದನು. ಮುಮ್ಮಡಿ ಕೃಷ್ಣರಾಜನ ಆಸ್ಥಾನಕವಿಯಾಗಿದ್ದ ಚಂದ್ರಕವಿಯು ನನ್ನಯ್ಯನ ಆಂಧ್ರ ಶಬ್ದಚಿಂತಾಮಣಿಯನ್ನು 'ಕೃಷ್ಣಭೂಪಾಲೀಯಮು' ಎಂಬ ಹೆಸರಿನಲ್ಲಿ ರಚಿಸಿದ್ದಾನೆ.

ವಾಯಿತು. ನಾಯಕರು ನೇತ್ರತೃಪ್ತಿಗಾಗಿ ಅನೇಕ ದೃಶ್ಯಕಾವ್ಯಗಳಿಗೆ ಪ್ರೇರಕರಾದರು. ಅನೇಕ ಯಕ್ಷಗಾನ, ಕೊರವಂಜಿ, ಜಕ್ಕನಗಳು ನಾಯಕರ ಆಸ್ಥಾನಪಂಡಿತ ರಿಂದ ರಚಿತವಾದುವು. ಇವು ದೃಶ್ಯವಿವರ, ಸಂಭಾಷಣೆ ಮೊದಲಾದುವುಗಳಿಂದ ಕೂಡಿ ನಾಟಕಗಳಂತೆಯೇ ಮನರಂಜಕವಾಗಿವೆ. ಆದುದರಿಂದ ನಾಯಕ ಸಾಹಿತ್ಯದ ಪ್ರಧಾನ ಭಾಗ ಯಕ್ಷಗಾನ. ಸಾಮಾನ್ಯ ಮನುಷ್ಯರಿಗಾಗಿ ರಚಿತವಾದುದ ರಿಂದ ಇವು ಸರಳವಾಗಿಯೂ ಸುಲಭವಾಗಿಯೂ ಇವೆ. ರಘುನಾಥನಾಯಕ ನೊಬ್ಬನೇ ಇನ್ನೂರಕ್ಕಿಂತ ಹೆಚ್ಚಿನ ಯಕ್ಷಗಾನಗಳನ್ನು ರಚಿಸಿರುವಂತೆ ಪ್ರತೀತಿ ಇದೆ. ಈ ಯಕ್ಷಗಾನಗಳ ವಸ್ತು ಕಾಮಶೃಂಗಾರ; ದಾಂಪತ್ಯಾತೀತ ಪ್ರೇಮವೇ ಸಾಮಾನ್ಯವಸ್ತು. 'ರಾಧಾಮಾಧವ', 'ತಾರಾಶಶಾಂಕ', 'ಇಂದ್ರ ಅಹಲ್ಯ', 'ಅಹಲ್ಯಾಸಂಕ್ರಂದನ' ಇವು ಕೆಲವು ಉದಾಹರಣೆಗಳು. ಸ್ವರಮೇಳನವೂ ಸರಳ ತೆಯೂ ಅವುಗಳ ವೈಶಿಷ್ಟ್ಯ. ತಂಜಾವೂರು ಮಾರ್ಗದಲ್ಲಿ ಸ್ವರಮೇಳನಕ್ಕೂ ಮಧುರೆಯ ಮಾರ್ಗದಲ್ಲಿ ಗದ್ಯರಚನೆಗೂ ಹೆಚ್ಚು ಗಮನ ಕೊಟ್ಟಂತೆ ಕಾಣುತ್ತದೆ. ಚಮಕೂರಿ ವೆಂಕಟಕವಿ, ವೆಂಕಟಕೃಷ್ಣನಾಯಕ, ವಿಜಯರಂಗ, ಚೊಕ್ಕನಾಥ ಅನಂತಭೂಪಾಲ ಇವರು ಈ ಮಾರ್ಗಗಳಲ್ಲಿ ಪ್ರಸಿದ್ಧರು. ಜಾತಿ, ಮತ, ಲಿಂಗಭೇದ ಗಳಿಲ್ಲದೆ ಎಲ್ಲರನ್ನೂ ಕಾವ್ಯರಚನೆಗೆ ಆಕರ್ಷಿಸಿದುದು ಈ ಯಕ್ಷಗಾನಗಳ ವೈಶಿಷ್ಟ್ಯ. ಹಾಗೆಯೇ ಇವುಗಳ ಮತ್ತೊಂದು ಲಕ್ಷಣವನ್ನು ಗಮನಿಸುವುದು ಆವಶ್ಯಕ. ಇವು ಗಳೆಲ್ಲ ಒಂದು ರೀತಿಯಲ್ಲಿ ಹಿಂದಿನಿಂದ ನಡೆದುಬಂದ ನೀತಿಪಂಥವನ್ನು ಪ್ರತಿಭಟಿಸು ವುದರಲ್ಲಿ ಒಂದು ಹೆಜ್ಜೆ ಮುಂದುವರೆದಿದೆ. ಉದಾಹರಣೆಗಾಗಿ 'ತಾರಾಶಶಾಂಕ,' ವನ್ನು ನೋಡಬಹುದು. ಬೃಹಸ್ಪತಿಯ ಪತ್ನಿಯಾದ ತಾರೆಯು ತನ್ನ ಪತಿಯ ಶಿಷ್ಯ ನಾದ ಚಂದ್ರನಲ್ಲಿ ಮೋಹಿತಳಾಗಿ ಶುದ್ಧಹೃದಯನಾದ ಅವನನ್ನು ಪತಿಯಿಲ್ಲದಿರು ವಾಗ ನಾನಾ ವಾದಗಳಿಂದ ಒಲಿಸಿ ಅವನೊಡನೆ ಸುಖವಾಗಿರುವಳು. ಬೃಹಸ್ಪತಿಯು ಬಂದು ನೋಡಿ ಕೋಪಾವಿಷ್ಟನಾಗಿ ಯುದ್ಧಕ್ಕೆ ತೊಡಗುವನು. ಆದರೆ ದೇವತೆಗಳು ಸಮಾಧಾನಮಾಡುವರು. ಇಲ್ಲಿ ನೋಡಬೇಕಾದದು ತಾರೆಯು ಶಶಾಂಕನನ್ನು ಒಪ್ಪಿಸುವುದಕ್ಕಾಗಿ ಹೂಡಿದ ವಾದವೈಖರಿ. ಎಲ್ಲ ಕಾಲದಲ್ಲಿಯೂ ನೀತಿಯ ಕಟ್ಟು ಒಂದೇ ರೀತಿಯಲ್ಲಿರಲಿಲ್ಲವೆಂದೂ ಇರಬೇಕಾಗಿಲ್ಲವೆಂದೂ ಪುರಾಣಗಳ ಆಧಾರದಿಂದ ಅವಳು ಸಿದ್ಧಾಂತಮಾಡುವುದಕ್ಕೆ ಹೊರಟಿದ್ದಾಳೆ. ಅಂದರೆ ಆ ಕಾಲಕ್ಕೆ ಪುರಾಣಗಳ ನೈತಿಕ ಹಿನ್ನೆಲೆಯನ್ನು ಪ್ರಶ್ನೆಮಾಡುವ ಸ್ಥಿತಿ ಬಂದೊದಗಿ ತ್ತೆಂದು ಹೇಳಬಹುದು.

ತಂಜಾವೂರು ತ್ಯಾಗರಾಜರ ಸಂಬಂಧದಿಂದ ಪವಿತ್ರವಾಗಿದೆ, ಚಿರಸ್ಮರಣೀಯ

ವಾಗಿದೆ. ಇದುವರೆಗೆ ಭಾರತವು ಪಡೆದಿರುವ ಸಂಗೀತ ವಿದ್ವಾಂಸರಲ್ಲಿ ತ್ಯಾಗರಾಜರು ಅಗ್ರೇಸರರು. ಅವರ ಕೀರ್ತನೆಗಳು ಕರ್ಣಾಟಕ ಸಂಗೀತಶಾಖೆಯಲ್ಲಿ ಬಹು ಪ್ರಸಿದ್ಧ ವಾಗಿವೆ. ವಾಸ್ತವವಾಗಿ ಕರ್ಣಾಟಕ ಸಂಗೀತವೇ ಶುದ್ಧ ಭಾರತೀಯ ಗಾನ ಪದ್ಧತಿ. ಔತ್ತರೇಯ ಸಂಗೀತವು (ತಾನ್‌ಸೇನನಿಂದ ಪ್ರಾರಂಭವಾದುದು) ಹಿಂದು ಮುಸಲ್ಮಾನ ಮಾರ್ಗಗಳ ಮಿಶ್ರಣದಿಂದ ಸಿದ್ಧವಾದುದು. ತ್ಯಾಗರಾಜರ ತೆಲುಗು ಕೀರ್ತನೆಗಳು ಜನಪ್ರಿಯವಾದ ಸರಳ ಸುಲಭಶೈಲಿಯಲ್ಲಿವೆ. ಬಹು ಆಕರ್ಷಕವಾಗಿವೆ. ಇವರು ೧೮ನೆಯ ಶತಮಾನದವರು. ಅಗ್ರಪಂಕ್ತಿಯ ರಾಮಭಕ್ತರು. ರಾಜ ರಾಜೇಶ್ವರನನ್ನು ದೂರಮಾಡಿ ತಮ್ಮ ಕೀರ್ತನೆಗಳನ್ನೆಲ್ಲಾ ಶ್ರೀರಾಮನಿಗೆ ಅರ್ಪಣೆ ಮಾಡಿದರು. ಇವರ ಕೀರ್ತನೆಗಳೆಲ್ಲ ಕಾವ್ಯಗುಣದಿಂದ ಪರಿಪೂರ್ಣವಾಗಿದ್ದರೂ ಅವು ಅವುಗಳ ಮೇಲ್ಮೆಯಲ್ಲ. ಅವು ಶಾಸ್ತ್ರೀಯವಾದ ಕೀರ್ತನೆಗಳು. ಇವು ಎಲ್ಲ ಲಿಪಿಯಲ್ಲಿಯೂ ಮುದ್ರಿತವಾಗಿವೆ. ಇವರಿಗೆ ಹಿಂದೆಯೂ ತೆಲುಗು ಕೀರ್ತನೆಗಳಿದ್ದುವು. ತಾಲ್ಲಪಾಕಂ ಮನೆತನದ ತಿರುಮಲಾಚಾರ್ಯ ಮತ್ತು ಅನ್ನಮಾಚಾರ್ಯ ಕೃತಿಗಳು ಬಹು ಪ್ರಸಿದ್ಧವಾಗಿ ಈಗಲೂ ತಿರುಪತಿಯ ದೇವಾಲಯದಲ್ಲಿ ತಾಮ್ರ ಫಲಕಗಳಲ್ಲಿ ಸಿಕ್ಕುವುವು. ಕಂಚೇಲನ್ ಗೋಪಣ್ಣನ ಕೀರ್ತನೆಗಳು ಲಯಬದ್ಧವಾಗಿ ಹಾಡ ಲ್ಪಡುತ್ತಿದ್ದವು. ಅವು ಪ್ರೌಢಶಿಕ್ಷಣಕ್ಕೆಂದು ರಚಿತವಾದುವಲ್ಲ. ೧೭ನೆಯ ಶತಮಾನದ ಕ್ಷೇತ್ರಯ್ಯನ 'ಮೂವ್ವಗೋಪಾಲಪದಮ್' ಎಂಬ ಕೀರ್ತನೆಗಳು ಭರತನಾಟ್ಯಕ್ಕಾಗಿಯೇ ರಚಿತವಾಗಿದ್ದರೂ ಪ್ರೌಢವಿದ್ವಾಂಸರ ಗೌರವಕ್ಕೆ ಪಾತ್ರ ವಾಗಿವೆ. ಆದರೂ ತ್ಯಾಗರಾಜರ ಕೀರ್ತನೆಗಳ ಮಟ್ಟಕ್ಕೆ ಅವು ಏರಲಾರವು.

ಕೀರ್ತನೆಗಳಂತೆಯೇ ತೆಲುಗಿನಲ್ಲಿ ಜಾವಳಿ ಅಥವಾ ಪ್ರೇಮಗೀತೆಗಳೂ, ತತ್ವಮ್ ಅಥವಾ ಆಧ್ಯಾತ್ಮಿಕ ಗೀತೆಗಳೂ, ಲಾಲಿಪಾಟು ಅಥವಾ ಜೋಗುಳಗಳೂ, ಮಂಗ ಳಾರತಿ ಅಥವಾ ಆಶಿರ್ವಾದಗೀತೆಗಳೂ, ಮೆಲುಕೊಳುಪು ಅಥವಾ ಸುಪ್ರಭಾತಗಳೂ ವಿಶೇಷವಾಗಿವೆ. ಆದರೆ ಅವುಗಳಲ್ಲಿ ವಿಶೇಷ ಕಾವ್ಯಗುಣವಿಲ್ಲ.

**ಆಧುನಿಕ ತೆಲುಗು ಸಾಹಿತ್ಯ**—೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಪಾಶ್ಚಾತ್ಯರ ಸಂಸರ್ಗದಿಂದ ಆಧುನಿಕ ತೆಲುಗು ಸಾಹಿತ್ಯ ರೂಪುಗೊಂಡಿತೆಂದು ಹೇಳಬಹುದು. ಈ ಸಾಹಿತ್ಯದ ಪ್ರೇರಕ ಮತ್ತು ಸ್ಥಾಪಕ ರಾವ್‌ಬಹದ್ದೂರ್ ಕೆ. ವೀರೇಶಲಿಂಗಂ. ಇವರು ಸಾಹಿತ್ಯದ ವಿವಿಧಕ್ಷೇತ್ರಗಳಲ್ಲಿ ಕೆಲಸಮಾಡಿ ತಮ್ಮ ವ್ಯಕ್ತಿತ್ವವನ್ನು ಸ್ಥಿರಪಡಿಸಿಕೊಂಡಿದ್ದಾರೆ. ಪ್ರಾಚೀನ ಸಾಹಿತ್ಯಕ್ಕೆ ತಿಕ್ಕನನು ಹೇಗೋ ಹಾಗೆ ಆಧುನಿಕ ಸಾಹಿತ್ಯಕ್ಕೆ ವೀರೇಶಲಿಂಗಂ. ಅವರಿಗೆ ಗದ್ಯತಿಕ್ಕನನೆಂಬ ಬಿರುದೂ ಉಂಟು. ಅವರು ವಿಶ್ವವಿದ್ಯಾನಿಲಯದ ಪದವೀಧರರಲ್ಲ. ಆದರೂ ಪ್ರಾಚೀನರಂತೆ

ಪೂರ್ಣ ವಿದ್ವಾಂಸರು ; ಸಂಪ್ರದಾಯಮಾರ್ಗದಲ್ಲಿ ಶಿಕ್ಷಿತರಾಗಿದ್ದರೂ ಇಂಗ್ಲಿಷ್ ಸಾಹಿತ್ಯಮಾರ್ಗದ ವೈಶಿಷ್ಟ್ಯ ಅವರನ್ನು ಆಕರ್ಷಿಸಿ ತನ್ನ ಪ್ರಭಾವವನ್ನು ಅವರಿಂದ ತೆಲುಗಿನ ಮೇಲೆ ಬೀರಲು ಪ್ರಯತ್ನಿಸಿತು. ಅದಕ್ಕನುಗುಣವಾಗಿಯೇ ಅವರು ಗೋಲ್ಡ್‌ಸ್ಮಿತ್ತಿನ 'ವಿಕಾರ ಆಫ್ ವೇಕ್‌ಫೀಲ್ಡ್' ಆಧಾರದ ಮೇಲೆ 'ರಾಜಶೇಖರ ಚರಿತಮು' ಎಂಬ ಮೊದಲನೆಯ ತೆಲುಗು ಕಾದಂಬರಿಯನ್ನು ರಚಿಸಿದರು. ಇದು ಮೂಲದ ಭಾಷಾಂತರವಲ್ಲ. ಆದುದರಿಂದಲೇ ಅದು ಪುನಃ 'ಫಾರ್ಚ್ಯೂನ್ ವೀಲ್' ಎಂಬ ಹೊಸ ಹೆಸರಿನಿಂದ ಇಂಗ್ಲೀಷಿಗೆ ಟಿ. ಆರ್. ಹಚಿನ್‌ಸನ್ ಎಂಬುವನಿಂದ ಭಾಷಾಂತರವಾಗಿ ೧೮೮೭ನೆಯ ಸೆಪ್ಟೆಂಬರ್ ತಿಂಗಳಿನ 'ಲಂಡನ್ ಟೈಮ್ಸ್' ಪತ್ರಿಕೆಯಲ್ಲಿ ಪ್ರಶಂಸಿಸಲ್ಪಟ್ಟಿತು.

ಈ ಕಾಲದಲ್ಲಿಯೇ ರಾಜಾರಾಮ ಮೋಹನರಾಯನು ಸ್ತ್ರೀಸಮಾಜವನ್ನು ಉದ್ಧಾರಮಾಡಲು ಹೊರಟುದು. ಈ ಕಾಲದಲ್ಲಿಯೇ ಕಲ್ಕತ್ತದಲ್ಲಿ ಬ್ರಹ್ಮಸಮಾಜವು ಸ್ಥಾಪಿತವಾದುದು. ವೀರೇಶಲಿಂಗಂ ಸಂಪ್ರದಾಯ ಮಾರ್ಗದಲ್ಲಿಯೇ ಶಿಕ್ಷಿತರಾದವರಾದರೂ ಬ್ರಹ್ಮಸಮಾಜಿಯಾಗಿ ಸಮಾಜ ಸಂಸ್ಕರಣ ಕಾರ್ಯದಲ್ಲಿ ತೊಡಗಿದರು. ವೀರೇಶಲಿಂಗಂ ಅವರ ಕಾರ್ಯ ಅಲ್ಲಿಗೇ ನಿಲ್ಲಲಿಲ್ಲ. ಅವರು 'ತೆಲುಗುಕವುಲು' ಎಂಬ ಪ್ರಪ್ರಥಮ ತೆಲುಗುಸಾಹಿತ್ಯಚರಿತ್ರೆಯನ್ನೂ ತಮ್ಮ ಆತ್ಮಚರಿತ್ರೆಯನ್ನೂ ಬರೆದಿದ್ದಾರೆ. ಅನೇಕ ಸಣ್ಣ ಕಥೆಗಳನ್ನೂ ಮಕ್ಕಳಿಗಾಗಿ ಕಟ್ಟುಕಥೆಗಳನ್ನೂ ರಚಿಸಿದ್ದಾರೆ. 'ವಿವೇಕ ವರ್ಧಿನಿ' ಎಂಬ ಪತ್ರಿಕೆಯನ್ನು ನಡೆಸಿದ್ದಾರೆ. ಪಂಡಿತರಾಗಿ ಪಂಡಿತ ಕೊಕ್ಕೊಂಡ ವೆಂಕಟರತ್ನಮ್ ಮತ್ತು ಮಹಾಮಹೋಪಾಧ್ಯಾಯ ವೇದಂ ವೆಂಕಟರಾಯಶಾಸ್ತ್ರಿ ಇವರೊಡನೆ ಅನೇಕ ವಾದವಿವಾದಗಳನ್ನು ಮಾಡಿದ್ದಾರೆ. ಇವು ವಿದ್ವಾಂಸರಿಗೆ ಬಹು ಸೊಗಸಾದ ಚೊಕ್ಕಭೋಜನವಾಗಿದೆ. ಇವರು ಅನೇಕ ಸಂಸ್ಕೃತ ನಾಟಕಗಳನ್ನು ತೆಲುಗಿಗೆ ಭಾಷಾಂತರಮಾಡಿದ್ದಾರೆ. ಅವು ತಮ್ಮ ಸರಳತೆಗೂ ಸೌಂದರ್ಯಕ್ಕೂ ಹೆಸರುವಾಸಿಯಾಗಿವೆ. ಕ್ಲಿಷ್ಟತೆಯೆಂಬುದರ ಗಂಧವೇ ಅದರಲ್ಲಿಲ್ಲ. ವ್ಯಾಕರಣ ಮತ್ತು ಅಲಂಕಾರಗಳ ವಿಷಯಕವಾದ ಗ್ರಂಥಗಳನ್ನು ಅವರು ರಚಿಸದೇ ಬಿಟ್ಟಿಲ್ಲ.

ಈ ಸ್ಥೂಲಪರಿಚಯದಿಂದ ವೀರೇಶಲಿಂಗಂ ಅವರ ಕಾರ್ಯಕ್ಷೇತ್ರ ಬಹು ಮುಖವಾದುದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅವರು ಕವನಮಾಡದೇ ಇದ್ದಿರಬಹುದು. ಆದರೆ ಅನೇಕ ಹೊಸ ಸಾಹಿತ್ಯಮಾರ್ಗಗಳಿಗೆ ಪ್ರೇರಕರೂ ಜೀವಕಳೆಯನ್ನು ತುಂಬಿದವರೂ ಆಗಿದ್ದಾರೆ. ಅವರು ಏನು ಬರೆದರೂ—ಸಂಪ್ರದಾಯಸ್ಥರಿಗೆ ಸ್ವಲ್ಪ ರುಚಿಸದಿದ್ದರೂ—ಪ್ರಜಾಸಾಮಾನ್ಯಕ್ಕೆ ಆಕರ್ಷಕವಾಗಿರುತ್ತಿತ್ತು.

ವೀರೇಶಲಿಂಗಂ ಅವರಂತೆಯೇ ವಿಶೇಷವಾಗಿ ಗ್ರಂಥರಚನೆ ಮಾಡಿದ ಮತ್ತೊಬ್ಬ

ರೆಂದರೆ ಚಿಲಕಮರ್ತ್ತಿ ಲಕ್ಷ್ಮೀನರಸಿಂಹಂ. ಇವರೂ ಅನೇಕ ನಾಟಕ, ಕಾದಂಬರಿ, ಸಣ್ಣಕಥೆ, ಪ್ರಬಂಧ, ಮಹಾಪುರುಷರ, ಸಾಧುಸಂತರ ಜೀವನಚರಿತ್ರೆ ಮೊದಲಾದವುಗಳನ್ನು ರಚಿಸಿದ್ದಾರೆ. ದೇಶದಲ್ಲೆಲ್ಲಾ ಅವರ ಹೆಸರು ಅವರ ನಾಟಕಗಳಿಗಾಗಿ ಪ್ರಸಿದ್ಧಿಯಾಗಿದೆ.

ಪ್ರಾಚೀನಮಾರ್ಗದಲ್ಲಿ ಕವಿತ್ವವನ್ನು ರಚಿಸಿದವರಲ್ಲಿ ಶತಾವಧಾನಿಗಳಾದ ತಿರುಪತಿಶಾಸ್ತ್ರಿ ಮತ್ತು ವೆಂಕಟಶಾಸ್ತ್ರಿ ಇವರು ಉತ್ತಮರು. ಅವರ ಶತಾವಧಾನ ಕೌಶಲ್ಯವು ಆಶ್ಚರ್ಯಕರವಾದುದು. ಆಂಧ್ರಕವಿತೆಯ ಪುನರುದ್ಧಾರಕಾರ್ಯಕ್ಕೆ ಅವರು ಬಹುಮಟ್ಟಿಗೆ ಕಾರಣಕರ್ತರು. ಅವರು ಬಹುಸಂಖ್ಯಾತವಾದ ಗ್ರಂಥಗಳನ್ನು ರಚನೆ ಮಾಡಿದ್ದಾರೆ. ಅವರ ಸ್ವತಂತ್ರಗ್ರಂಥವಾದ 'ಬುದ್ಧಚರಿತ್ರಮ್', ಭಾಷಾಂತರಗಳಾದ 'ಬಾಲರಾಮಾಯಣಮ್', 'ದೇವೀಭಾಗವತಮ್' ಮತ್ತು ಮಹಾಭಾರತ ನಾಟಕಗಳು ಬಹು ಆಕರ್ಷಕವಾಗಿವೆ. ಅವರಿಗೆ ಅನೇಕ ಶಿಷ್ಯರಿದ್ದಾರೆ. ಅವರ ಹಾಸ್ಯಭರಿತವೂ ಮನರಂಜಕವೂ ಪಾಂಡಿತ್ಯಪೂರ್ಣವೂ ಆದ ವ್ಯಾಖ್ಯಾನಗಳನ್ನು ಕೇಳಲು ಎಲ್ಲೆಡೆಯಲ್ಲಿಯೂ ಜನರು ಗುಂಪುಗುಂಪಾಗಿ ನೆರೆಯುತ್ತಾರೆ.

ವಾವಿಲಕೊಲನು ಸುಬ್ಬರಾವ್, ಶ್ರೀಪಾದ ಕೃಷ್ಣಮೂರ್ತಿಶಾಸ್ತ್ರಿ, ಜನಮಂಚಿ ಶೇಷಾದ್ರಿಶರ್ಮ ಇವರು ಉದ್ದಾಮಪಂಡಿತರು. ಸಂಸ್ಕೃತದ ಅನೇಕ ಗ್ರಂಥಗಳನ್ನು ಭಾಷಾಂತರಿಸಿದ್ದಾರೆ.

**ಭಾವಕವಿತ್ವಮ್**—ಪಾಶ್ಚಾತ್ಯಕವಿಗಳಾದ ಷೆಲ್ಲಿ, ಕೀಟ್ಸ್ ಮೊದಲಾದವರಿಂದ ಪ್ರೇರಿತರಾದ ಕೆಲವು ಯುವಕರು ಅವರ ಮಾರ್ಗದಲ್ಲಿಯೇ ಭಾರತೀಯ ವಿಷಯಗಳ ಮೇಲೆ ಕವನಗಳನ್ನು ರಚಿಸಲು ಮೊದಲುಮಾಡಿದರು. ಇವುಗಳು ಸಂಪ್ರದಾಯಸ್ಥರಿಂದ ವಿಶೇಷವಾಗಿ ಗ್ರಾಹ್ಯವಾಗಲಿಲ್ಲ. ಇವರಿಗೆ ಮೊದಲೇ ಗುರುಜಾಡ ಅಪ್ಪಾರಾವ್ ಎಂಬುವರು 'ಮುತ್ಯಾಲಸರಾಲು' ಎಂಬ ಹೊಸ ಛಂದಸ್ಸನ್ನು ನಿರ್ಮಾಣಮಾಡಿ ಹೊಸಮಾರ್ಗದ ಸ್ಥಾಪಕರಾದರು. ಈ ಹೊಸ ಛಂದಸ್ಸು ಪ್ರಾಚೀನಕಾಲದಿಂದ ಬಂದಿದ್ದ ಜನಪದ ಛಂದಸ್ಸಿನ ಪರಿಷ್ಕರಣ ಮಾತ್ರ. ಅಪ್ಪಾರಾವ್ ವಿಶೇಷವಾಗಿ ಗ್ರಂಥರಚನೆ ಮಾಡದುದರಿಂದ ಈ ಯುವಕವರ್ಗವೇ ಮೊತ್ತಮೊದಲನೆಯ ಭಾವಕವಿಗಳಾಗಿ ಹೊಸಪಂಥದ ಸಂಸ್ಥಾಪಕರಾದರು. ಇವರಲ್ಲಿ ಪ್ರಸಿದ್ಧರಾದವರು ಉಸ್ಮಾನಿಯ ವಿಶ್ವವಿದ್ಯಾನಿಲಯದ ತೆಲುಗುಶಾಖೆಯ ಅಧ್ಯಕ್ಷರಾದ ರಾಯಪ್ರೋಲು ಸುಬ್ಬರಾಯರು, ಆಂಧ್ರ ವಿಶ್ವವಿದ್ಯಾನಿಲಯದ ಅಬ್ಬೂರಿ ರಾಮಕೃಷ್ಣರಾಯರು ಮತ್ತು ಗುಂಟೂರಿನ ಬಸವರಾಜು ಅಪ್ಪಾರಾಯರು. ಮೊದಮೊದಲು ಇವರ ಕವನಗಳಿಗೆ ಯಾವ ಪುರಸ್ಕಾರವೂ ದೊರೆಯಲಿಲ್ಲ. ಆದರೂ ಅವರು

ಎದೆಗೆಡಲಿಲ್ಲ. ಆಧುನಿಕ ವಿದ್ವಾಂಸರನೇಕರಿಂದ ಅವರಿಗೆ ಪ್ರೋತ್ಸಾಹ ದೊರೆಯಿತು. ಪ್ರಾಚೀನ ವಿದ್ವಾಂಸರನೇಕರ ಬಹು ಕಟುವಾದ ಟೀಕೆಗಳು ಅವರ ಲೇಖಣಿಯನ್ನು ತಡೆಯಲಾರದಾದುವು. ಸ್ವಲ್ಪಕಾಲದಲ್ಲಿಯೇ ಅವರ ಗುಂಪು ಬೆಳೆಯಿತು. ಟಾಗೋರ್ ರವರಿಗೆ ಸಂಪ್ರದಾಯಮಾರ್ಗದ್ದಲ್ಲದ ಕವಿತೆಯೊಂದಕ್ಕೆ ನೋಬೆಲ್ ಪಾರಿತೋಷಕ ಸಿಕ್ಕಿದಮೇಲಂತೂ ಅವರ ಕಾರ್ಯ ಬಹು ಬಿರುಸಾಗಿ ಸಾಗಿತು.

ಭಾವಕವಿತ್ವವನ್ನು ಭಾವಗೀತೆಗಳೆಂದು ಕರೆಯಬಹುದು. ಅವುಗಳಲ್ಲಿ ಅನೇಕವನ್ನು ಹಾಡಬಹುದು. ಅವುಗಳು ವಿಶೇಷವಾಗಿ ವ್ಯಕ್ತಿನಿಷ್ಠ. ಒಂದು ಪ್ರತ್ಯೇಕ ವಿಷಯಕವಾದುದು. ವಸ್ತು ಮತ್ತು ಛಂದಸ್ಸಿನಲ್ಲಿ ಸ್ವತಂತ್ರವಾದುದು. ಸಾಂಪ್ರದಾಯಿಕ ಕವನಗಳಿಗಿಂತ ಆಕಾರದಲ್ಲಿ ಚಿಕ್ಕದು. ಅಂದಮಾತ್ರಕ್ಕೆ ಪ್ರಾಚೀನ ಕವನಗಳಲ್ಲಿ ಭಾವಕವಿತೆಗಳಿರಲಿಲ್ಲವೆಂದಲ್ಲ. ಶತಕಗಳು ಭಾವಪೂರ್ಣವಾದುವೇ. ಆದರೆ ಅವುಗಳ ವಸ್ತು ಪ್ರತ್ಯೇಕ ವಿಷಯವಾದುವಾಗಿರಲಿಲ್ಲ. ಕವಿಯ ಸ್ವಂತ ವಿಷಯಕ್ಕೆ ಸಂಬಂಧಪಟ್ಟದು ಹೆಚ್ಚಾಗಿರುತ್ತಿರಲಿಲ್ಲ. ವಸ್ತುಗಳು ಲಾಕ್ಷಣಿಕರಿಂದ ನಿಷ್ಕರ್ಷಿಸಲ್ಪಟ್ಟು ಆ ನಿಯಮಕ್ಕನುಗುಣವಾಗಿಯೇ ಅದರ ಪ್ರೇರಕಶಕ್ತಿಯಿಂದಲೇ ಕವಿಗಳು ಕಾವ್ಯವನ್ನು ರಚಿಸಬೇಕಾಗಿತ್ತು. ಪ್ರಾಚೀನ ಗ್ರಂಥರಾಶಿ ಅಪಾರವಿದ್ದರೂ ಅವುಗಳಲ್ಲಿ ವೈವಿಧ್ಯವಿಲ್ಲ. ಸಮಕಾಲೀನ ವಿಷಯಗಳಿಗೆ ಅವುಗಳಲ್ಲಿ ಹೆಚ್ಚು ಸ್ಥಾನವಿಲ್ಲ. ತಾತ್ಕಾಲಿಕ ರಾಜಕೀಯ ಸಾಮಾಜಿಕ ಜೀವನದಲ್ಲಿ ಆಸಕ್ತಿ ಕಡಿಮೆ. ಕಣ್ಣುಮುಂದೆ ನಡೆದ ಘಟನೆಗಳು ಅವುಗಳ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡುತ್ತಿರಲಿಲ್ಲ. ಸ್ವಂತ ಸುಖದುಃಖಗಳ ಅನುಸಂಧಾನಕ್ಕಂತೂ ವಿರಾಮವೇ ಇರಲಿಲ್ಲ. ಆದರೆ ಭಾವಕವಿತ್ವದಲ್ಲಿ ಭಾವಕ್ಕೆ ಪ್ರಧಾನ. ಪ್ರಾಚೀನ ಕವನಗಳಲ್ಲಿ ರಸಕ್ಕೆ ಅಗ್ರಸ್ಥಾನ. ಮೊದಲನೆಯದು, ಒಂದು ರಸಕ್ಕೆ ಪ್ರಾಧಾನ್ಯವನ್ನು ಕೊಡುತ್ತದೆ. ಎರಡನೆಯದರಲ್ಲಿ, ಅನೇಕ ರಸಗಳು ಉತ್ಪನ್ನವಾಗಿ ಒಂದು ಇತರ ಎಲ್ಲವನ್ನು ಮೀರಿ ಸ್ಥಾಯಿಯಾಗಿ ನಿಲ್ಲುವುದು.

ಭಾವಕವಿಗಳಲ್ಲಿ ಪ್ರಸಿದ್ಧರಾದ ಮೇಲಿನ ಮೂವರಲ್ಲಿ ಪ್ರೊ॥ ಸುಬ್ಬರಾಯರು ಉತ್ತಮ ಕವನಗಳನ್ನು ರಚಿಸಿದ್ದಾರೆ. ಅವರ 'ತೃಣಕಂಕಣಮ್,' 'ಸ್ವಪ್ನಕುಮಾರಮ್' ಮೊದಲಾದುವು ಬಹು ಜನಪ್ರಿಯವಾಗಿವೆ. ರಾಮಕೃಷ್ಣರಾಯರು ತಮ್ಮ 'ಮಲ್ಲಿಕಾಂಬಾ', 'ಊಹಾಗಾನಮ್,' 'ಪೂರ್ವಪ್ರೇಮ' ಎಂಬ ಕವನಸಂಗ್ರಹಗಳಲ್ಲಿಯೂ 'ನದೀಸುಂದರಿ' ಎಂಬ ಗೀತನಾಟಕದಲ್ಲಿಯೂ ತಮ್ಮ ಸ್ಪಷ್ಟ ಮುದ್ರೆಯನ್ನು ವಾಚಕರ ಮೇಲೆ ಒತ್ತುತ್ತಾರೆ. ಅವರ ಕವನಗಳಲ್ಲಿ ಅವರ ಭಾವನೆಯೂ ಉದ್ದೇಶವೂ ಖಚಿತವಾಗಿ ಕಾಣುತ್ತವೆ. ಅಪ್ಪಾರಾಯರು ಅನೇಕ ಸುಂದರಕವನ

ಗಳನ್ನು ರಚನೆ ಮಾಡಿದ್ದಾರೆ. ಅವು ಶುದ್ಧ ಸರಳಶೈಲಿಯಲ್ಲಿರುವುದಲ್ಲದೆ ಕಾವ್ಯ ಗುಣಗಳಿಂದ ಕೂಡಿವೆ.

ತರುಣರಲ್ಲಿ ದೇವುಲಪಲ್ಲಿ ಕೃಷ್ಣಶಾಸ್ತ್ರಿ ಪ್ರಸಿದ್ಧರು. ಆತನ 'ಕೃಷ್ಣಪಕ್ಷ' ಬಹು ಜನಪ್ರಿಯವಾಗಿದೆ. ಅದರಲ್ಲಿಯೂ ಭಾವಕವಿತ್ವದ ಕೆಲವು ದೋಷವಿಲ್ಲದೇ ಇಲ್ಲ. ಈಚೆಗೆ ಶ್ರೀರಂಗಂ ಶ್ರೀನಿವಾಸರಾವ್ ತಮ್ಮ 'ಪ್ರಭವ' ಎಂಬ ಕವನ ಸಂಗ್ರಹದಿಂದ ಪ್ರಸಿದ್ಧಿಗೆ ಬಂದಿದ್ದಾರೆ. ಭಾವಕವಿಗಳು ತಲ್ಲಾವಜ್ಜುಲ ಶಿವಶಂಕರ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ 'ಸಾಹಿತೀ ಸಮಿತಿ'ಯನ್ನೂ ಮಾರೇಪಲ್ಲಿ ರಾಮಚಂದ್ರ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ 'ಕವಿತಾಸಮಿತಿ'ಯನ್ನೂ ರಚಿಸಿಕೊಂಡಿದ್ದಾರೆ. ಹೊಸ ಕವಿಗಳಲ್ಲಿ ಅಡವಿ ಚಾಪಿರಾಜು, ಕೆ. ವಿ. ಸುಬ್ಬರಾವ್, ಪಿ. ವೆಂಕಟರತ್ನಮ್, ಜಿ. ರುಕ್ಮಿಣೀನಾಥಶಾಸ್ತ್ರಿ, ಜಿ. ವೆಂಕಟಾಚಲಮ್ ಪ್ರಸಿದ್ಧರು. ಶಿವಶಂಕರಶಾಸ್ತ್ರಿ ಯವರ 'ಹೃದಯೇಶ್ವರಿ' ಸರ್ವಜನಗ್ರಾಹ್ಯವಾಗಿದೆ. ಸಂಡೂರಿ ಸುಬ್ಬರಾಯರ 'ಎಂಕಿಪಾಟಲು' ಎಂಬ ಹಳ್ಳಿಯ ಹಾಡುಗಳು ಮೊದಲು ಪ್ರಕಟವಾದಾಗ ಜನರಲ್ಲಿ ವಿಶೇಷ ಆಂದೋಲನವುಂಟಾಯಿತು. ಅದರಲ್ಲಿ ಬಹು ಗಂಭೀರವಾದ ವಿಷಯಗಳು ಜನರಾಡುವ ಭಾಷೆಯಲ್ಲಿವೆ.

ಭಾವಕವಿಗಳಲ್ಲಿ ಠಾಕೂರರ ವಿಶೇಷ ಪ್ರಭಾವವಿರುವುದು ದುವ್ವೂರಿ ರಾಮರೆಡ್ಡಿ ಯವರ ಮೇಲೆ. ಅವರ ಗ್ರಂಥಗಳೆಲ್ಲ 'ಕವಿ ಕೋಕಿಲ ಗ್ರಂಥಾವಳಿ'ಯಲ್ಲಿ ಪ್ರಕಾಶಿತ ವಾಗಿವೆ. ಅವರ ಜನಪದ ಗೀತೆಯಾದ 'ಕೃಷೀವಲುಡು' ಬಹು ಸೊಗಸಾಗಿದೆ. ಉಮ್ಮರ್ ಖಯಮ್ಮಿನ 'ರುಬ್ಬಿಯ್ಯಾತ್' ಕವಿತೆಯ ಭಾಷಾಂತರವಾದ 'ಪಾನಶಾಲ' ಅನೇಕ ದೃಷ್ಟಿಯಿಂದ ಆಕರ್ಷಕವಾಗಿದೆ. ಭಾಷೆಯು ಶುದ್ಧವಾಗಿಯೂ ದೋಷ ರಹಿತವಾಗಿಯೂ ಇದೆ. ಇವರ ಕವನಗಳು ಇಂಗ್ಲೀಷಿಗೆ ಪರಿವರ್ತಿತವಾಗಿವೆ. ಡಾ|| ಜೆ. ಹೆಚ್. ಕಸಿನ್ಸ್ ಇವರ ವಿಷಯದಲ್ಲಿ ಬಹಳ ಒಳ್ಳೆಯ ಅಭಿಪ್ರಾಯವುಳ್ಳವರಾಗಿದ್ದಾರೆ.

ಮಹಿಳೆಯರಲ್ಲಿ ಶ್ರೀಮತಿಗಳಾದ ವಿಶ್ವಸುಂದರಮ್ಮ, ಸಿ. ಬಂಗಾರಮ್ಮ ಸೌದಾಮಿನಿ, ಬಿ. ಕನಕಮ್ಮ ಇವರು ಪ್ರಸಿದ್ಧರಾದ ಭಾವಕವಿಯತ್ರಿಯರು.

ಭಾವಕವಿಗಳ ಗುಂಪಿಗೆ ಸೇರದೆ ಅವರ ದೋಷಗಳಿಂದ ದೂರವಾಗಿ ಸ್ವತಂತ್ರ ಮಾರ್ಗದಲ್ಲಿ ಕೆಲಸಮಾಡುವ ಆಧುನಿಕರನೇಕರಿದ್ದಾರೆ. ಅವರಲ್ಲಿ ಪಿಂಗಳಿ ಲಕ್ಷ್ಮೀ ಕಾಂತಂ ಮತ್ತು ಕಾಟೂರಿ ವೆಂಕಟೇಶ್ವರರಾವ್ ಪ್ರಸಿದ್ಧರು. ಇವರು ತಮ್ಮ ಕವನ ಗಳನ್ನು ಒಟ್ಟಿಗೆ ಪ್ರಚಾರಮಾಡುತ್ತಾರೆ. ಅವರ 'ತೊಲಕರಿ' ಮತ್ತು 'ಸೌಂದರ ನಂದಮ್' ಇವೆರಡೂ ರಮ್ಯವಾಗಿವೆ. ಅವರ ಭಾಷೆ ಸುಲಭ, ಭಾವ ಸ್ಪಷ್ಟ, ಶುದ್ಧ; ರಸ ಆಕರ್ಷಕ ಮತ್ತು ಗಂಭೀರ.

ಈ ಮಾರ್ಗದಲ್ಲಿ ಪಂಡಿತ ವಿಶ್ವನಾಥ ಸತ್ಯನಾರಾಯಣ ಸುಪ್ರಸಿದ್ಧರು. ಈತ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಭಾಷೆ ಮತ್ತು ಶೈಲಿಯಲ್ಲಿ ಸೊಗಸಾದ ಓಟವಿದೆ. ಈತನು ಕಥೆ, ಕಾದಂಬರಿ, ನಾಟಕ, ಪ್ರಬಂಧ, ಗೀತೆ, ಲಘು ಮತ್ತು ಬೃಹತ್ ಕವನಗಳು ಎಲ್ಲದರಲ್ಲಿಯೂ ಪ್ರವೇಶಿಸಿದ್ದಾನೆ. ಆದರೆ ಭಾಷೆಯು ಆಡಂಬರಯುತ ವಾಗಿದೆ. ಆತನ ದೇಶಗೀತೆಗಳೂ 'ಕಿನ್ನರಸಾನಿ ಪಾಟಲು' ಎಂಬ ಹಾಡುಗಳೂ ಸರ್ವಜನಾದರಣೀಯವಾಗಿವೆ.

ಜಾಷುವ ಎಂಬ ಕ್ರೈಸ್ತ ಕವಿ ಆಧುನಿಕ ಕವಿಗಳಲ್ಲಿ ಹೆಸರಾಂತವನು. ಈತನ ಕವನಗಳೆಲ್ಲ ಬಹು ಅರ್ಥಗರ್ಭಿತವಾಗಿವೆ. ಭಾಷೆ ಲಲಿತವೂ ಶುದ್ಧವೂ ಆಗಿವೆ. ಆತನ ಅನೇಕ ಕವನಗಳಲ್ಲಿ 'ಫಿರ್ದೌಸಿ' ಉತ್ತಮವಾದುದು.

ಜಿ. ಟಿ. ಸೋಮಯಾಜಿಯವರು 'ರಾಮಚಂದ್ರುನಿ ಹಂಪೀಯಾತ್ರ' ಎಂಬ ಸೊಗಸಾದ ಕವನವನ್ನು ರಚಿಸಿದ್ದಾರೆ. ಕೆ. ಸುಬ್ಬರಾಯರ ಇದೇ ವಿಷಯಕವಾದ ಕವನವೂ ಶ್ಲಾಘ್ಯವಾಗಿದೆ. ಆತನ ಜೀವನದಲ್ಲಿ ಸುಧಾರಕ ಮನೋಭಾವ ಸ್ಪಷ್ಟವಾಗಿ ಎದ್ದು ಕಾಣುತ್ತಿದೆ. ಈ ಸಂದರ್ಭದಲ್ಲಿ ಈತನು ಪ್ರಸ್ತಾಪಮಾಡದ ವಿಷಯವೇ ಇಲ್ಲ. ವಿಧವಾಪುನರ್ವಿವಾಹ, ಸ್ತ್ರೀವಿದ್ಯಾಭ್ಯಾಸ, ಮೂಢನಂಬಿಕೆ ಮತ್ತು ಆಚಾರಗಳ ಖಂಡನ, ಕಾಂಗ್ರೆಸ್ ಚಳುವಳಿ, ದೇಶೀಯ ಸಂಸ್ಥಾನಗಳು ಮೊದಲಾದ ವಿಷಯಗಳಿಗೆ ಸಂಬಂಧಪಟ್ಟಹಾಗೆ ಬಹು ವಿಚಾರಪೂರ್ವಕವಾದ ಅನೇಕ ಲೇಖನಗಳನ್ನು ಬರೆದಿದ್ದಾನೆ. ಸ್ತ್ರೀವಿದ್ಯಾಭ್ಯಾಸಕ್ಕಾಗಿ ಪ್ರತ್ಯೇಕ ಪತ್ರಿಕೆಗಳನ್ನು ಪ್ರಾರಂಭಿಸಿದನು. ಭಾರತೀಯ ಮಹಿಳೆಯರ ವಿಷಯವಾಗಿ ಗ್ರಂಥಗಳನ್ನು ರಚಿಸಿದನು. ಈ ರೀತಿಯ ಸಾಹಿತ್ಯ ಚಳುವಳಿ ತೀರ ಹೊಸದು. ಆತನಿಗೆ ಸರಿಯಾದ ಸ್ಥಾನಮಾನಗಳಿದ್ದರೆ ಆತನು ಅಖಿಲ ಭಾರತ ವ್ಯಕ್ತಿಯಾಗುತ್ತಿದ್ದನು. ಆತನ ಗ್ರಂಥಗಳು ಭಾರತೀಯ ಭಾಷೆಗಳಿಗೆಲ್ಲ ಪರಿವರ್ತನವಾಗುತ್ತಿತ್ತು. ಪಂಡಿತನೂ ಸುಸಂಸ್ಕೃತನೂ ಆದುದರಿಂದ ಆತನು ಖಂಡನಮಾಡುವಾಗ ಎಲ್ಲಿಯೂ ಗಾಂಭೀರ್ಯದ ಎಲ್ಲೆಯನ್ನು ಮೀರಿಲ್ಲ. ಈಗಲೂ ಆತನ ಅಣಕಗಬ್ಬಗಳೂ ಪ್ರಹಸನಗಳೂ ತಮ್ಮ ಪ್ರಚಾರಕ ಉದ್ದೇಶವನ್ನು ಬಿಟ್ಟರೂ ಉತ್ತಮ ಗುಣಗಳಿಂದ ಕೂಡಿ ಇತರ ಭಾಷೆಗೆ ಪರಿವರ್ತನವಾಗಲು ಯೋಗ್ಯವಾಗಿವೆ.

ಆಧುನಿಕ ಕವಿಶ್ರೇಣಿಯಲ್ಲಿ ಜಯಪುರದ ಮಹಾರಾಜ ವಿಕ್ರಮ ದೇವವರ್ಮರ ಹೆಸರು ಚಿರಸ್ಮರಣೀಯವಾದುದು. ಇವರು ತೆಲುಗು, ಸಂಸ್ಕೃತ, ಒರಿಯ ಭಾಷೆಗಳಲ್ಲಿ ಪಂಡಿತರು. ಈ ಮೂರು ಭಾಷೆಗಳಲ್ಲಿಯೂ ಕವನಗಳನ್ನು ರಚಿಸಿದ್ದಾರೆ. ಸ್ವತಃ ಕವಿಗಳೂ ಕವಿಜನಾಶ್ರಯರೂ ಆಗಿದ್ದಾರೆ. ಆಂಧ್ರದೇಶದಲ್ಲಿ ಬಹು ವಿಖ್ಯಾತರಾಗಿದ್ದಾರೆ.

ಕಾವ್ಯಪ್ರಪಂಚದಲ್ಲಿ ಸರ್ ಸಿ. ಆರ್. ರೆಡ್ಡಿಯವರದೂ ಹಿರಿಯ ಹೆಸರು. ವಿದ್ಯಾರ್ಥಿಯಾಗಿದ್ದಾಗ ರಚಿಸಿದ 'ಮುಸಲಮ್ಮ ಮರಣಮ್' ಎಂಬ ಆದ್ಯಪ್ರಯತ್ನ ಆಶಾಜನಕವಾಗಿದೆ. 'ಅರ್ಥಶಾಸ್ತ್ರಮು' ಎಂಬ ಗ್ರಂಥದ ಉಪೋದ್ಘಾತದಲ್ಲಿ ಬರುವ ಅಂಕಿತಪದ್ಯಗಳು ಭಾವಮಯವಾಗಿವೆ. ಕಾವ್ಯಪ್ರಪಂಚದಲ್ಲಿಯೇ ತೊಡಗಿದ್ದರೆ ಅದ್ಭುತಕವಿಗಳಾಗುತ್ತಿದ್ದರು. ಇವರ 'ಕವಿತ್ವ ತತ್ವವಿಚಾರಮು' "ವ್ಯಾಸಮಂಜರಿ" ಒಳ್ಳೆಯ ವಿಮರ್ಶೆ ಗ್ರಂಥಗಳು. ಅನೇಕ ಕವಿಗಳಿಗೆ ಆಶ್ರಯದಾತರೂ ಪೋಷಕರೂ ಆಗಿದ್ದರು. ಉತ್ತಮ ವಿಮರ್ಶಕರಾದ ಪಿಠಾಪುರದ ಈಗಿನ ಯುವರಾಜಸಾಹೇಬ್ ಶ್ರೀರಾವ್ ವೆಂಕಟ ಮಹೀಪತಿ, ಗಂಗಾಧರ ರಾಮರಾವ್ ಶ್ರೇಷ್ಠಕವಿಗಳು. ಆಂಧ್ರ ಸಾಹಿತ್ಯಪ್ರಪಂಚಕ್ಕೆ ಊರುಗೋಲಿನಂತಿದ್ದಾರೆ.

**ನಾಟಕಗಳು**—ತೆಲುಗುಸಾಹಿತ್ಯದಲ್ಲಿ ಇತ್ತೀಚಿನ ವರೆಗೆ ನಾಟಕಗಳೇ ಇರಲಿಲ್ಲ. ಮೊದಲನೆಯ ನಾಟಕವಾದ 'ಪ್ರಬೋಧ ಚಂದ್ರೋದಯ'ವೂ ಕಾವ್ಯವಾಗಿ ಮಾರ್ಪಾಟಾಯಿತು. ಆದರೂ ನಾಟ್ಯಕಲೆ ಆಂಧ್ರದೇಶದಲ್ಲಿ ಜೀವಂತವಾಗಿ ಬೆಳೆಯುತ್ತಲೇ ಬಂದಿದೆ. ಭಾಗವತರ ಕೂಟಗಳೆಲ್ಲ ನಾಟಕಸಂಘಗಳೇ ಆಗಿದ್ದುವು. ಅವರ ಆಟಗಳೆಲ್ಲ ಸಂಸ್ಕೃತದ ನಾಟಕಗಳನ್ನಾಶ್ರಯಿಸಿ ದೇಶೀಯವಾದ ಮಾರ್ಗದಲ್ಲಿ ಬೆಳೆದು ಬಂದಿವೆ.

'ಭಾಗವತ'ಗಳ ಪಾತ್ರಗಳೆಲ್ಲ ಮಲಬಾರಿನ ಕಥಕಳಿಯ ಹಾಗೆ ಅಭಿನಯ ಮಾಡುತ್ತಾರೆ, ಹಾಡುತ್ತಾರೆ ಮತ್ತು ನೃತ್ಯಮಾಡುತ್ತಾರೆ. ಸಂಸ್ಕೃತದಲ್ಲಿ ಬಹುಶಃ ಕಾಳಿದಾಸನಿಗಿಂತ ಹಿಂದೆಯೇ ನಾಟ್ಯವು ನಾಟಕಗಳಿಂದ ದೂರವಾಗಿರಬೇಕು. ಆದರೆ ಆಂಧ್ರದಲ್ಲಿ ನಾಟ್ಯಕ್ಕೆ ಪ್ರಧಾನಸ್ಥಾನ. ಭಾಗವತ ಸಂಪ್ರದಾಯವು ಈಗಲೂ ಕುಚಿಪುಡಿ ಭಾಗವತರುಗಳಿಂದ ಪೋಷಿಸಲ್ಪಡುತ್ತಿದೆ. ಭಾಗವತರ ನಾಟಕಗಳು ಕವನ, ಗೀತ, ಅಭಿನಯ, ಮತ್ತು ನಾಟ್ಯಗಳ ಅದ್ಭುತ ಸಮನ್ವಯ. ಈ ನಾಟ್ಯಕ್ಕೆ ಭರತ ನಾಟ್ಯವೆಂದು ಹೆಸರು. ಇವು ಇಂದಿಗೂ ಬಹು ಮನೋಹರವಾಗಿವೆ. ಇದರ ಪುನರುದ್ಧಾರಕ್ಕೆ ಬೇಕಾಗಿರುವುದು ಅವರ ಸಂಗೀತದಲ್ಲಿ ಸ್ವಲ್ಪ ಪರಿಷ್ಕರಣ. ಇದು ಕೂಡದೆಂದೂ ಅದು ಇರುವ ಹಾಗೆ ಇದ್ದು ಅದರ ಮೂಲರೂಪವನ್ನು ಉಳಿಸಿಕೊಂಡು ಬರಬೇಕೆಂದೂ ಕೆಲವು ಸಂಪ್ರದಾಯವಾದಿಗಳು ಹಟಹಿಡಿಯುತ್ತಾರೆ. ಅದು ಅಷ್ಟೇನೂ ಸೂಕ್ತವಲ್ಲವೆಂದು ಕಾಣುತ್ತದೆ.

ಆದರೂ ಸಂಸ್ಕೃತ ನಾಟಕಗಳ ಮಾದರಿಯ ನಾಟಕಗಳು ಆಧುನಿಕ ಕಾಲದ ವರೆಗೆ ತೆಲುಗರಲ್ಲಿ ಬಳಕೆಯಲ್ಲಿರಲಿಲ್ಲ. ಇಂಗ್ಲಿಷ್ ವಿದ್ಯಾಭ್ಯಾಸವು ರೂಢಿಗೆ ಬಂದಮೇಲೆ ಆಂಧ್ರರು ತಮ್ಮಲ್ಲಿಯೂ ಅಂತಹ ನಾಟಕಗಳ ಆವಶ್ಯಕತೆಯನ್ನು ಮನಗಂಡರು. ಈ

ಮಧ್ಯೆ ಧಾರವಾಡದ ಪಾರ್ಸಿ ನಾಟಕಮಂಡಳಿಯವರು ನಾಡಿನಲ್ಲೆಲ್ಲಾ ಸಂಚರಿಸಿ ಹಿಂದೀ ನಾಟಕಗಳನ್ನು ಅಭಿನಯಿಸಿದರು. ಇದನ್ನು ನೋಡಿ ವಿಜಯನಗರದ ಮಹಾರಾಜರಾದ ಆನಂದ ಗಜಪತಿಯವರು ಸಂಸ್ಕೃತ ನಾಟಕ ಸಂಘವನ್ನು ಸ್ಥಾಪಿಸಿ ಸಂಸ್ಕೃತ ನಾಟಕಗಳನ್ನು ಆಡಿಸಿದರು. ಅವರ ಅವಸಾನದೊಂದಿಗೆ ಸಂಘಕ್ಕೂ ಅವಸಾನವು ಪ್ರಾಪ್ತವಾಯಿತು. ಈ ಕಾಲಕ್ಕಾಗಲೇ ಸಂಸ್ಕೃತ ನಾಟಕಗಳು ತೆಲುಗಿಗೆ ಭಾಷಾಂತರವಾಗಲು ಪ್ರಾರಂಭವಾಗಿತ್ತು. ಕೊಕ್ಕೊಂಡ ವೆಂಕಟರತ್ನಂ ರವರ 'ನರಕಾಸುರವಿಜಯ ವ್ಯಾಯೋಗ'ವು ಮೊದಲನೆಯದಾಯಿತು. ಆಮೇಲೆ ವೀರೇಶಲಿಂಗಂ ಅವರ 'ಅಭಿಜ್ಞಾನ ಶಾಕುಂತಲ' 'ರತ್ನಾವಳಿ' ತಲೆಹಾಕಿದವು. ಷೇಕ್ಸ್‌ಪಿಯರಿನ 'ಮರ್ಚೆಂಟ್ ಆಫ್ ವೆನಿಸ್', 'ಕಾಮೆಡಿ ಆಫ್ ಎರರ್ಸ್' ಎಂಬ ನಾಟಕಗಳು ಇವರಿಂದ ಪರಿವರ್ತಿತವಾದುವು. ಮುಂದೆ ಬಳ್ಳಾರಿಯಲ್ಲಿ, 'ಸರಸ ವಿನೋದಿನೀ ಸಭೆ'ಯೂ ಮದ್ರಾಸಿನಲ್ಲಿ 'ಸುಗುಣ ವಿಲಾಸಿನೀ ಸಭೆ'ಯೂ ಪ್ರಾರಂಭ ವಾದುವು. ಸುಗುಣ ವಿಲಾಸನೀ ಸಭೆಯಲ್ಲಿ ಎಲ್ಲಾ ಭಾಷೆಯ ನಾಟಕಗಳೂ ಅಭಿ ನಯಿಸಲ್ಪಡುತ್ತಿದ್ದವು. ಮೊದಲನೆಯ ಸಭೆಗೆ ಮೂಲಶಕ್ತಿ ಧರ್ಮವರಂ ಕೃಷ್ಣಮಾ ಚಾರಿಯವರು. ಇವರು ಶ್ರೇಷ್ಠ ನಟರೇ ಅಲ್ಲದೆ ಉತ್ತಮವರ್ಗದ ನಾಟಕಕರ್ತೃಗಳೂ ಆಗಿದ್ದರು. ಈ ಸಭೆಗಳನ್ನು ನೋಡಿ ದೇಶದಲ್ಲೆಲ್ಲಾ ಅನೇಕ ನಾಟಕ ಸಭೆಗಳು ಪ್ರಾರಂಭವಾದುವು. ಇವುಗಳಲ್ಲಿ 'ಚಿಂತಾಮಣಿ ನಾಟಕ ಸಮಾಜಮ್' (ರಾಜ ಮಹೇಂದ್ರದಲ್ಲಿ—ನಾಗೇಶ್ವರರಾವ್ ಗುನ್ನೇಶ್ವರರಾವ್ ನೇತೃತ್ವದಲ್ಲಿ) ಜಗನ್ಮಿತ್ರ ನಾಟಕ ಸಮಾಜಮ್ (ವಿಜಯನಗರದಲ್ಲಿ—ರಾಜಾವಿಕ್ರಮದೇವರ ಆಶ್ರಯದಲ್ಲಿ) 'ಸುರಭಿ ಕಂಪೆನಿ'ಗಳು ಮುಖ್ಯವಾದುವು. ಈ ಸಭೆಯ ಸದಸ್ಯರೆಲ್ಲ ಸಾಮಾನ್ಯವಾಗಿ ಒಂದೇ ಮನೆತನಕ್ಕೆ ಸೇರಿದವರು. ಒಂದೊಂದು ಸಭೆಗೂ ಪ್ರತ್ಯೇಕ ನಾಟಕ ಕರ್ತೃ ವಿರುತ್ತಿದ್ದನು. ಆತನು ಆ ಪಾತ್ರಗಳಿಗನುಗುಣವಾಗಿ ನಾಟಕವನ್ನು ರಚಿಸುತ್ತಿದ್ದನು. ಪಾತ್ರಗಳಿಗೆ ಯೋಗ್ಯರಾದ ನಟರನ್ನು ಆರಿಸುವ ಬದಲು ನಟರಿಗೆ ಹೊಂದಿಕೊಳ್ಳತಕ್ಕ ಪಾತ್ರನಿರ್ಮಾಣಕ್ಕೆ ತೊಡಗಿದುದರಿಂದ ಹೆಚ್ಚು ಸಂಖ್ಯೆಯ ಉತ್ತಮಮಟ್ಟದ ನಾಟಕಗಳ ರಚನೆಗೆ ಸಾಧ್ಯವಾಗಲಿಲ್ಲ. ಆದರೂ ಕೆಲವು ಶ್ರೇಷ್ಠ ನಾಟಕಗಳು ರಚಿತ ವಾಗಿ ಜನಪ್ರಿಯವಾದುವು.

ಆರಂಭಕಾಲದ ನಾಟಕ ಕರ್ತೃಗಳಲ್ಲಿ ಧರ್ಮವರಂ ಕೃಷ್ಣಮಾಚಾರ್ಯರು ಮತ್ತು ಕೋಲಾಚಲಂ ಶ್ರೀನಿವಾಸರಾಯರ ಹೆಸರು ಪ್ರಮುಖವಾಗಿ ಕಾಣುತ್ತದೆ. ಕೃಷ್ಣಮಾ ಚಾರ್ಯರು ೩೦ ನಾಟಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ೧೩ ಅಚ್ಚಾಗಿವೆ. ಅವರ ನಾಟಕಗಳಲ್ಲಿ 'ವಿಷಾದ ಸಾರಂಗಧರ', 'ಚಿತ್ರನಳೀಯಮ್', 'ಪ್ರಹ್ಲಾದ', 'ಪಾದು

ಕಾಪಟ್ಟಾಭಿಷೇಕಮ್' ಇವು ಬಹು ಪ್ರಸಿದ್ಧವಾದುವು.[1] ಇವರಿಗೆ 'ಆಂಧ್ರನಾಟಕ ಪಿತಾಮಹ' ಎಂಬ ಬಿರುದಿದೆ. ಶ್ರೀನಿವಾಸರಾಯರು ಅನೇಕ ನಾಟಕಗಳನ್ನು ಬರೆದಿದ್ದರೂ ಅವರ ಐತಿಹಾಸಿಕ ನಾಟಕ (ಮೊತ್ತಮೊದಲನೆಯ ತೆಲುಗು ಐತಿಹಾಸಿಕ ನಾಟಕ)ವಾದ 'ವಿಜಯನಗರ ರಾಜ್ಯಪತನ'ವೇ ಬಹು ಪ್ರಖ್ಯಾತವಾಗಿ ಅವರಿಗೆ ಕೀರ್ತಿಯನ್ನು ತಂದಿರುವುದು. ಚಿಲಕಮರ್ತಿ ಲಕ್ಷ್ಮೀನರಸಿಂಹಂ ಅವರು ಅನೇಕ ನಾಟಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಪ್ರಸನ್ನಯಾದವಮ್' ಮತ್ತು 'ಗಯೋಪಾಖ್ಯಾನಮ್' ಸರ್ವಾದರಣೀಯವಾಗಿವೆ. ಬಲಿಜೇಪಲ್ಲಿ ಲಕ್ಷ್ಮೀಕಾಂತಂ ಅವರ 'ಸತ್ಯಹರಿಶ್ಚಂದ್ರ', ಇಚ್ಛಾಪುರವು ಯಜ್ಞನಾರಾಯಣರ 'ರಸಪುತ್ರವಿಜಯಂ', ವೇದವೆಂಕಟರಾಯ ಶಾಸ್ತ್ರಿಗಳ 'ಪ್ರತಾಪರುದ್ರೀಯಮ್' ವಡ್ಡಾದಿ ಸುಬ್ಬರಾಯಡು ಅವರ 'ವೇಣೀಸಂಹಾರಂ' ಇವು ಇತರ ಪ್ರಸಿದ್ಧ ತೆಲುಗು ನಾಟಕಗಳು. ಉಮ್ಮರ್ ಆಲಿಷಾ ಅವರಿಂದ ರಚಿತವಾದ 'ಬಿಲ್ಹಣೀಯಂ' ಪ್ರತ್ಯೇಕ ಸ್ಥಾನವನ್ನಾಕ್ರಮಿಸಿದೆ.

ಗುರುಜಾಡ ಅಪ್ಪಾರಾಯರ 'ಕನ್ಯಾಶುಲ್ಕ'ವೇ ತೆಲುಗು ಭಾಷೆಯ ಪ್ರಥಮ ಸಾಮಾಜಿಕ ನಾಟಕ. ಇದರಲ್ಲಿ ಸಣ್ಣ ಹೆಣ್ಣುಮಕ್ಕಳನ್ನು ವೃದ್ಧರಿಗೆ ಮಾರುವ ದುಷ್ಟ ಪದ್ಧತಿಯು ತೀವ್ರವಾಗಿ ಖಂಡಿಸಲ್ಪಟ್ಟಿದೆ. ವಿಧವಾವಿವಾಹವು ಪುಷ್ಟೀಕೃತವಾಗಿದೆ. ಇದರಲ್ಲಿ ಬರುವ ಗಿರೀಶನ ಪಾತ್ರವು ಅದ್ಭುತವಾಗಿದೆ.[2] ಇದೇ ಮಾದರಿಯವು ವೀರೇಶಲಿಂಗಂ ಅವರ 'ಬ್ರಾಹ್ಮ ವಿವಾಹಮ್' ಮತ್ತು ಕಾಳ್ಳೂರಿ ನಾರಾಯಣರಾಯರ 'ಕಂಠಾಭರಣಮ್'. ಈಚೆಗೆ ವರದಕ್ಷಿಣೆ, ಅಸಮಾನವಿವಾಹ, ಬಲಾತ್ಕಾರ ವಿವಾಹ ಪದ್ಧತಿ ಮೊದಲಾದ ವಿಷಯಕವಾದ ಅನೇಕ ರೂಪಕಗಳು ಹುಟ್ಟಿವೆ.

ಇತ್ತೀಚೆಗೆ ಐತಿಹಾಸಿಕ ನಾಟಕಗಳಾದ ಉಸ್ಭವ ಲಕ್ಷ್ಮೀನಾರಾಯಣರಾಯರ 'ನಾಯಕುರಾಲು', ದುವ್ವೂರಿ ರಾಮಿರೆಡ್ಡಿಯವರ 'ಕುಂಭರಾಣಾ' ಬಹು ಪ್ರಸಿದ್ಧಿಗೆ ಬರುತ್ತಿವೆ. ಶಾತವಾಹನರ, ಕಾಕತೀಯರ, ರೆಡ್ಡಿದೊರೆಗಳ ಪತನದ ವಿವರಗಳು ಸರಿಯಾಗಿ ತಿಳಿದಿಲ್ಲ. ಅವೆಲ್ಲ ಉತ್ತಮ ನಾಟಕಗಳ ವಸ್ತುವಾಗಬಹುದಿತ್ತು. ಗಂಗರ ವಿಷಯಕವಾದ ತೆಲುಗುಶಾಸನಗಳಿದ್ದರೂ ಅವುಗಳ ವಿವರ ಗೊತ್ತಿಲ್ಲದುದರಿಂದ ನಾಟಕದ ವಸ್ತುವಾಗಲು ಅರ್ಹವಲ್ಲ. ವಿಜಯನಗರದ ಚರಿತ್ರೆಗೆ ಸಂಬಂಧಪಟ್ಟ ಕೆಲವು ನಾಟಕಗಳು ರಚಿತವಾಗಿವೆ.

ಅಬ್ಬೂರಿ ರಾಮಕೃಷ್ಣರಾಯರ 'ನದೀಸುಂದರಿ' ಅದ್ಭುತವಾದ ಗೀತನಾಟಕ. ತಲ್ಲಾವಜ್ಝಲು ಶಿವಶಂಕರಶಾಸ್ತ್ರಿಯವರು 'ಗೇಯನಾಟಕಿಲು' ಎಂಬ ಪೂರ್ಣ

---

[1] ವಿಷಾದ ಸಾರಂಗಧರ ತೆಲುಗಿನಲ್ಲಿ ಮೊದಲ ರುದ್ರನಾಟಕ.

[2] ಈ ನಾಟಕವು ಕನ್ನಡಕ್ಕೆ ಪರಿವರ್ತನೆಯಾಗಿದೆ.

ಪದ್ಯಮಯವಾದ ಅನೇಕ ನಾಟಕಗಳನ್ನು ರಚಿಸಿದ್ದಾರೆ. ವಿರಾಪುರಂ ಯುವರಾಜ ಸಾಹೇಬರೂ ಅನೇಕ ನಾಟಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಅಲೋಕಂಸುಂಡೀ ಆವ್ಹಾನಮು' ಪ್ರಸಿದ್ಧವಾದುದು.

ತಾತ್ವಿಕ ಮತ್ತು ದಾರ್ಶನಿಕ ನಾಟಕಗಳು ವಿಶೇಷವಾಗಿಲ್ಲ. ವೀರೇಶಲಿಂಗಂ ಅವರ 'ಪ್ರಬೋಧ ಚಂದ್ರೋದಯ'ದ ಭಾಷಾಂತರ, ಕಾಂಚನಪಲ್ಲಿ ಕನಕಾಂಬಾ ರಚಿತ 'ಹಂಸವಿಜಯಮ್' ಇವು ಕೆಲವು ಆ ಜಾತಿಯವು. ಧಾರ್ಮಿಕ ನಾಟಕಗಳು ಅನೇಕವಿವೆ. ಭಾರತ, ಭಾಗವತ, ರಾಮಾಯಣವಿಷಯಕವಾದ ಅನೇಕ ನಾಟಕಗಳು ಜನಪ್ರಿಯವಾಗಿವೆ. ಜೀವನದ ಆಳವಾದ ಸಮಸ್ಯೆಗಳನ್ನು ಕುರಿತ ತಾತ್ವಿಕ ದಾರ್ಶನಿಕ ನಾಟಕಗಳು ಇಲ್ಲವೆಂದೇ ಹೇಳಬಹುದು.

ಏಕಾಂಕ ನಾಟಕಗಳೂ ಬಹುಸಂಖ್ಯೆಯಲ್ಲಿ ರಚಿತವಾಗುತ್ತಿವೆ. ಇವು ವಾಚನಕ್ಕೆ ಯೋಗ್ಯವಾದುವೇ ವಿನಾ ಅಭಿನಯಕ್ಕೆ ಹೊಂದತಕ್ಕವಲ್ಲ. ಇವುಗಳಲ್ಲಿ ಉತ್ತಮವಾದು ವೆಲ್ಲ ಪ್ರಹಸನಗಳು ಅಥವಾ ವಿಡಂಬನಗಳು. ಚಿಲಕಮರ್ತಿ ಮತ್ತು ವಿರೇಶಲಿಂಗಂ ಇವರುಗಳಿಂದ ರಚಿತವಾದುವು. ಸ್ತ್ರೀಯರ ಅಜ್ಞಾನ, ಪಂಡಿತರ ಅರ್ಥವಿಲ್ಲದ ಶುಷ್ಕವಾಗ್ವಾದ, ಮೂಢನಂಬಿಕೆಗಳು, ಸಮಾಜದ ದುರಾಚಾರಗಳು, ಜಾತೀಯತೆ ಗ್ರಾಮಕಲಹ, ಲಂಚರುಷುವತ್ತುಗಳು, ಜನಗಣನೆ ಮೊದಲಾದ ಅನೇಕ ವಿಷಯ ಗಳನ್ನು ಕುರಿತವಾಗಿವೆ; ಪಾನುಗುಂಟಿ ಲಕ್ಷ್ಮೀನರಸಿಂಹಂ ಬಹು ಜನಪ್ರಿಯನಾದ ಹಾಸ್ಯನಾಟಕ ಕರ್ತೃ. ಆತನ 'ಸಾಕ್ಷಿ' ಆತನಿಗೆ ವಿಶೇಷ ಪ್ರಖ್ಯಾತಿಯನ್ನುಂಟು ಮಾಡಿದೆ. ಹಾಗೆಯೇ ಭಮಡಿಪಾಟಿ ಕಾಮೇಶ್ವರರಾವ್, ಜಿ. ವೆಂಕಟಾಚಲಂ ಅವರು ಈ ಕ್ಷೇತ್ರದಲ್ಲಿ ಗಣ್ಯರಾಗಿದ್ದಾರೆ.

ಜಿ. ಸೀತಾರಾಮಶಾಸ್ತ್ರಿಯವರ 'ಆಂಧ್ರ ನಾಟಕರಂಗಮು' ಎಂಬ ಗ್ರಂಥದಲ್ಲಿ ನಾಟಕಗಳ ಸರ್ವವಿಷಯಕವಾದ ದೀರ್ಘ ವಿವರಣೆಯಿದೆ. ಪುರಾಣಮ್ ಸೂರಿ ಯವರ 'ಆಂಧ್ರ ನಾಟಕ ಸಂಸ್ಕರಣಮು' ಮತ್ತು ಆರ್. ಅನಂತಕೃಷ್ಣಶರ್ಮರವರ 'ನಾಟಕೋಪನ್ಯಾಸಮುಲು' ಇಂತಹ ಇತರ ಗ್ರಂಥಗಳು.

ಕಳೆದ ಕೆಲವು ವರ್ಷಗಳಿಂದ 'ಆಂಧ್ರ ನಾಟಕ ಕಳಾಪರಿಷತ್ತು' ನಾಟಕ ಕ್ಷೇತ್ರದಲ್ಲಿ ಬಹು ಉಪಯುಕ್ತವಾದ ಕಾರ್ಯವನ್ನು ಮಾಡುತ್ತಿದೆ. ಇದರ ನೆರವಿ ನಿಂದ ನಟರೂ ನಾಟಕಕರ್ತರೂ ಕಲೆತು ವಿಚಾರ ವಿನಿಮಯಮಾಡಲು ಬಹು ಸೌಕರ್ಯವಾಗಿದೆ. ಈ ಸಂಸ್ಥೆಯು ಉತ್ತಮ ನಟರಿಗೂ ನಾಟಕಕಾರರಿಗೂ ಬಹುಮಾನಗಳನ್ನೇರ್ಪಡಿಸಿ ಅಭಿನಯಕಲೆಗೆ ಪ್ರೋತ್ಸಾಹವನ್ನೀಯುತ್ತಿದೆ.

**ಕಾದಂಬರಿ ಸಣ್ಣಕಥೆ ಪ್ರಬಂಧಗಳು**—ತೆಲುಗಿನಲ್ಲಿ ಕಾದಂಬರಿ ಸಾಹಿತ್ಯ

ಹುಲುಸಾಗಿ ಬೆಳದಿದೆ. ವಿಧವಿಧವಾದ ಅನೇಕ ಕಾದಂಬರಿಗಳು ರಚಿತವಾಗಿವೆ. ಇಂಗ್ಲೀಷ್ ಮತ್ತು ಬಂಗಾಳಿ ಭಾಷೆಗಳಿಂದ ಪರಿವರ್ತಿತವಾದುವು ಹಲವು. ಇತರ ಕ್ಷೇತ್ರಗಳಂತೆಯೇ ಇಲ್ಲಿಯೂ ವೀರೇಶಲಿಂಗಂ, ಮತ್ತು ಚಿಲಕಮರ್ರಿ ಲಕ್ಷ್ಮೀ ನರಸಿಂಹಂ ಆದ್ಯಪ್ರವರ್ತಕರು. ಅವರ ಕಾದಂಬರಿಗಳು ಬಹು ಉಚ್ಚಮಟ್ಟದವು. ಐತಿಹಾಸಿಕ ಸಾಮಾಜಿಕ ಕಾದಂಬರಿಗಳೇ ಹೆಚ್ಚು. ಮುಂದಿನ ಐತಿಹಾಸಿಕ ಕಾದಂಬರಿ ಗಳೆಲ್ಲ ವಿಜಯನಗರ, ಓರಗಲ್ಲು, ರಾಜಮಹೇಂದ್ರವರಮು, ರೆಡ್ಡಿ ಸಂಸ್ಥಾನಗಳು ಮತ್ತು ಜಮೀನ್‌ದಾರಿ ಮನೆತನಗಳು ಇವುಗಳ ಇತಿಹಾಸಗಳಿಗೆ ಸಂಬಂಧಪಟ್ಟವು. ರಾಜಪುತ್ರರು ಮಹಾರಾಷ್ಟ್ರರು ತೊಗಲಕರಿಗೆ ಸಂಬಂಧಪಟ್ಟ ಕೆಲವು ಕಾದಂಬರಿ ಗಳೂ ಇವೆ. ಈ ಕ್ಷೇತ್ರದಲ್ಲಿ ಭೋಗರಾಜು ನಾರಾಯಣಮೂರ್ತಿಯವರ 'ಅಸ್ತ ಮಯಮು' ಚಿಲುಕುರಿ ವೀರಭದ್ರರಾಯರ 'ನಾಯಕುರಾಲಿದರ್ಪಮು' ಗಣ್ಯ ವಾಗಿವೆ.

ಸಾಮಾಜಿಕ ಕಾದಂಬರಿಗಳಲ್ಲಿ ವೀರೇಶಲಿಂಗಂ ಅವರ 'ರಾಜಶೇಖರಚರಿತಮು', ಲಕ್ಷ್ಮೀನರಸಿಂಹಂ ಅವರ 'ಹೇಮಲತಾ' ಮತ್ತು 'ಕರ್ಪೂರ ಮಂಜರಿ', ಕೇತ ವರುಪು ವೆಂಕಟಶಾಸ್ತ್ರಿಯವರ 'ಲಕ್ಷ್ಮೀಪ್ರಸಾದಮು' ಮತ್ತು 'ರಾಜ್ಯಲಕ್ಷ್ಮಿ', ವಿಶ್ವನಾಥ ಸತ್ಯನಾರಾಯಣರ 'ಚೆಲಿಯಲಿಕಟ್ಟ', 'ದೇಯಿಪಡಗಲು' ಉತ್ತಮ ಶ್ರೇಣಿಯವು.

ಪತ್ತೇದಾರೀ ಕಾದಂಬರಿಗಳೂ ತೆಲುಗಿನಲ್ಲಿ ಹೇರಳವಾಗಿವೆ. ಮನರಂಜನವೇ ಅವುಗಳ ದೃಷ್ಟಿ. ಕೆಲವನ್ನು ಬಿಟ್ಟರೆ ಉಳಿದುವು ಕಾಲ್ಪನಿಕ. ಭಾಷಾಂತರಗಳೇ ಹೆಚ್ಚು. ಪೂರ್ವಘಟ್ಟದ ಪರ್ವತವಾಸಿಗಳನೇಕರು ಕಳ್ಳರೂ ದಂಗೆಕೋರರೂ ಆಗಿ ಸ್ವತಂತ್ರ ಕಾದಂಬರಿಗಳಲ್ಲಿ ಭಾಗವಹಿಸುತ್ತಾರೆ.

ಭಾರತದ ರಾಷ್ಟ್ರೀಯ ಸಭೆಯ ಕಾರ್ಯಕಲಾಪಗಳೂ ಅನೇಕ ಕಾದಂಬರಿ ಗಳಿಗೆ ವಸ್ತುಗಳನ್ನೊದಗಿಸಿಕೊಟ್ಟಿವೆ. ಇಂತಹವುಗಳಲ್ಲಿ ಬಹು ಪ್ರಸಿದ್ಧವಾದುದು ಉನ್ನವ ಲಕ್ಷ್ಮೀನಾರಾಯಣರಾಯರ 'ಮಾಲಪಲ್ಲೆ' (ಹರಿಜನರ ಹಳ್ಳಿ) ಎಂಬುದು. ಇದು ಕೆಲವು ಕಾಲ ಸರ್ಕಾರದಿಂದ ಬಹಿಷ್ಕೃತವಾಗಿದ್ದು ಈಗ ಸರ್ವತ್ರ ಪ್ರಚಾರದಲ್ಲಿದೆ.

ಆಂಧ್ರದೇಶದಲ್ಲಿ ಉತ್ತಮ ಕಾದಂಬರೀ ನಿರ್ಮಾಣಕ್ಕೆ ಪಾರಿತೋಷಕಗಳ ಮೂಲಕ ಪ್ರೋತ್ಸಾಹವೀಯುವ ಸಂಸ್ಥೆಗಳೂ ಪ್ರಚಾರಕರೂ ಇದ್ದಾರೆ. ಕೆ. ವಿ. ಲಕ್ಷ್ಮೀನಾರಾಯಣರಾಯರ 'ವಿಜ್ಞಾನ ಚಂದ್ರಿಕಾಮಂಡಲಿ' ಮತ್ತು ಅದರ 'ವಿಜ್ಞಾನ ಚಂದ್ರಿಕಾಮಾಲೆ' (ಮದ್ರಾಸ್) ವೆಂಕಟಕವಿ ಮತ್ತು ಪಾರ್ವತೀಶ್ವರ

ಕವಿಗಳ 'ಆಂಧ್ರಪ್ರಚಾರಿಣೀ ನಿಲಯಮ್' ಮತ್ತು 'ಆಂಧ್ರಪ್ರಚಾರಿಣೀ ಗ್ರಂಥ ಮಾಲೆ' (ರಾಮಚಂದ್ರಪುರಂ) ಅದ್ದೇಪಲ್ಲಿ ಲಕ್ಷ್ಮಣಸ್ವಾಮಿಯವರ 'ಸರಸ್ವತೀ ಗ್ರಂಥ ಮಾಲಾ' (ರಾಜಮಹೇಂದ್ರಿ) ತಾಪಿ ಧರ್ಮರಾಯರ 'ತೀಗುಚುಕ್ಕ ಗ್ರಂಥಮಾಲೆ' ಇವು ಮುಖ್ಯವಾದುವು.

ಗುರುಜಾಡ ಅಪ್ಪಾರಾಯರು ತೆಲುಗು ಸಣ್ಣಕಥೆಯ ಜನಕರು. ಆದರೆ ಗುಡಿ ಪಾಟಿ ವೆಂಕಟಾಚಲಂ ಅವರು ಪ್ರಧಾನ ಕಥೆಗಾರರು. ಇವರೂ ಚಿಂತಾದೀಕ್ಷಿತುಲು ಸೇರಿದ ಮೂವರು ಸಣ್ಣ ಕಥಾಕ್ಷೇತ್ರದಲ್ಲಿ ಅಗ್ರೇಸರರು. ವೆಂಕಟಾಚಲಂ ಅವರು ಸಹಜತೆಯ ಪರಮಾವಧಿಗೆ ಪ್ರಯತ್ನಪಟ್ಟು ಕೆಲವು ಸಲ ಗಾಂಭೀರ್ಯದ ಎಲ್ಲೆಯನ್ನು ಮೀರಿರುವುದುಂಟು. ಆದರೆ ದೀಕ್ಷಿತರು ಆದರ್ಶವಾದಿಗಳಾದುದರಿಂದ ಎಂದಿಗೂ ಗಾಂಭೀರ್ಯವನ್ನು ಕಳೆದುಕೊಳ್ಳುವುದಿಲ್ಲ. ಎಂ. ನಾರಾಯಣಶಾಸ್ತ್ರಿ, ಎಸ್. ಸುಬ್ರಹ್ಮಣ್ಯಶಾಸ್ತ್ರಿ, ಎ. ಬಾಪಿರಾಜು ಇವರು ಮತ್ತೆ ಕೆಲವು ಕಥೆಗಾರರು. ಇವರೆಲ್ಲರೂ ಆಂಗ್ಲ ಸಾಹಿತ್ಯದ ಪ್ರಭಾವವನ್ನು ಹೊಂದಿ ತೆಲುಗು ಜೀವನಕ್ಕೆ ಅನುಗುಣವಾಗಿ ವಸ್ತುಗಳನ್ನು ಅಳವಡಿಸಿಕೊಂಡು ಕಥೆಯನ್ನು ರಚಿಸಿದ್ದಾರೆ.

ಪ್ರಬಂಧಕ್ಷೇತ್ರದಲ್ಲಿಯೂ ವೀರೇಶಲಿಂಗಂ ಮತ್ತು ಲಕ್ಷ್ಮೀನರಸಿಂಹಂ ಅಗ್ರಗಾಮಿಗಳು. ಅವರಿಂದೀಚೆಗೆ ಅನೇಕ ಪ್ರಬಂಧಕಾರರು ಮುಂದೆ ಬಂದಿದ್ದಾರೆ. ಇವರಲ್ಲಿ ಜೊನ್ನಲಗೆಡ್ಡ ಸತ್ಯನಾರಾಯಣ ಒಬ್ಬರು. ಪ್ರವಾಸಿಗಳ ವಿಷಯವಾಗಿ ಇವರು ಪ್ರಬಂಧಗಳನ್ನು ರಚಿಸಿದ್ದಾರೆ. ಪಾನುಗಂಟಿ ಲಕ್ಷ್ಮೀನರಸಿಂಹಂ ಅವರ ಪ್ರಬಂಧ ಗಳು ವಿಡಂಬನಗಳು. ವೀರೇಶಲಿಂಗಂ ಮತ್ತು ರಾಯಸಂ ವೆಂಕಟಶಿವುಡು ಆತ್ಮ ಕಥೆ ಗಳನ್ನು ರಚಿಸಿದ್ದಾರೆ. ತೆಲುಗಿನಲ್ಲಿ ಜೀವನಚರಿತ್ರೆಗಳಿಗೂ ಕೊರತೆಯಿಲ್ಲ. ವೀರೇಶ ಲಿಂಗಂ ಅವರ 'ತೆಲುಗುಕವುಲು', ಗುರುಜಾದ ಶ್ರೀರಾಮಮೂರ್ತಿಯವರ 'ಕವಿ ಜೀವಿತಮುಲು', ವಂಗೂರಿ ಸುಬ್ಬರಾವ್ ಮತ್ತು ವೇಟೂರಿ ಪ್ರಭಾಕರ ಶಾಸ್ತ್ರಿಯವರ ಶ್ರೀನಾಥ ವಿಷಯಕವಾದ ಗ್ರಂಥಗಳೂ ಈ ಜಾತಿಯವು. ವೀರೇಶಲಿಂಗಂ ಅವರ 'ಅಭಾಗ್ಯೋಪಾಖ್ಯಾನಮ್' ಮತ್ತು ತಿರುಪತಿ ಕವಿ ವೆಂಕಟಕವಿಗಳ 'ಗೀರತಮ್' ಉತ್ತಮ ಅಣಕಗಬ್ಬಗಳು.

ವಿಮರ್ಶಾತ್ಮಕಗ್ರಂಥಗಳಲ್ಲಿ ವೀರೇಶಲಿಂಗಂ, ವೆಂಕಟರಾಯಶಾಸ್ತ್ರಿ, ಕೊಕ್ಕೊಂಡ ವೆಂಕಟರತ್ನಂ ಇವರ ಗ್ರಂಥಗಳು ಪ್ರಾಚೀನಮಾರ್ಗದವು. ಸಿ. ಆರ್. ರೆಡ್ಡಿಯವರ 'ಕವಿತ್ವ ತತ್ವವಿಚಾರಮು' ಹೊಸಮಾರ್ಗಕ್ಕೆ ಮಾರ್ಗದರ್ಶಿ. ಇಲ್ಲಿ ಪಾಶ್ಚಾತ್ಯ ಕಾವ್ಯಮೀಮಾಂಸಾದೃಷ್ಟಿಯನ್ನು ತೆಲುಗುಸಾಹಿತ್ಯಕ್ಕೆ ಸಮನ್ವಯಗೊಳಿಸಲು ಪ್ರಯತ್ನ ನಡೆದಿದೆ. ಇಲ್ಲಿಂದ ಮುಂದೆ ಜೊನ್ನಲಗೆಡ್ಡ ಸತ್ಯನಾರಾಯಣರ 'ಸಾಹಿತ್ಯ

ತತ್ವವಿಮರ್ಶನ' ಮತ್ತು ಮಟ್ನೂರಿ ಕೃಷ್ಣರಾಯರ 'ಸಮೀಕ್ಷಾ '—ರಚಿತವಾದುವು. ಇವು ಬಹು ಉತ್ತಮವಾದುವು.

ಭಾಷಾಸಾಹಿತ್ಯಚರಿತ್ರೆಗಳನೇಕ ಪ್ರಕಟಿತವಾಗಿವೆ. ಹಿಂದೆಯೇ ತಿಳಿಸಿದ ವೀರೇಶಲಿಂಗಂ ಅವರ 'ತೆಲುಗು ಕವುಲು', ಶ್ರೀರಾಮಮೂರ್ತಿಯವರ 'ಕವಿಜೀವಿತಮುಲು' ಎಂಬುವುಗಳೇ ಅಲ್ಲದೆ ವಂಗೂರಿ ಸುಬ್ಬರಾಯರ 'ಆಂಧ್ರ ವಾಙ್ಮಯಚರಿತ್ರಮು' ಮತ್ತು 'ಶತಕಕವುಲುಚರಿತ್ರಮು' ಟಿ. ಅಚ್ಯುತರಾಯರ 'ವಿಜಯನಗರ ಆಂಧ್ರವಾಙ್ಮಯ ಚರಿತಮು', ಕವಿತ್ವವೇದಿಯವರ 'ಆಂಧ್ರ ವಾಙ್ಮಯ ಚರಿತ್ರಸಂಗ್ರಹಮು', ಜಿ. ವಿ. ರಾಘವರಾಯರ 'ಆಂಧ್ರ ಗದ್ಯವಾಙ್ಮಯ ಚರಿತ್ರಮು', ಚಿಲುಕೂರಿ ನಾರಾಯಣ ರಾಯರ 'ಆಂಧ್ರ ಭಾಷಾಚರಿತ್ರಮು' ಇವು ಈ ಶಾಖೆಯನ್ನು ಪರಿಪುಷ್ಟವನ್ನಾಗಿ ಮಾಡಿವೆ. ಇದೇ ಸಂದರ್ಭದಲ್ಲಿ ಪಂಡಿತ ಮಲ್ಲಾದಿ ಸೂರ್ಯನಾರಾಯಣಶಾಸ್ತ್ರಿಗಳ 'ಸಂಸ್ಕೃತ ವಾಙ್ಮಯ ಚರಿತ್ರಮು' ಮತ್ತೂ ವೇಲಟೂರಿ ಪ್ರಭಾಕರಶಾಸ್ತ್ರಿಗಳ 'ಚಾಟುಪದ್ಯ ರತ್ನಾವಳಿ,' ಸ್ಮರಣೀಯವಾದುವು. ವಂಗೂರಿ ಸುಬ್ಬರಾವ್, ಸಂದಿ ರಾಜು ಚಲಪತಿರಾವ್ ಮೊದಲಾದವರು 'ಮಂಗಲಹಾರತುಲು' ಅಥವಾ ಆಶೀರ್ವಾದ ಪದಗಳು, ಯಕ್ಷಗಾನಗಳು ಮೊದಲಾದವುಗಳನ್ನು ವಿಶೇಷವಾಗಿ ಸಂಗ್ರಹಿಸಿದ್ದಾರೆ.

ಶಾಸ್ತ್ರಗ್ರಂಥಗಳಲ್ಲಿ ಸಿ. ಆರ್. ರೆಡ್ಡಿಯವರ 'ಅರ್ಥಶಾಸ್ತ್ರಮು' ಮೊದಲನೆಯದು. ಈಚೆಗೆ ಪ್ರೌಢಶಾಲೆಗಳಲ್ಲಿ ತೆಲುಗೇ ಶಿಕ್ಷಣಮಾಧ್ಯಮವಾಗಿರುವುದರಿಂದ ಚರಿತ್ರೆ, ಭೂಗೋಳ, ವಿಜ್ಞಾನ, ಗಣಿತ, ಮನಶ್ಶಾಸ್ತ್ರ ಮೊದಲಾದ ಶಾಖೆಗಳಲ್ಲಿ ಯಥೇಷ್ಟವಾಗಿ ಪಠ್ಯಪುಸ್ತಕಗಳು ಸಿದ್ಧವಾಗಿವೆ. ರಾಷ್ಟ್ರೀಯ ಚಳುವಳಿ ಪ್ರಾರಂಭವಾದ ಮೇಲೆ ಸ್ವದೇಶ ವಿದೇಶ ಸರ್ಕಾರಗಳಿಗೆ ಸಂಬಂಧಪಟ್ಟ ಹತ್ತಾರು ಗ್ರಂಥಗಳು ಬೆಳಕಿಗೆ ಬಂದಿವೆ. ಇವುಗಳೆಲ್ಲ ಸಾಮಾನ್ಯರ ಉಪಯೋಗಕ್ಕಾಗಿ ರಚಿತವಾಗಿರುವುದರಿಂದ ಬಹು ಪ್ರೌಢಮಟ್ಟಕ್ಕೇರಲಾರವು. ಆದರೂ, ಆತ್ಮಕೂರಿ ಗೋವಿಂದಾಚಾರಿಯವರ 'ಭಾರತೀಯಶಾಸ್ತ್ರಮು' ಮತ್ತು 'ಅರ್ಥಶಾಸ್ತ್ರಮು' ಪ್ರೌಢಗ್ರಂಥಗಳು.

ವಿಜ್ಞಾನಕ್ಷೇತ್ರದಲ್ಲಿ ಕೆ. ಕೊಂಡಯ್ಯನವರ 'ವಿಶ್ವರೂಪಮ್' (*The Nature of the Physical World*) ಬಹು ಮುಖ್ಯವಾದುದು. ಜಿ. ವಿ. ರಾಘವರಾಯರ 'ದೈನಂದಿನ ವಿಜ್ಞಾನ', ಗುಳ್ಳಪಳ್ಳಿ ನಾರಾಯಣಮೂರ್ತಿಯವರ 'ರೇಡಿಯೊ' ಇವು ಬಹುಮಾನಪಡೆದ ಗ್ರಂಥಗಳು.

ಆಂಧ್ರ ಸಾಹಿತ್ಯ ಸೇವೆಗೆ ಟೊಂಕಕಟ್ಟಿರುವ ಅನೇಕ ವಿದ್ವತ್ಸಂಸ್ಥೆಗಳಿವೆ. ಇವು

ಗಳಲ್ಲೆಲ್ಲಾ 'ವಿಜ್ಞಾನ ಚಂದ್ರಿಕಾಮಂಡಲಿ' ಪ್ರಮುಖವಾದುದು. ಕೊಮರ್ರಾಜು ಲಕ್ಷ್ಮಣರಾವ್ ಇದರ ಸ್ಥಾಪಕರು. ಈ ಸಂಸ್ಥೆಯು ಅನೇಕ ಉದ್ಗ್ರಂಥಗಳನ್ನು ಪ್ರಕಟಿಸಿದೆ. ರಾಯರ ಅವಸಾನಾನಂತರ ಈ ಸಂಸ್ಥೆಯು ಆರ್ಥಿಕ ಸೌಕರ್ಯವಿಲ್ಲದೆ ನಿಂತುಹೋಯಿತು.

ಪಿತಾಪುರಂ ಮಹಾರಾಜ ಡಾ|| ರಾವ್ ವೆಂಕಟಮಹೀಪತಿ ಸೂರ್ಯ್ಯಾರಾಯರ ಆಶ್ರಯದಲ್ಲಿ ಜಯಂತಿ ರಾಮಯ್ಯಪಂತಲು ಅವರಿಂದ ಆಂಧ್ರ ಸಾಹಿತ್ಯಪರಿಷತ್ತು ಆರಂಭವಾಯಿತು. ಅದರ ಪತ್ರಿಕೆಯಾದ 'ಆಂಧ್ರ ಸಾಹಿತ್ಯಪರಿಷತ್ಪತ್ರಿಕೆ'ಯಲ್ಲಿ ಅನೇಕ ಪ್ರಾಚೀನ ಗ್ರಂಥಗಳು ಪ್ರಚುರವಾಗಿವೆ. ಇದರ ಕಾರ್ಯಸ್ಥಳ ಕೋಕನಾಡ.

ಸಿ. ಆರ್. ರೆಡ್ಡಿಯವರ ನೇತೃತ್ವದಲ್ಲಿ ಗುಂಟೂರಿನಲ್ಲಿ ಸ್ಥಾಪಿತವಾದ 'ನವ್ಯ ಸಾಹಿತ್ಯಪರಿಷತ್ತು' ಆಧುನಿಕ ತೆಲುಗು ಸಾಹಿತ್ಯಕ್ಕೆ ವಿಶೇಷ ಸೇವೆಯನ್ನು ಸಲ್ಲಿಸುತ್ತಿದೆ. ಅದರ ಪತ್ರಿಕೆಯಾದ 'ಪ್ರತಿಭಾ' ಟಿ. ವೆಂಕಟರತ್ನಂ ಅವರ ಸಂಪಾದಕತ್ವದಲ್ಲಿ ಶ್ಲಾಘ್ಯವಾದ ಕೆಲಸವನ್ನು ಮಾಡುತ್ತಿದೆ.

ತೆಲುಗಿನಲ್ಲಿ ಒಳ್ಳೆಯ ನಿಘಂಟುಗಳು ತಯಾರಾಗಿವೆ. ಸೀತಾರಾಮಾಚಾರ್ಯುಲು ಅವರ 'ಶಬ್ದರತ್ನಾಕರಂ' ಉತ್ತಮ ನಿಘಂಟು. ಸಿ. ಪಿ. ಬ್ರೌನ್ ಮತ್ತು ಸಿ. ಎ. ಗಾಲೆಟಿ ಇಂಗ್ಲಿಷ್ ತೆಲುಗುಕೋಶವನ್ನು ರಚಿಸಿದ್ದಾರೆ. ಕೆ. ನಾಗೇಶ್ವರರಾಯರು 'ಆಂಧ್ರ ವಾಙ್ಮಯ ಸರ್ವಸ್ವಮು' ಎಂಬ ಪ್ರಮಾಣಕೋಶವನ್ನು ಸಿದ್ಧಪಡಿಸಿದ್ದಾರೆ. ಪಿತಾಪುರಂ ಮಹಾರಾಜರ ಆಶ್ರಯದಲ್ಲಿ 'ಸೂರ್ಯರಾಯಾಂಧ್ರ ನಿಘಂಟು' ಆಂಧ್ರ ಸಾಹಿತ್ಯ ಪರಿಷತ್ತಿನಿಂದ ಪ್ರಚಾರವಾಗಿದೆ. ರಾಜಾ ಕೆ. ಪ್ರಸಾದರಾಯರು 'ಆಂಧ್ರ ವಿಜ್ಞಾನಮು' 'ವಾವಿಳ್ಳನಿಘಂಟು' ಎಂಬ ವಿಶ್ವಕೋಶವನ್ನು ತಯಾರಿಸಿದ್ದಾರೆ.

ಆಂಧ್ರ ಸಾಹಿತ್ಯದ ಬೆಳವಣಿಗೆಯಲ್ಲಿ ವೃತ್ತಪತ್ರಿಕೆಗಳ ಕಾರ್ಯ ಬಹು ಸ್ತುತವಾದುದು. 'ಆಂಧ್ರಪತ್ರಿಕ' 'ಆಂಧ್ರಪ್ರಭ' ಮೊದಲಾದ ದೈನಂದಿನ ಪತ್ರಿಕೆಗಳೂ, 'ಕೃಷ್ಣಪತ್ರಿಕ', 'ವಿಹಾರಿ,' 'ತ್ರಿಲಿಂಗ' ಮೊದಲಾದ ವಾರಪತ್ರಿಕೆಗಳೂ, 'ಭಾರತಿ' 'ಗೃಹಲಕ್ಷ್ಮಿ' ಆನಂದವಾಣಿಯಂತಹ, ಮಾಸಿಕಗಳೂ ಆಧುನಿಕ ತೆಲುಗುಸಾಹಿತ್ಯದ ಮುನ್ನಡೆಗೆ ವಿಶೇಷ ಸಹಾಯಮಾಡಿದೆ.

ಒಟ್ಟಿನಲ್ಲಿ ತೆಲುಗುಸಾಹಿತ್ಯವು ಸುಮಾರು ಒಂದು ಸಾವಿರ ವರ್ಷದ ತುಂಬು ಜೀವನದಿಂದ ಪರಿಪುಷ್ಟವಾಗಿ ಭಾರತೀಯ ಇತರ ಉಚ್ಚ ಸಾಹಿತ್ಯ ರಾಶಿಗಳೊಡನೆ ಯೋಗ್ಯತೆಯಲ್ಲಿಯೂ ಆಕಾರದಲ್ಲಿಯೂ ಪುಷ್ಟಿಯಲ್ಲಿಯೂ ಭುಜತಟ್ಟಿ ನಿಲ್ಲಲು ಶಕ್ತವಾದದ್ದಾಗಿದೆ.

ಓಂತತ್ಸತ್

## ಪ್ರಮಾಣಕೋಶಗಳು

1. *Telugu Literature*—by B. P. CHENCHIAH and RAJA M. BHUJANGA RAO BAHADUR, Heritage of India Series.
2. *Telugu Literature*—by Prof. P. T. RAJU, M.A., Ph.D., P.E.N. Series.
3. *Encyclopaedia of Literature—Telugu Literature*—by C. NARAYANA RAO.
4. *The Indian Literatures of Today*—(A Symposim) P.E.N. Publication.
5. *The Novel in Telugu Literature*—by Prof. V. N. BHUSHAN (Calcutta Review, Feb. 1957).
6. *Andhra Literature in the Vijayanagar Empire*—J. of A. H.R.S. 1936-37.
7. *Thyagaraja, the Minstrel Saint*—by Prof. PINGLAY, Indian P.E.N. Sept. 1938.
8. *The Telugus and the Epic*—by P. T. RAJU, P.E.N. Oct. 1937.
9. "ಆಂಧ್ರ ಕವುಲ ಚರಿತ್ರಮು"—ರಾ. ಬ. ಕೆ. ವೀರೇಶಲಿಂಗಂ ಪಂತುಲು.
10. "ಕವಿ ಜೀವಿತಮುಲು"—ಗುರುಜಾಡ ಶ್ರೀ ರಾಮಮೂರ್ತಿ.
11. "ಆಂಧ್ರ ವಾಙ್ಮಯ ಚರಿತ್ರಮು" }
12. "ಶತಕಕವುಲು ಚರಿತ್ರಮು" } ವಂಗೂರಿ ಸುಬ್ಬರಾಯುರು
13. "ವಿಜಯನಗರ ಆಂಧ್ರ ವಾಙ್ಮಯ ಚರಿತಮು"—ಟಿ. ಅಚ್ಯುತರಾವ್.
14. "ಆಂಧ್ರ ಗದ್ಯವಾಙ್ಮಯ ಚರಿತಮು"—ಜಿ. ವಿ. ರಾಘವರಾವ್.

ಎನ್. ಅನಂತರಂಗಾಚಾರ್

## ಕಂಡದ್ದು ಮೂರುಸಲ*

ಒಂಬತ್ತು ವರುಷಗಳೀಚೆ ನಿಂತು ನೋಡುವೆ ನಾನು—
ನಿನ್ನ ಆ ಮೇರುಸಮ ಧೀರ ವ್ಯಕ್ತಿತ್ವವನು.
ಮುಗಿಲ ಗೋಡೆಗೆ ಅದಿಗೊ ತೂಗುಬಿಟ್ಟಿದೆ ನೋಡು
ಬರೆದಿಟ್ಟ ಚಿತ್ರಪಟ
ಮೇರುದಂಡದ ತುದಿಗೆ ಹಾರುತಿದೆ ಬಾವುಟ
ನೆಲ ಕಡಲು ಜನಪದದ ಬದುಕೆಲ್ಲ
ಜೀವಂತ ಭೂಪಟ.
ಹಿಮಶೈಲ ಶಾಂತಿಯಲಿ ಜ್ವಲಿಸುತಿದೆ ಇದೋ
ಎದೆಯ ದೇಗುಲದಲ್ಲಿ ನಿತ್ಯನಂದಾದೀಪ
ನಿನ್ನ ರೂಪ !

*   *   *   *   *

ಕಂಡದ್ದು ಮೂರುಸಲ ನಾ ನಿನ್ನ :
ಮೊಟ್ಟಮೊದಲದೊ ಅಲ್ಲಿ,
ಹರೆಯದರಮನೆಯಲ್ಲಿ.
ತುಮುಲದ ಕಡಲು ನಿನ್ನೊಡಲು ;
ತೆರೆಯಮೇಲಾಡಿತ್ತು ಹೊನ್ನಹರಯದ ಬಿಸಿಲು.
ಅಂತರ್ನಭದಿ ಮೊದಲಾಗಿತ್ತು
ಸದಸತ್ತುಗಳ ಗುಡುಗು.
ಸಂಶಯದ ಕಡಲಿನಲಿ ನೂರು ಪ್ರಶ್ನೆಯ ಹಡಗು !

ರುಗ್ಣಶಯ್ಯೆಯಲಿ ಮಲಗಿರಲು ತಂದೆ
ಹುಡುಗ ನೀ ಬಂದೆ.
ಕೈಯೊಳಗಿತ್ತು ತಪ್ಪೊಪ್ಪಿಗೆಯ ಪತ್ರ—
ತಂದೆಗೊಪ್ಪಿಸಿ ಕುಳಿತೆ
ಹೊಯ್ದಾಡಿತ್ತು ಕಣ್ಣಿನ ಹಣತೆ.
ಕರಗಿತ್ತು ಕರುಣೆಯ ಮೇಘ ;

---

* A. I. R. ಕೃಪೆಯಿಂದ.

ಹನಿಹನಿಯಾಗಿ ಜಿಸುಗಿತ್ತು, ತಂದೆಯೆದೆ-
ಯಿಂದಿಳಿದ ಕಂಬಸಿಯ ಹರ್ಷವರ್ಷವಮೋಘ !
ಕಂಡಿತಾ ಕಂಬನಿಯ ಬೆಳಕಿನಲಿ ನಿನ್ನ ಜೀವಸಮಂತ್ರ
ಎದೆಯ ಕೊಳೆ ತೊಳೆದು ನೀ ನಿಂತೆ ನಿರ್ಮಲನಾಗಿ
ಯಜ್ಞ ದೀಕ್ಷಿತನಾಗಿ !

* * * * *

ಮತ್ತೆ ಎರಡನೆಬಾರಿ, ನಾ ಕಂಡೆ ನಿನ್ನ ನಾ
ಆಫ್ರಿಕದ ಕಗ್ಗತ್ತಲಲ್ಲಿ :
ಸಟ್ಟನಡುವಿರುಳಲ್ಲಿ ಎಸೆದು ನಡೆಯಿತು ರೈಲು
ಯಾವುದೋ ನಿಲ್ದಾಣದಲ್ಲಿ.
ಹಾಸುಗಂಬಿಯಮೇಲೆ ಉರುಳಿಹೋದುವು ರೈಲು
ಆ ಇರುಳೆಲ್ಲ, ಮೈಲು ಮೈಲು.
ಏನು ? ಮುಂದೇನು ?
ಪ್ರಶ್ನೆಗಳ ಹೆಡೆಯನೆತ್ತಿತು ಬಾನು :
"ಗಂಡುಸಾದರೆ ನಿನ್ನ ಬಲಿಗೊಡುವೆಯೇನು ?"
ಮೊಳಗಿತ್ತು ನಿರ್ಧಾರ
ಹುತ್ತ ಬೆಳೆಯಿತು ಪೂರ.
ಛಳಿ ; ಕೊರೆವ ಛಳಿಯಲ್ಲಿ ಕುಳಿತನು ಬುದ್ಧ
ನಡುಗುಚಿಕ್ಕೆಯ ಇರುಳ ಮರದ ಕೆಳಗೆ.
ಆಫ್ರಿಕದ ಕಗ್ಗತ್ತಲೆದೆಯಲ್ಲಿ ಹೊಳೆದಿತ್ತು
ಭಾರತಿಯ ಬಿಡುಗಡೆಯ ಬೋಧಿ !

ಎದ್ದೆ—
ಮೈತುಂಬಿ ಎದ್ದೆ, ವಿದ್ಯುತ್ ತರಂಗವಾಗಿ ಬೀಸಿದೆ ನೀನು
ಹಿಮಾಲಯದಿಂದ ಕನ್ಯಾ-
ಕುಮಾರಿಯ ತನಕ ಪ್ರಚಂಡವಾಗಿ !
ಏರಿದುವು, ಹಾರಿದುವು, ಬಣಗು ತೃಣಕಣವೆಲ್ಲ
ಬ್ರಹ್ಮಾಸ್ತ್ರವಾಗಿ
ಮಣ್ಣ ಕಣಕಣವೆಲ್ಲ ಮೈದುಂಬಿ ಕೂಗಿತೊಕ್ಕೊರಲಲ್ಲಿ :
"ಕ್ವಿಟ್ ಇಂಡಿಯಾ. . ."

ಹೂವಿನ ಹಿಡಿಗೆ ಕಬ್ಬಿಣವೆಲ್ಲ ಕರಗಿ ನೀರಾಯ್ತು!
ಕೆಂಪುಬಾವುಟವಿಳಿದು, ತಂಪುಬಾವುಟವೇರಿ
ಬಾನು ಬೆಳಗಾಯ್ತು.
ಕಡಲ ನೀಲಿಯನೀಸಿ ಸಾಗಿಹೋದವು ನೂರು
ಕೊಕ್ಕರೆಯ ಹಡಗು.
ಜೇಡಬಲೆ ಮೋಡಗಳ ಗುಡಿಸಿ ಕಳೆಯಿತುಗಾಳಿ;
ಪಾಚಿಗಳೆದಾ ಕೊಳದಿ ಹೊಳೆವ ಮೀನಿನ ಕೇಳಿ;
ಗುಡಿ ಗುಡಿಯ ಘಂಟೆಯಲಿ ಹೊಮ್ಮಿತ್ತು ಜಯಘೋಷ
ಇರುಳ ಹೊಂಗನಸೆಲ್ಲ ನನಸಾಗಿ
ಜನತೆಯ ತೇರು ಸಿಂಗರವಾಗಿ
ಮೊದಲಾಯ್ತು ಹೊಸಯುಗದ ಜಾತ್ರೆ.
ಜಾತ್ರೆಯುತ್ಸಾಹದಲಿ ನಿನ್ನ ನಾ ಮರೆತೆ!

*           *           *           *           *

ಮತ್ತೆ ಮೂರನೆಬಾರಿ, ನಾ ಕಂಡೆ
ಸ್ವತಂತ್ರ ಭಾರತದ ಜನಸಮುದ್ರದ ತಡಿಯ
ಪ್ರಾರ್ಥನಾ ಶೈಲದಲಿ.
ಮೂರು ಸಿಡಿಗುಂಡುಗಳ ಪೂಜೆ ಸಂದಿತು ಎದೆಗೆ.
ಪಂಜರ ಬಿರಿದು, ರಾಮರಾಮಾ ಎಂದು
ಹಕ್ಕಿ ಹಾರಿತು ಹೊರಗೆ,
ತನ್ನ ಮನೆಗೆ!
ಶಿಲುಬೆಯಲಿ ಕ್ರಿಸ್ತನಿನ್ನೂ ನಿಂತು ಹೇಳುವ ಮಾತು
ಕೇಳಿತು ಕಿವಿಗೆ: 'ಕ್ಷಮಿಸು ತಂದೇ ಕ್ಷಮಿಸು
ಇವರ ಕನಿಕರಿಸು'

ಸೊಂದು ನುಡಿದಿತ್ತು ಕವಿವಾಣಿ:
'ಮತ್ತೆ ಇದೇನು!
ಎಂದೆಂದಿಗು ನಿನಗಿದೆಗತಿಯೇನು?'
ನಾನೆಂದೆ: 'ಎಂದೆಂದಿಗು ನಮಗಿದೆಗತಿಯೇನು?'

*           *           *           *           *

ಒಂಬತ್ತು ವರುಷಗಳೀಚೆ ನಿಂತುನೋಡುವೆ ನಾನು,
ನೀ ತಂದ ಬೆಳಕಿನಲಿ ಖಿನ್ನನಾಗಿ.
ಮತ್ತೆ ಬಿದ್ದಿವೆ ಇದೋ, ಅಂದೆದ್ದ ತರಗೆಲೆ ಕಡ್ಡಿ
ಸ್ವಸ್ವರೂಪದಲಿ ಲೀನವಾಗಿ!
ಅಲ್ಲೊಂದು ಇಲ್ಲೊಂದು ನಿಂತಿಹವು ದೀಪಸ್ತಂಭ
ನಿನ್ನ ಬೆಳಕನೆ ಹೊತ್ತು ಮುಡಿಯತುಂಬ!
ನಂಬಿರುವೆ: ಮೂಡಿಯೇ ಮೂಡುವುದು ಶಾಂತಿಸರ್ವೋದಯದ
ಚಂದ್ರಬಿಂಬ!

ಜಿ. ಎಸ್. ಶಿವರುದ್ರಪ್ಪ

# ‘ಆರಾಧನಾ’ ಮತ್ತು ಅದರ ಟೀಕೆಗಳು

## ಮೂಲಗ್ರಂಥದ ಪರಿಚಯ

**ಗ್ರಂಥದ ಹೆಸರು**—ಇದು ಅತ್ಯಂತ ಪ್ರಸಿದ್ಧವಾದ ಪ್ರಾಚೀನ ಗ್ರಂಥ. ಶೌರಸೇನೀ ಪ್ರಾಕೃತದಲ್ಲಿದೆ. ಇದರಲ್ಲಿ ಒಟ್ಟು ೨೧೭೦ ಗಾಥೆಗಳಿವೆ. ಸಂಯಕ್ ದರ್ಶನ, ಸಂಯಕ್‌ಜ್ಞಾನ, ಸಂಯಕ್‌ಚಾರಿತ್ರ ಮತ್ತು ಸಂಯಕ್ ತಪರೂಪವಾದ ನಾಲ್ಕು ಆರಾಧನೆಗಳ ವಿವೇಚನೆ ಇದರ ವಸ್ತು. ಈ ಕಾರಣದಿಂದ ಇದಕ್ಕೆ ‘ಆರಾಧನಾ’ ಎಂಬ ಹೆಸರು ಬಂದಿದೆ. ಇದು ‘ಭಗವತೀ ಆರಾಧನಾ’ ಎಂಬ ಹೆಸರಿನಲ್ಲಿ ಹೆಚ್ಚು ಪ್ರಸಿದ್ಧವಾಗಿದೆ. ಆದರೆ ‘ಭಗವತೀ’ ಎಂಬುದು ಹೆಸರಿನ ಅಂಶವಲ್ಲ. ‘ಆರಾಧನಾ’ ಎಂಬುದರ ವಿಶೇಷಣ. ಹಾಗೆ ಹೆಸರೇ ಆಗಿದ್ದರೆ ‘ಭಗವತ್ಯಾರಾಧನಾ’ ಎಂದು ಇರುತ್ತಿತ್ತು. ಗ್ರಂಥಕರ್ತನೂ ಸಹ ಮಂಗಳಾಚರಣೆಯಲ್ಲಿ ‘ಆರಾಧನಾ’ ಎಂದೇ ಹೇಳಿದ್ದಾನೆ. ‘ವಂದಿತ್ತಾ ಅರಿಹಂತೇ ವುಚ್ಛಂ ಅರಾಹಣಾ ಕಮಸೋ’ ಅರಹಂತರನ್ನು ವಂದಿಸಿ ‘ಆರಾಧನಾ’ವನ್ನು ಹೇಳುತ್ತೇನೆ. ಇದಲ್ಲದೆ ಗ್ರಂಥಾಂತದಲ್ಲೂ ಹೀಗೆ ಹೇಳಿದೆ. ‘ಆರಾಹಣಾ ಸಿವಂಜೇಣ ಪಾಣಿದಲಭೋಇಣಾ ರಇದಾ’ ಪಾಣಿತಲ ಭೋಜೀ ಶಿವಾರ್ಯ ‘ಆರಾಧನಾ’ವನ್ನು ರಚಿಸಿದ. ಈ ಗ್ರಂಥದ ಪ್ರಾಚೀನ ಟೀಕಾಕಾರ ಅಪರಾಜಿತ ಸೂರಿಯೂ ಸಹ ‘ಅಪರಾಜಿತ ಸೂರಿಣಾ . . . ರಚಿತಾ ಆರಾಧನಾ ಟೀಕಾ ವಿಜಯೋದಯಾ ನಾಮಾ ಸಮಾಪ್ತಾ’ ಎಂದು ಹೇಳಿ ಇದರ ಹೆಸರು ‘ಆರಾಧನಾ’ ಎಂದೇ ಹೇಳಿದ್ದಾನೆ. ಪಂಡಿತ ಆಶಾಧರರು ತಮ್ಮ ಟೀಕೆಯನ್ನು ‘ಮೂಲಾರಾಧನಾ ದರ್ಪಣ’ ಎಂಬ ಹೆಸರಿನಲ್ಲೇ ಬರೆದಿದ್ದಾರೆ. ಇದರಿಂದಲೂ ಮೂಲಗ್ರಂಥದ ಹೆಸರು ‘ಆರಾಧನಾ’ ಎಂದೇ ವ್ಯಕ್ತವಾಗುತ್ತದೆ. ಇದೇ ರೀತಿ ಮೂರನೆಯ ಒಂದು ಟೀಕೆ ಇದೆ. ಅದರ ಹೆಸರೂ ‘ಆರಾಧನಾಪಂಜಿಕಾ’ ಎಂದೇ.

ಮೂಲಗ್ರಂಥಕರ್ತೃ ಒಂದು ಕಡೆ ೨೧೬೪ ನೆಯ ಗಾಥೆಯಲ್ಲಿ ‘ಆರಾಧನಾ’ಗೆ ಬದಲಾಗಿ ‘ಭಗವತೀ’ ಎಂಬ ವಿಶೇಷಣ ಕೊಟ್ಟಿದ್ದಾನೆ. ಆದರೆ ಇದು ವಿಶೇಷಣವೇ ಹೊರತು ಹೆಸರಲ್ಲ. ಅದೂ ಅಲ್ಲದೆ ‘ಆರಾಧನಾ’ ಎಂಬ ಶಬ್ದ ಪ್ರಚಲಿತವಾದಮೇಲೆ ಈ ವಿಶೇಷಣ ಆದಕ್ಕೆ ಸೇರಿದ್ದು. ಮುಂದೆ ಪೂಜ್ಯಮನೋಭಾವನೆಯಿಂದ ಈ ವಿಶೇಷಣ ಹೆಸರಿನೊಡನೆ ಸೇರಿಕೊಂಡಂತೆ ಕಾಣುತ್ತದೆ.

ಇದನ್ನು ಸಂಸ್ಕೃತಕ್ಕೆ ಅನುವಾದಮಾಡಿದ ಶ್ರೀ ಅಮಿತಗತಿ ಸೂರಿಯೂ

ಇದನ್ನು ' ಆರಾಧನಾ ' ಎಂದೇ ಕರೆದಿದ್ದಾನೆ. ' ಆರಾಧನೈಸಾ ಯದಕಾರಿ ಪೂರ್ಣಾ '. ಹೌದು ವಿಶೇಷಣ ರೂಪದಲ್ಲಿ ಭಗವತೀ ಎಂಬ ಪದ ಅದರ ಜೊತೆಗೆ ಸೇರಿರುವುದೇನೋ ನಿಜ. ' ಆರಾಧನಾ ಭಗವತೀ ಕಥಿತಾ ಸ್ವಶಕ್ತ್ಯಾ', ಈ ಪ್ರಯೋಗವೂ ಸಹ ಮೂಲದ ೨೧೬೪ ನೆಯ ಗಾಥೆಗೆ ಸಂವಾದಿಯಾಗಿದೆ.

**ವಿಷಯ**—ಇದು ಪ್ರಧಾನತಃ ಮುನಿಧರ್ಮದ ಗ್ರಂಥ. ಶಾಂತಿಪೂರ್ವಕ ಸಮಾಧಿಮರಣ ಮುನಿಧರ್ಮದ ಅಂತಿಮ ಸಾಫಲ್ಯ. ಈ ಸಮಾಧಿಮರಣದ—ಪಂಡಿತ ಪಂಡಿತ ಮರಣ, ಪಂಡಿತ ಮರಣ, ಮೊದಲಾದವುಗಳ ವಿಶದ ಹಾಗೂ ವಿಸ್ತೃತ ವಿವೇಚನೆ ಇದರಲ್ಲಿದೆ.

## ಮೂಲಕರ್ತನ ಪರಿಚಯ

ಗ್ರಂಥಕರ್ತನು ಗ್ರಂಥಾಂತ್ಯದಲ್ಲಿ ತನ್ನ ವಿಷಯವಾಗಿ ಹೀಗೆ ಹೇಳಿದ್ದಾನೆ:

ಅಜ್ಜ ಜಿಣಣಂದಿಗಣಿ ಸವ್ವಗುತ್ತಗಣಿ-ಅಜ್ಜಮಿತ್ತಣಂದೀಣಂ |
ಅವಗಮಿಯ ಪಾದಮೂಲೇ ಸಮ್ಮಂಸುತ್ತಂ ಚ ಅತ್ಥಂಚ || ೨೧೬೧ ||

ಪುವ್ವಾಯರಿಯಣಿವದ್ಧಾ[1] ಉವ ಜೀವಿತ್ತಾ ಇಮಾಸಸತ್ತೀಏ |
ಆರಾಹಣಾಸಿವಜ್ಜೇಣಪಾಣಿದಲ ಭೋಇಣಾ ರಇದಾ || ೬೨ ||

ಛದುಮತ್ಥದಾಇ ಏತ್ಥ ದು ಜಂ ವದ್ಧಂ ಹೋಜ್ಜ ಪವಯಣವಿರುದ್ಧಂ |
ಸೋಧತುಂ ಸುಗೀಧತ್ಥಾ ಪವಯಣವಚ್ಛಲ್ಲ ದಾಏ ದು || ೬೩ ||

ಆರಾಹಣಾ ಭಗವದೀ ಏವಂ ಭತ್ತೀಏ ವಣ್ಣಿದಾಸಂತೀ |
ಸಂಘಸ್ಸ ಸಿವಜ್ಜಸ್ಸ ಯ ಸಮಾಧಿವರಮುತ್ತಮಂ ದೇ ಉ || ೬೪ ||

ಅಸುರಸುರ ಮಣುಅ-ಕಿಣ್ಣರ-ರವಿಸಸಿ-ಕಿಂಪುರಿಸ-ಮಹಿಯವರಚರಣೋ |
ದಿಸಉ ಮಮ ಬೋಹಿಲಾಹಂ ಜಿಣವರವೀರೋ ತಿಹುವಣಿಂದೋ || ೬೫ ||

ಖಮ-ದಮ-ಣಿಯಮ-ಧರಾಣಂ ಧುದರಯಸುಹದುಕ್ಖವಿಪ್ಪಜುತ್ತಾಣಂ |
ಣಾಣುಜ್ಜೋದಿಯ ಸಲ್ಲೇಹಣಮ್ಮಿ ಸುಣಮೋ ಜಿಣವರಾಣಂ || ೬೬ ||

**ಅರ್ಥಾತ್** ಆರ್ಯ ಜಿನನಂದಿಗಣಿ ಆರ್ಯ ಸರ್ವಗುಪ್ತಗಣಿ ಮತ್ತು ಆರ್ಯ ಮಿತ್ರನಂದಿಗಳ ಚರಣಗಳಲ್ಲಿ ಮೂಲಸೂತ್ರ ಮತ್ತು ಅವುಗಳ ಅರ್ಥ ಅಥವಾ ಅಭಿಪ್ರಾಯವನ್ನು ಚೆನ್ನಾಗಿ ಅರಿತು ಪೂರ್ವಾಚಾರ್ಯ ನಿಬದ್ಧ ರಚನೆಗಳ ಆಧಾರದಿಂದ ಪಾಣಿತಲಭೋಜಿ (ಹಸ್ತದಲ್ಲಿ ಊಟಮಾಡುವವರು) ಶಿವಾರ್ಯನು ಈ ' ಆರಾಧನಾ 'ವನ್ನು ತನ್ನ ಶಕ್ತ್ಯನುಸಾರ ರಚಿಸಿದ್ದಾನೆ. ತನ್ನ ಛದ್ಮಸ್ಥತೆಯಿಂದ ಅಥವಾ ಜ್ಞಾನದ ಅಪೂರ್ಣತೆಯಿಂದ

---

[1] ಪಂಡಿತ ಆಶಾಧರರವರು ತಮ್ಮ ಟೀಕೆಯಲ್ಲಿ ' ಪುವ್ವಾಯರಿಯ ಕಯಾಣಿಯ ' ಎಂಬ ಪಾಠವನ್ನು ಅನುಸರಿಸಿದ್ದಾರೆ.

ಇದರಲ್ಲಿ ಪ್ರವಚನವಿರುದ್ಧವೇನಾದರೂ ಇದ್ದರೆ ಅದನ್ನು ಸುಗೀತಾರ್ಥರು ಅಂದರೆ ಪದಾರ್ಥವನ್ನು ಅರಿಯಬಲ್ಲವರು, ಪ್ರವಚನ ವಾತ್ಸಲ್ಯಭಾವದಿಂದ ತಿದ್ದಿಕೊಳ್ಳಲಿ. ಈ ರೀತಿ ಭಕ್ತಿಪೂರ್ವಕವಾಗಿ ವರ್ಣಿತವಾಗಿರುವ ಭಗವತೀ ಆರಾಧನಾ ಸಂಘಕ್ಕೂ ಮತ್ತು ಶಿವಾರ್ಯನಿಗೂ (ನನಗೆ) ಉತ್ತಮ ಸಮಾಧಿಯನ್ನು ಕರುಣಿಸಲಿ. ಅಸುರಸುರ ಮನುಷ್ಯ ಕಿನ್ನರ ರವಿಶಶಿ ಕಿಂಪುರುಷರಿಂದ ಪೂಜ್ಯನಾದ ತ್ರಿಭುವನಗಳ ಇಂದ್ರ ಭಗವಾನ್ ಮಹಾವೀರರು ನನಗೆ ಬೋಧಿಯನ್ನುಂಟುಮಾಡಲಿ. ಕ್ಷಮೆ, ದಮೆ, ಮತ್ತು ನಿಯಮಧಾರಕ, ಕರ್ಮರಹಿತ, ಸುಖದುಃಖ ವಿಪ್ರಯುಕ್ತರೂ ಮತ್ತು ಜ್ಞಾನದಿಂದ ಸಲ್ಲೇಖನವನ್ನು ಉದ್ಯೋದಿತಗೊಳಿಸುವ ಜಿನವರರಿಗೆ (ತೀರ್ಥಂಕರರಿಗೆ) ನಮಸ್ಕಾರಗಳು.

ಇದರಿಂದ ಗ್ರಂಥಕರ್ತನ ಪೂರ್ತ ಹೆಸರು ಶಿವಾರ್ಯ ಎಂದು ಗೊತ್ತಾಗುತ್ತದೆ. ತನ್ನ ಮೂವರು ಗುರುಗಳ ಹೆಸರಿನೊಡನೆ ಆತನು 'ಆರ್ಯ' ಎಂಬ ವಿಶೇಷವನ್ನು ಜೋಡಿಸಿದ್ದಾನೆ. ಇದರಿಂದ ಅವರುಗಳ ಹೆಸರಿನ ಜೊತೆಯಲ್ಲಿರುವ ಆರ್ಯ ಎಂಬ ಶಬ್ದವೂ ವಿಶೇಷಣವೆಂದೇ ಗೊತ್ತಾಗುತ್ತದೆ. ಆದ್ದರಿಂದ ಅವರ ಹೆಸರು ಶಿವನಂದಿ, ಶಿವಗುಪ್ತ, ಶಿವಕೋಟಿ, ಅಥವಾ ಅದನ್ನು ಸಂಕ್ಷೇಪದಲ್ಲಿ ಶಿವ ಎಂದು ಕರೆಯಬಹುದಾದ ಹೀಗೆಯೇ ಮತ್ತೇನೋ ಇರಬಹುದು.

ಆದಿಪುರಾಣದ ಕರ್ತೃ ಭಗವಜ್ಜಿನಸೇನರು ತಮ್ಮ ಗ್ರಂಥಾರಂಭದಲ್ಲಿ 'ಶಿವಕೋಟಿ ಮುನೀಶ್ವರ' ಎಂದು ಹೇಳಿ ಉಲ್ಲೇಖಿಸಿದ್ದಾರೆ:—

> ಶೀತೀಭೂತಂ ಜಗದ್ಯಸ್ಯ ವಾಚಾಽಽರಾಧ್ಯ ಚತುಷ್ಟಯಂ |
> ಮೋಕ್ಷಮಾರ್ಗಂ ಸಪಾಯಾನ್ನಃ ಶಿವಕೋಟಿ ಮುನೀಶ್ವರಃ || ೪೯ ||

ಅಂದರೆ ಯಾರ ವಾಣಿಯಿಂದ (ನಿರ್ಮಿತವಾದ) ಚತುಷ್ಟಯ ರೂಪವಾದ (ದರ್ಶನ-ಜ್ಞಾನ-ಚರಿತ್ರ-ತಪ) ಮೋಕ್ಷಮಾರ್ಗವನ್ನು ಆರಾಧಿಸಿ ಈ ಜಗತ್ತು ಶೀತೀಭೂತ ಅಂದರೆ ಶಾಂತವಾಗುತ್ತಿದೆಯೋ ಅಂತಹ ಶಿವಕೋಟಿ ಮುನೀಶ್ವರರು ನಮ್ಮನ್ನು ಕಾಪಾಡಲಿ.

ಈ ಶ್ಲೋಕದಲ್ಲಿ ಆರಾಧನಾಗ್ರಂಥದ ಸ್ಪಷ್ಟ ಉಲ್ಲೇಖವಿಲ್ಲವೆಂಬುದೇನೋ ನಿಜ. ಆದರೆ ಇದನ್ನು ಹೇಳಿರುವ ರೀತಿಯನ್ನು ನೋಡಿದರೆ ಜಿನಸೇನಸ್ವಾಮಿಗಳ ಆಶಯ ಈ ಆರಾಧನಾಗ್ರಂಥವೇ ಎಂದು ಕಾಣುತ್ತದೆ. ಏಕೆಂದರೆ ಇದರಲ್ಲಿ ಇರುವುದು ದರ್ಶನ, ಜ್ಞಾನ, ಚಾರಿತ್ರ, ಮತ್ತು ತಪರೂಪಗಳಾದ ಚತುರ್ವಿಧ ಆರಾಧನೆಗಳ ವಿಸ್ತೃತ ವ್ಯಾಖ್ಯಾನ. ಅದು ಜಗತ್ತನ್ನು ಶೀತೀಭೂತಗೊಳಿಸುತ್ತದೆ ಎಂಬುದರಲ್ಲೂ

ಸಂದೇಹವಿಲ್ಲ. ಇದರಿಂದ ಅವರ ಪೂರ್ಣವಾದ ಹೆಸರು ಆರ್ಯ ಶಿವಕೋಟಿ ಎಂದಿರ ಬಹುದಾದ್ದೂ ಸಂಭವ.

## ಸಮಂತಭದ್ರರ ಶಿಷ್ಯತ್ವ

ಶ್ರೀ ಪ್ರಭಾಚಂದ್ರನ ಆರಾಧನಾ ಕಥಾಕೋಶ (ಗದ್ಯ) ಮತ್ತು ದೇವಚಂದ್ರನ 'ರಾಜಾವಳೀ ಕಥೆ' (ಕನ್ನಡ) ಯಲ್ಲಿ ಶಿವಕೋಟಿ ಸಮಂತಭದ್ರಸ್ವಾಮಿಗಳ ಶಿಷ್ಯ ರೆಂದು ಹೇಳಿದೆ. ಇವುಗಳ ಪ್ರಕಾರ ಶಿವಕೋಟಿ ಕಾಶಿ ಅಥವಾ ಕಾಂಚಿಯ ಶೈವರಾಜ ನಾಗಿದ್ದ. ಸಮಂತಭದ್ರರು ಅಲ್ಲಿಯ ಶಿವಲಿಂಗವನ್ನು ಒಡೆದು ಅದರಲ್ಲಿ ಚಂದ್ರಪ್ರಭನ ಮೂರ್ತಿಯನ್ನು ತೋರಿಸಿ ಪವಾಡವನ್ನು ಮೆರೆದರು. ಅದರಿಂದ ಪ್ರಭಾವಿತನಾಗಿ ಆತನು ಜೈನನಾದನು. ಆದರೆ ಈ ಕಥೆಗಳು ಅಷ್ಟು ವಿಶ್ವಸನೀಯವಲ್ಲ. ಐತಿಹಾಸಿಕ ದೃಷ್ಟಿಯಿಂದ ಈ ಕಥೆಗಳು ಬರೆದುವಲ್ಲ. ಜೈನಧರ್ಮದ ಪ್ರಭಾವವನ್ನೂ, ಹೆಚ್ಚಳವನ್ನೂ ತೋರಿಸುವುದೇ ಇವುಗಳ ಉದ್ದೇಶವೆಂದು ತೋರುತ್ತದೆ. ಶಿವಕೋಟಿ ತನ್ನ ಇಷ್ಟು ದೊಡ್ಡ ಗ್ರಂಥದಲ್ಲಿ ತನ್ನ ಅಷ್ಟೊಂದು ಉಪಕಾರಿಗಳಾದ ಸಮಂತಭದ್ರರ ಉಲ್ಲೇಖ ವನ್ನೂ ಮಾಡದಿರುವುದು ಅಸಂಭವ. ಕೊನೆಯಪಕ್ಷ ಅವರ ಹೆಸರನ್ನಾದರೂ ಹೇಳುತ್ತಿದ್ದ. ಆದರೆ ಆತನು ಹೇಳಿರುವ ಗುರುಗಳ ಹೆಸರೇ ಬೇರೆ.

ಹರಿಷೇಣನ ಕಥಾಕೋಶ ಉಪಲಬ್ಧ ಕಥಾಕೋಶಗಳಲ್ಲಿ ಅತ್ಯಂತ ಪ್ರಾಚೀನ ವಾದುದು. ಶಾಲೀವಾಹನ ಶಕ ೮೫೩ ರಲ್ಲಿ ಅದು ರಚಿತವಾಗಿದೆ. ಈ ಗ್ರಂಥದಲ್ಲಿ ಪ್ರಭಾಚಂದ್ರನ ಗದ್ಯಕಥಾಕೋಶದ ಪ್ರಾಯಶಃ ಇತರ ಎಲ್ಲ ಕಥೆಗಳೂ ಇದ್ದು ಮೇಲೆ ಹೇಳಿದ ಶಿವಕೋಟಿ ಸಮಂತಭದ್ರ ಕಥೆ ಮಾತ್ರ ಇಲ್ಲದಿರುವುದರಿಂದ ಸಮಂತ ಭದ್ರರ ಶಿಷ್ಯತ್ವ ಕಲ್ಪನೆ ಅದರ ಅನಂತರ ಹುಟ್ಟಿರಬಹುದೆಂದು ಹೇಳಬಹುದು.

ಶಿವಕೋಟಿಯ ಅತ್ಯಂತ ಪ್ರಾಚೀನ ಉಲ್ಲೇಖ ಆದಿಪುರಾಣದಲ್ಲಿ ಕಂಡುಬರು ತ್ತದೆ. ಆತನು ಯಾರ ಶಿಷ್ಯನಾಗಿದ್ದನೆಂಬುದು ಬಹುಶಃ ಜಿನಸೇನಸ್ವಾಮಿಗಳಿಗೆ ಗೊತ್ತಿತ್ತೆಂದು ಕಾಣಿಸುತ್ತದೆ. ಶಿವಕೋಟಿ ಸಮಂತಭದ್ರರ ಶಿಷ್ಯರೆಂದು ತಿಳಿದಿದ್ದರೆ ಸಮಂತಭದ್ರರನ್ನು ಸ್ತುತಿಸಿದ ಅನಂತರ ಶಿವಕೋಟಿಯನ್ನು ಸ್ತುತಿಸುತ್ತಿದ್ದನು. ಆದರೆ ಹಾಗೆ ಮಾಡದೆ ಅವರು ಮಧ್ಯದಲ್ಲಿ ಶ್ರೀದತ್ತ, ಯಶೋಭದ್ರ ಮತ್ತು ಪ್ರಭಾಚಂದ್ರರ ಪ್ರಶಸ್ತಿಯನ್ನು ಬರೆದು ಅನಂತರ ಶಿವಕೋಟಿಯನ್ನು ಸ್ಮರಿಸಿದ್ದಾರೆ.

ಕವಿ ಹಸ್ತಿಮಲ್ಲನು (ವಿಕ್ರಮಶಕೆ ೧೪ ನೆಯ ಶತಮಾನ). ತನ್ನ "ವಿಕ್ರಾಂತ ಕೌರವ"ದಲ್ಲಿ ಸಮಂತಭದ್ರರಿಗೆ ಶಿವಕೋಟಿ ಮತ್ತು ಶಿವಾಯನ ಎಂಬ ಇಬ್ಬರು ಶಿಷ್ಯರಿದ್ದರೆಂದು ಹೇಳಿದ್ದಾನೆ. ಮತ್ತು ಅವರ ಅನ್ವಯದಲ್ಲೇ ವೀರಸೇನ, ಜಿನಸೇನ

ರನ್ನು ಹೇಳಿದ್ದಾನೆ. ಆದರೆ ಸಮಂತಭದ್ರರ ಶಿಷ್ಯಪರಂಪರೆಯಲ್ಲಿ ವೀರಸೇನ ಜಿನಸೇನರು ಇದ್ದರೆಂದು ಹೇಳಲು ಯಾವ ಪುಷ್ಟಪ್ರಮಾಣವೂ ಇಲ್ಲ. ಶಿವಕೋಟಿಯೇನೋ ಸರಿ. ಆದರೆ ಈ ಶಿವಾಯನ ಯಾರು? ಎಲ್ಲಾದರೂ ಸಿವಜ್ಜೇಣ (ಶಿವಾರ್ಯೇಣ) ಎಂಬುದೇ ಶಿವಾಯನ ಎಂದು ತಪ್ಪಾಗಿ ಬಿದ್ದಿದೆಯೇ? ಬೇರೆ ಎಲ್ಲೂ ಶಿವಾಯನನ ಯಾವ ಉಲ್ಲೇಖವೂ ಇಲ್ಲಿಯ ವರೆಗೆ ದೊರೆತಿಲ್ಲ.

ಈ ಕಾರಣದಿಂದ ಶಿವಕೋಟಿಯನ್ನು ಸಮಂತಭದ್ರರ ಶಿಷ್ಯರೆಂದು ಹೇಳಲಾಗುವುದಿಲ್ಲ.[1]

**ಇತರ ಎರಡು ರಚನೆಗಳು**—'ಆರಾಧನಾ' ಅಲ್ಲದೆ ಶಿವಕೋಟಿ ಆಚಾರ್ಯನ ಕೃತಿಗಳು ಮತ್ತೆರಡು ಇವೆಯೆಂದು ಹೇಳಲಾಗುತ್ತದೆ. ಅವುಗಳಲ್ಲಿ 'ರತ್ನಮಾಲಾ'[2]ವೂ ಒಂದು.

ಈ ಸಂಸ್ಕೃತ ಗ್ರಂಥದಲ್ಲಿ ಕೇವಲ ೬೭ ಅನುಷ್ಟುಪ್ ಶ್ಲೋಕಗಳಿವೆ. ಇದರ ಕೊನೆಯ ಶ್ಲೋಕ ಈ ರೀತಿ ಇದೆ:

> ಯೋ ನಿತ್ಯಂ ಪಠತಿ ಶ್ರೀಮಾನ್ ರತ್ನಮಾಲಾಮಿಮಾಂ ಪರಾ |
> ಸ ಶುದ್ಧಭಾವತೋ ನೂನಂ ಶಿವಕೋಟಿತ್ವಮಾಪ್ನುಯಾತ್ ||೬೭||

ನಮ್ಮ ಅಭಿಪ್ರಾಯದಲ್ಲಿ ಈ ಗ್ರಂಥ 'ಆರಾಧನಾ' ಗ್ರಂಥಕರ್ತೃವಿನದು ಎಂದಿಗೂ ಅಲ್ಲ. ಯಾವನೋ ಉದ್ದೇಶಪೂರ್ವಕವಾಗಿ ತನ್ನ ಮಾತುಗಳಿಗೆ ಹೆಚ್ಚು ಪ್ರಾಮಾಣಿಕತೆಯನ್ನು ದೊರಕಿಸಲು ಇದನ್ನು ಶಿವಕೋಟಿಯ ಹೆಸರಿನಲ್ಲಿ ಪ್ರಸಿದ್ಧಪಡಿಸಿರಬಹುದು. ಇಲ್ಲವಾದರೆ ಈ ಶಿವಕೋಟಿಯೇ ಬೇರೆ ಇರಬಹುದು. ಮೊದಲನೆಯದಾಗಿ 'ರತ್ನಮಾಲಾ'ದ ರಚನೆ, ಶೈಲಿ, ಅತ್ಯಂತ ಸಾಧಾರಣ. ಅಷ್ಟು ಪ್ರೌಢವಾಗಿಯೂ ಇಲ್ಲ. ಎರಡನೆಯದಾಗಿ ಆಮೇಲಿನ ಯಾವ ಗ್ರಂಥಕರ್ತನೂ ಈ ಗ್ರಂಥವನ್ನು ಉಲ್ಲೇಖಿಸಿಲ್ಲ. ಇದರ ಒಂದು ಪದ್ಯವನ್ನೂ ಯಾರೂ ಪ್ರಮಾಣರೂಪವಾಗಿ

---

[1] ಪಂಡಿತ ಪರಮಾನಂದ ಶಾಸ್ತ್ರಿಗಳು ತಮ್ಮ ಒಂದು ಲೇಖನದಲ್ಲಿ (ಅನೇಕಾಂತ. ವರ್ಷ ೨. ಕಿರಣ ೬) ಶಿವಾರ್ಯನು ೨೦೭೯-೮೩ ರ ಗಾಥೆಗಳಲ್ಲಿ ಸಮಂತಭದ್ರಸ್ವಾಮಿಗಳ ಹಾಗೆ ಗುಣವ್ರತಗಳಲ್ಲಿ ಭೋಗೋಪಭೋಗಗಳನ್ನು ಗಳಿಸದೆ ದೇಶಾವಕಾಶಿಕವನ್ನು ಅನುಸರಿಸಿದ್ದಾನೆ. ಶಿಕ್ಷಾವ್ರತಗಳಲ್ಲಿ ದೇಶಾವಕಾಶಿಕವನ್ನು ಬಿಟ್ಟು ಭೋಗೋಪಭೋಗದ ಪರಿಣಾಮವನ್ನು ವಿಧಾನಿಸಿದ್ದಾನೆ. ಆತನು ಸಮಂತಭದ್ರರ ಶಿಷ್ಯನಾಗಿದ್ದರೆ ಈ ವಿಷಯದಲ್ಲಿ ಅವರನ್ನು ಖಂಡಿತವಾಗಿ ಅನುಸರಿಸುತ್ತಿದ್ದನು' ಎಂದು ತಿಳಿಸಿದ್ದಾರೆ.

[2] ಮಾಣಿಕ ಚಂದ್ರಗ್ರಂಥಮಾಲೆಯ ೨೧ ನೆಯ ಗ್ರಂಥ 'ಸಿದ್ಧಾಂತ ಸಾರಾದಿಸಂಗ್ರಹ'ದಲ್ಲಿ ಪ್ರಕಾಶಿತವಾಗಿದೆ.

ಉದಾಹರಿಸಿಲ್ಲ. ಮೂರನೆಯದಾಗಿ ಇದರ ಕೆಲವು ವಿಷಯಗಳು ಜೈನಸಿದ್ಧಾಂತಕ್ಕೆ ತೀರ ವಿರುದ್ಧವಾಗಿವೆ. ಈ ಗ್ರಂಥದ ನಿಮ್ನಲಿಖಿತ ಶ್ಲೋಕವನ್ನು ನೋಡಿ :—

ಕಲೌಕಾಲೇ ವನೇ ವಾಸೋ ವರ್ಜ್ಯತೇ ಮುನಿಸತ್ತಮೈಃ |
ಸ್ಥೀಯೇತ ಚ ಜಿನಾಗಾರೇ ಗ್ರಾಮಾದಿಷು ವಿಶೇಷತಃ || ೨೨ ||

ಅರ್ಥಾತ್ ಈ ಕಲಿಕಾಲದಲ್ಲಿ ಕಾಡಿನಲ್ಲಿ ವಾಸಿಸಕೂಡದು. ಶ್ರೇಷ್ಠ ಮುನಿಗಳಿಂದ ಇದು ವರ್ಜಿಸಲ್ಪಟ್ಟಿದೆ. ಈಗ ಅವರು ಜೈನಮಂದಿರಗಳಲ್ಲಿ ಅದರಲ್ಲೂ ಗ್ರಾಮಾಂತರಗಳಲ್ಲಿ ವಾಸಿಸಬೇಕು.

ಇದರಿಂದ ಈ ಗ್ರಂಥ ದಿಗಂಬರ ಸಂಪ್ರದಾಯದಲ್ಲಿ ಚೈತ್ಯವಾಸ ಪ್ರಚಲಿತವಾಗಿದ್ದು ಅದರ ಅನುಯಾಯಿಗಳು ವನವಾಸ ವರ್ಜನೀಯ ಎಂದು ಹೇಳುವಷ್ಟರ ಮಟ್ಟಿಗೆ ಪ್ರಬಲರಾಗಿದ್ದ ಕಾಲದ ರಚನೆಯೆಂಬುದು ಸ್ಪಷ್ಟ. ಮಂದಿರ ಅಥವಾ ಗ್ರಾಮಗಳಲ್ಲಿ ವಾಸಿಸುವುದು ಅನುಚಿತ ಎಂದು ಹೇಳುವ ವಿಷಯವೇ ಬೇರೆ. ಅವುಗಳಲ್ಲಿಯೇ ವಾಸಿಸಬೇಕು; ಕಾಡಿನಲ್ಲಿ ಅಲ್ಲ ಎಂಬುದೇ ಬೇರೆ. ಇದಂತೂ ಭಗವತೀ ಆರಾಧನೆಗೂ ವಿರುದ್ಧವಾಗಿದೆ.

'ರತ್ನಮಾಲಾ' ದ ೬೫ ನೆಯ ಶ್ಲೋಕ ಈ ರೀತಿ ಇದೆ:

ಸರ್ವಮೇವವಿಧಿರ್ಜೈನಃ ಪ್ರಮಾಣಂ ಲೌಕಿಕಃ ಸತಾಂ |
ಯತ್ರ ನ ವ್ರತಹಾನಿಃ ಸ್ಯಾತ್ ಸಂಯುಕ್ತ್ವಸ್ಯ ಚ ಖಂಡನಂ || ೬೫ ||

ಇದು ಶ್ರೀ ಸೋಮದೇವಸೂರಿ ಕೃತ ಯಶಸ್ತಿಲಕ ಚಂಪುವಿನ ಉಪಾಸಕಾಧ್ಯಯನದ ಈ ಕೆಳಗೆ ಹೇಳಿರುವ ಶ್ಲೋಕದ ವಿಕೃತ ರೂಪ:

ಸರ್ವಮೇವ ಹಿ ಜೈನಾನಾಂ ಪ್ರಮಾಣಂ ಲೌಕಿಕೋವಿಧಿಃ |
ಯತ್ರ ಸಂಯುಕ್ತ್ವಹಾನಿರ್ನ ಯತ್ರ ನ ವ್ರತದೋಷಣಂ |

ಯಶಸ್ತಿಲಕ ಚಂಪುವಿನ ರಚನಾಕಾಲ ಶಾಲೀವಾಹನ ಶಕ ೮೮೧. ಆದ್ದರಿಂದ 'ರತ್ನಮಾಲಾ' ಗ್ರಂಥದ ರಚನಾಕಾಲ ಈಚಿನ ಯಾವುದೋ ಕಾಲಕ್ಕೆ ಸೇರಿದ್ದು.[1]

ಶ್ರವಣಬೆಳುಗೊಳದ ೧೦೫ ನೆಯ ಶಾಸನದಲ್ಲಿ (ವಿ. ಶ. ೧೪೬೫) ಶಿವಕೋಟಿ ತತ್ತ್ವಾರ್ಥ ಸೂತ್ರದ ಟೀಕಾಕಾರನೆಂದು ಹೇಳಿದೆ. "ಸಂಸಾರವಾರಾಕರಪೋತಮೇತತ್ತತ್ತ್ವಾರ್ಥಸೂತ್ರಂ ತದಲಂಚಕಾರ." ಸಂಸಾರಸಾಗರವನ್ನು ದಾಟಲು ದೋಣಿಯಂತೆ ಈ ತತ್ತ್ವಾರ್ಥ ಸೂತ್ರವನ್ನು ಅಲಂಕೃತಗೊಳಿಸಿದವನು . . . ಇದರಲ್ಲಿರುವ 'ಏತತ್'

[1] ಸಿದ್ಧಾಂತ ಸಾರಾದಿ ಸಂಗ್ರಹದ ಭೂಮಿಕೆಯಲ್ಲಿ ನಾನು ಈ ವಿಷಯವನ್ನು ವಿಸ್ತಾರವಾಗಿ ಚರ್ಚಿಸಿದ್ದೇನೆ.

ಎಂಬ ಶಬ್ದದ ಆಧಾರದಿಂದ ಪಂಡಿತ ಜುಗಲ್ ಕಿಶೋರ್ ಜೀ ಮುಕ್ತಾರರು ಉದ್ಧರಿಸಿರುವ ಈ ಪದ್ಯ ತತ್ವಾರ್ಥ ಸೂತ್ರದ ಶಿವಕೋಟಿಕೃತ ಟೀಕೆಯ ಪ್ರಶಸ್ತಿಯದು. ಅದು ಶಾಸನದಲ್ಲಿ ಒಂದು ವಿಚಿತ್ರ ರೀತಿಯಲ್ಲಿ ಸೇರಿಸಲ್ಪಟ್ಟಿದೆ. ಇಲ್ಲವಾದರೆ ಶಾಸನದ ಪದ್ಯಗಳ ಅನುಕ್ರಮದಲ್ಲಿ ಈ 'ಏತತ್' ಶಬ್ದಕ್ಕೆ ಅರ್ಥವಾಗುವುದಿಲ್ಲ. ಈ ತತ್ವಾರ್ಥಟೀಕೆ ಇನ್ನೂ ಅನುಪಲಬ್ಧ. ಆದರೆ ನಮ್ಮ ಅಭಿಪ್ರಾಯದಲ್ಲಿ ಅದರ ಅಸ್ತಿತ್ವದ ಬಗ್ಗೆ ಸಂದೇಹವಿಲ್ಲ ಮತ್ತು ಅದು ಶಿವಕೋಟಿಯಿಂದಲೇ ರಚಿತವಾಗಿರಬೇಕು. ಆದರೆ ಆತ ಆರಾಧನಾ ಗ್ರಂಥಕರ್ತೃ ಶಿವಾರ್ಯ ಅಥವಾ ಶಿವಕೋಟಿಯಿಂದ ಭಿನ್ನನಾದ ಮತ್ತಾವನೋ ಶಿವಕೋಟಿಯಿರಬಹುದು. ರತ್ನಮಾಲಾ ಗ್ರಂಥಕರ್ತೃ ಶಿವಕೋಟಿಯೇ ಅದರ ರಚಯಿತನಾಗಿದ್ದರೆ ಆಶ್ಚರ್ಯವೇನೂ ಇಲ್ಲ. ಅವನ ಗುರುವಿನ ಹೆಸರೂ ಸಮಂತಭದ್ರ ಎಂದಿರುವುದೂ ಅಸಂಭವವೇನೂ ಅಲ್ಲ. ಶಿವಕೋಟಿಯಂತೆ ಸಮಂತಭದ್ರ ಎಂಬ ಹೆಸರಿನ ಭಟ್ಟಾರಕರೂ ಹಲವರಿದ್ದಿರಬಹುದು. 'ವಿಷಮ ಪದ ತಾತ್ಪರ್ಯ ಟೀಕಾ' ಎಂಬ ಗ್ರಂಥವನ್ನು ಅಷ್ಟಸಹಸ್ರೀಯದ ಮೇಲೆ ಬರೆದ ಒಬ್ಬ ಸಮಂತಭದ್ರರ ಹೆಸರನ್ನು ಪಾಠಕರು ಕೇಳಿರಬಹುದು. ಅವರ ಕಾಲವನ್ನು ಪಂಡಿತ ಜುಗಲ ಕಿಶೋರರು ವಿಕ್ರಮಶಕೆಯ ಹದಿಮೂರನೆಯ ಶತಮಾನದ ಸುಮಾರಿರಬಹುದೆಂದು ಅನುಮಾನಿಸುತ್ತಾರೆ.[1] ಇವರು ಲಘುಸಮಂತಭದ್ರ ಎಂದು ಕರೆಯಲ್ಪಡುತ್ತಿದ್ದರು.

ತತ್ವಾರ್ಥ ಸೂತ್ರದ ಈ ಟೀಕೆ 'ಆರಾಧನೆ'ಯಷ್ಟು ಪ್ರಾಚೀನವಾಗಿದ್ದಿದ್ದರೆ ಅದನ್ನು ಇತರ ಟೀಕಾಕಾರರು ಖಂಡಿತ ಉಲ್ಲೇಖಿಸುತ್ತಿದ್ದರು ಮತ್ತು ಅದು ಸರ್ವಾರ್ಥಸಿದ್ಧಿ ಟೀಕೆಗಿಂತಲೂ ಪ್ರಾಚೀನವಾಗಿರುತ್ತಿದ್ದಿತು. ಆದರೆ ಇಲ್ಲಿಯವರೆಗೂ ಯಾವ ಪ್ರಾಚೀನ ಗ್ರಂಥದಲ್ಲಿಯೇ ಆಗಲಿ ಯಾವ ರೂಪದಲ್ಲಿಯೂ ಅದರ ಉಲ್ಲೇಖ ದೊರೆತಿಲ್ಲ.

ಈ ಎಲ್ಲ ವಿಷಯಗಳಿಂದ 'ಆರಾಧನೆ'ಯ ಕರ್ತೃ ಸಮಂತಭದ್ರರ ಶಿಷ್ಯರೂ ಅಲ್ಲ. ಜಿನದೀಕ್ಷೆಯನ್ನು ಪಡೆಯುವ ಮುನ್ನ ಆತನು ಶೈವರಾಜನಾಗಿಯೂ ಇರಲಿಲ್ಲ ಮತ್ತು 'ಆರಾಧನೆ'ಯಲ್ಲದೆ ಆತನಿಂದ ರಚಿತವಾದ ಇತರ ಗ್ರಂಥವಾವುದೂ ಉಪಲಬ್ಧವಾಗಿಲ್ಲ ಎಂಬ ನಿಶ್ಚಯಕ್ಕೆ ಬರಬಹುದು. ರತ್ನಮಾಲಾ ಮತ್ತು ತತ್ವಾರ್ಥ ಟೀಕೆಯ ಕರ್ತೃವಾದ ಶಿವಕೋಟಿ ಬೇರೆ ಯಾರೋ ಇರಬಹುದು.

---

[1] 'ಸ್ವಾಮಿ ಸಮಂತಭದ್ರ'ದ ಇನ್ನೂರಿಪ್ಪತ್ತೊಂಬತ್ತನೆಯ ಪುಟದ ಟಿಪ್ಪಣಿಯನ್ನು ನೋಡಿ.

## ಗುರು ಪರಂಪರೆ ಮತ್ತು ಸಂಪ್ರದಾಯ

ದಿಗಂಬರ ಸಂಪ್ರದಾಯದ ಪಟ್ಟಾವಳಿಯಲ್ಲಿ, ಶಿಲಾಲಿಪಿಗಳಲ್ಲಿ ಮತ್ತು ಶ್ರುತಾವತಾರ, ಹರಿವಂಶಪುರಾಣ ಮೊದಲಾದವುಗಳಲ್ಲಿ ದೊರೆಯುವ ಗುರುಪರಂಪರೆಗಳಲ್ಲಿ ಯಾವುದರಲ್ಲಿಯೂ ಜಿನನಂದಿ, ಸರ್ವಗುಪ್ತ, ಮತ್ತು ಮಿತ್ರನಂದಿಯ ಹೆಸರುಗಳು ಕಾಣಬರುವುದಿಲ್ಲ. ಆದರೆ ಇವರಲ್ಲಿ ಸರ್ವಗುಪ್ತನನ್ನು ಯಾಪನೀಯ ಸಂಘದ ಆಚಾರ್ಯ ಶಾಕಟಾಯನ ತನ್ನ ವ್ಯಾಕರಣದಲ್ಲಿ ಉಲ್ಲೇಖಿಸಿದ್ದಾನೆ.—'ಉಪಸರ್ವಗುಪ್ತಂವ್ಯಾಖ್ಯಾಕಾರ' (೧-೩-೧೦೪) ಅರ್ಥಾತ್ ಎಲ್ಲ ವ್ಯಾಖ್ಯಾತರೂ ಸರ್ವಗುಪ್ತರ ಸಮಕ್ಕೆ ಬರಲಾರರು—ಅವರಂತಹ ವ್ಯಾಖ್ಯಾತ ಮತ್ತೊಬ್ಬನಿಲ್ಲ. ಬಹುಶಃ ಇದೇ ಸರ್ವಗುಪ್ತರ ಚರಣಗಳಲ್ಲಿ ಕುಳಿತು ಶಿವಾರ್ಯರು ಸೂತ್ರ ಮತ್ತು ಅದರ ಅರ್ಥವನ್ನು ಸರಿಯಾಗಿ ಆಯತ್ತಗೊಳಿಸಿಕೊಂಡು ಆರಾಧನಾಗ್ರಂಥವನ್ನು ರಚಿಸಿರಬಹುದು. ಶಾಕಟಾಯನನ ಉಕ್ತ ಉಲ್ಲೇಖದಿಂದ ಶಿವಾರ್ಯ ಅಥವಾ ಶಿವಕೋಟಿ ಯಾಪನೀಯ ಸಂಘದ ಆಚಾರ್ಯರೆಂದೂ ಮತ್ತು ಈ ಕಾರಣದಿಂದಲೇ ದಿಗಂಬರ ಗುರುಪರಂಪರೆಯಲ್ಲಿ ಅವರ ಗುರುಗಳ ಯಾವ ಉಲ್ಲೇಖವೂ ದೊರೆಯುವುದಿಲ್ಲವೆಂದೂ ನಾವು ಅನುಮಾನಿಸುತ್ತೇವೆ.

ಈ ಅನುಮಾನಕ್ಕೆ ಇನ್ನೂ ಕೆಲವು ಪ್ರಮಾಣಗಳಿಂದ ಪುಷ್ಟಿ ದೊರೆಯುತ್ತದೆ. ಅವುಗಳಲ್ಲಿ ನಾವು ವಿಸ್ತಾರವಾಗಿ ಬೇರೆ ಎಡೆಯಲ್ಲಿ ಬರೆದಿದ್ದೇವೆ.[1] ಇಲ್ಲಿ ಸಂಕ್ಷೇಪವಾಗಿ ಅಲ್ಲಿಯ ಕೆಲವು ವಿಷಯಗಳನ್ನು ಹೇಳಲಾಗುತ್ತದೆ—

೧. ಭಗವತೀ ಆರಾಧನೆಯ ಉಪಲಬ್ಧ ಟೀಕೆಗಳಲ್ಲಿ ಎಲ್ಲಕ್ಕಿಂತಲೂ ಪ್ರಾಚೀನವಾದುದು ಅಪರಾಜಿತ ಸೂರಿಯ ಟೀಕೆ. ಮುಂದೆ ಹೇಳುವಂತೆ ಅವು ನಿಶ್ಚಯವಾಗಿಯೂ ಯಾಪನೀಯ ಸಂಘದವು. ಹೀಗಿರುವಾಗ ಮೂಲ ಗ್ರಂಥಕರ್ತೃ ಶಿವಾರ್ಯನೂ ಯಾಪನೀಯನಾಗಿರುವುದು ಹೆಚ್ಚು ಸಂಭವ.

೨. ಯಾಪನೀಯ ಸಂಘ ಶ್ವೇತಾಂಬರದಂತೆ ಸೂತ್ರಗ್ರಂಥಗಳಿಗೆ ಶ್ವೇತಾಂಬರ ಆಗಮಗಳಿಗೆ ಮನ್ನಣೆ ಕೊಡುತ್ತದೆ. ಮತ್ತು 'ಆರಾಧನೆ'ಯಲ್ಲಿ ಸೂತ್ರಗ್ರಂಥಗಳಲ್ಲಿ ದೊರಕುವ ನೂರಾರು ಗಾಹೆಗಳಿವೆ.

೩. ಹತ್ತು ಸ್ಥಿತಿ ಕಲ್ಪಗಳ ಹೆಸರುಳ್ಳ ಗಾಹೆ ಜಿತ ಕಲ್ಪಭಾಷ್ಯ ಮತ್ತು ಅದರ ಅನೇಕ ಶ್ವೇತಾಂಬರ ಟೀಕೆಗಳಲ್ಲಿ ಹಾಗೂ ನಿರ್ಯುಕ್ತಿಗಳಲ್ಲಿ ದೊರಕುತ್ತವೆ. ಆಚಾರ್ಯ

[1] 'ಯಾಪನೀಯ ಸಾಹಿತ್ಯಕೀ ಖೋಜ್' ಎಂಬ ಲೇಖನ ಮತ್ತು ಅನಂತಕೀರ್ತಿ ಮಾಲೆಯಲ್ಲಿ ಪ್ರಕಾಶಿತವಾದ ಭಗವತೀ ಆರಾಧನೆಯ ಭೂಮಿಕೆಯನ್ನು ನೋಡಿರಿ.

ಪ್ರಭಾಚಂದ್ರರು ತಮ್ಮ ಪ್ರಮೇಯಕಮಲ ಮಾರ್ತಾಂಡದಲ್ಲಿಯೂ ಇದು ಶ್ವೇತಾಂಬರ ಗಾಹೆಯೆಂದು ಒಪ್ಪಿದ್ದಾರೆ.

೪. ಆರಾಧನೆಯ ೬೬೫-೬೬೬ ರ ಗಾಹೆಗಳಿಗೂ ದಿಗಂಬರ ಮುನಿಗಳ ಆಚಾರಕ್ಕೂ ಹೊಂದುವುದಿಲ್ಲ. ಅವುಗಳಲ್ಲಿ ರೋಗಿಯಾದ ಮುನಿಗಾಗಿ ನಾಲ್ವರು ಮುನಿಗಳಿಂದ ಭೋಜನ ಪಾನೀಯಗಳನ್ನು ತರಬೇಕೆಂಬ ನಿರ್ದೇಶವಿದೆ. ಇದರ ಮೇಲೆ ಸ್ವ. ಪಂ. ಸದಾಸುಖಜೀಯವರು ತಮ್ಮ ವಚನಿಕೆಯಲ್ಲಿ ಮತ್ತು ದಿವಾನಾ ಅಮರ ಚಂದ್ರಜೀಯವರೂ ಕವಿವರ ವೃಂದಾವನಜೀಯವರಿಗೆ ಬರೆದ ಪತ್ರಗಳಲ್ಲಿ ಶಂಕೆಯನ್ನೆತ್ತಿದ್ದಾರೆ.[1]

೫. ಆರಾಧನೆಯ ೪೨೮ ನೆಯ ಗಾಥೆ ಆಚಾರಾಂಗ ಮತ್ತು ಜಿತಕಲ್ಪ ಗ್ರಂಥಗಳ ಉಲ್ಲೇಖ ಮಾಡುತ್ತದೆ. ಅವುಗಳ ಶ್ವೇತಾಂಬರ ಸಂಪ್ರದಾಯದ ಪ್ರಸಿದ್ಧ ಗ್ರಂಥಗಳು.

೬. ಶಿವಾರ್ಯನು ತನ್ನನ್ನು 'ಪಾಣಿತಲಭೋಜಿ', ಅಂದರೆ ಹಸ್ತದಲ್ಲಿ ಊಟ ಮಾಡುವವನು ಎಂದು ಹೇಳಿಕೊಂಡಿದ್ದಾನೆ. ಯಾಪನೀಯ ಸಂಘದ ಸಾಧುಗಳು ಶ್ವೇತಾಂಬರ ಸಾಧುಗಳಂತೆ ಪಾತ್ರಭೋಜಿಗಳಲ್ಲ. ದಿಗಂಬರರಂತೆ ಕರಪಾತ್ರ ಭೋಜಿಗಳಾಗಿದ್ದರು.

ಯಾಪನೀಯ ಸಂಘದವನಾದ ಶಿವಾರ್ಯನನ್ನು ಭಗವಜ್ಜಿನಸೇನರು ಏತಕ್ಕೆ ಸ್ಮರಿಸಿದ್ದಾರೆ? ಈ ವಿಷಯದಲ್ಲಿ ನಮ್ಮ ಅಭಿಪ್ರಾಯ ಇಷ್ಟೆ. ಆ ಕಾಲದ ವಿದ್ವಾಂಸರು ಉದಾರಮನಸ್ಕರಾಗಿರುತ್ತಿದ್ದರು. ಅವರು ಇದರಲ್ಲಿ ಯಾವ ದೋಷವನ್ನೂ ಕಾಣುತ್ತಿರಲಿಲ್ಲ. ಇದೇ ದೃಷ್ಟಿಯಿಂದಲೇ ಸಿದ್ಧಸೇನಾಚಾರ್ಯರನ್ನೂ ಅವರು ಪ್ರಶಂಶಿಸಿದ್ದಾರೆ.

## ಮೂಲಕರ್ತನ ಕಾಲ

ಭಗವಜ್ಜಿನಸೇನರು ಶಿವಾರ್ಯನನ್ನು ಸ್ತುತಿಸಿದ್ದಾರೆ, ಮತ್ತು ಶಾಕಟಾಯನನು ಅವರ ಗುರು ಸರ್ವಗುಪ್ತ ಬಹು ದೊಡ್ಡ ವ್ಯಾಖ್ಯಾತರೆಂದು ಹೇಳಿದ್ದಾನೆ. ಇದರಿಂದ ಅವರು ಈ ಇಬ್ಬರು ಗ್ರಂಥಕರ್ತರಿಗಿಂತಲೂ ಪ್ರಾಚೀನರೆಂಬುದು ನಿಶ್ಚಯ. ಆದರೆ ಎಷ್ಟು ಪ್ರಾಚೀನರೆಂದು ಹೇಳಲಾಗುವುದಿಲ್ಲ. ಬಹು ಪ್ರಾಚೀನರೆಂದು ಮಾತ್ರ ಕಾಣುತ್ತದೆ. ಆರಾಧನೆಯ 'ವಿಜಹನಾ' ಎಂಬ ೪೦ ನೆಯ ಅಧಿಕಾರ—ಇದು ಆರಾಧಕ ಮುನಿಗಳ ಮೃತಕ ಸಂಸ್ಕಾರವನ್ನು ವರ್ಣಿಸುತ್ತದೆ—ಇದರ ಪ್ರಾಚೀನತೆಯ ಮೇಲೆ ಬೆಳಕನ್ನು ಚೆಲ್ಲುತ್ತದೆ. ಆ ಕಾಲದಲ್ಲಿ ಮುನಿ ಶರೀರವನ್ನು ಸುಡದ

[1] 'ವೃಂದಾವನ ವಿಲಾಸ'ದಲ್ಲಿ ನಾನು ಬರೆದಿರುವ ಭೂಮಿಕೆಯನ್ನು ನೋಡಿ.

ತರುವಾಯ ಕಾಡಿನಲ್ಲಿ ಯಾವುದಾದರೂ ಒಂದು ಉತ್ತಮವಾದ ಸ್ಥಳವನ್ನಾರಿಸಿ, ಅಲ್ಲಿಯೇ ಇಟ್ಟು ಬರುತ್ತಿದ್ದರೆಂದೂ, ಆ ಶರೀರವು ಪಶುಪಕ್ಷಿಗಳಿಗೆ ಆಹಾರವಾಗುತ್ತಿದ್ದಿತೆಂದೂ ಅದರಿಂದ ತಿಳಿದುಬರುತ್ತದೆ.[1] ಮುಂದೆ ಹೇಳುವಂತೆ, ಈ ಗ್ರಂಥದ ಮೇಲೆ ಅನೇಕ ಪ್ರಾಕೃತ ಟೀಕೆಗಳೂ ರಚಿತವಾದುವು. ಈ ಪ್ರಾಕೃತ ಟೀಕೆಗಳ ಸಮಯ ಕ್ರಿ. ಶ. ಆರು ಇಲ್ಲವೇ ಏಳನೆಯ ಶತಮಾನಕ್ಕಿಂತ ಅನಂತರ ಆಗಿದ್ದಿರಲಾರದು. ಇನ್ನಾದರೋ ಸಂಸ್ಕೃತ ಟೀಕೆಗಳ ಕಾಲ ಬರುತ್ತದೆ.

ಈ ಪ್ರಾಚೀನ ಗ್ರಂಥಗಳ ಮೇಲಿನ ಟೀಕೆಗಳಲ್ಲಿ ನಮಗೆ ಸಿಕ್ಕಿರುವುವು ಇವು :

## ಟೀಕೆಗಳ ಪರಿಚಯ

**೧. ವಿಜಯೋದಯ :** ಇದು ಈಗಾಗಲೇ ಮುದ್ರಿತವಾಗಿದೆ. ಇದರ ಕರ್ತೃ ಅಪರಾಜಿತಸೂರಿ. ಇವರು ಚಂದ್ರನಂದಿ ಮಹಾಕರ್ಮ ಪ್ರಕೃತ್ಯಾಚಾರ್ಯರ ಪ್ರಶಿಷ್ಯರೂ, ಬಲದೇವಸೂರಿಯ ಶಿಷ್ಯರೂ ಆಗಿದ್ದರು. ಆರಾತೀಯ ಆಚಾರ್ಯ ಚೂಡಾಮಣಿಗಳಾಗಿಯೂ ಜಿನ ಶಾಸನೋದ್ಧಾರದಲ್ಲಿ ಧೀರರೂ, ವೀರರೂ, ಯಶಸ್ವಿಗಳೂ ಎಂದು ಹೆಸರು ಪಡೆದವರೂ ಆಗಿದ್ದರು. ನಾಗನಂದಿ ಗಣಿಯ ಚರಣ ಸೇವೆಯನ್ನು ಮಾಡಿದುದರಿಂದ ಇವರಿಗೆ ಜ್ಞಾನಪ್ರಾಪ್ತಿಯಾಗಿತ್ತು. ಶ್ರೀ ನಂದಿ ಗಣಿಯ ಪ್ರೇರಣೆಯಿಂದ ವಿಜಯೋದಯ ಎಂಬ ಹೆಸರಿನ ಟೀಕೆಯನ್ನು ಬರೆದರು.

'ಚಂದ್ರನಂದಿ ಮಹಾಕರ್ಮಪ್ರಕೃತ್ಯಾಚಾರ್ಯಶಿಷ್ಯೇಣ ಆರಾತೀಯಸೂರಿ ಚೂಲಾಮಣಿನಾ ನಾಗನಂದಿಗಣಿ ಪಾದಪದ್ಮೋಪಸೇವಾಜಾತಮತಿಲವೇನ ವಲದೇವಸೂರಿಶಿಷ್ಯೇಣ ಜಿನಶಾಸನೋದ್ಧರಣಧೀರೇಣ ಲಬ್ಧಯಶಃಪ್ರಸರೇಣಾಪರಾಜಿತ ಸೂರಿಣಾ ಶ್ರೀ ನಂದಿಗಣಿನಾ ವಚೋದಿತೇನ ರಚಿತಾ ಆರಾಧನಾಟೀಕಾ ಶ್ರೀ ವಿಜಯೋದಯಾ ನಾಮ್ನಾ ಸಮಾಪ್ತಾ.'

ಪಂ. ಆಶಾಧರರು ತಮ್ಮ ಮೂಲಾರಾಧನಾದರ್ಪಣದಲ್ಲಿ ಅನೇಕ ಸ್ಥಳಗಳಲ್ಲಿ[2] ಅಪರಾಜಿತಸೂರಿಯನ್ನು 'ಶ್ರೀ ವಿಜಯಾಚಾರ್ಯ' ಎಂದು ಕರೆದಿದ್ದಾರೆ. 'ಅನಗಾರಧರ್ಮಾಮೃತಟೀಕಾ' (ಪು. ೬೭೩) ದಲ್ಲಿ ಒಂದೆಡೆ 'ಏತಚ್ಚ ಶ್ರೀ ವಿಜಯಾಚಾರ್ಯ-ವಿರಚಿತ-ಸಂಸ್ಕೃತ-ಮೂಲಾರಾಧನಟೀಕಾಯಾಂ ಸುಸ್ಥಿತಸೂತ್ರೇ ವಿಸ್ತರತಃ ಸಮರ್ಥಿತಂ ದೃಷ್ಟವ್ಯಮ್' ಎಂದು ಬರೆದಿದೆ. ಅಪರಾಜಿತಸೂರಿ ಶ್ರೀ ವಿಜಯಚಾರ್ಯ ಎಂಬ ಹೆಸರನ್ನೂ ಪಡೆದಿದ್ದರೆಂಬುದು ಇದರಿಂದ ತಿಳಿಯುತ್ತದೆ. 'ವಿಜಯೋದಯಾ' ಎಂಬ ಹೆಸರಿಗೆ ಇದೇ ಕಾರಣವಿರಬೇಕು.

---

1. 'ಭಗವತೀ ಆರಾಧನಾ'ದ ಭೂಮಿಕೆಯಲ್ಲಿ ಈ ವಿಧಿಯ ಬಗ್ಗೆ ವಿಸ್ತೃತ ವಿವರಗಳಿವೆ.
2. ಈ ಗಾಥೆಗಳ ಟೀಕೆಯನ್ನು ನೋಡಿ : ೪೪ ; ೫೯೫ ; ೬೮೧-೨ ; ೧೭೧೨ ; ೧೯೯೯.

ಅಪರಾಜಿತಸೂರಿಯೂ ಸಹ ಯಾಪನೀಯ ಸಂಘದವರು. ಈ ವಿಷಯದಲ್ಲಿ ಈಗ ಸಂದೇಹವೇನೂ ಇಲ್ಲ. 'ದಶವೈಕಾಲಿಕಟೀಕಾಯಾಂ ಶ್ರೀವಿಜಯೋದಯಾಂ ಪ್ರಪಂಚಿತಾ ಉದ್ಗಮಾದಿದೋಷಾ ಇತಿ ನೇಹ ಪ್ರತನ್ಯತೇ*' ಎಂದು ೧೧೯೭ ನೆಯ ಗಾಹೆಯ ಟೀಕೆಯಲ್ಲಿ ಅವರೇ ಸ್ವತಃ ಬರೆದಿರುವುದರಿಂದ ಅವರು 'ದಶವೈಕಾಲಿಕ' ಸೂತ್ರದ ಬಗ್ಗೆಯೂ ಸಹ 'ವಿಜಯೋದಯಾ' ಎಂಬ ಟೀಕೆಯನ್ನು ಬರೆದಿದ್ದಾರೆಂಬುದು ತಿಳಿಯುತ್ತದೆ. 'ದಶವೈಕಾಲಿಕ' ಪ್ರಸಿದ್ಧ ಶ್ವೇತಾಂಬರ ಸೂತ್ರ ಗ್ರಂಥ; ಇದಕ್ಕೆ ಯಾಪನೀಯ ಸಂಘದವರು ಮನ್ನಣೆಯನ್ನು ಕೊಟ್ಟಿದ್ದರು ಎಂಬುದು ಸರ್ವವಿದಿತವಾದ ವಿಷಯ.

'ವಚನಿಕಾ' ಬರೆಯುತ್ತಿದ್ದಾಗ ಪಂ. ಸದಾಸುಖಜೀಯವರ ಬಳಿಯಲ್ಲಿ ಈ ಟೀಕೆ ಇದ್ದಿತು. ಆದುದರಿಂದಲೇ ಅವರು ೪೨೭ ನೆಯ ಗಾಥೆಯ ವಚನಿಕೆಯಲ್ಲಿ ಹೀಗೆ ಬರೆಯುತ್ತಾರೆ: 'ಇವುಗಳ ವಿಶೇಷಜ್ಞಾನಿಯಾದವನೇ ಆಗಮಾನುಸಾರವಾಗಿ ಧ್ಯಾನೀವಿಶೇಷವೆಂಬುದು ನಿಶ್ಚಯ. ಈ ಗ್ರಂಥದ ಟೀಕಾಕಾರ ಬಹುಶಃ ಶ್ವೇತಾಂಬರನಾಗಿರಬೇಕು.' ಇನ್ನೊಂದು ಗಾಥೆಯ ಅರ್ಥದಲ್ಲಿ ವಸ್ತ್ರ, ಕಂಬಳಿ ಮೊದಲಾದವುಗಳ ಬಳಕೆಗೆ ಪುಷ್ಟಿ ಕೊಡುತ್ತ ಹೇಳಿರುವ ಮಾತುಗಳು ಅಷ್ಟು ವಿಶ್ವಸನೀಯವಲ್ಲ. ಅವರಿಗೆ ಯಾಪನೀಯ ಸಂಘದ ಬಗ್ಗೆ ವಿಶೇಷ ತಿಳುವಳಿಕೆಯಿಲ್ಲದಿದ್ದುದರಿಂದ ಅವರು ಅಪರಾಜಿತಸೂರಿಯನ್ನು ಶ್ವೇತಾಂಬರರೆಂದೇ ಭಾವಿಸಿದ್ದರು. ವಾಸ್ತವದಲ್ಲಿ ಶ್ವೇತಾಂಬರ ಸಂಪ್ರದಾಯದ ಸಿದ್ಧಾಂತಗಳನ್ನು ಯಾಪನೀಯ ಸಂಘದ ಸಿದ್ಧಾಂತಗಳು ಹೋಲುತ್ತವೆ. ಅವರೂ ಸಹ ಆಚಾರಾಂಗ, ಉತ್ತರಾಧ್ಯಯನಾದಿ ಆಗಮಗಳನ್ನು ಮನ್ನಿಸುತ್ತಾರೆ. ಅಂತೆಯೇ ಅಪರಾಜಿತಸೂರಿ ಅಲ್ಲಲ್ಲಿ ಅವುಗಳನ್ನು ಉದ್ಧರಿಸಿ ತಮ್ಮ ವಿಷಯ ನಿರೂಪಣೆ ಮಾಡುತ್ತಾರೆ. ಅವರು ಯಾಪನೀಯರು ಎಂಬುದರ ಬಗ್ಗೆ ಇನ್ನೂ ಹಲವಾರು ಪ್ರಮಾಣಗಳನ್ನು ನನ್ನ 'ಯಾಪನೀಯ ಸಾಹಿತ್ಯ ಸಂಶೋಧನೆ' ಎಂಬ ಲೇಖನದಲ್ಲಿ ಪ್ರಸ್ತಾವಿಸಿದ್ದೇನೆ.

ಅಪರಾಜಿತಸೂರಿಯ ಕಾಲವಂತೂ ಸರಿಯಾಗಿ ತಿಳಿದುಬಂದಿಲ್ಲ; ಅವರು ವಿಕ್ರಮ ಶಕೆಯ ನವಮ ಶತಾಬ್ದಿಯಲ್ಲಿದ್ದಿರಬಹುದೆಂದು ಅಭಿಪ್ರಾಯಪಡಬಹುದು. ಗಂಗವಂಶಕ್ಕೆ ಸೇರಿದ ಪೃಥ್ವೀ ಕೊಂಕಣಿ ಮಹಾರಾಜರ श. सं. ೬೯೮ (वि. सं. ೮೩೩)ರ ದಾನಪತ್ರವೊಂದು[1] ಸಿಕ್ಕಿದೆ. ಅದರಲ್ಲಿ ಯಾಪನೀಯ ಸಂಘದವರಾದ

---

* ಉದ್ಗಮಾದಿ ದೋಷಗಳ ವರ್ಣನೆಯನ್ನು ದಶವೈಕಾಲಿಕದ ಮೇಲಿನ ಟೀಕೆಯಾದ ವಿಜಯೋದಯದಲ್ಲಿ ಬರೆದಿದ್ದೇನೆ. ಆದ್ದರಿಂದ ಆ ವರ್ಣನೆಯ ಆಗತ್ಯ ಇಲ್ಲಿ ಇಲ್ಲ—ಎಂಬುದು ಇದರ ತಾತ್ಪರ್ಯ

1 'ಇಂಡಿಯನ್ ಆಂಟಿಕ್ವೆರಿ' Vol. ೨, ಪುಟ ೧೫೬-೫೭.

ಚಂದ್ರನಂದಿ, ಕೀರ್ತಿನಂದಿ ಮತ್ತು ವಿಮಲಚಂದ್ರರಿಗೆ 'ಲೋಕತಿಲಕ' ಎಂಬ ಜೈನಮಂದಿರಕ್ಕಾಗಿ ಒಂದು ಗ್ರಾಮವನ್ನು ದಾನಮಾಡಿರುವ ವಿಷಯ ಪ್ರಸ್ತಾಪಿಸಲ್ಪಟ್ಟಿದೆ. ಅಪರಾಜಿತಸೂರಿ ಪ್ರಾಯಶಃ ಈ ಚಂದ್ರನಂದಿ[1]ಯ ಪ್ರಶಿಷ್ಯರಾಗಿರಬಹುದು. ಉಕ್ತ ದಾನಪತ್ರದಲ್ಲಿ ಅವರ ಒಬ್ಬ ಶಿಷ್ಯ ಕುಮಾರನಂದಿಯ ಗುರುಪರಂಪರೆಯೇ ಉಲ್ಲೇಖಿತವಾಗಿದೆ. ಬಹುಶಃ ಬಲದೇವಸೂರಿ ಎರಡನೆಯ ಶಿಷ್ಯರಾಗಿದ್ದು, ಇವರ ಶಿಷ್ಯ ಅಪರಾಜಿತರಾಗಿದ್ದಿರಬಹುದು.

೨. **ಮೂಲಾರಾಧನಾ-ದರ್ಪಣ**—ಇದರ ಕರ್ತೃ ಪಂ. ಆಶಾಧರಜೀಯವರು. ಇವರ ಅನೇಕ ಗ್ರಂಥಗಳು ಪ್ರಕಟವಾಗಿವೆ. ಇವರ ಕಾಲದ ಬಗ್ಗೆಯೂ ಸಾಕಷ್ಟು ಬರೆಯಲ್ಪಟ್ಟಿದೆ.[2] ಈ ಟೀಕೆಯೂ ಸಹ 'ವಿಜಯೋದಯಾ' ಟೀಕೆಯಂತೆಯೇ ಅಚ್ಚಾಗಿದೆ. ಇದಕ್ಕೆ ಆಧಾರವಾದ ಕಾರಂಜಾ ಪ್ರತಿಯಲ್ಲಿನ ಕೊನೆಯ ಪ್ರಶಸ್ತಿಯ ಪುಟ ಕಳೆದುಹೋಗಿರುವುದರಿಂದ ಈ ಗ್ರಂಥದ ಕಾಲ ತಿಳಿದುಬಂದಿಲ್ಲ.

ಪಂ. ಆಶಾಧರಜೀಯವರಿಗೂ ಮೊದಲೇ ಅಮಿತಗತಿಯ ಸಂಸ್ಕೃತ ಆರಾಧನೆ ಬಂದುಬಿಟ್ಟಿತ್ತು. ಇದಲ್ಲದೆ ಇವರ ಹತ್ತಿರ ಮತ್ತಾವುದೋ ಸಂಸ್ಕೃತ ಪದ್ಯಾನುವಾದವೂ ಇದ್ದಿರಬೇಕು. ನೂರಕ್ಕಿಂತಲೂ ಹೆಚ್ಚು ಸಂಸ್ಕೃತ ಪದ್ಯಗಳನ್ನು ಇವರು ತಮ್ಮ ಟೀಕೆಯಲ್ಲಿ ಉದ್ಧರಿಸಿದ್ದಾರೆ. ಆದುದರಿಂದಲೇ ಇವರು ತಮ್ಮ ಗ್ರಂಥಕ್ಕೆ 'ಮೂಲಾರಾಧನಾ-ದರ್ಪಣ' ಎಂದು ಹೆಸರಿಟ್ಟಿದ್ದಿರಬೇಕು. ಇದು ಸಂಸ್ಕೃತ ಆರಾಧನೆಯ ಟೀಕೆಯಲ್ಲ ಎಂದು ಎಲ್ಲರೂ ಗಮನಿಸಬೇಕಾದುದು ಯೋಗ್ಯ.

೩. **ಆರಾಧನಾ-ಪಂಜಿಕಾ**—ಪುಣೆಯ ಭಾಂಡಾರಕರ್—ಪ್ರಾಚ್ಯವಿದ್ಯಾ ಸಂಶೋಧಕ ಮಂದಿರದಲ್ಲಿ ಇದರ ಪ್ರತಿ[3]ಯಿದೆ. ೧೫-೧೬ ವರ್ಷಗಳ ಹಿಂದೆ ನಾನು ಇದನ್ನು ನೋಡಿ ಅಂತ್ಯದಲ್ಲಿನ ಲೇಖಕ-ಪ್ರಶಸ್ತಿಯನ್ನು ಬರೆದುಕೊಂಡಿದ್ದೆ. ಅದು ಹೀಗಿದೆ:

---

[1] ಚಂದ್ರನಂದಿಯನ್ನು ಅಪರಾಜಿತಸೂರಿಯು ಮಹಾಕರ್ಮಪ್ರಕೃತ್ಯಾಚಾರ್ಯ ಎಂದಿದ್ದಾನೆ. ಶ. ಸ. ೧೦೫೦ ರ ಶ್ರವಣಬೆಳುಗೊಳದ ೫೫ ನೆಯ ಶಿಲಾಲೇಖದಲ್ಲಿ ಅನೇಕ ಆಚಾರ್ಯರ ಜೊತೆಯಲ್ಲಿ ಒಬ್ಬ ಕರ್ಮ-ಪ್ರಕೃತಿ ಭಟ್ಟಾರಕರಿಗೂ ವಂದನೆಗಳು ಎಂದಿದೆ. ಇವರೇ ಬಹುಶಃ ಚಂದ್ರನಂದಿ ಆಚಾರ್ಯರಿದ್ದಿರಬೇಕು. ಉಕ್ತ ಶಾಸನದಿಂದ ಕಾಲನಿರ್ಣಯ ಸಾಧ್ಯವಿಲ್ಲದಾಗಿದೆ.

[2] 'ಅನೇಕಾಂತ್' ವರ್ಷ ೩, ಅಂಕ ೧೧-೧೨ ರಲ್ಲಿ 'ಪಂ. ಪ್ರ. ಆಶಾಧರ' ಎಂಬ ನನ್ನ ಲೇಖನ ನೋಡಿ.

[3] ನಂ. ೬೭೯ of ೧೮೯೫-೯೬, ೯೮-೯೯.

ಕುಂದಾವದಾತಯಶಸಾ ಸಹವಾಸಿ ವಂಶಪದ್ಮಾಕರದ್ಯುಮಣಿನಾ ಗುಣಿನಾಂ ವರೇಣ |
ಶ್ರೀದೇವ ಕೀರ್ತಿ ವಿಬುಧಾಯ ಬುಧಪ್ರಿಯಾಯ ದತ್ತಂ ಯಶೋಧವಲನಾಮಧುರಂಧರೇಣ ||
ಶ್ರೀದೇವಕೀರ್ತಿ ಪಂಡಿತಚ್ಛಾತ್ರೇಣ ಕಾಹತ್ಯಾಕನಾಮಾ ಲಿಖಿತಮಿತಿ |

ಸಂವತ್ ೧೪೧೬ ವರ್ಷೇ ಚೈತ್ರ ಸುದಿಪಂಚಮ್ಯಾಂ ಸೋಮವಾಸರೇ ಸಕಲ ರಾಜಶಿರೋಮುಕುಟಮಾಣಿಕ್ಯಮರೀಚಿಪಿಂಜರೀಕೃತಚರಣ ಕಮಲಪಾದಪೀಠಸ್ಯ ಶ್ರೀಪೇರೋಜಸೋಹೇಃ ಸಕಲಸಾಮ್ರಾಜ್ಯಧುರೀಬಿಭ್ರಾಣಸ್ಯ ಸಮಯೇ ಶ್ರೀದಿಲ್ಲ್ಯಾಂ ಶ್ರೀಕುಂದಕುಂದಾಚಾರ್ಯಾನ್ವಯೇ ಸರಸ್ವತೀಗಚ್ಛೇ ಬಲಾತ್ಕಾರ ಗಣೇ ಭಟ್ಟಾರಕಶ್ರೀರತ್ನಕೀರ್ತಿದೇವಪಟ್ಟೋದಯಾದ್ರಿತರುಣತರಣಿತ್ವಮುರ್ವೀ ಕುರ್ವಾಣಂ ಭಟ್ಟಾರಕಶ್ರೀಪ್ರಭಾಚಂದ್ರದೇವ—ತತ್ಸಿಷ್ಯಾಣಾಂ ಬ್ರಹ್ಮ ನಾಥೂ ರಾಮ| ಇತ್ಯಾರಾಧನಾಪಂಜಿಕಾಯಾಂ (?) ಗ್ರಂಥ ಆತ್ಮಪಠನಾರ್ಥಂ ಲಿಖಾ ಪಿತಮ್ | ಶುಭಸ್ತು ಮಂಗಲಮಹಾಶ್ರೀಃ | ಸಮಸ್ತಸಂಘಸ್ಯ ಶುಭಮ್ |

ಅಗ್ರೋತಕಾನ್ವಯೇ ಸಾಧು ನಯಪಾಲ ತತ್ಪುತ್ರ ಕುಲಧರಃ ತಥಾ ಗೋಹಿಲ ಗೋತ್ರ ಸಾಧು ಖೇತಲ ಸಾಧು ರಾಜಾ ತಸ್ಯ ಪುತ್ರ ವೀರಪಾಲ ಲಿಖಾಪಿತಮ್ |

ಮಂಗಲಾಚರಣೆಯಿಂದ ಪ್ರಾರಂಭವಾಗುವ ಮೊದಲ ಭಾಗವನ್ನು ನಾನು ಗುರುತುಮಾಡಿಕೊಳ್ಳಲಿಲ್ಲ. ಹಾಗೆಯೇ ಟೀಕಾಕರ್ತನ ಅಂತಿಮ ಉಲ್ಲೇಖವನ್ನೂ ಬರೆದುಕೊಂಡಿಲ್ಲ. ಹೀಗಾಗಿ ಇದರ ಕರ್ತೃ ಯಾರೆಂದು ಹೇಳಲಾಗುವುದಿಲ್ಲ. ಆದರೂ ಸಹ ಈ ಪಂಜಿಕೆಯನ್ನು ಪ್ರಮೇಯಕಮಲಮಾರ್ತಾಂಡಾದಿಗಳ ಲೇಖಕರಾದ ಆಚಾರ್ಯ ಪ್ರಭಾಚಂದ್ರರು ಬರೆದಿರಬಹುದೆಂಬುದು ನನ್ನ ಊಹೆ. ಮೇಲೆ ಕೊಟ್ಟಿರುವ ಪ್ರಶಸ್ತಿ ಕೇವಲ ಬರೆಸಿದವರ ಬಗ್ಗೆ ಮಾತ್ರ ಹೇಳುತ್ತದೆ. ಇದರಲ್ಲಿ ಮೂರು ಬಾರಿಯ ಲಿಪಿಕಾರರ ಉಲ್ಲೇಖ ಸುರಕ್ಷಿತವಾಗಿದೆಯೆಂಬುದು ಆಶ್ಚರ್ಯದ ಸಂಗತಿ. ಇದರ ಒಂದು ಪ್ರತಿಯನ್ನು ಶ್ರೀ ದೇವಕೀರ್ತಿ ಪಂಡಿತರ ವಿದ್ಯಾರ್ಥಿಯಾದ ಕಾಹತ್ಯಾಕನು ಬರೆದವನು. ಸರಸೀವಂಶದ ಯಶೋಧವಲನೆಂಬ ಧುರಂಧರ ಅಥವಾ ಪಂಡಿತನು ಬುದ್ಧಿಜನಪ್ರಿಯನಾದ ಶ್ರೀ ದೇವಕೀರ್ತಿ ಪಂಡಿತರಿಗೆ ಇದನ್ನು ಕಾಣಿಕೆಯಾಗಿ ಒಪ್ಪಿಸಿದನು. ಈ ಪ್ರತಿಯ ಕಾಲ ಕೊಟ್ಟಿಲ್ಲ. ಬಾದಶಾಹ್ ಫೀರೋಜ಼್‌ಶಾಹ್ ತುಗಲಕ್‌ನು ದಿಲ್ಲಿಯನ್ನು ಆಳುತ್ತಿದ್ದಾಗ, ಸಂ. ೧೪೧೬ರ ಚೈತ್ರ ಶುದ್ಧ ಪಂಚಮೀ ಸೋಮವಾರದಂದು ತನ್ನ ಅಧ್ಯಯನಕ್ಕಾಗಿ (ಮೇಲೆ ಹೇಳಿದ) ಪ್ರತಿಯ ಆಧಾರದಿಂದ ಮತ್ತೊಂದು ಪ್ರತಿಯನ್ನು ರತ್ನ ಕೀರ್ತಿ ಭಟ್ಟಾರಕನ ಪಟ್ಟಶಿಷ್ಯ ಶ್ರೀ ಪ್ರಭಾಚಂದ್ರ ದೇವನ ಶಿಷ್ಯ ಬ್ರಹ್ಮಚಾರಿ ನಾಥೂರಾಮನು ಬರೆಸಿದನು.

ಈ ಎರಡನೆಯ ಪ್ರತಿಯ ಸಹಾಯದಿಂದ ಮೂರನೆಯ ಪ್ರತಿಯನ್ನು ಅಗ್ರೋತ

ಅಥವಾ ಅಗರವಾಲವಂಶದ ಸಯಪಾಲ ಸಾಹುವಿನ ಪುತ್ರ ಕುಲಧರ, ಗೋಹಿಲ ಗೋತ್ರೀ ಸಾಹೂ ಖೇತಲ ಮತ್ತು ಸಾಹೂ ರಾಜನ ಮಗ ವೀರಪಾಲ ಬರೆಸಿದರು. ಯಾವಾಗ ಬರೆಸಿದರು ಎಂಬುದನ್ನು ತಿಳಿಸಿಲ್ಲ.

ಈ ಪದ್ಧತಿ ಶ್ಲಾಘನೀಯವಾದುದು. ಲಿಪಿಕರ್ತನು ಮೊದಲಿನ ಮಾತೃಕಾ-ಪ್ರತಿಗಳಲ್ಲಿನ ಲೇಖಕ ಪ್ರಶಸ್ತಿಯನ್ನೂ ಪೂರ್ತಿ ಬರೆದಿದ್ದರೆ ಬಹಳ ಅನುಕೂಲವಾಗುತ್ತಿದ್ದಿತು. ಜೊತೆಗೇ ತಿಥಿ, ಸಂವತ್ಸರಗಳನ್ನೂ ಬಿಡಕೂಡದು.

ಎರಡನೆಯ ಲಿಪಿಕರ್ತನು ತನ್ನ ಕಾಲವನ್ನು (ಸಂ. ೧೪೧೬) ಕೊಟ್ಟಿದ್ದಾನೆ. ಆದುದರಿಂದ ಈ ಟೀಕೆಯ ಕಾಲದ ಬಗ್ಗೆ ಇದಿಷ್ಟನ್ನು ನಿರ್ದಿಷ್ಟವಾಗಿ ಹೇಳಬಹುದು: ಈ ಟೀಕೆ ಹದಿನಾಲ್ಕನೆಯ ಶತಮಾನಕ್ಕಿಂತಲೂ ಈಚಿನದಲ್ಲ.

**೪. ಭಾವಾರ್ಥ-ದೀಪಿಕಾ ಟೀಕಾ**—ಈ ಟೀಕೆಯೂ ಸಹ ಪುಣೆಯ—ಭಾಂಡಾರಕರ್—ಪ್ರಾಚ್ಯವಿದ್ಯಾಸಂಶೋಧಕ ಮಂದಿರದಲ್ಲಿದೆ.[1] ಇದರ ಪ್ರಾರಂಭದಂಶ ಮತ್ತು ಅಂತ್ಯಾಂಶ ಈ ರೀತಿ ಇವೆ:

ಶ್ರೀಮಂತಂ ಜಿನದೇವಂ ವೀರಂ ನತ್ವಾವರಾರ್ಚಿತಂ ಭಕ್ತ್ಯಾ |
ವೃತ್ತಿಂ ಭಗವತ್ಯಾರಾಧನಾಸುಗ್ರಂಥಸ್ಯ ಕುರ್ವೇऽಹಮ್ || ೧ ||
ಘನಘಟಿತಕರ್ಮನಾಶಂ ಗುರುಂ ಚ ವಂಶಾಧಿಪಂ ಚ ಕುಂದಾಹ್ವ |
ವಂದೇ ಶಿರಸಾ ತರಸಾ ಗ್ರಂಥಸಮಾಪ್ತಿಂ ಸಮಾಪ್ನುರಹಮ್ || ೨ ||
ವಾಗ್ದೇವೀಂ ಶ್ರೀಜೈನೀಂ ನತ್ವಾ ಸಂಪ್ರಾರ್ಥ್ಯ ಗ್ರಂಥಸಂಸಿದ್ಧಿಂ |
ಸರಲಾಂ ಮುಗ್ಧಾಂ ವಿರಚೇ ವೃತ್ತಿಂ ಭಾವಾರ್ಥದೀಪಿಕಾಸಂಜ್ಞಾಂ || ೩ ||
ಕೃತೇಯಂ ಸದ್ವೃತ್ತಿಃ ಶಿವಜಿದರುಣಾಖ್ಯೇನ ವಿದುಷಾ,
ಗುಣಾನಾಂ ಸತ್ ವ್ಯಾತಿರ್ವ್ಯಪಹೃತಸಮಸ್ತಾಘನಿಕರಾ |
ಪ್ರವಕ್ತುಃ ಶ್ರೋತುರ್ಯಾ ವಿತರತಿ ದಿವಂ ಮುಕ್ತಿಮಪರಾಂ,
ಚಿರಂ ಜೀಯಾದೇಷಾ ಬುಧಜನ ಮನೋರಂಜನಕರೀ ||
ಮಹಾಸಂಘೇ ಗಚ್ಛೇ ಗಿರಿಗಣಬಲಾತ್ಕಾರಪದಕೇ
ಗುರೌ ನಂದ್ಯಾಮ್ನಾಯೇऽನ್ವಯವರಗುರೌ ಕುಂದಮುನಿಪೇ |

* * * *

ಸುಜಾತೋ ವೈ ಸೂರಿರ್ಜಯಪುರಪದಸ್ಥೋ ಮುನಿವರಃ || ೨ ||
ಮಹೇಂದ್ರಸ್ತತ್ಪಟ್ಟೇ ಗುರುಗುಣನಿಧಿಃ ಕ್ಷೇಮಸುವೃಷಾಂ,
ತದೀಯಃ ಸಚ್ಛಿಷ್ಯೋ ಬುಧವರನಿಹಾಲೇತಿ ಪದಭಾಕ್ |
ತದೀಯಃ ಸಚ್ಛಿಷೋ ಗುಣನಿಧಿದಯಾಚಂದ್ರವಿಬುಧಃ
ತದೀಯಃ ಸತ್ತೇಜಃ ದಿಲಸುಖಬುಧೋ ಜ್ಞಾನನಿರತಃ || ೩ ||

[1] No. ೧೧೧೩ of ೧೮೯೫-೯೭.

ತದೀಯಃ ಸಚ್ಛಿಷ್ಯಃ ಶಿವಜಿದರುಣೋ ಭಕ್ತಿನಿರತಃ,
ಗುರುಣಾಮಾಜ್ಞಾವಾನ್ ಧೃತಜಿನಸುಧರ್ಮೋSಭವದಿಹ |
ತದೀಯಃ ಸತ್ಪುತ್ರೋ ಮಣಿಜಿದರುಣಾಖ್ಯೋ ಲಘುಮತಿ-
ಸ್ತದರ್ಥಂ ವೃತ್ತಿರ್ವಾ ಪ್ರಕಟಿತಪಥಾಕಾರಿ ರುಚಿರಾ || ೪ ||
ಸಮೇ ವಸ್ವೇಕಾರ್ಯೇಂದುಮಿತಿ ಶುಭಪಕ್ಷೇ ಶುಚಿಭವೇ,
ತ್ರಯೋದಶ್ಯೇಹ್ನೋSಂತ್ಯೇ (?) ಚರಮಸಮಯೇ ವಾರಧಿಷಣೇ
ಅನೂರಾಧಾನಕ್ಷತ್ರೇ ಶುಭಸುಯಶರ್ದ್ಧಿಪ್ರಜನನೀ,
ಚಿರಂ ಜೀಯಾದೇಷಾ ಭುವಿ ಜಿನಮತೋದ್ಯೋತನಕರೀ ||

ಇತಿ ಭಗವತೀ ಆರಾಧನಾಟೀಕಾ ಸಮಾಪ್ತಾ |

ಈ ಟೀಕೆಯನ್ನು ಶಿವಜಿದರುಣ ಅರ್ಥಾತ್ ಶಿವಜೀಲಾಲನು ತನ್ನ ಸುಪುತ್ರ ಮಣಿಜಿದರುಣ (ಮಣಿಜೀಲಾಲ್ ಇಲ್ಲವೇ ಮಣಿಲಾಲ) ನಿಗಾಗಿ ರಚಿಸಿದನು. ಅವನು ಜಯಪುರದ ಭಟ್ಟಾರಕ ಗದ್ದುಗೆಯ ಪಂಡಿತ. ತನ್ನ ಗುರುಪರಂಪರೆಯನ್ನು ಈ ರೀತಿ ವಿವರಿಸಿದ್ದಾನೆ:—ಭಟ್ಟಾರಕ ಮಹೇಂದ್ರಕೀರ್ತಿಯ ಶಿಷ್ಯ ಭಟ್ಟಾರಕ ಕ್ಷೇಮಕೀರ್ತಿ, ಅವರ ಶಿಷ್ಯ ಪಂಡಿತ ನಿಹಾಲಚಂದ್, ಅವನ ಶಿಷ್ಯ ದಯಾಚಂದ್ರ, ದಯಾಚಂದ್ರನ ಶಿಷ್ಯ ದಿಲಸುಖ ಮತ್ತು ದಿಲಸುಖನ ಶಿಷ್ಯ ಶಿವಜಿಲಾಲ. ಪ್ರಶಸ್ತಿಯ ಐದನೆಯ ಪದ್ಯದಲ್ಲಿ ರಚಿಸಿದ ಕಾಲವಿದೆಯಾದರೂ, ಅದರ ಮೊದಲನೆಯ ಚರಣ ಅಶುದ್ಧವಾಗಿರುವುದರಿಂದ ಕಾಲನಿರ್ಣಯ ಸರಿಯಾಗಿ ಆಗಿಲ್ಲ. ಸಂ. ೧೮೧೮ ರ ಜೇಷ್ಠ ಶುದ್ಧ ತ್ರಯೋದಶೀ ಗುರುವಾರದಂದು ಟೀಕೆ ಸಮಾಪ್ತವಾಗಿದೆ. ಪಂ. ಶಿವಜೀಲಾಲ ಪಂ. ಸದಾಸುಖಜೀಯವರ ಸಮಕಾಲೀನನೇ ಅಲ್ಲದೆ ಅವರ ಪ್ರತಿಪಕ್ಷಿಯೂ (ವಿರುದ್ಧ ಪಕ್ಷದವನೂ) ಆಗಿದ್ದನು. ಆ ಕಾಲದಲ್ಲಿ ತೇರಹ್‌ಪಂಥ್ (ಹದಿಮೂರು ಪಂಥಗಳು) ಮತ್ತು ಬೀಸ್‌ಪಂಥ್ (ಇಪ್ಪತ್ತು ಪಂಥಗಳು)—ಇವರಲ್ಲಿ ಅತ್ಯಂತ ವೈಷಮ್ಯವಿದ್ದಿತು. ತೇರಹ್‌ಪಂಥವನ್ನು ಖಂಡಿಸುವಂತಹ ಒಂದು ಗ್ರಂಥದ ಲೇಖಕ ಪಂ. ಶಿವಜೀಲಾಲ. ಜೊತೆಗೇ ರತ್ನಕರಂಡ, ಚರ್ಚಾಸಂಗ್ರಹ, ಬೋಧಸಾರ, ದರ್ಶನಸಾರ, ಆಧ್ಯಾತ್ಮ-ತರಂಗಿಣೀ ಮುಂತಾದ ಅನೇಕ ಗ್ರಂಥಗಳಿಗೆ ಭಾಷಾವಚನಿಕೆಗಳನ್ನೂ ಬರೆದನು. ಬೀಸ್‌ಪಂಥದಲ್ಲಿ ಅತ್ಯಂತ ಶ್ರದ್ಧೆ ಇವನಿಗಿದ್ದಿತು.

೫. **ಸಂಸ್ಕೃತ ಆರಾಧನಾ**—ಮಾಥುರಸಂಘದ ಆಚಾರ್ಯರಾದ ಅಮಿತಗತಿಯವರು ಬರೆದ ಧರ್ಮಪರೀಕ್ಷಾ, ಉಪಾಸಕಾಧ್ಯಯನ, ಸುಭಾಷಿತರತ್ನಸಂದೋಹ, ಪಂಚಸಂಗ್ರಹ ಮುಂತಾದ ಗ್ರಂಥಗಳು ಈಗಾಗಲೇ ಪ್ರಕಟವಾಗಿವೆ. ಇವರು ನೇಮಿಷೇಣ ಆಚಾರ್ಯರ ಪ್ರಶಿಷ್ಯರೂ, ಮಾಧವಸೇನರ ಶಿಷ್ಯರೂ ಆಗಿದ್ದರು. ತಮ್ಮ

ಗ್ರಂಥ ರಚನಾಕಾಲವನ್ನು ಕೊಟ್ಟಿರುವುದರಿಂದ ಇವರ ಕಾಲನಿರ್ಣಯ ಸುಲಭವಾಗಿ ಆಗಿದೆ. ವಿ.ಸಂ.ದ. ಹನ್ನೊಂದನೆಯ ಶತಮಾನದಲ್ಲಿದ್ದರು. ಆಚಾರ್ಯ ಶಿವಕೋಟಿಯ ಆರಾಧನೆಯ ಮೇಲೆ ಅವರು ಟೀಕೆಯನ್ನೇನೋ ಬರೆದಿಲ್ಲ; ಆದರೆ ಅದನ್ನು ಸಂಸ್ಕೃತ ದಲ್ಲಿ ಪದ್ಯರೂಪದಲ್ಲಿ ಅನುವಾದಿಸಿದ್ದಾರೆ. ಈ ಅನುವಾದ ವಿಜಯೋದಯಾ ಮತ್ತು ದರ್ಪಣಗಳ ಜೊತೆಯಲ್ಲಿಯೇ ಪ್ರಕಟವಾಗಿದೆ. ಪಂ. ಆಶಾಧರರು ತಮ್ಮ ಅನಗಾರ ಧರ್ಮಾಮೃತ ಟೀಕೆಯಲ್ಲಿ ಈ ಸಂಸ್ಕೃತ ಆರಾಧನೆಯ ಹಲವಾರು ಶ್ಲೋಕಗಳನ್ನು ಉದ್ಧರಿಸಿದ್ದಾರೆ.

ಇದರ ರಚನೆ ಭಗವತೀ ಆರಾಧನೆಯ ಪ್ರತಿಯೊಂದು ಗಾಥೆಯ ತಾತ್ಪರ್ಯವನ್ನೂ ಅವಲಂಬಿಸಿ ಸಂಸ್ಕೃತದ ಅನುಷ್ಟುಪ್ ಶ್ಲೋಕಗಳ ರೂಪದಲ್ಲಿ ಆಗಿದೆ. ನಡುನಡುವೆ ಬೇರೆ ಛಂದಸ್ಸಿನ ಪ್ರಯೋಗವೂ ಆಗಿದೆ. ರಚನೆ ಸಾಮಾನ್ಯವಾಗಿ ಅನುವಾದದಂತಿದೆ.

ಪ್ರಕಟನೆಗೆ ನೆರವಾದ ಮೂಲಪ್ರತಿಯಲ್ಲಿ ಮೊದಲ ಹತ್ತೊಂಬತ್ತು ಶ್ಲೋಕಗಳು ಕಳೆದುಹೋಗಿವೆ. ಸಂಸ್ಕೃತ ಆರಾಧನೆಯ ಕೊನೆಯ ಭಾಗ ಈ ರೀತಿ ಇದೆ.

ಆರಾಧನಾ ಭಗವತೀ ಕಥಿತಾ ಸ್ವಶಕ್ತ್ಯಾ,
ಚಿಂತಾಮಣಿಂ ವಿತರಿತುಂ ಬುಧಚಿಂತನಾನಿ |
ಅಹ್ನಾಯ ಜನ್ಮಜಲಧಿಂ ತರಿತುಂ ತರಂಡಂ,
ಭವ್ಯಾತ್ಮನಾ ಗುಣವತೀ ದದತಾಂ ಸಮಾಧಿಮ್ || ೧೨ ||

*　　*　　*　　*

ಶ್ರೀದೇವಸೇನೋಽಜನಿ ಮಾಥುರಾಣಾಂ ಗುಣೀ ಯತೀನಾಂ ವಿಹಿತಪ್ರಮೋದಃ |
ತತ್ರಾತ್ತವಭಾಸೀ ವಿಹಿತಪ್ರದೋಷಃ ಸರೋರುಹಾಣಾಮಿವ ತಿಗ್ಮರಶ್ಮಿಃ ||
ಧೃತಜಿನಸಮಯೋಽಜನಿಮಹನೀಯೋ ಗುಣಮಣಿಜಲಧೇಸ್ತದನು ಯತಿರ್ಯಃ |
ಶಮಯಮನಿಲಯೋಽಮಿತಗತಿಸೂರಿಃ ಪ್ರದಲಿತಮದನೋ ಪದನತಸೂರಿಃ ||
ಸರ್ವಶಾಸ್ತ್ರಜಲರಾಶಿಪಾರಗೋ ನೇಮಿಷೇಣಮುನಿನಾಯಕಸ್ತತಃ |
ಸೋಽಜನಿಷ್ಟ ಭುವನೇ ತಮೋಪಹಃ ಶೀತರಶ್ಮಿರಿವ ಯೋ ಜನಪ್ರಿಯಃ ||
ಮಾಧವಸೇನೋಽಜನಿ ಮುನಿನಾಥೋ ಧ್ವಂಸಿತಮಾಯಾಮದನಕದರ್ಪಃ |
ತಸ್ಯ ಗರಿಷ್ಠೋ ಗುರುರಿವ ಶಿಷ್ಯಸ್ತತ್ವವಿಚಾರಪ್ರವಣಮನೀಷಃ || ೧೭ ||
ಶಿಷ್ಯಸ್ತಸ್ಯ ಮಹಯಿಸೋಽಮಿತಗತಿರ್ಮಾರ್ಗತ್ರಯಾಲಂಬಿನೀ-
ಮೇನಾಂ ಕಲ್ಮಷಮೋಷಿಣೀಂ ಭಗವತೀಮಾರಾಧನಾಂ ಶ್ರೇಯಸೀಮ್ || ೧೮ ||
ಆರಾಧನೈಷಾ ಯದಕಾರಿ ಪೂರ್ಣಾ ಮಾಸೈಶ್ಚತುರ್ಭಿರ್ನ ತದಸ್ತಿ ಚಿತ್ರಂ |
ಮಹೋದ್ಯಮಾನಾಂ ಜನಭಾಕ್ತಿಕಾನಾಂ ಸಿಧ್ಯಂತಿ ಕೃತ್ಯಾನಿ ನ ಕಾನಿ ಸದ್ಯಃ || ೧೯ ||
ಸ್ಫುಟೀಕೃತಾ ಪೂರ್ವಜಿನಾಗಮಾದಿಯಂ ಮಾಯಾ ಜನೇ ಯಸ್ಯತಿ ಗೌರವಂ ಪರಂ |
ಪ್ರಕಾಶಿತಂ ಕಿಂ ನ ವಿಶುದ್ಧಬುದ್ಧಿನಾ ಮಹಾರ್ಘತಾಂ ಗಚ್ಛತಿ ದುಗ್ಧತೋಘೃತಂ || ೨೦ ||

## ಇತರ ಟೀಕೆ ಟಿಪ್ಪಣಿಗಳು

ವಿಜಯೋದಯಾ ಟೀಕೆಯಲ್ಲಿ ಮೊದಲನೆಯ ಗಾಹೆಯ ಟೀಕೆಯ ಆರಂಭದಲ್ಲಿ ಹೀಗೆ ಬರೆಯುತ್ತಾರೆ:

"ಸಿದ್ಧೇ ಜಯಪ್ಪಸಿದ್ಧೇ ಇತ್ಯಾದಿ| ಅತ್ರಾನ್ಯೇ ಕಥಯಂತಿ ನಿವೃತ್ತವಿಷಯರಾಗಸ್ಯ ನಿರಾಕೃತಸಕಲಪರಿಗ್ರಹಸ್ಯ ಕ್ಷೀಣಾಯುಷಸ್ಸಾಧಕಸ್ಯಾರಾಧನಾ ವಿಧಾನಾ[1]ವಬೋಧನಾರ್ಥಮಿದಂ ಶಾಸ್ತ್ರಂ ತಸ್ಯಾವಿಘ್ನಪ್ರಸಿದ್ಧ್ಯರ್ಥಮಿದಂ ಮಂಗಲಸ್ಯ ಕಾರಿಕಾ ಗಾಥೇತಿ| ಅಸಂಯತಸಮ್ಯಗ್ದೃಷ್ಟಿ-ಸಂಯತಾಸಂಯತಾಸಂಯತಸ್ಯ ವಾ ನಿವೃತ್ತವಿಷಯರಾಗತಾ ಸಕಲಗ್ರಂಥ ಪರಿತ್ಯಾಗೋ ವಾಸ್ತಿ| ಕ್ಷೀಣಾಯುಷ ಇತಿ ಚಾನುಪಪನ್ನಂ| ಅಕ್ಷೀಣಾಯುಷೋಪ್ಯಾರಾಧಕತಾಂ ದರ್ಶಯಿಷ್ಯತಿ ಸೂತ್ರಂ 'ಅಣುಲೋಮಾ ವಾ ಸತ್ತೂ ಚಾರಿತ್ತಾವಿಣಾಸಯಾಹವೇ ಜಸ್ಸ' ಇತಿ|"

ಇಲ್ಲಿ 'ಅನ್ಯ' ಎಂದು ಹೇಳುವುದು ವಿಷಯರಾಗದಿಂದ ನಿವೃತ್ತರಾದವರನ್ನು ಕುರಿತು; ಸಕಲ ಪರಿಗ್ರಹರಹಿತರಿಗೆ; ಕ್ಷೀಣಾಯುಗಳಿಗೆ; ಇಂತಹ ಸಾಧಕರಿಗೆ ಆರಾಧನವಿಧಿಯನ್ನು ತಿಳಿಸುವುದಕ್ಕಾಗಿಯೇ ಈ ಶಾಸ್ತ್ರವಿದೆ; ಅದಕ್ಕೆ ನಿರ್ವಿಘ್ನವಾದ ಸಿದ್ಧಿ ದೊರೆಯಲೆಂದೇ ಈ ಮಂಗಲಕಾರಿಯಾದ ಗಾಥೆಯಿದೆ. ಆದರೆ ಅಸಂಯತ ಸಮ್ಯಗ್ದೃಷ್ಟಿ, ಸಂಯತಾಸಂಯತ, ಪ್ರಮತ್ತಸಂಯತಾದಿ ಅನೇಕ ಆರಾಧಕರೂ ಸಾಧಕರೂ ಇರುವಲ್ಲಿ, ಅವರನ್ನು ನಿವೃತ್ತವಿಷಯರಾಗ ಇಲ್ಲವೇ ನಿರಾಕೃತಸಕಲ ಪರಿಗ್ರಹ ಎಂದೇ ಆಗಲಿ—ಹೇಗೆ ಹೇಳಲಾದೀತು? ಅಸಂಯತಸಮ್ಯಗ್ದೃಷ್ಟಿ ಅಥವಾ ಸಂಯತಾಸಂಯತ—ಇವುಗಳು ನಿವೃತ್ತವಿಷಯರಾಗತೆಯೇ ಆಗಲಿ ಅಥವಾ ಸಕಲ ಪರಿಗ್ರಹತ್ಯಾಗವೇ ಆಗಲಿ ಆಗಲಾರದು. 'ಅಣುಲೋಮಾವಾಸತ್ತೂ' ಇತ್ಯಾದಿ ಸೂತ್ರಗಳು ಅಕ್ಷೀಣಾಯುವೂ ಸಹ ಆರಾಧಕನಾಗಬಲ್ಲ ಎಂದು ತೋರಿಸಿವೆಯಾದುದರಿಂದ, 'ಕ್ಷೀಣಾಯುಷ' ಎಂಬ ಮಾತಿಗೂ ಬೆಲೆ ಬರದು.

ವಿಜಯೋದಯಾ ಟೀಕಾಕಾರನ ಬಳಿ ಯಾವುದೋ ಟೀಕೆಯಿದ್ದಿರಬೇಕು; ಅದರಲ್ಲಿ 'ಸಿದ್ಧೇ ಜಯಪ್ಪಸಿದ್ಧೇ' ಎಂದು ಮೊದಲಾಗಿ ಗಾಥೆಗಳಲ್ಲಿ ಸಾಧಕನಿಗೆ ನಿವೃತ್ತವಿಷಯರಾಗ, ನಿರಾಕೃತಸಕಲಪರಿಗ್ರಹ, ಕ್ಷೀಣಾಯುಷ ಮುಂತಾದ ವಿಶೇಷಣಗಳನ್ನು ಕೊಟ್ಟಿರಬೇಕು; ಈ ವಿಶೇಷಣಗಳು ಬಂದ ಸಂದರ್ಭ ಅವರಿಗೆ ಸರಿಯಾಗಿ ಅರ್ಥವಾಗದೆಯೇ ಇರಬೇಕು—ಇಷ್ಟೆಲ್ಲ ಊಹೆಗೂ ಅವಕಾಶವಿದೆ.

'ಅತ್ರ ಪರಾ ವ್ಯಾಖ್ಯಾ' 'ಅತ್ರಾನ್ಯೇ ವ್ಯಾಚಕ್ಷತೇ' ಎಂದು ಮುಂತಾಗಿ ಅನೇಕ ಸ್ಥಳಗಳಲ್ಲಿ ಬಂದಿರುವುದೂ, ಕೆಲವೆಡೆಗಳಲ್ಲಿ ಹಿಂದಿನ ಟೀಕೆಗಳನ್ನು ಖಂಡನ

---

[1] ಪುಣೆಯ ಮತ್ತು ಮುಂಬಯಿಯ ಪ್ರತಿಗಳಲ್ಲಿ 'ವಿರಾಧನಾ' ಎಂದಿದೆ.

ಮಾಡುತ್ತಾ ಬಂದಿರುವುದೂ ಅವರ ಬಳಿ ಇನ್ನೂ ಕೆಲವು ಟೀಕೆಗಳಿದ್ದಿರಬೇಕು ಎಂಬ ಊಹೆಯನ್ನು ಪುಷ್ಟೀಕರಿಸುತ್ತದೆ.

ಪಂ. ಹೀರಾಲಾಲಜೀ ಶಾಸ್ತ್ರಿಯವರು ಜೈನಸಿದ್ಧಾಂತಭಾಸ್ಕರ (ಭಾಗ ೫, ಕಿರಣ ೩) ದಲ್ಲಿ ಅನ್ಯ ಟೀಕೆಗಳ ಬಗ್ಗೆ ಮತ್ತಷ್ಟು ಬೆಳಕು ಚೆಲ್ಲಿದ್ದಾರೆ:

(೧) ಪಂ. ಆಶಾಧರರು ೪೩೦ ನೆಯ ಗಾಥೆಯ ವ್ಯಾಖ್ಯೆಯಲ್ಲಿ ಮನುಷ್ಯ-ಭವದ ದುರ್ಲಭತೆಯನ್ನು ತಿಳಿಯಹೇಳುತ್ತಾ 'ಚುಲ್ಲಯ ಪಾಸಂಧಣ್ಣಂ' ಮುಂತಾದ ಗಾಥೆಗಳನ್ನು ಉಲ್ಲೇಖಿಸಿ ಅನಂತರ ಹೀಗೆ ಬರೆದಿದ್ದಾರೆ: 'ಏತೇಚುಲ್ಲೀಭೋಜನಾದಿ ಕಥಾಸಂಪ್ರದಾಯಾಃ ದಶಾಪಿ ಪ್ರಾಕೃತಟೀಕಾದಿಷು ವಿಸ್ತರೇಣೋಕ್ತಾಃ ಪ್ರತಿಪತ್ತವ್ಯಾಃ|'

(೨) ೫೨೫ ನೆಯ ಗಾಥೆಯ ವ್ಯಾಖ್ಯೆಯಲ್ಲಿ ಹೀಗೆ ಬರೆದಿದ್ದಾರೆ: 'ಷಟ್ತ್ರಿಂಶದ್ಗುಣಾ ಯಥಾ—ಅಷ್ಟೌ ಜ್ಞಾನಾಚಾರಃ ಅಷ್ಟೌ ದರ್ಶನಾಚಾರಾಶ್ಚ, ತಪೋದ್ವಾದಶವಿಧಂ, ಪಂಚಸಮಿತಯಃ ತಿಸ್ರೋ ಗುಪ್ತಯಶ್ಚೇತಿ ಸಂಸ್ಕೃತ ಟೀಕಾಯಾಂ ಪ್ರಾಕೃತಟೀಕಾಯಾಂ ತು ಅಷ್ಟಾವಿಂಶತಿ ಮೂಲಗುಣಾಃ ಆಚಾರವತ್ತ್ವಾದಯಶ್ಚಾಷ್ಟೌ, ಇತಿ ಷಟ್ತ್ರಿಂಶತ್|'

(೩) ೫೫೦ ನೆಯ ಗಾಥೆಯ 'ಕಾಉಸಗ್ಗ' ಪದಕ್ಕೆ ಈ ವ್ಯಾಖ್ಯೆಯನ್ನು ಕೊಟ್ಟಿದ್ದಾರೆ: 'ಕಾಉಸಗ್ಗಂ ಸಾಮಯಿಕದಣ್ಡಕಸ್ತವಪ್ರಯೋಗಪೂರ್ವಕಂ ಬೃಹತ್ಸಿದ್ಧಭಕ್ತಿಂ ಕೃತ್ವೋಪವಿಶ್ಯ ಲಘುಸಿದ್ಧಭಕ್ತಿಂ ಕರೋತೀತಿ ಪ್ರಾಕೃತ ಟೀಕಾ[1]ಮ್ನಾಯಃ'|

(೪) ಇವುಗಳಿಂದ ಒಂದು ಸಂಸ್ಕೃತದ ಮತ್ತೊಂದು ಪ್ರಾಕೃತದ ಟೀಕೆಯ ಅಸ್ತಿತ್ವದ ಬಗ್ಗೆ ಸ್ಪಷ್ಟ ವಿವರ ಸಿಗುತ್ತದೆ. ಇವಲ್ಲದೆ ಮತ್ತೆ ಹಲವು ಗದ್ಯ ಟೀಕೆಗಳು ಇದ್ದುವೆಂಬುದೂ, ಅವುಗಳಲ್ಲಿ ಮೂಲಗಾಥೆಗಳ ವಿವಿಧ ಪಾಠಾಂತರಗಳೂ, ವಿವಿಧ ಟೀಕೆಗಳೂ ಇದ್ದುವೆಂಬುದೂ ತಿಳಿದುಬರುತ್ತದೆ. ಅಂತೆಯೇ—

೧೮೧೮ ನೆಯ ಗಾಥೆ: ಏಷಾ ಪ್ರಾಕೃತಟೀಕಾಕಾರ ಮತೇನ ವ್ಯಾಖ್ಯಾ| ಅನ್ಯೇ 'ಸಂಯಮಮೇಜ್ಝಾಣೇತಿ' ಪಠಿತ್ವಾ ಅಮೇಧ್ಯಯೋಗ್ಯಾತ್ಸ್ವಯಮಶುಚೀನಿ ಸನ್ತೀತ್ಯರ್ಥಮಾಹುಃ| ಅಪರೇ ಪುನಃ ಸಲಿಲಾದೀನಿತ್ಯಾದಿಸೂತ್ರಂ

---

[1] ಪಂ. ಜುಗಲಕಿಶೋರಜೀ ಮುಖ್ತಾರರು (ಅನೇಕಾಂತ್ ವರ್ಷ ೨, ಕಿರಣ ೧ ರಲ್ಲಿ) 'ಕಿವಿರಾಗಕಂಬಲಸ್ಸವ' ಆದಿ ಗಾಥೆ (೫೩೭) ಯ ಟೀಕೆಗೆ ಮೂಲಾರಾಧನಾದರ್ಪಣದಿಂದ ಮತ್ತೊಂದು ಉದ್ಧರಣವನ್ನು ಕೊಡುತ್ತಾರೆ. ಇದರಲ್ಲಿ ಸಂಸ್ಕೃತ ಟೀಕೆಯ ಪ್ರಸ್ತಾಪ ಇನ್ನಷ್ಟು ಬರುತ್ತದೆ.

ಸಾಮಾನ್ಯೇನ ವ್ಯಾಖ್ಯಾಯೋತ್ತರಸೂತ್ರೇಣ ಪ್ರಕೃತಂ ದೇಹಾಶುಚಿತ್ವಂ ಅನುಸಂದಧತೇ |

ಗಾಥೆ ೧೯೬೭ ಅನ್ಯೇ ತು ವಾಸೇ ವಾಸೇ ಇತಿ ಪಠಿತ್ವಾ ವರ್ಷೇ ವರ್ಷೇ ಇತ್ಯರ್ಥಂ ವ್ಯಾಚಕ್ರುಃ! ಅಪರೇ ಮಾಸೇ ಮಾಸೇ ಇತಿ ಪಾಠಂ ಮತ್ವಾ ಏವ ಶಬ್ದಂ ವಿಕಲ್ಪಾರ್ಥಮೀಷುಃ |

ಗಾಥೆ ೧೯೬೮—ಅನ್ಯೇ ‘ಏಗಂತಾ ಸಲೋಗಾ’ ಇತಿ ಪಠಿತ್ವಾ ಏಕಾಂತ ಪರ್ಯೈಃ ಪ್ರಾಯೇಣಾದೃಶ್ಯಾ ಇತ್ಯರ್ಥಂ ಪ್ರತಿಪನ್ನಾ × × × × ಅಪರೇ ತು ‘ದೂರಮಗೋಢಾ’ ಇತ್ಯಸ್ಯ ನಿಷದ್ಯಾಸ್ಥಾನಸ್ತಂಭಾಪೇಕ್ಷಯಾ ಬಹ್ವಧಃ ಪ್ರವೇಶೇತ್ಯರ್ಥಮಾಹುಃ |

(೫) ಅಮಿತಗತಿಯ ಸಂಸ್ಕೃತ ಪದ್ಯಾನುವಾದವಲ್ಲದೆ ಮತ್ತೆ ಯಾರೋ ಆಚಾರ್ಯರ ಸಂಸ್ಕೃತ ಪದ್ಯಾನುವಾದದಿಂದ ನೂರಕ್ಕೂ ಮಿಗಿಲಾಗಿ ಪದ್ಯಗಳನ್ನು ತಮ್ಮ ಟೀಕೆಯಲ್ಲಿ ‘ಉಕ್ತಂ ಚ’ ‘ತಥೋಕ್ತಂ’ ಎಂದು ಮುಂತಾಗಿ ಹೇಳಿ ಆಶಾಧರರು ಉದ್ಧರಿಸಿದ್ದಾರೆ. ಅವುಗಳಲ್ಲಿ ಒಂದನ್ನು ಮಾದರಿಯಾಗಿ ಕೊಡಬಹುದು.

ಮೂಲ : ಪಡಿಚೋದಣಾಸಹಣವಾಯಖುಭಿದಪಡಿವಯಣಇಂಧಣಾಇದ್ಧೋ |
ಚಂಡೋ ಹು ಕಸಾಯಗ್ಗೀ ಸಹಸಾ ಸಂಪಜ್ಜ ಲೇಜ್ಜಾಹಿ[1] || ೨೩೫ ||

ಅನು : ಪ್ರತಿವಚನೇಂಧನಜನಿತಃ ಪ್ರತಿಕೂಲಾಚರಣ ಪವನಸಂಚಲಿತಃ |
ಚಣ್ಡಃ ಕಷಾಯದಹನಃ ಸಹಸಾ ಸಂಪ್ರಜ್ವಲೇತ್ತಾಪಃ ||

ಅಮಿತಗತಿ ಇದೇ ಗಾಥೆಯನ್ನು ಈ ರೀತಿ ಅನುವದಿಸಿದ್ದಾರೆ:

ವಾಕ್ಯಾ ಸಹಿಷ್ಣುತಾವಾತ್ಯಾ ಪ್ರೇರಿತಃ ಕೋಪಪಾವಕಃ |
ಉದೇತಿ ಸಹಸಾ ಚಂಡೋ ಭೂರಿಪ್ರತ್ಯುತ್ತರೇಂಧನಃ || ೨೩೫ ||

ಪಂ. ಆಶಾಧರರೆದುರಿಗೆ ಮೂಲಗ್ರಂಥದ ಅನೇಕ ಟಿಪ್ಪಣಿಗಳೂ ಇದ್ದುವು. ಅವುಗಳಲ್ಲಿ ಒಂದು ಶ್ರೀಚಂದ್ರ[2]ನದು. ಇದನ್ನು ಆಶಾಧರರೇ ತಮ್ಮ ೫೮೯ ನೆಯ ಗಾಥೆಯ ಟೀಕೆಯಲ್ಲಿ ಹೀಗೆ ಒಪ್ಪಿಕೊಳ್ಳುತ್ತಾರೆ:

---

[1] ಇದೇ ಗಾಥೆಯ ಅಮಿತ ಗತಿಕೃತ ಅನುವಾದವನ್ನು—ಎರಡೂ ಬೇರೆ ಬೇರೆ ಅನುವಾದಗಳೆಂದು ತೋರಿಸಲೋಸುಗ ಕೊಟ್ಟಿದೆ.

[2] ಇದೇ ಶ್ರೀ ಚಂದ್ರರೇ ಭೋಜದೇವನ ಕಾಲದಲ್ಲಿ ೧೦೮೭ ರಲ್ಲಿದ್ದವರು. ಇವರ ಗುರು ಶ್ರೀನಂದಿ. ಪುಷ್ಪದಂತನ ಉತ್ತರ ಪುರಾಣ, ರವಿಷೇಣನ ಪದ್ಮಚರಿತಗಳಿಗೆ ಟಿಪ್ಪಣಿಗಳನ್ನೂ, ಪುರಾಣಸಾರಾದಿ ಗ್ರಂಥಗಳನ್ನು ಬರೆದಿದ್ದಾರೆ.

'ಶ್ರೀ ಚಂದ್ರಟಿಪ್ಪಣಕೇ ತ್ವೇವಮುಕ್ತಮ್ |'

ಇದಲ್ಲದೆ ಜಯಸಂದಿಕಾ ಎಂಬ ಮತ್ತೊಂದು ಟಿಪ್ಪಣಿಯ ಅಸ್ತಿತ್ವವನ್ನೂ ಆರಾಧನಾ-ದರ್ಪಣದ ಆಧಾರದಿಂದ ಪಂ. ಜುಗಲಕಿಶೋರಜೀ ಮುಖ್ತಾರರು (ಅನೇಕಾಂತ್ ವರ್ಷ ೧, ಕಿರಣ ೧)ರಲ್ಲಿ ಸ್ಥಿರಪಡಿಸಿದ್ದಾರೆ:

೧೯೯೯ ನೆಯ ಗಾಥೆ: ಕಮ್ಮೇತ್ಯಾದಿ | ಅತ್ರ ಸ ಕರ್ಮಮಲಃ ಮಿಥ್ಯಾತ್ವಾದಿ ಸ್ತ್ರೋಕಕರ್ಮಾಣಿ | ಸಿದ್ಧಿಂ ಸರ್ವಾರ್ಥಸಿದ್ಧಿ ಮಿತಿ ಜಯನಂದಿಟಿಪ್ಪಣೀ ವ್ಯಾಖ್ಯಾ |

ಇವೆಲ್ಲ ಉಲ್ಲೇಖಗಳಿಂದಲೂ ಅಪರಾಜಿತಸೂರಿ ಹಾಗೂ ಪಂ. ಆಶಾಧರರ ಕಾಲದಲ್ಲಿ ಭಗವತೀ ಆರಾಧನೆಯ ಮೇಲೆ ಮೊದಲೇ ತಿಳಿಸಿದ ಟೀಕೆಗಳಲ್ಲದೆ ಇನ್ನೂ ಹಲವಾರು ಟೀಕೆಗಳಿದ್ದುವೆಂಬುದು ತಿಳಿದುಬರುತ್ತದೆ. ಅಪರಾಜಿತಸೂರಿ ಮತ್ತು ಆಶಾಧರರೀರ್ವರಿಗೂ ಒಂದೇ ಟೀಕೆಗಳು ಸಿಕ್ಕಿದ್ದುವೇ ಅಥವಾ ಬೇರೆಬೇರೆಯ ಟೀಕೆಗಳು ಸಿಕ್ಕಿದ್ದುವೇ ಎಂಬುದನ್ನು ನಿಶ್ಚಯವಾಗಿ ಹೇಳಲಾಗುವುದಿಲ್ಲ. ಎರಡು ರೀತಿಯೂ ಆಗಿರಲಿಕ್ಕೆ ಸಾಕು. ಪಂ. ಆಶಾಧರರು ಜಯನಂದಿ ಮತ್ತು ಶ್ರೀಚಂದ್ರರ ಟಿಪ್ಪಣಿಗಳನ್ನು ಬಳಸಿಕೊಂಡಿದ್ದಾರೆ. ಹಾಗೆಯೇ ಅಮಿತಗತಿಯ ಮತ್ತು ಮತ್ತಾವನೋ ಅಜ್ಞಾತನಾಮ ಆಚಾರ್ಯನ ಸಂಸ್ಕೃತ ಪದ್ಯಾನುವಾದದ ನೆರವನ್ನು ಪಡೆದಿದ್ದಾರೆ.

ಇಷ್ಟೆಲ್ಲ ಟೀಕೆ ಟಿಪ್ಪಣಿಗಳಿಗೆ ಕಾರಣವಾದ ಗ್ರಂಥದ ಮಹತ್ತಿನ ಬಗ್ಗೆ ಹೇಳುವುದಾದರೂ ಏನು? ಇಷ್ಟೊಂದು ಟೀಕೆ ಟಿಪ್ಪಣಿಗಳಿಗೆ ಗುರಿಯಾದ ಇತರ ಗ್ರಂಥಗಳಾದರೂ ಎಷ್ಟು?

ಮೂಲಲೇಖಕರು : ಪಂಡಿತ ನಾಥೂಲಾಲ್ ಪ್ರೇಮಿ
ಅನುವಾದಕರು : ಎಂ. ಎಸ್. ಕೃಷ್ಣಮೂರ್ತಿ

# ರಕ್ತ ತೊಟ್ಟಿಕ್ಕುತ್ತಿತ್ತು!

**ಕುರುಡು ಕಾಂಚಾಣಾ ಕುಣಿಯುತಲಿತ್ತು**
**ಕಾಲಿಗೆ ಬಿದ್ದವರ ತುಳಿಯುತಲಿತ್ತೋ**
**ಕುರುಡು ಕಾಂಚಾಣಾ !**

**—ದ. ರಾ. ಬೇಂದ್ರೆ**

*   *   *   *

ಹೆಪ್ಪುಕಟ್ಟಲಾರಂಭಿಸಿತ್ತು ಕಾರ್ಗತ್ತಲು !

ಕೃಷ್ಣಪಕ್ಷದ ಕಗ್ಗತ್ತಲು ಕವಿದು ಕಾಡುನಾಡುಗಳೆಲ್ಲಾ ಕಾರ್ಮಸಿಯ ಮುದ್ದೆಯಾಗಿದ್ದವು. ಜಗತ್ತು ರಾತ್ರಿಯ ನೀರವ ನಿದ್ದೆಯಲ್ಲಿ ನಿಮಗ್ನವಾಗಿತ್ತು. ಅರಣ್ಯಾವೃತ ಗಂಭೀರ ಗಿರಿಕಂದರಗಳ ಮೇಲೆ ಇರುಳದೇವಿ ತನ್ನುಡುಗೆಯ ಕರಿಸೆರಗು ಹೊದೆಸಿದ್ದಳು.

ಮರಗಳ ದಟ್ಟೈಸುವಿಕೆಯಿಂದ ಕುಳಿರ್ಗಾಳಿಯ ಕುಣಿದಾಟಕ್ಕೆ ಅಡಚಣೆಯುಂಟಾಗಿದ್ದರೂ ಅದರ ಕುಳಿರ್ವು ಎಲ್ಲಾ ಕಡೆಯೂ ಪಸರಿಸಿತ್ತು.

ಸರ್ವಾಂತರ್ಯಾಮಿಯಾಗಿ ಸಾರ್ವಭೌಮತ್ವವನ್ನು ಸ್ವೀಕರಿಸಿತ್ತು ಕತ್ತಲೆ . . . ಎಲ್ಲೋ ಎಂದೋ ಎನ್ನುವಂತೆ ಕೂಗುತಿದ್ದ ಹಕ್ಕಿ ; ಬೊಗಳುತಿದ್ದ ಕಂತ್ರಿ ನಾಯಿ ಜಗವನ್ನಾವರಿಸಿದ್ದ ಮೌನವನ್ನು ಮುರಿಯಲೆತ್ನಿಸಿದ್ದವು. ಆದರೆ ಆ ಸದ್ದು ಸಮುದ್ರಕ್ಕೆ ಸ್ವಲ್ಪ ಸಕ್ಕರೆ ಸುರಿದಂತೆ, ಒಂದು ಹನಿ ಹಾಲು ಹಾಕಿದಂತಾಗುತ್ತಿತ್ತೇ ಹೊರತು ನಿಗೂಢ ನೀರವತೆಯನ್ನು ಒಂದಿನಿತೂ ಅಲುಕಿಸಲು ಸಮರ್ಥವಾಗಿರಲಿಲ್ಲ. ಎತ್ತ ನೋಡಿದರೂ ಕತ್ತಲೆ; ಎತ್ತ ಆಲಿಸಿದರೂ ಕತ್ತಲೆಯ ನಿಃಶಬ್ದತೆ—ಮುಖಕ್ಕೇ ಬಂದಪ್ಪಳಿಸುತ್ತಿದ್ದ ಮುದ್ರಿತ ಮೌನ—ಎದ್ದುಕಾಣುತಿದ್ದ ಎದೆ ತಲ್ಲಣಿಸುವಂಥ ಕಾರ್ಗತ್ತಲೆ ಮತ್ತು ಗಾಢಮೌನದ ಪಿತೂರಿ . . . ಜಗತ್ತು ನಿಶಾರಾಣಿಯ ನಿರ್ಮಮತೆಯ ನಿಃಶಬ್ದ ನೀರವತೆಯಲ್ಲಿ ನಿದ್ರಾಮಗ್ನವಾಗಿತ್ತು. ನಿಶಾಮೌನ ಹಾಗೂ ನಿದ್ರೆಯ ನಿರಂಕುಶ ಪ್ರಭುತ್ವದಲ್ಲಿ ಇಳೆ ಕರಗಿಹೋಗುತ್ತಿರುವಂತಿತ್ತು.

. . . ಮಸಣಮೌನವೂ, ನಿರ್ಜನತಾಭಾವವೂ ಬರುಬರುತ್ತಾ ದಟ್ಟೈಸಿ ಮನಸ್ಸು ಬೆದರಿ 'ಬೆಕೋ' ಎನ್ನಲಾರಂಭವಾಗಿ ಯಾವುದೋ ಒಂದು—ಈ ಜಗತ್ತಿನದಲ್ಲದ—ಪೈಶಾಚಿಕವಾದ ಪ್ರೇತಪರಿಪೂರ್ಣ ಅಮರ್ತ್ಯಲೋಕಕ್ಕೆ ಪ್ರವೇಶಿಸಿದಂತಾಗಿ, ಭಯೋತ್ಪಾದಕ ಭೀಕರತೆ ಪ್ರತಿಯೊಂದು ನರನಾಡಿಗಳಲ್ಲೂ ಪಸರಿಸಿ ರಕ್ತದ

ಒಂದೊಂದು ತೊಟ್ಟೂ ಸುಳಿಗಾಳಿಯ ಕುಳಿರಕೊರೆತವನ್ನು ಸಹಿಸಲಾರದೆ ಹೆಪ್ಪು ಕಟ್ಟುವಂತಿತ್ತು.

ಕಗ್ಗತ್ತಲೆಯ ಮಂದವಾದ ಮಂಕುಪ್ರಭೆಯ ಮಾಯಾಪ್ರಭಾವದಿಂದ ಅಲ್ಲಿದ್ದ ಪ್ರತಿಯೊಂದು ವಸ್ತುವೂ ಗಭೀರ ಕನಸಿನಲ್ಲಿ ಕಂಡಂತೆ, ನೋಡುವ ಕಣ್ಣುಗಳನ್ನೇ ಕುಕ್ಕುವಂತೆ ಪ್ರೇತವತ್ತಾಗಿ ಮಸಣದಲ್ಲಿನ ಅಸ್ಥಿಪಂಜರದಂತೆ ಅರಿವಾಗುತ್ತಿತ್ತು; ಕಲ್ಲೆದೆಯೂ ಅಂಜಿಕೆಯಿಂದ ಅಳುಕಿ ಕಂಪಿಸುವಂತಾಗುತ್ತಿತ್ತು.

. . . ಹೆಪ್ಪುಕಟ್ಟಲಾರಂಭಿಸಿತ್ತು ನೀರವತೆ!

'ಅಯ್ಯೋ!'

—ಹಟಾತ್ತನೆ, ಹೆಪ್ಪುಕಟ್ಟುತ್ತಿದ್ದ ಅಂಧಕಾರವನ್ನು ಕತ್ತರಿಸಿ, ತೊಟ್ಟಿಕ್ಕಲಾರಂಭಿಸಿದ ನೀರವತೆಯನ್ನು ಸೀಳಿ, ಅಡ್ಡವಾಗಿದ್ದ ಕಾರ್ಗಲ್ಲನ್ನು ಛೇದಿಸಿ ಬಂದ ಚೀತ್ಕಾರ, ಆ ಅಂಧಕಾರ ಹಾಗೂ ನೀರವತೆಯ ನಿಗೂಢತೆಯನ್ನು ಭೂತದಂತೆ ಬೆಳೆಸಿ, ವಾತಾವರಣ ಮೊದಲಿಗಿಂತಲೂ ಭಯಾನಕವಾಗುವಂತೆ ಮಾಡಿತು.

ಆ ಚೀತ್ಕಾರ!

ಎದೆಯೊಡೆದಂತಾಗಿ, ಕೂಗಿದ ರಭಸಕ್ಕೆ ಕರುಳು ಬಾಯಿಗೆ ಬಂದಂತಾಗಿತ್ತು ಅವನಿಗೆ. ಕೈಯಲ್ಲಿದ್ದ 'ಟಾರ್ಚ್' ಕೆಳಕ್ಕೆ ಬಿದ್ದು ಅದರ ಗಾಜು ಚೂರುಚೂರಾಗಿತ್ತು—ಉರಿಯುತ್ತಿದ್ದ ಬಲ್ಬಿನಿಂದ ಬೆಳಕಿನ ಪಟ್ಟಿಯೊಂದು ಅಷ್ಟುದ್ದ ಜಾಗವನ್ನು ಮಾತ್ರ ಮಂದಪ್ರಭೆಯಿಂದ ಬೆಳಗಿಸಿ ಉಳಿದ ಜಾಗದ ಕತ್ತಲು ಕೇಕೆಹಾಕುವಂತೆ ಮಾಡಿತ್ತು.

ತತ್ತರಿಸಿಹೋದ ಅವನು!

"ಇಲ್ಲಿಗೇಕೆ ಬಂದೆ? ಎಲ್ಲಾ ಬಿಟ್ಟು ಇಲ್ಲಿಗೇಕೆ ಬರಹೋದೆ ನಾನು?"

—ಎಂದು, ಕಂಪಿಸುತಿದ್ದ ಅವನ ಹೃದಯ ಹಲುಬಲಾರಂಭಿಸಿತು.

* * * *

ಹೌದು, ಅವನ ಹೃದಯ ಹಲುಬುತ್ತಿತ್ತು. ತನ್ನಿಂದುಂಟಾಗಿದ್ದ ತಪ್ಪನ್ನು ನೆನೆನೆನೆದು ಪಶ್ಚಾತ್ತಾಪಪಡುತ್ತಿತ್ತು . . . 'ಸಧ್ಯ; ಇಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಹೋದರೆ ಸಾಕು. ಸತ್ತರೂ ಇನ್ನಿತ್ತ ಕಾಲುಹಾಕೋದಿಲ್ಲ' ಎಂದು ದೃಢ ಸಂಕಲ್ಪಮಾಡಿತು.

ಇಲ್ಲಿಗೆಂದು ಹೊರಡುವಾಗ ಅವನ ಹೆಂಡತಿ ಹೇಳಿದ್ದಳು:

"ಸ್ವಲ್ಪ ಹುಷಾರಾಗಿರೀಂದ್ರೆ. ಯಾವುದೋ ಕಾಣದ ಊರಿಗೆ ಹೋಗ್ತಿದ್ದೀರಿ . . . ಜನಗಳನ್ನು ಎತ್ತಿಕಟ್ಟಿಕೋಬೇಡಿ . . . ಹೊಸ ಆಸ್ಪತ್ರೆ ಅಂತ ಜನ ಜಾಸ್ತಿ

ಬರಬಹುದು. ಜನಗಳನ್ನು ಬೇಕುಮಾಡಿಕೊಳ್ಳಿ, ಸಾಕು. ಮಾತುಮಾತಿಗೂ ಸಿಡಿದು ಬೀಳಬೇಡಿ . . . ಅಂದ್ಹಾಗೆ, ಬೇಗ ಮನೆಮಾಡಿ . . ."

. . . ಮಾತುಮಾತಿಗೂ ಸಿಡಿದುಬೀಳಬೇಡಿ ! ಜನಗಳನ್ನು ಬೇಕುಮಾಡಿಕೊಳ್ಳಿ !

—ಈ ಮಾತಿಗಾಗಿಯೇ ಅವನು ಈ ಸ್ಥಿತಿಗೆ ಸಿಕ್ಕಿಬಿದ್ದದ್ದು.

. . . ಆ ಊರಿನಲ್ಲೇ ಏಕೆ—ಇಡೀ ಜಿಲ್ಲೆಯಲ್ಲೇ—ಆ ಸಾಹುಕಾರನಿಗೆ ಎದುರು ಹೇಳುವವರಿರಲಿಲ್ಲ. ಅವನೇ ಸಾರ್ವಭೌಮ, ನಿರಂಕುಶ ಪ್ರಭು . . .

'ಪ್ರಜಾಹಿತೈಷಿ' ಎಂಬ ಬಿರುದು ಬಂದಿತ್ತು ಅವನಿಗೆ—ಅವನ ಪ್ರಜಾಸೇವೆಗಾಗಿ. ಪ್ರಮುಖ ಬ್ಯಾಂಕುಗಳಲ್ಲಿನ ಷೇರ್‌ಹೋಲ್ಡರ್, ನಾಲ್ಕೈದು ಮಿಲ್ಲುಗಳ ಹಾಗೂ ಹೊಸದಾಗಿ ಆರಂಭವಾದ 'ಆ' ಫ್ಯಾಕ್ಟರಿಯ ಒಡೆಯ . . . ಆ ಗ್ರಾಮದ—ಸುತ್ತಮುತ್ತಲಿನ ಗ್ರಾಮಗಳ ಜಮೀನೆಲ್ಲಾ ಇವನದೇ. ಪಿತ್ರಾರ್ಜಿತವಲ್ಲ; ಸ್ವಯಾರ್ಜಿತ. ಅವನ ಭಾಷೆಯಲ್ಲೇ ಹೇಳುವುದಾದರೆ "ಬೆವರು, ಬೆವರು ಸುರಿಸಿ—ಕಡೆಕಡೆಯಲ್ಲಿ ರಕ್ತವನ್ನೇ ಸುರಿಸಿ ಸಂಪಾದನೆಮಾಡಿದ್ದು! . . . ಸಾಹುಕಾರನ ಸ್ವಯಾರ್ಜಿತ!"

ಆ ಊರಿಗೆ ಹೊಸದಾಗಿ ಬಂದ ವೈದ್ಯ ಅಲ್ಲಿನ ಧಣಿಯಾದ ಸಾಹುಕಾರನನ್ನು ಭೇಟಿಮಾಡುವುದು ಸಹಜವೇ. ಹಾಗೆಂದೇ ಅವನು ಬಂದ ದಿನವೇ ಸಾಹುಕಾರನ ಸಂದರ್ಶನಾಕಾಂಕ್ಷಿಯಾಗಿ ಹೊರಟ.

ಊರಿನಿಂದ ಸುಮಾರು ಒಂದು ಮೈಲಿಗಳಷ್ಟು ದೂರದಲ್ಲಿತ್ತು ಸಾಹುಕಾರನ 'ಲಕ್ಷ್ಮೀಕೃಪ'. ವಿಶಾಲವಾದ ಬಯಲಿನಲ್ಲಿ ಏಕಾಂಗಿಯಾಗಿತ್ತು ಆ ಮಹಡಿ ಮನೆ. ಹೋಗುವ ದಾರಿಯ ಇಕ್ಕೆಲಗಳಲ್ಲೂ ದಟ್ಟೈಸಿ ನಿಂತಿದ್ದ ವನ್ಯವೀರುಧಗಳು . . .

ಔಪಚಾರಿಕ ಸಂಭಾಷಣೆಯ ಅನಂತರ ಆ ಸಾಹುಕಾರ ಈ ಹೊಸ ವೈದ್ಯನಿಗೆ ತಿಳಿವಳಿಕೆ ನೀಡಿದ:

"ನೋಡಿ ಸ್ವಾಮಿ, ನೀವು ಹೊಸಬರು. ನನಗೆ ಬೇಕಾದವರು ಅಂತ ಹೇಳ್ತೀನಿ. ಇಲ್ಲದಿದ್ದರೆ ನನಗೇಕೆ ಈ ತರಲೆಯೆಲ್ಲ. ಜನಗಳ ಹತ್ತಿರ ಸ್ವಲ್ಪ ಹುಷಾರಾಗಿರಿ. ಜಾಸ್ತಿ ಸಡಿಲ ಬಿಡ್ಬೇಡಿ. ಈ ಹಳ್ಳಿಯವರೆಲ್ಲಾ ಏನೂಂತ ತಿಳ್ಕೊಂಡಿದೀರಿ. ಪಕ್ಕ ಕಳ್ಳರು! ಒಬ್ಬ ಅಪ್ಪನಿಗೆ ಹುಟ್ಟಿದವರೂಂತಿದೀರ—ಅಲ್ಲ ಅಲ್ಲ. ಬೆರಳು ತುದಿ ತೋರಿಸಿದರೆ ತೋಳನ್ನೇ ನುಂಗಿಹಾಕಿಬಿಡ್ತಾರೆ! ನೀವು ಸ್ವಲ್ಪ ಸರಾಗ ಕೊಟ್ರಂತೂ ಮುಗೀತು ಅನ್ಕೊಳ್ಳಿ ನಿಮ್ಮ ಕೆಲಸ. ಅದಕ್ಕೇ ನಾನು ಹೇಳೋದು—ಸ್ವಲ್ಪ ಬಿಗಿಯಾಗಿರಿ ಅಂತ. . ."

—ಹೀಗೆ ಸಾಗಿತ್ತು ಅನಾರೋಗ್ಯದಿಂದ ಮಲಗಿದ್ದ ಆ ಸಾಹುಕಾರನ ಎಚ್ಚರಿಕೆ.

ಅನಾರೋಗ್ಯ !

—ವರ್ಣಿಸಲಸಾಧ್ಯ ಅವನ ಸ್ಥಿತಿ. ಮೂಳೆಮೂಳೆಗಳನ್ನೆಲ್ಲಾ ಹುಳು [ಅದೆಂತಹ ಹುಳುವೋ ದೇವರೇ ಬಲ್ಲ!] ತಿಂದಂತಾಗಿದ್ದರೂ ಇದ್ದಕ್ಕಿದ್ದಂತೆಯೇ ರಕ್ತ ಹರಿದಂತಾಗುತ್ತಿತ್ತು—ಮೂಗು, ಬಾಯಿಂದ . . . ಇದ್ದಕ್ಕಿದ್ದಂತೆ ಎದ್ದು ಕೂಗಾಡುತ್ತಿದ್ದ, ಮೈಮೇಲೆ ಅರಿವೇ ಇಲ್ಲದಂತೆ—ಬಾಯಿಗೆ ಬಂದಂತೆ ಕೂಗಾಡುತ್ತಿದ್ದ . . . ಅದೇನು ವಿಚಿತ್ರ ರೋಗವೋ ! . . .

ಸಾಹುಕಾರನ ಹಿತೋಪದೇಶಕ್ಕೆ ಹೊಸ ವೈದ್ಯ ಇನ್ನೇನುತಾನೇ ಹೇಳಬಲ್ಲ. ಆ ಊರಿನ ಧಣಿಗೇ ಎದುರಾಡುವುದುಂಟೇ ? ತಲೆದೂಗಿ ಸಮ್ಮತಿ ಸೂಚಿಸಿದ.

ಪ್ರಪ್ರಥಮವಾಗಿ ಹೋದದಿನವೇ ವೈದ್ಯನಿಗೆ ಅಚ್ಚರಿಯಾಗಿತ್ತು—'ಇಷ್ಟು ದೊಡ್ಡ ಮನೆಯಲ್ಲಿ ಈ ಸಾಹುಕಾರ ಒಬ್ಬನೇ ಇದಾನಲ್ಲ—ಬೇರಾರೂ ಇಲ್ಲವೇ ?'—ಎಂಬ ಶಂಕೆ ಮೊಳೆದಿತ್ತು. ಅದನ್ನು ಬಗೆಹರಿಸಿಕೊಳ್ಳಲೆಂದೇ ಬಂದ ಮಾರನೇ ದಿನ 'ಲಕ್ಷ್ಮೀಕೃಪ'ದತ್ತ ಹೊರಟ.—ಆಗ ಸಂಜೆ ಸತ್ತಿತ್ತು.

ಅಂಜಿಕೆಯಿಂದಲೇ ಮುಚ್ಚಿದ್ದ ಬಾಗಿಲನ್ನು ತೆರೆದ. ಎದುರಿಗಿನ ಮಂಚದಲ್ಲಿ ಪವಡಿಸಿದ್ದರು ಸಾಹುಕಾರರು—ಕಣ್ಣುಬಾಯಿಬಿಡುತ್ತಾ ! ಮೊದಲೇ ಅಂಜಿದ್ದ ಅಳ್ಳೆದೆ ಆ ಕೊಟಡಿಯನ್ನಾವರಿಸಿದ್ದ ಮೌನವನ್ನು—ಮಸಣ ಮೌನವನ್ನು—ಕಂಡು ತಲ್ಲಣಿಸಿ ಹೋಯಿತು. . . . ತುಸು ವಿಶಾಲವೇ ಎನ್ನುವಂತಿದ್ದ ಆ ಕೊಟಡಿಯಲ್ಲಿ, ಸಾಹುಕಾರ ಮಲಗಿದ್ದ ಮಂಚದ ತಲೆಯೆಡೆಯಲ್ಲಿ ಮಾರುದೂರದಲ್ಲೇ ಇತ್ತು ಕಬ್ಬಿಣದ ಪೆಟ್ಟಿಗೆ. ಮಂಚದ ಕಾಲಿನಕಡೆ—ಅಷ್ಟು ದೂರದಲ್ಲಿದ್ದ ಒಂದು ಹಣತೆ ಅಲ್ಲಿನ ಅಂಧಕಾರವನ್ನು ಸೋಲಿಸುವ ಯತ್ನ ನಡೆಸಿ, ತನಗೇ ಅರಿವಿಲ್ಲದಂತೆ ಅಲ್ಲಿನ ವಿಚಿತ್ರ ಮೌನ ಮತ್ತೂ ಗೂಢವಾಗುವಂತೆ, ಎಂಥ ಕಲ್ಲೆದೆಯೂ ಅಳುಕವಂತೆ ಮಾಡಿತ್ತು. . . .

ಅಂಜುತ್ತ ಅಂಜುತ್ತಲೇ ಹೆಜ್ಜೆಯಿಟ್ಟ ವೈದ್ಯ ಸಾಹುಕಾರನ ಸ್ಥಿತಿ ನೋಡಿ ನಡುಗಿದ. ಆ ಸಾಹುಕಾರನೋ ಅವನ ಬಟ್ಟೆ ಹಿಡಿದು—ಬಿಗಿಯಾಗಿ ಹಿಡಿದು—'ಡಾಕ್ಟರ್ ಡಾಕ್ಟರ್, ಸಾಯ್ತಿದೀನಿ. ಔಷಧಿ ಕೊಡಿ' ಎಂದ, ತೊದಲುತ್ತ. ಅವನ ದೃಷ್ಟಿ ಎತ್ತಲೋ ನಾಟಿತ್ತು ; ಧ್ವನಿ ಹಿಂದಿನ ದಿನದ ಸಾಹುಕಾರನ ಧ್ವನಿಯಂತಿರಲಿಲ್ಲ. ಏನೋ ಬದಲಾವಣೆ—ಏನೋ . . . ಏನೋ . . . ಏ . . . ನೋ . . .

ಸಾಹುಕಾರನ ಬಿಗಿಮುಷ್ಟಿಯನ್ನು ಸಡಿಲಿಸಿಕೊಳ್ಳುವುದೇ ಅಸಾಧ್ಯವಾಯಿತು ಅವನಿಗೆ. ಮಾತನಾಡಬೇಕೆಂದು ಹೊರಟ—ನಾಲಿಗೆ ಚಲಿಸಿತೇ ವಿನಾ ಮಾತು ಹೊರಡಲಿಲ್ಲ.

"ಡಾಕ್ಟರೇ . . . ನಂಗ್ಯಾಕೋ ಇವತ್ತು ತುಂಬ ಹೆದರಿಕೆಯಾಗ್ತಿದೆ. ನೀವು ಬಂದದ್ದು ಒಳ್ಳೆಯದೇ ಆಯಿತು. . . . ಯಾರ್‍ಯಾರೋ ಬರ್‍ತಿದಾರೆ ನೋಡಿ . . . [ಯಾರ್‍ಯಾರು ಬರ್‍ತಿರುವುದು. ಯಾರೂ ಇಲ್ಲದ ಈ ಬೋಳು ಜಾಗದಲ್ಲಿ!—ವೈದ್ಯನಿಗೆ ಇನ್ನೂ ಹೆದರಿಕೆಯಾಯಿತು, ಸಾಹುಕಾರನ ವರ್ತನೆಯನ್ನು ಗಮನಿಸಿ] . . . ಆ ಹಾಳಾದವರು ಏನೇನೋ ಹೇಳ್ತಾರೆ . . . ಅಯ್ಯೋ . . . ಡಾಕ್ಟರೇ . . . ಡಾಕ್ಟರೇ . . ."

—ಎಂದ ಸಾಹುಕಾರ, ಹಿಡಿತವನ್ನು ಬಿಗಿಗೊಳಿಸುತ್ತ.

ಅವನಿಗೆ ಏನು ಹೇಳಬೇಕೆಂಬುದೇ ತೋಚಲಿಲ್ಲ. ಅವನ ಶಕ್ತಿಯೇ ಉಡುಗಿ ಹೋಯಿತು. ಧೈರ್ಯವೆಲ್ಲಾ ಬತ್ತಿಹೋಯಿತು.

ತಟಕ್ಕನೆ ಅವನ ದೃಷ್ಟಿ ಹೊರಳಿತು—ಸಾಹುಕಾರನ ತಲೆಯ ಹಿಂದೆ ಗೋಡೆಯ ಮೇಲೆ ನರ್ತಿಸುತಿದ್ದ ಕರಿನೆರಳಿನತ್ತ. [ಗಾಳಿಯೊಡನೆ ಜೀವನಕ್ಕಾಗಿ ಹೊಯ್ದಾಡುತ್ತಿತ್ತು ಹಣತೆಯ ಕುಡಿ, ಸಾಹುಕಾರನ ಕಾಲಿನ ಬಳಿ] ಆ ಕರಿನೆರಳು ಕೇಕೆ ಹಾಕುತ್ತಾ ಕುಣಿಯುತ್ತಿರುವಂತೆ ಭಾಸವಾಗಿ, ಅವನಿಗೇ ಅರಿವಿಲ್ಲದಂತೆ—ತೆರೆದ ಬಾಯಿಂದ ಜೊಲ್ಲು ಸುರಿಯಿತು. ತೀರಾ ಹೆದರಿಹೋದ ಅವನು!

ಸಾಹುಕಾರನ ಹಿಡಿತ ಬಿಗಿಯಾಗುತ್ತಿತ್ತು. ಅವನ ದೃಷ್ಟಿಯಲ್ಲಿ ಎಂಥದೊ ವಿಚಿತ್ರಕಳೆ—[ಹಿಂದಿನ ದಿನದಂತೆ ಸಹಜವಾದುದಲ್ಲ!]—ಎಂಥದೋ ಪ್ರೇತಕಳೆ . . . ರಾವು ಬಡಿಯುವಂತೆ! . . .

"ಏಯ್ ಸೂಳೇಮಗನೇ, ನೀನ್ಯಾಕೋ ಬಂದೆ?"

—ಯಾರನ್ನೋ ಗದರಿಸುವಂತೆ ಹಟಾತ್ತನೆ ಅರಚಿದ ಸಾಹುಕಾರ. ಪಕ್ಕಕ್ಕೆ ಹೊರಳಿತ್ತು ಅವನ ದೃಷ್ಟಿ.

ತನ್ನಷ್ಟಕ್ಕೆ ತಾನೇ ವೈದ್ಯನ ದೃಷ್ಟಿಯೂ ಪಕ್ಕಕ್ಕೆ ಹೊರಳಿತು. ಅಷ್ಟೆ. ಮರುಕ್ಷಣವೇ ಆ ಚೀತ್ಕಾರ!

ಫಟಾರನೆ ತೆರೆದುಕೊಂಡ ಬಾಗಿಲಿನಿಂದ ಶರೀರವನ್ನು ಚುಚ್ಚಿ ಚುಚ್ಚಿ ಸೀಳುವಂತೆ ಸುಯ್ಯನೆ ಬೀಸಲಾರಂಭಿಸಿತು ಕುಳಿರ್ಗಾಳಿ. ಗಾಳಿಯ ಹೊಡೆತವನ್ನು ಸಹಿಸಲಾರದೆ, ಸಾಯಲಿಚ್ಛಿಸದೆ ಸಾವಿನೊಡನೆ ಸೆಣಸಲಾರಂಭಿಸಿತು ದೀಪದ ಕುಡಿ . . . ಮೇರೆಯಿಲ್ಲದ ಭಯದಿಂದ ಅವನ ಕೂದಲುಗಳೆಲ್ಲಾ ಸೆಟೆದು ನಿಂತವು—ಜೀವವೇ ಹೋದಂತಾಯಿತು; ಹೃದಯ ಹುಡಿಹುಡಿಯಾಗಿ ಉದುರಿಹೋದಂತಾಯಿತು: ಕರುಳನ್ನು ಕಣಕಣವಾಗಿ ಕಿತ್ತು ತೂರಿದಂತಾಯಿತು!

ಕುಣಿಯುತ್ತಿದ್ದ ಆ ದೀಪದ ಕುಡಿಯ ಮಂದತಮ ಪ್ರಕಾಶದ ಬೆಳಕಿನಲ್ಲಿ ಅವನು ನೋಡಿದ—

—ತೊಟ್ಟಿಕ್ಕುತ್ತಿತ್ತು ರಕ್ತ!

ಹಳ್ಳಿಯವರ ಅಂದಾಜಿನಂತೆ ಲಕ್ಷಾಂತರ ರೂಪಾಯಿಗಳಿಗೆ ರಕ್ಷೆಯಾಗಿದ್ದ ಆ ಕಬ್ಬಿಣದ ಪೆಟ್ಟಿಗೆಯಿಂದ—

—ರಕ್ತ ತೊಟ್ಟಿಕ್ಕುತ್ತಿತ್ತು!

ತನ್ನ ಕಣ್ಣನ್ನು ತಾನೇ ನಂಬಲಾರದೆ ಅವನು ಕಣ್ಣುಜ್ಜಿಕೊಂಡು ನೋಡಿದ —ಕಣ್ಣರಳಿಸಿ ನೋಡಿದ—

—ರಕ್ತ ತೊಟ್ಟಿಕ್ಕುತ್ತಿತ್ತು!

ಅದರ ಹಿಂದೆಯೇ, ಆ ಕಬ್ಬಿಣದ ಪೆಟ್ಟಿಗೆಯಿಂದ ಯಾವುದೋ ವ್ಯಕ್ತಿ—ಅಲ್ಲ ಅಲ್ಲ, ವ್ಯಕ್ತಿಯಲ್ಲ, ವ್ಯಕ್ತಿಯ ಸ್ವರೂಪದ ಯಾವುದೋ ಛಾಯೆ ಎದ್ದುಬಂತು, ಅಸ್ಥಿಗಳ ಮಧ್ಯದಿಂದ ಎದ್ದುಬರುವ ಪ್ರೇತದಂತೆ!

ಸಾಹುಕಾರ ಗದರಿಸುತ್ತಲೇ ಇದ್ದ—

"ಅಯ್ಯೋ ಚಂಡಾಳ! ನೀನು ಹೇಗೋ ಬಂದೆ? ಯಾಕೋ ಬಂದೆ?"

ತಟಕ್ಕನೆ ಕರ್ಕಶವಾಗಿ ಕೇಕೆಹಾಕಿತು ಆ ಛಾಯೆ. ಬೆರುಳುಗಳಿಗಿಂತಲೂ ಉದ್ದವಾಗಿ ಬೆಳೆದಿದ್ದ ಉಗುರುಗಳನ್ನು ಮುಂದೆ ಚಾಚಿ ಯಾರನ್ನೋ ಬಗೆದು ಹಾಕುವಂತೆ ಕೈಯಾಡಿಸಿತು.

ನಿಂತುಹೋಯಿತು ಸಾಹುಕಾರನ ಧ್ವನಿ. 'ಆ' ಧ್ವನಿ—ಭಯೋತ್ಪಾದಕ ಆ ಧ್ವನಿ—ಹೃದಯವನ್ನೆ ಇರಿಯಿತು:

"ಲೇಯ್, ನನಗೆ ಮೋಸಮಾಡಿದೆ. ನನ್ನ ಕೈಯಿಂದ ಹೆಬ್ಬೆಟ್ಟು ಒತ್ತಿಸಿ ಕೊಂಡು ಮೋಸ ಮಾಡಿದೆಯಲ್ಲಾ ಚಂಡಾಳ!"

"ಹೋಗೋಗೋ, ನೀನೇನು ಮಾಡಿಕೋಬಲ್ಲೆ? ಮಾರೋದು ಮಾರ್ಬಿಟ್ಟು ಈಗ ಬಂದಿದೀಯಾ?"—ಇದ್ದಕ್ಕಿದ್ದಂತೆಯೇ ಅರಚಿದ ಸಾಹುಕಾರ.

"ಹ್ಣು-ಮಾರಿದೆ! ಭೋಗ್ಯಪತ್ರಕ್ಕೆಂದು ಹೆಬ್ಬೆಟ್ಟು ಒತ್ತಿಸಿಕೊಂಡೆ—ಕ್ರಯ ಪತ್ರ ಬರೆದಿದ್ದೆಯಲ್ಲೋ ಮನೆಹಾಳಾ! ಈ ರೀತಿಯೂ ಮೋಸಮಾಡ್ತಾರಾ?—ಅರೀದ ಜನಗಳ ಹೊಟ್ಟೆಮೇಲೆ ಹೊಡೀತಾರಾ? . . . ನನ್ನ ಹೊಲ ವಾಪಸ್ಸು ಕೊಡು—ವಾಪಸ್ಸು ಕೊಡು . . ."

ಆ ಧ್ವನಿ ನಿಲ್ಲುತ್ತಿದ್ದಂತೆಯೇ ವೈದ್ಯನ ಗಾಬರಿ ಇನ್ನೂ ಅತಿಯಾಯಿತು . . . "ಯಾರದು ಈ ಧ್ವನಿ? ಈ ವ್ಯಕ್ತಿ ಯಾರು? ಯಾರು? ಯಾ . . . ರು . . . ?

ಹಿಡಿತವನ್ನು ಬಿಗಿಗೊಳಿಸುತ್ತ ಆ ಸಾಹುಕಾರನೆಂದ:

"ಡಾಕ್ಟರೇ, ಸಂಗೇನಾದ್ರೂ ಔಷಧಿ ಕೊಡಿ. ನಾನು ಬದುಕಬೇಕು. ಬದುಕಬೇಕು . . . ಈ ಚಂಡಾಳರೆಲ್ಲಾ ಮೇಲೆ ಬೀಳೋದಿಕ್ಕೆ ಶುರುಮಾಡ್ತಿದಾರೆ. ಇವರಿಗೆಲ್ಲಾ ಬುದ್ಧಿ ಕಲಿಸಬೇಕು. ಡಾಕ್ಟರೇ . . . ಸನ್ನಾಸ್ಪತ್ರೆಯಲ್ಲೂ ನಿಮಗೆ ಪಾಲು ಕೊಡ್ತೀನಿ ಬಂದಿಷ್ಟು. ನನ್ನನ್ನು ಬದುಕಿಸಿ. ಏನಾದರೂ ಮಾಡಿ ಬದುಕಿಸಿ . . . ಈ ಸೂಳೇಮಕ್ಕಳನ್ನೆಲ್ಲಾ ಒಬ್ಬೊಬ್ಬನಾಗಿ ಸಿಗಿದುಹಾಕ್ತೀನಿ . . . ಅದಕ್ಕಾಗಿಯಾದರೂ ನನ್ನನ್ನು ಬದುಕಿಸಿ . . ."

—ಕೊರಳನ್ನು ಸುತ್ತುವರಿದಿದ್ದ ಅದೇನೋ 'ಅದೃಶ್ಯ'ವನ್ನು ಕಿತ್ತೆಸೆಯಲು ತೊಡಗಿದಂತೆ ಕಂಡ ಆ ಸಾಹುಕಾರ!

ಮೊದಲಿನಂತೆಯೇ ನರ್ತಿಸುತಿತ್ತು—

"ಗೋಡೆಯ ಮೇಲಿನ ಕರಿನೆರಳು!

ತಟಕ್ಕನೆ ದೃಷ್ಟಿ ಹೊರಳಿಸಿ, ಕೈಬೀಸುತ್ತಾ ಕಿರುಚಿದ ಸಾಹುಕಾರ:

"ಲೇ, ನೀನ್ಯಾಕೆ ಬಂದೆ? ನೀನ್ಯಾಕೆ ಬಂದೆ ಇಲ್ಲಿಗೆ?"

ಕಬ್ಬಿಣದ ಪೆಟ್ಟಿಗೆಯಿಂದ—

—ರಕ್ತ ತೊಟ್ಟಿಕ್ಕುತ್ತಲೇ ಇತ್ತು!

ಯಾವುದೋ ಸ್ತ್ರೀ ನಿಂತಂತಿತ್ತು ಅಲ್ಲಿ! ಸ್ತ್ರೀ . . . ಸ್ತ್ರೀ . . .

"ಯಾಕೆ? ಬರಬಾರದೇ? ಖಾಯಿಲೆಯಿಂದ ನರಳುತಿದ್ದ ಗಂಡನಿಗೆ ರಜ ಕೇಳಬೇಕೆಂದು ಬಂದಾಗ ನನ್ನ ಮಾನ ಹಾಳ್ಮಾಡಿದೆ—ನನ್ನನ್ನು ಬಿಟ್ಟು ನೀನೆಲ್ಲಿಗೂ ಹೋಗ್ಬೇಡ ಅಂತ ಒದ್ದಾಡ್ತಿದ್ದೆ. ಈಗ 'ಯಾಕ್ಬಂದೆ' ಅಂತೀಯಾ ಪಾಪಿ, ಪಾಪಿ!"

ಸಾಹುಕಾರನೆಂದ—

"ಲೇ, ಬಾಯ್ಮುಚ್ಚು. ಯಾರೂಂತ ತಿಳ್ಕೊಂಡಿದೀಯಾ? ನಾನು! ನಾನೇನು ಹೆಂಡತಿ ಕಾಣದೇ ಕುಳಿತಿದ್ದೆನಾ? ನೀನಾಗಿ ನೀನೇ ಬಂದೆ—ಕಾಲೆಲ್ಲಾ ಕಟ್ಟಿಕೊಂಡೆ. ಈಗ ನನ್ನನ್ನೇ ದೂರ್ತೀಯಾ?"

ಆ ಹೆಣ್ಣೆಂದಿತು—

"ಏನಂದೆ—ಬಾಯ್ಮುಚ್ಚಬೇಕೇ? . . . ಪಾಪಿ! ನರಾಧಮ! ನೀನೇನು ಮನುಷ್ಯನೇ? ಅಲ್ಲ ಅಲ್ಲ. ನೀನು ಮನುಷ್ಯನಲ್ಲ, ರಾಕ್ಷಸ—ರಾಕ್ಷಸ! ಸಾಯುತ್ತಿದ್ದ ಗಂಡನಿಗೆ ರಜ ಕೊಡು ಅಂತ ಕಾಲು ಹಿಡಿದುಕೊಂಡರೆ ನಿನ್ನ ಮಗಳಂತಿದ್ದ ನನ್ನ ಮಾನ ಹಾಳ್ಮಾಡಿದೆಯಲ್ಲೋ—ನೀನು ಮನುಷ್ಯನೇ? . . . ನೀನು ಮನುಷ್ಯನೇ? . . ."

ಗಂಟಲು ಕಿತ್ತುಕೊಂಡು ಅರಚಿದ ಸಾಹುಕಾರ—

"ಹೋಗ್ತೀಯೋ ಇಲ್ಲವೋ ಸುಮ್ಮನೆ. ಬಂದಿದಾಳೆ ಇಲ್ಲಿ ಮಹಾ ಗರತಿಯಂತೆ. ತನ್ನ ತೀಟೆಗೆ ಬಂದು ಮೈಮೇಲೆ ಬೀಳ್ತಾಳೆ. ಕಡೆಗೆ ನಮ್ಮನ್ನೇ ದೂರ್ತಾಳೆ."

. . . ನೋಡು ನೋಡುತಿದ್ದಂತೆಯೇ ಆ ವ್ಯಕ್ತಿ ಕಾಣದಾಯಿತು!

ಅರೆಕ್ಷಣ ಭೀಕರ ಮೌನ.

'ಗೂ—ಗೂ'

—ಹಟಾತ್ತನೆ ಅದೆಲ್ಲಿಂದಲೋ ಬಂದ ಗೂಬೆಯು ಕೂಗಿನಿಂದ ಬೆಚ್ಚಿದ ಅವಸು . . . ನಡುಗುತ್ತಿರುವವನ ಮೈಮೇಲೆ ಮಂಜು ಸುರಿದಂತೆ. . . .

ಪುನಃ ಹಿಡಿತವನ್ನು ಬಿಗಿಗೊಳಿಸುತ್ತ ಆ ಸಾಹುಕಾರನೆಂದ:

"ಡಾಕ್ಟರೇ, ಎದೆ ರಕ್ತ ಬಸಿದು ಸಂಪಾದನೆ ಮಾಡಿದ್ದೀನಿ ಈ ಹಣಾನ. ಬೇರೆಯವರಿಗೆ ಏನು ಗೊತ್ತಾಗುತ್ತೆ ಹೇಳಿ ಅದರ ಬೆಲೆ. ನನಗೆ ಗೊತ್ತು—ನನಗೆ ಗೊತ್ತು ಅದರ ಬೆಲೆ. ರಕ್ತ ಸುರಿಸಿರುವವನಿಗೆ ಗೊತ್ತಾಗೋದಿಲ್ಲವೇ? ಅದಕ್ಕೇ ಸುಮ್ಮನೆ ವ್ಯರ್ಥವಾಗುತ್ತಲ್ಲಾ ಅಂತ ಲೈಟು ಇಡಿಸದೆ ಇದ್ದೀನಿ. ಸುಮ್ಮನೆ ಆ ಲೈಟು ಅಂದರೆ ಖರ್ಚು ವಿಪರೀತ . . . ಆ ಲೈಟಿನದೂ ಈ ಸೀಮೆ ಎಣ್ಣೆ ದೀಪದ್ದೂ ಎರಡೂ ಒಂದೇ ಬೆಳಕು . . . ಇರುವ ಒಬ್ಬನಿಗೆ ಏನಾಗಬೇಕು . . ."

—ಎನ್ನುತ್ತಿದ್ದು, ಒಮ್ಮೆಲೇ ಮಾತು ಬದಲಾಯಿಸಿ ಅರಚಿದ:

"ನೀನ್ಯಾಕೆ ಬಂದೆ? ಆ್ಞ—ಬೊಗಳು ನೀನ್ಯಾಕೆ ಬಂದೆ? ನಿನಗೆ ವರ್ಷಕ್ಕೆ ಸರಿಯಾಗಿ ತಿಥಿ ಮಾಡ್ತಿದ್ದೀನಲ್ಲಾ. ನೀನ್ಯಾಕೆ ಬಂದೆ?"

ಬೇರೊಂದು—ತುಸು ಸ್ಥೂಲಶರೀರದ ಹೆಣ್ಣು!

ಇದೇನು ವಿಚಿತ್ರ!

ಶರೀರದಲ್ಲಿ ಅಂಜಿಕೆಯ ಮಿಂಚೊಂದು ಹರಿದಂತಾಯಿತು ಡಾಕ್ಟರನಿಗೆ—ಬೆವರಿನಿಂದ ಮೈಯೆಲ್ಲಾ ತೊಯ್ದುಹೋಯಿತು!

ಆ ಹೆಣ್ಣು ಹೇಳಲಾರಂಭಿಸಿತು!

"ಅಲ್ಲಾಂದ್ರೆ—ಹಣಾ ಅಂದರೆ ಇಷ್ಟೊಂದು ಆಸೆಯೆ? ಥು ಆ ಆಸೆಗಿಷ್ಟು ಬೆಂಕಿಹಾಕ! ಅದೇನು ದರಿದ್ರ ಆಸೆ ಅಂದ್ರೆ ನಿಮ್ಮದು . . . ಮಕ್ಕಳಿಲ್ಲಾ ಮಕ್ಕಳಿಲ್ಲಾ ಅಂತ ಕೊರಗುತ್ತಿದ್ದೆವು. ಏನೋ ಅಪರೂಪಕ್ಕೆ ಅಂತ ಮಗು ಆದರೆ—ಬಾಣಂತೀಗೆ ಸರಿಯಾದ ಆರೈಕೆ ಬೇಡವೆ? ಆರೈಕೆ ಇಲ್ಲದೆ—ಖರ್ಚು ವಿಪರೀತ ಅಂತ ಸರಿಯಾಗಿ ನೋಡಿಕೊಳ್ಳದೆ, ಬೇಕಾಬಿಟ್ಟಿ ಅದೇನೇನೋ ತಿನ್ನಿಸಿ ಸಾಯಿಸಿದಿರಲ್ಲಾಂದ್ರೇ . . .

ಸ್ವಂತ ಹೆಂಡತಿಗೂ ಸರಿಯಾಗಿ ಒಂದಿಷ್ಟು ತುಪ್ಪ ಕಾಣಿಸಲಿಲ್ಲವಲ್ಲಾ, ಇನ್ನೆಂಥ ವಿಚಿತ್ರದಾಸೆ ನಿಮ್ಮದು? . . . ತಿನ್ನಿ, ನೀವೇ ತಿನ್ನಿ ಈಗ. ಹಣ ಹಣಾ ಹಣಾ! ಅಂತ ಸಾಯ್ಸಿದ್ರಲ್ಲ ಈಗೆಲ್ಲಾನೂ ಅನುಭವಿಸಿ. ಸುಖವಾಗಿರಿ! ಥು! ಹಾಳು ನಿಮ್ಮ ದುರಾಸೆಗೆ ಬೆಂಕಿಹಾಕ!

ಗೋಡೆಯ ಮೇಲಿನ ಕರಿನೆರಳು—

—ನರ್ತಿಸುತ್ತಿತ್ತು!

ಕಬ್ಬಿಣದ ಪೆಟ್ಟಿಗೆಯಿಂದ—

ರಕ್ತ ತೊಟ್ಟಿಕ್ಕುತಿತ್ತು!

ಆ ವ್ಯಕ್ತಿ!

—ರಕ್ತದಿಂದಲೇ ತೊಯ್ದಂತಿತ್ತು ಆ ವ್ಯಕ್ತಿ! ಎಣಿಸಬಹುದಾದಂತಹ ಎದೆಯ ಗೂಡು; ಕಡ್ಡಿಯಂತಾಗಿದ್ದ ಕೈಕಾಲುಗಳು; ರಕ್ತವೇ ಇಲ್ಲದೆ ಸೊರಗಿದ್ದ ಮುಖ; ಪ್ರಪಾತಕ್ಕಿಳಿದಂತಿದ್ದು ಗುಳಿಬಿದ್ದ ಕಣ್ಣು; ಮಾಂಸಖಂಡವಿಲ್ಲದೆ ಮೂಳೆ ಮೂಳೆ ಕಾಣುತ್ತಿದ್ದ ಕೆನ್ನೆ; ಕೆದರಿದ ತಲೆಗೂದಲು. . . .

"ಅಯ್ಯೋ ಮನೆಹಾಳಾ, ನಿನ್ನನ್ನೇ ನಂಬಿದ್ದಕ್ಕೆ ಚೆನ್ನಾಗಿ ಮೋಸಮಾಡಿದೆ ಯಲ್ಲಾ—ಪಿಶಾಚಿ. ನನ್ನ ರಕ್ತಾನೆಲ್ಲಾ ನಿನ್ನ ಚಾಕರಿ ಮಾಡೋದಿಕ್ಕೆ ಅಂತಾನೇ ಸುರಿಸಿದೆ. ಅಪ್ಪ ಮಾಡಿದ ಸಾಲ ಎಷ್ಟು ಜೀತ ಮಾಡಿದರೂ—ಮನೆಮಂದಿಯೆಲ್ಲಾ ಮೈಮೂಳೆ ಮುರ್ಕೊಂಡು ಗೇದರೂ ಬಡ್ಡೀಗೇ ಸಾಕಾಗ್ಲಿಲಾಂತ ಪ್ರಾಣ ತಿಂದೆ ಯಲ್ಲಾ. ಹಿಟ್ಟು ಸೊಪ್ಪಿಗೂ ಬಾಯ್ಬಾಬಿಡ್ತ, ಹಗಲಿಂದ ಸಂಜೆ ವರೆಗೂ ನಿನ್ನ ಜಮೀನಿ ನಲ್ಲೇ ರಕ್ತ ಸುರಿಸಿದರೂ ಇನ್ನೂ ಸಾಲ ತೀರ್ಲಿಲ್ಲಾಂತ ಆ ಕಂದನನ್ನೂ ಜೀತಕ್ಕಿಟ್ಟು ಕೊಂಡ್ಯಲ್ಲೋ ಪಿಶಾಚಿ . . . ಅವನನ್ನ ನೋಡಿದರೆ ಹದಿನೆಂಟು ವರ್ಷ ಅಂತಾರಾ ಯಾರಾದರೂ. ಅವನೂ ಇನ್ನೇನು ಇವತ್ತೋ ನಾಳೆಯೋ ಸಾಯೋಹಾಗಿದಾನೆ . . . ನಿನಗೆ ಮಕ್ಕಳ ಪುಣ್ಯ ಇಲ್ಲಾಂದರೆ ಮಕ್ಕಳಿರುವವರಿಗೆಲ್ಲಾ ಪ್ರಾಣ ತಿಂತಿಯಲ್ಲೋ . . . ನಿನ್ಮನೆ ಎಕ್ಕುಟ್ಟೋಗ . . .

ಸಾಹುಕಾರನ ಕಣ್ಣು ಕೆಂಪಾಗಿತ್ತು.

ಡಾಕ್ಟರರ ಎರಡೂ ಕೈಗಳನ್ನು ಬಿಗಿಯಾಗಿ ಹಿಡಿದುಕೊಳ್ಳುತ್ತ ಅವನೆಂದ:

"ಡಾಕ್ಟರೇ ನೋಡಿ—ನನಗೆ ಸಾಯೋದಕ್ಕೆ ಮನಸ್ಸಿಲ್ಲ. ಸಾಯೋದಕ್ಕೆ ಮನಸ್ಸಿಲ್ಲ ಡಾಕ್ಟರೇ, ಖಂಡಿತಾ ಇಲ್ಲ. ಏನಾದರೂ ಇಂಜಕ್ಷನ್ ನೋಡಿ—ಒಳ್ಳೇದು ಕೊಡಿ ಡಾಕ್ಟರೇ. ನಿಮ್ಮ ದಮ್ಮಯ್ಯಾಂತೀನಿ . . . ಡಾಕ್ಟರೇ, ಇದೊಂದು ಸಲ

ಬದುಕಿಸಿ. ಒಂದೇ ಒಂದು ಸಲ—ನೀವು ಏನು ಕೇಳಿದರೂ ಕೊಡ್ತೀನಿ. ಖಂಡಿತಾ ಇಲ್ಲ ಅನ್ನೋದಿಲ್ಲ. ಡಾಕ್ಟರೇ--ಒಂದು ಸಲ 'ಪ್ರಜಾಹಿತೈಷಿ' ಬಿರುದು ಬಂತು. ಈ ಸಲ ಇನ್ನೊಂದು ಬಿರುದು ತಕೋಬೇಕೊಂತಿದ್ದೀನಿ. ಅದಕ್ಕೆ ಎಲ್ಲರಿಗೂ ಹೇಳಿ ಸರಿಮಾಡಿಟ್ಟಿದ್ದೀನಿ ಡಾಕ್ಟರೇ. 'ಹ್ಞು' ಅಂತ ಒಪ್ಕೊಂಡಿದಾರೆ. 'ಜನತಾ ಸೇವಕ' ಅನ್ನೋ ಬಿರುದು ಕೊಡಿಸಿಕೊಡ್ತಾರಂತೆ. ಅಲ್ಲಿಯವರೆಗಾದರೂ ಬದುಕಿಸಿ ಡಾಕ್ಟರೇ."

ಬಿಟ್ಟಗಣ್ಣು, ಬಿಟ್ಟಬಾಯಿ ಆ ಡಾಕ್ಟರದ್ದು—ಪಾಪ!

ಒಂದೇ ಸಮ 'ಸುಯ್ಞ್' ಎಂದು ಬೀಸಲಾರಂಭಿಸಿದ ಗಾಳಿ ಮೈಯನ್ನು ಕೊರೆಯಲಾರಂಭಿಸಿತು. ಮೌನ—ಪ್ರೇತಮೌನ—ಮಸಣಮೌನ!

ಫಟಾರ್!

ಯಾವುದು ಈ ಶಬ್ದ?

—ಬಾಗಿಲು ಗೋಡೆಗೆ ಅಪ್ಪಳಿಸುತಿತ್ತು.

ಅಯ್ಯೋ—ಯಾರು ಈ ತರುಣ? ಇದೇನಿದು—ಇವನೂ ಕಬ್ಬಿಣದ ಪೆಟ್ಟಿಗೆಯೊಳಗಿಂದ ಬರುತ್ತಿರುವನಲ್ಲ . . . ವರ್ಣನಾತೀತ ಅಂಜಿಕೆಯ ಝುರಿಯೊಂದು ಝುರಝುರನೆ ಸರಿದಂತಾಯಿತು ನರನರಗಳಲ್ಲೂ . . .

ಕಬ್ಬಿಣದ ಪೆಟ್ಟಿಗೆಯಿಂದ—

—ರಕ್ತ ತೊಟ್ಟಿಕ್ಕುತ್ತಲೇ ಇತ್ತು!

ಗೋಡೆಯ ಮೇಲಿನ ಕರಿನೆರಳು—

ಕುಣಿಯುತ್ತಲೇ ಇತ್ತು!

"ದೊಡ್ಡಪ್ಪ, ದೊಡ್ಡಪ್ಪ ಅಂತ ನಂಬಿಕೊಂಡಿದ್ದರೆ ಎಂಥ ಕೆಲಸಮಾಡಿದಿರಿ ನೀವು. ನಿಮ್ಮ ತಮ್ಮನ ರಕ್ತ ಹಂಚಿಕೊಂಡು ಬೆನ್ನು ಹಿಂದೆ ಬಂದವನಿಗೆ—ಪಾಪ—ಮುಗ್ಧನೆಂದರಿತು, ಬೆಣ್ಣೆಮಾತಾಡಿ ಮೋಸಮಾಡಿಧಿರಿ. ಮರುಳು ಮಾಡೀ ಮಾಡೀ ಚೆನ್ನಾಗಿ ಮಣ್ಣು ಹುಯ್ದಿರಿ. 'ನನಗೂ ಯಾರೂ ಗತಿಯಿಲ್ಲ. ನಿನ್ನ ಮಗನೇ ನನ್ನ ಮಗ' ಎಂದು ನಮ್ಮ ತಂದೆ ಮುಂದೆ ಹೇಳಿ—ಸಾಯುವಾಗ ವಚನ ನೀಡಿ—ಅಯ್ಯೋ!—ಎಂಥ ಕೆಲಸಮಾಡಿದಿರಿ ದೊಡ್ಡಪ್ಪ. ನೀವೇನು ಮನುಷ್ಯರ ಕೂಟವೇ? ಆಸೆ, ಆಸೆ ಎಂದರೆ ಇಷ್ಟೊಂದು ಆಸೆಯೇ? ನಿಮ್ಮೊಬ್ಬರಿಂದಾಗಿ, ಇಡೀ ಮಾನವ ಕುಲಕ್ಕೇ ಕಳಂಕ ತಂದೊಡ್ಡಿದಿರಲ್ಲ ದೊಡ್ಡಪ್ಪ! ನಿಮ್ಮ ಮಗ ಬೇರೆ, ನಿಮ್ಮ ತಮ್ಮನ ಮಗ ಬೇರೆಯೇ. ಮದುವೆಯಾಗಬೇಕು ಎಂದ ನನಗೆ, ಆಸ್ತಿ ಹಂಚಬೇಕಾಗುತ್ತದೆಂದು ಊಹಿಸಿದ ನೀವು . . . ಅಯ್ಯೋ ದೊಡ್ಡಪ್ಪ—ಹೇಗೆ ಹೇಳಲಿ ನಾನು—ನನಗೇ

ನಾಚಿಕೆಯಾಗುತ್ತೆ . . . ಥು, ನಿಮ್ಮಲ್ಲಿ ಕಿಂಚಿತ್ತಾದರೂ ಮಾನವೀಯತೆ ಉಳಿದಿದೆಯೇ ? ಇಲ್ಲ ಇಲ್ಲ. ನೀವು ಮಾನವರಲ್ಲ, ದಾನವ—ದಾನವನಿಗಿಂತಲೂ ತುಚ್ಛರು ! ಹಣ ಹಣ ಎಂದು ದುರಾಸೆಯ ಬೆನ್ನುಬಿದ್ದ ನೀವು—ದೊಡ್ಡಪ್ಪ—ಮಾನವೀಯತೆಗೇ ತಿಲಾಂಜಲಿ ಬಿಟ್ಟು—ಅಯ್ಯೋ !—ಪತನವೆಂದರೆ ಇಷ್ಟೊಂದು ಪತನವೇ ? ಅದಕ್ಕೊಂದು ಇತಿಮಿತಿಯಿಲ್ಲವೇ ? . . . ಹ್ಞ, ನನ್ನದೇ ತಪ್ಪು ತಿಳಿವಳಿಕೆ. ಸ್ವಂತ ಹೆಂಡತಿಗೇ ಸರಿಯಾದ ಆರೈಕೆ ಮಾಡದೆ ಸಾಯುವಂತೆ ಮಾಡಿದ ನಿಮ್ಮಲ್ಲಿ ನಾನು ಸದ್ಗುಣವನ್ನು ನಿರೀಕ್ಷಿಸಿದ್ದು ನನ್ನ ಮೂಢತನವಲ್ಲದೇ ಇನ್ನೇನು ? ಥು ! ಒಂದು ನಾಯಿ ಕೂಡ ತನ್ನ ಬಳಗಕ್ಕಾಗಿ ಪ್ರಾಣಬಿಡುವಾಗ ನೀವು ನಿಮ್ಮ ತಮ್ಮನ ಮಗನಿಗೆ—ಏನೋ ದುರಾಸೆಯಿಂದ—ವಿಷಹಾಕಿ . . . ಥು ! . . . ಮಾನವನ ಇಷ್ಟು ತುಚ್ಛ ಅಧಃಪತನವೇ ? . . ."

—ಕ್ರೋಧದಿಂದ ಕೆಂಡದಂತಾಗಿದ್ದ ಅವನ ಕಂಗಳಿಂದ . . . ಇದೇನಿದು ?—ಕಂಬನಿ ಕೆಂಪಗಿದೆಯಲ್ಲಾ !

ನರ್ತಿಸುತ್ತಲೇ ಇತ್ತು—

ಗೋಡೆಯ ಮೇಲಿನ ಕರಿನೆರಳು !

ಯಾವುದರತ್ತವೂ ಲಕ್ಷ್ಯವಿಲ್ಲದಂತೆ 'ಪ್ರಜಾಸೇವಕ' ಡಾಕ್ಟರರನ್ನು ಬಿಗಿ ಹಿಡಿದ :

"ಡಾಕ್ಟರ್, ಯಾರ ಮಾತನ್ನೂ ಕೇಳಬೇಡಿ. ಎಲ್ಲಾ ಸುಳ್ಳು. ಕಳ್ಳಮುಂಡೇವು ತಿಂದ ಮನೆಗೇ ಎರಡುಬಗೀತಾವೆ. . . . ಡಾಕ್ಟರ್—ನಿಮ್ಮ ದಮ್ಮಯ್ಯಾಂತೀನಿ. ಯಾವ್ದಾದರೂ ಒಳ್ಳೆಯದು ಔಷಧಿ ಕೊಡಿ . . . ಅಂದ್ಹಾಗೆ ದುಬಾರಿ ಬೆಲೆಗೆ ಹೋಗಬೇಡಿ . . . ಡಾಕ್ಟರ್ . . . ಬೇಗ . . . ಯಾಕೋ ಗಂಟಲು . . . ಕೊ . . . ರೆ . . . ಯುತ್ತಿ . . . ದೆ ! . . ."

ಖೊಕ್ ಖೊಕ್ !

—ಬಂದ ಕೆಮ್ಮಿನಿಂದ, ಮಾತು ನಿಲ್ಲಿಸಿದ ಸಾಹುಕಾರ ಕೆಮ್ಮು ಬಂದತ್ತ, ದೃಷ್ಟಿ ಹೊರಳಿಸಿದ : ಆ ರೈತ !

ಕಬ್ಬಿಣದ ಪೆಟ್ಟಿಗೆಯಿಂದ—

—ರಕ್ತ ತೊಟ್ಟಿಕ್ಕುತ್ತಲೇ ಇತ್ತು !

ಆ ರೈತ ಸುಮ್ಮನೇ ಇದ್ದ. ಸಾಹುಕಾರನೇ ಮಾತನಾಡಲಾರಂಭಿಸಿದ :

"ಯಾಕೋ ಬಂದೆ ನೀನೀಗ . . . ನಿನ್ನ ಗದ್ದೇನ ನಾನಾಗಿ ನಾನು ಕಿತ್ತು ಕೊಂಡೆನಾ ? ಏನೂ ಇಲ್ಲವಲ್ಲ . . . ಏನಂದೆ ? . . . ಹೋಗೋಗೋ ಗೊತ್ತಿದೆ

. . . 'ನಾನು ಹೆಬ್ಬೆಟ್ಟೇ ಒತ್ತಿಲ್ಲ. ಬೇರೆ ಯಾರದೋ ಒತ್ತಿಸಿ ನಂದೇ ಅಂತ ಸಾಧಿಸಿದಿರಿ' ಅಂತೀಯಾ? ಹೋಗೋಗು ನಾನೂ ಕಂಡಿದ್ದೀನಿ ನಿನ್ನಂಥ ಸಾವಿರಾರು ಕುರಿಗಳನ್ನು . . . ಹೋಗೋ—ಸಾಕು. ಅಷ್ಟು ತಾಕತ್ತಿದ್ದರೆ ಕೋರ್ಟಿಗೆ ಹೋಗು. ಇಲ್ಲಿ ಯಾರ ಮುಂದೆ ಅಂತಾ ಹೇಳ್ತಿದ್ದೀ . . . ನಿನ್ನ ಹೆಂಡತಿ ಮಕ್ಕಳು ಸಾಯ್ತಿದ್ದಾರೆ ಅಂತಿಯಾ?—ಸಾಯಲಿ ಬಿಡು. ನನಗೇನಂತೆ ನನ್ನ ಗಂಟೇನು ಹೋಗುತ್ತೆ . . . ನೋಡು, ಇನ್ನು ಸುಮ್ಮನೆ ಮಾತಾಡಿಸ್ಬೇಡ. ನನಗೆ ನಿನ್ಜೊತೆ ಹರಟೆ ಹೊಡೆಯೋದಿಕ್ಕೆ ಪುರುಸೊತ್ತಿಲ್ಲ . . . ನಾಹೇಳಿದ್ನಲ್ಲ—ಅಷ್ಟೊಂದು ಶಕ್ತಿಯಿದ್ದರೆ ಕೋರ್ಟಿಗೆ ಹೋಗು. ಈ ಹೆಬ್ಬೆಟ್ಟಿನ ಗುರುತು ನಂದಲ್ಲ. ನಾನು ಹಾಕೇ ಇಲ್ಲ. ಅವರೇ ಯಾರದೋ ಹಾಕಿಸಿ ಮೋಸಮಾಡಿದಾರೆ ಅಂತ ಸಾಧಿಸಿ ಮಹಾರಾಯನಂತೆ ನಿನ್ನ ಗದ್ದೆ ವಾಪಸ್ಸು ತಕೋ ನಂಗೇನಂತೆ. . . ."

ಕಬ್ಬಿಣದ ಪೆಟ್ಟಿಗೆಯಿಂದ—

—ರಕ್ತ ತೊಟ್ಟಿಕ್ಕುತ್ತಲೇ ಇತ್ತು!

ಆ ರೈತನ ಬತ್ತಿದ ಕಣ್ಣುಗಳಿಂದ ತೊಟ್ಟಿಕ್ಕುತಿತ್ತು—

—ಕಂಬನಿಯಲ್ಲ—

ರಕ್ತ!

ರಕ್ತ!!

ಗಾಳಿಯ ಹೊಡೆತಕ್ಕೆ ಸಿಲುಕಿದ ಎಲೆಯಂತೆ ಕಂಪಿಸುತಿತ್ತು ವೈದ್ಯನ ಶರೀರ. ಬಣ್ಣಿಸಲಾಗದ ಭಯ! ಅವರ್ಣನೀಯ ಅಂಜಿಕೆ! ಹೆಪ್ಪುಕಟ್ಟಲಾರಂಭಿಸಿದ್ದ ಹೆದರಿಕೆ! . . . ಆ ಸ್ಥಳದಿಂದ ಓಡಿಹೋಗೋಣವೆಂದರೆ ಕಾಲು ನೆಲಕ್ಕೆ ಅಂಟಿಕೊಂಡಿತ್ತು. ಅದನ್ನು ಕೀಳುವುದಕ್ಕೆಂದರೆ ದೇಹದಲ್ಲಿ ಶಕ್ತಿಯೇ ಇರಲಿಲ್ಲ. ಗರ ಬಡಿದವರಂತೆ ನಿಂತಿದ್ದ.

ಗೋಡೆಯ ಮೇಲಿನ ಕರಿನೆರಳು—

—ಕುಡಿದವರಂತೆ ತೂರಾಡುತಿತ್ತು!

ಕಣ್ಣುಗಳಿಂದ ಕೆಂಡ ಕಾರುತ್ತ ತಿಜೋರಿಯತ್ತ ತಿರುಗಿದ ಆ ಸಾಹುಕಾರ, ಕೋಪದಿಂದ ಅರಚಿದ:

"ಇನ್ನು ನೀನೊಬ್ಬಳು ಕಡಮೆಯಾಗಿದ್ಯಾ? . . . ನಿನ್ನ ಮಗನನ್ನು ನಾನು ಫ್ಯಾಕ್ಟರಿಗೆ ಸೇರಿಕೋ ಎಂದೆನಾ? ಅವನು ಯಾವುದೋ ಜ್ಞಾನದಲ್ಲಿ ಮಿಷಿನ್ನಿಗೆ ಸಿಕ್ಕಿಹಾಕಿಕೊಂಡು ಕೈ ಕಳೆದುಕೊಂಡರೆ ನನ್ನ ಹಣೇಬರಹವೇ ಅದು? ಅದಕ್ಕೆ ನಾನ್ಯಾಕೆ ದುಡ್ಡು ಕೊಡಲಿ ಅಂತ. ನಂಗೇನು ತೀಟೆಯೇ? . . . ಹೋಗೋಗು

. . . ಅ್ಣ—ಏನಂದೆ? ನಿನಗೂ ವಯಸ್ಸಾಯಿತು. ಅರುಳೋ ಮರುಳೋ ಅನ್ನೋ ಹಾಗಾಗಿದೆ ನಿನಗೆ . . . ಹ್ಣು ಹೋಗು. ಏನಾದರೂ ಬೇರೆ ಕೆಲಸಮಾಡಿ ಹೊಟ್ಟೆ ಹೊರೆದುಕೋ ಅನ್ನು ಅವನಿಗೆ. ಗಂಡಸಲ್ಲವೇ? . . . ಅ್ಣ, 'ಕೈ ಇಲ್ಲದವನು ಏನು ಮಾಡಬಲ್ಲ' ಅಂತೀಯಾ?—ಅದಕ್ಕೆ ನಾನೇನುಮಾಡಲಿ ಅಂತ. ಕೆಲಸಮಾಡೋದಕ್ಕೆ ಆಗೋಲ್ಲ ಅಂದರೆ . . . ನಿನಗೂ ವಯಸ್ಸಾಯಿತು ಅಂತೀಯಾ? ಹೌದು ಹೌದು. ನಿನಗೂ ವಯಸ್ಸಾಯಿತು. ಅವನಿಗೂ ಕೆಲಸಮಾಡೋದಿಕ್ಕೆ ಆಗೋದಿಲ್ಲ . . . ಹ್ಣು . . . ಏನುಮಾಡಲಿ ಅಂದರೆ—ಕೇಳ್ತೀಯಾ ನಾ ಹೇಳಿದಂತೆ—ನಿನ್ನ ಸೊಸೆ ಇದಾಳಲ್ಲ, ನಿನ್ನ ಸೊಸೆ . . ."

—ತಟಕ್ಕನೆ ಮಾತು ನಿಲ್ಲಿಸಿದ 'ಪ್ರಜಾಹಿತೈಷಿ', ಕತ್ತನ್ನು ಬಿಗಿಯಾಗಿ ಹಿಡಿದುಕೊಳ್ಳುತ್ತ ಒದ್ದಾಡಲಾರಂಭಿಸಿದ. ಯಾವುದೋ ಕಾಣದ ಕುಣಿಕೆಯನ್ನು ಬಿಡಿಸಿಕೊಳ್ಳುವವನಂತೆ ತಿಳಿಮಿಳಿಗುಟ್ಟಲಾರಂಭಿಸಿದ. ಅರೆಕ್ಷಣ ಹಾಗೇ ಸೆಣಸಾಡು ತ್ತಿದ್ದು, ಉಗುಳು ನುಂಗಿ, ಅತಿ ಪ್ರಯಾಸದಿಂದ ತೊದಲಿದ—

"ಡಾಕ್ಟರ್ . . . ಡಾ . . . ಕ್ಟರ್ . . . ಬೇ . . . ಗ . . ."

ಗೋಡೆಯ ಮೇಲಿನ ಕರಿನೆರಳು—
ಕುಣಿಯುವುದರ ಜೊತೆಗೆ,
ಕೇಕೆ ಹಾಕಿ ನಗುತ್ತಿತ್ತು!

ಬಾಗಿಲ ಬಳಿ ಫಳಾರನೆ ಸದ್ದಾಯಿತು, ಅರೆಕ್ಷಣದ ಆ ಭೀಕರ ನೀರವತೆ ಮೌನವೇ ಅಸಹ್ಯದಿಂದ ಬೀರಿದಂತೆ. ಬೆಚ್ಚಿದ ಡಾಕ್ಟರ್ ಅತ್ತ ದೃಷ್ಟಿ ಹೊರಳಿಸಿದ: ಕಬ್ಬಿಣದ ಪೆಟ್ಟಿಗೆಯಿಂದ ಓರ್ವ ವೃದ್ಧ ಹೊರಬರುತಿದ್ದ!

"ಅಯ್ಯೋ ಮನೆಹಾಳ! ಮಗಳ ಮದುವೆಗೆ ಅಂತ ಸಾಲ ಕೇಳಿದರೆ . . . ಥು! ನೀನೇನು ಮನುಷ್ಯನೇ? ಪಿಶಾಚಿ . . . ಆ ಕತ್ತೆ ನಾಯಿಗಳೂ ಎಷ್ಟೋ ಮೇಲ ಲ್ಲವೇ ನಿನಗಿಂತ! ಇದ್ದ ಆಸ್ತೀನೆಲ್ಲಾ, ಮನೆಮಠವೆಲ್ಲಾನೂ ಕಿತ್ಕೊಂಡೆ. ಸಾಲಕ್ಕೆ ಅಂದೂ ಅಂದೂ—ಅಸಲಿಗಿಂತ ಬಡ್ಡಿಯೇ ಬೆಳೆಯುವಂತೆ ಮಾಡಿ—ಆ ಕೋರ್ಟಿನವ ರೆಲ್ಲಾ ಗುರುತೆಂದು ಬಡವರ ಹೊಟ್ಟೆಯ ಮೇಲೆ ಹೀಗೆ ಹೊಡಿಯೋದೆ? ನಮ್ಮ ಮನೆಗೆ ಬೆಂಕಿ ಹಚ್ಚಿಬಿಟ್ಟೆಯಲ್ಲೋ? . . . ಮಗಳ ಮದುವೆಗೆಂದು ಸಾಲ ಕೇಳಿದರೆ, ಆಸ್ತಿ ಏನಿದೆ ಅಂತ ಕೇಳ್ತೀಯಲ್ಲೋ—ನನ್ನ ಇದ್ದ ಆಸ್ತೀನೆಲ್ಲಾ ಕಸಿದುಕೊಂಡು! . . . ಥು, ಮನುಷ್ಯತ್ವವೇ ಇಲ್ಲವೇ ನಿನ್ನಲ್ಲಿ ಸ್ವಲ್ಪವೂ! ನಿನ್ನ ಮೊಮ್ಮಗಳಿಸಂತಿದ್ದ ಳಲ್ಲೋ ಅವಳು . . . 'ಮದುವೆ ಮಾಡೋದಿಕ್ಕೆ ಆಗದಿದ್ದರೆ ಬಾವಿಗೆ ತಳ್ಳು' ಅಂದ್ಯಲ್ಲಾ, ಅನ್ನಬಹುದೇ ಹಾಗೆ . . . ನಿನ್ನ ಬಾಯಲ್ಲಿ ಹುಳು ಬೀಳಲಿ!"

ಆ ವೃದ್ಧ ಬಂದಂತೆಯೇ ಕರಗಿದ.

ಸಾಹುಕಾರನ ಸ್ಥಿತಿ ಶೋಚನೀಯವಾಗಿತ್ತು! ಡಾಕ್ಟರನ ಹಿಡಿತವನ್ನು ಬಿಟ್ಟು ಮಂಚದಲ್ಲುರುಳಿದ—ಕೊರಳು ಹಿಡಿದುಕೊಂಡು—ಎದೆ ಹಿಡಿದುಕೊಂಡು ಮಿಲಿಮಿಲಿ ಒದ್ದಾಡಲಾರಂಭಿಸಿದ—ಕೆಸರಿನಲ್ಲಿ ಸಿಕ್ಕಿಬಿದ್ದು ಪ್ರಯತ್ನಪಡುವ ಆಶಾರಹಿತ ಪ್ರಾಣಿಯಂತೆ; ಗರುಡನ ಹಿಡಿತಕ್ಕೆ ಸಿಕ್ಕಿಬಿದ್ದ ಸರ್ಪದಂತೆ; ಗಿಡುಗನ ಪಂಜಕ್ಕೆ ಸಿಕ್ಕಿಬಿದ್ದ ಅಳಿಲಿನಂತೆ. . . .

ಡಾಕ್ಟರನ ಸ್ಥಿತಿಯೂ ಶೋಚನೀಯವಾಗಿತ್ತು! ಯಾವುದೋ ವರ್ಣಿಸಲಸಾಧ್ಯವಾದ 'ವಿಚಿತ್ರ'ದ ಮುಂದೆ ತಿಳಿವು ಕಳೆದುಕೊಂಡು ನಿಂತ ಹಸುಗೂಸಿನಂತೆ . . . ದೇಹದ ರಕ್ತವೆಲ್ಲಾ ತಣ್ಣಗಾಗಿ, ನರನರಗಳೂ ಹೆಪ್ಪುಕಟ್ಟಲಾರಂಭಿಸಿತ್ತು ಅಂಜಿಕೆಯಿಂದ . . . ಮೂಳೆಮೂಳೆಗಳೂ ಹೆಪ್ಪುಕಟ್ಟಿತ್ತು ಹೆದರಿಕೆಯಿಂದ. ಮೊದಮೊದಲು ಹೆದರಿದ ಆ ಡಾಕ್ಟರ್—ಹೆದರಿಕೆಯೆಂದರೆ ಅಂತಿಂಥದಲ್ಲ. ಆದರೆ ಕ್ರಮಕ್ರಮೇಣ, ಓಡಿಹೋಗಲೆತ್ನಿಸುವ ವಿಫಲ ಪ್ರಯತ್ನಪಟ್ಟು, ನೆಲಕ್ಕೆ ಕೀಲಿಸಿದ್ದ ಕಾಲುಗಳನ್ನು ಬೇರ್ಪಡಿಸಲಾರದೆ—ನದಿಯಲ್ಲೇ ಮುಳುಗಿದವನು ಛಳಿ ಮೈ ಕೊರೆಯುತಿದ್ದರೂ ಅದನ್ನು ಮರೆಯುವಂತೆ—ಅವನೂ ಆ ರುದ್ರಭೀಕರ ವಾತಾವರಣದಲ್ಲೇ ನಿಂತ—ಅಭ್ಯಸ್ಥನಂತೆ! . . . ಬಾಯಿಯ ವರೆಗೂ ತುಂಬಿಬಂದಿದ್ದ ಹೆದರಿಕೆ, ತುಳುಕಲು ಮುಳ್ಳುಮೊನೆಯ ಒತ್ತಡಕ್ಕಾಗಿ ಕಾದಿತ್ತು!

ಅಸಹನೀಯವಾಗಿತ್ತು, ಆ ಅರಕ್ಷಣದ ಮೌನ.

ಮಿಲಿಮಿಲಿ ಒದ್ದಾಡುತ್ತಿದ್ದ ಸಾಹುಕಾರ. ಆದರೆ ದೃಷ್ಟಿ ತಿಜೋರಿಯತ್ತಲೇ ನಾಟಿತ್ತು—ಅದೇನನ್ನೋ ಭೇದಿಸುವಂತೆ!

ತಟಕ್ಕನೆ ಎದ್ದುನಿಂತ 'ಪ್ರಜಾಹಿತೈಷಿ' ಒಂದೇ ನೆಗೆತದಲ್ಲಿ ತಿಜೋರಿಯ ಬಳಿ ಬಿದ್ದ! . . . ತನ್ನ ಸಂತಾನವನ್ನು ಯಾರೋ ಅಪಹರಿಸಲೆತ್ನಿಸುತ್ತಿರುವುದನ್ನು ಕಂಡ ಹುಲಿಯಂತೆ! . . .

. . . ಚೀರುತ್ತಿದ್ದ ಅವನು—ಯೋಚನೆಯ ಧ್ವನಿಯಲ್ಲಿ :

"ಡಾಕ್ಟರ್, ಡಾಕ್ಟರ್, ಬೇಗ ಬನ್ನಿ, ಬೇಗ ಬನ್ನಿ—ಈ ಪಾಪಿಮುಂಡೇವೆಲ್ಲಾ ಕಬ್ಬಿಣದ ಪೆಟ್ಟಿಗೆ ಒಡೆದುಹಾಕ್ತಿದ್ದಾವೆ. ಹಣ ದೋಚಿಕೊಂಡು ಹೋಗ್ತಾರೆ . . . ಡಾಕ್ಟರ್, ನಿಮ್ಮ ದಮ್ಮಯ್ಯಾಂತೀನಿ ಬೇಗ್ಬನ್ನಿ . . . ನಿಮಗೂ ಒಂದಿಷ್ಟು ಪಾಲು ಕೊಡ್ತೀನಿ ಡಾಕ್ಟರ್ ಬನ್ನಿ. . . ಒದೀರಿ ಈ ಕಳ್ಳರಿಗೆ . . . ಕಳ್ಳರಂತೆ ಕಾಯ್ದುಕೊಂಡಿದ್ದು ಈ ರಾತ್ರೀಲಿ ಬಂದಿದಾರೆ ನನ್ನ ಹಣ ಸೂರೆಮಾಡೋದಿಕ್ಕೆ . . . ನನ್ನ ಹಣ . . . ನನ್ನ ಹಣ . . . ನಾನು ರಕ್ತ ಸುರಿಸಿ ಸಂಪಾದಿಸಿದ್ದು, ಎದೆ ಮೂಳೆ ಮುರ್ಕ್ಕೊಂಡು

ಸಂಪಾದಿಸಿದ್ದು ; . . . ಡಾಕ್ಟರ್, ಬೇಗ ಬನ್ನಿ . . . ಅಯ್ಯೋ . . . ದೂರ ಹೋಗ್ರೋ ಚಂಡಾಳರಾ, ಉಂಡಮನೆಗೆ ಎರಡು ಬಗೀತೀರಲ್ರೋ ! ಅನ್ನಹಾಕಿದ ಧಣೀಗೇ ಮೋಸ ಮಾಡ್ತಿದ್ದೀರಲ್ರೋ . . . ಹೊಗ್ರೋ ! . . . ಅಯ್ಯೋ ! ಡಾಕ್ಟರ್ ಬೇಗ್ಬನ್ನಿ . . . ಹಣ ಹೋಯ್ತು . . . ಹೋಯ್ತು . . . ನಾ ಬಿಡೋದಿಲ್ಲ. ಸತ್ತರೂ ಬಿಡೋದಿಲ್ಲ ನನ್ನ . . . ಇದೇ ಹಟ . . . ನೋಡೋಣ ಯಾರು ಗೆಲ್ತಾರೆ . . . ಪ್ರಾಣ ಹೋದರೂ ಸರಿ ನಾನು ನಿಮಗೆ ಹಣ ದೋಚೋದಿಕ್ಕೆ ಬಿಡೋದಿಲ್ಲ . . . ಇದು ನನ್ನ ಹಟ . . . ಯಾರಪ್ಪಂದೂಂತ ಹೊಡ್ಕೊಂಡೋಗ್ತೀರೋ . . . ಇಲ್ಲ ಇಲ್ಲ . . . ಖಂಡಿತಾ ಬಿಡೋದಿಲ್ಲ . . . ."

—'ಪ್ರಜಾಹಿತೈಷಿ' ಕಬ್ಬಿಣದ ಪೆಟ್ಟಿಗೆಯನ್ನು ತಬ್ಬಿಕೊಂಡು ತೂಗಾಡುತಿದ್ದ ; ಕಳ್ಳರ ಕೈಯಿಂದ ರಕ್ಷಿಸುವಂತೆ ಸೆಣಸಾಡುತ್ತಿದ್ದ ; ಆ ತಿಜೋರಿಗೇ ಹಣೆ ಚಚ್ಚಿ ಕೊಳ್ಳುತಿದ್ದ . . . ಯಾರಿಗೋ ಎನ್ನುವಂತೆ ಗುದ್ದುತಿದ್ದ . . .

ಮಂಚದ ಹಿಂದೆ ಗೋಡೆಯ ಮೇಲೆ ಕುಣಿಯುತಿದ್ದ ಕರಿನೆರಳು ಮಂಚ ದಿಂದ ಹಾರಿ, ತಿಜೋರಿಯನ್ನು ತಬ್ಬಿ ಕುಳಿತಿದ್ದ ಆ ಸಾಹುಕಾರನ ಹಿಂದೆಯೇ ತಾನೂ ಹಾರಿ, ಕಬ್ಬಿಣದ ಪೆಟ್ಟಿಗೆಯ ಹಿಂದಿನ ಗೋಡೆಯ ಮೇಲೆ ಕುಣಿಯುತಿತ್ತು . . . ಕುಣಿಯುತಿತ್ತು . . . ಕು . . ಣಿ . . ಯು . . ತ್ತಿ . . ತ್ತು . . .

ರಕ್ತ ತೊಟ್ಟಿಕ್ಕುತಿತ್ತು—

—ಕಬ್ಬಿಣದ ಪೆಟ್ಟಿಗೆಯಿಂದ !

—ಭಾವೀ 'ಜನತಾ ಸೇವಕ'ನ ಹಣೆಯಿಂದ !

ಗೋಡೆಯ ಮೇಲಿನ ಕರಿನೆರಳು—

—ನರ್ತಿಸುತಿತ್ತು ;

—ಹುಚ್ಚು ಹುಚ್ಚಾಗಿ ನರ್ತಿಸುತಿತ್ತು ; ವಿಜಯಿಯಾದ ಮದ ಹುಚ್ಚೆದ್ದು ನರ್ತಿಸುವಂತೆ ; ಮನಸ್ಸಿಗೆ ಬಂದಂತೆ ; ತಾಳಲಯವಿಲ್ಲದೆ ನರ್ತಿಸುತಿತ್ತು !

ನೋಡುತ್ತಲೇ ನಿಂತಿದ್ದ ಡಾಕ್ಟರ್ !

—ವರ್ಣಿಸಲಸಾಧ್ಯವಾಗಿತ್ತು ಅವನ ಸ್ಥಿತಿ. ಬಿಟ್ಟಗಣ್ಣು ; ಬಿಟ್ಟಬಾಯಿ !

ಅರೆಕ್ಷಣ ಅಷ್ಟೆ.

ಫಟಾರನೆ ಆ 'ಪ್ರಜಾಹಿತೈಷಿ' ಯಾರಿಗೋ ಉಗಿಯುವಂತೆ ಯಾರಿಗೋ ಹೊಡೆಯುವಂತೆ ತಿಜೋರಿಗೆ ತನ್ನ ತಲೆಯಿಂದ ಘರ್ಷಿಸಿದ !—ಚಿಲ್ಲನೆ ಚಿಮ್ಮಿದ 'ಕೆಂಪುರಕ್ತ' ಕಬ್ಬಿಣದ ಪೆಟ್ಟಿಗೆಯ ಮೇಲೆ ಓಕುಳಿಯಾಡಿತು !

ತಬ್ಬೇ ಇದ್ದ ಸಾಹುಕಾರ, ತನ್ನ ಕಬ್ಬಿಣದ ಪೆಟ್ಟಿಗೆಯನ್ನು !

. . . ಸುಯ್ಯನೆ ಬೀಸಿ ಬಂದ ಗಾಳಿ ಕಡೆಯುಸಿರೆಳೆಯುತಿದ್ದ ಹಣತೆಯನ್ನು, ಇಡೀ ಜಗವನ್ನೇ ಆವರಿಸಿದ್ದ ಕಾರ್ಗತ್ತಲೆಯಲ್ಲಿ ಕರಗಿಸಿತು !

ಗೋಡೆಯ ಮೇಲಿನ ಕರಿನೆರಳು—

—ಅದೃಶವಾಗಿತ್ತು !

“ ಅಯ್ಯೋ ”

—ಎಂದು ಚೀರಿದ ಡಾಕ್ಟರ್, ಕುಸಿದ. ಅಷ್ಟೆ ! ಕುಸಿದ—ಪುನಃ ಏಳಲಾಗದಂತೆ ಕುಸಿದ !

‘ ಪ್ರಜಾಹಿತೈಷಿ ’ ಯ ಹಣೆಯಿಂದ—

—ರಕ್ತ ತೊಟ್ಟಿಕ್ಕುತಿತ್ತು !

ಕಬ್ಬಿಣದ ಪೆಟ್ಟಿಗೆಯಿಂದ—

—ರಕ್ತ ತೊಟ್ಟಿಕ್ಕುತಿತ್ತು !

ಪಿ. ವೀ. ನಂಜರಾಜ್ ಅರಸು

# ಕನ್ನಡ ಕಾವ್ಯಪ್ರಕಾಶ

## ಏಳನೆಯ ಉಲ್ಲಾಸ

(ಕಳೆದ ಸಂಚಿಕೆಯಿಂದ ಮುಂದುವರಿದುದು)

ಮುಂದೆ ಅರ್ಥದೋಷಗಳನ್ನು ಹೇಳಲಾಗಿದೆ.

### ಅರ್ಥದೋಷಗಳು

ಅರ್ಥೋಽಪುಷ್ಟಃ ಕಷ್ಟೋ ವ್ಯಾಹತಪುನರುಕ್ತದುಷ್ಕ್ರಮಗ್ರಾಮ್ಯಾಃ ।
ಸಂದಿಗ್ಧೋ ನಿರ್ಹೇತುಃ ಪ್ರಸಿದ್ಧಿವಿದ್ಯಾವಿರುದ್ಧಶ್ಚ ॥ ೭*cd* ॥
ಅನವೀಕೃತಃ ಸನಿಯಮಾನಿಯಮವಿಶೇಷಾವಿಶೇಷಪರಿವೃತ್ತಾಃ ।
ಸಾಕಾಂಕ್ಷೋಽಪದಯುಕ್ತಃ ಸಹಚರಭಿನ್ನಃ ಪ್ರಕಾಶಿತವಿರುದ್ಧಃ ॥ ೮ ॥
ವಿಧ್ಯನುವಾದಾಯುಕ್ತತ್ಯಕ್ತಪುನಃಸ್ವೀಕೃತೋಽಶ್ಲೀಲಃ ॥ ೯*ab* ॥

(೧) ಅಪುಷ್ಟ, (೨) ಕಷ್ಟ, (೩) ವ್ಯಾಹತ, (೪) ಪುನರುಕ್ತ, (೫) ದುಷ್ಕ್ರಮ, (೬) ಗ್ರಾಮ್ಯ, (೭) ಸಂದಿಗ್ಧ, (೮) ನಿರ್ಹೇತು, (೯) ಪ್ರಸಿದ್ಧಿವಿರುದ್ಧ, (೧೦) ವಿದ್ಯಾವಿರುದ್ಧ, (೧೧) ಅನವೀಕೃತ, (೧೨) ಸನಿಯಮಪರಿವೃತ್ತ, (೧೩) ಅನಿಯಮ ಪರಿವೃತ್ತ, (೧೪) ವಿಶೇಷಪರಿವೃತ್ತ, (೧೫) ಅವಿಶೇಷಪರಿವೃತ್ತ, (೧೬) ಸಾಕಾಂಕ್ಷ, (೧೭) ಅಪದಯುಕ್ತ, (೧೮) ಸಹಚರಭಿನ್ನ, (೧೯) ಪ್ರಕಾಶಿತವಿರುದ್ಧ, (೨೦) ವಿಧ್ಯಯುಕ್ತ, (೨೧) ಅನುವಾದಾಯುಕ್ತ, (೨೨) ತ್ಯಕ್ತಪುನಃಸ್ವೀಕೃತ, ಮತ್ತು (೨೩) ಅಶ್ಲೀಲ.

ಇವೆಲ್ಲವೂ ಅರ್ಥಗಳೂ 'ದುಷ್ಟ'ವೆಂಬುದನ್ನು ಹಿಂದಿನಿಂದ[121] ಅಧ್ಯಾಹಾರ ಮಾಡಿಕೊಳ್ಳಬೇಕು. ಇವಕ್ಕೆಲ್ಲ ಉದಾಹರಣೆಗಳನ್ನು ಅನುಕ್ರಮವಾಗಿ ಕೊಡಲಾಗುತ್ತದೆ:—

#### (೧) ಅಪುಷ್ಟ

ಅತಿವಿತತಗಗನ ಸರಣಿಪ್ರಸರಣ ಪರಿಮುಕ್ತ ವಿಶ್ರಮಾನಂದಃ ।
ಮರುದುಲ್ಲಾಸಿತಸೌರಭಕಮಲಾಕರಹಾಸಕೃದ್ರವಿರ್ಜಯತಿ ॥

---

[121] ಪದದೋಷಗಳ ಲಕ್ಷಣಸೂತ್ರದಿಂದ. ಉಲ್ಲಾಸದ ಆದಿಭಾಗವನ್ನು ನೋಡಿ.

ಅತಿವಿತತಗಗನಮಾರ್ಗದೊ
ಳತಿಗಮಿಸುತೆ ಮುಕ್ತವಿಶ್ರಮಾಸಂದಂ ಮಾ-|
ರುತ ಸಂಭೃತ ಸೌರಭ ಸಂ-
ಗತ ಕಮಲಾಕರಕೆ ರವಿಯೆ ಹಾಸನಿಮಿತ್ತಂ ||

ಇಲ್ಲಿ 'ಅತಿವಿತತ' ಮುಂತಾದ[122] ವಿಶೇಷಣಗಳನ್ನು ಹೇಳದಿದ್ದರೂ ಉದ್ದಿಷ್ಟ ವಾದ ಅರ್ಥಕ್ಕೆ ಕೊರತೆ ಬಾರದ ಪ್ರಯುಕ್ತ, ಇವು 'ಅಪುಷ್ಟ'ವೆನಿಸುತ್ತವೆ.[123] ಇವನ್ನು ಅಸಂಗತವೆಂದಾಗಲಿ ಪುನರುಕ್ತವೆಂದಾಗಲಿ ತಿಳಿಯುವ ಪ್ರಸಂಗವಿಲ್ಲ.[124]

---

[122] 'ಮುಂತಾದ' ಎಂದರೆ . . . 'ಸರಣಿ' 'ಮರುದುಲ್ಲಾಸಿತಸೌರಭ'ನೆಂಬ ವಿಶೇಷಣಗಳು.

[123] ಅಭಿಪ್ರಾಯವಿಷ್ಟೆ :—ಆಕಾಶವು ಅತ್ಯಂತ ವಿಶಾಲವಾಗಿವೆಯೆಂದು ಬಾಯಿ ಬಿಟ್ಟು ಹೇಳದಿದ್ದರೂ ಆಗುತ್ತದೆ; ಅದು ಅದರ ಸಹಜ ಸ್ವರೂಪವಾಗಿರುವುದರಿಂದ ಅದರ 'ಸರಣಿ' ಅಥವಾ 'ಮಾರ್ಗ'ವೆಂಬಂಶದಿಂದಲೂ ಅರ್ಥಕ್ಕೆ ಹೆಚ್ಚಿನ ಪುಷ್ಟಿಯೇನೂ ಇಲ್ಲ. ಇದೇ ರೀತಿ 'ಕಮಲವನಗಳ ವಿಕಾಸಕ'ವೆಂಬುದನ್ನು ಮರುದುಲ್ಲಾಸಿತಸೌರಭವೆಂಬ ವಿಶೇಷಣ ಪುಷ್ಟೀಕರಿಸುವುದಿಲ್ಲ.

[124] ಇಲ್ಲಿ ಮಮ್ಮಟನು ರುದ್ರಟನ ಅಭಿಪ್ರಾಯವನ್ನು ತಿರಸ್ಕರಿಸುತ್ತಿದ್ದಾನೆ. ರುದ್ರಟನ ಪ್ರಕಾರ ಅರ್ಥದೋಷಗಳಿವು—

ಅಪಹೇತುರುಪ್ರತೀತೋ ನಿರಾಗಮೋ ಬಾಧಯನ್ನಸಂಬದ್ಧಃ |
ಗ್ರಾಮ್ಯೋ ವಿರಸಸ್ತದ್ವಾನತಿಮಾತ್ರಶ್ಚೇತಿ ದುಷ್ಟೋಽರ್ಥಃ ||
(ಕಾವ್ಯಾಲಂಕಾರ, ೧೧, ೮)

ಇವುಗಳಲ್ಲಿ 'ಅಸಂಬದ್ಧ'ವೆಂಬ ದೋಷದ ಸ್ವರೂಪವನ್ನು ಹೀಗೆ ವಿವರಿಸಲಾಗಿದೆ :—

ಪ್ರಕ್ರಾಂತಾನುಪಯೋಗೀ ಪ್ರಾಪ್ತೋ ಯಸ್ತತ್ಕ್ರಮಾದಸಂಬದ್ಧಃ |
ಸ ಇತಿ ಗತಾತೇ ಕೀರ್ತಿರ್ಬಹುಫೇನಂ ಜಲಧಿಮುಲ್ಲಂಘ್ಯ ||
(ಕಾವ್ಯಾಲಂಕಾರ, ೧೧, ೮)

ಸಂದರ್ಭಕ್ಕೆ ಯಾವ ಉಪಯೋಗವೂ ಇಲ್ಲದೆ ಬರುವುದು 'ಅಸಂಬದ್ಧ.' 'ನಿನ್ನ ಕೀರ್ತಿ ಬಹಳ ನೊರೆಯಿಂದುಕ್ಕುವ ಕಡಲನ್ನೂ ದಾಟಿಹೋಗಿದೆ' ಎಂಬುವೇ ಉದಾಹರಣೆ. ಇಲ್ಲಿ ನೊರೆ ತುಂಬಿರುವುದೆಂಬ ವಿಶೇಷಣದಿಂದ ಸಾರ್ಥಕ್ಯವೇನೂ ಇಲ್ಲ.

ಇದರಂತೆಯೇ ರುದ್ರಟನು 'ತದ್ವಾನ್' ಎಂಬ ದೋಷವನ್ನು ಹೀಗೆ ವಿವರಿಸಿದ್ದಾನೆ :—

ಯೋ ಯಸ್ಯಾವ್ಯಭಿಚಾರೀ ಸಗುಣಾದಿಸ್ತದ್ವಿಶೇಷಣಂ ಕ್ರಿಯತೇ |
ಪರಿಪೂರಯಿತುಂ ಛಂದೋ ಯತ್ರ ಸ ತದ್ವಾನಿತಿ ಜ್ಞೇಯಃ ||
(ಕಾವ್ಯಾಲಂಕಾರ, ೧೧, ೧೫)

ಕೇವಲ ಛಂದಸ್ಸಿನ ಪೂರಣಕ್ಕಾಗಿ ಒಂದರ ಸಹಜಗುಣಗಳನ್ನೇ ಮತ್ತೆ ಮತ್ತೆ ಎತ್ತಿ ಬರೆಯುವುದು 'ತದ್ವಾನ್' ಎಂಬ ಅರ್ಥದೋಷ.

## (೨) ಕಷ್ಟ

ಸದಾ ಮಧ್ಯೇ ಯಾಸಾಮಿಯಮಮೃತನಿಷ್ಯನ್ದಸುರಸಾ
ಸರಸ್ವತ್ಯುದ್ದಾಮಾ ವಹತಿ ಬಹುಮಾರ್ಗಾ ಪರಿಮಲಮ್ ।
ಪ್ರಸಾದಂ ತಾ ಏತಾ ಘನಪರಿಚಿತಾಃ ಕೇನ ಮಹತಾಂ
ಮಹಾಕಾವ್ಯವ್ಯೋಮ್ನಿ ಸ್ಫುರಿತಮಧುರಾ ಯಾನ್ತು ರುಚಯಃ ॥

ಅತುಲೋದ್ದಾಮ ಸರಸ್ವತೀನದಿ ಸುಧಾನಿಷ್ಯಂದಸಂಪದ್ರಸಳ್
ತತಮಾರ್ಗಂಗಳಿನೆಲ್ಲಿ ಮೇಲ್ವರಿವಳೋ ಸೌಗಂಧಸಂಭಾವಿತಳ್ ।
ವಿತತಂ ಮೇಣ್ ಘನಸಂಗಮಾಗಿರೆ ಮಹಾಕಾವ್ಯಂಗಳಾಕಾಶದೊಳ್
ಸುತರಾಸದ್ರುಚಿಯೆಂತು ತಾನೆ ತಿಳಿಗುಂ ಮಾಧುರ್ಯಮಿಂಬಾಗಿರಲ್. ॥

ಇಲ್ಲಿ "ಮಹಾಕವಿಗಳ ಯಾವ ಅಭಿರುಚಿಗಳ ನಡುವೆ 'ಸುಕುಮಾರ', 'ವಿಚಿತ್ರ', 'ಮಧ್ಯಮ' ಎಂಬ ಮೂರು ರೀತಿಗಳಿಂದಲೂ ವಾಣಿಯು ಚಮತ್ಕಾರವನ್ನು ಪಡೆಯುವುದೋ ಅಂತಹ ಗಂಭೀರಕಾವ್ಯನಿಷ್ಠವಾದ ಅಭಿರುಚಿಗಳು ಹೇಗೆ ತಾನೆ ಇತರ ಕಾವ್ಯಗಳಂತೆ ತಿಳಿಯಾಗಿರುವುದು ಶಕ್ಯ ?" ಮತ್ತು 'ಯಾವ ಸೂರ್ಯಪ್ರಭೆಗಳ ನಡುವೆ ತ್ರಿಪಥಗೆಯಾದ ದೇವನದಿಯು ಪ್ರವಹಿಸುವಳೋ ಅವು ಮೇಘಸಂಲಗ್ನವಾಗಿರುವಾಗ ಪ್ರಸನ್ನವಾಗಿರುವುದೆಂತು ?' ಎಂಬ ಈ ತಾತ್ಪರ್ಯಗಳೆರಡೂ ಅತ್ಯಂತ ದುರೂಹವಾಗಿವೆ.[125]

## (೩) ವ್ಯಾಹತ

ಜಗತಿ ಜಯಿನಸ್ತೇ ತೇ ಭಾವಾ ನವೇಂದುಕಲಾದಯಃ
ಪ್ರಕೃತಿಮಾಧುರಾಃ ಸಂತ್ಯೇವಾನ್ಯೇ ಮನೋ ಮದಯನ್ತಿ ಯೇ ।

---

ರುದ್ರಟನ ಈ ಎರಡು ಅರ್ಥದೋಷಗಳೂ (ಅಸಂಗತ ಮತ್ತು ಪುನರುಕ್ತ) ವಸ್ತುತಃ ಭಿನ್ನವಲ್ಲವೆಂದೂ, ಇವೆರಡನ್ನೂ ಪ್ರತ್ಯೇಕವಾಗಿ ಪರಿಗಣಿಸದೆ "ಅಪುಷ್ಟ"ವೆಂಬ ಒಂದೇ ದೋಷದಲ್ಲಿ ಸೇರಿಸುವುದು ಯೋಗ್ಯವೆಂದೂ ಮಮ್ಮಟನು ಇಲ್ಲಿ ನಿರ್ಣಯಿಸಿದ್ದಾನೆ.

[125] ಪ್ರಾಚೀನ ಕಾವ್ಯಸಮೀಕ್ಷೆಯ ಅಭಿರುಚಿಯಲ್ಲಿ ದುರ್ಜ್ಞೇಯಿತ್ವವು ದೋಷವೇ ಹೊರತು ಗುಣವಲ್ಲವೆಂಬ ಈ ಅಂಶ ಗಮನಾರ್ಹ. ಪ್ರಸ್ತುತ ಪದ್ಯದಲ್ಲಿ ಮಹಾಕಾವ್ಯಕಾರರ ಉದಾತ್ತ ಶೈಲಿಯನ್ನೂ ದೇವಗಂಗಾನದಿಯ ಪ್ರವಾಹವನ್ನೂ ಶ್ಲಿಷ್ಟೋಪಮೆಯಿಂದ ಸುಂದರವಾಗಿ ಹೋಲಿಸುವ ಕವಿಪ್ರಯತ್ನವಿದ್ದರೂ ಕೂಡ, ಅರ್ಥವು ಕ್ಲಿಷ್ಟವಾದ ಕಾರಣ ಅದು ದೋಷಕ್ಕೇ ಲಕ್ಷ್ಯವಾಗಿದೆ.

ಮಮ ತು ಯದಿಯಂ ಯಾತಾ ಲೋಕೇ ವಿಲೋಚನಚಂದ್ರಿಕಾ
ನಯನವಿಷಯಂ ಜನ್ಮನ್ಯೇಕಃ ಸ ಏವ ಮಹೋತ್ಸವಃ ‖[126]

ಜಗದೊಳ್ ಕೀರ್ತಿತಮಕ್ಕೆ ಚಂದ್ರಕಲೆಯೇ ಮುಂತಪ್ಪ ಸದ್ವಸ್ತುಗಳ್
ಮಗುಳ್ದಂ ನೈಜದ ಚೆಲ್ವಿನಿಂ ಸೆಳೆಯುವಾ ವಸ್ತೂತ್ಕರಂ ಬೇರೆಯುಂ ।
ಜಗದೊಳ್ ಚಂದ್ರಿಕೆಯೀಕೆಯೆನ್ನ ನಯನಕ್ಕೀಗಳ್ ಸಮಂತೊರ್ವಳೇ
ಮಿಗೆ ಕಂಡಳ್ ದೊರೆಕೊಂಡುದೀಗಳೆನಗಂ ಜನ್ಮಕ್ಕಿದೊಂದುತ್ಸವಂ ‖

ಇಲ್ಲಿ 'ಚಂದ್ರಕಲೆ' ಮುಂತಾದುವೆಲ್ಲ ಯಾರಿಗೆ ಹುಲ್ಲಿಗಿಂತ ಕಡೆಯೋ ಆತನೇ ಮುಂದೆ 'ಚಂದ್ರಿಕೆ'ಯೆಂದು ನಾಯಿಕೆಯನ್ನು ವರ್ಣಿಸುವಾಗ ಚಂದ್ರಿಕೆಗೆ ಉತ್ಕರ್ಷವನ್ನು ಆರೋಪಿಸುವುದು ವ್ಯಾಹತ[127] ಎಂದರೆ ಪೂರ್ವಾಪರ ವಿರುದ್ಧ.

### (೪) ಪುನರುಕ್ತ

ಕೃತಮನುಮತಂ[128] . . .

ಇಲ್ಲಿ ಮೊದಲು ಅರ್ಜುನನನ್ನು 'ಅರ್ಜುನ, ಅರ್ಜುನ' ಎಂದು ಸಂಬೋಧಿಸಿ, ಮತ್ತೆ 'ಭವದ್ಭಿಃ' (=ನಿಮ್ಮಿಂದ) ಎಂಬುದಾಗಿ ಆತನನ್ನೂ ಸೇರಿಸಿ ಹೇಳಿದನಂತರ, ತಿರುಗಿಯೂ 'ಸಭೀಮಕಿರೀಟಿನಾಮ್' ಎನ್ನುವಾಗ ಮತ್ತೆ ಅರ್ಜುನನ ಹೆಸರನ್ನು ಉಚ್ಚರಿಸಿರುವುದು ನಿಷ್ಪ್ರಯೋಜಕವಾಗಿರುವುದರಿಂದ ಪುನರುಕ್ತ. ಅಥವಾ ಇನ್ನೊಂದು ಉದಾಹರಣೆಯನ್ನು ನೋಡಿ—

ಅಸ್ತ್ರಜ್ವಾಲಾವಲೀಢಪ್ರತಿಬಲಜಲಧೇರನ್ತರಾರ್ವಾಯಮಾಣೇ
ಸೇನಾನಾಥೇ ಸ್ಥಿತೇಽಸ್ಮಿನ್ ಮಮ ಪಿತರಿ ಗುರೌ ಸರ್ವಧನ್ವೀಶ್ವರಾಣಾಮ್ ।
ಕರ್ಣಾಲಂ ಸಂಭ್ರಮೇಣ ವ್ರಜ ಕೃಪ ಸಮರಂ ಮುಂಚ ಹಾರ್ದಿಕ್ಯಶಂಕಾಂ
ತಾತೇ ಚಾಪದ್ವಿತೀಯೇ ವಹತಿ ರಣಧುರಂ ಕೋ ಭಯಸ್ಯಾವಕಾಶಃ ‖[129]

---

126 ಮಾಲತೀಮಾಧವ ನಾಟಕ, ಅಂಕ-೧.

127 ವ್ಯಾಹತಾರ್ಥದ ಕೆಳಗಿನ ಲಕ್ಷಣವನ್ನೂ ಹೋಲಿಸಿ—

ಉತ್ಕರ್ಷೋ ವ್ಯಾಪಕರ್ಷೋ ವಾ ಪ್ರಾಗ್ಯಸ್ಯೈವ ನಿಗದ್ಯತೇ ।
ತಸ್ಯೈವಾ ತದನ್ಯಶ್ಚೇದ್ ವ್ಯಾಹತೋಽರ್ಥಸ್ತದಾ ಭವೇತ್ ‖ (ಕಾವ್ಯಪ್ರದೀಪ)

128 ವೇಣೀಸಂಹಾರದ ಈ ಪದ್ಯ ಮತ್ತು ಇದರ ಅನುವಾದಗಳು ಆಗಲೇ ನಾಲ್ಕನೆಯ ಉಲ್ಲಾಸದಲ್ಲಿ ಬಂದಿವೆ. ಕನ್ನಡ ಕಾವ್ಯಪ್ರಕಾಶ, ಪುಟ ೯೧.

129 ವೇಣೀಸಂಹಾರ, ಅಂಕ-೩.

ಘನಶಸ್ತ್ರಜ್ವಾಲೆಯೆತ್ತಂ ಬಳಸಿರೆ ರಿಪುಸೇನಾಬ್ಧಿ ಗೌರ್ವಾನಲಂ ಮೇಣ್
ಧನುವಂ ತಾಳ್ದಿಲ್ಲರೋಜಂ ಪಡೆಗಧಿಪತಿಯಾಗೊಪ್ಪಿರಲ್ ನನ್ನ ತಾತಂ |
ಇನಿತೇಂ ಕರ್ಣಾ ಬಿಗುರ್ ಯುದ್ಧಕೆ ನಡೆ ಕೃಪ ಹಾರ್ದಿಕ್ಯ ಮಾಣ್ ಭೀತಿಯುಂ ಮ
ಜ್ಜನಕಂ ಬಿಲ್ಗೊಂಡು ಭಾರಂದಳೆದಿರೆ ರಣದೊಳ್ ಭೀತಿಗಿಂತೇಂ ನಿಮಿತ್ತಂ ‖ [130]

ಇಲ್ಲಿ ನಾಲ್ಕನೆಯ ಪಾದದಲ್ಲಿ ಬಂದಿರುವುದೆಲ್ಲ ಪುನರುಕ್ತವೇ.

### (೫) ದುಷ್ಕ್ರಮ

ಭೂಪಾಲರತ್ನನಿರ್ದೈನ್ಯಪ್ರದಾನಪ್ರಥಿತೋತ್ಸವಃ |
ವಿಶ್ರಾಣಯ ತುರಂಗಂ ಮೇ ಮಾತಂಗಂ ವಾ ಮದಾಲಸಮ್ ‖

ನರಪತಿರತ್ನನೆ ಕೃಪಣತೆ
ಗಿರವಿಲ್ಲದೆ ದಾನಗೈವ ಕೊಡುಗೈದೊರೆಯೇ |
ತುರಗವ ನೀನೆನಗೀವುದು
ಕರಿಯುಂ ಮೇಣ್ ಮತ್ತಗಮನವೊಪ್ಪಲ್ಕಲಸಂ ‖

ಇಲ್ಲಿ ಮದಕರಿಯನ್ನು ಕುದುರೆಗಿಂತ ಮೊದಲು ಹೇಳುವುದು ಯೋಗ್ಯ. ಈಗಿರುವಂತೆ ಕ್ರಮ ತಪ್ಪಿದೆ.

### (೬) ಗ್ರಾಮ್ಯ

ಸ್ವಪಿತಿ ಯಾವದಯಂ ನಿಕಟೇ ಜನಃ
ಸ್ವಪಿಮಿ ತಾವದಹಂ ಕಿಮಪೈತಿ ತೇ |
ತದಯಿ ಸಾಂಪ್ರತಮಾಹರ ಕೂರ್ಪರಂ
ತ್ವಂತಮೂರುಮುದಂಚಯ ಕುಂಚಿತಮ್ ‖

ಜನಮಿದು ಕೆಲದೊಳ್ ಮಲಗಿ-
ರ್ಪಿನಮಾನುಂ ಮಲಗಿಕೊಳ್ವೆನಳಿವುದು ನಿನತೇಂ |
ವನಿತೆಯೆ ತೆಗೆ ಕೈಮುರಿಯುಂ
ವಿನಿಹಿತಮಾಗಿರ್ಪ ತೊಡೆಯನಗಲಿಸು ಭರದಿಂ ‖

ಹೀಗೆ ಮಾತನಾಡುವವನು ಅಸಂಸ್ಕೃತನೇ ಸರಿ.[131]

---

130 ಭಾಷಾಂತರ ಮೈಸೂರು ಸೀತಾರಾಮಶಾಸ್ತ್ರಿಗಳದು.

131 ಈ ದೋಷದ ವಿವೇಚನೆ ರುದ್ರಟನಲ್ಲಿ ಮತ್ತೂ ವಿಸ್ತಾರವಾಗಿ ಬಂದಿದೆ. ನಡೆ, ಆಕಾರ, ವೇಷ, ನುಡಿಗಳಲ್ಲಿ ಕಾಣಬಹುದಾದ ಎಲ್ಲ ಬಗೆಯ ಅನೌಚಿತ್ಯಗಳೂ ' ಗ್ರಾಮ್ಯತ್ವ 'ದಲ್ಲಿಯೇ

### (೭) ಸಂದಿಗ್ಧ

ಮಾತ್ಸರ್ಯಮುತ್ಸಾರ್ಯ . . .[132]

ಇಲ್ಲಿ ಸಂದರ್ಭಸೂಚನೆಯೇ ಇಲ್ಲದ ಕಾರಣ[133] ಕವಿವಿವಕ್ಷಿತವಾದುದು ಶಾಂತವೋ ಅಥವಾ ಶೃಂಗಾರವೋ ಎಂಬುದು ಸಂದಿಗ್ಧವಾಗಿಯೇ ನಿಲ್ಲುತ್ತದೆ. ವಕ್ತಾರಸು ವಿರಕ್ತ ಇಲ್ಲವೆ ಶೃಂಗಾರಿ ಎಂದು ಸ್ಪಷ್ಟವಾಗಿ ತಿಳಿಸಿದ್ದರೆ ಮಾತ್ರ ನಿರ್ಣಯವಾಗುತ್ತಿದ್ದಿತು.

### (೮) ನಿರ್ಹೇತುತ್ವ

ಗೃಹೀತಂ ಯೇನಾಸೀಃ ಪರಿಭವಭಯಾನ್ನೋಚಿತಮಪಿ
ಪ್ರಭಾವಾದ್ಯಸ್ಯಾಭೂನ್ನ ಖಲು ತವ ಕಶ್ಚಿನ್ನ ವಿಷಯಃ।
ಪರಿತ್ಯಕ್ತಂ ತೇನ ತ್ವಮಸಿ ಸುತಶೋಕಾನ್ನ ತು ಭಯಾದ್
ವಿಮೋಕ್ಷ್ಯೇ ಶಸ್ತ್ರ ತ್ವಾಮಹಮಪಿ ಯತಃ ಸ್ವಸ್ತಿ ಭವತೇ ‖[134]

ಎಲೆ ಶಸ್ತ್ರಮೆ!

ಪರಿಭವಕಂಜಿ ನಿನ್ನ ಪಿಡಿದಿರ್ದನದಾವನನರ್ಹಮಾದೊಡಂ
ಧರೆಯೊಳಲಕ್ಷ್ಯಮೊಂದುಮಿರದೋ ನಿನಗಾವನದೊಂದು ಶಕ್ತಿಯಿಂ।

ಸೇರುತ್ತವೆ. ದೇಶ, ಕಾಲ, ಜಾತಿ, ವಿದ್ಯೆ, ಸಂಪತ್ತು, ವಯಸ್ಸು, ಇವುಗಳಿಗೆ ಅನುಗುಣವಾದ ವೃತ್ತಾಂತಗಳೂ ಹಾಗೆಯೇ 'ಗ್ರಾಮ್ಯ'. ಕನ್ಯೆಯರಲ್ಲಿ ಪ್ರಾಗಲ್ಭ್ಯ, ವೇಶ್ಯೆಯರಲ್ಲಿ ಮುಗ್ಧತ್ವ, ಹಳ್ಳಿಗರಲ್ಲಿ ವೈದಗ್ಧ್ಯ, ಕುಲಜರಲ್ಲಿ ಧೂರ್ತತೆ, ಮುಂತಾದ ಆರೋಪಣೆಗಳೆಲ್ಲ ಗ್ರಾಮ್ಯವೇ, ಹೋಲಿಸಿ—

ಗ್ರಾಮ್ಯತ್ವಮನೌಚಿತ್ಯಂ ವ್ಯವಹಾರಾಕಾರವೇಷವಚನಾನಾಮ್।
ದೇಶಕುಲಜಾತಿವಿದ್ಯಾವಿತ್ತವಯಃ ಸ್ಥಾನಪಾತ್ರೇಷು‖
ಪ್ರಾಗಲ್ಭ್ಯಂ ಕನ್ಯಾನಾಮವ್ಯಾಜೋ ಮುಗ್ಧತಾ ಚ ವೇಶ್ಯಾನಾಮ್।
ವೈದಗ್ಧ್ಯಂ ಗ್ರಾಮ್ಯಾಣಾಂ ಕುಲಜಾನಾಂ ಧೌರ್ತ್ಯಮಿತ್ಯಾದಿ‖
ಏತದ್ವಿಜ್ಞಾಯ ಬುಧೈಃ ಪರಿಹರ್ತವ್ಯಂ ಮಹೀಯಸೋ ಯತ್ನಾತ್।
ನ ಹಿ ಸಮ್ಯಗ್ ವಿಜ್ಞಾತುಂ ಶಕ್ಯಮುದಾಹರಣಮಾತ್ರೇಣ‖

(ಕಾವ್ಯಾಲಂಕಾರ, ೧೧, ೯-೧೧)

[132] ಭರ್ತೃಹರಿಶತಕದ ಈ ಉದಾಹರಣೆಯೂ ಇದರ ಅನುವಾದವೂ ಆಗಲೇ ಐದನೆಯ ಉಲ್ಲಾಸದಲ್ಲಿ ಬಂದಿವೆ; ಕನ್ನಡ ಕಾವ್ಯಪ್ರಕಾಶ, ಪುಟ ೧೫೬.

[133] ಮುಕ್ತಕಗಳ ಸಂಗ್ರಹಗಳೆನಿಸುವ 'ಶತಕ'ಗಳಲ್ಲಿ ಸಂದರ್ಭಸೂಚನೆಗೆಡೆಯೇ ಇಲ್ಲ.

[134] ವೇಣೀಸಂಹಾರ, ಅಂಕ-೩.

ಉರುಸುತಶೋಕದಿಂದುಱಿದನಾ ಗುರು ನಿನ್ನ ಸಧೈರ್ಯದಿಂದಮು
ಳ್ತೆಱಗುತೆ ನಿನ್ನನಾಸುಮುಱಿದೇನಿದಱಿಂ ನಿನಗಕ್ಕೆ ಮಂಗಳಂ ‖[135]

ಇಲ್ಲಿ ವರ್ಣಿತವಾಗಿರುವ ಅಶ್ವತ್ಥಾಮನ ಶಸ್ತ್ರಪರಿತ್ಯಾಗಕ್ಕೆ ಸರಿಯಾದ ಕಾರಣವೊಂದೂ ಉಕ್ತವಾಗಿಲ್ಲ.

## (೯) ಪ್ರಸಿದ್ಧಿ ವಿರುದ್ಧ

ಇದಂ ತೇ ಕೇನೋಕ್ತಂ ಕಥಯ ಕಮಲಾತಂಕವದನೇ
ಯದೇತಸ್ಮಿನ್ ಹೇಮ್ನಃ ಕಟಕಮಿತಿ ಧತ್ಸೇ ಖಲು ಧಿಯಮ್ ।
ಇದಂ ತದ್ ದುಃಸಾಧಾಕ್ರಮಣಪರಮಾಸ್ತ್ರಂ ಸ್ಮೃತಿಭುವಾ
ತವ ಪ್ರೀತ್ಯಾ ಚಕ್ರಂ ಕರಕಮಲಮೂಲೇ ವಿನಿಹಿತಮ್ ‖

ಇದು ತಾಂ ಹೇಮದೆ ನಿರ್ಮಿತಂ ಕಟಕಮೆಂದಾರಯ್ಪೆ ಚಂದ್ರಾನನೇ
ಪದೆಪಿಂದಿಂತಿದು ಹೇಮಮೆಂದು ನಿನಗಂ ಪೇೞಿರ್ಪರಾರ್ ಕಾಣೆನಾಂ ।
ಇದು ಮೇಣಾಕ್ರಮಿಸಲ್ಕೆ ಬಾರದತುಲಂ ಮಾಶಸ್ತ್ರಮೇ ನಿಕ್ಕುವಂ
ಪದೆಪಿಂ ಮನ್ಮಥದತ್ತಮಪ್ಪುದು ವಲಂ ಚಕ್ರಂ ಕರೋದ್ದೇಶದೊಳ್ ‖

ಮನ್ಮಥನಿಗೆ ಚಕ್ರವಿರುವುದು ಲೋಕದಲ್ಲಿ ಪ್ರಸಿದ್ಧವಲ್ಲ. ಅಥವಾ ಇನ್ನೊಂದು ಉದಾಹರಣೆಯನ್ನು ನೋಡಿ—

ಉಪಪರಿಸರಂ ಗೋದಾವರ್ಯಾಃ ಪರಿತ್ಯಜತಾಧ್ವಗಾಃ
ಸರಣಿಮಪರೋ ಮಾರ್ಗಸ್ತಾವದ್ ಭವದ್ಭಿರವೇಕ್ಷ್ಯತಾಮ್ ।
ಇಹ ಹಿ ವಿಹಿತೋ ರಕ್ತಾಶೋಕಃ ಕಯಾಪಿ ಹತಾಶಯಾ
ಚರಣನಲಿನನ್ಯಾಸೋದಂಚನ್ನವಾಂಕುರಕಂಚುಕಃ ‖

ಬಿಡಿ ಗೋದಾವರಿಯೊತ್ತಿನೀ ಸ್ಥಳಮನಿನ್ ಪಾಂಥರ್ಕಳೇ ಬೇಗದಿಂ
ದೆಡೆಯಿನ್ನೊಂದನೆ ನೋಡುತುಂ ಪಯಣಮಂ ಕೈಕೊಳ್ವುದೇ ಲೇಸೆನ-।
ಲ್ಕಡಿಯಿಂದೀಗಳಶೋಕಮನ್ನೊದೆಯುತುಂ ಪೆಣ್ಣೊರ್ವಳಾಶಂಕೆಯಿಂ
ತೊಡಿಸಿರ್ಪಳ್ ಪೊಸ ಮೇಲುದಂ ತಳಿರ್ಗಳಿಂ ತಾನಾ ಲತಾಕಾಂತೆಗಂ ‖

---

135 ಭಾಷಾಂತರ ಮೈಸೂರು ಸೀತಾರಾಮಶಾಸ್ತ್ರಿಗಳದು.

ವನಿತೆಯ ಪಾದಾಘಾತದಿಂದ ಪುಷ್ಪೋದ್ಗಮವಾಗುವುದೆಂದು ಕವಿಸಮಯ ವಿರುವುದೇ ಹೊರತು ಇಲ್ಲಿ ವರ್ಣಿಸಿರುವಂತೆ ಅಂಕುರೋದ್ಗಮವಾಗವುದೆಂದಲ್ಲ. ಮತ್ತೂ ಒಂದು ಉದಾಹರಣೆ:—

ಸುಸಿತವಸನಾಲಂಕಾರಾಯಂ ಕದಾಚನ ಕೌಮುದೀ
ಮಹಸಿ ಸುದೃಶಿ ಸ್ವೈರಂ ಯಾಂತ್ಯಾಂ ಗತೋಽಸ್ತಮಭೂದ್ ವಿಧುಃ।
ತದನು ಭವತಃ ಕೀರ್ತಿಃ ಕೇನಾಪ್ಯಗೀಯುತ ಯೇನ ಸಾ
ಪ್ರಿಯಗೃಹಮಗಾನ್ಮುಕ್ತಾ ಶಂಕಾ ಕ್ವ ನಾಸಿ ಶುಭಪ್ರದಃ ॥

ಚೆನ್ನೆಯದೊರ್ವಳುಟ್ಟು ಸಿತವಸ್ತ್ರಮನಂದು ವಿಭೂಷಣಂಗಳಿಂ
ಜೊನ್ನದ ದೀಪ್ತಿಯೊಳ್ ಬರುತಿರಲ್ಕವಸುಂ ಶಶಿಯಸ್ತಮೈದಿದಂ।
ಅನ್ನೆವರಂ ಸಮಂತು ನುತಿಸಲ್ ತವ ಕೀರ್ತಿಯನಾರೊ ಪೋದಳಾ
ಕನ್ನೆಯೆ ಭೀತಿಯೋಡೆ ಪತಿಗೇಹಕೆನಲ್ ಶುಭದಂ ಗಡಲ್ತೆ ನೀಂ ॥

ಅಮೂರ್ತ (=Abstract) ವಾದ ಕೀರ್ತಿ ಬೆಳುದಿಂಗಳಂತೆ ಬೆಳಗುವುದೆಂದು ಇಲ್ಲಿ ವರ್ಣಿಸಲಾಗಿದೆ. ಇದು ಲೋಕಪ್ರಸಿದ್ಧಿಗೆ ವಿರುದ್ಧವಾಗಿದ್ದರೂ ಕವಿ ಸಮಯಕ್ಕೆ[136] ವಿರುದ್ಧವಾಗಿಲ್ಲದ ಕಾರಣ ದೋಷವಲ್ಲ.

### (೧೦) ವಿದ್ಯಾವಿರುದ್ಧ

ಸದಾ ಸ್ನಾತ್ವಾ ನಿಶೀಥಿನ್ಯಾಂ ಸಕಲಂ ವಾಸರಂ ಬುಧಃ।
ನಾನಾವಿಧಾನಿ ಶಾಸ್ತ್ರಾಣಿ ವ್ಯಾಚಷ್ಟೇ ಚ ಶೃಣೋತಿ ಚ ॥

ಇರುಳೊಳ್ ಸ್ನಾನಂಗೈವಂ
ವರವಿಬುಧಂ ದಿವಸಮೆಲ್ಲಮಂತೆಯೆ ಪದೆಪಿಂ।
ಪರಿಪರಿ ಶಾಸ್ತ್ರವಿಚಾರದೊ
ಳಿರುವಂ ವ್ಯಾಖ್ಯಾನಪಠನ ಮುಂತಪ್ಪುದರೊಳ್ ॥

ಗ್ರಹಣ ಮುಂತಾದ ನಿಮಿತ್ತವಿಲ್ಲದಾಗ ರಾತ್ರೆ ಸ್ನಾನಮಾಡುವುದು ಧರ್ಮ ಶಾಸ್ತ್ರಕ್ಕೆ ವಿರುದ್ಧವಾದುದರಿಂದ ಇಲ್ಲಿ ದೋಷ ಸ್ಪಷ್ಟ.

---

[136] ಕವಿ ಸಮಯದ ವಿವರವಾದ ನಿರೂಪಣೆ ಸಂಸ್ಕೃತದಲ್ಲಿ ರಾಜಶೇಖರನ 'ಕಾವ್ಯಮೀಮಾಂಸೆ'ಯಲ್ಲೂ ಕನ್ನಡದಲ್ಲಿ ನಾಗವರ್ಮನ 'ಕಾವ್ಯಾವಲೋಕನ'ದಲ್ಲೂ ಬಂದಿದೆ. ಮಮ್ಮಟನು ಅದನ್ನಿಲ್ಲಿ ವಿಸ್ತರಿಸಿಲ್ಲ.

ಅನನ್ಯಸದೃಶಂ ಯಸ್ಯ ಬಲಂ ಬಾಹ್ವೋಃ ಸಮೀಕ್ಷ್ಯತೇ ।
ಷಾಡ್ಗುಣ್ಯಾನುಸೃತಿಸ್ತಸ್ಯ ಸತ್ಯಂ ಸಾ ನಿಷ್ಪ್ರಯೋಜನಾ ॥

ದೊರೆಕೊಂಡಾ ದೋರ್ವಲದಿಂ
ಪರರಿಂದಗ್ಗಳಿಕೆಯಾಂತ ನೃಪತಿಯುಮವನುಂ ।
ಎರಚಿಸೆ ತಾಂ ಷಾಡ್ಗುಣ್ಯಾಂ
ತರಕೃತಿಯಂ ವ್ಯರ್ಥಮಲ್ತೆ ಕೃತಿಯದು ಬುವಿಯೊಳ್ ॥

ಬಾಹುಬಲವಿದ್ದಮೇಲೆ ಷಾಡ್ಗುಣ್ಯದ[137] ನೆರವು ಅನಗತ್ಯವೆಂಬುದು ಅರ್ಥಶಾಸ್ತ್ರಕ್ಕೆ ವಿರುದ್ಧ.

ವಿಧಾಯ ದೂರೇ ಕೇಯೂರಮನಂಗಾಂಗಣಮಂಗನಾ ।
ಬಭಾರ ಕಾಂತೇನ ಕೃತಾಂ ಕರಜೋಲ್ಲೇಖಮಾಲಿಕಾಮ್ ॥

ಸ್ಮರನೋಲಗಸಾಲೆಯೆನಲ್
ತರುಣಿಯವಳ್ ತೋಳ ಬಂದಿಯಂ ಕಳೆದಿಡುತುಂ ।
ಧರಿಸಿರ್ದಳ್ ವರನಿತ್ತಾ
ಕರಜೋಲ್ಲೇಖಂಗಳೋಳಿಯಂ ಮುದದಿಂದಂ ॥

ತೋಳ ಮೇಲೆ ನಖಕ್ಷತವನ್ನು ಕಾಮಶಾಸ್ತ್ರ ವಿಧಿಸಿಲ್ಲವಾದ್ದರಿಂದ[138] ಇದು ಕಾಮಶಾಸ್ತ್ರವಿರುದ್ಧ.

ಅಷ್ಟಾಂಗಯೋಗ ಪರಿಶೀಲನಕೀಲನೇನ
 ದುಃಸಾಧ ಸಿದ್ಧಿಸವಿಧಂ ವಿದಧದ್ ವಿದೂರೇ ।
ಆಸಾದಯನ್ನಭಿಮತಾಮಧುನಾ ವಿವೇಕ-
 ಖ್ಯಾತಿಂ ಸಮಾಧಿಧನಮೌಲಿಮಣಿರ್ವಿಮುಕ್ತಃ ॥

ಅಷ್ಟಾಂಗಯೋಗ ಪರಿಶೀಲನ ನಿತ್ಯಸತ್ತ್ರಂ
ದುಃಸಾಧ್ಯ ಸಿದ್ಧಿಜಯಮಮಂ ಬಿಸುಡುತ್ತುಮತ್ತಲ್ ।

---

137 'ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯ' ಈ ಆರೂ ಅರ್ಥಶಾಸ್ತ್ರದಲ್ಲಿ ಉಕ್ತವಾದ ರಾಜನೀತಿಗಳು. ಇವಕ್ಕೇ 'ಷಾಡ್ಗುಣ್ಯ'ವೆಂದೂ ಹೆಸರು.

138 ಹೋಲಿಸಿ—'ನಖಕ್ಷತಸ್ಯ ಸ್ಥಾನಾನಿ ಕಕ್ಷೌ ವಕ್ಷಸ್ತಥಾ ಗಲಃ ।
ಪಾರ್ಶ್ವೌ ಜಘನಮೂರೂ ಚ ಸ್ತನಗಂಡಲಲಾಟಿಕಾಃ ॥'—ವಾತ್ಸ್ಯಾಯನ.

ಕೈಸಾರಲಿಷ್ಟ ಸುವಿವೇಕ ವಿಶಾಲಭಾವಂ
ತಾಂ ಮುಕ್ತ್ರೈಸಲೆ ಸಮಾಧಿಧನಂ ಮಹಾತ್ಮಂ ॥

ಮೊದಲು ವಿವೇಕೋದಯ, ಅನಂತರ ಸವಿಕಲ್ಪಕಸಮಾಧಿ, ಆಮೇಲೆ ನಿರ್ವಿಕಲ್ಪಕ ಸಮಾಧಿ, ಕಡೆಗೆ ಮುಕ್ತಿಯೆಂಬುದು ಯೋಗಶಾಸ್ತ್ರಪ್ರಕ್ರಿಯೆ. ವಿವೇಕೋದಯ ವಾದೊಡನೆ ಮುಕ್ತಿಯಾಗಿಬಿಡುವುದೆಂದಲ್ಲ. ಆದ್ದರಿಂದ ಇದು ಯೋಗಶಾಸ್ತ್ರವಿರುದ್ಧ. ಹೀಗೆಯೇ ಉಳಿದ ಶಾಸ್ತ್ರಗಳ ವಿರೋಧವನ್ನೂ ಊಹಿಸಿಕೊಳ್ಳಬಹುದು.[139]

### (೧೧) ಅನವೀಕೃತ[140]

ಪ್ರಾಪ್ತಾಃ ಶ್ರಿಯಃ ಸಕಲಕಾಮದುಘಾಸ್ತತಃ ಕಿಂ
ದತ್ತಂ ಪದಂ ಶಿರಸಿ ವಿದ್ವಿಷತಾಂ ತತಃ ಕಿಂ।
ಸಂತರ್ಪಿತಾಃ ಪ್ರಣಯಿನೋ ವಿಭವೈಸ್ತತಃ ಕಿಂ
ಕಲ್ಪಂ ಸ್ಥಿತಂ ತನುಭೃತಾಂ ತನುಭಿಸ್ತತಃ ಕಿಂ ॥[141]

ಎಲ್ಲ ಬಯಕೆಯನೀವ ಸಿರಿಗಳ ದೊರೆತವೆಂದೊಡನಪ್ಪುದೇಂ
ಎಲ್ಲ ವೈರಿಶಿರಂಗಳೊಳ್ ಪದವಿಟ್ಟೊಡಂ ಮಗುಳ್ದಪ್ಪುದೇಂ।
ಎಲ್ಲರಂ ಗಡ ನೆಂಟರಂ ಸಿರಿಯಿತ್ತು ಮೆಚ್ಚಿಸಲಪ್ಪುದೇಂ
ಎಲ್ಲ ಕಲ್ಪದ ಕಾಲದಾ ಪರ್ಯಂತ ಜೀವಿಸಲಪ್ಪುದೇಂ ॥

ಇಲ್ಲಿ ‘ತತಃ ಕಿಂ’=‘ಅದುವೇನು’ ಅಥವಾ ‘ಮುಂದೇನು’ ಎಂಬ ಉಕ್ತಿಯು ಒಂದೇ ರೂಪದಲ್ಲಿ ಮತ್ತೆ ಮತ್ತೆ ಬಂದಿರುವುದು ‘ಅನವೀಕೃತ’ ದೋಷ. ನವೀಕೃತ ವಾಗಿ ದೋಷ ತಪ್ಪಿರುವುದಕ್ಕೊಂದು ಉದಾಹರಣೆ:—

---

[139] ಪದ್ಯದಲ್ಲಿ ಬರುವ ಅಷ್ಟಸಿದ್ಧಿಗಳವು—
‘ಅಣಿಮಾ ಮಹಿಮಾ ಚೈವ ಗರಿಮಾ ಲಘಿಮಾ ತಥಾ।
ಪ್ರಾಪ್ತಿಃ ಪ್ರಾಕಾಮ್ಯಮೀಶತ್ವಂ ವಶಿತ್ವಂ ಚಾಷ್ಟಸಿದ್ಧಯಃ॥’ —ಅಮರಕೋಶ.
ಸವಿಕಲ್ಪಕ ಅಥವಾ ಸಂಪ್ರಜ್ಞಾತಸಮಾಧಿಯ ಲಕ್ಷಣ ಹೀಗೆ—
‘ಬ್ರಹ್ಮಾಕಾರಮನೋವೃತ್ತಿಪ್ರವಾಹೋಽಹಂಕೃತಿಂ ವಿನಾ।
ಸಂಪ್ರಜ್ಞಾತಸಮಾಧಿಃ ಸ್ಯಾತ್ ಧ್ಯಾನಾಭ್ಯಾಸಪ್ರಕರ್ಷತಃ॥’
—ವಿದ್ಯಾರಣ್ಯರ ಜೀವನ್ಮುಕ್ತಿ ವಿವೇಕ.

[140] ಸಿಪ್ಪನೇ ಸಣವಂತೆ ಹೇಳಿದ್ದನ್ನೇ ಹೇಳುತ್ತಿರುವುದೆಂದು ತಾತ್ಪರ್ಯ.

[141] ಭರ್ತೃಹರಿಯ ವೈರಾಗ್ಯಶತಕದಿಂದ ಉದಾಹೃತ.

ಯದಿ ದಹತ್ಯನಲೋऽತ್ರ ಕಿಮದ್ಭುತಂ
ಯದಿ ಚ ಗೌರವಮದ್ರಿಷು ಕಿಂ ತತಃ।
ಲವಣಮಂಬು ಸದೈವ ಮಹೋದಧೇಃ
ಪ್ರಕೃತಿರೇವ ಸತಾಮವಿಷಾದಿತಾ ॥

ಉರಿಯುರಿವೊಡೆ ಚಿತ್ರಮದೇಂ
ಗಿರಿಗಳ್ ಗುರುವಾಗಲೇಸು ವಿಸ್ಮಯವಿಷಯಂ।
ಕರಮುಪ್ಪೇ ಮುನ್ನೀರ್ ಸತ್-
ಪುರುಷರ್ಕಳ ಪ್ರಕೃತಿಯಲ್ತೆ ಮೇಣವಿಷಾದಂ ॥

**(೧೨) ಸನಿಯಮಪರಿವೃತ್ತ**

ಯತ್ರಾನುಲ್ಲಿಖಿತಾರ್ಥಮೇವ ನಿಖಿಲಂ ನಿರ್ಮಾಣಮೇತದ್ ವಿಧೇ-
ರುತ್ಕರ್ಷಪ್ರತಿಯೋಗಿಕಲ್ಪನಮಪಿ ನ್ಯಕ್ಕಾರಕೋಟಿಃ ಪರಾ।
ಯಾತಾಃ ಪ್ರಾಣಭೃತಾಂ ಮನೋರಥಗತೀರುಲ್ಲಂಘ್ಯ ಯತ್ಸಂಪದ-
ಸ್ತಸ್ಯಾಭಾಸಮಣೀಕೃತಾಶ್ಮಸು ಮಣೇರಶ್ಮತ್ವಮೇವೋಚಿತಮ್ ॥

ಆವುದರಲ್ಲಿ ಧಾತೃವಿಹಿತಂ ಜಗಮೇ ಗತಸಾರಮಕ್ಕುಮೋ
ಆವುದಕೀವುದೇ ಉಪಮೆಯಂ ಗಡ ಧಿಕ್ಕೃತಿಯೆಂದು ತೋರ್ಗುಮೋ।
ಆವುದರಿಂದೆ ಬರ್ಪ ಸಿರಿಯುಂ ಮನದಾಸೆಗಳಿಂದಮಗ್ಗಳಂ
ಆವುದು ಸೋಂಕೆ ಕಲ್ ಸುಮಣಿಯಾ ಮಣಿಯಂ ವಿಹಿತಂ ಕಲೆಂಬುದೇ ॥

(ಮೂಲಶ್ಲೋಕದಲ್ಲಿ ಚಿಂತಾಮಣಿಯ ಪ್ರಶಂಸೆ ಕವಿಗೆ ವಿವಕ್ಷಿತ. ಚಿಂತಾ ಮಣಿಗೆ ಅನೇಕ ವಿಶೇಷಣಗಳನ್ನು ಕೊಟ್ಟು ಅದರ ಮುಂದೆ ರತ್ನಗಳು ಕೂಡ ಕಲ್ಲು ಗಳಂತೆಯೇ ಎಂಬುದನ್ನು ತೋರಿಸಲು ಹೊರಟಿದ್ದಾನೆ. ಆದರೆ ಕಡೆಯ ಸಾಲಿನಲ್ಲಿ 'ತಸ್ಯಾಭಾಸ ಮಣೀಕೃತಾಶ್ಮಸು' . . . ಎಂದಾಗ ಉತ್ಕೃಷ್ಟವಾದ ಚಿಂತಾಮಣಿಗೂ ಕ್ಷುದ್ರವಾದ ಕಲ್ಲುಗಳಿಗೂ ಒಂದು ಬಗೆಯ ಸಾಮ್ಯವೇ ಬರುತ್ತದೆ; ಇತರ ಮಣಿ ಗಳಿಗೂ ಅದಕ್ಕೂ ಇರುವ ತಾರತಮ್ಯವೆದ್ದು ಕಾಣುವುದಿಲ್ಲ—ಚಿಂತಾಮಣಿಯ ವೈಶಿಷ್ಟ್ಯವನ್ನು ಪ್ರತ್ಯೇಕವಾಗಿ ನಿಯಮಿತಗೊಳಿಸದೆ ಇರುವುದರಿಂದ.) ನಿಯಮಿ

ಗೊಳಿಸಬೇಕಾದರೆ ಆ ಸಾಲನ್ನು 'ಛಾಯಾಮಾತ್ರ ಮಣೀಕೃತಾಶ್ಮಸು ಮಣೀಸ್ತ್ರೆ ಸ್ವಾಶ್ಮತ್ರೈವೋಚಿತಾ' ಎಂದು ತಿದ್ದಿಕೊಳ್ಳಬೇಕು.[142]

## (೧೩) ಅನಿಯಮಪರಿವೃತ್ತ

ವಕ್ತ್ರಾಂಭೋಜೇ ಸರಸ್ವತ್ಯಧಿವಸತಿ ಸದಾ ಶೋಣ ಏವಾಧರಸ್ತೇ
ಬಾಹುಃ ಕಾಕುತ್ಸ್ಥವೀರ್ಯಸ್ಮೃತಿಕರಣಪಟುರ್ದಕ್ಷಿಣಸ್ತೇ ಸಮುದ್ರಃ।
ವಾಹಿನ್ಯಃ ಪಾರ್ಶ್ವಮೇತಾಃ ಕ್ಷಣಮಪಿ ಭವತೋ ನೈವ ಮುಂಚಂತ್ಯಭೀಕ್ಷ್ಣಂ
ಸ್ವಚ್ಛೇಽನ್ತರ್ಮಾನಸೇಽಸ್ಮಿನ್ ಕಥಮವನಿಪತೇ ತೇಽಮ್ಬುಪಾನಾಭಿಲಾಷಃ ॥

ವದನಾಂಭೋಜಾತಗೇಹಳ್ ಸರಸತಿಯೆಸಲೀ ಶೋಣಮೇ ತಾವಕೋಷ್ಠಂ
ಬಲದೊಳ್ ಕಾಕುತ್ಸ್ಥವೀರ್ಯಸ್ಮೃತಿಕರಮಿದುತೋಳ್ ದಕ್ಷಿಣಾಶಾಸಮುದ್ರಂ।
ಕೆಲಮಂ ಮೇಣೇಗಳುಂ ವಾಹಿನಿಯಿವು ಬಿಡವೈ ಮಾನಸಂ ನಿರ್ಮಲಂ ತಾಂ
ಸಲವಿಂ ನಿನ್ನಂತರಾಳಸ್ಥಿತಮೆನೆ ನೃಪತೀ ನೀರಸೆಂತಾಡಿಪಮ್ ನೀಂ ॥

ಇಲ್ಲಿ ನಿನ್ನ ಅಧರ 'ಶೋಣವೇ' ಎಂದು ನಿಯಮಿಸಿ ಹೇಳುವುದು ದೋಷ ಉದ್ದಿಷ್ಟಾರ್ಥವು ಅನಿಯತವೇ ಹೊರತು ನಿಯತವಲ್ಲ.[143]

## (೧೪) ವಿಶೇಷಪರಿವೃತ್ತ

ಶ್ಯಾಮಾಂ ಶ್ಯಾಮಲಿಮಾನಮಾನಯತ ಭೋಃ ಸಾಂದ್ರೈರ್ಮಷೀ
ಕೂರ್ಚಕೈಃ
ಮಂತ್ರಂ ತಂತ್ರಮಥ ಪ್ರಯುಜ್ಯ ಹರತ ಶ್ವೇತೋತ್ಪಲಾನಾಂ
ಶ್ರಿಯಮ್ ।

---

[142] 'ಆದರಿಂದ ಕಲ್ಲೂ ಮಣಿಯಾಗುತ್ತಿರುವಾಗ, ಮಣಿಯನ್ನು ಕಲ್ಲೆಂದು ಹೇಳಿದರೆ ಮಾತ್ರ ಯೋಗ್ಯವೆಂಬ ಪ್ರಯೋಗದಲ್ಲಿ 'ಮಣಿ'ಯೆಂಬ ಶಬ್ದವು ಮೊದಲು 'ರತ್ನ'ವೆಂಬರ್ಥ ಕೊಡುತ್ತಿರುವುದರಿಂದ, ಎರಡನೆಯ ಸಲವೂ ರತ್ನವೆಂಬ ಅರ್ಥವನ್ನೇ ಕೊಡುವುದೆಂಬ ಭ್ರಾಂತಿ ಸಹಜವಾಗಿ ಬರುತ್ತದೆ. ಇಲ್ಲಿ ಕವಿಗೆ ಎರಡನೆಯ ಸಲ ವಿವಕ್ಷಿತವಾದುದು ರತ್ನಸಾಮಾನ್ಯವಲ್ಲ; ಅಸಾಧಾರಣವಾದ ಚಿಂತಾಮಣಿ ಮಾತ್ರ. ಅದು ತಿಳಿಯದಿರುವುದರಿಂದ 'ಸನಿಯಮಪರಿವೃತ್ತ' ದೋಷ. ಮಮ್ಮಟನು ತಿದ್ದಿ ಬರೆದ ಪಾಠಾಂತರದಲ್ಲಿ ಈ ಭ್ರಾಂತಿಗೆ ಆಸ್ಪದವಿಲ್ಲ.

[143] ನಿನ್ನ ಮುಖವೇ ಸರಸ್ವತಿ, ತೋಳೇ ಸಮುದ್ರ, ಇತ್ಯಾದಿಗಳಂತೆ ಅಧರವೇ ಶೋಣ ಎನ್ನಬೇಕಾಗಿದೆಯೇ ಹೊರತು 'ಶೋಣವೇ ಅಧರ' ಎಂದಲ್ಲ. ಈ ಅನಪೇಕ್ಷಿತ ಅವಧಾರಣೆ (*Emphasis*) ಯಿಂದ ಅಥವಾ ಅಪೇಕ್ಷಿತ ಅನಿಯಮದ ಪರಿವೃತ್ತಿಯಿಂದ ವಿವಕ್ಷಿತಾರ್ಥದ ಪ್ರತೀತಿ ಕುಂಟುವಂತಾಗುತ್ತದೆ.

ಚಂದ್ರಂ ಚೂರ್ಣಯತ ಕ್ಷಣಾಚ್ಚ ಕಣಶಃ ಕೃತ್ವಾ ಶಿಲಾಪಟ್ಟಕೇ
ಯೇನ ದ್ರಷ್ಟುಮಹಂ ಕ್ಷಮೇ ದಶ ದಿಶಸ್ತದ್ವಕ್ತ್ರಮುದ್ರಾಂಕಿತಾಃ ‖[144]

ಇರುಳಂ ಸಾಂದ್ರಮಷೀವಿಲೇಪನಗಳಿಂ ಕಪ್ಪಾಗಿಸಿರ್ ಬೇಗದಿಂ
ಸೆರೆಯಲ್ ಮಂತ್ರಮೊ ತಂತ್ರಮೋ ತೊಲಗಿಸಿರ್ ಪದ್ಮಂಗಳೀ ಶೋಭೆಯಂ ;
ಅರೆಯೊಳ್ ಕುಟ್ಟುತೆ ಚೂರ್ಣಗೈಯಿರಿ ಸಮಂತೀ ಚಂದ್ರನಂ ಬೇಗದಿಂ
ನೆರೆವಂತಾನವಲೋಕಿಸಲ್ ದೆಸೆಗಳಂ ಕಾಂತಾಮುಖಚ್ಛಾಯೆಯಾ ‖

ಇಲ್ಲಿ 'ಇರುಳಂ' ಎಂದು ಸಾಮಾನ್ಯವಾಗಿ ಹೇಳಿರುವುದು ತಪ್ಪು. 'ಬೆಳ್ದಿಂಗಳ ರಾತ್ರಿಯನ್ನು' ಎಂದು ವಿಶಿಷ್ಟ ರಾತ್ರಿಯನ್ನು ನಿರ್ದೇಶಿಸಬೇಕಾಗಿತ್ತು. ಆದ್ದರಿಂದ 'ವಿಶೇಷಪರಿವೃತ್ತ'ವೆಂಬ ದೋಷ.

### (೧೫) ಅವಿಶೇಷಪರಿವೃತ್ತ

ಕಲ್ಲೋಲವೇಲ್ಲಿತದೃಷತ್ಪರುಷಪ್ರಹಾರೈ
ರತ್ನಾನ್ಯಮೂನಿ ಮಕರಾಲಯ ಮಾವಮಂಸ್ಥಾಃ ।
ಕಿಂ ಕೌಸ್ತುಭೇನ ವಿಹಿತೋ ಭವತೋ ನ ನಾಮ
ಯಾಞ್ಚಾಪ್ರಸಾರಿತಕರಃ ಪುರುಷೋತ್ತಮೋಽಪಿ ‖

ಅಲೆಗಳ ಕಲ್ಗಳ ಹತಿಯಿಂ
ಜಲಧಿಯೆ ನೀಕ್ಕರಿಸವೇಡ ರತ್ನಂಗಳ ನೀಂ ।
ಸಲೆ ಕೌಸ್ತುಭವಿರ್ದುದರಿಂ
ದಲೆ ಕೈನೀಡಿರ್ದನಲ್ತೆ ಪುರುಷೋತ್ತಮನುಂ ‖

ಇಲ್ಲಿ 'ಒಂದೇ ಒಂದು ರತ್ನಕ್ಕಾಗಿ ತಾನೇ ಪುರುಷೋತ್ತಮನೂ ನಿನಗೆ ಕೈನೀಡಿದನು' ಎಂದು ಸಾಮಾನ್ಯರೂಪವಾಗಿ ಹೇಳಬೇಕಾಗಿತ್ತು. 'ಕೌಸ್ತುಭವಿದ್ದುದರಿಂದ' ಎಂದು ವಿಶಿಷ್ಟ ರತ್ನವೊಂದನ್ನು ಹೆಸರಿಸಿರುವುದು ದೋಷ.

### (೧೬) ಸಾಕಾಂಕ್ಷ

ಅರ್ಥಿತ್ವೇ ಪ್ರಕಟೀಕೃತೇಽಪಿ ನ ಫಲಪ್ರಾಪ್ತಿಃ ಪ್ರಭೋಃ ಪ್ರತ್ಯುತ
ದ್ರುಹ್ಯನ್ ದಾಶರಥಿರ್ವಿರುದ್ಧಚರಿತೋ ಯುಕ್ತಸ್ತ್ವಯಾ ಕನ್ಯಯಾ ।

---

144 ರಾಜಶೇಖರನ ವಿದ್ಧಶಾಲಭಂಜಿಕೆ, ಅಂಕ-೩.

ಉತ್ಕರ್ಷಂ ಚ ಪರಸ್ಯ ಮಾನಯಶಸೋರ್ವಿಸ್ರಂಸನಂ ಚಾತ್ಮನಃ
ಸ್ತ್ರೀರತ್ನಂ ಚ ಜಗತ್ಪತಿರ್ದಶಮುಖೋ ದೇವಃ ಕಥಂ ಮೃಷ್ಯತೇ ‖[145]

ಯಾಚನೆಗೈದೊಡಂ ಪ್ರಭುಗೆ ನಿಷ್ಫಲಮಾದುದು ಮತ್ತೆ ವೈರಸಂ
ಸೂಚಿತನಪ್ಪ ದಾಶರಥಿಗಂ ದೊರೆಕೊಂಡಳು ಕನ್ಯೆಯಿಂತೆಸಲ್ |
ಸಂಚಿತಕೀರ್ತಿಯುಂ ಪಗೆಯ, ತನ್ನ ಪಮಾನಮುಮಂತೆ ರತ್ನದಾ
ವಂಚನೆಯುಂ ವಲಂ ಕ್ಷಮಿಪನೇ ಕಲಿಯಾ ದಶಾನನಂ ‖

ಮೂಲಶ್ಲೋಕದಲ್ಲಿ 'ಸ್ತ್ರೀರತ್ನಂ ಕಥಂ ಮೃಷ್ಯತೇ' (=ಸ್ತ್ರೀರತ್ನವನ್ನು ಹೇಗೆ ಸಹಿಸಿಯಾನು?) ಎಂದಿದೆ. ಇದಕ್ಕೆ ಅರ್ಥವಾಗುವಂತಿಲ್ಲ. 'ಸ್ತ್ರೀರತ್ನವನ್ನು ಉಪೇಕ್ಷಿಸುತ್ತಾ ಹೇಗೆ ಸಹಿಸಿಯಾನು? ಎಂದರ್ಥ ಸರಿಹೋಗುವಂತೆ 'ಉಪೇಕ್ಷಿಸುತ್ತಾ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕಾಗಿರುವುದರಿಂದ 'ಸಾಕಾಂಕ್ಷ' ದೋಷ. 'ಪರಸ್ಯ' (ಹಗೆಯ) ಎಂಬುದರೊಡನೆ ಇದನ್ನೂ ಅನ್ವಯಿಸಿಕೊಳ್ಳುವುದಂತೂ ಅಶಕ್ಯ (ಅದರ ಅರ್ಥ ಆಗಲೇ ಪೂರ್ಣವಾಗಿರುವುದರಿಂದ).

### (೧೭) ಅಪದಯುಕ್ತ

ಆಜ್ಞಾ ಶಕ್ರಶಿಖಾಮಣಿಪ್ರಣಯಿನೀ ಶಾಸ್ತ್ರಾಣಿ ಚಕ್ಷುರ್ನವಂ
ಭಕ್ತಿರ್ಭೂತಪತೌ ಪಿನಾಕಿನಿ ಪದಂ ಲಂಕೇತಿ ದಿವ್ಯಾ ಪುರೀ |
ಉತ್ಪತ್ತಿರ್ದ್ರುಹಿಣಾನ್ವಯೇ ಚ ತದಹೋ ನೇದೃಗ್ವರೋ ಲಭ್ಯತೇ
ಸ್ಯಾಚ್ಚೇದೇಷ ನ ರಾವಣಃ ಕ್ವ ನು ಪುನಃ ಸರ್ವತ್ರ ಸರ್ವೇ ಗುಣಾಃ ‖[146]

ಮರೆಯಲ್ಕಾಣತಿ ಶಕ್ರಶೀರ್ಷಮಣಿಯೊಳ್ ಶಾಸ್ತ್ರಂ ನವಂ ಚಕ್ಷು ಮೇಣ್
ಸೆರೆಯಲ್ ಭಕ್ತಿ ಗಿರೀಶನೊಳ್ ಸಲೆ ಪದಂ ಲಂಕಾಪುರಂ ದಿವ್ಯಮಾ |
ವರಜನ್ಮಂ ಗಡ ಬೊಮ್ಮನಾ ಸುಕುಲದೊಳ್ ನೋಡಲ್ ವರಂ ದುರ್ಲಭಂ
ಧರೆಯೊಳ್ ರಾವಣನಲ್ಲದಿರ್ದೊಡೆ, ಗುಣಂ ಸರ್ವಂ ಗಡೆಲ್ಲಿಕ್ಕುಮೋ ‖

ಇಲ್ಲಿ 'ಸ್ಯಾಚ್ಚೇದೇಷ ನ ರಾವಣಃ' (=ರಾವಣನಲ್ಲದಿರ್ದೊಡೆ) ಎಂಬಲ್ಲಿಗೆ ವಾಕ್ಯವನ್ನು ಮುಗಿಸಿಬಿಡಬೇಕಾಗಿತ್ತು; (ಈ ವರ ಯೋಗ್ಯನಲ್ಲ ಎಂಬ ಅಭಿಪ್ರಾಯ

[145] ಭವಭೂತಿಯ **ಮಹಾವೀರಚರಿತ**, ಅಂಕ-೨. ರಾವಣನ ಪರವಾಗಿ ಸೀತೆಯನ್ನು ಯಾಚಿಸಲು ಬಂದಿದ್ದ ಮಾಲ್ಯವಂತನು ಆಶಾಭಂಗದಿಂದ ನುಡಿದ ಮಾತು.

[146] ರಾಜಶೇಖರನ **ಬಾಲರಾಮಾಯಣ**, ಅಂಕ-೧.

ಕವಿಗೆ ವಿವಕ್ಷಿತವಾದ್ದರಿಂದ ಮುಂದಿನ ಅರ್ಥಾಂತರನ್ಯಾಸವು ವಿರುದ್ಧಾರ್ಥವನ್ನು (ಈ ವರ ಅಯೋಗ್ಯನಲ್ಲವೆಂಬುದನ್ನು) ಸಮರ್ಥಿಸುವುದರಿಂದ ದೋಷ.

### (೧೮) ಸಹಚರಭಿನ್ನ

ಶ್ರುತೇನ ಬುದ್ಧಿರ್ವ್ಯಸನೇನ ಮೂರ್ಖತಾ
ಮದೇನ ನಾರೀ ಸಲಿಲೇನ ನಿಮ್ನಗಾ।
ನಿಶಾ ಶಶಾಂಕೇನ ಧೃತಿಃ ಸಮಾಧಿನಾ
ನಯೇನ ಚಾಲಂಕ್ರಿಯತೇ ನರೇಂದ್ರತಾ॥

ಮತಿಯೋದಿಂ ಮೂರ್ಖತೆಯುಂ-
ತತಿರೇಕವ್ಯಸನದಿಂದೆ ಮದದಿಂ ಪೆಣ್ಣುಂ।
ನದಿ ನೀರಿಂದಿರುಳಿನನಿಂ
ಧೃತಿ ತಪದಿಂ ನೀತಿಯಿಂದೆ ದೊರೆತನಮೆಸೆಗುಂ॥

ಇಲ್ಲಿ ಉತ್ಕೃಷ್ಟವಾದ 'ಓದು' ಮುಂತಾದುವುಗಳ ಜತೆಜತೆಗೇ ವ್ಯಸನ ಮೂರ್ಖತೆಗಳು ಬಂದಿರುವುದು 'ಸಹಚರಭಿನ್ನ' (=ವಿಜಾತೀಯ) ವೆಂಬ ದೋಷ

### (೧೯) ಪ್ರಕಾಶಿತವಿರುದ್ಧ

ಲಗ್ನಂ ರಾಗಾವೃತಾಂಗ್ಯಾ . . .[147]

ಇಲ್ಲಿ 'ವಿದಿತಂ ತೇಽಸ್ತು' (=ನಿನಗೆ ತಿಳಿದಿರಲಿ) ಎಂಬುದು ಸಿರಿಯಾತನನ್ನು ಬಿಟ್ಟೇಹೋಗುತ್ತಿರುವಳೆಂಬ ವಿರುದ್ಧಾರ್ಥವನ್ನು ಪ್ರಕಾಶಗೊಳಿಸುತ್ತದೆ.

### (೨೦) ವಿಧ್ಯಯುಕ್ತ

ಪ್ರಯತ್ನಪರಿಬೋಧಿತಃ ಸ್ತುತಿಭಿರದ್ಯ ಶೇಷೇ ನಿಶಾ-
ಮಕೇಶವಮಪಾಂಡವಂ ಭುವನಮದ್ಯ ನಿಃಸೋಮಕಮ್।
ಇಯಂ ಪರಿಸಮಾಪ್ಯತೇ ರಣಕಥಾಽದ್ಯ ದೋಃಶಾಲಿನಾ-
ಮಪೈತು ರಿಪುಕಾನನಾತಿಗುರುರದ್ಯ ಭಾರೋ ಭುವಃ॥[148]

---

147 ಇದೇ ಉಲ್ಲಾಸದಲ್ಲಿ ಆಗಲೇ 'ಗರ್ಭಿತ'ದೋಷಕ್ಕೆ ಉದಾಹರಣೆಯಾಗಿ ಇದು ಬಂದಿದೆ.

148 ವೇಣೀಸಂಹಾರ, ಅಂಕ-೩.

ಸ್ತುತಿಕಾರರ್ ಯತ್ನದಿಂದೆಬ್ಬಿರಿಸವೊಲೆಲೆ ನೀನಿಂದಿರುಳ್ ನಿದ್ರಿಪೈ ಶ್ರೀ
ಪತಿಯುಂ ಪಾಂಚಾಲರುಂ ಪಾಂಡುವ ತನುಜರುಮಿಂದುರ್ವಿಯಲ್ಲಿಲ್ಲೆನಿಪ್ಪೆಂ।
ಧೃತಶೌರ್ಯೋದ್ದಂಡದೋರ್ದಂಡರ ರಣಕಥೆ ತಾನಿಂದು ಸಂಪೂರ್ಣಮಕ್ಕುಂ
ಕ್ಷಿತಿಪಾರಣ್ಯಂಗಳಿಂ ವೆಗ್ಗಳಮೆನಿಸಿದ ಭೂಭಾರಕಿಂದಕ್ಕೆ ನಾಶಂ ‖ [149]

ಇಲ್ಲಿ 'ಮಾಗಧರ ಸ್ತುತಿಗಳಿಂದ ಬಲವಂತವಾಗಿ ಪ್ರಬೋಧಿತನಾದರೂ ನಿದ್ದೆ ಮಾಡುತ್ತಿರುವೆ' ಎಂಬರ್ಥ ಹೊರಡುತ್ತದೆ. ಇಲ್ಲಿ ಕ್ರಿಯಾಪದ ಇದಲ್ಲ. 'ಮಲಗಿದ ನೀನು ಮಾಗಧರ ಸ್ತುತಿಗಳಿಂದ ಪ್ರಬೋಧಿತನಾಗುವೆ' ಎಂಬುದೇ ಕವಿವಿವಕ್ಷಿತ. ಆದ್ದರಿಂದ 'ಶಯಿತಃ ಪ್ರಯತ್ನೇನ ಬೋಧ್ಯಸೇ' ಎಂದು ಪಾಠವನ್ನು ತಿದ್ದಿಕೊಳ್ಳಬೇಕು. ಅಥವಾ ಈ ಉದಾಹರಣೆಯನ್ನು ನೋಡಿ—

ವಾತಾಹಾರತಯಾ ಜಗದ್ವಿಷಧರೈರಾಶ್ವಾಸ್ಯ ನಿಃಶೇಷಿತಂ
ತೇ ಗ್ರಸ್ತಾಃ ಪುನರಭ್ರತೋಯಕಣಿಕಾತೀವ್ರವ್ರತೈರ್ಬರ್ಹಿಭಿಃ।
ತೇಽಪಿ ಕ್ರೂರಚಮೂರುಚರ್ಮವಸನೈರ್ನೀತಾಃ ಕ್ಷಯಂ ಲುಬ್ಧಕೈ
ರ್ದಂಭಸ್ಯ ಸ್ಫುರಿತಂ ವಿದನ್ನಪಿ ಜನೋ ಜಾಲ್ಮೋ ಗುಣಾನೀಹತೇ ‖ [150]

ವಾತಾಹಾರಿಯೆನಿಪ್ಪ ಸರ್ಪದುಸಿರಿಂ ನಿಶ್ಶೇಷಮಾಯ್ತೀ ಜಗಂ
ಮೇಣ್ ತೋಯವ್ರತಮಾಂತ ಬರ್ಹಿಯದನೇ ನುಂಗಿರ್ಪುದೆತ್ತೆತ್ತಲುಂ।
ಮತ್ತಾ ಬೇಡರೆ ಚರ್ಮಧಾರಣರತರ್ ಕೊಲ್ವರ್ ಮಯೂರಂಗಳಂ
ಇಂತಾರಯ್ಯುತೆ ದಂಭಮಂ ಗುಣಗಳಂ ಬೇಳ್ಪಂ ಸುಮೂರ್ಖಂ ದಿಟಂ ‖

ಇಲ್ಲಿ ಹೇಳಿರುವ ವ್ರತಗಳ—ವಾತಾಹಾರ, ಜಲಾಹಾರ, ಚರ್ಮಾಂಬರ—ಕ್ರಮವಾಗಿ ತೀವ್ರತೆಯಲ್ಲಿ ಕಡಿಮೆಯಾಗುತ್ತಾ ಬರುತ್ತವೆ. ಹಾಗಾಗದಂತೆ ಅವುಗಳ ಅನುಕ್ರಮವನ್ನು ಹಿಂದುಮುಂದಾಗಿ—ಚರ್ಮಾಂಬರ, ಜಲಾಹಾರ, ವಾತಾಹಾರ—ಈ ಕ್ರಮದಲ್ಲಿ ಹೇಳಬೇಕಾಗಿದ್ದಿತು.

### (೨೧) ಅನುವಾದಾಯುಕ್ತ

ಅರೇ ರಾಮಾಹಸ್ತಾಭರಣ! ಭಸಲಶ್ರೇಣಿಶರಣ!
ಸ್ಮರಕ್ರೀಡಾವ್ರೀಡಾಶಮನ! ವಿರಹಿಪ್ರಾಣದಮನ!

[149] ಭಾಷಾಂತರ ಮೈಸೂರು ಸೀತಾರಾಮಶಾಸ್ತ್ರಿಗಳದು.

[150] ಭಲ್ಲಟಶತಕ, ೮೭.

ಸರೋಹಂಸೋತ್ತಂಸ! ಪ್ರಚಲದಲ! ನೀಲೋತ್ಪಲ! ಸಖೇ!
ಸಖೇದೋಽಹಂ, ಮೋಹಂ ಶ್ಲಥಯ, ಕಥಯ, ಕ್ವೇನ್ದುವದನಾ ॥

ಎಲೆ ಸುದತೀಕರಾಭರಣಮೇ, ಮರಿದುಂಬಿಯ ಮೊತ್ತದಿರ್ಕೆಯೇ
ಎಲೆ ಸುರತಂಗಳೊಳ್ ಶಮಿತಲಜ್ಜ, ವಿಯೋಗಿಯ ಪ್ರಾಣಭಂಜಕಾ।
ಎಲೆ ಕೊಳಸೊಳ್ ಸುಹಂಸ, ವಿಚಲದ್ದಲಸೇ, ಪರಮಿತ್ರ, ಸೈದಿಲೇ
ಬಳಲಿದೆ, ಮುಚ್ಚೆಯುಂ ಬಿಡಿಸು, ಪೇಳುತೆ ಕಾದಲಳಿರ್ಪ ತಾಣಮಂ ॥

ಇಲ್ಲಿ [ವಿಧೇಯ (=*Predicate*) ವು 'ಪ್ರಾಣವನ್ನುಳಿಸು' ಎಂದಿರುವಾಗ ಅದಕ್ಕೆ] ಕೇವಲ ವಿರುದ್ಧವಾದ 'ವಿರಹಿ ಪ್ರಾಣದಮನ' ಎಂಬ ಅನುವಾದ್ಯ (=*Subject*) ದ ಅಂಶವನ್ನು ಹೇಳಕೂಡದಾಗಿತ್ತು.

## (೨೨) ತ್ಯಕ್ತಪುನಃಸ್ವೀಕೃತ

ಲಗ್ನಂ ರಾಗಾವೃತಾಂಗ್ಯಾ . . .[151]

ಇಲ್ಲಿ 'ವಿದಿತಂ ತೇಽಸ್ತು' (=ನಿನಗೆ ತಿಳಿದಿರಲಿ) ಎಂದು (ರಾಜನ ಅಪರಾಧಗಳನ್ನು) ಮುಗಿಸಿಯಾಗಿದ್ದರೂ ಮತ್ತೆ 'ತೇನಾಸ್ಮಿ ದತ್ತಾ ಭೃತ್ಯೇಭ್ಯಃ' (=ಅವನು ನನ್ನನ್ನು ಆಳುಗಳಿಗೆ ಕೊಟ್ಟಿರುವನು) ಎಂದು ಅದನ್ನೇ ಎತ್ತಿಕೊಂಡಿರುವುದು ದೋಷ.

## (೨೩) ಅಶ್ಲೀಲ

ಹನ್ತುಮೇವ ಪ್ರವೃತ್ತಸ್ಯ ಸ್ತಬ್ಧಸ್ಯ ವಿವರೈಷಿಣಃ।
ಯಥಾಸ್ಯ ಜಾಯತೇ ಪಾತೋ ನ ತಥಾ ಪುನರುನ್ನತಿಃ ॥

ಪೊಯ್ಯಲ್ಕುದ್ಯತನಾಗು
ತ್ತೊಯ್ಯನೆ ತಾಂ ಸ್ತಬ್ಧನಂತೆ ವಿವರೈಷಿಯುಮಾ।
ದಯ್ಯಂ ಭರದಿಂ ಕೆಡೆವಂ
ತಯ್ಯೋ ತಾಂ ಪಡೆವನೆಲ್ಲಿ ಪುನರುನ್ನತಿಯಂ ॥

ಇಲ್ಲಿ ಪುರುಷನ ಜನನೇಂದ್ರಿಯದ ಪ್ರತೀತಿಯೂ ಬರುವುದರಿಂದ ಅಶ್ಲೀಲ. ಇದುವರೆಗೆ ಬರೆದ ಉದಾಹರಣೆಗಳಲ್ಲಿ ಒಂದೊಂದೇ ದೋಷವನ್ನು ಉಲ್ಲೇಖಿ

---

[151] ಇದೇ ಉಲ್ಲಾಸದಲ್ಲಿ ಆಗಲೇ 'ಗರ್ಭಿತ'ದೋಷಕ್ಕೆ ಉದಾಹರಣೆಯಾಗಿ ಈ ಪದ್ಯ ಬಂದಿದೆ. ಮತ್ತು ಹೋಲಿಸಿ ೧೪೭ ನೆಯ ಅಡಿಟಿಪ್ಪಣಿ.

ಸಿರುವುದರಿಂದ ಅಲ್ಲಿ ಮಿಕ್ಕ ದೋಷಗಳಿಲ್ಲವೆಂದೇನೂ ಭಾವಿಸಬಾರದು. ಪ್ರಕೃತವಲ್ಲ ವೆಂಬ ಕಾರಣದಿಂದ ಲಕ್ಷ್ಯಗಳಲ್ಲಿರುವ ಉಳಿದೆಲ್ಲ ದೋಷಗಳನ್ನೂ ತೋರಿಸಿಲ್ಲ.

## ಪೌನರುಕ್ತ್ಯ ಯಾವಾಗ ದೋಷವಲ್ಲ?

ಕರ್ಣಾವತಂಸಾದಿಪದೇ ಕರ್ಣಾದಿಧ್ವನಿನಿರ್ಮಿತಿಃ ।
ಸನ್ನಿಧಾನಾದಿಬೋಧಾರ್ಥಮ್ ॥ ೧೦ ॥

'ಕರ್ಣಾವತಂಸ' ಮುಂತಾದ ಪದಗಳಲ್ಲಿ, 'ಕರ್ಣ' ಮುಂತಾದ ಪದಾಂಶಗಳ ಪ್ರಯೋಗದಿಂದ ಕಿವಿಯಲ್ಲಿ ಆಭರಣವುಂಟೆಂಬ ಅಭಿಪ್ರಾಯ ಸೂಚಿತವಾಗುವುದೆಂದ ರಿಯಬೇಕು.

ಯದ್ಯಪಿ, 'ಅವತಂಸ' ಎಂದರೆ 'ಕಿವಿಯ ಆಭರಣ'ವೆಂದೇ ಅರ್ಥವಾದರೂ, 'ಕರ್ಣಾವತಂಸ' ಎಂದು ಪ್ರಯೋಗಿಸುವಲ್ಲಿ ಹೆಚ್ಚಿನ ಔಚಿತ್ಯವಿರುವ ಕಾರಣ ಪುನರುಕ್ತ ದೋಷ ಬರುವುದಿಲ್ಲ. ವರ್ಣನಾಕಾಲದಲ್ಲಿ ಆಭರಣ ಕಿವಿಯಲ್ಲಿಯೇ ಇದೆ ಯೆಂಬುದನ್ನು ಇಂತಹ ಪ್ರಯೋಗಗಳು ಸೂಚಿಸುತ್ತವೆ.[152] ಉದಾಹರಣೆ:

ಅಸ್ಯಾಃ **ಕರ್ಣಾ**ವತಂಸೇನ ಜಿತಂ ಸರ್ವಂ ವಿಭೂಷಣಮ್ ।
ತಥೈವ ಶೋಭತೇಽತ್ಯರ್ಥಮಸ್ಯಾಃ **ಶ್ರವಣ**ಕುಂಡಲಮ್ ॥

ಕರ್ಣಾವತಂಸದಿಂದಂ
ಸ್ವರ್ಣಾಭರಣಂಗಳನ್ನೆ ಭಾಮಿನಿ ಗೆಲ್ದಳ್ ।
ವರ್ಣಾವಳಿಯಿಂದಂತೆಯೆ
ವರ್ಣಿಸಲೀ ಕರ್ಣಕುಂಡಲಂ ಶೋಭಿಸುಗುಂ ॥

ಅಪೂರ್ವಮಧುರಾಮೋದಪ್ರಮೋದಿತದಿಶಸ್ತತಃ ।
ಆಯಯುರ್ಭೃಂಗಮುಖರಾಃ **ಶಿರಃ**ಶೇಖರಶಾಲಿನಃ ॥

---

[152] ವಾಮನನ 'ಕಾವ್ಯಾಲಂಕಾರಸೂತ್ರವೃತ್ತಿ'ಯ ಅಭಿಪ್ರಾಯಗಳನ್ನೇ ಇಲ್ಲಿ ಮಮ್ಮಟನು ಅನುಸರಿಸಿರುವುದು ಸ್ಪಷ್ಟ. ವಾಮನನು ಪೌನರುಕ್ತ್ಯದೋಷ ದೋಷವೆನಿಸದ ಸ್ಥಳಗಳನ್ನು ಹೀಗೆ ನಿರೂಪಿಸಿದ್ದಾನೆ—

"ನ ವಿಶೇಷಶ್ಚೇದೇಕಾರ್ಥಂ ದುಷ್ಟಮ್. ಧನುರ್ಜ್ಯಾಧ್ವನೌ ಧನುಃ ಶ್ರುತಿರಾರೂಢೇಃ ಪ್ರತಿಪತ್ತ್ಯೈ. ಕರ್ಣಾವತಂಸ ಶ್ರವಣಕುಂಡಲ ಶಿರಃಶೇಖರೇಷು ಕರ್ಣಾದಿನಿರ್ದೇಶಃ ಸನ್ನಿಧೇಃ ಮುಕ್ತಾಹಾರಶಬ್ದೇ ಮುಕ್ತಾಶಬ್ದಃ ಶುದ್ಧೇಃ. ಪುಷ್ಪಮಾಲಾಶಬ್ದೇ ಪುಷ್ಪ ಪದಮುತ್ಕರ್ಷಸ್ಯ, ಕರಿಕಲಭಶಬ್ದೇ ಕರಿಶಬ್ದಸ್ತಾದ್ರೂಪ್ಯಸ್ಯ ವಿಶೇಷಣಸ್ಯ ಚ

ಅತಿಮಧುರಗಂಧಮೋದಿತ
ತತದಿಕ್ತ್ರಟರಂತೆ ಭೃಂಗಮುಖರಿತಕಾಯರ್ |
ಪ್ರತಿಗಮಿಸಿದರರೆಬರ್ ಮೃದು
ಗತಿಯಿಂದಂ ಶೀರ್ಷಶೇಖರರ್ ವಿಟಪುರುಷರ್ ‖

ಇಲ್ಲಿ ಬಂದಿರುವ 'ಕರ್ಣ—', 'ಶ್ರವಣ—', ಮತ್ತು 'ಶಿರಃ—' ಶಬ್ದಗಳು ಆಭರಣಗಳು ಆಯಾಯಾ ಅಂಗಗಳಲ್ಲಿ ಇದ್ದುವೆಂಬುದನ್ನು ಸೂಚಿಸುತ್ತವೆ.

ವಿದೀರ್ಣಾಭಿಮುಖಾರಾತಿಕರಾಲೇ ಸಂಗರಾಂತರೇ |
ಧನುರ್ಜ್ಯಾಕಿಣಚಿಹ್ನೇನ ದೋಷ್ಣಾ ವಿಸ್ಫುರಿತಂ ತವ ‖

ದಾರಿತ ರಿಪುಸೇನಾ ವಿ-
ಸ್ತಾರದೆ ವಿಕರಾಲಮಪ್ಪ ಸಂಗರದೆಡೆಯೊಳ್ |
ಓರಂತೆಸೆವುದು ತವಭುಜ
ಸಾರಂ ಕೋದಂಡಶಿಂಜಿನೀಕಿಣಚಿಹ್ನಂ ‖

ಇಲ್ಲಿ 'ಧನುರ್ಜ್ಯಾ' ಎನ್ನುವಾಗ 'ಧನುಸ್—' ಶಬ್ದವು ಬಿಲ್ಲಿನಲ್ಲಿ ಹೆದೆಯೇರಿಸಲಾಗಿದೆಯೆಂಬುದನ್ನು ತಿಳಿಸುತ್ತದೆ, ಈ ವಿಶೇಷಾರ್ಥದ ವಿವಕ್ಷೆಯಿಲ್ಲದಾಗ ಕೆಳಗಿನ ಲಕ್ಷ್ಯದಂತೆ ಕೇವಲ 'ಜ್ಯಾ' ಶಬ್ದವನ್ನೇ ಬಳಸಲಾಗುತ್ತದೆ :—

ಜ್ಯಾಬಂಧನಿಷ್ಪಂದಭುಜೇನ ಯಸ್ಯ ವಿನಿಃಶ್ವಸದ್ ವಕ್ತ್ರಪರಂಪರೇಣ |
ಕಾರಾಗೃಹೇ ನಿರ್ಜಿತವಾಸವೇನ ಲಂಕೇಶ್ವರೇಣೋಷಿತಮಾಪ್ರಸಾದತ್ ‖[158]

ಹೆದೆಯನ್ನೆಳೆಯದೆ ಭುಜಮಿರೆ
ವದನಾಳಿಗಳಿಂದೆ ಪೊಣ್ಮೆ ಸುಯ್ ರಾವಣನುಂ |
ಕುದಿದಂ ಸೆರೆಯೊಳಗೀತನ
ಪದೆಪಂ ಪಾರುತ್ತೆ ತಾನೆ ಜಿತವಾಸವನುಂ ‖

ಹಾಗೆಯೇ,

ಪ್ರಾಣೇಶ್ವರಪರಿಷ್ವಂಗವಿಭ್ರಮಪ್ರತಿಪತ್ತಿಭಿಃ |
ಮುಕ್ತಾಹಾರೇಣ ಲಸತಾ ಹಸತೀವ ಸ್ತನದ್ವಯಮ್ ‖

---

158 ರಘುವಂಶ, ಸರ್ಗ ೧-೬.

ರಮಣಾಲಿಂಗನಭಂಗಿಯ
ಗಮಕಂಗಳನೆಲ್ಲ ತಿಳಿದೆನಾನೆಂಬೀ ಸಂ-|
ಭ್ರಮದಿಂ ಮುತ್ತಿನ ಸರಮಿರೆ
ರಮಣಿಯ ಕುಚಯುಗಮೆ ನಗುಗುಮೆನಿಸುತ್ತಿರ್ಕುಂ ||

ಎಂಬಲ್ಲಿ ಮುತ್ತುಗಳೊಡನೆ ಬೇರಾವ ರತ್ನಗಳೂ ಮಿಶ್ರವಾಗಿಲ್ಲವೆಂಬುದನ್ನು 'ಮುಕ್ತಾ' ಶಬ್ದವು ತಿಳಿಸುತ್ತದೆ.

ಸೌಂದರ್ಯಸಂಪತ್ ತಾರುಣ್ಯಂ ಯಸ್ಯಾಸ್ತೇ ತೇ ಚ ವಿಭ್ರಮಾಃ|
ಷಟ್ಪದಾನ್ ಪುಷ್ಪಮಾಲೇವ ಕಾನ್ ನಾಕರ್ಷತಿ ಸಾ ಸಖೇ ||

ವರಸೌಂದರ್ಯಾತಿಶಯಂ
ಸುರುಚಿರತಾರುಣ್ಯಮೊಪ್ಪೆ ಲೀಲೆಯುಮವಳೊಳ್ |
ಪರವಶಗೊಳಿಸಳದಾರಂ
ವರಸುಮಗಳ ಮಾಲೆಯಂತೆ ಮರಿದುಂಬಿಗಳಂ ||

ಎಂಬಲ್ಲಿ 'ಪುಷ್ಪ'ವೆಂದರೆ ಉತ್ಕೃಷ್ಟವಾದ ಪುಷ್ಪಗಳೆಂಬ ವಿಶೇಷಾರ್ಥವನ್ನು ಅರಿಯಬೇಕು. ಯಾವ ವಿಶೇಷಣವೂ ಇಲ್ಲದ 'ಮಾಲಾ' ಶಬ್ದಕ್ಕೇ ಪುಷ್ಪಮಾಲೆ ಯೆಂಬರ್ಥವುಂಟು.

ಸ್ಥಿತೇಷ್ವೇತತ್ ಸಮರ್ಥನಮ್ || ೧೦*d* ||

ಇದ್ದ ಮಹಾಕವಿಪ್ರಯೋಗಗಳನ್ನು ಸಮರ್ಥನೆ ಮಾಡುವ ಸಲುವಾಗಿ ಮಾತ್ರ ಇದನ್ನು ಹೇಳಿದೆ.

'ಕರ್ಣಾವತಂಸ'ವೆಂಬ ಪ್ರಯೋಗವಿರುವಂತೆ 'ಜಘನಕಾಂಚಿ'ಯೆಂದು ಹೊಸದಾಗಿ ಹೇಳುವುದಕ್ಕೆ ಇದು ಅನುಮತಿಯನ್ನೀಯುವುದಿಲ್ಲ.

ಜಗಾದ ಮಧುರಾಂ ವಾಚಂ ವಿಶದಾಕ್ಷರಶಾಲಿನೀಮ್

ನುಡಿದಂ ಸವಿಯೊಸರಲ್ ಜೇ
ನ್ನುಡಿಯುಂ ವಿಶದಾಕ್ಷರಂಗಳೆಸೆವವೊಲನುವಿಂ |

ಇದೇ ಮುಂತಾದ ಲಕ್ಷ್ಯಗಳಲ್ಲಿ ಈಗಿರುವಂತೆ ನಾಮವಿಶೇಷಣವನ್ನು ಹೇಳುವ ಬದಲು ಕ್ರಿಯಾವಿಶೇಷಣವನ್ನೇ ಹೇಳಿದರೂ ಕವಿಯ ವಿವಕ್ಷಿತಾರ್ಥವು ಸಿದ್ಧಿಸುವು ದರಿಂದ 'ವಿಶೇಷ್ಯ ಗತಾರ್ಥವೇ ಆಗಿದ್ದರೂ ವಿಶೇಷಣಗಳನ್ನು ಕೊಡುವ ಸಲುವಾಗಿ

ಪುನಃ ಪ್ರಯೋಗಮಾಡಬಹುದು' ಎಂದು ಸಮರ್ಥಿಸುವುದು ಯುಕ್ತವಲ್ಲ.[154] ಒಂದು ವೇಳೆ ಅಂಥ ಸಮರ್ಥನೆ ಯೋಗ್ಯವಾಗಬೇಕಾದರೆ, ಎಲ್ಲಿ ಕ್ರಿಯಾವಿಶೇಷಣಗಳಿಂದ ಕವಿಯ ವಿವಕ್ಷಿತಾರ್ಥ ಸಿದ್ಧಿಸಲಾರದೋ, (ನಾಮವಿಶೇಷಣಗಳೇ ಅನಿವಾರ್ಯ ವೆನಿಸುತ್ತವೋ) ಅಂಥ ಉದಾಹರಣೆಗಳನ್ನು ಮಾತ್ರ ಕೊಡಬೇಕು. ಉದಾಹರಣೆ:—

ಚರಣತ್ರ ಪರಿತ್ರಾಣರಹಿತಾಭ್ಯಾಮಪಿ ದ್ರುತಮ್ ।
ಪಾದಾಭ್ಯಾಂ ದೂರಮಧ್ವಾನಂ ವ್ರಜನ್ನೇಷ ನ ಖಿದ್ಯತೇ ॥

ಪಾದುಕೆ ರಕ್ಷಿಸದಿರ್ಪಾ
ಪಾದಂಗಳಿನೀತನಧಿಕ ವೇಗದೆ ನಡೆಯು- |
ಲ್ಕಾದಂ ದೂರದ ದಾರಿಯು
ನೆಂದೊಡಮರಿಯಂ ಬಳಲ್ಕೆಯೆಂಬುದನೆಂತುಂ ||

(ಇಲ್ಲಿ 'ವ್ರಜನ್' (=ನಡೆಯುವನು) ಎಂಬ ಕ್ರಿಯೆಯಲ್ಲಿ 'ಕಾಲುಗಳಿಂದ' ಎಂಬರ್ಥವು ಅಡಕವಾಗಿದ್ದರೂ 'ಪಾದುಕೆಗಳಿಲ್ಲದ' ಎಂಬರ್ಥವನ್ನು ಕ್ರಿಯಾ ವಿಶೇಷಣದ ಮೂಲಕ ಬೋಧಿಸುವುದು ಅಶಕ್ಯವಾದ ಕಾರಣ ನಾಮವಿಶೇಷಣದ ಸಲುವಾಗಿ 'ಕಾಲುಗಳಿಂದ' ಎಂದು ಹೇಳುವುದು ಅನಿವಾರ್ಯವಾಗಿದೆ.)

ಖ್ಯಾತೇಽರ್ಥೇ ನಿರ್ಹೇತೋರದುಷ್ಟತಾ ॥ ೧೮a ॥

'ನಿರ್ಹೇತು'ದೋಷವು ಲೋಕಪ್ರಸಿದ್ಧವಾದ ಕಾರಣವಿರುವ ಸ್ಥಳದಲ್ಲಿ ದೋಷ ವೆನಿಸುವುದಿಲ್ಲ. ಉದಾಹರಣೆ:—

ಚಂದ್ರಂ ಗತಾ ಪದ್ಮಗುಣಾನ್ನ ಭುಂಕ್ತೇ
ಪದ್ಮಾಶ್ರಿತಾ ಚಾಂದ್ರಮಸೀಮಭಿಖ್ಯಾಮ್ ।
ಉಮಾಮುಖಂ ತು ಪ್ರತಿಪದ್ಯ ಲೋಲಾ
ದ್ವಿಸಂಶ್ರಯಾಂ ಪ್ರೀತಿಮವಾಪ ಲಕ್ಷ್ಮೀಃ ॥[155]

---

154 ಇಲ್ಲಿ ಮಮ್ಮಟನು ವಾಮನನ ಮತವನ್ನು ಖಂಡಿಸುತ್ತಿದ್ದಾನೆ. ಕಾವ್ಯಾಲಂಕಾರಸೂತ್ರ ವೃತ್ತಿ (II. iii. ೧೮)ಯಲ್ಲಿ ವಾಮನನು ಇದೇ ಪ್ರಯೋಗವನ್ನು ಎತ್ತಿಕೊಂಡು, 'ಜಗಾದ' ಎಂಬ ಕ್ರಿಯಾರ್ಥದಲ್ಲೇ 'ವಾಚಂ' ಎಂಬ ಕರ್ಮಾರ್ಥವೂ ಅಡಕವಾಗಿರುವುದಾದರೂ 'ಮಧುರಾಂ' ಮುಂತಾದ ವಿಶೇಷಣಗಳನ್ನು ಕಲ್ಪಿಸುವ ಸಲುವಾಗಿ ಪುನರುಕ್ತಿ ಬರುವುದು ದೋಷವಲ್ಲವೆಂದಿದ್ದಾನೆ. ನಾಮವಿಶೇಷಣವೇ ಏಕೆ ಅಗತ್ಯ? ಕ್ರಿಯಾವಿಶೇಷಣದಿಂದಲೂ ಕವಿಯ ಕಾರ್ಯ ನಿರ್ವಾಹ ವಾಗುವುದಿಲ್ಲವೆ? ಎಂದು ಮಮ್ಮಟನು ವಾಮನನನ್ನು ಪ್ರಶ್ನಿಸುತ್ತಿದ್ದಾನೆ.

155 ಕುಮಾರಸಂಭವ, ಸರ್ಗ-೧.

ನೆರೆಯಲ್ಕಿನನೊಳ್ ಪದ್ಮದ
ವರಗುಣಮಿರದಂತೆ ಪದ್ಮದೊಳ್ ಚಂದ್ರಕರಂ|
ನೆರೆಯದುಮಾಮುಖಸಂಗದೆ
ದೊರೆಕೊಂಡಳ್ ಲಕ್ಷ್ಮಿ ಚೆಲ್ವನುಭಯಾಶ್ರಿತಮಂ ‖

ಇಲ್ಲಿ 'ರಾತ್ರಿ ಕಮಲಗಳು ಮುಚ್ಚಿಕೊಳ್ಳುತ್ತವೆ', 'ಹಗಲಿನಲ್ಲಿ ಚಂದ್ರನು ನಿಸ್ತೇಜನಾಗಿರುತ್ತಾನೆ' ಎಂಬ ಕಾರಣಗಳು ಲೋಕಪ್ರಸಿದ್ಧವಾಗಿರುವುದರಿಂದ ಈ ಕಾರಣಗಳನ್ನು ಹೇಳಬೇಕಾದ ಅಗತ್ಯವೇ ಇಲ್ಲ.

ಅನುಕರಣೇ ತು ಸರ್ವೇಷಾಮ್ ‖ ೧೧$^{b}$ ‖

ಎಲ್ಲ ದೋಷಗಳೂ 'ಅನುಕರಣ'ಮಾಡುವ ಸ್ಥಳದಲ್ಲಿ ದೋಷತ್ವವನ್ನು ಕಳೆದುಕೊಳ್ಳುತ್ತವೆ.

ಎಲ್ಲ ದೋಷಗಳೂ ಎಂದರೆ 'ಶ್ರುತಿಕಟು' ಎಂದಾರಂಭಿಸಿ ಇದುವರೆಗೆ ಹೇಳಲಾದ ದೋಷಗಳೆಲ್ಲವೂ ಎಂದಭಿಪ್ರಾಯ. ಉದಾಹರಣೆ—

ಮೃಗಚಕ್ಷುಷಮದ್ರಾಕ್ಷಮಿತ್ಯಾದಿ ಕಥಯತ್ಯಯಮ್ |
ಪಶ್ಯೈಷ ಚ ಗವಿತ್ಯಾಹ ಸುತ್ರಾಮಾಣಂ ಯಜೇತಿ ಚ ‖

'ಹರಿಣಾಕ್ಷಿಯನೀಕ್ಷಿಸಿದೆಂ'
ಕರಮಿಂತೀ ತೆರದಿನೊರೆವನೀತಂ ಮನುಜಂ|
ನಿರುಕಿಸು 'ಗವೆ'ಂದು ನುಡಿವೀ
ನರನಂ 'ಸುತ್ರಾಮಯಾಗ' ಕಾಟಿಪನೀತಂ ‖

ವಕ್ತ್ರಾದ್ಯೌಚಿತ್ಯವಶಾದ್ದೋಷೋಽಪಿ ಗುಣಃ ಕ್ವಚಿತ್ ಕ್ವಚಿನ್ನೋ ಭೌ
‖ ೧೧$^{cd}$ ‖

'ಹೇಳುವವನು' ಮುಂತಾದವರ ಔಚಿತ್ಯದ ವಶದಿಂದ ಕೆಲವೊಮ್ಮೆ ದೋಷವೇ ಗುಣವೆನಿಸುತ್ತದೆ. ಕೆಲವೊಮ್ಮೆ ದೋಷವೂ ಅಲ್ಲ, ಗುಣವೂ ಅಲ್ಲ ಎನಿಸುತ್ತದೆ.

ಹೇಳುವವನು—ಕೇಳುವವನು—ಸೂಚ್ಯಾರ್ಥ—ವಾಚ್ಯಾರ್ಥ—ಸಂದರ್ಭ, ಇವೇ ಮುಂತಾದುವುಗಳ ಮಹಿಮೆಯಿಂದ[156] ದೋಷವೇ ಒಮ್ಮೊಮ್ಮೆ ಗುಣವಾಗಬಹುದು. ಒಮ್ಮೊಮ್ಮೆ ದೋಷವೂ ಅಲ್ಲದೆ, ಗುಣವೂ ಆಗದೆ ಇರಬಹುದು. ವೈಯಾಕರಣಿ

[156] ಇವುಗಳ ವಿವರಗಳಿಗೆ ಹಿಂದೆ ಮೂರನೆಯ ಉಲ್ಲಾಸವನ್ನು ನೋಡಿ.

ಯೊಬ್ಬನು ಹೇಳುವವ ಹಾಗೂ ಕೇಳುವವನಾದಾಗ ಮತ್ತು ರೌದ್ರವೇ ಮುಂತಾದ ರಸಗಳು ವ್ಯಂಗ್ಯವಾದಾಗ 'ಕಷ್ಟ' ದೋಷವೇ ಗುಣವೆನಿಸುವುದು. ಕ್ರಮವಾಗಿ ಕೆಳಗೆ ಉದಾಹರಣೆಗಳನ್ನು ಕೊಟ್ಟಿದೆ:—

ದೀಧೀಙ್ ವೇವೀಙ್ ಸಮಃ ಕಶ್ಚಿದ್ ಗುಣವೃದ್ಧ್ಯೋರಭಾಜನಮ್ ।
ಕ್ವಿಪ್ಪ್ರತ್ಯಯನಿಭಃ ಕಶ್ಚಿದ್ ಯತ್ರ ಸನ್ನಿಹಿತೇ ನ ತೇ ॥

ದೊರೆ 'ದೀಧೀಙ್ ವೇವೀಙ್'ಗ-
ಳ್ಗಿರಿಸಂ 'ಗುಣವೃದ್ಧಿಭಾವ'ಕ್ಕೆಡೆಯಂ ।
ಸರಿಸಂ 'ಕ್ವಿಪ್ ಪ್ರತ್ಯಯ'ಕೆನೆ
ಪೊರೆಯೊಳ್ ನಿಲಲಾರವೈಸೆ ನೋಡಲ್ಕವುಗಳ್ ॥[157]

ಯದಾ ತ್ವಾಮಹಮದ್ರಾಕ್ಷಂ ಪದವಿದ್ಯಾವಿಶಾರದಮ್ ।
ಉಪಾಧ್ಯಾಯಂ ತದಾಸ್ಮಾರ್ಷಂ ಸಮಸ್ಪ್ರಾಕ್ಷಂ ಚ ಸಮ್ಮದಮ್ ॥[158]

ಉನ್ನತ ಪದವಿದ್ಯಾ ಸಂ
ಪನ್ನಂ ನೀಂ ನಿನ್ನ ದರ್ಶನಂ ದೊರೆಯಲೊಡಂ ।
ಎನ್ನಯ ಗುರುವಂ ನೆನೆದೆಂ
ಮುನ್ನಂ ಸಮ್ಮೋದಮೊಪ್ಪೆ ಮನ್ಮಾನಸದೊಳ್ ॥

ಅಂತ್ರಪ್ರೋತ ಬೃಹತ್ಕಪಾಲನಲಕ ಕ್ರೂರಕ್ವಣತ್ ಕಂಕಣ-
ಪ್ರಾಯಪ್ರೇಂಖಿತ ಭೂರಿಭೂಷಣರವೈರಾಘೋಷಯನ್ತ್ಯಂಬರಮ್ ।
ಪೀತಚ್ಛರ್ದಿತರಕ್ತ ಕರ್ದಮಘನ ಪ್ರಾಗ್ಭಾರಘೋರೋಲ್ಲಸ-
ದ್ವ್ಯಾಲೋಲಸ್ತನಭಾರಭೈರವವಪುರ್ದರ್ಪೋದ್ಧತಂ ಧಾವತಿ ॥[159]

---

157 'ದೀಧೀಙ್', 'ವೇವೀಙ್' ಇವೆರಡೂ ಸಂಸ್ಕೃತ ಧಾತುಪಾಠದಲ್ಲಿ ಬರುವ ಧಾತುಗಳು. ಪಾಣಿನಿಸೂತ್ರದ ಪ್ರಕಾರ 'ಗುಣ', 'ವೃದ್ಧಿ'ಗಳೆಂಬ ವ್ಯಾಕರಣಕಾರ್ಯಗಳು ಈ ಎರಡು ಧಾತುಗಳಿಗೂ ಬರುವುದಿಲ್ಲ. (ಸೂತ್ರ—I. i. ೬). 'ಕ್ವಿಪ್' ಎಂಬ ಪ್ರತ್ಯಯ ಯಾವಾಗಲೂ ಲೋಪವನ್ನೇ ಪಡೆಯುತ್ತದೆ. (VI. i. ೬೭); ಅದು ಸನ್ನಿಹಿತವಾದಾಗ ಮುಂದಿನ ವರ್ಣಗಳಿಗೂ ಗುಣವೃದ್ಧಿಗಳುಂಟಾಗುವುದಿಲ್ಲ. (I. i. ೫).

158 ಇಲ್ಲಿಯೂ 'ಸಮಸ್ಪ್ರಾಕ್ಷಂ' ಮುಂತಾದ ಶಬ್ದಗಳಲ್ಲಿ ಕಷ್ಟತ್ವವಿರುವುದು ಸ್ಪಷ್ಟ. ವೈಯಾಕರಣಿಯ ಮಾತೆಂದು ತಿಳಿದಾಗ ಅದೇ ಗುಣವಾಗಿ ಪರಿಣಮಿಸುತ್ತದೆ.

159 ಮಹಾವೀರಚರಿತ, ಅಂಕ-೧.

ನರದೊಳ್ ಕಟ್ಟಿರುವೀ ಕಪಾಲಚಯದಿಂ ಕ್ರೂರಕ್ವಣತ್ ಕಂಕಣಳ್
ಕರಮಾ ಭೂಷಣಘೋಷದಿಂದೆ ನಭಮಂ ಮುಚ್ಚಿರ್ಪಳಿತ್ತೆತ್ತಲುಂ।
ಭರದಿಂ ಪೀರ್ದುಗುಳಿರ್ಪ ರಕ್ತತತಿಯಂ ತಾನಾಗೆ ಘೋರಂ ವಲಂ
ಪರಿಲೋಲಸ್ತನಭಾರಭೈರವಳಿವಳ್ ದರ್ಪೋದ್ಧತಳ್ ಧಾವಿಪಳ್ ‖[160]

ವಾಚ್ಯದ ಮಹಿಮೆಯಿಂದ 'ಕಷ್ಟ'ವೂ ಗುಣವಾಗುವುದಕ್ಕೆ ಉದಾಹರಣೆ:—

ಮಾತಂಗಾಃ ಕಿಮು ವಲ್ಗಿತೈಃ ಕಿಮಫಲೈರಾಡಂಬರೈರ್ಜಂಬುಕಾಃ
ಸಾರಂಗಾ ಮಹಿಷಾ ಮದಂ ವ್ರಜಥ ಕಿಂ ಶೂನ್ಯೇಷು ಶೂರಾ ನ ಕೇ।
ಕೋಪಾಟೋಪಸಮುದ್ಭಟೋತ್ಕಟಸಟಾಕೋಟೇರಿಭಾರೇಃ ಪುರಃ
ಸಿಂಧುಧ್ವಾನಿನಿ ಹುಂಕೃತೇ ಸ್ಫುರತಿ ಯತ್ ತದ್ಗರ್ಜಿತಂ ಗರ್ಜಿತಮ್ ‖

ಕರಿಗಳೆ ಕೆಮ್ಮನೇಕೆ ನಡೆವಿರ್, ವಿಫಲಂ ನರಿ ನಿಮ್ಮ ಡಂಬರಂ
ಹರಿಣಮೆ ಎಮ್ಮೆಯೇ ಬಿಡಿರಿ ಬಲ್ಮೆಯ, ಶೂನ್ಯದೊಳಲ್ಲ ಬೀರರಾರ್।
ಕೆರಳುತೆ ಭೀಕರೋತ್ಕಟಸಟಾಯುತ ಕೇಸರಿ ಗರ್ಜಿಪನ್ನೆಗಂ
ಭರದೊಳೆ ಮುಂದಿನಿಂದೆ ಬರೆ ಗರ್ಜನೆ ಗರ್ಜನೆಯಪ್ಪುದಲ್ಲಮೇ ‖

ಇಲ್ಲಿ ಸಿಂಹವು ವಾಚ್ಯವಾಗಿರುವುದರಿಂದ ಪರುಷಶಬ್ದಗಳು ಸಮಂಜಸವಾಗಿವೆ. ಸಂದರ್ಭದ ಮಹಿಮೆಯಿಂದ 'ಕಷ್ಟ'ವು ಗುಣವಾಗುವುದಕ್ಕೆ ಉದಾಹರಣೆ:—

ರಕ್ತಾಶೋಕ ಕೃಶೋದರೀ ಕ್ವ ನು ಗತಾ ತ್ಯಕ್ತ್ವಾನುರಕ್ತಂ ಜನಂ
ನೋ ದೃಷ್ಟೇತಿ ಮುಧೈವ ಚಾಲಯಸಿ ಕಿಂ ವಾತಾವಧೂತಂ ಶಿರಃ।
ಉತ್ಕಂಠಾಘಟಮಾನಷಟ್ಪದಘಟಾಸಂಘಟ್ಟದಷ್ಟಚ್ಛದಃ
ತತ್ಪಾದಾಹತಿಮಂತರೇಣ ಭವತಃ ಪುಷ್ಪೋದ್ಗಮೋಽಯಂ ಕುತಃ ‖

ಎಲೆ ರಕ್ತಾಶೋಕ ಪೇಳಯ್ ಪ್ರಿಯೆಯುವಳಗಲುತ್ತೆನ್ನನೆಲ್ಲಿಂಗೆ ಪೋದಳ್
ತಲೆಯಂ ನೀಂ ಬಿಮ್ಮನೇಂ ತೂಗುವೆಯುಳಿದಿಹಳಲ್ತೆಂದು ವಾತಾವಧೂತಂ।
ಸಲೆ ತತ್ಪಾದಾಪ್ತಘಾತಂ ದೊರೆಯದೆ ನಿನಗಂ ಬಂದುದೆಂತೈ ಸುಪುಷ್ಪಂ
ಬಲವತ್ಪ್ರೇಮಾತ್ತಸಂಸ್ಥಾಭ್ರಮರಪರಿಚಲತ್ ಕೇಸರಾಭೋಗರಮ್ಯಂ ‖

---

[160] ಇದು ಬೊಬ್ಬಿರಿದು ಬರುತ್ತಿರುವ ತಾಟಕೆಯ ವರ್ಣನೆ. ಇಲ್ಲಿ ಬೀಭತ್ಸರಸ ವ್ಯಂಗ್ಯವಾಗಿದೆ. ಅಕ್ಷರಗಳ ಕಟುತ್ವವು ಅದರ ಅಭಿವ್ಯಕ್ತಿಗೆ ಪೋಷಕವಾಗಿರುವುದರಿಂದ ಗುಣವೇ ಆಗಿದೆ.

ಇಲ್ಲಿ ರಕ್ತಾಶೋಕವು ತಲೆದೂಗುವುದನ್ನು ನೋಡಿ ಕುಪಿತನಾದ ವಿರಹಿಯ ವರ್ಣನೆ ಸಂದರ್ಭವಾಗಿರುವುದರಿಂದ ಕುಪಿತನ ಮಾತುಗಳಲ್ಲಿ ಅಕ್ಷರಪೌರುಷ್ಯ ಗುಣ ವಾಗಿದೆ.

ಹಾಗೆಯೇ ನೀರಸವಾದ ಸ್ಥಳದಲ್ಲಿ ಅದು ಗುಣವೂ ಎನಿಸುವುದಿಲ್ಲ; ದೋಷ ವೆಂದೂ ಎನಿಸುವುದಿಲ್ಲ. ಉದಾಹರಣೆ:—

ಶೀರ್ಣಘ್ರಾಣಾಂಘ್ರಿಪಾಣೀನ್ ವ್ರಣಿಭಿರಪಘನೈರ್ಘರ್ಘರಾವ್ಯಕ್ತ ಘೋಷಾನ್
ದೀರ್ಘಾಘ್ರಾತಾನಘೌಘೈಃ ಪುನರಪಿ ಘಟಯತ್ಯೇಕ ಉಲ್ಲಾಘಯನ್ ಯಃ।
ಘರ್ಮಾಂಶೋಸ್ತಸ್ಯ ವೋಽನ್ತರ್ದ್ವಿಗುಣಘನಘೃಣಾನಿಘ್ನನಿರ್ವಿಘ್ನವೃತ್ತೇ-
ರ್ದತ್ತಾರ್ಘಾಃ ಸಿದ್ಧಸಂಘೈರ್ವಿದಧತಂ ಘೃಣಯಃ ಶೀಘ್ರಮಂಹೋ ವಿಘಾತಮ್ ॥[161]

ಶೀರ್ಣಘ್ರಾಣಾಂಘ್ರಿಹಸ್ತರ್ ವ್ರಣಿಗಳಕರಣರ್ ಘರ್ಘರೆಂದಳ್ವವರ್ ವ್ಯಾ
ಕೀರ್ಣರ್ ಘೋರಂಗಳಿಂ ನಾರುವವರವಿರತಂ ಸರ್ವರುಂ ರೋಗಮುಕ್ತರ್।
ತೂರ್ಣಂ ಮೇಣಾರಿನಾ ಸೂರ್ಯನ ಕರನಿಸರಂ ಸತ್ಕೃಪಾಪಾರಭಾರಾ-
ಪೂರ್ಣಂ ದೇವರ್ಕಳಿಂದಂ ವಿನುತಮದಘಮಂ ತಾನೆ ಚೂರ್ಣಿಕ್ಕೆ ನಿಚ್ಚಂ॥

'ಅಪ್ರಯುಕ್ತ' ಮತ್ತು 'ನಿಹತಾರ್ಥ'ಗಳು ಶ್ಲೇಷೆಯಿರುವೆಡೆಗಳಲ್ಲಿ ದೋಷತ್ವ ವನ್ನು ಕಳೆದುಕೊಳ್ಳುತ್ತವೆ. ಉದಾಹರಣೆ:—

ಯೇನ ಧ್ವಸ್ತಮನೋಭವೇನ ಬಲಿಜಿತ್ಕಾಯಃ ಪುರಾಸ್ತ್ರೀಕೃತೋ
ಯಶ್ಚೋದ್ವೃತ್ತಭುಜಂಗಹಾರವಲಯೋ ಗಂಗಾಂ ಚ ಯೋಽಧಾರಯತ್।
ಯಸ್ಯಾಹುಃ ಶಶಿಮಚ್ಛಿರೋ ಹರ ಇತಿ ಸ್ತುತ್ಯಂ ಚ ನಾಮಾಮರಾಃ
ಪಾಯಾತ್ ಸ ಸ್ವಯಮಂಧಕಕ್ಷಯಕರಸ್ತ್ವಾಂ ಸರ್ವದೋಮಾಧವಃ ॥[162]

ಆರಿಂ ಧ್ವಂಸಿತಕಾಮನಿಂದೆ ಬಲಿಚಿತ್ಕಾಯಂ ಪುರಾಸ್ತ್ರೀಕೃತಂ
ಆರುದ್ವೃತ್ತ ಭುಜಂಗಹಾರವಲಯಂ ಗಂಗಾಧರಂ ಭಾವಿಸಲ್।

---

[161] ಮಯೂರನ ಸೂರ್ಯಶತಕ.

[162] ಈ ಪದ್ಯದ ವಿಶೇಷ ವಿವರಣೆಗೆ ಇದೇ ಲೇಖಕನ ಕನ್ನಡ ಧ್ವನ್ಯಾಲೋಕ, ಪುಟ ೪೯ ನ್ನು ನೋಡಿ.

ಆರಂ ವರ್ಣಿಪರೋ ಸುರರ್ ಶಶಿಶಿರಂ ದೇವಂ ಹರಂ ಸರ್ವದೋ-
ಮಾಲೋಲಂ ಪ್ರಭುವಂಧಕಕ್ಷಯಕರಂ ರಕ್ಷಿಕ್ಕೆತಾಂ ಸರ್ವರಂ ‖

ಇಲ್ಲಿ ಮಾಧವಸ ಪರವಾಗಿ ಅರ್ಥಮಾಡಿಕೊಳ್ಳುವಾಗ 'ಶಶಿಮತ್' ಎಂದರೆ 'ರಾಹು' ವೆಂಬುದು ಅಪ್ರಯುಕ್ತದೋಷ ಮತ್ತು 'ಅಂಧಕಕ್ಷಯ' ಎಂದರೆ 'ಯಾದವರ ವಾಸಸ್ಥಾನವಾದ ದ್ವಾರಕೆ' ಯೆಂಬುದು ನಿಹತಾರ್ಥದೋಷ. (ಆದರೆ ಶ್ಲೇಷೆಯ ವಿವಕ್ಷೆಯಿರುವುದರಿಂದ ಇವುಗಳ ದೋಷತ್ವ ತಪ್ಪಿದೆ.)

'ಅಶ್ಲೀಲ' ದೋಷವು ಒಮ್ಮೊಮ್ಮೆ ಗುಣವೆನಿಸುತ್ತದೆ. ಉದಾಹರಣೆಗೆ ಸುರತಗೋಷ್ಠಿಗಳಲ್ಲಿ ಗೋಪ್ಯವಸ್ತುವನ್ನು ಎರಡರ್ಥಗಳಿರುವ ಪದಗಳಿಂದ ಸೂಚಿಸಬೇಕೆಂದು ಕಾಮಶಾಸ್ತ್ರದಲ್ಲಿಯೇ ವಿಧಿಸಲಾಗಿದೆ—

ಕರಿಹಸ್ತೇನ ಸಂಬಾಧೇ ಪ್ರವಿಶ್ಯಾಂತರ್ವಿಲೋಡಿತೇ ।
ಉಪಸರ್ಪನ್ ಧ್ವಜಃ ಪುಂಸಃ ಸಾಧನಾಂತರ್ವಿರಾಜತೇ ‖[163]

ಕರಿಹಸ್ತಂ ಸಂಬಾಧಾಂ—
ತರದೊಳ್ ಪುಗುತಂದು ನೂಂಕೆ ಪುರುಷಧ್ವಜಮುಂ ।
ಮೆರೆವುದು ಪರಿತರ್ಪೆಡೆಯೊಳ್
ವರಸಾಧನ ನಿರತಸಂಗತಂ ಕಡುಪಿಂದಂ ‖

ಇದರಂತೆ ವೈರಾಗ್ಯಬೋಧಕವಾದ ಸಂದರ್ಭಗಳಲ್ಲಿಯೂ 'ಅಶ್ಲೀಲ'ವು ಗುಣವೇ

ಉತ್ತಾನೋಚ್ಛೂನಮಂಡೂಕಪಾಟಿತೋದರಸನ್ನಿಭೇ ।
ಕ್ಲೇದಿನಿ ಸ್ತ್ರೀವ್ರಣೇ ಸಕ್ತಿರಕೃಮೇಃ ಕಸ್ಯ ಜಾಯತೇ ‖

ತಲೆಕೆಳಗೆನೆ ಮಾಕಪ್ಪೆಯ
ಮಲಗಿಸಿ ಸೀಳ್ದಂದಮಾಗೆ ಹೊಟ್ಟೆಯನಸಿಯಿಂ!
ಮಲಮೊಸರುವ ಸ್ತ್ರೀವ್ರಣದೊಳ್
ಕಲೆವರೆ ಕ್ರಿಮಿಯಲ್ಲದಿರ್ಪರಾರಾದೊಡಮೇಂ ‖

ಹಾಗೆಯೇ—

---

163 ಇಲ್ಲಿ ಪುರುಷಧ್ವಜ = ಜನನೇಂದ್ರಿಯ, ಸಾಧನ = ಯೋನಿ, ಕರಿಹಸ್ತ = ಯೋನಿವಿದ್ರಾವಣಕ್ಕಾಗಿ ಕಾಮಶಾಸ್ತ್ರಸೂಚಿತ ಅಂಗುಲಿಮುದ್ರೆ, ಮುಂತಾದ ಗುಪ್ತಾರ್ಥಗಳು ವಿವಕ್ಷಿತ.

ನಿರ್ವಾಣವೈರದಹನಾಃ ಪ್ರಶಮಾದರೀಣಾಂ
ನಂದಂತು ಪಾಂಡುತನಯಾಃ ಸಹ ಮಾಧವೇನ।
ರಕ್ತಪ್ರಸಾಧಿತಭುವಃ ಕ್ಷತವಿಗ್ರಹಾಶ್ಚ
ಸ್ವಸ್ಥಾ ಭವನ್ತು ಕುರುರಾಜಸುತಾಃ ಸಭೃತ್ಯಾಃ ‖[164]

ಅರಿಸಂಹಾರದೆ ಶಾಂತಿಯಂ ಪಡೆಯೆ ವಿದ್ವೇಷಾಗ್ನಿ ಪಾಂಡುಕ್ಷಿತೀ
ಶ್ವರಪುತ್ರರ್ ಸರಸೀರುಹಾಕ್ಷಸೊಡನಾನಂದಂಬಡುತ್ತಿರ್ಕೆ ಮೇಣ್
ಉರುರಕ್ತಪ್ರಸಾರ ಪ್ರಸಾಧಿತಮಿದಾಗಲ್ ಭೂತಳಂ ವಿಗ್ರಹಂ
ಪಱಿಯಲ್ ಕೌರವರಾತ್ಮಭೃತ್ಯರೊಡನೆಲ್ಲರ್ ಸ್ವಸ್ಥರಾಗಿರ್ಕೆತಾಂ ‖[165]

ಇಲ್ಲಿ 'ಸ್ವಸ್ಥಾಃ' ಎಂಬ ಪದವು ('ಸಾಯಲಿ' ಎಂಬ ಅಶ್ಲೀಲಾರ್ಥವನ್ನು ಕೊಡುತ್ತಿದ್ದರೂ) ಬರಲಿರುವ ಅಮಂಗಲಸೂಚನೆಗೆ ಪೋಷಕವಾಗಿರುವುದರಿಂದ ಗುಣವೇ ಆಗಿದೆ.

'ಸಂದಿಗ್ಧ'ವೂ ಕೂಡ ವಾಚ್ಯದ ಮಹಿಮೆಯಿಂದ ನಿರ್ದಿಷ್ಟಾರ್ಥದ ಪ್ರತೀತಿಯನ್ನು ತರುತ್ತಿದ್ದು 'ವ್ಯಾಜಸ್ತುತಿ'ಯಲ್ಲಿ[166] ಪರ್ಯವಸಾನಗೊಳ್ಳುವುದಾದರೆ ಗುಣವೇ. ಉದಾಹರಣೆ:—

ಪೃಥುಕಾರ್ತಸ್ವರಪಾತ್ರಂ
ಭೂಷಿತನಿಃಶೇಷಪರಿಜನಂ ದೇವ।
ವಿಲಸತ್ ಕರೇಣುಗಹನಂ
ಸಂಪ್ರತಿ ಸಮಮಾವಯೋಃ ಸದನಮ್ ‖[167]

ಪೃಥುಕಾರ್ತಸ್ವರಪಾತ್ರಂ
ಭೂಷಿತನಿಶ್ಶೇಷಪರಿಜನಂ ಭಾವಿಪೊಡಂ।

---

164 ವೇಣೀಸಂಹಾರ ಪ್ರಸ್ತಾವನೆ.

165 ಭಾಷಾಂತರ ಮೈಸೂರು ಸೀತಾರಾಮಶಾಸ್ತ್ರಿಗಳದು.

166 ಇದರ ವಿವರಣೆ ಮುಂದೆ ಹತ್ತನೆಯ ಉಲ್ಲಾಸದಲ್ಲಿ ಬರುತ್ತದೆ.

167 'ಪೃಥು+ಕಾರ್ತಸ್ವರ (=ಚಿನ್ನ)+ಪಾತ್ರ' ಅಥವಾ 'ಪೃಥುಕ+ಆರ್ತಸ್ವರ+ಪಾತ್ರ' 'ಭೂಷಿತ+ನಿಶ್ಶೇಶ+ಪರಿಜನ' ಅಥವಾ 'ಭೂ+ಉಷಿತ+ನಿಶ್ಶೇಷ+ಪರಿಜನ' 'ವಿಲಸತ್+ಕರೇಣು (=ಆನೆ)+ಗಹನ' ಅಥವಾ 'ವಿಲಸತ್ಕ+ರೇಣು+ಗಹನ'. ಕ್ರಮವಾಗಿ ಮೊದಲನೆ ಅರ್ಥವು ಅರಮನೆಗೂ ಎರಡನೆಯದು ಕವಿಯ ಮನೆಗೂ ಅನ್ವಯಿಸುತ್ತವೆ. ಶ್ಲೇಷೆಯು ವಾಚ್ಯಬಲದಿಂದ 'ಸಂದಿಗ್ಧ' ದೋಷವನ್ನು ದೂರೀಕರಿಸಿ ಅದನ್ನಿಲ್ಲಿ ಗುಣವಾಗಿಸಿದೆ.

ವಿಲಸತ್ಕರೇಣುಗಹನಂ
ಸದಸಂ ಸಮಮಾಯ್ತು ಮೇಣಿರ್ವರ್ಗಂ ‖

ಹೇಳುವವನು ಹಾಗು ಕೇಳುವವನು ಇಬ್ಬರೂ ಅರ್ಥವನ್ನು ಅರಿಯುವಂತಿದ್ದರೆ 'ಅಪ್ರತೀತ'ವೂ ಗುಣವೇ. ಉದಾಹರಣೆ :—

ಆತ್ಮಾರಾಮಾ ವಿಹಿತರತಯೋ ನಿರ್ವಿಕಲ್ಪೇ ಸಮಾಧೌ
ಜ್ಞಾನೋದ್ರೇಕಾದ್ ವಿಘಟಿತತಮೋಗ್ರಂಥಯಃ ಸತ್ತ್ವನಿಷ್ಠಾಃ ।
ಯಂ ವೀಕ್ಷನ್ತೇ ಕಮಪಿ ತಮಸಾಂ ಜ್ಯೋತಿಷಾಂ ವಾ ಪರಸ್ತಾತ್
ತಂ ಮೋಹಾಂಧಃ ಕಥಮಯಮಮುಂ ವೇತ್ತಿ ದೇವಂ ಪುರಾಣಮ್ ‖[168]

ರಮಿಸುತ್ತುಂ ನಿಟ್ಟೆಯಿಂದಾತ್ಮನೊಳತಿವಿಶದಧ್ಯಾನದೊಳ್ ಸಲ್ಮೆಯಂ ತಾ
ಳ್ದಮಲ ಜ್ಞಾನರ್ದ್ಧಿಯಿಂದಂ ಮಿಗೆ ಪಱಿಯೆ ತಮೋಗ್ರಂಥಿಗಳ್ ಸತ್ತ್ವನಿಷ್ಠರ್ ।
ತಿಮಿರಕ್ಕಂ ಜೋತಿಗಂ ದೂರದೆ ತೊಳಗುತುಮಿರ್ಪಾವನಂ ನೋೞ್ಪರತ್ಯು-
ತ್ತಮನಾಗಿರ್ಪಾದಿರತ್ನಪ್ರಭುವನಱಿವನೆಂತೀಯವಿದ್ಯಾಂಧಭೂತಂ ‖[169]

ಹೀಗೆಯೇ ತತ್ತ್ವಪರ್ಯಾಲೋಚನೆಯ ಸಂದರ್ಭದಲ್ಲಿಯೂ 'ಅಪ್ರತೀತ' ದೋಷವೇ ಗುಣವೆನಿಸುತ್ತದೆ. ಉದಾಹರಣೆ :—

ಷಡಧಿಕದಶನಾಡೀಚಕ್ರಮಧ್ಯಸ್ಥಿತಾತ್ಮಾ
ಹೃದಿವಿನಿಹಿತರೂಪಃ ಸಿದ್ಧಿದಸ್ತದ್ವಿದಾಂ ಯಃ ।
ಅವಿಚಲಿತಮನೋಭಿಃ ಸಾಧಕೈರ್ಮೃಗ್ಯಮಾಣಃ
ಸ ಜಯತಿ ಪರಿಣದ್ಧಃ ಶಕ್ತಿಭಿಃ ಶಕ್ತಿನಾಥಃ ‖[170]

ಪದಿನಾರೆಂದೆನೆ ನಾಡಿಯಾ ನಡುವೆ ತಾಂ ನಿಂದಂ ಸಮಂತಾವನೋ
ಹೃದಯಾಂತಃಸ್ಥಿತನಾಗಿ ಸಿದ್ಧಿಗುಡುವಂ ಸುಜ್ಞಾನಿಗಳ್ಗಾವನೋ ।
ಪುದಿದೇಕಾಂತಮನಂಗಳಿಂದರಸುವರ್ ಮೇಣಾರನಾ ಸಾಧಕರ್
ಅದೆ ತಾಂ ಶಕ್ತಿಪರೀತಶಕ್ತಿಪತಿಯೇ ಮೇಲೆಂಬೆನನ್ಯರ್ಕಳಿಂ ‖

---

168 ವೇಣೀಸಂಹಾರ, ಅಂಕ-೧.

169 ಭಾಷಾಂತರ ಮೈಸೂರು ಸೀತಾರಾಮಶಾಸ್ತ್ರಿಗಳದು.

170 ಮಾಲತೀಮಾಧವ, ಅಂಕ-೫.

ಹೀನವರ್ಗದ ಪಾತ್ರಗಳ ಬಾಯಲ್ಲಿ 'ಗ್ರಾಮ್ಯ'ವೂ ಗುಣವೇ ಆಗುತ್ತದೆ. ಉದಾಹರಣೆ :—

ಫುಲ್ಲುಕ್ಕರಂ ಕಲಮಕೂರಣಿಹಂ ವಹನ್ತಿ
ಜೇ ಸಿಂಧುವಾರವಿಡವಾ ಮಹ ವಲ್ಲಹಾದೇ ।
ಜೇ ಗಾಲಿದಸ್ಸ ಮಹಿಸೀದಹಿಣೋ ಸರಿಚ್ಛಾ
ದೇ ಕಿಂ ಚ ಮುದ್ಧ ವಿಅಇಲ್ಲಪಸೂಣಪುಂಜಾ ॥[171]

ಕಳವೆಯ ಗಂಜಿಯ ಬಣ್ಣವ
ತಳೆಯುವ ನಿರ್ಗುಂಡಿಯೆಲರ ಮೆಚ್ಚುವೆನಾಂ ನೀರ್-।
ಕಳಿದೆಮ್ಮೆಯ ಮೊಸರಂದದೆ
ಪೊಳೆ ಪೊಳೆಯುವ ಫುಲ್ಲಮಲ್ಲಿಕಾಮಾಲೆಯುಮಂ ॥

ಇಲ್ಲಿ ಕಳವೆ, ಗಂಜಿ, ಎಮ್ಮೆ, ಮೊಸರು, ಮುಂತಾದುವು 'ಗ್ರಾಮ್ಯ'ವಾದರೂ ವಿದೂಷಕನ ಬಾಯಲ್ಲಿ ಗುಣವಾಗಿವೆ.

'ನ್ಯೂನಪದ'ವು ಒಮ್ಮೊಮ್ಮೆ ಗುಣವಾಗುವುದಕ್ಕೆ ಉದಾಹರಣೆ :—

ಗಾಢಾಲಿಂಗನವಾಮನೀಕೃತಕುಚಪ್ರೋದ್ಭೂತರೋಮೋದ್ಗಮಾ
ಸಾಂದ್ರಸ್ನೇಹರಸಾತಿರೇಕವಿಗಲತ್ ಶ್ರೀಮನ್ನಿತಂಬಾಂಬರಾ ।
ಮಾ ಮಾ ಮಾನದ ಮಾಽತಿ ಮಾಮಲಮಿತಿ ಕ್ಷಾಮಾಕ್ಷರೋಲ್ಲಾಪಿನೀ
ಸುಪ್ತಾ ಕಿಂ ನು ಮೃತಾ ನು ಕಿಂ ಮನಸಿ ಮೇ ಲೀನಾ ವಿಲೀನಾ
ನು ಕಿಮ್ ॥[172]

ಗಾಢಾಲಿಂಗನಮೊತ್ತಿರಲ್ ಕುಚಗಳಿಂ ಪ್ರೋದ್ಭೂತರೋಮೋದ್ಗಮಳ್
ಸಾಂದ್ರಪ್ರೇಮರಸಂ ಗಡೆತ್ತೆ ಸಡಿಲಂ ಶ್ರೀಮನ್ನಿತಂಬಾಂಬರಂ ।
ಬೇಡಾ ಬೇಡತಿ ಸಾಕು ಬಿಟ್ಟು ಬಿಡು ನೀನೆಂಬಳ್ ಗಡಧ್ವೋಕ್ತಿಯಿಂ
ಕಾಣೆಂ ಸುಪ್ತಿಯೊ, ಸತ್ತಳೋ, ಮನದೊಳೇಂ ಲೀನಳ್ ವಿಲೀನಳ್ ವಲಂ ॥

ಕೆಲವೊಮ್ಮೆ ಅದು ಗುಣ, ದೋಷಗಳೆರಡೂ ಆಗದಿರುವುದಕ್ಕೆ ಉದಾಹರಣೆ :—

---

171 ರಾಜಶೇಖರನ ಕರ್ಪೂರಮಂಜರಿ, ಅಂಕ-೧. ವಿದೂಷಕನ ವಾಕ್ಯ.

172 ಅಮರುಶತಕ.

ತಿಷ್ಠೇತ್ ಕೋಪವಶಾತ್ ಪ್ರಭಾವಪಿಹಿತಾ ದೀರ್ಘಂ ನ ಸಾ ಕುಪ್ಯತಿ
ಸ್ವರ್ಗಾಯೋತ್ಪತಿತಾ ಭವೇನ್ಮಯಿ ಪುನರ್ಭಾವಾರ್ದ್ರಮಸ್ಯಾ ಮನಃ।
ತಾಂ ಹರ್ತುಂ ವಿಬುಧದ್ವಿಷೋಽಪಿ ನ ಚ ಮೇ ಶಕ್ತಾಃ ಪುರೋವರ್ತಿನೀಂ
ಸಾ ಚಾತ್ಯಂತಮಗೋಚರಂ ನಯನಯೋರ್ಯಾತೇತಿ ಕೋಽಯಂ ವಿಧಿಃ ‖[173]

ಕೋಪೋದ್ರಿಕ್ತೆಯೆ ಮೈಮೆಯಿಂ ಮರೆಯೆನಲ್ ನಲ್ಲಳ್ ಚಿರಂ ಕೋಪಿಸಳ್
ಸ್ವರ್ಗಕ್ಕೋಡಿದಳೇನಹಾ, ಸತಿಗಮಾ ಭಾವಾರ್ದ್ರಮೆನ್ನೊಳ್ ಮನಂ।
ಎನ್ನಿಂದಾಕೆಯನೆತ್ತಿಕೊಳ್ವ ಕಡುಪಂ ಕಾಣರ್ ಸುರಾರಾತಿಗಳ್
ಮೇಣಿನ್ನುಂ ಗಡ ಕಣ್ಗೆ ಬಾರಳೆನಲಾನೇನೆಂಬೆನೀ ದೈವಮಂ ‖

ಇಲ್ಲಿ 'ಪಿಹಿತಾ' (=ಮರೆಯಾಗಿರುವಳು) ಎಂದಾದಮೇಲೆ 'ಇಲ್ಲ; ಹಾಗಿರಲಾರದು' ಎಂಬ ಮಾತುಗಳು ಕಡಿಮೆಯಾಗಿವೆ. ಇದರಿಂದ ಯಾವ ವಿಶೇಷ ಸಾರ್ಥಕ್ಯವೂ ಬಾರದ ಪ್ರಯುಕ್ತ ಗುಣವೆನ್ನುವಂತಿಲ್ಲ. ಪದ್ಯದಲ್ಲೆಲ್ಲ ಮುಂದಿನ ವಿಚಾರವು ಹಿಂದಿನ ವಿಚಾರವನ್ನು ಬಾಧಿಸುತ್ತ ಸಾಗುವುದರಿಂದ ಇವನ್ನು ದೋಷವೆನ್ನುವಂತೆಯೂ ಇಲ್ಲ.

'ಅಧಿಕಪದ'ವೂ ಒಮ್ಮೊಮ್ಮೆ ಗುಣವಾಗುವುದುಂಟು. ಉದಾಹರಣೆ:—

ಯದ್ವಂಚನಾಹಿತಮತಿರ್ಬಹುಚಾಟುಗರ್ಭಂ
ಕಾರ್ಯೋನ್ಮುಖಃ ಖಲಜನಃ ಕೃತಕಂ ಬ್ರವೀತಿ।
ತತ್ ಸಾಧವೋ ನ ನ ವಿದನ್ತಿ ವಿದನ್ತಿ ಕಿಂತು
ಕರ್ತುಂ ವೃಥಾ ಪ್ರಣಯಮಸ್ಯ ನ ಪಾರಯನ್ತಿ ‖[174]

ವಂಚನೆಯೊಂದರೊಳ್ ಕೃತವಿನಿಶ್ಚಯರಾಗಿರುತುಂ ಸ್ವಕಾರ್ಯಮಾ-
ತ್ರೋಚಿತಮಪ್ಪ ಜೇನ್ನುಡಿಗಳಂ ತವೆ ಕೈತವದಿಂದೆ ದುರ್ಜನರ್।
ಸೂಚಿಪರೆಂಬುದಂ ನಿಜದೆ ಕಾಣರೆ? ಕಾಂಬರು ಸಜ್ಜನರ್ಕಳಾ-
ಲೋಚನೆಯಾದೊಡಿಲ್ಲ ಸಟೆಯಿಂ ಪ್ರಣಯೋತ್ಕರಮಂ ಪ್ರಕಾಶಿಸಲ್ ‖

ಇಲ್ಲಿ ಎರಡನೆಯ ಸಲ ಬಂದ 'ವಿದನ್ತಿ' (=ಅರಿವರು) ಎಂಬುದು (ಅರಿವಿರುವುದು ಅವರಲ್ಲಿಯೇ ವಿನಾ ಮಿಕ್ಕವರಲ್ಲಲ್ಲವೆಂಬ) ಅನ್ಯಯೋಗವ್ಯವಚ್ಛೇದವನ್ನು ಸೂಚಿಸುವುದರಿಂದ ಗುಣವಾಗಿದೆ. ಇನ್ನೊಂದು ಉದಾಹರಣೆ:—

---

173 ವಿಕ್ರಮೋರ್ವಶೀಯ, ಅಂಕ-೪.

174 ಹೋಲಿಸಿ **ಕನ್ನಡ ಧ್ವನ್ಯಾಲೋಕ** ಪುಟ ೧೦೩-೪.

ವದ ವದ ಜಿತಃ ಸ ಶತ್ರು-
ರ್ನ ಹತೋ ಜಲ್ಪಂಶ್ಚ ತವ ತವಾಸ್ಮೀತಿ।
ಚಿತ್ರಂ ಚಿತ್ರಮರೋದೀತ್
ಹಾಹೇತಿ ಪರಂ ಮೃತೇ ಪುತ್ರೇ ॥

ನುಡಿನುಡಿ ಪಗೆಯೇಂ ಸೋಲ್ತನೆ?
ಕಡಿಯದೆ ತಡೆದಿರ್ಪೆ ನಿನ್ನ ನಿನ್ನೆಂಬುದರಿಂ।
ಮಡಿದಿರೆ ಮಗನವನಳ್ವಂ
ಬಿಡದೆಂತುಂ ಚಿತ್ರಚಿತ್ರಮಾಗಿರ್ಪಿನೆಗಂ ॥

ಹೀಗೆ ಹರ್ಷ, ಭಯ ಮುಂತಾದುವುಗಳ ಆಧಿಕ್ಯದಿಂದ ಕೂಡಿದ ವ್ಯಕ್ತಿಯನ್ನು ವರ್ಣಿಸುವಾಗಲೆಲ್ಲಾ 'ಅಧಿಕಪದ'ವು ಗುಣವೇ.

'ಕಥಿತಪದ'ವು ಕೂಡ (೧) 'ಲಾಟಾನುಪ್ರಾಸ'[175] ಹಾಗು (೨) 'ಅರ್ಥಾಂತರ ಸಂಕ್ರಮಿತವಾಚ್ಯ' ಧ್ವನಿಯಲ್ಲಿ ಮತ್ತು (೩) ವಿಧಿ-ಅನುವಾದ ಭಾವವುಳ್ಳ ವಾಕ್ಯ ದ್ವಯವು ಸೇರಿದಾಗ ಗುಣವಾಗುತ್ತದೆ. ಕ್ರಮವಾಗಿ ಉದಾಹರಣೆಗಳು—

೧. **ಸಿತಕರಕರರುಚಿರವಿಭಾ ವಿಭಾ**ಕರಾಕಾರ ಧರಣಿಧರ ಕೀರ್ತಿಃ।
**ಪೌರುಷಕಮಲಾ ಕಮಲಾ** ಸಾಪಿ ತವೈವಾಸ್ತಿ ನಾನ್ಯಸ್ಯ ॥

ಅರಸನೆ ಸಿತಕರಕರದೊಲ್
ಸುರುಚಿರಮೀ ಕೀರ್ತಿ ಭಾಸ್ವರಂ ಭಾಸ್ಕರನೊಲ್।
ವರಜಯಸಿರಿಯುಂ ಸಿರಿಯುಂ
ಕರಮಿರ್ಪರ್ ನಿನ್ನೊಳೊರ್ವನೊಳ್ ನಲವಿಂದಂ ॥

೨. ತಾಲಾ ಜಾಲಂತಿ ಗುಣಾ ಜಾಲಾ ದೇ ಸಹಿಅಏಹಿಂ ಘೇಪ್ಪನ್ತಿ।
ರಇಕಿರಣಾಣುಗ್ಗಹಿಆಇँ ಹೋನ್ತಿ ಕಮಲಾಇँ ಕಮಲಾಇँ ॥[177]

ಜನಿಪವು ಗುಣಂಗಳಾಗಳ್
ಮನದೊಳ್ಪಿಂ ಸಹೃದಯರ್ಕಳೊಪ್ಪುವರೇಗಳ್।

---

[175] ಇದರ ವಿವರಣೆ ಮುಂದೆ ಒಂಭತ್ತನೆಯ ಉಲ್ಲಾಸದಲ್ಲಿ ಬರುತ್ತದೆ.

[176] 'ಕರ-ಕರ' ಮುಂತಾದ ಆವೃತ್ತಿಯಲ್ಲಿ ಲಾಟಾನುಪ್ರಾಸವಿದೆ.

[177] ಹೋಲಿಸಿ—**ಕನ್ನಡ ಧ್ವನ್ಯಾಲೋಕ** ಪುಟ ೨೭.

ದಿನಕರಕಿರಣಾನುಗ್ರಹ
ಮನುಗೊಳೆ ತಾಮಪ್ಪವಲ್ತೆ ನಳಿನಂ ನಳಿನಂ ॥

೩. ಜಿತೇಂದ್ರಿಯತ್ವಂ ವಿನಯಸ್ಯ ಕಾರಣಂ
ಗುಣಪ್ರಕರ್ಷೋ ವಿನಯಾದವಾಪ್ಯತೇ ।
ಗುಣಪ್ರಕರ್ಷೇಣ ಜನೋಽನುರಜ್ಯತೇ
ಜನಾನುರಾಗಪ್ರಭವಾ ಹಿ ಸಂಪದಃ ॥

ವಿನಯಕ್ಕಿಂದ್ರಿಯಜಯವೇ ಕಾರಣ
ವಿನಯದೆ ಬರುವುದು ಗುಣದೊದವು ।
ಗುಣದೊದವದೆ ಜನರಾಗವ ತಹುದು
ಜನರನುರಾಗದೆ ಸಿರಿಯಹುದು ॥[178]

ಈಗಾಗಲೇ ಉದಾಹೃತವಾಗಿರುವ **'ಪ್ರಾಗಪ್ರಾಪ್ತ . . .'**[179] ಎಂಬುದೇ 'ಪತತ್ಪ್ರಕರ್ಷ'ವು ಗುಣವಾಗುವುದಕ್ಕೂ ಲಕ್ಷ್ಯ. 'ಸಮಾಪ್ತ ಪುನರುಕ್ತ'ವು ಗುಣದೋಷವೆರಡೂ ಅಲ್ಲವೆನಿಸುವಂತೆ ಇರಬಹುದು, ಕೇವಲ ವಿಶೇಷಣಗಳ ಸಿದ್ಧಿಗಾಗಿ ಪುನರುಕ್ತಿಯಿರದೆ ಹೊಸದೊಂದು ವಾಕ್ಯದ ಸಿದ್ಧಿಗಾಗಿ ಅದು ಪ್ರವೃತ್ತವಾಗಿದ್ದರೆ ಈಗಲೇ ಹೇಳಲಾದ **'ಪ್ರಾಗಪ್ರಾಪ್ತ . . .'** ಎಂಬುದೇ ಇದಕ್ಕೂ ಲಕ್ಷ್ಯ.

'ಅಸ್ಥಾನಸ್ಥಸಮಾಸ'ವೂ ಕೆಲವೊಮ್ಮೆ ಗುಣವೆನಿಸುವುದಕ್ಕೆ ಇಲ್ಲಿಯೇ ಮೇಲೆ ('ಕಷ್ಟ' ಗುಣವೆನಿಸುವುದಕ್ಕೆ ಲಕ್ಷ್ಯವಾಗಿ) ಉದಾಹರಿಸಲಾದ **'ರಕ್ತಾಶೋಕ. . .'** ಮಂತಾದುವೇ ಉದಾಹರಣೆ.

ಹಾಗೆಯೇ 'ಗರ್ಭಿತ'ವೂ ಗುಣವಾಗಬಲ್ಲುದು. ಉದಾಹರಣೆ:—

ಹುಮಿ ಅವಹತ್ಥಿಅರೇಹೋ ಣಿರಂಕುಸೋ ಅಹ ವಿವೇಅರಹಿಓ ವಿ ।
ಸಿವಿಣೇ ವಿ ತುಮಮ್ಮಿ ಪುಣೋ **ಪತ್ತಿ**ಹಿ ಭತ್ತಿಂ ಣ ಪಸುಮರಾಮಿ ॥[180]

---

[178] ಇಲ್ಲಿ ಹಿಂದಿನ ವಾಕ್ಯದಲ್ಲಿ ಯಾವುದು ವಿಹಿತವಾಗಿದೆಯೋ (=*Predicated*) ಅದೇ ಮುಂದಿನ ವಾಕ್ಯದಲ್ಲಿ ಅನುವಾದ್ಯ (=*Subject*) ವಾಗಿದೆ.

[179] ಇದೇ ಉಲ್ಲಾಸದಲ್ಲಿ ಹಿಂದೆ 'ಪ್ರತಿಕೂಲವರ್ಣ' ದೋಷಕ್ಕೆ ಲಕ್ಷ್ಯವಾಗಿ.

[180] ಆನಂದವರ್ಧನನ 'ವಿಷಮಬಾಣಲೀಲೆ'ಯಿಂದ ಉದಾಹೃತವೆಂದು ಮಾಣಿಕ್ಯಚಂದ್ರ ಬರೆದಿದ್ದಾನೆ.

ಗೆರೆಯಂ ದಾಂಟಿದೆ ನಕ್ಕುಂ
ನಿರಂಕುಶಂ ಮೇಣ್ ವಿವೇಕವಿಕಲಂ ಮತ್ತೆಂ- |
ತಿರೆಯುಂ ದೊರೆಯೇ ನಂಬಯ್
ಮರೆಯೆಂ ಗಡ ಭಕ್ತಿಯೊಂದನೆಂದುಂ ನಿನ್ನೊಳ್ ||

ಇಲ್ಲಿ 'ಪತ್ತಿಹಿ' (=ನಂಬು) ಎಂದು ವಾಕ್ಯದ ನಡುವೆ ವಾಕ್ಯಾಂತರ ಬಂದಿದ್ದರೂ 'ಗರ್ಭಿತ' ದೋಷವಾಗದೆ ಗುಣವೆನಿಸಲು ಅದಕ್ಕೆ ಹೆಚ್ಚಿನ ನಂಬಿಕೆಯನ್ನುಂಟು ಮಾಡುವ ಔಚಿತ್ಯವಿರುವುದೇ ಕಾರಣ. ಹೀಗಿಯೇ ದೋಷಗಳು ಗುಣತ್ವವನ್ನು ಪಡೆಯುವ ಉಳಿದ ಪ್ರಕಾರಗಳನ್ನೂ ಲಕ್ಷ್ಯಗಳ ಪರಿಶೀಲನೆಯಿಂದ ವಾಚಕರೇ ಊಹಿಸಿಕೊಳ್ಳಬೇಕು.

## ರಸದೋಷಗಳು

ವ್ಯಭಿಚಾರಿರಸಸ್ಥಾಯಿಭಾವಾನಾಂ ಶಬ್ದವಾಚ್ಯತಾ |
ಕಷ್ಟಕಲ್ಪನಯಾ ವ್ಯಕ್ತಿರನುಭಾವವಿಭಾವಯೋಃ || ೧೨ ||

ಪ್ರತಿಕೂಲವಿಭಾವಾದಿಗ್ರಹಾ ದೀಪ್ತಿಃ ಪುನಃ ಪುನಃ |
ಅಕಾಂಡೇ ಪ್ರಥನಚ್ಛೇದೌ ಅಂಗಸ್ಯಾಪ್ಯತಿವಿಸ್ತೃತಿಃ || ೧೩ ||

ಅಂಗಿನೋಽನನುಸಂಧಾನಂ ಪ್ರಕೃತೀನಾಂ ವಿಪರ್ಯಯಃ |
ಅನಂಗಸ್ಯಾಭಿಧಾನಂ ಚ ರಸೇ ದೋಷಾಃ ಸ್ಯುರೀದೃಶಾಃ || ೧೪ ||[181]

ಈ ಹತ್ತೂ ರಸದೋಷಗಳು :—(೧) ವ್ಯಭಿಚಾರಿಭಾವ, ರಸ, ಮತ್ತು ಸ್ಥಾಯಿಭಾವಗಳನ್ನು ನೇರವಾಗಿ ಅವುಗಳ ಹೆಸರಿನಿಂದಲೇ ಹೆಸರಿಸುವುದು (ಸ್ವಶಬ್ದವಾಚ್ಯತ್ವ), (೨) ಅನುಭಾವ, ವಿಭಾವಗಳ ಅಭಿವ್ಯಕ್ತಿಯಲ್ಲಿ ಕಷ್ಟಕಲ್ಪನೆ, (೩) ಪ್ರಕೃತರಸಕ್ಕೆ ವಿರುದ್ಧವಾದ ವಿಭಾವಾದಿಗಳ ವರ್ಣನೆ, (೪) ಅಂಗಭೂತ ರಸಗಳ ಪುನಃ ಪುನಃ ಪರಿಪೋಷ, (೫) ಅನವಸರದಲ್ಲಿ ಅಭಿವ್ಯಕ್ತಿ, (೬) ಅನವಸರದಲ್ಲಿ ರಸವಿಚ್ಛೇದ, (೭) ಅಪ್ರಧಾನದ ಅತಿವಿಸ್ತೃತಿ, (೮) ಪ್ರಧಾನದ ವಿಸ್ಮರಣ, (೯) ಪ್ರಕೃತಿಗತ ಔಚಿತ್ಯಕ್ಕೆ ವಿರೋಧ, ಮತ್ತು (೧೦) ರಸಕ್ಕೆ ಅನುಪಯೋಗಿಗಳ ವರ್ಣನೆ.

---

[181] ಹೋಲಿಸಿ—ಕನ್ನಡ ಧ್ವನ್ಯಾಲೋಕ ಮೂರನೆಯ ಉದ್ದ್ಯೋತ.

### (೧) ವ್ಯಭಿಚಾರಿಭಾವಗಳ ಸ್ವಶಬ್ದವಾಚ್ಯತ್ವ

ಸವ್ರೀಡಾ ದಯಿತಾನನೇ ಸಕರುಣಾ ಮಾತಂಗಚರ್ಮಾಂಬರೇ
ಸತ್ರಾಸಾ ಭುಜಗೇ ಸವಿಸ್ಮಯರಸಾ ಚಂದ್ರೇಽಮೃತಸ್ಯಂದಿನಿ।
ಸೇರ್ಷ್ಯಾ ಜಹ್ನುಸುತಾವಲೋಕನವಿಧೌ ದೀನಾ ಕಪಾಲೋದರೇ
ಪಾರ್ವತ್ಯಾ ನವಸಂಗಮಪ್ರಣಯಿನೀ ದೃಷ್ಟಿಃ ಶಿವಾಯಾಸ್ತು ವಃ॥

ಪ್ರಿಯನಾ ವಕ್ತ್ರಕೆ ನಾಣ್ಚುವಾ, ಕೊರಗುವಾ ಮಾತಂಗಚರ್ಮಕ್ಕಣಂ
ಭಯಗೊಳ್ವಾ ಭುಜಗಕ್ಕೆ, ವಿಸ್ಮಯಿಸುವಾ ಮತ್ತಂ ಸುಧಾಸೂತಿಗಂ।
ನಿಯತಂ ಗಂಗೆಗೆ ಕೋಪಿಸಿರ್ಪ, ಕರಮಾ ದೀನಂ ಕಪಾಲಾಂಕದೊಳ್
ನಯನಂ ನೂತನಸಂಗಮಪ್ರಣಯಿ ಮೇಣ್ ಪಾಲಿಕ್ಕೆ ತಾಂ ಗೌರಿಯಾ॥

ಇಲ್ಲಿ ನಾಚಿಕೆ ಮುಂತಾದ ವ್ಯಭಿಚಾರಿಭಾವಗಳೆಲ್ಲ ಸ್ವಶಬ್ದಗಳಿಂದಲೇ ಉಕ್ತವಾಗಿಬಿಟ್ಟಿವೆ. ಪಾಠವನ್ನು ಕೆಳಗೆ ಬರೆದಂತೆ ತಿದ್ದಿಕೊಂಡರೆ ಈ ದೋಷ ತಪ್ಪುವುದು:—

'ವ್ಯಾನಮ್ರಾ ದಯಿತಾನನೇ ಮುಕುಲಿತಾ ಮಾತಂಗಚರ್ಮಾಂಬರೇ
ಸೋತ್ಕಂಪಾ ಭುಜಗೇ ನಿಮೇಷರಹಿತಾ ಚಂದ್ರೇಽಮೃತಸ್ಯಂದಿನಿ।
ಮೀಲದ್ಭ್ರೂಃ ಸುರಸಿಂಧುದರ್ಶನವಿಧೌ ಮ್ಲಾನಾ ಕಪಾಲೋದರೇ . . .'

ಪ್ರಿಯನಾ ವಕ್ತ್ರಕೆ ಬಾಗುವಾ, ಮುಗಿಯುವಾ ಮಾತಂಗಚರ್ಮಕ್ಕಣಂ,
ನಡುಗುತ್ತುಂ ಭುಜಗಕ್ಕೆ, ಮುಚ್ಚದಿರುತುಂ ಮತ್ತಂ ಸುಧಾಸೂತಿಗಂ।
ಸಲೆ ಕೊಂಕಲ್ ಕುಡುವುರ್ಪ ಗಂಗೆಯೆಡೆಯೊಳ್, ಮ್ಲಾನಂ ಕಪಾಲಾಂಕ
ದೊಳ್. . .

### ರಸದ ಸ್ವಶಬ್ದವಾಚ್ಯತ್ವ

ರಸವನ್ನು (೧) 'ರಸ' ಎಂಬ ಶಬ್ದದಿಂದ ಇಲ್ಲವೆ (೨) 'ಶೃಂಗಾರ' ಮುಂತಾದ ಶಬ್ದಗಳಿಂದ ಹೇಳಬಹುದು. ಕೆಳಗೆ ಎರಡಕ್ಕೂ ಕ್ರಮವಾಗಿ ಉದಾಹರಣೆಗಳನ್ನು ಬರೆದಿದೆ:—

೧. ತಾಮನಂಗಜಯಮಂಗಲಶ್ರಿಯಂ
ಕಿಂಚಿದುಚ್ಚಭುಜಮೂಲಲೋಕಿತಾಮ್।

ನೇತ್ರಯೋಃ ಕೃತವತೋಽಸ್ಯ ಗೋಚರೇ
ಕೋಽಪ್ಯಜಾಯತ **ರಸೋ** ನಿರಂತರಃ ॥

ಅಂಗಜ ಮಂಗಲಸಿರಿಯಾ
ತುಂಗಸ್ತನಮೂಲದೃಷ್ಟ ಸುಂದರರುಚಿಯಾ ।
ಸಂಗಂ ಕಂಗಳಿಗೊದಗಿರೆ
ಸಂಗಡಮೊಗೆತಂದುದೊಂದು ರಸಮದು ಭರದಿಂ ॥

೨. ಆಲೋಕ್ಯ ಕೋಮಲಕಪೋಲತಲಾಭಿಷಿಕ್ತ-
ವ್ಯಕ್ತಾನುರಾಗಸುಭಗಾಮಭಿರಾಮಮೂರ್ತಿಮ್ ।
ಪಶ್ಯೈಷ ಬಾಲ್ಯಮತಿವೃತ್ಯ ವಿವರ್ತಮಾನಃ
**ಶೃಂಗಾರ**ಸೀಮನಿ ತರಂಗಿತ ಮಾತನೋತಿ ॥

ಕೋಮಲ ಕಪೋಲ ತಲದೊಳ್
ರೋಮಾಂಚಿತೆಯಪ್ಪ ಚೆನ್ನೆಯುಂ ಕಂಡೀತಂ ।
ಸೀಮಾತಿಗ ಶೃಂಗಾರದ
ಸಂಮೋಹದೊಳಳ್ದು ಮುಳುಗಿ ತೇಲುತ್ತಿರ್ಪಂ ॥

**ಸ್ಥಾಯಿಭಾವಗಳ ಸ್ವಶಬ್ದವಾಚ್ಯತ್ವ**

ಸಂಪ್ರಹಾರೇ ಪ್ರಹರಣೈಃ ಪ್ರಹಾರಾಣಾಂ ಪರಸ್ಪರಮ್ ।
ಠಣತ್ಕಾರೈಃ ಶ್ರುತಿಗತೈ**ರುತ್ಸಾಹ**ಸ್ತಸ್ಯ ಕೋಽಪ್ಯಭೂತ್ ॥

ರಣದೊಳಗಾಯುಧಗಣಗಳ
ಠಣಠಣ ಠಣ ಶಬ್ದಮಂದು ಕಿವಿಗಳನಿರಿಯಲ್ ।
ರಣವೀರನೊಳುತ್ಸಾಹಂ
ಚಣದೊಳ್ ದಳವೇರ್ದುದಂದು ಪರಮೋದಾರಂ ॥

**(೨) ಅನುಭಾವಾದಿಗಳ ಅಭಿವ್ಯಕ್ತಿಯಲ್ಲಿ ಕಷ್ಟಕಲ್ಪನೆ**

ಕರ್ಪೂರಧೂಲಿಧವಲದ್ಯುತಿಪೂರಧೌತ
ದಿಙ್ಮಂಡಲೇ ಶಿಶಿರರೋಚಿಷಿ ತಸ್ಯ ಯೂನಃ ।
ಲೀಲಾಶಿರೋಽಂಶುಕನಿವೇಶವಿಶೇಷಕ್ಲೃಪ್ತಿ-
ವ್ಯಕ್ತಸ್ತನೋನ್ನತಿರಭೂನ್ನವಯೌವನಾ ಸಾ ॥

ಎಸೆಯಲ್ ಶಶಿ ಕರ್ಪೂರದೆ
ದೆಸೆಗಳನೇಂ ತೊಳೆವನೆಂಬವೋಲ್ ಕಾಂತೆಯವಳ್ ।
ವಸನಮನೊಯ್ಯನೆ ಸರಿಸುತೆ
ನಸುದೋರಲ್ ಬಟ್ಟವೊಲೆಗಳೀಕ್ಷಿತೆಯಾದಳ್ ॥

ಇಲ್ಲಿರುವ ಶೃಂಗಾರರಸದ ಆಲಂಬನವಿಭಾವ, ಉದ್ದೀಪನವಿಭಾವಗಳೆಲ್ಲವೂ ವಿಭಾವತ್ವ (= ಶೃಂಗಾರದ ಕಾರಣತ್ವ)ಕ್ಕಿಂತ ಹೆಚ್ಚಾಗಿ ಅನುಭಾವತ್ವ (= ಶೃಂಗಾರದ ಕಾರ್ಯತ್ವ)ವನ್ನೇ ಅಭಿವ್ಯಕ್ತಗೊಳಿಸುತ್ತಿರುವುವೆಂದು ಕಷ್ಟದಿಂದ ಕಲ್ಪಿಸಿಕೊಳ್ಳಬೇಕಾಗಿದೆ.

### ವಿಭಾವದ ಅಭಿವ್ಯಕ್ತಿಯಲ್ಲಿ ಕಷ್ಟಕಲ್ಪನೆ

ಪರಿಹರತಿ ರತಿಂ ಮತಿಂ ಲುನೀತೇ
ಸ್ಖಲತಿ ಭೃಶಂ ಪರಿವರ್ತತೇ ಚ ಭೂಯಃ ।
ಇತಿ ಬತ ವಿಷಮಾ ದಶಾಸ್ಯ ದೇಹಂ
ಪರಿಭವತಿ ಪ್ರಸಭಂ ಕಿಮತ್ರ ಕುರ್ಮಃ ॥

ರತಿಯಂ ಮರೆದಂ ಮತ್ತಂ
ಮತಿಯುಂ ಮುರಿದತ್ತು, ಬೀಳ್ವನಂತೆಯೆ ಪೊರಳ್ವಂ ।
ಹತಿಗೈದತ್ತಿವನಂ ಮೇ
ಣತಿವಿಷಮಂ ವಿರಹಮೇವೆವೀಗಳ್ ನಾವುಂ ॥

ಇಲ್ಲಿರುವ 'ರತಿಪರಿಹಾರ' ಮುಂತಾದ ಅನುಭವಗಳು ಕರುಣರಸದಲ್ಲಿಯೂ ಶಕ್ಯವಾದ ಪ್ರಯುಕ್ತ ಕಾಮಿನಿಯೆಂಬ ಶೃಂಗಾರವಿಭಾವದ ಅಭಿವ್ಯಕ್ತಿ ಕಷ್ಟವಾಗಿದೆ.

### (೩) ಪ್ರಕೃತ ರಸವಿರುದ್ಧ ವಿಭಾವಾದಿವರ್ಣನೆ

ಪ್ರಸಾದೇ ವರ್ತಸ್ವ ಪ್ರಕಟಯ ಮುದಂ ಸಂತ್ಯಜ ರುಷಂ
ಪ್ರಿಯೇ ಶುಷ್ಯಂತ್ಯಂಗಾನ್ಯಮೃತಮಿವ ತೇ ಸಿಂಚತು ವಚಃ ।
ನಿಧಾನಂ ಸೌಖ್ಯಾನಾಂ ಕ್ಷಣಮಭಿಮುಖಂ ಸ್ಥಾಪಯ ಮುಖಂ
ನ ಮುಗ್ಧೇ ಪ್ರತ್ಯೇತುಂ ಪ್ರಭವತಿ ಗತಃ ಕಾಲಹರಿಣಃ ॥

ದಯೆಯಂ ಬೀರು ವಿಲಾಸಮಂ ಪ್ರಕಟಿಸೌ ಕೋಪಂಗಳಂ ಸೂಂಕು ನೀಂ
ಪ್ರಿಯಳೇ ಬೆಂದಪವಂಗಗಳ್ ತಣಿಸು ನೀಂ ತ್ವದ್ವಾಕ್‌ಸುಧಾಸೇಕದಿಂ |
ನಿಯತಂ ಸೌಖ್ಯದ ಬೀಡೆನಿಪ್ಪ ಮೊಗದಾ ಸಾಂಮುಖ್ಯಮಂ ತಾರ ನೀಂ
ಪಯಣಂಗೊಂಡಿಹ ಕಾಲಮೆಂಬ ಹರಿಣಂ ಪಿಂದಕ್ಕೆ ಮೇಣ್ ಬಾರದೌ ||

ಇಲ್ಲಿ ಪ್ರಕೃತವಾದ ಶೃಂಗಾರರಸಕ್ಕೆ ಪ್ರತಿಕೂಲವಾಗಿರುವ ಶಾಂತರಸದ ವಿಭಾವವೇ—ಕಾಲದ ಅನಿತ್ಯತೆ—ವರ್ಣಿತವಾಗಿದೆ. ಅದರಿಂದ ಅಭಿವ್ಯಕ್ತವಾಗುವ ನಿರ್ವೇದವೆಂಬ ವ್ಯಭಿಚಾರಿಭಾವವೂ ಶೃಂಗಾರಕ್ಕೆ ವಿಘಾತಕವೇ ಆಗಿದೆ.

**ಪ್ರಕೃತರಸವಿರುದ್ಧ ಅನುಭಾವದ ವರ್ಣನೆ**

ಣಿಹುಅರಮಣಮ್ಮಿ ಲೋಅಣಪಹಮ್ಮಿ ಪಡಿಏ ಗುರುಅಣಮಜ್ಝಮ್ಮಿ |
ಸಅಲಪರಿಹಾರಹಿಅಆ ವಣಗಮಣಂ ಏವ್ವ ಮಹಇ ವಹೂ ||

ಗುರುಜನರೆಡೆಯೊಳೆ ಜಾರಂ
ದರುಶನಪಥದಲ್ಲಿ ತೋರೆ ನೀರೆಗೆ ಮನದೊಳ್ |
ಪರಿಹರಿಸುತ್ತೆಲ್ಲಮನುರೆ
ಪರಿಯಲ್ ಕಾಡಿಂಗೆ ಬಯಕೆ ಬಂದುದು ಭರದಿಂ ||

ಇಲ್ಲಿ 'ಸಕಲ ಪರಿಹಾರ' ಮತ್ತು 'ವನಗಮನ'ಗಳು ಶಾಂತರಸದ ಅನುಭಾವಗಳು. (ಪ್ರಕೃತರಸವಾದ ಶೃಂಗಾರಕ್ಕೆ ಇವು ವಿರೋಧಿಗಳು;) ಆದರೆ ಕಟ್ಟಿಗೆ ತರುವುದೇ ಮುಂತಾದ ನೆವದಿಂದ ಉಪಭೋಗಾರ್ಥವಾಗಿ ವನಗಮನ ವರ್ಣಿತವಾಗಿವೆಯೆಂದರೆ ದೋಷವಿಲ್ಲ.

**(೪) ಅಂಗರಸದ ಅತಿ ವಿಸ್ತರಣ**

ಇದನ್ನು 'ಕುಮಾರಸಂಭವ'ದ ರತಿವಿಲಾಪದಲ್ಲಿ ಕಾಣಬಹುದು.

**(೫) ಅನವಸರದಲ್ಲಿ ರಸವರ್ಣನೆ**

'ವೇಣೀಸಂಹಾರ'ದ ಎರಡನೆಯ ಅಂಕ ಇದಕ್ಕೆ ಉದಾಹರಣೆ. ಎಲ್ಲ ವೀರರೂ ಸಾಯುತ್ತಿರುವ ಸಂದರ್ಭದಲ್ಲಿ ಭಾನುಮತಿಯೊಡನೆ ದುರ್ಯೋಧನನ ಶೃಂಗಾರ ವರ್ಣನೆ ಸಮಯೋಚಿತವೆನಿಸುವುದಿಲ್ಲ.

**(೬) ಅನವಸರದಲ್ಲಿ ರಸವಿಚ್ಛೇದ**

'ಮಹಾವೀರಚರಿತ'ದ ಎರಡನೆಯ ಅಂಕದಲ್ಲಿ ರಾಘವ ಭಾರ್ಗವರ ವೀರರಸವು ಅರ್ಧ ಪರಿಪುಷ್ಟವಾದಾಗ 'ಈಗ ಕಂಕಣವಿಸರ್ಜನೆಗೆ ಹೋಗುತ್ತೇನೆ' ಎಂದು ರಾಘವನೆನ್ನುವುದು ಉದಾಹರಣೆ.

### (೭) ಅಪ್ರಧಾನ ನಾಯಕನ ಅತಿವಿಸ್ತರಣೆ

ಇದಕ್ಕೆ 'ಹಯಗ್ರೀವವಧ' ಕಾವ್ಯದಲ್ಲಿ ಅತಿ ವಿಸ್ತಾರವಾಗಿ ಬರುವ ಹಯಗ್ರೀವನ ವರ್ಣನೆಯೇ ಉದಾಹರಣೆ.

### (೮) ಪ್ರಧಾನದ ವಿಸ್ಮರಣೆ

ಇದಕ್ಕೆ 'ರತ್ನಾವಳಿ'ಯ ನಾಲ್ಕನೆ ಅಂಕದಲ್ಲಿ ಬಾಭ್ರವ್ಯನ ಆಗಮನವನ್ನು ವರ್ಣಿಸುವಾಗ ನಾಯಿಕೆಯಾದ ಸಾಗರಿಕೆಯನ್ನು ಮರೆತುಬಿಡುವುದು ಉದಾಹರಣೆ.

### (೯) ಪ್ರಕೃತಿಗತ ಔಚಿತ್ಯದ ಪ್ರತಿಕೂಲವರ್ಣನೆ

ಪ್ರಕೃತಿಗಳು (= *Characters*) ದಿವ್ಯ (= *Divine*), ಅದಿವ್ಯ, ದಿವ್ಯಾದಿವ್ಯ ಎಂದು ಮೂರು ಬಗೆ. ವೀರ, ರೌದ್ರ, ಶೃಂಗಾರ, ಶಾಂತರಸಗಳು ಕ್ರಮವಾಗಿ ಪ್ರಧಾನವಾಗಿರುವಾಗ ಧೀರೋದಾತ್ತ, ಧೀರೋದ್ಧತ, ಧೀರಲಲಿತ, ಧೀರಪ್ರಶಾಂತ ರೆಂದೆನಿಸುತ್ತಾರೆ. ಅವರ ಸ್ಥಾನದ ದೃಷ್ಟಿಯಿಂದ ಉತ್ತಮ, ಮಧ್ಯಮ, ಅಧಮ ಎಂಬ ವಿಭಾಗವನ್ನೂ ಮಾಡಬಹುದು. ಸಾಮಾನ್ಯವಾಗಿ ರತಿ, ಹಾಸ, ಶೋಕ, ಅದ್ಭುತಗಳು ಅದಿವ್ಯ ಹಾಗು ಉತ್ತಮ ಪ್ರಕೃತಿಗಳಲ್ಲಿರುವಂತೆಯೇ ದಿವ್ಯಪ್ರಕೃತಿಗಳಲ್ಲೂ ವರ್ಣಿತವಾಗ ಬಹುದು. ಆದರೆ ಸಂಭೋಗಶೃಂಗಾರರೂಪವಾದ ರತಿಯನ್ನು ಮಾತ್ರ ಉತ್ತಮ ದೇವತೆಗಳ ವಿಷಯದಲ್ಲಿ ವರ್ಣಿಸಲಾಗದು. ಹಾಗೆ ವರ್ಣಿಸುವುದು ತಾಯಿತಂದೆಗಳ ಸಂಭೋಗವರ್ಣನೆಯಂತೆಯೇ ಅತ್ಯಂತ ಅನುಚಿತ.

ಕ್ರೋಧಂ ಪ್ರಭೋ ಸಂಹರ ಸಂಹರೇತಿ
 ಯಾವದ್ಗಿರಃ ಖೇ ಮರುತಾಂ ಚರನ್ತಿ ।
ತಾವತ್ ಸ ವಹ್ನಿರ್ಭವನೇತ್ರ ಜನ್ಮಾ
 ಭಸ್ಮಾವಶೇಷಂ ಮದನಂ ಚಕಾರ ॥[182]

ಮುನಿಸಂ ಪ್ರಭುವೇ ಬಿಡುಬಿಡು
ಯೆನುತುಂ ಸುರರಾಡುತಿರ್ಪಿನಂ ಬಾನ್ದಳದೊಳ್ ।
ಅನಲಂ ಭವನೇತ್ರೋತ್ಥಂ
ಮನಸಿಜನಂ ಭಸ್ಮಶೇಷನಂ ಗೈದಿರ್ದಂ ॥

ಈ ಪ್ರಕಾರವಾಗಿ ಹುಬ್ಬುಗಂಟೇ ಮೊದಲಾದ ವಿಕಾರವೊಂದೂ ಇಲ್ಲದೆ ಸದ್ಯಃಫಲಕಾರಿಯಾದ ಕ್ರೋಧವೂ, ಸ್ವರ್ಗ, ಪಾತಾಳ, ಗಗನ, ಸಮುದ್ರ ಲಂಘನಾದಿ

[182] ಕುಮಾರಸಂಭವ, ಸರ್ಗ-೩.

ಉತ್ಸಾಹವೂ ದಿವ್ಯಪ್ರಕೃತಿಗಳಲ್ಲಿ ಮಾತ್ರ ವರ್ಣನೆಗೆ ಯೋಗ್ಯ. ಅದಿವ್ಯ (=ಮನುಷ್ಯ) ರಲ್ಲಿ ಇವನ್ನು ಹೇಳುವುದಾದರೆ ಪುರಾಣ ಕಥೆಯಲ್ಲಿ ಎಷ್ಟರಮಟ್ಟಿಗೆ ಪರಿಚಿತವೋ, ಎಷ್ಟು ಉಚಿತವೋ ಅಷ್ಟನ್ನು ಮಾತ್ರ ವರ್ಣಿಸಬೇಕು. ಅದಕ್ಕಿಂತ ಹೆಚ್ಚಾದರೆ ಎಲ್ಲವೂ ಸುಳ್ಳೆಂದು ತೋರಿಬಿಡುವುದರಿಂದ 'ನಾಯಕನಂತೆ ನಡೆಯಬೇಕು, ಪ್ರತಿ ನಾಯಕನಂತಲ್ಲ' ಎಂಬ ಉಪದೇಶವು ಸಾಧಿಸುವುದೆಂತು ?

ದಿವ್ಯಾದಿವ್ಯ ಪ್ರಕೃತಿಗಳ ವರ್ಣನೆಯಲ್ಲಿ ಎರಡರ ಔಚಿತ್ಯವನ್ನೂ ಪಾಲಿಸಬೇಕಾಗುತ್ತದೆ.

ಈ 'ದಿವ್ಯಾದಿ' ಪ್ರಕೃತಿಗಳ ಔಚಿತ್ಯದಂತೆಯೇ 'ಧೀರೋದಾತ್ತಾದಿ' ನಾಯಕರ ಔಚಿತ್ಯವನ್ನೂ ಗಮನಿಸಬೇಕು. ಔಚಿತ್ಯ ತಪ್ಪುವಂತೆ ವರ್ಣಿಸಿದರೆ ಅದೂ 'ಪ್ರಕೃತಿ-ವಿಪರ್ಯಯ' ದೋಷವೇ ಆಗುತ್ತದೆ. ನಾಟಕದಲ್ಲಿ ಒಬ್ಬರನ್ನೊಬ್ಬರು ಸಂಬೋಧಿಸುವಾಗಲೂ ಉಚಿತವಾದ ನಿಯಮಗಳನ್ನು ಬಿಟ್ಟರೆ 'ಪ್ರಕೃತಿವಿಪರ್ಯಯ' ವಾಗಿಬಿಡುತ್ತದೆ. ಉದಾಹರಣೆಗೆ 'ತತ್ರಭವನ್', 'ಭಗವನ್' ಎಂದು ಉತ್ತಮ ಪ್ರಕೃತಿ ಮಾತ್ರ—ಅಧಮ ಪಾತ್ರವಲ್ಲ—ಮುನಿಗಳನ್ನು ಮಾತ್ರ ಕುರಿತು—ರಾಜಾದಿಗಳನ್ನು ಕುರಿತಲ್ಲ—ಹೇಳಬೇಕು. ಉತ್ತಮ ಪ್ರಕೃತಿಯು ರಾಜಾದಿಗಳನ್ನು ಕುರಿತು 'ಭಟ್ಟಾರಕ' ಎಂದರೆ ಅದೇ ದೋಷವಾಗುತ್ತದೆ. ಇದೇ ರೀತಿಯಾಗಿ ದೇಶ, ಕಾಲ, ವಯಸ್ಸು, ಜಾತಿ ಮುಂತಾದುವುಗಳಿಗನುಗುಣವಾಗಿ ವೇಷ, ವ್ಯವಹಾರ ಮುಂತಾದುವುಗಳ ಔಚಿತ್ಯವನ್ನು ಕಾಯ್ದುಕೊಳ್ಳಬೇಕು.

### (೧೦) ರಸಕ್ಕೆ ಅನುಪಕಾರಕಗಳ ವರ್ಣನೆ

ಅಮುಖ್ಯವಾದ ರಸಾನುಪಕಾರಕದ ವರ್ಣನೆಗೆ 'ಕರ್ಪೂರಮಂಜರಿ'ಯಲ್ಲಿ ನಾಯಿಕೆಯೂ ತಾನೂ (=ನಾಯಕನೂ) ಮಾಡಿದ ವಸಂತವರ್ಣನೆಯನ್ನು ಕಡೆಗಣಿಸಿ ಬಂದಿಯ ವರ್ಣನೆಯನ್ನು ರಾಜನು (=ನಾಯಕನು) ಮೆಚ್ಚುವುದು ಉದಾಹರಣೆ.

"ಈದೃಶಾಃ" (=ಈ ಬಗೆಯಾದವು) ಎಂದು ಕಾರಿಕೆಯಲ್ಲಿ[188] ಹೇಳಿರುವುದಕ್ಕೆ ನಾಯಿಕೆಯು ನಾಯಕನನ್ನು ಕಾಲಿಂದೊದೆಯುವ ಪ್ರಸಂಗದಲ್ಲಿ ನಾಯಕನು ಕೋಪಗೊಳ್ಳುವುದೇ ಮುಂತಾದ ಸನ್ನಿವೇಶಗಳೂ ಸೇರುವುವೆಂದಭಿಪ್ರಾಯ. ಧ್ವನಿಕಾರನೇ ಹೇಳಿರುವಂತೆ—

---

[188] ಮೇಲೆ ಮೂಲಕಾರಿಕೆ—೧೪ನ್ನು ನೋಡಿ.

ಅನೌಚಿತ್ಯಾದೃತೇ ನಾನ್ಯದ್ ರಸಭಂಗಸ್ಯಕಾರಣಂ।
ಔಚಿತ್ಯೋಪನಿಬಂಧಸ್ತು ರಸಸ್ಯೋಪನಿಷತ್ ಪರಾ ॥[184]

'ರಸಭಂಗಕ್ಕೆ ಅನೌಚಿತ್ಯವನ್ನು ಬಿಟ್ಟು ಬೇರಾವುದೂ ಕಾರಣವಲ್ಲ. ಪ್ರಸಿದ್ಧವಾದ ಔಚಿತ್ಯದ ಪಾಲನೆಯೇ ರಸದ ಪರಮರಹಸ್ಯ.'

ಕೆಲವೊಮ್ಮೆ ಇವೂ ಕೂಡ ದೋಷತ್ವವನ್ನು ಕಳೆದುಕೊಳ್ಳುವುದುಂಟೆಂದು ಮುಂದಿನ ಕಾರಿಕೆ ವಿವರಿಸುತ್ತದೆ:—

ನ ದೋಷಃ ಸ್ವಪದೇನೋಕ್ತಾವಪಿ ಸಂಚಾರಿಣಃ ಕ್ವಚಿತ್ ॥ ೧೫*ab* ॥

ಸಂಚಾರಿಭಾವಗಳನ್ನು ಸ್ವಶಬ್ದಗಳಿಂದಲೇ ಹೇಳಿದರೂ ಕೆಲವು ವೇಳೆ ದೋಷವಿಲ್ಲ. ಉದಾಹರಣೆ:—

**ಔತ್ಸುಕ್ಯೇನ** ಕೃತತ್ವರಾ ಸಹಭುವಾ ವ್ಯಾವರ್ತಮಾನಾ ಹ್ರಿಯಾ
ತೈಸ್ತೈರ್ಬಂಧುವಧೂಜನಸ್ಯ ವಚನೈರ್ನೀತಾಭಿಮುಖ್ಯಂ ಪುನಃ।
ದೃಷ್ಟ್ವಾಗ್ರೇ ವರಮಾತ್ತ ಸಾಧ್ವಸರಸಾ ಗೌರೀ ನವೇ ಸಂಗಮೇ
ಸಂರೋಹತ್ಪುಲಕಾ ಹರೇಣ ಹಸತಾ ಶ್ಲಿಷ್ಟಾ ಶಿವಾಯಾಸ್ತು ವಃ ॥[185]

ತ್ವರೆಯುಕ್ಕಲ್ ಕಡುರಾಗದಿಂ ಸಹಜಮಾದಾ ನಾಣ್ ಕರಂ ಮಳ್ಗಿಸಲ್
ಪರಿಯಿಂದೆಂತುಟೊ ನಾರಿಯರ್ ನುಡಿಸೆ ಮೇಣ್ ತಾಂ ಸನ್ಮುಖಳ್ ಮತ್ತೆಯುಂ।
ವರನಂ ಮೇಣೆದಿರೊಳ್ ವಿಲೋಕಿಸಲೊಡಂ ಮತ್ತಂ ಸುಭೀತಳ್ ವಲಂ
ಹರನಾಲಿಂಗಿಸೆ ಹಾಸದಿಂ ಪುಲಕಿತಳ್ ಕಾಯ್ಗೆಮ್ಮನಾ ಗೌರಿಯೇ ॥

ಇಲ್ಲಿ 'ಔತ್ಸುಕ್ಯ'ವೆಂಬ ಶಬ್ದ ಎಷ್ಟು ಅರ್ಥಪೂರ್ಣವಾಗಿದೆಯೋ ಅದರ ಅನುಭಾವವನ್ನು ಹೇಳಿದ್ದರೆ ಅಷ್ಟು ಅರ್ಥವಿರುತ್ತಿರಲಿಲ್ಲ. ಆದ್ದರಿಂದಲೇ **'ದೂರಾದುತ್ಸುಕಮ್'**...[186] ಎಂಬ ಪದ್ಯದಲ್ಲಿಯೂ ನಾಚಿಕೆ, ಪ್ರೀತಿ, ಮುಂತಾದ ಸಂಚಾರಿಭಾವಗಳನ್ನು 'ವಿವಲನ' ಮುಂತಾದ ಅನುಭಾವಗಳಿಂದಲೇ ತೋರಿಸಿದರೂ ಉತ್ಸುಕತೆಯ ಭಾವವನ್ನು 'ಶೀಘ್ರಗಮನ'ವೇ ಮುಂತಾದ ಅನುಭಾವಗಳ ಮೂಲಕ ತೋರಿಸಿದರೆ ಅರ್ಥಪುಷ್ಟಿ ಬರುವುದಿಲ್ಲವೆಂದೇ ಕವಿ ಅದನ್ನು ಮಟ್ಟಿಗೆ 'ಉತ್ಸುಕ' ಎಂಬ ಶಬ್ದದಿಂದಲೇ ಹೇಳಿದ್ದಾನೆ.

---

[184] ನೋಡಿ ಕನ್ನಡ ಧ್ವನ್ಯಾಲೋಕ ಪುಟ ೯೫.

[185] ರತ್ನಾವಳೀ, ನಾಂದೀಪದ್ಯ.

[186] ನಾಲ್ಕನೆಯ ಉಲ್ಲಾಸ, ಕನ್ನಡ ಕಾವ್ಯಪ್ರಕಾಶ ಪುಟ ೮೬.

ಸಂಚಾರ್ಯಾದೇರ್ವಿರುದ್ಧಸ್ಯ ಬಾಧ್ಯಸ್ಯೋಕ್ತಿರ್ಗುಣಾವಹಾ ‖ ೧೫cd ‖

ಪ್ರಕೃತರಸಕ್ಕೆ ವಿರೋಧಿಯಾದ ಸಂಚಾರಿಭಾವವೂ ಸಹ ಅದು ಬಾಧ್ಯವಾಗಿ ವರ್ಣಿತವಾಗುತ್ತಿದ್ದರೆ, ಗುಣವೇ ಆಗುತ್ತದೆ.

ಬಾಧ್ಯವಾಗುವಂತೆ ವರ್ಣನೆ ವಿರೋಧವಷ್ಟೇ ಅಲ್ಲ; ಪ್ರಕೃತರಸಕ್ಕೆ ಪರಿಪೋಷಕವೂ ಆಗುತ್ತದೆ. ಉದಾಹರಣೆ:—

'ಕ್ವಾಕಾರ್ಯಂ . . .'[187]

ಇಲ್ಲಿ ವಿತರ್ಕಾದಿಗಳು ಹುಟ್ಟಿದರೂ ಚಿಂತೆಯಲ್ಲಿಯೇ ವಿಶ್ರಾಂತಿಯನ್ನು ಪಡೆಯುವುದರಿಂದ ಪ್ರಕೃತರಸಕ್ಕೆ ಪರಿಪುಷ್ಟಿಯೊದಗಿದೆ. ಆದರೆ—

ಪಾಂಡುಕ್ಷಾಮಂ ವದನಂ ಹೃದಯಂ ಸರಸಂ ತವಾಲಸಂ ಚ ವಪುಃ।
ಆವೇದಯತಿ ನಿತಾಂತಂ ಕ್ಷೇತ್ರಿಯರೋಗಂ ಸಖಿ ಹೃದಂತಃ ‖

ವದನಂ ಬಿಳಿದುಂ ಕೃಶಮುಂ
ಹೃದಯಂ ಸರಸಂ ಶರೀರಮಲಸಂ ನಿನ್ನಾ ।
ಸುದತಿಯೆ ಬಿಡದೆಲ್ಲವನೊರೆ
ವುದು ಹೃದಯದೊಳಿರ್ಪ ಯಕ್ಷ್ಮರೋಗದ ಪರಿಯಂ ‖[188]

ಇದೇ ಮುಂತಾದ ಲಕ್ಷ್ಯಗಳಲ್ಲಿ (ಪ್ರಕೃತಾಪ್ರಕೃತ ರಸಗಳೆರಡಕ್ಕೂ) ಪಾಂಡುತ್ವಾದಿಗಳು ಸಮಾನವಾದ್ದರಿಂದ ವಿರೋಧದ ಪ್ರಶ್ನೆಯೇ ಬರುವುದಿಲ್ಲ.

ಸತ್ಯಂ ಮನೋರಮಾ ರಾಮಾ ಸತ್ಯಂ ರಮ್ಯಾ ವಿಭೂತಯಃ।
ಕಿಂತು ಮತ್ತಾಂಗನಾಪಾಂಗಭಂಗಲೋಲಂ ಹಿ ಜೀವಿತಮ್ ‖[189]

---

[187] ನಾಲ್ಕನೆಯ ಉಲ್ಲಾಸದಲ್ಲಿ ಉದಾಹೃತ. ನೋಡಿ—ಕನ್ನಡ ಕಾವ್ಯಪ್ರಕಾಶ ಪು. ೯೯.

[188] ಈ ಪ್ರಯೋಗವನ್ನೂ ಆನಂದವರ್ಧನನು ವಿರೋಧಪಕ್ಷಕ್ಕೆ ಉದಾಹರಣೆಯಾಗಿ ಕೊಟ್ಟಿದ್ದಾನೆ. (ನೋಡಿ—ಕನ್ನಡ ಧ್ವನ್ಯಾಲೋಕ ಪುಟ, ೧೧೧). ಪ್ರಕೃತವಾದ ಶೃಂಗಾರರಸಕ್ಕೆ ವಿರುದ್ಧವಾದ ಕರುಣರಸದ ಅಂಗಗಳಿಗೆ—ಪಾಂಡುತ್ವ ಮುಂತಾದ ಅನುಭಾವಗಳಿಗೆ—ಇಲ್ಲಿ ಸಮಾರೋಪಿತವಾದ ಅಂಗಭಾವ ಬಂದಿರುವುದೇ ಕಾರಣವೆಂದು ಅವನ ಅಭಿಪ್ರಾಯ. ಮಮ್ಮಟನು ಇಲ್ಲಿ ಆನಂದವರ್ಧನನ ಮತವನ್ನು ತಿರಸ್ಕರಿಸುತ್ತಿದ್ದಾನೆ. ಏಕೆಂದರೆ 'ವ್ಯಾಧಿ' ಮುಂತಾದುವು ಕರುಣರಸಕ್ಕೆ ಮಾತ್ರ ಅಂಗಗಳೆಂದು ತಿಳಿಯಲು ಆಧಾರವಿಲ್ಲ. ಅವು ವಿಪ್ರಲಂಭಶೃಂಗಾರಕ್ಕೂ ಅಂಗಗಳಾಗಬಹುದೆಂದು ಭರತನ ನಾಟ್ಯಶಾಸ್ತ್ರದಲ್ಲಿಯೇ ಹೇಳಿದೆ. (ಹೋಲಿಸಿ—'ವ್ಯಾಧ್ಯುನ್ಮಾದಾಪಸ್ಮಾರಜಾಡ್ಯ ಪ್ರಸರಣಾದಿಭಿರ್ವಿಪ್ರಲಂಭೋಽಭಿನೇತವ್ಯಃ'.)

[189] ಭರ್ತೃಹರಿಯ ವೈರಾಗ್ಯಶತಕ. ಹೋಲಿಸಿ—ಕನ್ನಡ ಧ್ವನ್ಯಾಲೋಕ ಪು. ೧೩೬.

ನಿರುತಂ ರಮಣಿಯರಿಸಿಯರ್
ನಿರುತಂ ಕಮನೀಯಮುಪ್ಪುದೈಸಿರಿ ತಾನೆಂ।
ದರುಮೀ ಜೀವಿತಮೆಂದುಂ
ಪರಿಕಿಸೆ ಮತ್ತಾಂಗನಾಕಟಾಕ್ಷವಿಲೋಲಂ ‖

ಎಂಬಲ್ಲಿ ಪದ್ಯದ ಮೊದಲನೆಯ ಅರ್ಧವು ಬಾಧ್ಯವಾಗಬೇಕೆಂದೇ ಹೇಳಿರುವುದು ಸ್ಪಷ್ಟ. ಜೀವಿತಕ್ಕಿಂತಲೂ ಹೆಚ್ಚು ಕ್ಷಣಿಕವಾದುದು ಮತ್ತಾಂಗನಾಕಟಾಕ್ಷ. ಆದ್ದರಿಂದ ಕ್ಷಣಿಕತ್ವದ ಪ್ರಸಿದ್ಧ ಉಪಮಾನವೆಂದು ಅದನ್ನಿಲ್ಲಿ ಕೊಡಲಾಗಿದೆ. ಅದು ಶಾಂತರಸವನ್ನು ಸರ್ವಾತ್ಮನಾ ಪುಷ್ಟೀಕರಿಸುವುದೇ ಹೊರತು ಇಲ್ಲಿ ಶೃಂಗಾರರಸದ ಪ್ರತೀತಿಯನ್ನೇನೂ ತರುವುದಿಲ್ಲ; ಶೃಂಗಾರಕ್ಕೆ ಕ್ಷಣಿಕತ್ವ ಎಂದೂ ಅಂಗವಲ್ಲವಾದ್ದರಿಂದ ಜನರ ಮನವೊಲಿಸಲು ಶೃಂಗಾರದ ಸೋಗೂ ಇಲ್ಲಿದೆಯೆಂದು ಹೇಳುವುದು ಕೂಡ ಸರಿಯಲ್ಲ—ಶಾಂತ ಶೃಂಗಾರಗಳಿಗೆ ಸಮನ್ವಯವೇ ಇಲ್ಲವಾದ್ದರಿಂದ ಕಾವ್ಯದ ಸೌಂದರ್ಯ ಹೆಚ್ಚುವಂತೆ ಶೃಂಗಾರಕ್ಕೂ ಇಲ್ಲಿ ಪ್ರವೇಶವಿದೆಯೆನ್ನುವುದು ಕೂಡ ಸಾಧ್ಯವಿಲ್ಲ. ಏಕೆಂದರೆ ಕಾವ್ಯದ ಸೌಂದರ್ಯವನ್ನು ಬೇರೊಂದು ರಸವೇ ಹೆಚ್ಚಿಸಬಹುದು; ಅಥವಾ ಅನುಪ್ರಾಸ ಮಾತ್ರವೇ ಹೆಚ್ಚಿಸುವುದೆನ್ನಬಹುದು.[190]

ಆಶ್ರಯೈಕ್ಯೇ ವಿರುದ್ಧೋಯಃ ಸ ಕಾರ್ಯೋ ಭಿನ್ನಸಂಶ್ರಯಃ।
ರಸಾಂತರೇಣಾಂತರಿತೋ ನೈರಂತರ್ಯೇಣ ಯೋ ರಸಃ ‖ ೧೬ ‖

ರಸಗಳಿಗೆ ಒಂದೇ ಆಶ್ರಯದ ನಿಮಿತ್ತದಿಂದ ವಿರೋಧ ಬರುತ್ತಿದ್ದರೆ, ಬೇರೆ ಆಶ್ರಯಗಳನ್ನು ಕಲ್ಪಿಸಬೇಕು. ನಿರಂತರವಾಗಿ ಒಂದಾದಮೇಲೊಂದು ಬರುವುದರಿಂದ ವಿರೋಧವಿದ್ದರೆ ಆಗ ಅವುಗಳ ನಡುವೆ ಮತ್ತೊಂದು ರಸವನ್ನು ತರಬೇಕು.

ವೀರ-ಭಯಾನಕಗಳು ಒಂದೇ ಆಶ್ರಯದಲ್ಲಿ (=ಪಾತ್ರದಲ್ಲಿ) ಬಂದರೆ ವಿರೋಧ ಸ್ಪಷ್ಟ. ಅಂತಹ ಪ್ರಸಂಗದಲ್ಲಿ ವೀರವನ್ನು ನಾಯಕನಲ್ಲಿಯೂ ಭಯಾನಕವನ್ನು ಪ್ರತಿನಾಯಕನಲ್ಲಿಯೂ ಚಿತ್ರಿಸಬೇಕು. ಶಾಂತ-ಶೃಂಗಾರಗಳು ಎಡೆಬಿಡದೆ ಬಂದರೆ ವಿರೋಧ ಕಾಣುತ್ತದೆ. ಆದ್ದರಿಂದ ಅವುಗಳ ನಡುವೆ ಮತ್ತೊಂದು ರಸವನ್ನು

---

[190] ಇಲ್ಲಿಯೂ ಮಮ್ಮಟನು ಆನಂದವರ್ಧನನನ್ನೇ ಕೂಲಂಕಷವಾಗಿ ಟೀಕಿಸುತ್ತಿದ್ದಾನೆ. ಈ ಪದ್ಯದಲ್ಲಿ ಸಹಜವಾಗಿ ಶೃಂಗಾರ-ಶಾಂತಗಳಿಗಿರುವ ವೈರತಪ್ಪಿದೆಯೆಂದು ಆನಂದವರ್ಧನನು ಹೇಳಿದ್ದನು. ಆದರೆ ಮಮ್ಮಟನು ಇಲ್ಲಿ ಶೃಂಗಾರಕ್ಕೆ ಪ್ರವೇಶವೇ ಇಲ್ಲವೆಂಬುದನ್ನು ಸ್ಥಿರಪಡಿಸಲು ಹೊರಟಿದ್ದಾನೆ. ಮಮ್ಮಟನು ಯಾರ ಅಭಿಪ್ರಾಯವನ್ನೂ ಸ್ವವಿಚಾರವಿಲ್ಲದೆ ಸ್ವೀಕರಿಸುವನಲ್ಲವೆಂಬುದಕ್ಕೆ ಇದು ಉತ್ತಮ ನಿದರ್ಶನ.

ತರಬೇಕು. ಉದಾಹರಣೆಗೆ '**ನಾಗಾನಂದ**'ದಲ್ಲಿ ಶಾಂತರಸವಾದಮೇಲೆ 'ಗೀತ ಎಷ್ಟು ಚೆನ್ನಾಗಿದೆ; ವೀಣಾವಾದನ ಎಷ್ಟು ಅದ್ಭುತವಾಗಿದೆ' ಎಂದು ನಾಯಕನ ಬಾಯಲ್ಲಾಡಿಸಿ ಅದ್ಭುತರಸವನ್ನು ನಡುವೆ ತಂದಮೇಲೆ ಮುಂದೆ ಮಲಯವತಿಯನ್ನು ಕುರಿತ ಶೃಂಗಾರ ವರ್ಣಿತವಾಗಿದೆ.

ಇದು ಒಂದು ಒಟ್ಟು ಪ್ರಬಂಧದಲ್ಲಿ ಮಾತ್ರ ಕಾಣಬರುವ ನಿಯಮವೇನೂ ಅಲ್ಲ. ಒಂದೇ ವಾಕ್ಯದಲ್ಲಿಯೂ ಕೂಡ ರಸಾಂತರದ ಪ್ರವೇಶದಿಂದ ರಸವಿರೋಧ ತಪ್ಪುತ್ತದೆ. ಉದಾಹರಣೆ:—

ಭೂರೇಣುದಿಗ್ಧಾನ್ ನವಪಾರಿಜಾತ-
ಮಾಲಾರಜೋವಾಸಿತಬಾಹುಮಧ್ಯಾಃ।
ಗಾಢಂ ಶಿವಾಭಿಃ ಪರಿರಭ್ಯಮಾಣಾನ್
ಸುರಾಂಗನಾಕ್ಲಿಷ್ಟಭುಜಾಂತರಾಲಾಃ ॥

ಸಶೋಣಿತೈಃ ಕ್ರವ್ಯಭುಜಾಂ ಸ್ಫುರದ್ಭಿಃ
ಪಕ್ಷೈಃ ಖಗಾನಾಮುಪವೀಜ್ಯಮಾನಾನ್।
ಸಂವೀಜಿತಾಶ್ಚಂದನವಾರಿಸೇಕೈಃ
ಸುಗಂಧಿಭಿಃ ಕಲ್ಪಲತಾದುಕೂಲೈಃ ॥

ವಿಮಾನಪರ್ಯಂಕತಲೇ ನಿಷಣ್ಣಾಃ
ಕುತೂಹಲಾವಿಷ್ಟತಯಾ ತದಾನೀಮ್।
ನಿರ್ದಿಶ್ಯಮಾನಾನ್ ಲಲನಾಂಗುಲೀಭಿ-
ರ್ವೀರಾಃ ಸ್ವದೇಹಾನ್ ಪತಿತಾನಪಶ್ಯನ್ ॥[191]

ಭೂರೇಣುದೂಷಿತ ನಿಜಶ-
ರೀರಗಳಂ ಪಾರಿಜಾತಸುರಭಿತಹೃದಯರ್ ।
ಘೋರ ಶಿವಾಶ್ಲಿಷ್ಟಗಳಂ
ವೀರೋಚಿತದಿವ್ಯಸುಂದರೀ ಪರಿರಬ್ಧರ್ ॥

ಅರುಣ ಜಲಸೇಕದಿಂದಂ
ಪಿರಿತಿನಿ ಖಗ ಪಕ್ಷವೀಜಿತಂಗಳನಾಗಳ್ ।

---

[191] ಹೋಲಿಸಿ—ಕನ್ನಡ ಧ್ವನ್ಯಾಲೋಕ ಪುಟ ೧೨೦-೧.

ವರಚಂದನ ವಾರಿಗಳಿಂ
ಸುರುಚಿರ ಸುರವೃಕ್ಷವಲ್ಕ ವೀಜಿತದೇಹರ್ ||

ಅಂದು ವಿಮಾನಾಂತರದೊಳ್
ನಿಂದಿರೆ ವೀರರ್ ಕುತೂಹಲಾವಿಷ್ಟಮನರ್ |
ಸುಂದರಿಯರ್ ತೋರಿಸೆ ಬೆರ
ಳಿಂದಂ ಕಂಡರ್ ಸ್ವದೇಹಮಂ ಕೊಳುಗುಳದೊಳ್ ||

ಇಲ್ಲಿ ಬೀಭತ್ಸ-ಶೃಂಗಾರಗಳೆರಡರ ನಡುವೆ ವೀರರಸವನ್ನು ತಂದಿದೆ.

ಸ್ಮರ್ಯಮಾಣೋ ವಿರುದ್ಧೋಽಪಿ ಸಾಮ್ಯೇನಾಥ ವಿವಕ್ಷಿತಃ |
ಅಂಗಿನ್ಯಂಗತ್ವಮಾಪ್ತೌ ಯೌ ತೌ ನ ದುಷ್ಟೌ ಪರಸ್ಪರಮ್ ||

ವಿರುದ್ಧರಸಗಳಲ್ಲಿ (೧) ಒಂದು ಕೇವಲ ಸ್ಮೃತಿರೂಪವಾಗಿದ್ದರೂ, (೨) ಒಂದಕ್ಕೊಂದು ಸಾಮ್ಯರೂಪದಲ್ಲಿದ್ದರೂ ಮತ್ತು (೩) ಎರಡೂ ಮತ್ತೊಂದು ಮೂರನೆಯ ರಸಕ್ಕೆ ಅಂಗವಾಗಿಬಿಟ್ಟರೂ ದೋಷವಿಲ್ಲ. ಕ್ರಮವಾಗಿ ಉದಾಹರಣೆಗಳು—

೧. ಅಯಂ ಸ ರಶನೋತ್ಕರ್ಷೀ ಪೀನಸ್ತನವಿಮರ್ದನಃ |
ನಾಭ್ಯೂರುಜಘನಸ್ಪರ್ಶೀ ನೀವೀವಿಸ್ರಂಸನಃ ಕರಃ ||[192]

ಇದೆ ರಶನೋತ್ಕರ್ಷಣಪಟು
ಎದೆ ಪೀನಕುಚಾವಮರ್ದನಾಧಿಕರಸಿಕಂ |
ಚದುರಂ ನಾಭ್ಯುರುಜಘನ
ಪದದೊಳ್ ನೀವೀವಿಚಾಲಕಂ ವರಹಸ್ತಂ ||

ಕಡಿದು ಬಿದ್ದ ಭೂರಿಶ್ರವನ ಕೈಯನ್ನು ಕಂಡು ಅವನ ಹೆಂಡತಿ ಹೇಳುವ ವಾಕ್ಯವಿದು. ಇಲ್ಲಿ ಪೂರ್ವಾವಸ್ಥೆಯ ಸ್ಮರಣೆ ಶೃಂಗಾರಕ್ಕೆ ಅಂಗವಾಗಿದ್ದರೂ ಕರುಣರಸಕ್ಕೇ ಪರಿಪುಷ್ಟಿಯನ್ನೀಯುತ್ತದೆ.

೨. ದಂತಕ್ಷತಾನಿ ಕರಜೈಶ್ಚ ವಿಪಾಟಿತಾನಿ
ಪ್ರೋದ್ಭಿನ್ನಸಾಂದ್ರಪುಲಕೈರ್ಭವತಃ ಶರೀರೇ |

[192] ಮಹಾಭಾರತ ಯುದ್ಧದಲ್ಲಿ ಕಡಿದುಬಿದ್ದ ಭೂರಿಶ್ರವನ ಕೈಯನ್ನು ಕಂಡು ಅವನ ಹೆಂಡಿರು ಅಳುವ ವರ್ಣನೆ. ಇದನ್ನು ಮತ್ತು ಮುಂದಿನ ಲಕ್ಷ್ಯಗಳನ್ನೂ ಮಮ್ಮಟನು ಧ್ವನ್ಯಾಲೋಕದಿಂದಲೇ ಎತ್ತಿಕೊಂಡಿದ್ದಾನೆ.

ದತ್ತಾನಿ ರಕ್ತಮನಸಾ ಮೃಗರಾಜವಧ್ವಾ
ಜಾತಸ್ಪೃಹೈರ್ಮುನಿಭಿರಪ್ಯವಲೋಕಿತಾನಿ ॥

ಮೃಗಪತಿಕಾಂತೆ ರಕ್ತಮನದಿಂ ನಿಜದಂತದ ಮುದ್ರೆಯಿತ್ತು ಕೈ-
ಯುಗುರ್ಗಳಿನಂತು ತೀವಿರೆ ನಖಕ್ಷತಮಂ ಭವದೀಯ ದೇಹದೊಳ್ ।
ಮಿಗಿಲೆನಲ್ಕೆದೆ ತಾನೊಗೆದ ಪೊಂಪುಳಿಯಂ ಬಗೆದುಂಬಿ ನೋಡಿದರ್
ಮಿಗೆ ಮುನಿಪುಂಗವರ್ ಬಹುಲಲೋಭವಿಭಾವದಿನಂದು ನಿನ್ನಯಾ ॥

ಇಲ್ಲಿ ಕಾಮುಕನಿಗೆ ದಂತಕ್ಷತಾದಿಗಳು ಹೇಗೆ ಸೊಗಯಿಸುವುವೋ ಹಾಗೆಯೇ ಜಿನ ನಿಗೂ ಸಿಂಹದ ದಂತಕ್ಷತಗಳು ಸೊಗಯಿಸುತ್ತವೆಯೆಂಬ ಸಾಮ್ಯದಲ್ಲಿ ಮಾತ್ರ ಕವಿಗೆ ತಾತ್ಪರ್ಯವಿದೆ. ಶೃಂಗಾರಿಯಾದವನೊಬ್ಬನು ಕಾಮುಕನನ್ನು ನೋಡಲು ತವಕಿಸು ವಂತೆಯೇ ಮುನಿಗಳೂ ಜಿನನನ್ನು ನೋಡಲು ತವಕಿಸುತ್ತಿದ್ದರೆಂಬ ಅಂಶದಲ್ಲಿಯೂ ಸಾಮ್ಯವಿದೆ.

೩. ಕ್ರಾಮಾತ್ಯಃ ಕ್ಷತಕೋಮಲಾಂಗುಲಿಗಲದ್ರಕ್ತೈಃ ಸದರ್ಭಾಃ ಸ್ಥಲೀಃ
ಪಾದೈಃ ಪಾತಿತಯಾವಕೈರಿನ ಗಲದ್ಬಾಷ್ಪಾಂಬುಧೌತಾನನಾಃ ।
ಭೀತಾ ಭರ್ತೃಕರಾವಲಂಬಿತಕರಾಸ್ತ್ವಚ್ಛತ್ರುನಾರ್ಯೋsಧುನಾ
ದಾವಾಗ್ನಿಂ ಪರಿತೋ ಭ್ರಮನ್ತಿ ಪುನರಪ್ಯುದ್ಯದ್ವಿವಾಹಾ ಇವ ॥

ಭಯದಿಂದುಳ್ಕುವ ರಕ್ತಮೇ ಕುಶಗಳೊಳ್ ಪಾದಾಬ್ಜದಾ ಗಾಯದಿಂ
ವರಲಾಕ್ಷಾರಸಮಾಗೆ ಬಾಷ್ಪನಿವಹಂ ತಾಂ ತೊಯ್ಯೆ ವಕ್ತ್ರಾಂತಮಂ ।
ಕರಮಂ ಭೀತಿಯಿನಿಟ್ಟು ಕಾಂತಕರದೊಳ್ ದಾವಾಗ್ನಿಯಂ ಸುತ್ತುವರ್
ಮೆರೆವರ್ ಮತ್ತೆ ವಿವಾಹಲೀಲೆಯನೆನಲ್ ತ್ವದ್ವೈರಿನಾರೀಜನಂ ॥

ಈ ಚಾಟುಪದ್ಯದಲ್ಲಿ ರಾಜನನ್ನು ಕುರಿತ ಪ್ರಶಂಸೆಯೇ ಮುಖ್ಯ ಅಭಿಪ್ರಾಯ. ಆ ರಾಜಪ್ರಶಂಸೆಗೆ ಕರುಣದಂತೆ ಶೃಂಗಾರವೂ ಅಂಗವಾಗಿಬಿಟ್ಟಿದೆಯಾದಕಾರಣ ವಿರೋಧವಿಲ್ಲ. ಇನ್ನೊಂದು ಉದಾಹರಣೆ :—

ಏಹಿ ಗಚ್ಛ ಪತೋತ್ತಿಷ್ಠ ವದ ಮೌನಂ ಸಮಾಚರ ।
ಏವಮಾಶಾಗ್ರಹಗ್ರಸ್ತೈಃ ಕ್ರೀಡಂತಿ ಧನಿನೋಽರ್ಥಿಭಿಃ ॥

ಬಾ ಪೋ, ಸಾರ್ ನಿಲ್, ನುಡಿ ಸ
ಲ್ಲಾಪವನುಳಿ,ಯೆಂದು ಮೇಣ್ಬುದ್ರಾಶಾಗ್ರಹಸಂ-|
ಘೋಪಹತರ್ ಧನಿಗಳ್ ಕ್ರೀ
ಡಾಪರತೆಯನಾಳ್ವರಲ್ತೆ ಯಾಚಕಜನದೊಳ್ ||

ಇಲ್ಲಿ 'ಬಾ ಎಂದು ಕ್ರೀಡಿಸುತ್ತಾರೆ. ಹೋಗೆಂದೂ ಕ್ರೀಡಿಸುತ್ತಾರೆ' ಎಂಬುದಾಗಿ ಗಮನ, ಅಗಮನಗಳೆರಡಕ್ಕೂ ಕ್ರೀಡೆಯ ಅಂಗತ್ವ ಬರುವುದರಿಂದ ವಿರೋಧವಿಲ್ಲ.

ಕ್ಷಿಪ್ತೋ ಹಸ್ತಾವಲಗ್ನಃ ಪ್ರಸಭಮಭಿಹತೋಽಪ್ಯಾದದಾನೋಽಂಶುಕಾನ್ತಂ
ಗೃಹ್ಣನ್ ಕೇಶೇಷ್ವಪಾಸ್ತಶ್ಚರಣನಿಪತಿತೋ ನೇಕ್ಷಿತಃ ಸಂಭ್ರಮೇಣ|
ಆಲಿಂಗನ್ ಯೋಽವಧೂತಸ್ತ್ರಿಪುರಯುವತಿಭಿಃ ಸಾಶ್ರುನೇತ್ರೋತ್ಪಲಾಭಿಃ
ಕಾಮೀವಾರ್ದ್ರಾಪರಾಧಃ ಸ ದಹತು ದುರಿತಂ ಶಾಂಭವೋ ವಃ
ಶರಾಗ್ನಿಃ ||[193]

ತಳ್ಳಿರೆಯು ಕೈಬಿಡದೆ ಪೊಯ್ದರೂ ರೋಷದಲಿ
ಸೆರಗ ತುದಿಯನೆ ಮತ್ತೆ ಸಾರಿ ಪಿಡಿಯುತಲಿ;
ನೂಕಿದರು ಕೂದಲನೆ ಸವರತೊಡಗುತೆ ಮತ್ತೆ
ಕಾಲ್ವಿಡಿದರೂ ದುಗುಡದಿಂದನರಿಯದೆ;
ಅಪ್ಪಲೆಳಸಲು ಮೊದಲೆ ತಪ್ಪಿಸುತ ವೇಗದಲಿ
ನೇತ್ರಪದ್ಮಗಳಿಂದ ಕಣ್ಣೀರ ಮಿಡಿವ
ತ್ರಿಪುರಯುವತಿಯರಿಂತು ಧೂರ್ತಕಾಮಿಯವೋಲು
ಕಂಡ ಶ್ರೀಶಂಭುವಿನ ಬಾಣಾಗ್ನಿಯು
ದಹಿಸಲೆಮ್ಮಯ ದುರಿತಸಂಚಯವನು.

ಇಲ್ಲಿ ತ್ರಿಪುರಾರಿಯ ಪ್ರಭಾವಾತಿಶಯಕ್ಕೆ ಕರುಣರಸ ಅಂಗವಾಗಿದೆ. ಆ ಕರುಣಕ್ಕೆ ಶೃಂಗಾರವು ಅಂಗ. ಆದರೂ ಕರುಣದಲ್ಲೇ ವಿಶ್ರಾಂತಿಯಿಲ್ಲದ ಕಾರಣ ಕರುಣವು ಕೇವಲ ಅಂಗ ಮಾತ್ರ. ಅಥವಾ, ಹಿಂದೆ ಹೇಗೆ ಕಾಮುಕನು ವರ್ತಿಸುತ್ತಿದ್ದನೋ ಹಾಗೆಯೇ ಶರಾಗ್ನಿಯೂ ವರ್ತಿಸಿತೆಂದು ಶೃಂಗಾರಪೋಷಿತವಾದ ಕರುಣದಿಂದ ಪ್ರಧಾನಾರ್ಥವೇ ಪರಿಪುಷ್ಟವಾಗುತ್ತದೆ. ಪ್ರಾಚೀನರೇ ಹೇಳಿರುವಂತೆ—

[193] ಅಮರುಶತಕದ ಮಂಗಳಶ್ಲೋಕ.

ಒಂದು ಗುಣವು ಮತ್ತೊಂದು ಗುಣದ ಸಹಾಯದಿಂದ ಪ್ರಧಾನವನ್ನೇ ಪುಷ್ಟೀಕರಿಸುತ್ತದೆ; ಅದು ಪಡೆಯುವ ವಿಪುಲತ್ವವೆಲ್ಲ ಪ್ರಧಾನದ ಉಪಕಾರಕತ್ವದಲ್ಲಿ ಮಾತ್ರ ಚರಿತಾರ್ಥ, ಮುಂಚೆ[194] ಪ್ರತಿಪಾದಿಸಲಾದ ರಸಕ್ಕೆ ರಸಾಂತರದೊಡನೆ ವಿರೋಧವಾಗಲಿ, ಅಂಗಾಂಗಿ ಭಾವವಾಗಲಿ ಒಂದೂ ಶಕ್ಯವಿಲ್ಲವಾದ್ದರಿಂದ 'ರಸ' ಎಂಬ ಶಬ್ದಕ್ಕೆ ಇಲ್ಲೆಲ್ಲ ಸ್ಥಾಯಿಭಾವವೆಂದೇ ಅಭಿಪ್ರಾಯ ಮಾಡಿಕೊಳ್ಳಬೇಕು.

ಇಲ್ಲಿಗೆ ಕಾವ್ಯಪ್ರಕಾಶದಲ್ಲಿ 'ದೋಷ-ದರ್ಶನ''ವೆಂಬ ಏಳನೆಯ ಉಲ್ಲಾಸ ಮುಗಿದುದು.

**ಇದೆ ರಸಿಕರ ಕೈದೀವಿಗೆ**
**ಯಿದೆ ಕನ್ನಡಿ ಕಾವ್ಯದೋಷದರ್ಶನಕೆನಿಸಲ್ ।**
**ಮೊದಲಂ ತಪ್ಪಿನ ತುದಿಯಂ**
**ಹೃದಯಂಬುಗುವಂತೆ ಮಮ್ಮಟಂ ವಿಧಿಸಿರ್ದಂ ॥**

**—ಡಾ|| ಕೆ. ಕೃಷ್ಣಮೂರ್ತಿ.**

---

194 = ನಾಲ್ಕನೆಯ ಉಲ್ಲಾಸದಲ್ಲಿ.

## ಅಮೃತ ವಾಣಿ

ಸಂಪತ್ತು ವಿಶ್ವಶಕ್ತಿಯೊಂದರ ಪ್ರಕಟ ರೂಪ. ಆ ಶಕ್ತಿ ಪ್ರಪಂಚದಲ್ಲಿ ಪ್ರಕಟವಾಗಿ ಕಾರ್ಯಪರವಾಗುವುದು. ಅದರ ಕಾರ್ಯ ಪ್ರಾಣಮಯ ಮತ್ತು ಅನ್ನಮಯಗಳಲ್ಲಿ. ದೈನಂದಿನ ಜೀವನಕ್ಕೆ ಅದು ಆವಶ್ಯಕ. ದೇವರ ಇತರ ಶಕ್ತಿಗಳಂತೆ ಇದು ಲೋಕಕ್ಕೆ ನೀಡಲ್ಪಟ್ಟಿದೆ.

ಕೆಲವರು ಸಂಪತ್ತನ್ನು ವರ್ಜಿಸಿ ಬಡತನವನ್ನಾಶ್ರಯಿಸಿ ಶುಷ್ಕಜೀವನವನ್ನು ನಡೆಸುವುದು ಆಧ್ಯಾತ್ಮಿಕ ಸ್ಥಿತಿಗೇರುವ ಮಾರ್ಗವೆಂದು ಹೇಳುತ್ತಾರೆ. ಹೀಗೆ ಮಾಡುವುದರಿಂದ ಭಗವಂತನ ವಿರೋಧೀ ಶಕ್ತಿಗಳಿಗೆ ಧನಬಲವನ್ನು ಬಿಟ್ಟು ಕೊಟ್ಟಂತಾಗುವುದು. ಈಶ್ವರನದಾದ ಐಶ್ವರ್ಯವನ್ನು ಪುನಃ ಈಶ್ವರನಿಗಾಗಿ ಜಯಿಸಿ ತಂದು ಅವನಿಗೆ ಒಪ್ಪಿಗೆಯಾಗುವಂತೆ ದಿವ್ಯಜೀವನಕ್ಕಾಗಿ ವಿನಿಯೋಗಿಸಲ್ಪಡಬೇಕೆಂದು ಹೇಳುತ್ತದೆ ಅತಿಮಾನಸಯೋಗ!

ಶ್ರೀ ಅರವಿಂದರು

(ಅವರ ಕೃತಿಗಳಿಂದ ಸಂಗ್ರಹಿಸಿದ್ದು)

---

ಈ ಪ್ರಪಂಚದ ಸಂಪತ್ತೆಲ್ಲ ಆಸುರೀ ಶಕ್ತಿಗಳ ದಾಸ್ಯದಿಂದ ಕಟ್ಟಕಡೆಗೆ ಬಿಡುಗಡೆಯಾಗಿ, ಭಗವಂತನ ಲೋಕಸಂಗ್ರಹಾರ್ಥವಾಗಿ ಸ್ವಯಂಪ್ರೇರಿತ ಹಾಗೂ ಪೂರ್ಣವಾಗಿ ಅರ್ಪಿಸಿಕೊಳ್ಳುವ ಸುದಿನ ಬಂದೇ ಬರುತ್ತದೆ.

ಶ್ರೀ ಮಾತೆ

---

## ಸೆರೆಯಾಳು

(೧)

ಹೌದು! ಸರೆತಿದೆ ಕೂದಲು—
ಮುಪ್ಪಿದಲ್ಲ—!
ಒಂದು ರಾತ್ರಿಯಲಾದುದಲ್ಲ
ಇದ್ದಕಿದ್ದೊಲು ಬೆಚ್ಚಿ ಬೆದರುವ
    ನರರಿಗಾಗುವ ಪರಿಯೊಲು!
ಕಾಲುಕೈಗಳು, ಸುರುಟಿವೆ—
ದುಡಿದು ದುಡಿದೂ ಸಡಿಲಲಿಲ್ಲ
ಒಂದೆ ಎಡೆಯಲಿ ದಿಂಡುಗೆಡೆಯಲು
    ಬಂದುದೀದೆಸೆ, ದುರ್ದೆಸೆ.
ಭೂಮಿ ಗಾಳಿಗಳೆರೆವ ನೇಹವ                                        ೧೦
ಸವಿಯಗೊಡದೊಲು ಕಟ್ಟುವಡೆದಿಹ
ಪಾಪಿ ಜನರಲಿ ನಾನು ಒಬ್ಬ,
    ಬುವಿಯ ಭಾಗ್ಯವಿಹೀನನು!
ಎನ್ನ ತಂದೆಯ ಧರ್ಮಕೋಸುಗ
    ಪಾಡುಪಟ್ಟನು ಸೆರೆಯಲಿ
    ನೇಹವಾಂತೆನು ಸಾವಲಿ!
ತನ್ನ ತತ್ವವ ತ್ಯಜಿಸಲಾರದೆ
ತಂದೆ ಬದುಕನು ತೆತ್ತು ಸತ್ತನು;
ಅವನ ಮಕ್ಕಳು ನಾವ್ಗಳೆಲ್ಲ
ಕತ್ತಲೆಯ ಗವಿಯೆ ನೆಲೆಯಾಯಿತು.                                    ೨೦
ಏಳು ನಾವ್ಗಳು—ಈಗ ಒಬ್ಬನೆ;
    ಆರು ಹರೆಯದಿ—ಕಡೆಗೆ ಒಬ್ಬ!
ಎಲ್ಲ ಸತ್ತರು ಛಲದ ಸಿಟ್ಟಿಗೆ
    ಬಿಡದೆ ಧರ್ಮವ ಹಟದಲಿ!
ಉರಿಯಲೊಬ್ಬನು, ಕಣದಲಿಬ್ಬರು,

ಹಟವ ಸಾಧಿಸೆ, ತಂದೆ ಸತ್ತೊಲು
ತಮ್ಮ ಜೀವವ ಮುಡಿಪುಕೊಟ್ಟರು
ಜರಿಯೆ ದೇವನ ಹಗೆಗಳು.
ಉಳಿದ ಮೂವರ ಗವಿಗೆ ಬಿಸುಟರು
ನಾನೆ ಅವರಲಿ ಕಡೆಯುವ! ೩೦

(೨)

ಷಿಲಾನ್ನ ಸೆರೆಮನೆ ನರಕವೇ ಸರಿ!
ಏಳು ಗಾಥಿಕ್ ಸ್ತಂಭವಿರುವುವು
ಬಹಳ ಹಳೆಯದು; ಸುತ್ತ ಕತ್ತಲೆ!
ಏಳು ಭಾಗಗಳುಂಟು ಅಲ್ಲಿ
ಹೆಪ್ಪುಗಟ್ಟಿದ ಕಗ್ಗವಿ!
ಎಂತೊ, ಎಲ್ಲಿಯೊ, ಗೋಡೆ ಬದಿಯಲೊ
ಬಿರುಕಿನಿಂದಲೊ, ಬಿಸಿಲ ಕೋಲು
ಅಪ್ಪಿ ತಪ್ಪಿ, ದಾರಿ ತಪ್ಪಿ
ನುಸುಳಿ ಬಂದರೆ ಉಂಟು, ಇಲ್ಲ.
ಸುತ್ತ ಮುತ್ತಲು ಜೌಗು ಎಲ್ಲ. ೪೦
ಕಂಬ ಕಂಬದಿ ಕೊಂಡಿ ಇರುವುದು
ತೂಗಿ ಬಿದ್ದಿವೆ ಸರಪಣಿ.
ತನುವ ಕೊರೆವುದು ಗಟ್ಟಿಕಬ್ಬಿಣ,
ಇದಕೊ, ಮೈಯಲಿ ಕಲೆಗಳು.
ಅಳಸಿ ಹೋಗದ ಕಪ್ಪುಕಲೆಗಳು
ಜಡ್ಡುಗಟ್ಟಿವೆ ಇಂದಿಗೂ.
ವರುಷ ವರುಷಗಳೊಂದೆ ಸಮನೆ
ಬೆಳಕ ಕಾಣದ ಕಣ್ಣಿಗೀದಿನ
ಬಿಟ್ಟ ಕೂಡಲೆ ಸೋಯುತಿರುವುವು.
ಎನಿತು ದಿನಗಳು ಉರುಳಿ ಹೋದುವೊ ೫೦
ಲೆಕ್ಕವಿಲ್ಲ; ಗಣನೆಯಿಲ್ಲ.
ಕಡೆಯ ಸೋದರ ಮುದುಡಿ ಸಾವೆಡೆ

ಕಾಲ ದೇಶವನೆಲ್ಲ ಮರೆತೆನು,
    ಮರೆತು, ನಾ ಜಡವಾದೆನು.

(೩)

ಕಲ್ಲಕಂಬಕೆ ಬೇರೆ, ಬೇರೆ
ಬಿಗಿದರೆಮ್ಮನು ದೂರ, ದೂರ.
ನಾವು ಮೂವರು—ಬೇರೆ, ಬೇರೆ—
ಒಂದು ಹೆಜ್ಜೆಯು ಕದಲಲಾರೆವು
ಒಬ್ಬರೊಬ್ಬರ ನೋಡಲಾರೆವು
ಮಬ್ಬು ಮುಸುಕಿಹ ಮಂಜು ಬೆಳಕಲಿ ೬೦
ನಾವೆ ನಮ್ಮನು ಅರಿಯದಾದೆವು.
ಒಟ್ಟಿಗಿದ್ದರು ಬೇರೆ, ಬೇರೆ,
ಕಟ್ಟುಹಾಕಿರೆ ದೂರ ದೂರ!
ಅಗಲದಿದ್ದಿತು ಹೃದಯವೊಂದೇ.
ಬುವಿಯ ಭಾಗ್ಯಗಳಿಲ್ಲದೆಡೆಯಲಿ
ಇದುವೆ ಮನಸಿಗೆ ಹೆಚ್ಚು ಒಪ್ಪಿತು
ಒಬ್ಬರೊಬ್ಬರ ಮಾತ ಕೇಳಲು
ಒಬ್ಬರೊಬ್ಬರ ಸಂತವಿಡಲು.
ಹೊಸತು ಭರವಸೆ ಕೊಡುತಲೋ—
ಹಳೆಯ ಕತೆಯನು ಹೇಳಿಕೊಂಡೋ ೭೦
ವೀರಗೀತೆಯ ಹಾಡಿಕೊಂಡೋ
    ಕಾಲಕಳೆದೆವು ಮೂರು ಮಂದಿ.
ಇಂಥ ಬದುಕೂ ಬೇಸರಾಯಿತು
ಕಟ್ಟಕಡೆಗೆ; ತುತ್ತತುದಿಗೆ.
ನಮ್ಮ ದನಿಯೆ ಬಲುಗಡಸಾಯಿತು
ಕಲ್ಲು ಗವಿಯಿಂ ಕಿವಿಯ ಸೀಳುವ
    ಪಡಸು ಮಾರ್ದನಿಯಾಯಿತು.
ಹಳೆಯ ಯಾವುದೊ ದನಿಯ ತೆರದಲಿ
    ಕುಗ್ಗಿ ಕರ್ಕಶವಾಯಿತು.

ಬಹಳ ಸೋಜಿಗ ಎಂಬಿರೇನೋ, ೮೦
ಏನೊ, ಎಂತೋ, ನನಗೆ ಅಂತೂ
ನಮ್ಮ ದನಿಯೊಲು ತೋರಲಿಲ್ಲ.

(೪)

ಮೂರು ಜನರಲಿ ನಾನೆ ಹಿರಿಯ.
ಉಳಿದ ಮಂದಿಯ ಸಂತವಿಡುವುದು
ನೆಚ್ಚುಗೊಡುವುದು ನನ್ನದಾಯಿತು,
ಶಕ್ತಿಯಿದ್ದೊಲು ಗೈದೆನು
ಮೂರು ಮಂದಿಯು ಗೈದೆವು.
ಎನ್ನ ತಾಯಿಯ ಎರಕದಂತಿಹ
ಹೊಳಪುಗಂಗಳ ಅಣುಗದಮ್ಮನ,
ನಮ್ಮ ತಂದೆಯ ಅಚ್ಚುಮೆಚ್ಚಿನ ೯೦
ಮುದ್ದು ಮಗನನು ನೋಡಿ, ನೋಡಿ
ನನ್ನ ಎದೆ ಬಲು ಕರಗಿತು.
ಅಂಥ ಕಣ್ಮಣಿ ಇಂಥ ಸೆರೆಯಲಿ
ಸಿಕ್ಕಿಬಿದ್ದಿರೆ, ಕರುಳು ಕೊರಗದೆ?
(ಹಗಲ ಬೆಳಕಿಗೆ ಮನವು ಮೆಚ್ಚಿರೆ
ಸ್ವೇಚ್ಛೆ ಗಿಡುಗಗಳೆಂತು ನಲಿವುವೊ,
ಅಂತು ಬೆಳಕಿಗೆ ಹಿಗ್ಗಿ ಹಿರಿಯುತ
ನಾನು ನಲಿದಿಹೆ.)—ಅಂಥ ಹಗಲೊಲು
ಎನ್ನ ತಮ್ಮನು ಚೆಲುವನು!
ಎಲ್ಲಿ, ಯಾವೆಡೆಯಲ್ಲಿ, ಧ್ರುವದಲಿ ೧೦೦
ತರಣಿ ಮುಳುಗದೆ ಬೆಳಕುಗುಂದದೆ
ಹಿಮದ ಮುದ್ದಿನ ಕಂದನಂದದಿ
ಕಂಡು ಬರುವನೊ ದಂಡೆಯಂತೆ
ಅಲ್ಲಿ ಮೆರೆಯುವ ದೀರ್ಘ ಬೇಸಿಗೆ
ಕಾಲದಾ ನಸು ಹಗಲಿನಂತೆಯೆ
ತೀರ ಚೆಲುವನು ತಮ್ಮನು

ಬೆಳಕ ಕಣಿ ಪರಿಶುದ್ಧನು.
ಸಹಜ ಸುಂದರ; ಚಿರ ಹಸನ್ಮುಖಿ.
ಬೇರೆ ಜನಗಳ ಕಷ್ಟನಷ್ಟವ
ಕಂಡು ಕೇಳಲು, ಅವನ ಕಂಬನಿ ೧೧೦
ಮಲೆಯ ಕಾಳ್ಪುರದಂತೆ ಹರಿವುದು.
ಅವರ ದುಃಖವ ಗಣಿಸದಿರನು
ಕಳೆವವರೆಗೂ ಸಹಿಸನು.

(೫)

ಉಳಿದ ಒಬ್ಬನು ಶುದ್ಧಚಿತ್ತನು!
ಅರಿ ಭಯಂಕರ, ಧೀರ ಯೋಧನು!
ಪುಷ್ಟಿಗೊಂಡಿಹ ದೃಢಶರೀರನು!
ಜಗವೆ ಎದುರಿಸಿ ಕೈಯನೆತ್ತಲು
ಎದೆಯ ಹರಹುವ ಸ್ಥಿರಮನಸ್ಕನು!
ನಗುತ ನಗುತಲೆ ಆಸುವ ತೆತ್ತನು.
ಕ್ರೂರ ಸರಪಣಿ ಮಾಲೆಯಲ್ಲಿ ೧೨೦
ಹೆಚ್ಚು ದಿನ ತಾ, ನವೆಯಲಿಲ್ಲ.
ಅದರ ಕಣಕಣ ಶಬ್ದ ಕೇಳಲು
ಅವನ ಹೃದಯವು ಕುಂದಿತು!
ಅಹುದು, ನೋಡಿದೆ ಕುಗ್ಗಿತು!
ನನ್ನ ಎದೆಯೂ ಅಳುಕಿತು!
ಮನೆಯ ವಿಭವದ ನೆನೆಹನೂಡುತ
ನೆಚ್ಚ ನೀಡಲು ಯತ್ನ ಮಾಡಿದೆ.
ಆತ ಮಲೆಗಳ ಬೇಟೆಗಾರ!
ಹುಲ್ಲೆ, ತೋಳವ, ಅಟ್ಟಿ ಆಡಿದ
ದಿಟ್ಟತನದಾ ಬೇಟೆಗಾರ! ೧೩೦
ಇಂಥ ಶೌರ್ಯದ ಕಣಿಗೆ ಈ ಗವಿ
ಸಹಿಸದಿಹ ದರಿಯಾಯಿತು
ಕಾಲ ಬಳಿ ತೊಡರಾಯಿತು.

(೬)

ಲೆಮನ್ ಸರೋವರ ಸುತ್ತುಗಟ್ಟಿದೆ
ಷಿಲಾನ್ನ ಸೆರೆಮನೆ ಗೋಡೆಗಳನು.
ಸಾವಿರಡಿಗಳ ಆಳದಡಿಯಲಿ
ತುಂಬು ನೀರದು ಹರಿದು ಮೊರೆವುದು.
ಷಿಲಾನ್ನ ಗೋಡೆಗಳಿಂತು ನಿಂತಿರೆ
ತುತ್ತತುದಿಗಳ ಸಾಲು ತೆನೆಗಳ
    ಬಳಸಿ ನಿಂದಿವೆ ಅಲೆಗಳು! ೧೪೦
ಗೋಡೆ, ಅಲೆಗಳು ಎರಡು ಕೂಡಿ
    ನಿಡಿದು ಕಗ್ಗವಿಯಾಯಿತು!
ಜೀವಸಹಿತವೆ ನೀರಿನಡಿಯಲಿ
ಹೂಳಿ, ಗೋರಿಯು ಕಟ್ಟಿದಂತೆ
    ಮೇಲೆ ಕವಿದಿದೆ ಚಾವಣಿ!
ಇರುಳು ಹಗಲಲಿ ತಲೆಯ ಮೇಲ್ಗಡೆ
ಬುಳುಬುಳೆನ್ನುತ ಮೊರೆವ ನೀರಿನ
    ದನಿಯ ಕೇಳ್ದಿವು ನಾವ್ಗಳು!
ಚಳಿಯ ಕಾಲದ ರಮ್ಯಗಗನದಿ
ಬೀಸಿ ಸಾಗುವ ಮಂದಪವನಕೆ ೧೫೦
ಬಳಿಗೆ ಸಾರುವ ನೀರ ತುಂತುರು
    ತನುವ ಸೋಂಕಲು, ಬಲ್ಲೆನು.
ರಭಸದಲೆಯಲಿ ಕಲ್ಲ ಸೆರೆಮನೆ
    ನಡುಗಿ ಗುಡುಗುಡು ಎನುವುದು,
    ಅಹುದು, ಬಲ್ಲೆ; ಹೆದರೆನು.
ಎನ್ನ ಬಂಧನದಿಂದ ಬಿಡಿಸುವ
    ಮೃತ್ಯು ಸಾರಲು ಆ ಪರಿ,
    ಮಣಿದು, ಸ್ವಾಗತವೀವೆನು.

(೭)

ನನ್ನ ಸನಿಹದ ತಮ್ಮ ಸತ್ತನು
ಎದೆಯಗುಂದಿದನೆಂದು ಹೇಳಿದೆ; ೧೬೦

ಕೂಳನೊಲ್ಲದೆ ಹೇಸಿ ಬಿಸುಟನು.
ಒಣಗಿ ಬಾಡಿದ ಪಾಡಿಗಲ್ಲ,
ಅಚ್ಚ ಮಾಂಸದ ಸವಿಯು ಸವಿದು
ನಮಗೆ ಆ ಹಿಡಿಕೂಳು ಸಹಿಸದು.
ಆಡಹಾಲನು ಸವಿದ ಬಾಯಿಗೆ
ಕುಂಟೆ ನೀರನು ಕೊಟ್ಟರು.
ಕಬ್ಬಿಣದ ಸೆರೆಮನೆಯ ಗವಿಯಲಿ
ಪ್ರಾಣಿವರ್ಗವ ಕೂಡುವಂದದಿ
ತನ್ನ ವಂದಿಗರನ್ನೆ ಬಂಧಿಸಿ
ಮದಿಪ ಮನುಜನ ಖೈದಿಯಾಳ್ಗಳು ೧೭೦
ವರುಷಗಟ್ಟಲೆ ಸುರಿದು ಹರಿಸಿದ
ಕಣ್ಣನೀರಲಿ ತೊಯ್ದು ನೆನೆದಿಹ
ಚೂರು ರೊಟ್ಟಿಯ ತೆರದಲಿದ್ದಿತು
ನಮಗೆ ನೀಡಿದ ಕೂಳದು.
ಆದರೇನು? ಮುಟ್ಟಲಿಲ್ಲ;
ಇವುಗಳೊಂದನು ತಮ್ಮನೊಲ್ಲ.
ಮಲೆಯಸಾಲಿನ ತಂಪುಗಾಳಿಯು
ತಡೆದುದಾದರೆ, ಅರಮನೆಯಲೂ
ಕೆರಳುವಂತಹ ಗೆಣೆಯನವನು.
ಏಕೆ, ಇನ್ನೂ ಮುಚ್ಚುಮರೆಯು ೧೮೦
ಸತ್ತನು—
ಅಹುದು, ಸತ್ತನು ತಮ್ಮನು—
ಕಣ್ಣು ತುಂಬ ನಾನೆ ನೋಡಿದೆ.
ಬೀಳ್ವ ತಲೆಯನು ಹಿಡಿಯದಾದೆ.
ಸಾವ ಕೈಯನು ಹಿಡಿಯದಾದೆ
ಎಷ್ಟೊ ಯತ್ನವ ಮಾಡತೊಡಗಿದೆ
ಆದರೆಲ್ಲವು ನಿಷ್ಫಲ!
ಕಟ್ಟು ಬಿಚ್ಚಲು, ತುಂಡುಗೈಯಲು
ಯತ್ನಮಾಡಿದೆ; ನಿಷ್ಫಲ!

ಸತ್ತ್ರಸವನು ; ಕಟ್ಟು ಬಿಚ್ಚಿದ- ೧೯೦
ರಾಗ ಬಂದು ; ಜೌಗಿನೆಡೆಯಲೆ,
ಅಲ್ಲೆ, ಕೆಲದಲಿ ಆಳ ತೆಗೆದರು.
ಬೆಳಕು ಬೀಳುವ ಒಳ್ಳೆ ಎಡೆಯಲಿ
ಹೂಳಿರೆಂದು, ಕೇಳಿಕೊಂಡೆ.
ಸತ್ತು ಬಿದ್ದಿರೆ, ಆಗಲಾದರು
ಅವನ ಕೆಚ್ಚಿನ ಹೃದಯ, ಕತ್ತಲೆ
ಗವಿಯನುಳಿಯಲಿ ಎಂದು ಬೇಡಿದೆ.
ಹುಚ್ಚು ಯೋಚನೆ! ಹುಚ್ಚು ಬೇಡಿಕೆ!
ಸುಮ್ಮನಿದ್ದರೆ ಲೇಸು ಎನಿಸಿತು.
ನಕ್ಕು, ಅವನನು ಅಲ್ಲೆ ಹೂತರು. ೨೦೦
ನಮ್ಮ ಒಡಹುಟ್ಟಿದನ ಮೇಲ್ಗಡೆ
ಬರಿಯ ಭೂಮಿಯೆ ಗೋರಿಯಾಯಿತು.
ಅವನ ಕಟ್ಟಿದ ಕರಿಯ ಸರಪಣಿ
ಅಲ್ಲೆ ತೆಪ್ಪಗೆ ಬಿದ್ದುಕೊಂಡಿತು
ತಕ್ಕ ಕುರುಹೆನೆ ಅಂಥ ಬಲಿಗೆ!

(೮)

ಕಟ್ಟಕಡೆಯವ ಕಿರಿಯ ತಮ್ಮ
ಮುದ್ದ ಕಣ್ಮಣಿ, ಎಳೆಯ ಅಲರು,
ಹುಟ್ಟಿದಾ ದಿನದಿಂದ ಒಲುಮೆಯ
ಸವಿದು ಬೆಳೆದಿಹ ಮುದ್ದುಗೂಸು,
ಹಡೆದ ತಾಯಿಯ ಕೈಯ ಕನ್ನಡಿ ೨೧೦
ನಮ್ಮ ವಂಶದ ಮೆಚ್ಚುಗಂದ,
ಧೀರತಂದೆಯ ಅಚ್ಚುಮೆಚ್ಚು ;
ಯಾರಿಗೋಸುಗ ನನ್ನ ಹರಣವ
ನಾನು ಹಿಡಿದಿಟ್ಟಿದ್ದೆನೋ—
ಇಂದೊ, ನಾಳೆಯೊ, ಎಂದೊ ತಪ್ಪದೆ
ಒಳ್ಳೆ ಕಾಲವು ಬರುವುದೆಂದು

ಯಾರಿಗೋಸುಗ ನನ್ನ ಪ್ರಾಣವ
ನಾನು ಹಿಡಿದಿಟ್ಟಿದ್ದೆನೋ—
ಶಕ್ತಿಗುಂದದ ಸಹಜ ಗೆಲುವನೊ,
ತುಂಬುಗೆಲುವನೊ, ಪಡೆದ ಅವನೂ ೨೨೦
ದಿನಕು ದಿನಕೂ ಕುಂದುತಿದ್ದನು,
  ಕಟ್ಟಕಡೆಯಲಿ ಬಾಡಿದ.
  ಬಾಡಿ, ಪುಡಿಯಲಿ ಉರುಳಿದ!
ಅಬ್ಬ! ಶಿವಶಿವ! ಜೀವ ಎದೆಯಿಂ
ಹಾರಿ ಹೋಗುವ ಪರಿಯನೀಕ್ಷಿಸೆ
ಬಲು ಭಯಂಕರ! ಯಾವ ರೂಪವ
ತಳೆದು ಹೋಗಲಿ, ಯಾವ ತೆರದೊಳೆ
ಸಾಗಿ ಹೋಗಲಿ, ಅದನು ನೋಡಲು
ಕಷ್ಟವೇ ಸರಿ! ರಕ್ತ ಕಾರುತ
ಸತ್ತ ಪರಿಯನು ಅರಿವೆ ನಾನು. ೨೩೦
ಕೆರಳಿ ಕನಲುವ ಕಡಲನೆದುರಿಸಿ
ಕಟ್ಟಕಡೆಯಲಿ ಉಸುರ ಬಿಟ್ಟುದ
ನಾನು ನೋಡಿಹೆ. ಪಾಪ ಕರ್ಮದಿ
ನರಳಿ, ನರಳಿ, ಹೊರಳಿ, ಹೊರಳಿ,
ಸತ್ತ ರೋಗಿಗಳನ್ನು ಬಲ್ಲೆ.
ಆದರವುಗಳ ರೀತಿ ಬೇರೆ!
ಹೊರಗೆ ನೋಡಲು ರುದ್ರ ಭೀಷಣ!
ಇಂದೊ ನಾಳೆಯೊ ಸಾವು ಸಿದ್ಧ!
ಅಣುಗದಮ್ಮನ ಪರಿಯೆ ಬೇರೆ.
ಬಾಡುತಿದ್ದನು ಕ್ಷಣಕ್ಷಣಕ್ಕೆ. ೨೪೦
ಉಸಿರನೆತ್ತದೆ ತಲೆಯನೆತ್ತದೆ
ಮೆಲ್ಲ ಮೆಲ್ಲನೆ ಮೈಯು ಕುಂದಿತು
ಮೆಲ್ಲಮೆಲ್ಲನೆ ತ್ರಾಣ ಉಡುಗಿತು.
ಕಣ್ಣ ಹನಿಯನು ಕರೆಯಲಿಲ್ಲ
ಕೆಟ್ಟ ಯೋಚನೆ ಮಾಡಲಿಲ್ಲ

ಉಳಿದ ಮಂದಿಯ ನೆನೆದು ನೆನೆದೂ
ಮತ್ತೆ ಮತ್ತೆ ಮರುಗುತಿದ್ದನು.
ಹಾಲುಗಲ್ಲದ ಮಿರುಗು ಗೋರಿಯ
ನಾಚಿಸಿತ್ತು; ಮಳೆಯು ಬಿಲ್ಲಿನ
ಬಣ್ಣ ಕರಗುವ ತೆರದಿ ಹೊಳಪದು ೨೫೦
ಅಳಿಯುತಿತ್ತು; ಮಿರುಪ ಕಂಗಳ
ಕಾಂತಿ, ಗವಿಯಲಿ ಮಬ್ಬು ಬೆಳಕನು
ಸುಳಿಸುತಿತ್ತು; ಎಳ್ಳಿನನಿತೂ
ಗೊಣಗಲಿಲ್ಲ; ತನ್ನ ಪಾಡಿಗೆ
ಕ್ಷಣವು ಕೂಡ ಮರುಗಲಿಲ್ಲ
ಮೆರೆದ ದಿನಗಳ ನೆನೆಯುತಿದ್ದನು.
ಮೌನದಿಂದಿಹ ಎನ್ನನೀಕ್ಷಿಸಿ
    ನೆಚ್ಚನೂಡುತಲಿದ್ದನು.
ತುತ್ತತುದಿಯಲಿ ಸಾರಿ ಬರುತಿಹ
ಈ ವಿಪತ್ತನು ಕಂಡು ಕಂಡೂ ೨೬೦
ಬಾಯಿ ತೆರೆಯದ ನನ್ನನೀಕ್ಷಿಸಿ
    ನೆಚ್ಚನೂಡುತಲಿದ್ದನು.
ಉಡುಗಿ ಬಾಡಿದ ಒಡಲಿನಿಂದ
ದುಃಖವುಕ್ಕಲು ಅದಮುತಿದ್ದನು.
ತಗ್ಗಿ, ತಗ್ಗಿತು; ಕುಗ್ಗಿ ಕುಗ್ಗಿತು.
ಕಿವಿಯಗೊಟ್ಟೆನು ಕೇಳಲಿಲ್ಲ
ಘೋರ ಭಯವನು ಸಹಿಸಲಾರದೆ
ಕೂಗಿ ಕರೆದೆ; ವ್ಯರ್ಥವೆಂಬುದ
ಬಲ್ಲೆನಾದರು ಎದೆಯ ಸಂಕಟ
ಸುಮ್ಮನಿರಗೊಡದಾಯಿತು. ೨೭೦
ಮತ್ತೆ ಕರೆದೆ—ದನಿಯ ಕೇಳ್ದೊಲು
ಭಾಸವಾಯಿತು: ಇದ್ದ ಶಕ್ತಿಯ
ಒಟ್ಟುಗೂಡಿಸಿ, ತನುವ ಹಿಗ್ಗಿಸಿ,
ಜಗ್ಗಿ, ಕಟ್ಟನು ಕಡಿದು ನುಗ್ಗಿದೆ

ಅವನ ಕಡೆಗೆ; ಅಯ್ಯೊ! ಆ ಎಡೆ
ಅವನೆ ಇಲ್ಲ! ಹೆಪ್ಪುಗತ್ತಲೆ
ಯಲ್ಲಿ ಒಬ್ಬನೆ ಸುಳಿದೆಸು—ನಾ,
ಒಬ್ಬನೇ ಉಳಿದಿದ್ದೆಸು—ನಾ,
ಒಬ್ಬನೇ ಕಗ್ಗವಿಯ ಗಾಳಿಯ
ಕುಡಿದು ಇನ್ನೂ ಇದ್ದೆನು. ೨೮೦
ದೇವಲೋಕದ ಗಡಿಗು ನನಗೂ
ನಡುವೆ ನೆಲಸಿಹ ಇಹದ ಒಂದಿಗೆ,
ಕ್ಷಯಿಸಿ ನಶಿಸುವ ವಂಶದೊಂದಿಗೆ
ಎನ್ನ ಬದುಕನು ಬೆಸೆದ ಬೆಸುಗೆಯು
ಇಂತು ತುದಿಯಲಿ ಕಳಚಿತು.
ಉಳಿದ ಒಂದೇ ನೆಚ್ಚು ಕೂಡ
ಕಟ್ಟಕಡೆಯಲಿ ಸಿಡಿಯಿತು.
ಒಬ್ಬ ಪೊಡವಿಯ ಮೇಲ್ಗಡೆ
ಒಬ್ಬ ಪೊಡವಿಯ ಒಳಗಡೆ
ಇಂತು ಸೋದರರಿಬ್ಬರೂ ಸಹ ೨೯೦
ಸತ್ತು ತಿರೆಯಲಿ ಕೆಡೆದರು.
ಜೋಲ್ದ ತೋಳನು ಎತ್ತಿ ಹಿಡಿಯಲು
ನನ್ನದೇ ಬಲು ಕೊರೆಯುತಿತ್ತು.
ಇಟ್ಟ ಅಡಿಯನು ಎತ್ತಲಾರೆ,
ಮಿಡುಕಲಾರೆ, ಆದರೂ, ನಾ
ಬದುಕಿ ಇದ್ದುದ ಬಲ್ಲೆನು.
ಮನದ ನಚ್ಚಿಗೆ ಧಕ್ಕೆ ತಗಲಲು
ಕರುಳನಿರಿಯುವ ಹುಚ್ಚು ತಲ್ಲಣ
ಕಾಡುತಿದ್ದಿತು ಎನ್ನನು.
ಏಕೆ ಇನ್ನೂ ಸಾಯದಿದ್ದೆನೊ ೩೦೦
ಅರಿಯೆ ನಾನು; ತೊಟ್ಟು ಭರವಸೆ
ಇಲ್ಲದಿದ್ದರು, ಏನೊ ಸಂಬುಗೆ
ಆತ್ಮಹತ್ಯವ ಜರೆಯಿತು.

(೯)

ಮುಂದೆ ಆದುದನರಿಯೆನು
  ಇಂದಿಗೂ ನಾನರಿಯೆನು.
ಮೊದಲು ಕುಗ್ಗಿತು ಗಾಳಿ ಬೆಳಕು
  ಬಳಿಕ ಕವಿದುದು ಕತ್ತಲೆ.
ಚಿಂತೆಯಿಲ್ಲ, ಚಲನವಿಲ್ಲ.
ಏನು ಇಲ್ಲ! ಕಲ್ಲುಗೋಡೆಯ
ನಡುವೆ ಕಲ್ಲಾಗಿದ್ದೆನು— ೩೧೦
ನಾನೆ ನನ್ನನು ಅರಿಯದಂತೆ
ಮಂಜುಮುಚ್ಚಿದ ದೊಡ್ಡ ಬಂಡೆಯ
ತೆರದಿ ನಾ ಬಿದ್ದಿದ್ದೆನು—
ಎಲ್ಲ ಶೂನ್ಯ! ಸುತ್ತ ಭಣಭಣ!
ಮಬ್ಬು ಬೆಳಕು; ಇರುಳು ಅಲ್ಲ
ಬೆಳಗು ಅಲ್ಲ; ಮಂದದೃಷ್ಟಿಯು
ಅಲ್ಲಗಳೆಯುವ ಗವಿಯ ಮಬ್ಬಿನ
ಬೆಳಕು ಅಲ್ಲ; ಸುತ್ತಮುತ್ತನು
ನುಂಗಿಕೊಂಡಿಹ ದಟ್ಟಶೂನ್ಯ!
ಗುರಿಯನರಿಯದ ನಟ್ಟನೋಟ! ೩೨೦
ಭೂಮಿ, ತಾರಗೆ, ಹೊತ್ತು, ಗೊತ್ತು,
ಶಿಕ್ಷೆ, ರಕ್ಷೆ, ಆದಲು ಬದಲು,
ಏನು ಇಲ್ಲ; ಏನು ಇಲ್ಲ!
ಗಟ್ಟಿಗಟ್ಟಿದ ದೀರ್ಘಮೌನವೆ
ಸುತ್ತು ಮುತ್ತಲು ಮೇಲುಕೆಳಗು.
ಇನಿಸು ಕದಲದ ಗಾಢ ಶಾಂತಿ!
ಅಳಿವೊ ಉಳಿವೋ ಶಿವನೆ ಬಲ್ಲ.
ಅಲುಗದಂತಹ ಜಡತೆ ವಾರಿಧಿ
ಹಬ್ಬಿಹಬ್ಬಿದೆ ದಿಕ್ಕುದಿಕ್ಕಿಗು!
ತೀರ, ಮೇರೆಗಳಾವುದಿಲ್ಲ ೩೩೦
  ಇದ್ದ ಎಡೆಯಲೆ ಬಿದ್ದಿದೆ
  ನಿಃಶ್ಯಬ್ದದಲದ್ದಿದೆ!

(೧೦)

ಇದ್ದಕಿದ್ದೊಲು ಹೊಳೆದುದಾವುದೊ
ಬೆಳಕು ನನ್ನಲಿ ಮಿಂಚಿನಂತೆ!
ಅದಕೊ ಯಾವುದೊ ಪಕ್ಷಿಗಾನ,
　　ಕೇಳಿ ಬರುತಿದೆ ಸೋನೆಯಂತೆ!
ತುಸು ನಿಂತಿತು; ಮತ್ತೆ ಹತ್ತಿರ
ಸಾರಿ ಬಂದಿತು. ಇಂಥ ಹಿತವಹ
ಮಧುರಗಾನವ ಕೇಳಿ ಅರಿಯೆನು
ಹಿಂದೆ ಎಂದೂ. ತುಂಬುಸಂತಸ　　೩೪೦
ದಿಂದ ಕಂಗಳು ಕಂಡು ತಣಿದವು
ಮಣಿದವು—ಅರೆ ನಿಮಿಷ ಮರೆತವು
　　ನಾನು ನೊಂದಿಹನೆಂಬುದ.
ಬಳಿಕ ಚಣ ಚಣ ನನ್ನ ಅರಿವಿಗೆ
ಗೋಳುಬಾಳಿನ ಕುದಿವ ಬೇಗುದಿ
ನೆನಪು ಬಂದು, ಎಂದಿನಂತೆಯೆ
ಸುತ್ತ ಸೆರೆಮನೆ ಗೋಡೆ, ನೆಲಗಳ
ಕಂಡೆನು.—ಮಬ್ಬು ಬಿಸಲಿನ
ಬೆಳಕು ನುಸುಳುತಲಿತ್ತು ಮತ್ತೆ.
ಅಲ್ಲೆ ಬಿರುಕಲಿ ಹಕ್ಕಿ ಕುಳಿತು　　೩೫೦
ತುಂಬು ಸೊಗದಲಿ, ಪಳಗಿದಂತೆಯೆ,
ಗಿಡದ ಕೊಂಬೆಗು ಹೆಚ್ಚು ಪರಿಚಯ
　　ವಿರುವ ತೆರದಲಿ ಹಾಡಿತು.
　　ಹಾಡಿ ಸೊದೆಯನು ಕರೆಯಿತು!
ಮುದ್ದುಹಕ್ಕಿ! ಬಣ್ಣಬಣ್ಣದ
ಗರಿಗಳುಂಟು! ನೂರು ಬಗೆಗಳ
ಬಿಚ್ಚಿ ನುಡಿವೊಲು ಕುಳಿತು ಪಾಡಿತು,
　　ಎಲ್ಲ ನನಗೆನೆ ಹಾಡಿತು.
ಮುನ್ನ ಅಂತಹುದನ್ನು ಕಾಣೆ,
ಮುಂದೆ ಕೂಡ ನೋಡಲಾರೆ,　　೩೬೦

ನನ್ನ ಹಾಗೆಯೆ ಅದಕು ಕೂಡ
ಗೆಳೆಯನೊಬ್ಬನು ಬೇಕೊ ಎನುವೊಲು
ತೋರಿತೆನಗೆ! ಆದರೇನು?
ನನ್ನ ಪರಿಯೊಲು ಅದಕೆ ಬೇಸರ
ವಾದ ಚಿಹ್ನೆಯೆ ಕಾಣಲಿಲ್ಲ.
ಒಲಿದು ತಣಿಸಲು ಯಾರು ಇಲ್ಲದೆ
ಎಲ್ಲ ಅಳಿದಿರೆ, ಒಂಟಿಯಾಗಿರೆ,
ನನ್ನ ನಲಿಸಲು ಬಳಿಗೆ ಬಂದಿತು.
ಗವಿಯ ಕೆಲದಲಿ ಎಲ್ಲೊ ಕುಳಿತು
ನನ್ನ ಮನವನು ತಣಿಸಿತು ೩೭೦
ಮತ್ತೆ ಜೀವವನೂಡಿತು!
ಅದಕು ಕೂಡ ಈಗ ಬಿಡುಗಡೆ
ಯಾದುದೇನೋ ಅರಿಯೆನು
ಇಲ್ಲ, ಪಂಜರದಿಂದ ಬಂದಿತೊ
ನನ್ನ ತಣಿಸಲು, ಅರಿಯೆನು.
ಬಂದಿವಾಸವ ಬಲ್ಲ ನಾನು,
ಪುಟ್ಟ ಹಕ್ಕಿಯೆ! ಎಂದಿಗೂ ನಿನ
ಗದನು ಬಯಸೆನು. ಇಲ್ಲ, ಮೇಲಣ
ದೇವಲೋಕದ ಪಕ್ಷಿರೂಪಿನ
ದೈವವೋ?—ಕ್ಷಮಿಸು ದೇವನೆ, ೩೮೦
ನನ್ನ ಮಾತಿಗೆ ದುಃಖ ಬರುವುದು
ಮತ್ತೆ ನಸುನಗೆ/ಬರುವುದೆನಗೆ—
ತಮ್ಮನಾತ್ಮವು ಇಂತು ಸುಳಿವುದೊ
ಏನೊ ಎಂದು, ಬಗೆವೆನೊಮ್ಮೆ.
ಆದರದಗೋ, ಹಾರಿ ಹೋದುದು.
ಈಗ ಅರಿತೆನು ತಮ್ಮನಲ್ಲ—
ಹಕ್ಕಿಯೇ ಸರಿ! ಅವನು ಈ ತೆರ
ಹಾರಿ ಹೋಗನು, ನನ್ನನೀ ಪರಿ
ಒಂಟಿ ಬಿಡನು—ಮನಸು ಒಪ್ಪದು.

ಒಂಟಿ! ಒಂಟಿ! ಕುಳಿಯಲಿಟ್ಟಿಹ ೩೯೦
ಒಂಟಿ ಹೆಣದೊಲು ಒಂಟಿ! ಒಂಟಿ!
ಬಿಸಿಲು ಬೆಳಗಿರೆ ಒಂದೆ ಮುಗಿಲದು
ಒಂಟಿ ಅಲೆಯುವ ತೆರದಿ ಒಂಟಿ!
ಗಗನಗಗನವೆ ತೊಳೆದವೋಲಿರೆ
ಒಂಟಿ ಮುಗಿಲಿರೆ ಹೊಲ್ಲದು!
ನೀಲಿ ಬಾನಿರೆ, ಬುವಿಯು ಬೆಳಗಿರೆ
ಒಂಟಿ ಮುಗಿಲದು ಸಲ್ಲದು!

(ಸಶೇಷ)

ಜಿ. ವರದರಾಜರಾವ್

# ಕಾವ್ಯಾವಲೋಕನ

**ಅಮೃತವಾಣಿ**—ಪ್ರಕಾಶಕರು : ಶ್ರೀ ರಾಮಕೃಷ್ಣಾಶ್ರಮ, ಬೆಂಗಳೂರು ; ಪುಟ ೪೪ ; ಬೆಲೆ, ಐದು ಆಣೆ.

ಶ್ರೀರಾಮಕೃಷ್ಣರ ಮತ್ತು ಅವರ ಏಳು ಜನ ಪರಮಶಿಷ್ಯರ 'ಅಮೃತ ವಾಣಿ'ಯು ಒಂದು ಕಿರಿಯ ಸಂಕಲನ ಇದು. ಶಾರದಾದೇವಿ, ವಿವೇಕಾನಂದರು, ಬ್ರಹ್ಮಾನಂದರು, ಶಿವಾನಂದರು, ತುರೀಯಾನಂದರು, ಶಾರದಾನಂದರು, ರಾಮ ಕೃಷ್ಣಾನಂದರು—ಈ ಮಹಾವ್ಯಕ್ತಿಗಳು ತಾವು ಅಂದಂದು ಹೇಳಿದ ಸಾಧನೆಗೆ, ಅಧ್ಯಾತ್ಮಯಾತ್ರೆಗೆ ಸಂಬಂಧಿಸಿದ ಮಾತುಗಳಲ್ಲಿ ಹಲವನ್ನು ಮಾತ್ರ ಆಯ್ದು ಇದ ರಲ್ಲಿ ಪ್ರಕಟಿಸಲಾಗಿದೆ. ಈ ಒಬ್ಬೊಬ್ಬರು ಮಹನೀಯರೂ ಶ್ರೀ ರಾಮಕೃಷ್ಣರ ಪ್ರೇಮ ಸೂತ್ರದಲ್ಲಿ ಕೋದುನಿಂತ ಉಜ್ವಲ ಮಣಿಗಳು; ರಾಮಕೃಷ್ಣರು, ಜಗನ್ಮಾತೆಯ ಮಲ್ಲಸಾಲೆಯಲ್ಲಿ ಸಿದ್ಧರಾದ ಅಧ್ಯಾತ್ಮವೀರರು. ಆದುದರಿಂದ ಎಲ್ಲರ ವಾಣಿಯಲ್ಲಿಯೂ ಕೇಳಿಬರುವುದು ಒಂದೇ ವಿಚಾರ; ಅದು ಭಗವತ್ ಪರವಾಗಿ ನಡೆಯುವ ಸಾಧಕ ರಿಗೆ ಅಮೃತಾಹಾರ.

ಪ್ರತಿಯೊಬ್ಬರೂ ಸ್ವತಃ ಅನುಭಾವಿಗಳಾದುದರಿಂದ ಅವರ ಮಾತುಗಳು ಸರಳವೂ ಸುಂದರವೂ ಆಗಿವೆ. ತಿಳಿದವರು ತಿಳಿಯಾಗಿ ಹೇಳುತ್ತಾರೆ ಎನ್ನುವುದನ್ನು ಇಲ್ಲಿನ ಒಂದೊಂದು ಮಾತೂ ಸಮರ್ಥಿಸುತ್ತದೆ. ಮಾನವಜೀವನದ ಉದ್ದೇಶ ಭಗವತ್ ಸಾಕ್ಷಾತ್ಕಾರ ಎಂಬುದನ್ನು ಸಾರಿದ ರಾಮಕೃಷ್ಣರು ದಿವ್ಯಕಾತರತೆಯನ್ನು ಕುರಿತು "ನೀರಿನಲ್ಲಿ ಮುಳುಗುತ್ತಿರುವವನು ಉಸಿರಿಗಾಗಿ ಹಾತೊರೆಯುಂತೆ ಭಗವಂತನನ್ನು ಕಾಣಬಯಸುವವನ ಹೃದಯವು ಆತನಿಗಾಗಿ ಹಾತೊರೆಯಬೇಕು" (ಪುಟ ೪) ಎನ್ನುತ್ತಾರೆ. ಈ ಸಾಧಕ ಮನೋಭಾವ ಉಳ್ಳವನು ಈ ಲೋಕದಲ್ಲಿ ಬಾಳಬೇಕಾ ದರೆ ಹೇಗಿರಬೇಕೆಂಬುದನ್ನು ಕುರಿತು "ನೀರಿನಲ್ಲಿ ದೋಣಿಯಿದ್ದರೆ ಚಿಂತೆಯಿಲ್ಲ. ಆದರೆ ದೋಣಿಯೊಳಕ್ಕೆ ನೀರನ್ನು ಹೋಗಗೊಡಬಾರದು" (ಪುಟ ೭) ಎಂದು ಹೇಳುವ ಮಾತು ಎಷ್ಟು ಸೊಗಸಾಗಿಯೂ, ಪರಿಭಾವನಾಯೋಗ್ಯವಾಗಿಯೂ, ಉಚಿತ ವಾಗಿಯೂ ಇದೆ ! ತಾಯಿ ಶಾರದಾದೇವಿಯವರು ಮಾನವಮತಿಯ ಸ್ವಭಾವವನ್ನೂ, ಭಗವತ್ಕೃಪೆಯ ವಿಲಾಸವನ್ನೂ ಕುರಿತು "ಕೆಳಮುಖವಾಗಿ ಹರಿಯುವುದು ನೀರಿನ ಸ್ವಭಾವ; ಆದರೆ ಸೂರ್ಯರಶ್ಮಿಗಳು ಅದನ್ನು ಆಕಾಶಮುಖವಾಗಿ ಮೇಲೆತ್ತುತ್ತವೆ"

(ಪುಟ ೧೦) ಎನ್ನುತ್ತಾರೆ. ಸ್ವಾಮಿ ತುರೀಯಾನಂದರು "ಸಮುದ್ರದಲ್ಲಿ ಸ್ನಾನಮಾಡ ಲಿಚ್ಛಿಸುವವನು ಅಲೆಗಳು ಶಾಂತವಾದಾಗ ಮುಳಗುಹಾಕೋಣ ಎಂದು ಕಾಯುತ್ತಾ ನಿಂತಂತೆ! ಹುಚ್ಚು! ಹಾಗೆ ಎಂದಾದರೂ ಆಗುವುದೆ? ಅಲೆಗಳನ್ನು ಎದುರಿಸಿ, ನುಗ್ಗಿ, ಸ್ನಾನಮಾಡಿ ನೀರಿನಿಂದ ಹೊರಗೆ ಬರಬೇಕು. ಹಾಗೆಯೇ ಪ್ರಪಂಚದಲ್ಲೂ ಕಷ್ಟಗಳ ಮಧ್ಯೆಯೇ ಭಗವಂತನ ಸ್ಮರಣೆಯೂ ನಡೆಯಬೇಕು" (ಪುಟ ೩೪)—ಎಂದು ಹೇಳುತ್ತಾರೆ: ಇಂತಹ ಹಲವಾರು ಮಾತುಗಳು ಈ ಪುಸ್ತಕದಲ್ಲಿವೆ. ಒಂದೊಂದು ಮಾತಿನಲ್ಲೂ, ಕಾವ್ಯದ ರಮಣೀಯತೆಯೂ, ಮಹತ್ತಾದ ಸಂದೇಶವೂ ತುಂಬಿವೆ.

ದೈನಂದಿನ ಜಂಜಡದಲ್ಲಿ ತೊಳಲುವವರಿಗೆ ಇದೊಂದು ಅಪೂರ್ವಸಮಾಧಾನ; ವಿಕಾಸೋನ್ಮುಖವಾದ ಯಾತ್ರಿಕರಿಗೆ ಒಂದೊಂದು ವಾಣಿಯೂ ಭರವಸೆಯ ಬುತ್ತಿ. ನಿಜವಾಗಿಯೂ ಇವು 'ಅಮೃತವಾಣಿ.'

ಇಂತಹ 'ಅಮೃತವಾಣಿ'ಗಳ ಸಂಕಲನಗಳು ಇನ್ನೂ ಹೆಚ್ಚುಹೆಚ್ಚಾಗಿ ರಾಮ ಕೃಷ್ಣಾಶ್ರಮದವರಿಂದ ಪ್ರಕಾಶಿತವಾಗಲಿ.

ಜಿ. ಎಸ್. ಶಿವರುದ್ರಪ್ಪ.

* * *

**ಬೆಳೆಗಳು ಮತ್ತು ಬೇಸಾಯ**—ಲೇಖಕರು: ಶ್ರಿ ಬಿ. ಎನ್. ನಂಜಾರೆಡ್ಡಿ, ವ್ಯವಸಾಯ ಇಲಾಖೆ; ಪ್ರಕಾಶಕರು: ಸಾಧನ ಸಾಹಿತ್ಯಮಂದಿರ, ಜಗನ್ಮೋಹನ್ ಪ್ಯಾಲೇಸು ರೋಡು, ಮೈಸೂರು; ಪುಟಗಳು, vi+೩೮೦; ಬೆಲೆ. ಸಾಧಾರಣ ಪ್ರತಿ ರೂ. ೩-೧೨-೦; ಉತ್ತಮ ಪ್ರತಿ ರೂ. ೪-೪-೦.

ಪಾಶ್ಚಿಮಾತ್ಯದೇಶಗಳಲ್ಲಿ ಅದರಲ್ಲೂ ಅಮೇರಿಕಾ, ಬ್ರಿಟನ್ ಮೊದಲಾದ ದೇಶ ಗಳಲ್ಲಿ ವ್ಯವಸಾಯವೃತ್ತಿಗೆ ಉನ್ನತಸ್ಥಾನ ಕೊಟ್ಟಿದ್ದಾರೆ; ಕೃಷಿಕನಿಗೆ ಗೌರವ, ಮನ್ನಣೆ ನೀಡಿದ್ದಾರೆ. ವ್ಯವಸಾಯಾಭಿವೃದ್ಧಿಯಲ್ಲಿ ವಿಜ್ಞಾನಜನ್ಯಜ್ಞಾನವನ್ನು ಪ ಯೋಗಿಸಿಕೊಳ್ಳುತ್ತಿದ್ದಾರೆ. ರೋಗಗಳಿಗೆ ಸುಲಭವಾಗಿ ತುತ್ತಾಗದ, ಹೆಚ್ಚು ಉತ್ಪನ್ನವೀಯುವ ಆಹಾರ ಬೆಳೆಗಳ, ಹಣ್ಣು ಮತ್ತಿತರ ಬೆಳೆಗಳ, ಹೊಸ ತಳಿಗಳನ್ನು ಕಂಡುಹಿಡಿಯಲು ಸಂಶೋಧನಾಲಯಗಳನ್ನು ಸ್ಥಾಪಿಸಿದ್ದಾರೆ, ತಳಿಗಳನ್ನು ಪ್ರಯೋಗಗಳ ಮೂಲಕ ಪರೀಕ್ಷಿಸಿ ತರುವಾಯ ಬೇಸಾಯಗಾರರಿಗೆ ಹಂಚಿ ಆ ಮೂಲಕ, ಉತ್ಪನ್ನವನ್ನು ಅಧಿಕಗೊಳಿಸುತ್ತಿದ್ದಾರೆ. ಯಾವಯಾವ ಬೆಳೆಗೆ ಯಾವ ಯಾವ ಗೊಬ್ಬರ ಎಷ್ಟು ಪ್ರಮಾಣದಲ್ಲಿ ಹಾಕಬೇಕು, ಬೀಜಗಳನ್ನು ಬಿತ್ತನೆಗಾಗಿ ಆರಿಸುವ ವಿಧಾನ ಯಾವುದು ಈ ವಿಷಯಗಳನ್ನು ರೈತರಲ್ಲಿ ಪ್ರಚಾರಮಾಡುತ್ತಾರೆ. ಇದಕ್ಕಾಗಿಯೇ ಒಂದು ತಜ್ಞರ ಸಮಿತಿ ಇದೆ. ನಮ್ಮ ದೇಶದ ಸುಮಾರು

ಮುಕ್ಕಾಲು ಭಾಗ ಜನರು ಜೀವನಕ್ಕಾಗಿ ವ್ಯವಸಾಯವೃತ್ತಿಯನ್ನವಲಂಬಿಸಿದ್ದರೂ, ದೇಶಕ್ಕೆ ಸಾಕಾಗುವಷ್ಟು ಆಹಾರವನ್ನು ಬೆಳೆಯುತ್ತಿಲ್ಲ. ವ್ಯವಸಾಯ ಪದ್ಧತಿಯಲ್ಲಿ ನೂತನ ಕ್ರಮವನ್ನು ರೈತರು ಕೈಗೊಂಡಿಲ್ಲ. ಈ ರೀತಿ ಮಾಡಲು ತಕ್ಕಷ್ಟು ಪ್ರಚಾರವೂ ನಡೆದಿಲ್ಲ. ಆಹಾರದಲ್ಲಿ ಸ್ವಾವಲಂಬಿಗಳಾಗದಿದ್ದರೆ, ದೇಶದ ಸರ್ವತೋಮುಖವಾದ ಅಭಿವೃದ್ಧಿಗೆ ತೊಡಕಾಗುತ್ತದೆ ಎಂಬುವುದನ್ನು ಸರ್ಕಾರ ಮನಗಂಡು, ಇತ್ತೀಚಿಗೆ ವ್ಯವಸಾಯಾಭಿವೃದ್ಧಿಯ ಕಡೆ ಗಮನಕೊಡುತ್ತಿದೆ.

ಸಂಶೋಧನೆಗಳಿಂದ ಪಡೆದ ಜ್ಞಾನವನ್ನುಪಯೋಗಿಸಿ, ಆಧುನಿಕ ರೀತಿಯಲ್ಲಿ ವ್ಯವಸಾಯ ಪದ್ಧತಿಯಲ್ಲಿ ಮಾರ್ಪಾಡುಮಾಡಿಕೊಳ್ಳಲು ತಿಳಿವಳಿಕೆ ನೀಡುವಂತಹ ವ್ಯವಸಾಯದ ಎಲ್ಲಾ ವಿಷಯಗಳನ್ನೊಳಗೊಂಡ ಪುಸ್ತಕ ಈ ವರೆಗೂ ಕನ್ನಡದಲ್ಲಿ ಅಚ್ಚಾಗಿರಲಿಲ್ಲ. ಶ್ರೀ ಬಿ. ಎನ್. ಸಂಜಾರೆಡ್ಡಿಯವರು, ಸ್ವತಃ ವ್ಯವಸಾಯಗಾರರಾಗಿದ್ದು ಮತ್ತು ವ್ಯವಸಾಯ ಇಲಾಖೆಯಲ್ಲಿದ್ದು ಅನುಭವ ಪಡೆದು "ಬೇಸಾಯ ಮತ್ತು ಬೆಳೆಗಳು" ಎಂಬ ಪುಸ್ತಕವನ್ನು ಬರೆದು ರೈತರಿಗೆ ಮತ್ತು ದೇಶಕ್ಕೆ ಉಪಕಾರವೆಸಗಿದ್ದಾರೆ.

"ಬೇಸಾಯ ಮತ್ತು ಬೆಳೆಗಳು" ಈ ಪುಸ್ತಕದಲ್ಲಿ ವ್ಯವಸಾಯದ ಎಲ್ಲಾ ಭಾಗಗಳನ್ನೂ ವಿವರವಾಗಿ ವಿಶದೀಕರಿಸಿದ್ದಾರೆ. ಆಹಾರ ಧಾನ್ಯಗಳು, ಕೈತೋಟ, ಹಣ್ಣಿನ ಬೆಳೆಗಳು, ಉದ್ಯಾನಕಲೆ, ಇವೆಲ್ಲವುಗಳ ಬೇಸಾಯದ ವಿಷಯವೂ ಅಡಕವಾಗಿವೆ. ಪ್ರತಿಯೊಂದು ಬೆಳೆಗೂ ಅಗತ್ಯವಾದ ಭೂಗುಣ, ಬೇಸಾಯಕ್ರಮ, ವ್ಯವಸಾಯದ ಮುಟ್ಟುಗಳು, ಬಿತ್ತನೆಯನ್ನಾರಿಸುವ ವಿಧಾನ, ಕೊಯ್ಲು ಇವೆಲ್ಲವುಗಳ ವಿಷಯವನ್ನೂ, ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಸುಲಭಶೈಲಿಯಲ್ಲಿ ಬರೆದಿದ್ದಾರೆ. ಬೆಳೆಗಳಿಗೆ ವಿವಿಧ ಹಂತಗಳಲ್ಲಿ ತಲೆದೋರುವ ರೋಗಗಳು, ಅವುಗಳ ನಿವಾರಣೋಪಾಯಗಳನ್ನೂ ಸೂಚಿಸಿದ್ದಾರೆ. ಅಷ್ಟೇ ಅಲ್ಲ, ಪ್ರತಿ ಬೆಳೆಗೂ ಆಗತಕ್ಕ ಖರ್ಚು, ಉತ್ಪನ್ನ ಮತ್ತು ನಿವ್ವಳ ಲಾಭ ಇವುಗಳನ್ನು ತಿಳಿಸಿದ್ದಾರೆ. ಪ್ರತಿ ವರ್ಣನೆಯೂ ಚಿತ್ರಗಳಿಂದ ಕೂಡಿದೆ. ಯಾವುದೊಂದು ವ್ಯವಸಾಯದಲ್ಲಿ ಅಭಿರುಚಿ ಇರುವವನ ಆವಶ್ಯಕತೆಯನ್ನು ಈ ಪುಸ್ತಕ ಪೂರೈಸುತ್ತದೆ. ಕೃಷಿಕರು ಇದನ್ನೋದಿ ಅದರಿಂದ ತಿಳಿವಳಿಕೆ ಪಡೆದು ಬೇಸಾಯಮಾಡಿದರೆ, ಅಧಿಕ ಉತ್ಪನ್ನ ಪಡೆದು ತಾವು ಹೆಚ್ಚು ಸಂಪಾದಿಸಿ ಸುಖವಾಗಿರುವುದಲ್ಲದೆ ದೇಶದ ಪ್ರಗತಿಗೂ ಸಹಾಯಕರಾಗಬಹುದು.

ಈ ಪುಸ್ತಕವನ್ನು ಬರೆಸಿ ಪ್ರಕಟನಗೊಳಿಸಿದ ಸಾಹಿತ್ಯಸಾಧನ ಪುಸ್ತಕಾಲಯದ ಮಾಲೀಕರ ಪ್ರಯತ್ನ ಮೆಚ್ಚುವಂತಹುದು.

***

**ಕೀಟಕ ಪಿಡುಗುಗಳ ಸಮೀಕ್ಷಣೆ**—ಲೇಖಕರು: ಎಚ್. ಎಸ್. ಕಟಿಗಿಹಳ್ಳಿಮಠ; ಪ್ರಕಾಶಕರು: ಕರ್ಣಾಟಕ ವಿಶ್ವವಿದ್ಯಾಲಯ, ಧಾರವಾಡ; ಪುಟಗಳು viii+೮೬; ಬೆಲೆ, ರೂ. ೦-೪-೦.

ಬೇಸಾಯಕ್ಕೊದಗುವ ಆತಂಕಗಳು ಬೇಸಾಯಗಾರನಿಗೇ ಗೊತ್ತು. ಫಸಲನ್ನು ಮನೆಗೆ ತರುವ ವರೆಗೂ ಆತನಿಗೆ ಬೆಳೆಯ ವಿಷಯವಾಗಿ ನಂಬಿಕೆ ಇರದು. ಕಾಲಕಾಲಕ್ಕೆ ಮಳೆ ಬೀಳದೆ ಕೃಷಿ ನಷ್ಟವಾಗುವುದುಂಟು. ಅಂತಹ ನಷ್ಟದ ಅಳತೆ ಅವನಿಗೆ ಅರಿವಾಗುತ್ತದೆ. ಬೆಳೆ ಸೊಂಪಾಗಿ ಬೆಳೆದು, ನೋಡಿದವರೆಲ್ಲರ ಮೆಚ್ಚುಗೆ ಪಡೆದು ಅನಿರೀಕ್ಷಿತವಾಗಿ ಕೀಟಕ್ರಿಮಿಗಳ ಹಾವಳಿಗೆ ತುತ್ತಾಗುವ ನಷ್ಟವನ್ನು ಯಾರು ನಿರೀಕ್ಷಿಸಬಲ್ಲರು, ಯಾರು ಅಳೆಯಬಲ್ಲರು! ಇಂತಹ ಘಟನೆಗಳಿಂದ ಫಸಲು ಕೈಗೆ ಸಿಲುಕಿ, ಸುಖಸಂತೋಷದಿಂದ ನಲಿದಾಡಬಹುದು ಎನ್ನುವ ರೈತನ ನನಸು ಹಗಲುಕನಸಾಗುತ್ತದೆ.

"ಕೀಟಕ ಪಿಡುಗುಗಳ ಸಮೀಕ್ಷಣೆ" ಎಂಬ ಸಣ್ಣ ಹೊತ್ತಿಗೆಯಲ್ಲಿ ಎಚ್. ಎಸ್. ಕಟಿಗಿಹಳ್ಳಿಮಠ ಅವರು ಮುಂಬೈ ಕರ್ಣಾಟಕದಲ್ಲಿ ಬೆಳೆಗಳಿಗೆ ಬರುವ ಕೀಟಗಳ ಹಾವಳಿಯ ವಿಷಯವಾಗಿ ಸಂಕ್ಷಿಪ್ತವಾಗಿ ಉಲ್ಲೇಖಿಸಿದ್ದಾರೆ. ಆ ಪ್ರದೇಶದಲ್ಲಿ ಬೆಳೆಗಳಿಗೆ ಬರುವ ಕೀಟಕಗಳು, ಅವುಗಳು ಕಾಣಿಸಿಕೊಳ್ಳುವ ಋತುಗಳು ಅವುಗಳಿಂದ ಬೆಳೆಗಾಗುವ ಹಾನಿ ಈ ವಿಷಯವಾಗಿ ನಡೆಸಿದ ಸಂಶೋಧನೆಯಿಂದ ಸಂಗ್ರಹಿಸಿದ ವಿಷಯ ಇದರಲ್ಲಿ ವಿವರಿಸಲ್ಪಟ್ಟಿದೆ. ಜೋಳ, ಬತ್ತ, ಹೊಗೆಸೊಪ್ಪು, ಹತ್ತಿ, ಇತ್ಯಾದಿ ಬೆಳೆಗಳಿಗೆ ಬೀಳುವ ಕೀಟಕಗಳ ವಿಷಯ ಸೂಚಿತವಾಗಿದೆ. ಕೀಟಕಗಳ ಚಿತ್ರಗಳಿದ್ದಿದ್ದರೆ ಅವುಗಳ ಪತ್ತೆಗೆ ಸಹಾಯಕವಾಗುತ್ತಿತ್ತು. ಸಂಗ್ರಹಕಾರರೇ ತಿಳಿಸಿರುವಂತೆ ಪಿಡುಗು ನಿವಾರಣೋಪಾಯಗಳನ್ನು ತಿಳಿಸಿದ್ದರೆ ಈ ಪುಟ್ಟ ಪುಸ್ತಕದ ಉಪಯುಕ್ತತೆ ಹೆಚ್ಚುತ್ತಿತ್ತು.

**ಹೆಚ್. ಯನ್. ಚಾಮಯ್ಯ.**

*
* *

**ದೇವಶಿಲ್ಪ**—ಕವಿ: ಶ್ರೀ ಜಿ. ಎಸ್. ಶಿವರುದ್ರಪ್ಪ; ಪ್ರಕಾಶಕರು: ಶಾರದಾಮಂದಿರ, ಕೃಷ್ಣರಾಜವನಂ, ಮೈಸೂರು; ಪುಟಗಳು viii+೮೦; ಬೆಲೆ, ಸಾಮಾನ್ಯ ಪ್ರತಿ ರೂ. ೧-೪-೦; ಕ್ಯಾಲಿಕೊ ಪ್ರತಿ ರೂ. ೨-೮-೦.

ಮುದ್ದಾಗಿ ಅಚ್ಚಾಗಿ, ಸರಳಶುಭ್ರವಾಗಿ ಉಡುಪುಧರಿಸಿ ಕವನಸಂಕಲನವೊಂದು ಕೈಗೆ ಬಂದಾಗ ಸಹೃದಯನಿಗೆ ಸಂತೋಷವಾಗುತ್ತದೆ. ಆದರೆ ಮರುಕ್ಷಣವೇ ತಾಸಿರು ವುದು ಇಪ್ಪತ್ತನೆಯ ಶತಮಾನದ ಉತ್ತರಾರ್ಧದ ಮೊದಲಿನಲ್ಲಿ ಎಂಬುದು ನೆನಪಾದಾಗ

ಅಲಸಮನೋಭಾವದ ರಸಿಕನಿಗೆ ಅದನ್ನು ತೆರೆಯಲು ಭಯವೂ ಆಗುತ್ತದೆ. ತಾನು ಓದ ಬೇಕಾಗಿ ಬರುವ ಮುನ್ನುಡಿ ಹಿನ್ನುಡಿಗಳನ್ನೂ ಟೀಕೆ ಟಿಪ್ಪಣಿಗಳನ್ನೂ, ಮನಶ್ಶಾಸ್ತ್ರ ದಿಂದ ಹಿಡಿದು ಮರಣಶಾಸ್ತ್ರದ ವರೆಗಿನ ಗ್ರಂಥರಾಶಿಗಳನ್ನೂ ನೆನಪುಮಾಡಿಕೊಂಡೇ. ಆದರೂ ಸಹೃದಯ ಸಹಜವಾದ ಕಾವ್ಯ ಕುತೂಹಲದಿಂದ ಅದನ್ನು ಮೆಲ್ಲನೆ ತೆರೆಯು ತ್ತಾನೆ. ಕವಿಯ ಉಪನ್ಯಾಸವನ್ನೂ, ಪ್ರಕಾಶಕರ ಸಾಹಸ ಕಥೆಯನ್ನೂ ತಿರವಿ ಹಾಕಿದರೆ ಮೊದಲಲ್ಲೇ ಇಂಥದೊಂದು ಕವನ ಕಣ್ಣಿಗೆ ಬೀಳುತ್ತದೆ:

ಸುತ್ತಮುತ್ತ ಅಂಧಕಾರ
ಮಳೆ ಹನಿಗಳ ಪಂಜರ!
ದೈತ್ಯ ಸೆರೆಯ ಕಂಬಿಯೊಳಗೆ
ಬಂತು ದೇವ ಕುಂಜರ!
ಬೆಣ್ಣೆ ಮೆದ್ದು ಮಲರುತಿತ್ತು
ಕೊಳಲನೂದುವ ಕೆಂದುಟಿ!
ಮಧುರಭಾವದಿಂದ ಪುಲಕ-
ವಾಯ್ತು ಗೋಪ ಹೃತ್ಪುಟಿ!
ಯಮುನಾ ನದಿ ಪುಲಕವಾಯ್ತು
ನನಸುಗೊಂಡ ಕನಸಿಗೆ
ಬೃಂದಾವನ ವೇಣುಕುಂಜ
ಕೊಳಲಾಯಿತು ಉಸಿರಿಗೆ!
ಕೊಳಲುಳಿಯಿತು ಗಾಳಿಯಲ್ಲಿ
ಬಂತು ರಾಜ್ಯವೈಭವ
ಮಧುರಾಪುರದರಮನೆಯೊಳು
ಬೆಳೆಸುತಿತ್ತು ತೇಜವ.
ಕೊಳಲ ಹಿಡಿದ ಮಿದು ಬೆರಳೊಳು
ಪಾರ್ಥ ರಥದ ವಾಘೆಯು!
ಕೊಳಲೂದಿದ ಮಧುರಾಧರ-
ದಲ್ಲಿ ಪಾಂಚ ಜನ್ಯವು!
ರಣರಂಗದ ತುಮುಲದಲ್ಲು
ಕೇಳು ದಿವ್ಯ ಗೀತೆಯ:
'ಸಂಭವಾಮಿ ಯುಗೇ ಯುಗೇ'
ಎನುವ ಪರಮ ಸತ್ಯವ!
ಮತ್ತೆ ಮತ್ತೆ ಅಂಧಕಾರ
ಮಳೆ ಹನಿಗಳ ಪಂಜರ,

ಸೊಂಡಿಲಾಡಿಸುತ್ತ ಬರುವು-
ದದೋ ದೇವ ಕುಂಜರ !

ಕವನಕ್ಕೆ ಕವಿ, 'ಕೃಷ್ಣಶಕ್ತಿ' ಎಂದು ಹೆಸರುಕೊಟ್ಟಿದ್ದಾರೆ. ಕವನ ಶರೀರದಲ್ಲಿ ಎಲ್ಲೂ ಸ್ಪಷ್ಟವಾಗಿ ಹೇಳದಿದ್ದರೂ ಪೌರ್ವಾತ್ಯ ಪುರಾಣಪ್ರಪಂಚದ ಪರಿಚಯು ಇರುವ ಸಹೃದಯನಿಗೆ ಇದು ಶ್ರೀಕೃಷ್ಣನ ಜೀವನದ ಕಾವ್ಯಪ್ರತಿಮೆ ಎಂಬುದು ವೇದ್ಯವಾಗುತ್ತದೆ. ಮೊದಲ ನಾಲ್ಕು ಸಾಲುಗಳು ಚಿತ್ರಿಸುವ ಭವ್ಯಚಿತ್ರದಲ್ಲಿ ಅನಂತವಾದ ಧ್ವನಿಯಿದೆ. 'ದೇವ ಕುಂಜರ' ಎನ್ನುವ ಮಾತು ಕೃಷ್ಣನಾಗಿ ಮರ್ತ್ಯದಲ್ಲಿ ಅವತರಿಸಿದ ಅಮರ್ತ್ಯಶಕ್ತಿಯ ಅಮೇಯತೆಯನ್ನು ಸೂಚಿಸುತ್ತದೆ. ಸುತ್ತ ಕವಿದಿರುವ ಅಂಧಕಾರ ಮತ್ತು ಮಳೆ ಹನಿಗಳು ಸೃಜಿಸಿರುವ ಪಂಜರ ಇವುಗಳು, ಅತೀತ ಶಕ್ತಿಯ ಅವತಾರಕ್ಕೆ ಕಾರಣವಾಗುವ, ಮಾನವತೆಯಲ್ಲಿ ಕವಿದಿರುವ ಅಂಧಕಾರ ಮತ್ತು ಮಾಯೆಯ ಬಂಧನ ಇವುಗಳನ್ನು ರಮ್ಯವಾಗಿ ಧ್ವನಿಸುತ್ತವೆ.

ದೈತ್ಯ ಸೆರೆಯ ಕಂಬಿಯೊಳಗೆ
ಬಂತು ದೇವ ಕುಂಜರ !

ಅವತಾರ ಶಕ್ತಿಯ ಪ್ರವೇಶಕ್ಕೆ ಕವಿ ಪ್ರತಿಭೆ ನಿರ್ಮಿಸಿರುವ ಸುಮನೋಹರವಾದ ಪ್ರತಿಮೆ ಇದು. ದೈತ್ಯಶಕ್ತಿ ಸಾತ್ವಿಕತೆ ಸೌಜನ್ಯಗಳನ್ನು ಸೆರೆಯಲ್ಲಿಟ್ಟಿದೆ, ಅದರ ಸುತ್ತ ಭದ್ರ ಎಂದು ತಾನು ನಂಬಿರುವ ಕಂಬಿಗಳನ್ನು ನಿರ್ಮಿಸಿದೆ. ಆದರೆ ದೇವ ಕುಂಜರವೋ ತನಗೆ ಅದು ಕ್ರೀಡೆಯೆಂಬಂತೆ, ಅದು ತಳಿರಿನಿಂದ ನಿರ್ಮಿತವಾದ ತೆರೆಯೋ ಎಂಬಂತೆ ಲೀಲಾಜಾಲವಾಗಿ ಅದರೊಳಕ್ಕೆ ಪ್ರವೇಶಿಸಿದೆ.

ಕವನದ ಮುಂದಿನ ನಾಲ್ಕು ಪದ್ಯಗಳಲ್ಲಿ ಶ್ರೀಕೃಷ್ಣನ ಜೀವನಕ್ಕೆ ಸಂಬಂಧಿಸಿದ ಕೆಲವು ಘಟನೆಗಳ ಧ್ವನಿಪೂರ್ಣವಾದ ಚಿತ್ರಣವಿದೆ. ಭಾವಗೀತೆಯ ಆತ್ಮಗುಣವಾದ ಅದೀರ್ಘತೆಯ ಸೂತ್ರವನ್ನು ಗಮನಿಸಿಯೋ ಎಂಬಂತೆ ಕವಿ, ಬಾಲಕೃಷ್ಣ ಪಾರ್ಥ ಸಾರಥಿಯಾಗಿ ಬೆಳೆಯುವ ವರೆಗಿನ ಚಿತ್ರವನ್ನು ಕೆಲವೇ ಪಂಕ್ತಿಗಳಲ್ಲಿ ಚಿತ್ರಿಸಿದ್ದಾರೆ. ಒಂದೊಂದೂ ಅವತಾರ ರಹಸ್ಯದ ಅಂಚನ್ನು ಸೋಕಿ ಹಿಂತಿರುಗುವಂತಹುದು.

ಯಮುನಾ ನದಿ ಪುಲಕವಾಯ್ತು
ನನಸುಗೊಂಡ ಕನಸಿಗೆ !

ಪ್ರಕೃತಿ ಶಕ್ತಿಗಳು ಕಂಡ ಕನಸು ಇದು. ಆ ಕನಸು ನನಸಾದಾಗ ಅವು ಪುಳಕವಾದುವಂತೆ! ತನ್ನ ಕರ್ಮದ ತುದಿಯಲ್ಲಿ ಆ ಶಕ್ತಿ ಅಭಯ ನೀಡುತ್ತದೆ. 'ಸಂಭವಾಮಿ ಯುಗೇ ಯುಗೇ !' ಆರಂಭದ ಚಿತ್ರವನ್ನು ಮತ್ತೆ ನೀಡಿ ಕವಿಯೂ ಆ ಅಭಯವನ್ನು ಮತ್ತೆ ನೆನಪಿಗೆ ತರುತ್ತಾರೆ.

ಪ್ರತಿಮಾಭಾವಗೀತೆ ಎನ್ನಬಹುದಾದ ಇಂತಹುದೇ ಇನ್ನೊಂದು ಕವನ 'ದೇವಶಿಲ್ಪ'. ಜೀವ-ಪರಮರ ನಡುವೆ ನಡೆದ ಒಂದು ಸಂವಾದ ಇದು ಎಂಬುದನ್ನು ನೆನಪಿನಲ್ಲಿಟ್ಟುಕೊಂಡರೆ ಈ ಕವನ ಸ್ಪಷ್ಟವಾಗುತ್ತದೆ. ಸುತ್ತಮುತ್ತಲೂ ಕತ್ತಲು. ಯಾವುದರ ತಿಳವೂ ಇಲ್ಲದ ಬತ್ತಲು. 'ಟಕ್ಕ ಟಕ್ಕ ಟಕ್ಕ ಸದ್ದು, ಅತ್ತ ಇತ್ತ ಎತ್ತಲು' ಏಕೆ ಏನು ಎಂದು ಜೀವ ಕೇಳುವಂತಿಲ್ಲ. ಹೀಗೆ ಬಂಡೆಯಾಗಿ ಏಕೆ ಬಿದ್ದಿದ್ದೇನೆ ಎಂದು ಪ್ರಶ್ನಿಸುವಂತಿಲ್ಲ. ಏಕೆಂದರೆ ಅದಕ್ಕೆ ಮಾತ್ರ ಒದಗಿದ ವಿಶಿಷ್ಟ ಸ್ಥಿತಿಯಲ್ಲ ಇದು, ಎಲ್ಲರಿಗೂ ಅದೇ ಗತಿ:

'ನಿನ್ನಂತೆಯೆ ನೂರು ಬಂಡೆ,
ಈಗ ಇದೇ ನಿಲುಗಡೆ.'

ಆದರೆ ಆ ಸ್ಥಿತಿ ಚಿರಂತನವಾಗಿ ಇರುವಂತಿಲ್ಲ. ಉದ್ಧಾರದ ಕಿರಣ ಇಳಿತಂದಿತು. ಆದರೆ ಹೀಗೆ;

ಅದೋ ಬಂತು ಒಂದು ಕೈಯಿ
ಮೈಯಿಲ್ಲದ ಮನಸದು!
ಮಿಂಚಿನುಳಿಯ ಹಿಡಿದು ಬಂತು
ಕನಸಿನಾಚೆ ಕನಸದು!

'ಮೈಯಿಲ್ಲದ ಮನಸದು!' ಎನ್ನುವಲ್ಲಿ ಸೃಷ್ಟಿಮುಖವಾದ ಋತಶಕ್ತಿಯ ಸ್ವರೂಪ ಸಮಸ್ತವನ್ನೂ ಕವಿ ಹ್ರಸ್ವವಾಗಿ, ಸರಳವಾಗಿ, ಆದರೆ ಶಕ್ತಿಪೂರ್ಣವಾಗಿ ಕಾವ್ಯದಲ್ಲಿ ನುಡಿದಿದ್ದಾರೆ. ಅದು ಮನಸ್ಸು—ಚಿತ್. ಆದರೆ ಯಾವ ರೂಪವನ್ನೂ ತಳೆದಿಲ್ಲದಿರುವುದು—ಮೈಯಿಲ್ಲದುದು. ಜೀವಕ್ಕೋ ಕೈಯಾಗಿ ಕಾಣಿಸಿಕೊಳ್ಳುತ್ತಿದೆ. ಮಿಂಚಿನುಳಿಯನ್ನೂ ಹಿಡಿದ, ಕನಸಿನಾಚೆಯ ಆ ಕನಸು.

"ಟಕ್ಕ ಟಕ್ಕ ಟಕ್ಕ ಸದ್ದು
ಕೊರೆಯುತಿಹುದು ಜೀವ"

ಎಂಬುದು ಯಾತನೆಯನ್ನನುಭವಿಸುತ್ತಿರುವ ಜೀವದ ಫಿರ್ಯಾದು! ಆದರೆ ಆ ಶಕ್ತಿಯ ಉತ್ತರ:

"ಉಳಿಯ ಕಿರಣ ತೆರೆಯುತಿಹುದು
ನಿನ್ನನಂತ ಪದರವ!"

ದೇವಶಿಲ್ಪದ ಕಲ್ಪನೆ ಇದಕ್ಕೆ ತಿಳಿಯದಿದ್ದರೂ ಸಂಸ್ಕಾರದ ವಾಸನೆ ಹುಡಿಹುಡಿಯಾಗಿ ಹಾರಬೇಕು. ಆದರೆ ಅಲ್ಲಿಯ ವರೆಗೆ ಅದಕ್ಕೆ ತಾಳ್ಮೆಯಿಲ್ಲ. ಅದು ಕೇಳಿಕೊಳ್ಳುತ್ತದೆ: 'ನನ್ನನೇನು ಮಾಡುತಿರುವೆ ಸಾಕು ಸಾಕು ನಿಲ್ಲಿಸು' ಮತ್ತೆ ಪರಮನ ಉತ್ತರ: 'ನಿನಗೇತಕೊ

ಅದರ ಚಿಂತೆ?' ಕೊನೆಗೆ ಜೀವಕ್ಕೆ ಅರೆ ಅರಿವು ಮೂಡುತ್ತದೆ, ಸಮರ್ಪಣಾಭಾವ ವಿವರ ವ್ಯೈದೋರುತ್ತದೆ. 'ಸರಿಯೆ, ನನ್ನ ಸಾಯಿಸು.' ಆಗ ಪರಮನಣಾವಾಣಿ, ಅಭಯ, ದರ್ಶನ.

'ಸಾವಲ್ಲವೊ ಮರುಳೇ ಇದು
ಸ್ವಸ್ವರೂಪ ಕಾರಣ
ಕೃತಿಯು ಮುಗಿದ ಮೇಲೆ ಕಾಣೊ
ಆಕೃತಿಗಳ ದರ್ಶನ!'

ಈ ಎರಡೂ ಅಪೂರ್ವವಾದ ಕವನಗಳು ಎಂದು ನನ್ನ ಭಾವನೆ. ಮಾತುಗಳನ್ನು ಬಳಸುವುದರಲ್ಲಿ ಅನುಪಮವಾದ ಸಂಯಮ, ಬಳಸಿದ ನಾಲ್ಕು ಮಾತುಗಳಲ್ಲಿ ಅಸ್ಪಷ್ಟ ವಲ್ಲದ, ಆದರೂ ವಿಶಾಲ ವ್ಯಾಪ್ತಿಯನ್ನು ಪಡೆದ ಚಿತ್ರಗಳನ್ನು ಸೃಷ್ಟಿಸುವ ಶಕ್ತಿ ಬಹಳ ಜನ ಕವಿಗಳು ಪಡೆದ ವರವಲ್ಲ. ನೋವಿನ ನಡುವೆ ಇರುವ ನಲಿವಿನ ರಹಸ್ಯ ವನ್ನು, ಇರವಿನಾಚೆಯ ಅರಿವಿನ ಸ್ವರೂಪವನ್ನು ಪ್ರತಿಭೆ ಸಂದರ್ಶಿಸಿದಂತೆ ಪ್ರಾಮಾ ಣಿಕವಾಗಿ ಚಿತ್ರಿಸಿವೆ ಈ ಕವನಗಳು.

ಸತ್ಯದ ವಿಷಯದಲ್ಲಿ ಕವಿಪ್ರತಿಭೆ ಎಷ್ಟು ಶೀಘ್ರವೇದಿಯಾಗಿದೆಯೋ ಕವಿ ಹೃದಯ ಸೌಂದರ್ಯದ ವಿಷಯದಲ್ಲಿ ಅಷ್ಟೇ ಶೀಘ್ರವೇದಿಯಾಗಿದೆ. ಈ ಸಂಗ್ರಹದ ತುಂಬ ಹರಹಿಕೊಂಡಿರುವ ಪ್ರಕೃತಿ ಕವನಗಳಲ್ಲಿ ಇದನ್ನು ಕಾಣುತ್ತೇವೆ: ಪ್ರಕೃತಿಯ ಅನಂತ ಮುಖಗಳ ವರ್ಣಸೌಂದರ್ಯವನ್ನು ಅದರ ವಿವರ ವಿವರಗಳಲ್ಲಿ ಕವಿಯ ಕಣ್ಣು ಕಂಡು ಆನಂದಿಸಿದೆ; ಅದರ ಅನಂತ ರಾಗಗಳ ನಾದ ಮಾಧುರ್ಯವನ್ನು ಸೂಕ್ಷ್ಮಾತಿ ಸೂಕ್ಷ್ಮ ಭೇದಗಳೊಡನೆ ಕವಿಯ ಕಿವಿ ಕೇಳಿ ಆನಂದಿಸಿದೆ. ಅನೇಕ ಬೆಳಗುಗಳನ್ನು ಅನು ಸರಿಸಿ ಮೂಡಿಬಂದ 'ಒಂದು ಬೆಳಗು' ನಡೆಸಿದ ಪವಾಡದ ಈ ಕೆಲವು ಚಿತ್ರಗಳನ್ನು ನೋಡಿ:

ಗಿರಿಶಿರದ ಮರಮರದ ತಳಿರ ತುಟಿಯೊಳು ತನ್ನ
ಅನುರಾಗವಿಟ್ಟು
ಬರುತಿಹುದು ನೋಡದೋ ಕೊಳೆ ಚರಂಡಿಯ ಜಲಕು
ಬಂಗಾರಗಳ ಬದುಕ ದಾನಕೊಟ್ಟು!

*   *   *   *

ನೂರು ಬೆಳಕಿನ ಹೆಜ್ಜೆ ಹಕ್ಕಿಗೊರಳಿನಗೆಜ್ಜೆ-
ಯನು ಕಾಲ್ಗೆ ಕಟ್ಟಿ
ಹೂ ಹೂವಿನಂಗಡಿಯ ಕಂಪು ಮಳಿಗೆಯ ತಟ್ಟಿ
ಸಂಚಾರ ಹೊರಟವೋ ಕೈಕೈಯೊಳೂ ಹಿಡಿದು
ಚೆಲುವುಗಳ ಬುಟ್ಟಿ!

*   *   *   *

> ಹಕ್ಕಿ ದೋಣಿಯ ರೆಕ್ಕೆಪುಟ್ಟನ ಸುಯ್ಲು
> ಗಾಳಿ ಕೊಳದಲಿ ತೆರೆಯನೇಳಿಸಿರಲು

ಮೂರೂ ಮೂರು ರೀತಿಯದು. ಮೂಡಿಬಂದ ನೇಸರನ ಹೊಂಬೆಳಕು ಗಿರಿಶಿರದ ಮರ ಮರದ ಚಿಗುರಿನ ತುಟಿಗೆ ತನ್ನ ಪ್ರೇಮದ ಮುತ್ತನ್ನು ಮೌನವಾಗಿ ಒತ್ತಿ, ಯಾರೂ ಗಮನಿಸದಂತೆ ನಡೆಯಿತು. ಹಕ್ಕಿಗೊರಳನ್ನು ಸೇರುವ ವೇಳೆಗಾಗಲೆ ಬೆಳಕಿನ ಹೆಜ್ಜೆಯಾಗಿ, ನಾದದ ಗೆಜ್ಜೆಯ ಸಂಗವನ್ನು ಬಯಸಿತು. ಹಕ್ಕಿಗೊರಳು ಆ ಗೆಜ್ಜೆಯನ್ನು ಒದಗಿಸಿತು. ವರ್ಣ, ನಾದ ಸಂಗಿಯಾಗಿ ಸುಗಂಧಾನ್ವೇಷಣಕ್ಕೆ ಹೊರಟಿತು, 'ಹೂ ಹೂವಿಸಂಗಡಿಯು ಕಂಪುಮಳಿಗೆಯ ತಟ್ಟಿ, ಸಂಚಾರ ಹೊರಟವೋ ಕೈ ಕೈಯೊಳೂ ಹಿಡಿದು ಚೆಲುವುಗಳ ಬುಟ್ಟಿ!'

ಮೊದಲನೆಯ ಚಿತ್ರ ಕಣ್ಣಿಗೆ ಗೋಚರ. ಅರೂಪದೊಡನೆ ಅರೂಪವನ್ನು ಮಿಲನಗೊಳಿಸುವ ಕವಿಪ್ರತಿಭೆಯ ಪರಿಚಯ ಇರುವವರಿಗೆ ಎರಡನೆಯದೂ ಇಂದ್ರಿಯ ಗ್ರಾಹ್ಯ. ಮೂರನೆಯ ಚಿತ್ರವಾದರೋ ತೀರ ನವಿರು, ತೀರ ಸೂಕ್ಷ್ಮ: ಹಕ್ಕಿ ದೋಣಿಯ ರೆಕ್ಕೆಯ ಹುಟ್ಟಿನ ಸುಯ್ಲು ಗಾಳಿಯ ಕೊಳದಲ್ಲಿ ತೆರೆಯನ್ನೇಳಿಸುತ್ತಿದೆಯಂತೆ!

ಪ್ರಕೃತಿ ಕವನಗಳಲ್ಲಿ ಮನಸ್ಸಿನಮೇಲೆ ಸೌಂದರ್ಯದ ಚಿರಮುದ್ರೆಯನ್ನೊತ್ತಿ ಅದನ್ನು ಸಂಪೂರ್ಣವಾಗಿ ತನ್ನದನ್ನಾಗಿ ಮಾಡಿಕೊಳ್ಳುವ ಕವನ 'ಚೈತ್ರ'. ಸದ್ದು ಗದ್ದಲವಿಲ್ಲದೆ, ಆಡಂಬರವಿಲ್ಲದೆ ಹೂವು ಅರಳುವಂತೆ ವಿಕಾಸಗೊಂಡಿರುವ ಒಂದೊಂದು ಪಂಕ್ತಿಯನ್ನೂ ಎಚ್ಚರಿಕೆಯಿಂದ ಸಹೃದಯನು ಗಮನಿಸಬೇಕಾಗುತ್ತದೆ, ಸಂಪೂರ್ಣ ರಸಾಸ್ವಾದನೆಗೆ:

> ಸುಗ್ಗಿ ಬಂದಿತು ಹಿಗ್ಗು ಹೊಮ್ಮಿತು ಮರದ ಹರೆ ಹರೆಯೊಳಗಡೆ
> ಚಿಗುರು ಹೂವಿನ ಕಾಯಿ ಹಣ್ಣಿನ ಬಯಕೆಗಾಗಿದೆ ಬಿಡುಗಡೆ!
> ಎಂಥ ಬಡಕಲು ಗಿಡವು ಕೂಡಾ ಚೆಲುವಿಗಾಗಿದೆ ನಿಲುಗಡೆ!
> ನೂರು ವರ್ಣದ ನೂರು ರಾಗದ ಚಿಲುಮೆ ಚಿಮ್ಮಿದೆ ಎಲ್ಲಿಡೆ!

ಮೂರನೆಯ ಪಂಕ್ತಿ ಚೆಲುವಿನ ಪವಾಡದ ಸಂದೇಶವನ್ನು ಹೊತ್ತು ತಂದಿದೆ. ವಸಂತ ವೈಭವದಿಂದ ಬಡಕಲು ಗಿಡ ಕೂಡ ಚೆಲುವಿನ ನಿಲ್ದಾಣವಾಗಿದೆ! ಕಣ್ಣಿಗೆ ಕಾಣದ ಆ ಶಕ್ತಿಯ ಕರುಣೆ ಅಂಥದು!

ಕಾಣದಿಹ ಕಾರುಣ್ಯ ಕೋರಿದೆ ಬರಲು ಕೊಂಬೆಯ ಮೈಯಲಿ! ಇದಕ್ಕೆ ಪೂರ್ವದ ಮಾಗಿಯಲ್ಲಿ, ಎಲ್ಲವೂ ಬಯಲು. ವಸಂತನ ಮಧುರ ಸ್ಪರ್ಶದಿಂದ ಬರಲು ಕೊಂಬೆಕೂಡ ಚಿಗುರಿದೆ, ಕಾಣದಿಹ ಕಾರುಣ್ಯವೇ ಚಿಗುರಿದಂತೆ. ಇದನ್ನು ಕಂಡು

ಅಚ್ಚರಿಗೊಂಡ ಕವಿಯ ಮನಸ್ಸು, ವಿಲಯದಲ್ಲೂ ಚೆಲುವು ಚಿಮ್ಮಿದಂತಹ ಹಿರಿಯ ಚೋದ್ಯದ ಹೊಸಲಿನಲ್ಲಿ ಮಿಂದುದರಿಂದ, ರಸದ ಗೀತೆಯ ಮೆಲ್ಲುಲಿಯನ್ನು ಕೇಳಿ ತನ್ಮಯವಾಗಿದೆ.

'ರಸದ ಗೀತೆಯ ಮೆಲ್ಲುಲಿ' ಎಂಬುದು ಓದುಗರ ಅವಧಾರಣೆಯನ್ನು ದೀರ್ಘ ಕಾಲ ಧರಿಸಲು ಸಮರ್ಥವಾದುದು. ಸ್ವಲ್ಪವೇ ಕಾಲದ ಮುಂಚೆ ನಿರ್ಜೀವವಾಗಿ, ಶುಷ್ಕವಾಗಿ ತೋರಿ ನಿಂತದ್ದು, ಈಗ ಹಸುರುಟ್ಟು, ಸಜೀವವಾಗಿ ಕಳಕಳಿಸುತ್ತಾ ನಿಂತಿರುವುದೆಂತು? ಈ ವಿಷಯವನ್ನು ಸೌಂದರ್ಯ ಪರಿಭಾವನೆಗೆ ಗುರಿಪಡಿಸಿದ ಕವಿಯ ಮನಸ್ಸು ಕಿವಿಯಲ್ಲ ಇದರ ಮೂಲದಲ್ಲಿರುವ ರಸದ ಮೆಲ್ಲುಲಿಯನ್ನು ಆಲಿಸುತ್ತದೆ. ಅದೇ ತಾನೆ ಸೌಂದರ್ಯ ಸೃಷ್ಟಿಗೆ ಕಾರಣ?

ಈ ಕವನದಲ್ಲಿ ಶಿಖರವನ್ನು ಮುಟ್ಟಿರುವ ನುಡಿ ಇದು:

> ಹೂವ ಬಿಟ್ಟಿವೆ, ಹೂವತೊಟ್ಟಿವೆ, ಹೂವನುಟ್ಟಿವೆ ಮರಗಳು!
> ಚೈತ್ರ ಜಾತ್ರೆಗೆ ಬಂದು ನಿಂತುವೊ ನೂರು ಚೆಲುವಿನ ರಥಗಳು!
> ಕಾಮ-ರತಿಯರು ಬಂದು ಆಡುವ ರಾಸಲೀಲಾಪಥಗಳು!
> ಸೃಷ್ಟಿ ಬರೆಯುವ ಚೈತ್ರ ಕಾವ್ಯದ ಮಧುಪವಾಡದ ಕಥೆಗಳು!

ಹೂವಿನ ಹುಚ್ಚು ಹಿಡಿದಂತೆ ತುಂಬಿನಿಂತಿರುವ ಮರಗಳನ್ನು ಚೆಲುವಿನ ರಥಗಳು ಎಂದಿದ್ದಾರೆ ಕವಿ. ಅವು ತಮಗೆ ತಾವೇ ಸೊಬಗಿನ ತೌರಾಗಿದೆ ಎನ್ನುವುದರ ಜತೆಗೆ ಸೌಂದರ್ಯದ ಅಂತರಂಗವಾದ ಶಿವವನ್ನು ಒಳಗೊಂಡಿವೆ ಎಂಬುದನ್ನು ಧ್ವನಿಸುತ್ತವೆ ಈ ಮಾತುಗಳು.

ಪ್ರಕೃತಿಯ ವಿವಿಧ ಕ್ರಿಯೆಗಳನ್ನು ಅದರ ಸೂಕ್ಷ್ಮಾತಿ ಸೂಕ್ಷ್ಮ ವಿವರಗಳಲ್ಲಿ ಕಂಡು ಸವಿಯುವ ಶಕ್ತಿ ಇದೆ ಕವಿಗೆ. ಅಂತೆಯೇ ನವುರಾದ ರೀತಿಯಲ್ಲಿ ಅದರ ಅಭಿವ್ಯಕ್ತಿಯೂ ಸಿದ್ಧಿಸಿದೆ. ಈ ಕೆಲವು ನಿದರ್ಶನಗಳನ್ನು ನೋಡಿ: ಕತ್ತಲಾದ ರೀತಿ ಇದು:

> ಆಮೆ ತನ್ನ ಅಂಗಾಂಗವ
> ಚಿಪ್ಪಿಗೆಳೆವ ತೆರದಿ ಲೋಕ
> ಚಲನೆಯುಡುಗಿ ನಿಲ್ಲಲು,
> (ಗೆಲುವು. ಪು. ೧೦)

ಅಥವಾ ಮೊಗ್ಗಿನ ಹೃದಯದಲ್ಲಿ ನಡೆಯುವ ಮಾಂತ್ರಿಕ ಕ್ರಿಯೆ:

> ಮೊಗ್ಗಿನೆದೆಯ ಗರ್ಭಗುಡಿಯ
> ಅತಿನಿಗೂಢ ಗಹನದಲ್ಲಿ
> ಚೆಲುವು ಶಿಲ್ಪ ಕೆತ್ತುತಿರಲು (ಅತೀ. ಪು. ೧೦)

ಸಂಜೆ ಮೌನದ ಚಿತ್ರಗಳಲ್ಲಿ ಒಂದು :

ಬಾನ ಮೌನದ ಗೆಜ್ಜೆ ಝುಲ್ಲೆಂದು ಜಾರಿದೊಲು
ಅಲ್ಲೊಂದು ಇಲ್ಲೊಂದು ಹಕ್ಕಿ ನಿನದ!
ಬುವಿಯ ಎದೆ ಹಿಗ್ಗೆದ್ದು ಬುಗ್ಗೆಯಾದೊಲು, ಎಲ್ಲೊ
ನವಿಲ ಕೇಕೆಯ ಸದ್ದು ಗುಡ್ಡದೊಳಗೆ!

ಚಿಂತನಾಂಶ ಪ್ರಧಾನವಾದ 'ಬಂಡೆ-ಹೊಳೆ' 'ಶರಣ ಪಥ' ಮುಂತಾದುವೂ ಮೃದುವಾದ ಹಾಸ್ಯದಿಂದೊಡಗೂಡಿದ 'ಎಚ್ಚರಿಕೆ' ಕವನವೂ ನಮ್ಮ ಮನಸ್ಸಿನಲ್ಲಿ ಮರೆಯಾಗದೆ ನಿಲ್ಲುತ್ತವೆ.

"ಬೀಳ್ಕೊಡಿಗೆ" ಬಿ. ಎಂ. ಶ್ರೀ ಯವರ ಸುವರ್ಣ ಪದಕವನ್ನು ಪಡೆದ ದೀರ್ಘ ಕವನ. ಕವಿ ಇದರ ಸಂದರ್ಭವನ್ನು ಹೀಗೆ ಸೂಚಿಸಿದ್ದಾರೆ: "ತೌರೂರನ್ನು ಬಿಟ್ಟು ಕೈಹಿಡಿದ ಗಂಡನೊಡನೆ ಹೊರಟಿರುವ ಹಳ್ಳಿಯ ಮುಗ್ಧ ಹೆಣ್ಣುಮಗಳೊಬ್ಬಳ ಮನಸ್ಸಿನ ಸ್ಮೃತಿತರಂಗಮಾಲಿಕೆ ಈ ಕವನದ ವಸ್ತು." ಹಳ್ಳಿಯನ್ನು ಬಿಟ್ಟ ಹೆಣ್ಣು ನಿಲ್ದಾಣದ ವರೆಗೆ ಗಾಡಿಯಲ್ಲಿ ಹೋಗಬೇಕು. ಪತಿಯೊಡನೆ ಕುಳಿತು ಹೋಗುತ್ತಾ ದಾರಿ ಯುದ್ದಕ್ಕೂ ತನ್ನ ಹಳ್ಳಿಯನ್ನೂ, ಬಾಲ್ಯದಿಂದ ಇದುವರೆಗೆ ತಾನಲ್ಲಿ ಪಡೆದ ನೋವು ನಲಿವುಗಳನ್ನೂ ನೆನೆಯುತ್ತಿದ್ದಾಳೆ. ಕವಿ ಆ ಹೆಣ್ಣಿನ ಸ್ಥಾನದಲ್ಲಿ ನಿಂತು ಅವಳ ಕಣ್ಣಿನಿಂದ ಅವಳ ತೌರೂರಿನ ಸುತ್ತಣ ಪ್ರಕೃತಿಯ ಚೆಲುವನ್ನು ಕಂಡಿದ್ದಾರೆ. ಪ್ರಕೃತಿಯ ಕೆಲವು ಸುಂದರ ಚಿತ್ರಗಳು ಮೂಡಿವೆ; ಅದರ ವಿವಿಧ ರಾಗಗಳು ಹೊಮ್ಮಿವೆ.

ಆ ಕೆರೆಯ ತುಂಬೆಲ್ಲ ತುಂಬಿರುವ ಜೊಂಡಿನಲಿ
ನೂರು ನೀರ್ವಕ್ಕಿಗಳ ಕಲಸಂಭ್ರಮ
ಹಲವು ಜಲಕನ್ಯೆಯರು ಮಿಡಿವ ನೀರ್ ವೀಣೆಗಳ
ಪಲುಕಿನೊಲು ಕಿವಿಗಿನಿದು ಆ ಕಲರವ

ಅಥವಾ :

ಮಳೆಯ ಹನಿಗಳು ಬಂದು ಮುಗಿಲ ಗುಟ್ಟನು ತಂದು
ಮನೆಯ ಹೆಂಚಿನ ಮೇಲೆ ಸುರಿಯುತಿರಲು,
ಮೂರು ತಿಂಗಳ ಕಾಲ ಜಡಿಮಳೆಯ ಪಹರೆಯಲಿ
ಹಗಲಿರುಳು ಮಂಕಾಗಿ ತೆವಳುತಿರಲು.

ಆದರೆ ಒಮ್ಮೊಮ್ಮೆ, ಉದ್ದಕ್ಕೂ ಹಳ್ಳಿಯ ಮುಗ್ಧ ತರಳೆಯ ಮಾತನ್ನು ಕೇಳುತ್ತಿರುವ ನಮಗೆ ಅವಳನ್ನು ಹಿಂದಿಕ್ಕಿ, ಪರಿಣತ ಮನಸ್ಸಿನ, ಉನ್ನತ ಕಲ್ಪನೆಯ ಕವಿಯೇ ನುಡಿಯುತ್ತಿರುವುದು ಸ್ಪಷ್ಟವಾಗುತ್ತದೆ.

ಅತ್ತ ದಕ್ಷಿಣದಲ್ಲಿ ದೂರ ಬಾನಂಚಿನಲಿ
ನೆಲದ ಮುಗಿಲಾಸೆಯೊಲು ಮೇಲೆದ್ದಿದೆ.
"ಕಲ್ಲತ್ತಗಿರಿ" ಎಂದು ಕರೆವರಾ ಬೆಟ್ಟವನು
ಬಾನ ಪಟಲದ ಭವ್ಯ ಕಲೆಯಂತಿದೆ!

ಮತ್ತು ಈ ಪಂಕ್ತಿಗಳನ್ನು ನೋಡಿ :

ಅತ್ತ ಹೊಲದೆಡೆಯಲ್ಲಿ ನೇಗಿಲನು ನಡೆಯಿಸುತ
ಬುವಿಯ ಭಾಂಡಾರವನು ತೆರೆಯುತಿರಲು,
ಕರ್ಮಯೋಗಿಯು ಬರೆವ ಮಂತ್ರಪಂಕ್ತಿಗಳಂತೆ
ನೂರಾರು ಸಾಲುಗಳು ಮೂಡುತಿಹವು!

ತಮಗೆ ತಾವೇ ರಮ್ಯವಾಗಿರುವ ಈ ಉಕ್ತಿಗಳು ಈ ಪಾತ್ರದ ಬಾಯಿಂದ ಬಂದಿತೇ ಎನಿಸುತ್ತದೆ. ನಿರೂಪಣೆಯ ದೃಷ್ಟಿಯಿಂದ ಇದು ದೋಷವಾಗಿ ಕವಿಯ ಉದ್ದೇಶಕ್ಕೆ ಭಂಗಬರುತ್ತದೆ.

ಆದರೆ ಈ ನೀಳ್ಗವನ ಹಳ್ಳಿಯ ಸಾಮೂಹಿಕ ಜೀವನ, ಅಲ್ಲಿನ ಜನರ ಹೃದಯದ ಪಡಿಮಿಡಿತ, ಅದನ್ನು ಕಾಣುವ ಒಂದು ಹೆಣ್ಣಿನ ಮನೋಭಾವ ಇವುಗಳನ್ನು ಯಶಸ್ವಿಯಾಗಿ ಚಿತ್ರಿಸಿದೆ.

ಈ ನೀಳ್ಗವನವನ್ನು ಐದು ಮಾತ್ರೆಯ ಗಣಗಳ ನಾಲ್ಕು ಪಂಕ್ತಿಗಳ ಎಪ್ಪತ್ತೈದು ನುಡಿಗಳಿಂದ ನಿರ್ವಹಿಸಿದ್ದಾರೆ ಕವಿ. ಅಲ್ಲಲ್ಲಿ ಗಣವಿನ್ಯಾಸದಲ್ಲಿ ವೈವಿಧ್ಯ ತಂದಿದ್ದಾರೆ. ಇಲ್ಲದಿದ್ದರೆ ಇದು ತೀರ ಏಕನಾದವಾಗುತ್ತಿತ್ತು. ಅಂತಹ ಕವನಗಳಲ್ಲಿ ನಡುನಡುವೆ ಗತಿಯನ್ನು ಬದಲಾಯಿಸುವುದು ಸಾಧ್ಯವೇ, ಯಶಸ್ವಿಯಾಗುತ್ತದೆಯೇ ಎಂಬುದನ್ನು ಕುರಿತು ಕವಿಗಳು ಆಲೋಚಿಸಬೇಕು. ಪ್ರಯೋಗಮಾಡಿ ನೋಡಬೇಕು.

ಶ್ರೀ ಶಿವರುದ್ರಪ್ಪನವರದು ಬೆಳೆಯುತ್ತಿರುವ ಮನಸ್ಸು, ಚೇತನ. ಅವರ ಈ ಸಂಗ್ರಹ ಆ ಬೆಳವಣಿಗೆಯ ತೀವ್ರತೆಯನ್ನು ಅದರ ಸಹಜಸ್ಥಿತಿಯಲ್ಲಿ ಪ್ರತಿಫಲಿಸುತ್ತಿದೆ. ಅವರದು ಸ್ವತಂತ್ರ ಪ್ರತಿಭೆ; ಸರಳಸುಂದರ ಉಕ್ತಿವಿಧಾನ ಅವರ ಸಿದ್ಧಿ. ಎರಡೂ ವೃದ್ಧಿ ಪಡೆಯಲಿ.

—ಪ್ರಭುಶಂಕರ.

*
* *

ರಾಯಲು (ತೆಲುಗು)—ಲೇಖಕರು : ಶ್ರೀ ದರಿಮಡುಗು ಕಾಮಯ್ಯನವರು ; ಪ್ರಕಾಶಕರು : ಪಿನಾಕಿನೀ ಪ್ರಚುರಣಾಲಯ, ಕುಲ್ಲೂರು, ನೆಲ್ಲೂರು ಜಿಲ್ಲೆ, ಆಂಧ್ರ ; ಪುಟಗಳು ೧೦೮ ; ಬೆಲೆ, ರೂ. ೧-೦-೦.

ಇದು ವಿಜಯನಗರ ಸಾಮ್ರಾಜ್ಯದ ಚಕ್ರವರ್ತಿಯಾದ ಶ್ರೀಕೃಷ್ಣದೇವ ರಾಯನ ವಿಜಯವನ್ನೂ ವಿವಾಹವನ್ನೂ ಚಿತ್ರಿಸಿರುವ ನಾಟಕ. ಶ್ರೀಕೃಷ್ಣದೇವ ರಾಯನಿಗೆ ಸಾಹಿತೀ ಸಮರಾಂಗಣ ಸಾರ್ವಭೌಮ ಎಂಬ ಬಿರುದಿದೆ. ಈ ನಾಟಕ ದಲ್ಲಿ ಇವನ ಸಾಹಸ, ಧೈರ್ಯ, ರಾಜಕೀಯ ಚತುರತೆ, ಕವಿಗಳ ಮೇಲೆ ಇರುವ ಆಸಕ್ತಿ, ಪ್ರೀತಿ, ಮನ್ನಣೆ ಮುಂತಾದವು ಚಿತ್ರಿತವಾಗಿವೆ.

ಶ್ರೀಕೃಷ್ಣದೇವರಾಯನ ಆಳ್ವಿಕೆಯಲ್ಲಿ ವಿಜಯನಗರ ಸಾಮ್ರಾಜ್ಯವು ಎಲ್ಲಾ ವಿಧದಿಂದಲೂ ಉಚ್ಚ ದೆಸೆಯಲ್ಲಿತ್ತು. ತೆಲುಗು ಸಾಹಿತ್ಯರಂಗದಲ್ಲಿ ಇವನ ಕಾಲವನ್ನು ಸ್ವರ್ಣಯುಗವೆಂದು ಕರೆಯುತ್ತಾರೆ. ತೆಲಗು ಕವಿಗಳಾದ ಅಲ್ಲಸಾನಿ ಪೆದ್ದನ ("ಮನುಚರಿತ್ರೆ") ನಂದಿ ತಿಮ್ಮನ ("ಪಾರಿಜಾತಾಪ ಹರಣ") ಮಾದಯಗಾರಿ ಮಲ್ಲನ ("ರಾಜಶೇಖರ ಚರಿತ್ರೆ") ಮುಂತಾದ ಅಷ್ಟದಿಗ್ಗಜಗಳೆಂದು ಹೆಸರಾದ ಎಂಟು ಜನ ಪ್ರಸಿದ್ಧ ತೆಲುಗು ಕವಿಗಳು ಇವನ ಆಸ್ಥಾನದಲ್ಲಿದ್ದರು. ಕನ್ನಡ ಕವಿಯಾದ ತಿಮ್ಮಣ್ಣನು ಇವನ ಆಜ್ಞೆಯ ಮೇಲೆ ಭಾರತಾನುವಾದವನ್ನು ಪೂರ್ತಿಮಾಡಿದನು. ಶ್ರೀಕೃಷ್ಣದೇವರಾಯನು ಕೂಡಾ ತೆಲುಗಿನಲ್ಲಿ "ಆಮುಕ್ತಮಾಲ್ಯದ" ಎಂಬ ಗ್ರಂಥವನ್ನು ರಚಿಸಿದ್ದಾನೆ. ಇದು ತೆಲುಗು ಪಂಚಕಾವ್ಯಗಳಲ್ಲಿ ಒಂದಾಗಿದೆ. ಕನ್ನಡ ರಾಯನಾದ ಇವನು ತೆಲುಗಿನಲ್ಲಿ ಪಾಂಡಿತ್ಯವನ್ನು ಹೊಂದುವದಕ್ಕೆ ಇವನ ಪೋಷಣೆ ಯಲ್ಲಿದ್ದ ತೆಲುಗು ಕವಿಗಳ ಸಂಪರ್ಕವೇ ಕಾರಣವೆಂದು ಹೇಳಬಹುದು. ಕವಿಗಳ ಮೇಲೆ ಇವನಿಗೆ ಪ್ರೀತಿ ಹೆಚ್ಚು ಎನ್ನುವುದಕ್ಕೆ ಉದಾಹರಣೆಗಳಿವೆ. ಆಸ್ಥಾನಕವಿಗಳಲ್ಲಿ ಮೊದಲನೆಯವನಾದ ಅಲ್ಲಸಾನಿ ಪೆದ್ದನನನ್ನು ಗೌರವಿಸಿದಾಗ ಅವನ ಕಾಲಿಗೆ ಭಂಗಾರದ "ಕವಿಗಂಡ ಪೆಂಡೇರ"ವೊಂದು ಹಾಕಿ ಪಲ್ಲಕ್ಕಿಯಲ್ಲಿ ಕೂರಿಸಿ ನಗರದಲ್ಲಿ ಮೆರವಣಿಗೆ ಮಾಡಿದಾಗ ತಾನೇ ಒಂದು ಕಡೆ ಪಲ್ಲಕ್ಕಿಯನ್ನು ಹೊತ್ತುಕೊಂಡು ಸ್ವಲ್ಪ ದೂರ ಹೋದನೆಂದು ಕವಿಯೇ ಹೇಳಿಕೊಂಡಿದ್ದಾನೆ. ಬೇಕಾದಷ್ಟು ಅಗ್ರಹಾರ ಗಳನ್ನು ಕೇಳಿದ ಪ್ರಾಂತ್ಯದಲ್ಲಿ ಕೊಟ್ಟಿದ್ದಾನಂತೆ. ಇವನು ಯುದ್ಧಕ್ಕೆ ಹೋದಾಗ ಅವನ ಜೊತೆಯಲ್ಲಿ ಕವಿಗಳನ್ನೂ ಕರೆದುಕೊಂಡು ಹೋಗುತ್ತಿದ್ದನಂತೆ. ಭಾಷಾ ಪೋಷಣೆಯಲ್ಲಿ ಇವನನ್ನು ಭೋಜರಾಜನಿಗೆ ಹೋಲಿಸಬಹುದು. ಸಂಸ್ಕೃತ ಭಾಷೆಯಲ್ಲಿ ಕೂಡಾ ಕೃಷ್ಣದೇವರಾಯನು "ಮದಾಲಸ ಚರಿತ್ರೆ" ಮುಂತಾದ ಗ್ರಂಥಗಳನ್ನು ರಚಿಸಿದ್ದಾನೆ.

"ರಾಯಲು" ಎಂಬ ಪ್ರಕೃತ ವಿಮರ್ಶನೀಯವಾದ ಗ್ರಂಥವು ಒಂದು ತೆಲುಗು ನಾಟಕ. ಶ್ರೀಕೃಷ್ಣದೇವರಾಯನು ತನ್ನ ಶತ್ರುವಾದ ಗಜಪತಿಯ ಮಗಳಾದ ರುಚೀದೇವಿಯನ್ನು ವಿವಾಹವಾಗುವುದು ಕಥಾವಸ್ತು. ಪ್ರಥಮ ಸಮಾಗಮ

ಸಮಯದಲ್ಲಿ ರಾಯರು ಗಜಪತಿ ಪುತ್ರಿ ಧರಿಸಿದ ಲಂಗವನ್ನು ಕಾಲಿನಿಂದ ತುಳಿದುಬಿಟ್ಟು ಕೊಂಡು ಹತ್ತಿರಕ್ಕೆ ಇಳಿಯುವುದಕ್ಕೆ ಪ್ರಯತ್ನಿಸಿದಾಗ ಅವಳು ಬಚ್ಚಿಟ್ಟುಕೊಂಡಿದ್ದ ಕತ್ತಿಯು ಕೆಳಗೆ ಬಿತ್ತಂತೆ. ಕೃಷ್ಣದೇವರಾಯನು ಅನುಮಾನಪಟ್ಟು ತನ್ನನ್ನು ಕೊಲ್ಲು ವುದಕ್ಕೆ ಉದ್ದೇಶಿಸಿದಳೆಂದು ಹೇಳಿ ಅವಳನ್ನು ತಿರಸ್ಕರಿಸಿ ತಂದೆಯ ಮನೆಗೆ ತಕ್ಕ ಉಸ್ತುವಾರಿಯನ್ನು ಕೊಟ್ಟು ಕಳುಹಿಸಿದನು. ರುಚೀದೇವಿಯು ಮುಂದಕ್ಕೆ ಹೋಗದೆ ಮಾರ್ಗಮಧ್ಯದಲ್ಲಿಯೇ ಅರಣ್ಯದಲ್ಲಿ (ನಲ್ಲಮಲ) ನಿಂತುಬಿಟ್ಟು ಅಲ್ಲಿಯೇ ಒಂದು ಆಶ್ರಮವನ್ನು ಮಾಡಿಕೊಂಡಿದ್ದಳು. ಕೃಷ್ಣದೇವರಾಯನೂ ತಂದೆಯಾದ ಗಜಪತಿಯೂ ಇವಳಿಗೆ ಬೇಕಾದಷ್ಟು ಧನವನ್ನು ಕೊಟ್ಟು ಕಳುಹಿಸಿದ್ದರು. ರುಚೀದೇವಿಯು ಅನ್ನಪೂರ್ಣ ಎಂಬ ಹೆಸರಿನಲ್ಲಿ ಅಲ್ಲಿಯೇ ಒಂದು ದೊಡ್ಡ ಕೆರೆಯನ್ನೂ ಛತ್ರವನ್ನೂ ಕಟ್ಟಿಸಿದಳು. ಒಂದು ದಿನ ರಾಯನು ಬೇಟೆಗಾಗಿ ಬಂದಿದ್ದವನು ಅಲ್ಲಿ ವಿಶ್ರಮಿಸು ವುದಕ್ಕೆ ಹೋದಾಗ ಅನ್ನಪೂರ್ಣಾದೇವಿಯ ಸತ್ಕಾರವನ್ನು ಹೊಂದಿದನು. ಅವಳನ್ನು ರುಚೀದೇವಿಯಾಗಿ ಗುರ್ತಿಸಿದನು. ಮಂತ್ರಿ ತಿಮ್ಮರಸನು ಕೂಡಾ ಅಲ್ಲಿಯೇ ಇದ್ದು ಇಬ್ಬರೂ ಬೇಡಿಕೊಂಡರೂ ಕೂಡಾ ಅವಳು ವಿಜಯನಗರಕ್ಕೆ ಬರಲಿಲ್ಲ. ಅಲ್ಲಿಯೇ ಸಂನ್ಯಾಸಿನಿಯಾಗಿಯೇ ನಿಂತುಬಿಟ್ಟಳು. ಅಲ್ಲಿ ಅವಳು ಕಟ್ಟಿಸಿದ ಕೆರೆ ಹತ್ತಿರ ಒಂದು ಊರನ್ನು ನಿರ್ಮಿಸಿದಳು. ಅದಕ್ಕೆ ಕಂಭಮು ಎಂದು ಹೆಸರು. ಇದು ಈಗ ಆಂಧ್ರರ ರಾಜಧಾನಿಯಾದ ಕರ್ನೂಲಿನ ಹತ್ತಿರ ಇದೆ. ಮೇಲೆ ಸೂಚಿಸಿರುವ ಕಥೆಯೇ ಈ ನಾಟಕಕ್ಕೆ ಕಥಾವಸ್ತು. ಕೃಷ್ಣದೇವರಾಯನು ಕುಲೀನನಲ್ಲವೆಂದು ಇವನಿಗೆ ದೊಡ್ಡ ಅರಸರು ಯಾರೂ ಹೆಣ್ಣನ್ನು ಕೊಡಲಿಲ್ಲವಂತೆ. ಅದಕ್ಕೆ ತಿಮ್ಮರಸನು ಪ್ರತಿಜ್ಞೆಮಾಡಿ ಗಜಪತಿ ಮಗಳನ್ನು ಮದುವೆಮಾಡಿದಾಗ ಇಂತಹ ವಿಫಲಮನೋರಥವಾಯಿತೆಂದು ಚಿತ್ರಿಸಿದೆ.

ಶ್ರೀಕೃಷ್ಣದೇವರಾಯನಿಗೆ ಎಷ್ಟು ಜನ ಹೆಂಡಿರೆನ್ನುವುದು ಜಿಜ್ಞಾಸೆಯಲ್ಲಿ ಬಿದ್ದಿದೆ, ಚರಿತ್ರಕಾರರೂ ವಿಮರ್ಶಕರೂ ಅನೇಕ ರೀತಿಯಲ್ಲಿ ಹೇಳುತ್ತಾರೆ. ಆದರೆ ತೆಲುಗು ಸಾಹಿತ್ಯದಲ್ಲಿ ಕೃಷ್ಣದೇವರಾಯನಿಗೆ ಅರ್ಪಣೆಮಾಡಿದ ಎರಡು ಗ್ರಂಥಗಳಾದ ಅಲ್ಲಸಾನಿ ಪೆದ್ದನ "ಮನುಚರಿತ್ರೆ", ಮುಕ್ಕುತಿಮ್ಮನನ "ಪಾರಿಜಾತಾಪಹರಣ" ದಿಂದ ನಮಗೆ ತಿಳಿಯುವುದೇನೆಂದರೆ ರಾಯರಿಗೆ ಚಿನ್ನಾದೇವಿ, ತಿರುಮಲದೇವಿ ಎಂಬ ಇಬ್ಬರು ಪಟ್ಟಮಹಿಷಿಯರಿದ್ದರೆಂದು. ಹಲವಾರು ಶಾಸನಗಳಲ್ಲಿಯೂ ಇವರಿಬ್ಬರ ಹೆಸರೇ ಕಂಡುಬರುತ್ತದೆ. ತಿರುಪತಿಯಲ್ಲಿರುವ ಶ್ರೀಕೃಷ್ಣದೇವರಾಯನ ವಿಗ್ರಹಕ್ಕೆ ಎಡಗಡೆ ಬಲಗಡೆ ಇರುವ ವಿಗ್ರಹಗಳು ಕೂಡಾ ಚಿನ್ನಾದೇವಿ, ತಿರುಮಲದೇವಿ ಯವರವೇ.

ಈ ನಾಟಕದಲ್ಲಿ ಚಿತ್ರಿಸಿರುವ ರುಚೀದೇವಿಯು ಒಬ್ಬಳೆಂದು ಕೆಲವರು ಸೂಚಿಸಿದ್ದಾರೆ. ಪೋರ್ಚುಗೀಸು ಯಾತ್ರಿಕ ನ್ಯೂನಿಜ್ ಎಂಬುವನು ರಾಯರಿಗೆ ಅನೇಕ ಭಾರ್ಯೆಯರಿದ್ದರು, ಅವರಲ್ಲಿ ಮದುವೆಯಾಗಿರುವವರು ನಾಲ್ಕು ಜನ ಎಂದು ಹೇಳಿದ್ದಾನೆ. ಗಜಪತಿಯ ಮಗಳು ರುಚೀದೇವಿಯು ಒಬ್ಬಳೆಂದು "ಟೈಲರ್" ಎಂಬವರು ಹೇಳಿದ್ದಾರೆ.

ಈ ರುಚೀದೇವಿಯ ಕಥೆಯನ್ನೇ ಪ್ರಕೃತ ವಿಮರ್ಶನೆಯ ನಾಟಕದಲ್ಲಿ ಶ್ರೀ ದರಿಮಡುಗು ಕಾಮಯ್ಯನವರು ಸೊಗಸಾಗಿ ಚಿತ್ರಿಸಿದ್ದಾರೆ. ಇವರ ಬರವಣಿಗೆಯು ತಿಳಿ ತೆಲುಗುನಲ್ಲಿ ಹರಿದಿದೆ. ಪದ್ಯಗಳು ಸೊಗಸಾಗಿವೆ. ತೆಲುಗು ನಾಣ್ಣುಡಿಗಳನ್ನೂ, ಗಾದೆಗಳನ್ನೂ ಬೇಕಾದಷ್ಟು ಸಮಯೋಚಿತವಾಗಿ ಉಪಯೋಗಿಸಿದ್ದಾರೆ. ಕರ್ಣಾಟಕ ಆಂಧ್ರ ಸಾಮ್ರಾಜ್ಯಸ್ಥಾಪಕನಾದ ಶ್ರೀಕೃಷ್ಣದೇವರಾಯನ ವಿಚಾರವು ಕನ್ನಡಿಗರಿಗೂ ಚೆನ್ನಾಗಿ ಗೊತ್ತಿದೆ, ಆದ್ದರಿಂದ ಈ ಗ್ರಂಥವನ್ನು ಕನ್ನಡಿಗರೂ ಓದಿ ಸಂತೋಷ ಪಡಬಹುದು.

ವಿದ್ವಾನ್ ಕೆ. ಸುಬ್ಬರಾಮಪ್ಪ

* * *

**ಸ್ವಾದಿ ಅರಸು ಮನೆತನ**—ಲೇಖಕರು: ಶ್ರೀ ಸ. ಸ. ಮಾಳವಾಡ, ಎಂ.ಎ.; ಪ್ರಕಾಶಕರು: ಎಂ. ಎಸ್. ಬಗಲಿ, ಬಿ.ಎ., ಎಲೆಲ್. ಬಿ., ರಿಜಿಸ್ಟ್ರಾರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಪುಟ. xii+೫೦; ಬೆಲೆ, ನಾಲ್ಕಾಣೆ.

ಕರ್ನಾಟಕ ವಿಶ್ವವಿದ್ಯಾಲಯದ ಉಪನ್ಯಾಸ ಗ್ರಂಥಮಾಲೆಯಲ್ಲಿ ಇದು ಎಂಟನೆಯ ಗ್ರಂಥ. ಕನ್ನಡ ಸಂಶೋಧನಾಲಯದ ಡೈರೆಕ್ಟರಾದ ಶ್ರೀ ಸ. ಸ. ಮಾಳವಾಡರು ಹೊನ್ನಾವರದಲ್ಲಿ ಕೊಟ್ಟ 'ಸ್ವಾದಿ ಅರಸು ಮನೆತನ' ಎಂಬ ಉಪನ್ಯಾಸವೇ ಈ ಕಿರುಹೊತ್ತಗೆ. ಈ ಅರಸು ಮನೆತನ ತಮಗೆ ಪರಿಚಯವಾದುದನ್ನು ಮೊದಲ ಮಾತಿನಲ್ಲಿ ತಿಳಿಸಿದ್ದಾರೆ. ೧೯೪೮ ರಲ್ಲಿ ಸಂಸಾರಸಮೇತ ಗೋವಾಕ್ಕೆ ಪ್ರವಾಸ ಹೊರಟಾಗ ಬಾಂದೇವಾಡಿಯ ಅರಮನೆಯಲ್ಲಿ 'ಸ್ವಾದಿಯ ರಾಣಿ'ಯ ಅತಿಥಿಗಳಾಗಿದ್ದು ಆ ರಾಣಿಯಿಂದ ಸ್ವಾದಿಯ ಅರಸು ಮನೆತನಕ್ಕೆ ಸಂಬಂಧಪಟ್ಟ ಸಂಗತಿಗಳನ್ನು ತಿಳಿದುಕೊಂಡರು. ಅದರ ಇತಿಹಾಸವನ್ನು ಬರೆಯಲು ತಕ್ಕ ಸಾಮಗ್ರಿಗಳನ್ನು ಸಂಗ್ರಹಿಸಿ, ಸಂಶೋಧನೆಗಳನ್ನು ನಡೆಸಿ, ಈ ಉಪನ್ಯಾಸವನ್ನಿತ್ತು ಮುಂದೆ ಸ್ವಾದಿಯ ಅರಸು ಮನೆತನದ ಚರಿತ್ರೆಯನ್ನು ಬರೆಯುವವರಿಗೆ ಸಾಕಷ್ಟು ಸಾಮಗ್ರಿಯನ್ನು ಒದಗಿಸಿದ್ದಾರೆ; ಹಾಗೂ ಸಂಶೋಧಕರಿಗೆ ಒಂದು ಮಾರ್ಗವನ್ನೂ ಹಾಕಿಕೊಟ್ಟಿದ್ದಾರೆ.

ಈ ಅರಸು ಮನೆತನದ ಹೆಸರು ಕರ್ಣಾಟಕದ ಇತಿಹಾಸದಲ್ಲಿ ಬಂದಿಲ್ಲ. ಆದರೂ ಅದರ ಚರಿತ್ರೆಯನ್ನು ರಚಿಸಲು ಸಾಧ್ಯವಿದೆ ಎಂಬುದನ್ನು ಸ್ಥೂಲವಾಗಿ ತೋರಿಸಿ ಕೊಟ್ಟಿದ್ದಾರೆ.

ವಿಜಯನಗರ ಸಾಮ್ರಾಜ್ಯ ನಾಶವಾಗುವ ಕಾಲಕ್ಕೆ ಉತ್ತರ ಕನ್ನಡಜಿಲ್ಲೆಯಲ್ಲಿ ಬೀಳಗಿ, ಕೆಳದಿ, ಸ್ವಾದಿ ಮುಂತಾದ ಆಧಿಪತ್ಯಗಳು ತಲೆದೋರಿದುವು. ೧೬–೧೮ ನೇ ಶತಮಾನಗಳಲ್ಲಿ ಪ್ರಬಲರಾಜ್ಯಗಳಾಗಿದ್ದುವು. ಆ ಕಾಲದಲ್ಲಿ ಇಂಗ್ಲಿಷ್, ಪೋರ್ಚು ಗೀಸ್ ಮತ್ತು ಡಚ್ಚರ ಹಾವಳಿಯನ್ನೂ ಮೊಗಲ್ ಮತ್ತು ಮರಾಠಾ ಶಕ್ತಿಗಳ ಉಪಟಳವನ್ನೂ ಲೆಕ್ಕಕ್ಕೆ ತಾರದೆ ತನ್ನ ಶೌರ್ಯವನ್ನು ಪ್ರದರ್ಶಿಸಿ ಮೆರೆದ 'ಸ್ವಾದಿ' ಎಂಬ ಸಣ್ಣದೊಂದು ಅರಸು ಮನೆತನದ ಪರಿಚಯ ಈ ಪುಸ್ತಕದಲ್ಲಿದೆ. ಈಗಲೂ ಆ ಮನೆತನದವರು ಗೋವಾ ರಾಜ್ಯದ ಬಾಂದೇವಾಡಿಯ ಅರಮನೆಯಲ್ಲಿ ಇದ್ದಾರೆ.

ವಿಜಯನಗರದ ಕೃಷ್ಣದೇವರಾಯನ ಸೋದರತ್ತೆಯ ಮಗ ಅರಸಪ್ಪನಾಯಕನು ಈ ಅರಸು ಮನೆತನದ ಮೂಲಪುರುಷನೆಂದು ಹೇಳುತ್ತಾರೆ. ಸ್ವಾದಿಯ ರಾಜ್ಯೋದಯ ವನ್ನು ಕುರಿತು ಬುಕಾನೆನ್ ಎಂಬುವನು ಬರೆದಿದ್ದಾನೆ. ಮತ್ತು ನಿರಂತರ ಯುದ್ಧರಂಗ ವಾಗಿದ್ದ ಸ್ವಾದಿಯು ಮರಾಟೆಯವರ, ಹೈದರಾಲಿಗಳ ಧಾಳಿಯಿಂದಾಗಿ ಕುಗ್ರಾಮ ವಾಯಿತೆಂದೂ ಹೇಳಿದ್ದಾನೆ.

ಸ್ವಾದಿಯ ಅರಸು ಮನೆತನದ ವಂಶಾವಳಿಯನ್ನು ಗ್ರಂಥಕರ್ತರು ಕೊಟ್ಟಿದ್ದಾರೆ: ಅರಸಪ್ಪನಾಯಕ (೧೫೫೫-೧೫೯೮), ರಾಮಚಂದ್ರನಾಯಕ, ರಘುನಾಥನಾಯಕ, ಮಧುಲಿಂಗನಾಯಕ, ಸದಾಶಿವರಾಯ, ಬಸವಲಿಂಗರಾಯ, ಇಮ್ಮಡಿ ಸದಾಶಿವರಾಯ (೧೭೪೫-೧೭೬೩). ಈ ರಾಜರುಗಳೆಲ್ಲ ಮರಾಟೆಯವರು, ಮೊಗಲರು, ಇಂಗ್ಲಿಷರು, ಪೋರ್ಚುಗೀಸರು—ಇವರೊಡನೆ ಕಾದಾಡಿ ಸ್ವಾದಿ ರಾಜ್ಯವನ್ನು ವಿಸ್ತರಿಸಿದರು. ೧೭೬೩ ರಲ್ಲಿ ಹೈದರನ ಮುತ್ತಿಗೆಯಿಂದ ಇಮ್ಮಡಿ ಸದಾಶಿವರಾಯನು ಪೋರ್ಚು ಗೀಸರ ಆಶ್ರಯವನ್ನು ಪಡೆದನು. ಇವನ ನಂತರ ಬಂದವರು ಬಾಂದೇವಾಡಿಯ ಸ್ವಾದಿ ಅರಮನೆಯ ಬಾಧ್ಯಸ್ಥರಾಗಿ ಇರುತ್ತಾ ಬಂದಿದ್ದಾರೆ.

ಗೋವೆಯ ಆಶ್ರಯವನ್ನು ಪಡೆದಮೇಲೆ ಸ್ವಾದಿ ಅರಸು ಮನೆತನದಲ್ಲಿ ಆರು ಜನ ಆಗಿಹೋದರು. ಏಳನೆಯವರಾದ ಸವಾಯಿ ಸದಾಶಿವರಾಜೇಂದ್ರ ಒಡೆಯರು ಈಗ ಇದ್ದಾರೆ. ಅಂತು ಸ್ವಾದಿಯಲ್ಲಿ ಏಳು ಜನ, ಗೋವೆಯಲ್ಲಿ ಏಳು ಜನ—ಹೀಗೆ ಈ ಅರಸು ಮನೆತನದ ವಂಶಾವಳಿಯಿದೆ. ಪೋರ್ಚುಗೀಸರು ಅವರಿಗೆ ತಕ್ಕ ಗೌರವಗಳನ್ನು ತೋರಿಸುತ್ತಾ ಬಂದಿರುವರು. ಸ್ವಾದಿಯ ಅರಮನೆಯಲ್ಲಿ ಈಗ ವೈಭವದ ಚಿಹ್ನೆಗಳು ಇಲ್ಲದಿದ್ದರೂ ರಾಜಮನೆತನದ ವಾತಾವರಣವಿದೆಯೆಂದು ಗ್ರಂಥಕರ್ತರು ಹೇಳುತ್ತಾರೆ.

ಸ್ವಾದಿ ರಾಜ್ಯದ ಸಂಪದಭಿವೃದ್ಧಿ, ಸಾಹಿತ್ಯ ಮತ್ತು ಶಿಲ್ಪಕಲೆಗಳ ಪೋಷಣೆಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳುತ್ತಾರೆ. ಅಲ್ಲಿಯ ಮೆಣಸು ಮತ್ತು ಸಾಂಬ್ರಾಣಿಗಳು ಹೊರದೇಶದವರನ್ನೂ ಆಕರ್ಷಿಸಿದ್ದುವು. ಅರಸಪ್ಪನಾಯಕನ ಪೋಷಣೆಯಲ್ಲಿ 'ಕರ್ಣಾಟಕ ಶಬ್ದಾನುಶಾಸನ' ಎಂಬ ವ್ಯಾಕರಣವು ರಚಿತವಾಯಿತು. ಅದರ ಕರ್ತೃವಾದ ಭಟ್ಟಾಕಲಂಕನು ೧೫೮೦ ರಲ್ಲಿ ಸ್ವಾದಿಯ ಜೈನ ಮಠದ ಸ್ವಾಮಿಯಾದನೆಂದು ತಾಮ್ರಪಟಗಳ ಆಧಾರದಿಂದ ತಿಳಿದುಬರುತ್ತದೆ. ರಾಜನಾದ ಸದಾಶಿವರಾಯನು (೧೬೭೪-೧೬೯೭) "ಸದಾಶಿವ ನೀತಿ" ಎಂಬ ಕಾವ್ಯವನ್ನು ಬರೆದು ಅದರಲ್ಲಿ ತನ್ನ ವಿಚಾರವನ್ನು ಹೇಳಿಕೊಂಡಿದ್ದಾನೆ. ಸ್ವಾದಿಯ ರಾಜರು ವೈಷ್ಣವ, ಜೈನ, ವೀರಶೈವ ಮಠಗಳಿಗೆ ಪೋಷಕರಾಗಿದ್ದುದು ಆಯಾ ಮಠಗಳಲ್ಲಿ ದೊರೆತಿರುವ ಉಲ್ಲೇಖಗಳಿಂದ ತಿಳಿದುಬರುತ್ತದೆ.

ಶಿಲ್ಪಕಲೆಗೆ ಹೆಚ್ಚಿನ ಪ್ರೋತ್ಸಾಹವಿತ್ತು. ಬನವಾಸಿಯ ಮಧುಕೇಶ್ವರ ದೇವಾಲಯ, 'ಸಹಸ್ರಲಿಂಗ' ಎಂಬ ಸ್ಥಳದಲ್ಲಿಯ ಲಿಂಗಗಳು, ಶಿಲಾಲೇಖನಗಳು ಪ್ರಸಿದ್ಧಿಯನ್ನು ಪಡೆದಿವೆ. ಮಧುಕೇಶ್ವರ ದೇವಾಲಯದ ಕಲ್ಲುಮಂಟಪ, ಕಲ್ಲುಮಂಚಗಳು ಬಹಳ ಸುಂದರವಾಗಿವೆ. 'ಸಹಸ್ರಲಿಂಗ'ವೆಂಬುದು ಒಂದು ರಮ್ಯವಾದ ಸ್ಥಾನ. ಲಿಂಗ ಮತ್ತು ಅದರ ಮುಂದಿರುವ ನಂದಿ—ಇವುಗಳನ್ನು ಅಸಂಖ್ಯಾತವಾಗಿ ಅಲ್ಲಿರುವ ಕಲ್ಲುಗಳಲ್ಲೇ ಕೊರೆದಿದ್ದಾರೆ. ಸಹಸ್ರಲಿಂಗದಲ್ಲಿ ಹರಿಯುವ ನದಿ, ದಡದಲ್ಲಿರುವ ವಿಗ್ರಹಗಳು, ಸುತ್ತಲಿನ ಪ್ರಕೃತಿಸೌಂದರ್ಯ—ಇವು ಕಣ್ಣಿಗೆ ಒಂದು ಹಬ್ಬ, ಮನಕ್ಕೆ ಒಂದು ಶಾಂತಿ, ಆತ್ಮಕ್ಕೆ ಒಂದು ಆನಂದಗಳನ್ನು ತಂದುಕೊಡುತ್ತವೆ. ಇವು ಸ್ವಾದಿ ಮನೆತನದ ಕಲಾಭಿರುಚಿಗೆ ಕನ್ನಡಿ ಹಿಡಿದಿವೆ. ಗ್ರಂಥಕರ್ತರು ಆ ಸುಂದರ ಚಿತ್ರಗಳನ್ನು ಒದಗಿಸಿಕೊಟ್ಟಿರುವುದರಿಂದ ಪುಸ್ತಕವು ಮತ್ತಷ್ಟು ಅಂದವಾಗಿದೆ. ಅದರಿಂದ ಸ್ವಾದಿ ಅರಸು ಮನೆತನದ ಗತವೈಭವವನ್ನು ಚಿತ್ರಿಸಿಕೊಂಡು ಅಚ್ಚರಿಪಡುವಂತಾಗಿದೆ. ಇದರ ಚರಿತ್ರೆಯನ್ನು ಫ್ರಾಯರ್, ಜಿಮೆಲಿ, ಹ್ಯಾಮಿಲ್ಟನ್, ಕ್ಯಾಂಬೆಲ್ ಬುಕಾನನ್, ಡಾನ್‌ವರ್ಸ್—ಮುಂತಾದವರ ಬರವಣಿಗೆಗಳು ತಿಳಿಸುತ್ತವೆ.

ಶ್ರೀ ಮೂಳವಾಡರು ಕರ್ನಾಟಕ ಇತಿಹಾಸದ ಈ ಅಲಿಖಿತ ಅಧ್ಯಾಯವನ್ನು ಗುರುತಿಸಿ, ಸಂಶೋಧನೆ ಮಾಡಿ ಬರೆದಿದಾರೆ. ಕನ್ನಡ ಸಂಶೋಧನಾಲಯದ ಮುಖ್ಯ ಅಧಿಕಾರಿಗಳಾಗಿರುವ ಅವರಿಂದ ಇಂತಹವೇ ಅನೇಕ ಸಂಶೋಧನಾತ್ಮಕ ಗ್ರಂಥಗಳು ಹೊರಬಿದ್ದು ಕರ್ಣಾಟಕದ ಗತವೈಭವವು ಪ್ರತಿಯೊಬ್ಬರಿಗೂ ಪರಿಚಯವಾಗಿ ಸಂತೋಷಪಡುವಂತಾಗಲೆಂದು ಹಾರೈಸುತ್ತೇವೆ.

ಎಸ್. ನಂಜುಂಡಯ್ಯ.

*
* *

**ಸಪ್ತರಂಗ**—ಲೇಖಕರು : ಎನ್. ಎಸ್. ಗದಗಕರರು ; ಪ್ರಕಾಶಕರು : ಕೆ. ಎಸ್. ಗದಗಕರ, ಶುಕ್ರವಾರಪೇಟೆ, ನವಲೂರು ಅಗಸಿ, ಧಾರವಾಡ ; ೬೦ ಪುಟಗಳು ; ಬೆಲೆ, ಒಂದು ರೂ.

ಕನ್ನಡ ಸಾಹಿತ್ಯದಲ್ಲಿ ಆತ್ಮವೃತ್ತ, ಜೀವನ ಚರಿತ್ರೆಗಳಂತೆಯೇ ವ್ಯಕ್ತಿಪರಿಚಯದ ವಿಭಾಗವೂ ತೀರ ಕಡಿಮೆ.

ಸಂಗೀತ, ಸಾಹಿತ್ಯ, ಚಿತ್ರ, ಶಿಲ್ಪ, ನೃತ್ಯ ಮುಂತಾದವುಗಳಲ್ಲಿ ಪ್ರವೀಣರಾಗಿ ಕೀರ್ತಿಪಡೆದ ಮಹನೀಯರ ಜೀವನವನ್ನೂ, ಅವರು ಮಾಡಿದ ಸಾಹಸಗಳನ್ನೂ, ಅವರು ಕೈಕೊಂಡ ಸಾಧನೆಗಳನ್ನೂ, ಅವರ ಆದರ್ಶ ಮುಂತಾದುವುಗಳನ್ನೂ ಸಹೃದಯರಿಗೆ ಪರಿಚಯಮಾಡಿಕೊಡುವುದೇ ವ್ಯಕ್ತಿ ಪರಿಚಯದಲ್ಲಿ ಮುಖ್ಯವಾದದು. ಈ ಕಾರ್ಯದಲ್ಲಿ ಬಹುಮಟ್ಟಿಗೆ ಕೃತಕೃತ್ಯರಾಗಿದ್ದಾರೆ ಶ್ರೀ ಎನ್. ಎಸ್. ಗದಗಕರ್ ಅವರು.

ಕನ್ನಡದ ವಿವಿಧ ಕಲಾಕ್ಷೇತ್ರಗಳಲ್ಲಿ ಸುಪ್ರಸಿದ್ಧರಾದ ಶ್ರೀರಂಗರು, ಸಾಲಿರಾಮ ಚಂದ್ರರಾಯರು, ಕಲೋಪಾಸಕ ಕ. ಮಾಧವರು, ಆನಂದಕಂದ (ಬೇಟಗೇರಿ ಕೃಷ್ಣಶರ್ಮರು), ಆಲೂರು ವೆಂಕಟರಾಯರು, ಸಂಗೀತಜ್ಞ ವಾಳ್ವೇಕರ ಹನುಮಂತ ರಾಯರು, ವರಕವಿ ದ. ರಾ. ಬೇಂದ್ರೆಯವರು, ನೃತ್ಯವಿಶಾರದ ಕುಲಕರ್ಣಿ ಶ್ರೀನಿವಾಸರು, ಶಿಕ್ಷಕ ಹಳ್ಳಿಯಾಳ ವಾಸುದೇವರಾಯರು, ವಿ. ಕೃ. ಗೋಕಾಕರು, ಶಂ. ಶ್ರೀ ಮುಗಳಿಯವರು ಈ ಹನ್ನೊಂದು ಮಂದಿ ಕಲಾವಿದರ ವ್ಯಕ್ತಿಚಿತ್ರಗಳನ್ನು ಸಪ್ತರಂಗದಲ್ಲಿ ಸಹೃದಯರು ಕಾಣಬಹುದು.

ಕನ್ನಡ ನಾಡಿನಲ್ಲೆ ಹುಟ್ಟಿ, ಕನ್ನಡ ನಾಡಿನಲ್ಲೇ ಬೆಳೆದು, ಕನ್ನಡಿಗರಾಗಿಯೇ ಇದ್ದು, "ಕನ್ನಡನುಡಿ ಕಿಡಿಯಾಗಬೇಕು, ಸಿಡಿಲಾಗಬೇಕು, ನಕ್ಷತ್ರವಾಗಬೇಕು, ಅಮೃತಬಿಂದುವಾಗಬೇಕು" ಎಂದು ಬಯಸಿ, ಅದಕ್ಕಾಗಿ ಶ್ರಮಿಸಿದ ಪುಣ್ಯಪುರುಷರು ಇವರಲ್ಲಿ ಬಹುಮಂದಿ. ಅವರ ಜೀವನಧ್ಯೇಯಗಳು ಕನ್ನಡ ನಾಡುನುಡಿಗಳ ಹೊಂಗನಸುಗಳನ್ನು ಕಾರ್ಯರೂಪಕ್ಕೆ ತರಲು ಪ್ರೇರಕವಾಗಿವೆ. ಸಾಹಿತ್ಯದೃಷ್ಟಿಯಿಂದ ಬಹುಮಟ್ಟಿಗೆ ಆತ್ಮೀಯ ಪರಿಚಯ ಇಲ್ಲಿ ಮಾಡಿಕೊಟ್ಟಿದ್ದಾರೆ ಎನ್. ಎಸ್. ಗದಗಕರ್ ಅವರು. ಈ ಮೂಲಕ ಅವರು ಕನ್ನಡಿಗರಿಗೆ ತುಂಬಾ ಉಪಕಾರ ಮಾಡಿದ್ದಾರೆ ಎನ್ನಬಹುದು.

ಶ್ರೀ ಗದಗಕರರು ಈಗಾಗಲೇ ಕೆಲವು ಪುಸ್ತಕಗಳನ್ನು ಬರೆದು ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದ್ದಾರೆ. ಅವರ ಗದ್ಯ ಸರಳವಾಗಿದೆ, ಸುಂದರವಾಗಿದೆ. ಈ ಪುಸ್ತಕದಲ್ಲಿನ ಹನ್ನೊಂದು ಬರಹಗಳಲ್ಲಿ ಶ್ರೀರಂಗ, ಆಲೂರು ವೆಂಕಟರಾಯರು, ಬೇಂದ್ರೆ, ಮುಗುಳಿ, ಇವರ ವ್ಯಕ್ತಿಚಿತ್ರಣಗಳು ಉಳಿದವುಗಳಿಗಿಂತ ಚೆನ್ನಾಗಿವೆ.

ಒಟ್ಟಿನಲ್ಲಿ ಹೇಳುವುದಾದರೆ 'ಅನಿರುದ್ಧರ' ಚಿಕ್ಕದಾದ, ಆದರೆ ಚೊಕ್ಕವಾದ ಮುನ್ನುಡಿಯಿಂದೊಡಗೂಡಿದ 'ಸಪ್ತರಂಗ'ಕ್ಕೆ ಕನ್ನಡ ಸಹೃದಯರ ಸ್ವಾಗತವಿದೆ.

ಜ. ಶಿ. ಪರಶಿವಮೂರ್ತಿ

***

**ಸ್ನೇಹಸೌರಭ**—ಪ್ರಕಾಶಕರು ಮತ್ತು ಕವಿಗಳು: ಶ್ರೀ ಎಸ್. ಡಿ. ಇಂಚಲ, ಜಾಲಗೇರಗಲ್ಲಿ, ಬೆಳಗಾವ; ಕ್ರೌನ್ ಅ. ಪು. ೬೦; ಬೆಲೆ, ರೂ. ೧-೦-೦.

ಕವಿ ಶ್ರೀ ಇಂಚಲರವರು ತಮ್ಮ ಸಂಚಲನ ಭಾವಗಳಿಗೆ ಗೀತರೂಪವನ್ನು ಹಿಡಿದುಕೊಟ್ಟು ಉಪಕರಿಸಿದ್ದಾರೆ. ಮುನ್ನುಡಿಯನ್ನು ಬರೆಯುತ್ತ ಡಾ|| ವಿ. ಎಸ್. ಕರ್ಕಿಯವರು ಅವರ ಬಗ್ಗೆ 'ಶ್ರೀ ಇಂಚಲ ಅವರ ಕವಿತೆಗಳು ನಾದಮಯವಾದವುಗಳು, ಹಾಡಿದಷ್ಟೂ ಅವುಗಳ ಸೊಗಸು ಹೆಚ್ಚು' ಎಂದು ಹೇಳಿದ್ದಾರೆ. ಭಾವಗೀತೆಗಳನ್ನು ಇಂಚರದಲ್ಲಿ ಹಾಡುವ ರೂಢಿಯನ್ನು ಅವರು ಬಳಸಿಕೊಂಡು ಬಂದಿರುವರಾಗಿ ಅವರ ಕವಿತೆಗಳಲ್ಲಿ ನಾದಮಯತೆ ಸಹಜವಾಗಿ ಸುಳುಹುದೋರುವುದೆಂದು ಕಾಣುತ್ತದೆ. 'ಇಂಚಲ' ಎಂಬ ಶಬ್ದ ನಾದದ ದೃಷ್ಟಿಯಿಂದ ಇಂಚರ ಎಂಬ ಶಬ್ದಕ್ಕೆ ಸಮೀಪವಾದ ಸಂಗತಿಯು ಗಮನಾರ್ಹವಾಗಿದೆ ಎಂದು ಅವರ ಹೆಸರಿನಲ್ಲಿಯೆ ಒಂದು ಮಾಧುರ್ಯವನ್ನು ಸೂಚಿಸಿರುವುದು ಬಹುಶಃ ಅವರ ಕೃತಿಗಳ ಬಗ್ಗೆ ಕೂಡಾ ಅನ್ವಯಿಸುತ್ತದೆ.

ಇದರಲ್ಲಿನ ಮೂವ್ವತ್ತಾರು ಕವನಗಳು ತುಂಬ ಸರಳವಾಗಿ, ಪ್ರಾಸಬದ್ಧವಾಗಿ ಓಡುತ್ತವೆ.

'ಬಾಳಜೋಕಾಲಿ' ಎಂಬ ಕವನದಲ್ಲಿ, ಮಿಥ್ಯಾಜಗತ್ತಿನಿಂದ ಅಲ್ಲಿಯೆ ಇದ್ದು, ಅಲ್ಲಿಯೆ ಬಾಳಿ, ದ್ವೈತಭಾವದಿಂದ ದೂರವಾಗದೆ, ಅದ್ವೈತಕ್ಕೇರುವ ಕಲ್ಪನೆಯನ್ನು ಬಹು ಸೊಗಸಾಗಿ ತಂದಿದ್ದಾರೆ.

ಎರಡು ಹಗ್ಗವ ಹಿಡಿದು
ಎರಡು ಎಂಬುದಮರೆತು
ಬಯಲೀಗೆ ಬಣ್ಣ ಬರೆಯೋಣ

ಎಂಬ ಗಹನವಾದ ತತ್ವಗಳನ್ನು ಅತಿ ಸರಳಸಾಮಾನ್ಯವಾದ ಮಾತುಗಳಲ್ಲಿ ಬರೆಯುವ ವೈಶಿಷ್ಟ್ಯ ಇವರಲ್ಲಿ ಎದ್ದು ಕಾಣಿಸುತ್ತದೆ.

ಧರೆಯೊಳಗೆ ಮರೆಯಾಗಿ ಮರದ ಸೌಂದರ್ಯಕ್ಕೆ
ಜೀವರಸವನ್ನೆರೆವ ಬೇರಿನಂತೆ,

'ಗುರುಬಸವನಾಳರಿಗೆ' ಎಂಬ ಪದ್ಯದಲ್ಲಿನ ಈ ಸಾಲುಗಳು ತಮ್ಮ ಗರ್ಭದಲ್ಲಿ ಅದೆಷ್ಟು ಧ್ವನಿಯನ್ನು ತುಂಬಿಕೊಂಡಿವೆ! ಒಂದರ ಅಭಿವೃದ್ಧಿ ಹಿರಿತನಗಳಿಗೆ, ಅದರ ಹಿಂದೆ ಅಗಾಧವಾದ ಪೋಷಕವಸ್ತು, ಪೂರಕವಸ್ತು ಕುಳಿತಿದೆ; ಅರ್ಥಾತ್ ಪ್ರತಿಯೊಬ್ಬನೂ ತನ್ನ ಹಿರಿಯತನಕ್ಕೆ ತಾನೇ ಕಾರಣವಾಗದೆ ಮತ್ತೊಂದಕ್ಕೆ ತಾನು ಋಣಿ ಎಂಬುದು ಗುಂಭವಾದ ಅರ್ಥ.

'ಹುತಾತ್ಮರ ಪುಣ್ಯಸ್ಮರಣೆ' ಎಂಬ ಕವನದ ಧಾಟಿ ಓದಿಯೆ ಆನಂದಿಸಬೇಕಾದದ್ದು, ಗೆಜ್ಜೆಗಟ್ಟಿದ ಹೆಜ್ಜೆಯು ಮೃದಂಗ ನಾದದೊಡನೆ ಓಡಾಡಿ ಮನ ಸೂರೆಗೊಳ್ಳುವಂತಹ ಛಂದದಿಂದ ಕೂಡಿದೆ.

'ನವಯುಗದ ಕಾರಣಿಕ' ಪದ್ಯದಲ್ಲಿ ಅರಿವಿನ ಪರಾಕಾಷ್ಠದೆಸೆಯಲ್ಲಿದ್ದೇವೆಂದು ಭಾವಿಸಿದ ಪಡುವಣರ ಮರೆವು ಮೂಡಿಸಿದ ವಿಚಿತ್ರವರ್ತನೆಯನ್ನು ಶಬ್ದವರ್ಣಗಳಿಂದ ಬಿಡಿಸಿದ್ದಾರೆ, ಜಿದ್ದಿನಿಂದ ಪೋಷಿತವಾದ ಮನ, ನಾಶಪಾಶವಾದ ಮದ್ದನ್ನು ಅರೆದು ಜಗತ್ತನ್ನು ಹಾಳುಮಾಡಿ ತಾನೂ ಹಾಳಾಗುತ್ತಿದೆ ಎಂದಿದ್ದಾರೆ.

> ಪಡುವಣದ ಮೂಡಣದ ಮದ್ದಿನಾಗರದಲ್ಲಿ
> ಕೊಳ್ಳಿಯಾಟವದೇನು ಏನು ಚೋದ್ಯ !
> ಪೊಡವಿಯೇ ಹೋಳಾಗಿ ಹುಡಿಯಾಗುತಿದೆ ಅತ್ತ !
> ಮತ್ತರಾಗಿಹರಲ್ಲ ಕುಡಿದು ಮದ್ಯ !

ಇಂತಹ ರೀತಿಯಲ್ಲಿ ಬದಲಾಗುತಿದೆ ಕಾಲ, ಮೊದಲಾಗುತಿದೆ ಶೂಲ, ಅಗ್ನಿ ಪರೀಕ್ಷೆಯಿದೊ ನಿತ್ಯ ನಿನಗೆ ಎಂಬಲ್ಲಿ 'ನಿನಗೆ' ಎನ್ನುವುದನ್ನು ತೆಗೆದು 'ನಮಗೆ' ಎಂದಿರಿಸಿದರೆ, ಇಡೀ ಜಗತ್ತಿಗೆ ಅನ್ವಯವಾಗುತ್ತದೆ. ಅದಕ್ಕೆ ಅಗತ್ಯವಾದ, ಹತ್ತಿರವಾದ ನೆರವೆಂದರೆ 'ಭಾರತದ ಭಾಗ್ಯೇಶ್ವರಿ' ಯೋರ್ವಳೆ! ವಿಶ್ವವೇ ಶಾಂತಿಗಾಗಿ ಇತ್ತ ತಿರುಗಿದೆ. ಪ್ರಚಂಡವಾದ ಅಶಾಂತಿಯಿಂದ ಬೆಂದು, ಯುದ್ಧಗಳಿಂದ ಬಳಲಿ, ನಮ್ಮತ್ತ ನೋವಿನಿಂದ ನೋಡುತ್ತಿದೆ!

> ಇಂತು ಬೇಗುದಿಗೊಂಡು ಜಗಕೆ ಶಾಂತಿಯ ಬಯಕೆ
> ಬಲವಾಗುತಿದೆ ಏಳು ಧ್ವಜವನೆತ್ತು
> ಮನುಜಕುಲ ಹೌಹಾರಿ ನಿನ್ನ ಮೊಗ ನೋಡುತಿದೆ
> ಕರುಣೆಯನು ಕರೆಯಮ್ಮ ಅಭಯವಿತ್ತು.

ಶ್ರೀಮಾನ್ ಇಂಚಲರವರು ಹುತಾತ್ಮರ ಹಾಗೂ ಹಿರಿಯರ, ಯೋಗಿಗಳ, ಶಿವಶರಣರ, ಬಸವಣ್ಣನವರೇ ಮೊದಲಾದ ವಿಭೂತಿ ಪುರುಷರ ಬಗ್ಗೆ ಭಕ್ತಿಪೂರ್ವಕವಾದ ಕವನಗಳನ್ನು ಕಟ್ಟಿ ಕೃತಿಯಲ್ಲಿ ಪೋಷಣೆಸಿದ್ದಾರೆ. ಅವೆಲ್ಲವೂ ಮೆಚ್ಚತಕ್ಕ ಕವನಗಳೇ.

'ತಾಯ ಮುತ್ತು' ಎಂಬ ಕವನದಲ್ಲಿ ಬಳಕೆಯಾಗಿರುವ 'ಚೆಂದುಟಿಯ ಚೆಲುವನ್ನೆ ತುಂಬಿತೇನ!' ಎಂಬ ಕಡೆ "ಚೆಂದುಟಿ" ಎಂಬ ಪದವು ಮಗುವಾಗಿ ಕವಿ ಬಳಸಿರುವುದು ಏಕೊ ಸರಿಕಾಣುವುದಿಲ್ಲ. ಅದು ತಾರುಣ್ಯದ ಯಾವುದೋ ಒಂದು ಭಾವವನ್ನು ಫಕ್ಕನೆ ಓದುಗನ ಎದೆಯಾಳದಲ್ಲಿ ಮೂಡಿಸಿಬಿಡುತ್ತದೆ. ಭಕ್ತಿಗಿಂತ ಆಕರ್ಷಣೆ ಕಾಣುತ್ತದೆ.

ಒಟ್ಟಿನಲ್ಲಿ 'ಸ್ನೇಹಸೌರಭ' ಕವಿ ಕಂಡ, ಅನುಭವದ ಸಂಗೀತವಾಗಿದೆ, ಅದರ ಕಂಪು ಸುತ್ತಲು ಹರಡುವುದೆಂಬುದರಲ್ಲಿ ಆಶೆಯಿದೆ.

ಕಾ ಶಿವಿಶ್ವನಾಥಶೆಟ್ಟಿ.

# ಸಂಪಾದಕೀಯ

## ಮೂವತ್ತೊಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನ

ಮೂವತ್ತೊಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಳನ ಇದೇ ಮೇ ತಿಂಗಳು ೭, ೮, ೯ ಈ ದಿನಾಂಕಗಳಲ್ಲಿ ಧಾರವಾಡದಲ್ಲಿ ಸಮಾವೇಶಗೊಂಡಿದ್ದಿತು. ಹರಿದು ಹಂಚಿಹೋಗಿದ್ದ ಕನ್ನಡನಾಡು ಒಂದುಗೂಡಿದ ಬಳಿಕ ಸೇರುವ ಮೊದಲ ಸಮ್ಮೇಳನ 'ಕನ್ನಡದ ಸಿದ್ಧಿಸ್ಥಾನ'ಗಳಲ್ಲೊಂದಾದ ಧಾರವಾಡದಲ್ಲಿ ಸಮಾವೇಶಗೊಂಡದ್ದು ಉಚಿತವಾಗಿಯೇ ಇದೆ. ಕರ್ನಾಟಕ ವಿಶ್ವವಿದ್ಯಾನಿಲಯದ ಆಶ್ರಯ ಆತಿಥ್ಯಗಳಲ್ಲಿ ಈ ಉತ್ಸವ ಜರುಗಿದುದೂ ವಿಶಾಲ ಮೈಸೂರಿನ ಮುಖ್ಯಮಂತ್ರಿಗಳಾದ ಶ್ರೀ ಎಸ್. ನಿಜಲಿಂಗಪ್ಪನವರು ಸಮ್ಮೇಳನವನ್ನು ಉದ್ಘಾಟಿಸಿದುದೂ ಮೈಸೂರು ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರೂ ಕವಿವರೇಣ್ಯರೂ ಶಿಕ್ಷಣತಜ್ಞರೂ ಆದ ಡಾ|| ಕೆ. ವಿ. ಪುಟ್ಟಪ್ಪನವರು ಈ ಉತ್ಸವದ ಅಧ್ಯಕ್ಷಸ್ಥಾನವನ್ನು ಅಲಂಕರಿಸಿದುದೂ ಈ ಸಮ್ಮೇಳನಕ್ಕೆ ವಿಶೇಷವಾದ ಸಂಭ್ರಮವನ್ನು ಒದಗಿಸಿದ ಸಂಗತಿಗಳಾಗಿವೆ. ಕರ್ನಾಟಕ ವಿಶ್ವವಿದ್ಯಾನಿಲಯದ ವೈಸ್-ಛಾನ್ಸಲರೂ ಪರಮಮೇಧಾವಿಗಳೂ ಸಾಹಿತ್ಯಾಭಿಮಾನಿಗಳೂ ಶಿಕ್ಷಣವೇತ್ತರೂ ಆದ ಡಾ|| ಪಾವಟೆಯವರು ಈ ಸಮ್ಮೇಳನ ಯಶಸ್ವಿಯಾಗಿ ನಡೆಯುವುದಕ್ಕೆ ತಕ್ಕ ಏರ್ಪಾಡುಗಳನ್ನು ಕೈಗೊಳ್ಳಲು ಸಮರ್ಥವಾದ ಕಾರ್ಯಸಮಿತಿಯನ್ನು ನಿಯಾಮಕಮಾಡಿದ ಅಂಶವನ್ನು ಇಲ್ಲಿ ಹೆಮ್ಮೆಯಿಂದ ಸ್ಮರಿಸಬಹುದಾಗಿದೆ. ಘನ ವಿದ್ವಾಂಸರೂ ಬೇಲೂರು ಸಾಹಿತ್ಯಸಮ್ಮೇಳನದ ಅಧ್ಯಕ್ಷರೂ ಆದ ಡಾ|| ಸಂದೀಮಠರ ಸಫಲಯಾಜಮಾನ್ಯ, ಸರ್ವಶ್ರೀ ದೀಕ್ಷಿತ, ಕಣವಿ, ಮದನಮೋಹನ್ ಮುಂತಾದ ದಕ್ಷ ಕಾರ್ಯಕರ್ತರ ಅಮೋಘವೂ ನಿಸ್ವಾರ್ಥವೂ ಆದ ಸೇವಾಮನೋಭಾವ, ಧಾರವಾಡದ ಜನರ ನಾಡುನುಡಿಗಳ ಕಟ್ಟಭಿಮಾನ ಇವುಗಳಿಂದಾಗಿ ಈ ಸಮ್ಮೇಳನ ತುಂಬ ಯಶಸ್ವಿಯಾಗಿ ನಡೆಯಿತು.

ಈ ಸಮ್ಮೇಳನದ ಅಂಗವಾಗಿ ಪ್ರೊ|| ಕೆ. ಜಿ. ಕುಂದಣಗಾರರ ಅಧ್ಯಕ್ಷತೆಯಲ್ಲಿ 'ನವೀನ ನಾಗರಿಕತೆ ವಸ್ತುವಿಜ್ಞಾನಗಳ ಅಭಿವ್ಯಕ್ತಿಗಾಗಿ ಬೇಕಾಗುವ ಕನ್ನಡಶಬ್ದಸಂಪತ್ತನ್ನು ಒದಗಿಸುವ ವಿಧಾನಗಳು' ಎಂಬ ವಿಷಯವಾಗಿಯೂ ಪ್ರೊ|| ವಿ. ಕೃ. ಗೋಕಾಕ್ ಅವರ ಅಧ್ಯಕ್ಷತೆಯಲ್ಲಿ 'ಸಾಹಿತಿಯು ತನ್ನ ತತ್ವ ಹಾಗೂ ನಂಬುಗೆಗಳನ್ನು ಕಲೆಗೆ ವ್ಯತಿರಿಕ್ತವಾಗದ ಹಾಗೆ ಅಭಿವ್ಯಕ್ತಿಗೊಳಿಸಲು ಸಾಧ್ಯವೆ' ಎಂಬ ವಿಷಯವಾಗಿಯೂ ಡಾ|| ಆರ್. ಕೆ. ಅಸುಂಡಿಯವರ ಅಧ್ಯಕ್ಷತೆಯಲ್ಲಿ "ಇಂದಿನ

ಕನ್ನಡದಲ್ಲಿ ಶಾಸ್ತ್ರೀಯ ವಾಙ್ಮಯದ ಕೊರೆತೆಗಳು ಇದ್ದುದರ ಸಮೀಕ್ಷೆ, ಇಲ್ಲದುದರ ಉಲ್ಲೇಖನ" ಎಂಬ ವಿಷಯವಾಗಿಯೂ ಡಾ|| ರಂ. ಶ್ರೀ ಮುಗಳಿಯವರ ಅಧ್ಯಕ್ಷತೆಯಲ್ಲಿ 'ಹತ್ತೊಂಬತ್ತನೆಯ ಶತಮಾನದ ಕನ್ನಡ ಸಾಹಿತ್ಯ' ಎಂಬ ವಿಷಯವಾಗಿಯೂ ಚರ್ಚೆ ನಡೆಯಿತು. ಅನೇಕ ವಿದ್ವಾಂಸರು ಈ ಚರ್ಚೆಗಳಲ್ಲಿ ಭಾಗವಹಿಸಿದ್ದರು. ಇಂತಹ ವಿಚಾರ ವಿನಿಮಯದ ವೇದಿಕೆಯೊಂದನ್ನು ಸಮ್ಮೇಳನದ ರಂಗದಲ್ಲಿ ಸಜ್ಜುಗೊಳಿಸಿದ ಕಾರ್ಯಕರ್ತರು ಅಭಿನಂದನಾರ್ಹರೇ ಸರಿ.

ಡಾ|| ಕೆ. ವಿ. ಪುಟ್ಟಪ್ಪನವರು ತಮ್ಮ ಕವಿಸಹಜವಾದ ಧೀರಗಂಭೀರ ವಾಣಿಯಲ್ಲಿ ಸಮ್ಮೇಳನದ ಅಧ್ಯಕ್ಷಸ್ಥಾನದಿಂದ ವಿಚಾರಪೂರ್ಣವಾದ ಭಾಷಣ ಮಾಡಿದರು. ನಾಡುನುಡಿಗಳ ಏಳಿಗೆಗೆ ಸಂಬಂಧಪಟ್ಟ ಅನೇಕ ಅಂಶಗಳನ್ನು ಹೃದಯಂಗಮವಾಗಿ ವಿವರಿಸಿ ಹೇಳಿದರು. ಕನ್ನಡ ಶಿಕ್ಷಣ ಮಾಧ್ಯಮವಾಗುವುದರ ಅವಶ್ಯಕತೆಯನ್ನೂ ವಿಜ್ಞಾನದ ವಿಷಯಗಳನ್ನು ತಿಳಿಸುವ ಕನ್ನಡ ಗ್ರಂಥಗಳ ಪ್ರಕಾಶನದ ಅವಶ್ಯಕತೆಯನ್ನೂ ಒತ್ತಿ ಹೇಳಿದರು.

ಈ ಸಂದರ್ಭದಲ್ಲಿ ನಾವು ಶಿಕ್ಷಣಕ್ಷೇತ್ರದಲ್ಲಿಯೂ ಸಾಹಿತ್ಯಾದಿ ಕಲಾಕ್ಷೇತ್ರಗಳಲ್ಲಿಯೂ ಆಸಕ್ತಿ ವಹಿಸಿ ಶ್ರದ್ಧೆಯಿಂದ ಶ್ರಮಿಸುತ್ತಿರುವ ನಮ್ಮ ನಾಡಿನ ಧುರೀಣರ ಕ್ರಿಯಾಶಕ್ತಿ ಸಮ್ಮೇಳನಾಧ್ಯಕ್ಷರ ಭಾಷಣದ ಮುಖ್ಯಾಂಶಗಳ ಮನನದಿಂದ ಹೊಸ ಚೇತನವನ್ನೂ ಹೊಸ ಸ್ಫೂರ್ತಿಯನ್ನೂ ಪಡೆಯಲಿ ಎಂದು ಹಾರೈಸುತ್ತೇವೆ.

*
* *

## ಸ್ವವಿಷಯ

ಈಗಾಗಲೆ ಈ ಸಂಚಿಕೆ ತಡವಾಗಿ ಪ್ರಕಟವಾಗುತ್ತಿದೆ. ಸಮ್ಮೇಳನದ ಕಾರ್ಯಕಲಾಪಗಳ ಮತ್ತು ಭಾಷಣಗಳ ವಿವರಗಳನ್ನು ಕೊಡುವುದಾದರೆ ಈ ಸಂಚಿಕೆಯ ಪ್ರಕಟಣೆ ಇನ್ನೂ ತಡವಾಗುತ್ತದೆ. ಈ ಕಾರಣದಿಂದ ಸಮ್ಮೇಳನದಲ್ಲಿ ನಡೆದ ಎಲ್ಲ ಭಾಷಣಗಳ ಸಾರಾಂಶವನ್ನೂ ಮುಂದಿನ ಸಂಚಿಕೆಯಲ್ಲಿ ಕೊಡಬೇಕೆಂದು ನಿರ್ಧರಿಸಿದ್ದೇವೆ. 'ಪ್ರಬುದ್ಧ ಕರ್ಣಾಟಕ' ಸಕಾಲದಲ್ಲಿ ಪ್ರಕಟವಾಗುವುದಕ್ಕೆ ಸರ್ವಪ್ರಯತ್ನವನ್ನೂ ಮಾಡಲಾಗುತ್ತಿದೆ. ವಾಚಕರೂ ಗ್ರಾಹಕರೂ ಎಂದಿನಂತೆ ನಮ್ಮ ಪತ್ರಿಕೆಯ ಮೇಲೆ ಅಭಿಮಾನವಿಡಬೇಕೆಂದು ಪ್ರಾರ್ಥಿಸುತ್ತೇವೆ.

# ಸಾದರ ಸ್ವೀಕಾರ

**ಚಿಕ್ಕವೀರ ರಾಜೇಂದ್ರ** (ಕಾದಂಬರಿ)—ಲೇಖಕರು : ಶ್ರೀ "ಶ್ರೀನಿವಾಸ"; ಪ್ರಕಾಶಕರು : ಜೀವನ ಕಾರ್ಯಾಲಯ, ಬಸವನಗುಡಿ, ಬೆಂಗಳೂರು ; ಪುಟಗಳು iv+೫೩೩ ; ಬೆಲೆ, ರೂ. ೬-೮-೦.

**ಕೇನೋಪನಿಷತ್**—ಲೇಖಕರು : ಸ್ವಾಮಿ ಆದಿದೇವಾನಂದ; ಪ್ರಕಾಶಕರು : ಶ್ರೀ ರಾಮಕೃಷ್ಣಾಶ್ರಮ, ಮೈಸೂರು ; ಪುಟಗಳು ೩೯ ; ಬೆಲೆ, ರೂ. ೦.೫೦.

**ಶಿವಾನಂದಲಹರೀ**—ಶ್ರೀ ಶಂಕರಾಚಾರ್ಯ ವಿರಚಿತ ; ಪ್ರಕಾಶಕರು : ಶ್ರೀ ರಾಮಕೃಷ್ಣಾಶ್ರಮ, ಮೈಸೂರು ; ಪುಟಗಳು ೩+೪೭ ; ಬೆಲೆ, ರೂ. ೦.೫೦.

**ಎವರೆಸ್ಟ್ ವೀರ** (ಎವರೆಸ್ಟ್‌ವೀರ ತೆನ್‌ಸಿಂಗನ ಆತ್ಮಕಥೆ)—ಕನ್ನಡಿಸಿದವರು ಶ್ರೀ ಕೂಡಲಿ ಚಿದಂಬರಂ ಮತ್ತು ಶ್ರೀ ಜನಾರ್ದನ ಗುರ್ಕಾರ್ ; ಪ್ರಕಾಶಕರು : ಕಾವ್ಯಾಲಯ, ಮೈಸೂರು ; ಪುಟಗಳು ಕ್ರಾ. ಅ. ಪ. ೩೮೪ ; ಬೆಲೆ, ಸಾದಾಪ್ರತಿ ರೂ. ೫-೦-೦ ; ಕ್ಯಾಲಿಕೊ ರೂ. ೭-೮-೦.

**ರಂಗಭೂಮಿ**—ಬರೆದವರು : ಶ್ರೀ ಕ. ಶಂಕರ ; ಪ್ರಕಾಶಕರು : ಕಾವ್ಯಾಲಯ, ಮೈಸೂರು ; ಪುಟಗಳು ಕ್ರಾ. ಅ. ಪ. ೨೪೨.

**ವಿವಾಹವಿಚ್ಛೇದ**—ಬರೆದವರು : ಶ್ರೀ ಕ. ಶಂಕರ ; ಪ್ರಕಾಶಕರು : ಕಾವ್ಯಾಲಯ, ಮೈಸೂರು ; ಪುಟಗಳು ಕ್ರಾ. ಅ. ಪ. ೨೨೮.

**ಶುಭದಾ**—ಮೂಲಲೇಖಕರು : ಶ್ರೀ ಶರಚ್ಚಂದ್ರ ಚಟರ್ಜಿ ; ಅನುವಾದಕರು : ಶ್ರೀ ಎ. ಶಂಕರ ; ಪ್ರಕಾಶಕರು : ಕಾವ್ಯಾಲಯ, ಮೈಸೂರು ; ಪುಟಗಳು ಕ್ರಾ. ಅ. ಪ. ೨೨೮ ; ಬೆಲೆ, ರೂ. ೧-೮-೦.

**ಸಾಹಿತ್ಯ**—ಮೂಲಲೇಖಕರು : ಶ್ರೀ ರವೀಂದ್ರನಾಥ ಟಾಗೋರರು ; ಅನುವಾದಕರು : ಡಾ|| ಎ. ಎನ್. ನರಸಿಂಹಯ್ಯನವರು ; ಪ್ರಕಾಶಕರು : ಕಾವ್ಯಾಲಯ, ಮೈಸೂರು ; ಪುಟಗಳು ಕ್ರಾ. ಅ. ಪ. ೧೧೬ ; ಬೆಲೆ, ಸಾದಾಪ್ರತಿ ರೂ. ೨-೦-೦ ; ಕ್ಯಾಲಿಕೊಪ್ರತಿ ರೂ. ೩-೦-೦.

**ಭರತಭಕ್ತಿ ಕಾವ್ಯಂ**—ಗ್ರಂಥಕರ್ತರು ಮತ್ತು ಪ್ರಕಾಶಕರು : ಶ್ರೀ ಕೆ. ರಾಮಸ್ವಾಮೈಯ್ಯಂಗಾರ್, ಆಸೂರಿ ; ಪುಟಗಳು ಕ್ರಾ. ಅ. ಪ. ೨೪೦ ; ಬೆಲೆ, ರೂ. ೩-೦-೦.

**ಅನುಕಲ್ಪನೆ**—ಬರೆದವರು : ಶ್ರೀ ಜಿ. ವೆಂಕಟಸುಬ್ಬಯ್ಯ ; ಪ್ರಕಾಶಕರು : ಪ್ರತಿಭಾ ಪ್ರಕಟನ ಮಂದಿರ, ೨೧೮, ಮಿಡಲ್ ಸ್ಕೂಲ್ ರಸ್ತೆ ; ವಿಶ್ವೇಶ್ವರಪುರಂ, ಬೆಂಗಳೂರು ೪ ; ಪುಟಗಳು ಕ್ರಾ. ಅ. ಪ. ೧೪೪ ; ಬೆಲೆ, ಸಾಧಾರಣಪ್ರತಿ ರೂ. ೨-೦-೦ ; ಉತ್ತಮಪ್ರತಿ ರೂ. ೨-೮-೦ ; ಕ್ಯಾಲಿಕೋ ಪ್ರತಿ ರೂ. ೩-೦-೦.

**ಈ ರಾಜ್ಯದೊಡೆಯ ರೈತ**—ಬರೆದವರು : ಶ್ರೀ ಕೋ. ಚೆನ್ನಬಸಪ್ಪ ; ಪ್ರಕಾಶಕರು : ಸಜೀವ ಸಾಹಿತ್ಯಮಾಲೆ, ಬಳ್ಳಾರಿ ; ಪುಟಗಳು ಕ್ರಾ. ಅ. ಪ. ೫೨ ; ಬೆಲೆ, ೫೦ ನಯೆ ಪೈಸೆ.

**ಸುಖ-ಶಾಂತಿ**—ಬರೆದವರು : ಶ್ರೀ ಆರ್. ಎನ್. ಸೂರ್ಯನಾರಾಯಣಶರ್ಮ; ಪ್ರಕಾಶಕರು : ಪ್ರಜಾಸಾಮ್ರಾಜ್ಯ ಪ್ರಕಾಶನ ; ೧೩೦೨ ; ಶ್ರೀರಾಮಪೇಟೆ, ಮೈಸೂರು ; ಪುಟಗಳು ಕ್ರಾ. ಅ. ಪ. ೫೬ ; ಬೆಲೆ, ೧೨ ಆಣೆ.

**ಶ್ರೀ ಶಿವಾನಂದಲಹರಿ** (ಶ್ರೀ ಶಂಕರಾಚಾರ್ಯಕೃತ)—ಅನುವಾದಕರು ಮತ್ತು ಪ್ರಕಾಶಕರು : ಶ್ರೀ ವೀರಪ್ಪ ವೀರಭದ್ರಪ್ಪ ನಾಗಸೆಟ್ಟಿ ಚೆನ್ನಮ್ಮನ ಕಿತ್ತೂರ ; ಪುಟಗಳು ಕ್ರಾ. ಅ. ಪ. ೫೨ ; ಬೆಲೆ, ೬ ಆಣೆ.

**ಕೌಂಡಿನಿ** (ಗುಂಡ್ಲುಪೇಟೆ ವಿದ್ಯಾರ್ಥಿಸಂಘದ ಪ್ರಥಮ ವಾರ್ಷಿಕ ಸಂಚಿಕೆ)—ಸಂಪಾದಕರು : ಶ್ರೀ ಎಸ್. ವಿಶ್ವನಾಥ ಮತ್ತು ಶ್ರೀ ಎಚ್. ಎಂ. ಶಿವಣ್ಣ ; ಪ್ರಕಾಶಕರು : ಗುಂಡ್ಲುಪೇಟೆ ತಾಲ್ಲೂಕು ವಿದ್ಯಾರ್ಥಿಸಂಘ, ಮೈಸೂರು ; ಪುಟಗಳು ಕ್ರಾ. ಅ. ಪ. ೮೮ ; ಬೆಲೆ, ?

**ಗ್ರಾಮ ಪುನರುಜ್ಜೀವನ**—ಬರೆದವರು ಮತ್ತು ಪ್ರಕಟಿಸಿದವರು : ಶ್ರೀ ವಿ. ಮಲ್ಲರಾಜ ಅರಸು ; ಪುಟಗಳು ಕ್ರಾ. ಅ. ಪ. ೧೭೨ ; ಬೆಲೆ, ರೂ. ೧-೮-೦.

**ಆದರ್ಶಸಾಹಿತಿಗಳು**—ಬರೆದವರು ಮತ್ತು ಪ್ರಕಟಿಸಿದವರು : ಶ್ರೀ ಭುಜಬಲಶಾಸ್ತ್ರಿ, ಮೂಡಬಿದರೆ ; ಪುಟಗಳು ಕ್ರಾ. ಅ. ಪ. ೫೯ ; ಬೆಲೆ, ೧೦ ಆಣೆ.

**ಹೂವು ಚೆಲ್ಲಿದ ಹಾದಿಯಲ್ಲಿ**—ಬರೆದವರು : ಶ್ರೀ ಕೆ. ವಿ. ಸುಬ್ಬಣ್ಣ ; ಪ್ರಕಾಶಕರು : ಅಕ್ಷರಪ್ರಕಾಶನ, ಸಾಗರ, ಶಿವಮೊಗ್ಗ ; ಪುಟಗಳು ಕ್ರಾ. ಅ. ಪ. ೬೪ ; ಬೆಲೆ, ರೂ. ೧-೮-೦.

**ಸಮಾಜೋದ್ಧಾರಕ ಬಸವಣ್ಣನವರು**—ಬರೆದವರು : ಶ್ರೀ ಗ. ಸ. ಹಾಲಪ್ಪ ; ಪ್ರಕಾಶಕರು : ಶಾರದಾಮಂದಿರ, ರಾಮಯ್ಯರ್ ರಸ್ತೆ, ಮೈಸೂರು ; ಪುಟಗಳು ಕ್ರಾ. ಅ. ಪ. vi+೧೫೪ ; ಬೆಲೆ, ರೂ. ೨-೦-೦.

---

# ಪ್ರಬುದ್ಧ ಕರ್ಣಾಟಕ

ಹೇವಿಳಂಬಿ ಸಂವತ್ಸರ | ೧೫೭ | ಆಷಾಢ ಸಂಚಿಕೆ

## ಕಷ್ಟವಯ್ಯಾ ಹೊಗಲು ಕವಿಹೃದಯಕೆ

ಕಷ್ಟವಯ್ಯಾ ಹೊಗಲು ಕವಿಹೃದಯಕೆ
ನಷ್ಟವಿಲ್ಲದೆ ನಿನ್ನ ಮಮಕಾರಕೆ.

ದುಷ್ಟಮೃಗಗಳು ತುಂಬಿದಡವಿ ಸುತ್ತಿದೆ; ಮುಗಿಲು
ಮುಟ್ಟಿದಾ ಬೆಟ್ಟಸೆತ್ತಿಯು ಮೇಲಿದೆ;
ದಟ್ಟಮಂಜಿನ ಗಡ್ಡೆ ಹೆಪ್ಪುಗಟ್ಟಿದೆ; ನಿದ್ದೆ
ಕಟ್ಟಿಹಾಕಿದೆ; ಸದ್ದು ಹೆಣಬಿದ್ದಿದೆ!

ದುರ್ಗಮವೊ ಮಾರ್ಗವದು ಕವಿಯೆದೆಯ ಕಲ್ಗುಡಿಗೆ;
ಮೆಟ್ಟಿದರೆ ಪಥವೆಲ್ಲ ಮುಳ್ಳುಕಲ್ಲು.
ಕಂಟಕದ ಸಂಕಟವ ಕಳೆದು ಮೇಲೇರ್ದರೂ
ತಟ್ಟಿದೊಡನೆಯೆ ತೆರೆವ ಕದವದಲ್ಲ.

ಕತ್ತಲೆಯ ಗವಿಯಯ್ಯ ಕವಿಹೃದಯದಾ ಗುಹ್ಯ;
ಬಯಲು ಬತ್ತಲೆಗಣ್ಣಿಗದು ಅಸಹ್ಯ:
ಗವಿಯ ಬಾಯೆಡೆ ರಾಸಿ ಬಿಳಿಯೆಲ್ವು ಸುತ್ತಲೂ
ಬೆಚ್ಚಲಾಗಿದೆ ಮಂದಿ ಮುತ್ತಿದವೊಲು.

ಕಂಡ ಕಂಡರಿಗೆಲ್ಲ ಕಂಡಿ ತೋರುವುದಲ್ಲ;
ಕೊಂಡುಕೊಳಲೂ ಹಣಕೆ ಹವಣದಲ್ಲ.
ಕೆಲಸವಿಲ್ಲದ ಕುತೂಹಲದ ಕಣ್ಣಿಗೆ ಅಲ್ಲಿ
ಕಲ್ಲಲ್ಲದಿನ್ನಾವ ದೇವರಿಲ್ಲ!

ಮೆಚ್ಚು ಮೆಯ್‌ಜೋಡಾಗಿ, ಹೆಮ್ಮೆ ಕಾಲ್‌ಜೋಡಾಗಿ,
ಒದೆದರೂ ಒಲಿಯುವಾ ಮನಸು ಮಾಡಿ
ಏರುವಾ ಪ್ರೇಮವೀರಗೆ ಬೇರೆ ಮೋರೆಯಸು
ತೋರುವುದು ತನ್ನೆದೆಯ ಸೂರೆ ನೀಡಿ!

೨೨-೫-೧೯೩೮ —ಕುವೆಂಪು

---

# ಶ್ರೀ ರಾಮಾಯಣ ದರ್ಶನದಲ್ಲಿ ಶ್ರೀ ಅರವಿಂದ ದರ್ಶನ

"ಪ್ರಾಣಿ ನೀಂ : ಪ್ರಾಣಮಯಮಂ
ಮನೋಮಯಮುಮಂ ಮೀರ್ದ ವಿಜ್ಞಾನಮಂ ಕಂಡು
ಕಾವ್ಯಸತ್ತ್ವ ಜ್ಞಾನದಿಂದಿರ್ಪುದಸದಳಂ !
ಕಂಡ ದರ್ಶನಕೊಂದು ವಿರಚಿಸುವೆನಾಂ ಬೃಹತ್
ಪ್ರತಿಮೆಯಂ. ತಾನತೀಂದ್ರಿಯಮಾದೊಡಂ, ಕಾಣ್
ಕವಿಪ್ರಾಣಿ, ಪ್ರಾಣಬುದ್ಧಿಗ್ರಾಹ್ಯಮಪ್ಪುದನದಂ !"

—ಶ್ರೀ ಕುವೆಂಪು

(ಶ್ರೀ ರಾಮಾಯಣ ದರ್ಶನಂ, ಮಹಾಸಂಪುಟ ೨, ಪುಟ ೮೭೦)

೧

ಹತ್ತು ವರ್ಷಗಳ ಅನವರತ ದೀರ್ಘ ತಪಸ್ಸಿನ ಫಲವಾಗಿ ಮಹಾಕವಿ ಶ್ರೀ ಕುವೆಂಪು ಅವರ ಮೂಲಕ 'ಮೇರುಕೃತಿ, ಮೇಣ್ ಜಗದ್ಭವ್ಯ ರಾಮಾಯಣಂ' ಅವತರಿಸಿತು ! ಆ ರಸತಪಸ್ಸಿನಿಂದ ಇಳಿದುಬಂದ ಕವಿ ಕುವೆಂಪು, ಸೀತಾಮಾತೆಯ ದರ್ಶನವನ್ನು ಪಡೆದು ಹಿಂತಿರುಗಿದ, 'ಯೋಗಿವರ' ಆಂಜನೇಯನು ತನ್ನ ದರ್ಶನವೃತ್ತಾಂತವನ್ನು ಶ್ರೀರಾಮಚಂದ್ರನಿಗೆ ಒಪ್ಪಿಸುವಂತೆ, ಕೃತಕೃತ್ಯತೆಯ ಪೂರ್ಣತೃಪ್ತಿಯನ್ನು ಪಡೆದು, ಸಾಹಸದ ಕಾರ್ಯವನ್ನು ಸಾಧಿಸಿದ ಆತ್ಮತೃಪ್ತಿಯಿಂದ ಹೀಗೆ ಹಾಡಿದ್ದಾರೆ :

"ಇದೊ ಮುಗಿಸಿ ತಂದಿಹೆನ್ ಈ ಬೃಹದ್ ಗಾನಮಂ
. . . ಇದೊ ಬಂದಿರುವೆನಿಂದು
ಮುಗಿಸಿ ತಂದಿಹೆನಾ ಮಹಾಗಾನಮಂ. ಪಿಂತೆ
ವಾಲ್ಮೀಕಿಯುಲಿದ ಕಥೆಯಾದೊಡಂ, ಕನ್ನಡದಿ
ಬೇರೆ ಕಥೆಯೆಂಬಂತೆ, ಬೇರೆ ಮೈಯಾಂತಂತೆ,
ಮರುವುಟ್ಟುವಡೆದಂತೆ ಮೂಡಿದೀ ಕಾವ್ಯಮಂ
ವಿಶ್ವವಾಣಿಗೆ ಮುಡಿಯ ಮಣಿ ಮಾಡಿಹೆನ್, ನಿಮ್ಮ
ಕೃಪೆಯಿಂದೆ."[1]

[1] ಶ್ರೀ ರಾ. ದ. ಸಂಪುಟ ೧. ಶ್ರೀ ವೆಂಕಣ್ಣಯ್ಯನವರಿಗೆ ಎಂಬ ಪೀಠಿಕಾ ಭಾಗದಿಂದ.

ಶ್ರೀ ಕುವೆಂಪು ಅವರ ಈ ಮಾತುಗಳಲ್ಲಿ ಅಹಂಕಾರವೂ ಇಲ್ಲ; ಅಲಂಕಾರವೂ ಇಲ್ಲ. ಏಕೆಂದರೆ, ವ್ಯೋಮಸಾಗರ ಸಮನಾದ ರಾಮಾಯಣವನ್ನು ರಚಿಸುವುದು ಆಂಜನೇಯನು ಅಲಂಘ್ಯವಾದ ಸಾಗರೋಲ್ಲಂಘನ ಮಾಡಿದುದಕ್ಕಿಂತಲೂ ಯಾವ ಅರ್ಥದಲ್ಲೂ, ದೃಷ್ಟಿಯಲ್ಲೂ ಕಡಮೆಯಾದುದಲ್ಲ. "ಅಲ್ಲದೆ ಕವಿಕೃತಿಯಾದ ಕಾವ್ಯವೂ ಈಶ್ವರಕೃತಿಯಾದ ವಿಶ್ವಸೃಷ್ಟಿಗೆ ಸದೃಶವಾದ ಒಂದು ಪ್ರತಿಮೆ . . . ಅದೂ ಒಂದು ಪ್ರತಿಮಾಲೋಕ. ವಿಶ್ವವು ಹೇಗೆ ಋತಚಿತ್ ಸತ್ಯಾರ್ಥಪ್ರಕಾಶನದ ಒಂದು ವಿರಾಟ್ ಪ್ರತಿಮೆಯೋ ಹಾಗೆಯೇ ಮಹಾಕಾವ್ಯವೂ ಮಹಾಕವಿಯ 'ದರ್ಶನ'ಪ್ರಕಾಶನದ ಒಂದು ಮಹಾಪ್ರತಿಮೆ."[2] ಆದ್ದರಿಂದಲೇ ಮಹಾಕವಿ ಕುವೆಂಪು

> 'ತನು ನಿನ್ನದಾದೊಡಂ ಚೈತನ್ಯಮೆನ್ನದೆನೆ,
> ಕಥೆ ನಿನ್ನದಾದೊಡಂ, ನೀನೆ ಮೇಣಾಶೀರ್ವದಿಸಿ
> ಮತಿಗೆ ಬೋಧವನಿತ್ತೊಡಂ, ಕೃತಿ ನನ್ನ ದರ್ಶನಂ
> ಮೂರ್ತಿವೆತ್ತೊಂದಮರ ಕಾವ್ಯದಾಕೃತಿಯಲ್ತೆ ?'[3]

ಎಂದು ವಾಲ್ಮೀಕಿ ಮಹರ್ಷಿಗೆ ಮಣಿದು ಕಾವ್ಯರಚನೆಗೆ ತೊಡಗಿದ್ದಾರೆ. ರಾಮಾಯಣ ವಾಲ್ಮೀಕಿಯುಲಿದ ಕಥೆಯೇ. ಆದರೂ ಶ್ರೀ ರಾಮಾಯಣ ದರ್ಶನಂ ವಾಲ್ಮೀಕಿ ರಾಮಾಯಣದ ನಕಲಲ್ಲ. ಹಾಗಾದರೆ ಮಾತಿನ ಮೋಡಿಯಲ್ಲಿ, ವರ್ಣನೆಯ ವೈವಿಧ್ಯ ದಲ್ಲಿ, ಭಾಷೆ, ಛಂದಸ್ಸು, ಅಲಂಕಾರಗಳ ವಿಭಿನ್ನತೆಯಲ್ಲಿ ಇದು ಮೂಲ ರಾಮಾಯಣ ದಿಂದ ಬೇರೆಯಾಗಿದೆಯೆ? ಅಥವಾ ಅದಕ್ಕಿಂತಲೂ ಆಳವಾದ ಇತರ ರೀತಿಯಿಂದ ಬೇರೆಯಾಗಿದೆಯೆ ?

ಈ ಪ್ರಶ್ನೆಗೆ ಶ್ರೀ ಕುವೆಂಪು ಅವರೇ ಉತ್ತರ ಕೊಟ್ಟಿದ್ದಾರೆ. ಕಥೆ ವಾಲ್ಮೀಕಿ ಯುಲಿದ ಕಥೆಯಾದರೂ ದರ್ಶನ ಶ್ರೀ ಕುವೆಂಪು ಅವರದೇ. ಅದಕ್ಕೂ ಇದಕ್ಕೂ ಇರುವ ಮುಖ್ಯವಾದ, ಗಣನೀಯವಾದ ಒಂದೇ ವ್ಯತ್ಯಾಸ ಆ, ಈ, ಕಾವ್ಯ ಗಳಲ್ಲಿರುವ 'ದರ್ಶನ!'

ಹಾಗಾದರೆ "ದರ್ಶನ" ಎಂದರೇನು? ಅದು ಹೇಗೆ ಸಿದ್ಧವಾಗುತ್ತದೆ? ಅದು ಏಕೆ ಮತ್ತು ಹೇಗೆ ಕಾವ್ಯಪ್ರತಿಮೆಯಾಗಿ ಅವತರಿಸುತ್ತದೆ? ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿದರೆ ಕೊಂಚಮಟ್ಟಿಗೆ ಶ್ರೀ ಕುವೆಂಪು ಅವರ ದರ್ಶನವೇನು? ಅದು ಈ ಮಹಾಕಾವ್ಯದಲ್ಲಿ ಹೇಗೆ ಪ್ರಕಾಶನಗೊಂಡಿದೆ? ಈ ದರ್ಶನಕ್ಕೂ ಶ್ರೀ

---

[2] 'ತಪೋನಂದನ'—ಶ್ರೀ ಕುವೆಂಪು ; ಪುಟ ೧೧೯.

[3] 'ಶ್ರೀ ರಾಮಾಯಣ ದರ್ಶನಂ', ಮಹಾಸಂಪುಟ ೧, ಪುಟ ೪, ಸಾ. ೧೦೦-೧೦೪.

ಅರವಿಂದ ದರ್ಶನಕ್ಕೂ ಏನಾದರೂ ಹೋಲಿಕೆ ಇದೆಯೆ? ಎಂಬುದನ್ನು ಗ್ರಹಿಸಲು ಸಾಧ್ಯವಾಗಬಹುದು.

'ದರ್ಶನ' ಎಂಬ ಪದಕ್ಕೆ ಅಪರೋಕ್ಷವಾಗಿ ಅನುಭವಿಸಿ ಕಾಣುವುದು, ಎಂದರ್ಥ. ಬುದ್ಧಿ, ಚಿಂತನ, ತರ್ಕ, ಅಥವಾ ಅವರಿವರ ಹೇಳಿಕೆ ಇವು ಯಾವ ಉಪಾಧಿಗಳೂ ಇಲ್ಲದೆ ನೇರವಾಗಿ ಗ್ರಹಿಸುವ ಶಕ್ತಿ 'ದರ್ಶನ.' 'ದರ್ಶನ'ದ ತರುವಾಯ ಚಿಂತನ. 'ಚಿಂತನ'ದ ತರುವಾಯ 'ವರ್ಣನ'. . . . ಜನ್ಮವೆತ್ತಿದ ಮೊದಲುಗೊಂಡು ಸುತ್ತಣ ಜನರಿಂದ, ಸನ್ನಿವೇಶಗಳಿಂದ, ಘಟನಾಪರಂಪರೆಗಳಿಂದ, ಪ್ರಕೃತಿಯಿಂದ, ಪುಸ್ತಕಗಳಿಂದ, ತನ್ನಲ್ಲಿಯೇ ಅಂತರ್ಗತವಾಗಿದ್ದು ಹೊರಗಣ ಘರ್ಷಣ ನಿಮಿತ್ತ ಮಾತ್ರದಿಂದ ಬಿರಿದೊಡೆದು ಹೊಳೆಯುವ ಆತ್ಮಾನುಭವಗಳಿಂದ ಅವನು ಅಸಂಖ್ಯ ಸಂಸ್ಕಾರಗಳನ್ನು ಪಡೆಯುತ್ತಾನೆ. ಆ ಸಂಸ್ಕಾರಸಮಷ್ಟಿಯ ಫಲರೂಪವಾಗಿಯೆ ಅವನ 'ದರ್ಶನ' ಸಿದ್ಧವಾಗುತ್ತದೆ.[4]

ಮಹಾಕವಿ ಕುವೆಂಪು:

"ಮಾನ್ಯ ಕುಪ್ಪಳಿ ವೆಂಕಟಪ್ಪಂಗೆ ಮೇಣ್ ಪೂಜ್ಯೆ
ಸೀತಮ್ಮನೆಂಬಭಿಧಾನದಾ ಮಾತೃದೇವತೆಗೆ"

ಸಂಭವಿಸಿದಂದಿನಿಂದ ಮೊದಲ್ಗೊಂಡು (ಬಹುಶಃ ಅದಕ್ಕಿಂತಲೂ ಹಿಂದೆ, ಅವರ ಪೂರ್ವಜನ್ಮಗಳ ಕಾಲದಿಂದಲೂ) ಹೊರಗಣ ಪ್ರಕೃತಿಸೌಂದರ್ಯಕ್ಕೂ, ಒಳಗಣ ಸಂಸ್ಕೃತಿಗೂ ನೆಲೆವೀಡಾದ ಮಲೆನಾಡಿನ ಜನರಿಂದ, ಪಶುಪಕ್ಷಿಮೃಗತತಿಗಳಿಂದ, ಗಿಡಬಳ್ಳಿಮರಹೂಗಳಿಂದ ಶ್ರೀರಾಮಕೃಷ್ಣಾಶ್ರಮದ ಸನ್ನಿವೇಶಗಳಿಂದ, ಮೈಸೂರು ವಿಶ್ವವಿದ್ಯಾನಿಲಯದ ಮಾತೃಪೋಷಣೆಯಿಂದ, ಹೀಗೆ ಇನ್ನೂ ಎನಿತೋ ಅಸಂಖ್ಯಾತ ಸನ್ನಿವೇಶ, ಸಂಸರ್ಗ, ಸಂಪರ್ಕಗಳಿಂದ ಉಂಟಾದ ಸುಸಂಸ್ಕಾರದ ಫಲರೂಪವಾಗಿ ಅವರ ದರ್ಶನ ಸಿದ್ಧವಾಗಿದೆ.[5]

ಅವರ 'ದರ್ಶನ' ಯಾವುದು? ಇದಕ್ಕೆ ಅವರೇ ಹೀಗೆ ಉತ್ತರ ಕೊಟ್ಟಿದ್ದಾರೆ. "ನನಗೆ ಗೊತ್ತು, ಇಲ್ಲಿ ಬಿದ್ದಿರುವ ಕಲ್ಲಿನಲ್ಲಿ (ಒಂಟಿಕೊಪ್ಪಲಿನ ಪಶ್ಚಿಮಕ್ಕಿರುವ ಬೋರೆಯ ಮೇಲೆ ನಿಂತು ಹೇಳಿದ ಮಾತು) ಆ ಗಿಡದಲ್ಲಿರುವ ಚೇತನದಷ್ಟೇ ಅದ್ಭುತವಾದ ಶಕ್ತಿ ಹುದುಗಿದೆಯೆಂದು. ಈ ಭಾವನೆಯಂತು ನನಗೆ ಚಿಕ್ಕಂದಿನಿಂದಲೂ ಅವರಿವರ ಉಪದೇಶವಿಲ್ಲದೆಯೇ ವೇದೋಪನಿಷತ್ತು ಗ್ರಂಥಗಳನ್ನು ಓದುವುದಕ್ಕೆ

---

4 'ತಪೋನಂದನ'—ಶ್ರೀ ಕುವೆಂಪು, ಪುಟ. ೧೧೧-೧೧೨.

5 ಈ ವಿಚಾರವಾಗಿ ಹೆಚ್ಚು ತಿಳಿಯಬಯಸುವವರು 'ಶ್ರೀ ಕುವೆಂಪು ಸಂದರ್ಶನ' ಎಂಬ ಪುಸ್ತಕದಲ್ಲಿ ಪುಟ ೨೫ ರಿಂದ ನೋಡಬಹುದು.

ಮುಂಚಿನಿಂದಲೂ ಬೆಳೆದುಬಂದಿದೆ. ಈ ಭಾವನೆ ನನ್ನ ರಕ್ತದಲ್ಲಿ ರಕ್ತವಾಗಿದೆ. ಯಾರು ಏನೇ ಹೇಳಲಿ ಈ ಮಾತು ಮಾತ್ರ ಸತ್ಯ."[6] ಇದೇ ಶ್ರೀ ಕುವೆಂಪು ದರ್ಶನ. "'ಈಶಾವಾಸ್ಯಮಿದಂ ಸರ್ವಂ' ಎಂಬ ಉಪನಿಷತ್ತಿನ ಮಂತ್ರದಲ್ಲಿಯೂ, 'ವಾಸುದೇವಃ ಸರ್ವಂ' ಎಂಬ ಭಗವದ್ಗೀತೆಯ ಶ್ಲೋಕದಲ್ಲಿಯೂ ಯಾವ ವಿರಾಡ್ದರ್ಶನದ ಅನುಭವ ಸೂಚಿತವಾಗಿದೆಯೋ ಆ 'ಸರ್ವಂ ಖಲ್ವಿದಂ ಬ್ರಹ್ಮ'ತ್ವವು"[7] ಶ್ರೀ ಕುವೆಂಪು ಅವರಿಗೆ ಅವರಿವರ ಉಪದೇಶವಿಲ್ಲದೆಯೇ, ಉಪನಿಷತ್ತು, ಗೀತೆಗಳನ್ನು ಓದುವುದಕ್ಕೆ ಮುಂಚೆಯೇ 'ಯಾವ ಉಪಾಧಿಗಳೂ ಇಲ್ಲದೆ' ಅಪರೋಕ್ಷವಾಗಿ ಅನುಭವವಾಗಿತ್ತು. ಹೀಗೆ ಅಪರೋಕ್ಷವಾಗಿ ಅನುಭವಿಸಿ ಕಂಡ ಕಾಣ್ಕೆಯನ್ನೇ 'ದರ್ಶನ' ಎನ್ನುವುದು. "ಅವನ ದರ್ಶನಕ್ಕೆ ಅವನ ಆತ್ಮಸಿದ್ಧಿ ಆಧಾರ. ಆ ಆತ್ಮಸಿದ್ಧಿ ಅಥವಾ ಸಾಕ್ಷಾತ್ಕಾರ ಎಷ್ಟು ಹಿರಿದಾಗಿದ್ದರೆ ಅವನ ಕೃತಿ ಅಷ್ಟು ಮಹತ್ತಾಗುತ್ತದೆ. 'ದರ್ಶನ'ದ ಔನ್ನತ್ಯ ಕೃತಿಯಲ್ಲಿ ಶಿರವೆತ್ತಿ ಗಗನಚುಂಬಿಯಾಗುತ್ತದೆ. ದರ್ಶನದ ವೈಶಾಲ್ಯ ಕೃತಿಯಲ್ಲಿ ಮೈದೋರಿ ವಿಶ್ವವ್ಯಾಪಿಯಾಗುತ್ತದೆ. ಕವಿಯ 'ದರ್ಶನ'ವು ವಿರಾಟ್ ಆದರೆ ಅವನ ಕೃತಿಯೂ ವಿರಾಟ್ ಪ್ರತಿಮೆಯಲ್ಲಿ ಅವತಾರ ತಾಳುತ್ತದೆ."[8]

ಹೀಗೆ ಸಿದ್ಧವಾದ ಕವಿಯ ದರ್ಶನ, ಕಾಣ್ಕೆ ಏಕೆ ಕಾವ್ಯಪ್ರತಿಮೆಯಾಗಿ ಅವತರಿಸುತ್ತದೆ? ಹೇಗೆ ಅವತರಿಸುತ್ತದೆ? ಇವು ಮುಂದಿನ ಪ್ರಶ್ನೆಗಳು. ಅತೀಂದ್ರಿಯಗಳಿಂದ ಕಂಡ ಕಾಣ್ಕೆಯನ್ನು ಕವಿ ತನ್ನಲ್ಲಿಯೇ ಅದುಮಿಟ್ಟುಕೊಳ್ಳುವುದು ಸಾಧ್ಯವಿಲ್ಲ. ಆ ಕಾಣ್ಕೆ ತಾನು ಬೇಡವೆಂದರೂ ಕೇಳದೆ ಹೇಗಾದರೂ ಮೂಡಿಯೇ ಮೂಡುತ್ತದೆ. ಶಿಲ್ಪಿಯ ಕಾಣ್ಕೆ ತನ್ನ ವಿಗ್ರಹಗಳ ಮೂಲಕವೂ, ಚಿತ್ರಕಾರನ ಕಾಣ್ಕೆ ಅವನ ಚಿತ್ರಗಳ ಮೂಲಕವೂ, ಸಂಗೀತಗಾರನ ಕಾಣ್ಕೆ ಅವನ ರಾಗದ ಮೂಲಕವೂ, ಕವಿಯ ಕಾಣ್ಕೆ ಅವನ ಕಾವ್ಯದ ಮೂಲಕವೂ ಮೂಡಿ ಬರಲೇಬೇಕು. ಅದನ್ನು ನಿಗ್ರಹಿಸುವುದು ಸಾಧ್ಯವೇ ಇಲ್ಲ.

ಆದರೆ, ಅತೀಂದ್ರಿಯಗೋಚರವಾದ ಆ 'ದರ್ಶನ'ವನ್ನು ಸೇಂದ್ರಿಯವನ್ನಾಗಿ ಮಾಡುವ ಬಗೆ ಹೇಗೆ? ಯಾವುದು ಬುದ್ಧಿ, ಚಿತ್ತ, ಮನಸ್ಸಿಗೆ ಮೀರಿ ನಿಂತಿದೆಯೊ, ಅದನ್ನು ಬುದ್ಧಿ ಚಿತ್ತ ಮನಸ್ಸುಗಳಿಗೆ ಗೋಚರಿಸುವಂತೆ ಮಾಡುವ ಬಗೆ ಹೇಗೆ? ಅದೇ ಎಲ್ಲ ಕಲೆಗಾರರ ನಿರಂತರವಾದ ಪ್ರಯತ್ನ—ಬಹು ಕಷ್ಟತರವಾದ ಪ್ರಯತ್ನ ಮತ್ತು ಸಾಹಸ! "ಕವಿ ತಾನು ಏರಿ ಮುಟ್ಟಿದ 'ದರ್ಶನ'ವನ್ನು ಇಳಿದು ಕಟ್ಟುತ್ತಾನೆ.

---

[6] ಶ್ರೀ ಕುವೆಂಪು ಸಂದರ್ಶನ, ಶ್ರೀ ದೇ. ಜವರೇಗೌಡರ ಸಂದರ್ಶನ, ಪುಟ ೩೧ (ದ್ವಿ. ಮುದ್ರಣ).

[7] 'ವಿಭೂತಿ ಪೂಜೆ'—ಶ್ರೀ ಕುವೆಂಪು, ಪುಟ ೧೧೫.

[8] 'ತಪೋನಂದನ'—ಶ್ರೀ ಕುವೆಂಪು—ಕಾವ್ಯವಿಮರ್ಶೆಯಲ್ಲಿ ಪೂರ್ಣದೃಷ್ಟಿ, ಪುಟ ೧೧೩.

ಉಪನಿಷತ್ತಿನ ಮಾತುಗಳನ್ನು ಉಪಯೋಗಿಸುವುದಾದರೆ, 'ಸ್ವಯಂಭು'ವಾದ ಕವಿ 'ಮನೀಷಿ'ಯಾಗಿ 'ಪರಿಭು'ವಾಗುತ್ತಾನೆ. ದರ್ಶನವು ಚಿಂತಸದಿಂದ ವರ್ಣಸಕ್ಕಿಳಿಯುತ್ತದೆ."[೨] ಏರಿ ಮುಟ್ಟಿದ ದರ್ಶನವನ್ನು ಪ್ರದರ್ಶಿಸಲು ಒಂದು ಯೋಗ್ಯನಿದರ್ಶನ ಬೇಕಾಗುತ್ತದೆ. ಆ ನಿದರ್ಶನ ಕವಿಯ ಕಾಲ, ದೇಶ, ಸಂನಿವೇಶ, ಮತ, ಸಂಸ್ಕೃತಿಗಳಿಗೆ ಅನುಗುಣವಾಗಿ ಬಂದೊದಗುತ್ತದೆ. ಈ ಕವಿಗೆ ತಮ್ಮ ದರ್ಶನವನ್ನು ಪ್ರದರ್ಶಿಸಲು ರಾಮಾಯಣವೇ ಸರಿಯಾದ ಮಹತ್ವಪೂರಿತವಾದ ನಿದರ್ಶನವೆಂದು ತೋರಿಬಂತು. ಅದನ್ನು ವಾಹನವನ್ನಾಗಿ ಮಾಡಿಕೊಂಡು ತಮ್ಮ ದರ್ಶನವನ್ನು ಪ್ರತಿಮಿಸಿದರು. ಅದು ಮಹಾಛಂದಸ್ಸಿನಲ್ಲಿ ಮೈವೆತ್ತು ಮೂಡಿತು. ರಾಮಾಯಣಾವತಾರವಾಯಿತು.

೨

'ಈಶಾವಾಸ್ಯಮಿದಂ ಸರ್ವಂ', 'ವಾಸುದೇವಃ ಸರ್ವಂ', 'ಸರ್ವಂ ಖಲ್ವಿದಂ ಬ್ರಹ್ಮ'—ಎಂಬುದೇ ಶ್ರೀ ಕುವೆಂಪುದರ್ಶನದ ಸಾರಸರ್ವಸ್ವ. ಬಹುಶಃ ಇದೇ ಎಲ್ಲ ಮಹಾಕವಿಗಳ ದರ್ಶನವೂ ಎನ್ನಬಹುದು. ಇದೇ ದರ್ಶನವನ್ನೇ ಪ್ರದರ್ಶಿಸಲು ತಮತಮಗೆ ಸಾಧ್ಯವಾದ, ಅನುಗುಣವಾದ ನಿದರ್ಶನಗಳನ್ನು ಆರಿಸಿಕೊಂಡರು. ಉಪನಿಷತ್ ಕವಿಗಳು ಮಂತ್ರಗಳ ಮೂಲಕವಾಗಿ, ಶಂಕರ, ಮಧ್ವ, ರಾಮಾನುಜ, ಬಸವ ಮುಂತಾದವರು ತಮ್ಮ ತಮ್ಮ ಸ್ತೋತ್ರಪದ್ಯಗಳಲ್ಲಿ, ಭಾಷ್ಯಗ್ರಂಥಗಳಲ್ಲಿ, ವಚನಗಳಲ್ಲಿ ಶ್ರೀ ರಾಮಕೃಷ್ಣರು ಸಾಮತಿ, ದೃಷ್ಟಾಂತಕತೆಗಳಲ್ಲಿ ತಮ್ಮ ತಮ್ಮ ದರ್ಶನವನ್ನು ಪ್ರದರ್ಶಿಸಿದರು. ಈ ಶತಮಾನದ ಮಹಾಯೋಗಿಗಳೂ, ಮಹಾಋಷಿಗಳೂ, ಮಹಾಕವಿಗಳೂ, ಮಹಾದಾರ್ಶನಿಕರೂ, ಮಹಾತತ್ತ್ವವೇತ್ತರೂ ಆದ ಶ್ರೀ ಅರವಿಂದರು ಕೂಡ ಕಂಡ ಕಾಣ್ಕೆ ಇದೇ : 'ಈಶಾವಾಸ್ಯಮಿದಂ ಸರ್ವಂ'; 'ಸರ್ವಂ ಖಲ್ವಿದಂ ಬ್ರಹ್ಮ'! ಅವರ ಈ ಕಾಣ್ಕೆಯನ್ನು ತಮ್ಮ ದಾರ್ಶನಿಕ ತತ್ತ್ವಗ್ರಂಥ 'ಲೈಫ್ ಡಿವೈನ್' (Life Divine) ಮೂಲಕವಾಗಿಯೂ, 'ಸಾವಿತ್ರಿ' ಎಂಬ ಮಹಾಕಾವ್ಯದ ಮೂಲಕವಾಗಿಯೂ ಪ್ರತಿಮಿಸಿದ್ದಾರೆ. 'ಲೈಫ್ ಡಿವೈನ್' ಮಹಾ ಉದ್ಗ್ರಂಥದಲ್ಲಿ ದರ್ಶನ ಕೇವಲ ದರ್ಶನವಾಗಿ ವ್ಯಕ್ತವಾಗಿದೆ. 'ಸಾವಿತ್ರಿ'ಯಲ್ಲಿ ಶ್ರೀ ಅರವಿಂದರ ದರ್ಶನ ಕಾವ್ಯರೂಪವನ್ನು ತಾಳಿ, ಧ್ವನಿತವಾಗುತ್ತದೆ.

ಆಗಿರುವುದೆಲ್ಲವೂ ಬ್ರಹ್ಮನೇ; ಎಲ್ಲದರಲ್ಲೂ ಬ್ರಹ್ಮನಿದ್ದಾನೆ—ಎಂಬ ಸತ್ಯವನ್ನು ಶ್ರೀ ಅರವಿಂದರಿಗಿಂತ ಹಿಂದೆ ಆದ ಅನೇಕ ಯೋಗಿಗಳೂ ಋಷಿಗಳೂ ಕಂಡಿದ್ದರು. ಆ ಮಾತನ್ನು ಸೂತ್ರಪ್ರಾಯವಾಗಿ—ಎಲ್ಲರೂ ಹೇಳಿದ್ದರು. ಆದರೆ ಕೇವಲ ಸತ್,

[೨] 'ತಪೋನಂದನ'—ಅದೇ ಲೇಖನ, ಪುಟ ೧೧೨.

ಚಿತ್, ಆನಂದಸ್ವರೂಪಿಯಾದ ಬ್ರಹ್ಮನು, ಅಸತ್, ಜಡ, ನಿರ್ಜೀವವಾಗಿ ವ್ಯಕ್ತ ವಾಗುವುದು ಹೇಗೆ? 'ಈಶಾವಾಸ್ಯಮಿದಂ ಸರ್ವಂ' ಎಂಬುದು ಸತ್ಯವಾದರೆ ನಾವು ತುಳಿವ ನೆಲವೂ, (ಪೃಥ್ವಿಯೂ) ಶೂನ್ಯವಾದ ಆಕಾಶವೂ ಒಂದೇ ಎಂದು ಹೇಳ ಬೇಕಾಗುತ್ತದೆ. ಆದರೆ ಜಡಚೇತನಗಳು ಒಂದೇ ಎಂಬುದನ್ನು ಎಂಥ 'ಮೂಢ'ನೂ ಒಪ್ಪಿಕೊಳ್ಳಲು ಸಿದ್ಧನಿರಲಿಲ್ಲ.

ಆದ್ದರಿಂದಲೇ, ಈ ರಾಜಿಯಾಗದ ಎರಡು ಧ್ರುವಗಳಷ್ಟು ಅಂತರವಿರುವ ಜಡ ಚೇತನಗಳೆರಡರಲ್ಲೂ—ಹಾಗೆಯೇ ಕತ್ತಲು ಬೆಳಕು, ಜ್ಞಾನ ಅಜ್ಞಾನ ಮುಂತಾದ ದ್ವಂದ್ವಗಳೆಲ್ಲದರಲ್ಲೂ—ಚಿನ್ಮಯ, ಚೇತನವೇ ಇದೆ ಎಂಬುದನ್ನು ಒಪ್ಪಿಕೊಳ್ಳಲಾರದ ಅದ್ವೈತಿಗಳು 'ಜಗನ್ಮಿಥ್ಯಾ' ತತ್ತ್ವವನ್ನು ಸೃಷ್ಟಿಸಿದರು. ಇದೆಲ್ಲವೂ ಬ್ರಹ್ಮವೆಂಬುದೇ ಸತ್ಯ. ಈ ಜಗತ್ತೆಂದು ತೋರುವುದೆಲ್ಲ ಕೇವಲ ಮಾಯೆ; ಮಿಥ್ಯೆ—ಎಂದು ಪ್ರತಿಪಾದಿ ಸಿದರು. ಆದರೆ ಶ್ರೀ ಅರವಿಂದರು ಮಾಯಾವಾದವನ್ನು ಒಪ್ಪಲಿಲ್ಲ. ಜಗತ್ತು ಮಿಥ್ಯೆ ಯೆಂದು ತುಚ್ಛೀಕರಿಸಲಿಲ್ಲ. ಬ್ರಹ್ಮನಿಂದಲೇ ಆದ ಈ ಜಗತ್ತು ಬ್ರಹ್ಮನಷ್ಟೇ ಸತ್ಯ, ಅಜ್ಞಾನವೂ ಜ್ಞಾನದ ಒಂದಂಶ, ಕತ್ತಲೂ ಬೆಳಕಿನಲ್ಲೇ ಇದೆ, ಜಡಚೇತನಗಳು ಸೃಷ್ಟಿಯೆಂಬ ನಾಣ್ಯದ ಎರಡು ಮುಖಗಳು, ಕಟ್ಟಿಗೆಯ ಎರಡು ತುದಿಗಳು ಎಂದು ಸಾರಿದ ವೀರದಾರ್ಶನಿಕರು. ಚಿನ್ನವು ಕೇವಲ ಗಟ್ಟಿಗಳ ರೂಪದಲ್ಲಿದ್ದಾಗ ಎಷ್ಟು ಸತ್ಯವಾದ ಚಿನ್ನವೋ ಹಾಗೆಯೇ ಅದರಿಂದ ಆಭರಣಗಳನ್ನು ಮಾಡಿದಾಗಲೂ ಅಷ್ಟೇ ಸತ್ಯ. ಇಷ್ಟುಮಾತ್ರವೇ ಅಲ್ಲ. ನಾವು ಜಡವೆಂದು ಭಾವಿಸಿದ ಎಲ್ಲದರಲ್ಲೂ ಸರ್ವಶಕ್ತ ಚೈತನ್ಯ ಸುಪ್ತವಾಗಿ, ಅವ್ಯಕ್ತವಾಗಿ ಅಡಗಿರುವುದಲ್ಲದೆ, ಅದು ವಿಕಸನ ಕ್ರಮದಿಂದ ಜಾಗ್ರತವಾಗುವುದು, ವ್ಯಕ್ತವಾಗುವುದೇ ಸೃಷ್ಟಿ ಉದ್ದೇಶ ಎಂದೂ ಕೇವಲ ವೈಜ್ಞಾ ನಿಕವಾಗಿ ತೋರಿಸಿಕೊಟ್ಟರು. ಜಡದಲ್ಲಿ ಜೀವ, ಜೀವದಲ್ಲಿ ಮನಸ್ಸು, ಮನಸ್ಸಿನಲ್ಲಿ ಅತಿಮನಸ್ಸು ಸುಪ್ತವಾಗಿ ಅಡಗಿದೆ. ಅದು ಜಾಗ್ರತವಾಗುವುದೇ ಸಾಧನೆ.

ಆದ್ದರಿಂದ, ಶ್ರೀ ಅರವಿಂದರು ಜಗತ್ತು ಮಿಥ್ಯೆಯೆಂದು, ಕ್ಲೇಶವೆಂದು, ಕೋಟಲೆ ಯೆಂದು, ದುಃಖವೆಂದು ಅದನ್ನು ತಿರಸ್ಕರಿಸಲಿಲ್ಲ. ಈ ಜಡಜಗತ್ತೂ ಆ ಚೈತನ್ಯ ಪುರುಷನಷ್ಟೇ ಸತ್ಯ—ಎಂದು ಕಂಡರು. ಈ ಜಡದಿಂದ ಜೀವವುದಿಸಿ, ಜೀವದಿಂದ ಮನಸ್ಸು ಉದ್ಭವಿಸಿ, ಇಂದು ಸೃಷ್ಟಿ ಒಂದು ನಿರ್ಣಾಯಕ ಘಟ್ಟಕ್ಕೆ ಬಂದು ನಿಂತಿದೆ. ಜಡದಿಂದ ಜೀವವುದಿಸಿದಾಗ ಸೃಷ್ಟಿ ಒಂದು ಮುಖ್ಯವಾದ ಘಟ್ಟವನ್ನು ಹತ್ತಿ ನಿಂತಿತು. ಅಂತೆಯೇ ಜೀವದಲ್ಲಿ ಮನಸ್ಸು ಹುಟ್ಟಿದಾಗ ಇನ್ನೊಂದು ಮಹತ್ವದ ಹೆಜ್ಜೆಯನ್ನಿಟ್ಟಿತು. ಈ ಸೃಷ್ಟಿ ಈಗ ಇನ್ನೊಂದು ಹೆಜ್ಜೆಯನ್ನಿಡಬೇಕಾಗಿದೆ. ಅದೇ ಅತಿಮನಸ್ಸಿನ ಸೃಷ್ಟಿ. ಆ ಅತಿಮನಸ್ಸಿನ ಅವತರಣಿಕೆಗಾಗಿಯೇ ಶ್ರೀ ಅರವಿಂದರು ತಮ್ಮ ಇಹಜೀವನದ

ಬಹುಭಾಗವನ್ನು ಸವೆಸಿದರು. ಲೋಕದ ಜನರನ್ನು ಜರಾಮರಣದ ಸುಖದುಃಖದ ಕೋಟಲೆಯಿಂದ ತಪ್ಪಿಸಲು ಅತಿಮನಸ್ಸಿನ ಅವತಾರವೇ ಸರ್ವಶ್ರೇಷ್ಠ ಪರಿಹಾರ ಎಂದು ಕಂಡರು ಶ್ರೀ ಅರವಿಂದರು. ಅತಿಮನಸ್ಸನ್ನು ಅವತರಿಸಿ ಭೂಮಿಯ ಮೇಲೆಯೇ ಸ್ವರ್ಗಸ್ಥಾಪನೆ ಮಾಡುವ ಕೃಪಾಕಾರ್ಯದಲ್ಲಿ ತೊಡಗಿದ್ದರು. ಈಗಲೂ ತೊಡಗಿದ್ದಾರೆ.

ಶ್ರೀ ಅರವಿಂದರಿಗಿಂತ ಹಿಂದೆ ಆಗಿಹೋದ ದಾರ್ಶನಿಕರಲ್ಲಿ ಬಹುಜನರು 'ಸ್ವರ್ಗ ಸ್ವರ್ಗವೇ; ಮರ್ತ್ಯ ಮರ್ತ್ಯವೇ! ಸ್ವರ್ಗ ಮರ್ತ್ಯಗಳೆರಡೂ ಕೂಡಲಾರವು'[10] ಎಂಬ ನಂಬುಗೆಯಿಂದ ತಮ್ಮ ಸಾಧನೆಯನ್ನು ಮುಂದುವರಿಸಿದರು. ಆದ್ದರಿಂದಲೇ ಹಿಂದಿನ ದಾರ್ಶನಿಕರು ಇಹವನ್ನು ತೊರೆದು ಪರದಲ್ಲಿಯೇ ರಮಿಸಲು ಹಾತೊರೆದರು. ಇಹವೆಂಬುದು ಮಿಥ್ಯೆ ಎಂದು ಅದನ್ನು ತಿರಸ್ಕರಿಸಿದರು. ಆದರೆ 'ಸ್ವರ್ಗಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ' ಎಂದು ಸಾರಿದ ಶರಣದಾರ್ಶನಿಕರು ಕೇವಲ ಕೈಬೆರಳಿನ ಮೇಲೆ ಎಣಿಸುವಷ್ಟು ಜನರು ಮಾತ್ರ. 'ಮರ್ತ್ಯವೆಂಬುದು ಕರ್ತಾರನ ಕಮ್ಮಟವಯ್ಯ' ಎಂಬುದನ್ನು ಶರಣರು ಸಾರಿದರು. ಆ ಸತ್ಯದ ಬುದ್ಧಿ ಸಮರ್ಪಕವಾದ ಪ್ರತಿಪಾದನೆ ಆದದ್ದು ಶ್ರೀ ಅರವಿಂದರ ಮಹಾಗ್ರಂಥ 'ಲೈಫ್ ಡಿವೈನ್' ನಲ್ಲಿಯೇ! ಆದ್ದರಿಂದಲೇ ಅವರನ್ನು ದಿವ್ಯಜೀವನದ ಆದ್ಯಪ್ರವರ್ತಕರು ಎಂದು ಕರೆಯುತ್ತಾರೆ.

ಮರ್ತ್ಯದಲ್ಲಿಯೇ ಸ್ವರ್ಗಸಂಸ್ಥಾಪನೆ ಮಾಡಬೇಕಾದವರು, ಮರ್ತ್ಯದಿಂದ ನುಣುಚಿಕೊಂಡು ಹೋಗಕೂಡದು. ತಾವು ಏರಿಮುಟ್ಟಿದ ದರ್ಶನದಂತೆ ಇಳಿದು ಮರ್ತ್ಯದಲ್ಲಿ ಬಾಳು ಕಟ್ಟಬೇಕು. ಅದಕ್ಕೆ ಕೇವಲ ಕೆಲವರು ಮಾತ್ರ ಮಾನಸಿಕವಾಗಿ ಪರಿವರ್ತನೆ ಹೊಂದಿದರೆ ಸಾಲದು. ಇದುವರೆಗೆ ಮಾನಸಿಕವಾಗಿ ಪಡೆದ ಚೇತನವನ್ನು ಇನ್ನು ಮೇಲೆ ಸೃಷ್ಟಿಯ ಅಂಗಾಂಗಗಳಲ್ಲೂ ಇಳಿಸಬೇಕು. ಅದರಿಂದ ಜಡವೇ ದೈವತ್ವವನ್ನು ಹೊಂದಬೇಕು (Divinization of the Vital). ಹೀಗೆ ಸೃಷ್ಟಿಯೆಲ್ಲವೂ ಚೇತನಸಿದ್ಧಿ ಪಡೆದಾಗ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬುದು ಸತ್ಯಸ್ಯ ಸತ್ಯವಾಗಿ ಎಲ್ಲರಿಗೂ ಅನುಭವವೇದ್ಯವಾಗುವುದು.

ಶ್ರೀ ಅರವಿಂದ ಮಹರ್ಷಿಗಳು ಕಂಡ ಈ ದರ್ಶನ—ಮರ್ತ್ಯವೇ ಸ್ವರ್ಗವಾಗಬೇಕು, ಸ್ವರ್ಗವಾಗುವುದು ಎಂಬುದು—ಮರ್ತ್ಯದಲ್ಲಿಯೇ ಸತ್ಯವಾಗುವುದು. ನಮ್ಮ

---

[10] 'In actual practice the conviction that usually guides the spiritual seeker after Truth is what may be put as: "Heaven is Heaven, Earth is Earth, and the twin shall never meet" Sri Aurobindo, the prophet of life divine, page 54, by Haridas Chundhuri, M.A., D.Phil.

ಕಣ್ಣಿಗೆ ಕಾಣಲಿ ಕಾಣದಿರಲಿ ; ಕೈಗೆ ತಾಕಲಿ ತಾಕದಿರಲಿ ; ಚಣಚಣವೂ ದಿನದಿನವೂ ಈ ಪರಿವರ್ತನಾಕಾರ್ಯ ಯುಗಯುಗಗಳಿಂದ ನಡೆಯುತ್ತಲೇ ಇದೆ.

> "ಹಾರೈಸಿ ಹಾರೈಸಿ ಹಾರೈಸಿ
>   ಅನ್ನ ತಾನಾದುದೈ ಪ್ರಾಣ ;
> ಹಾರೈಸಿ ಹಾರೈಸಿ ಹಾರೈಸಿ
>   ಹಾರಿದುದೊ ಸೀರಧಿಯ ಮೀನ !
> ಹಾರೈಸಿ ಹಾರೈಸಿ ಹಾರೈಸಿ
>   ಪ್ರಾಣಿಗುದಿಸಿತು ಮನೋಜ್ಞಾನ ;
> ಹಾರೈಸಿ ಹಾರೈಸಿ ಹಾರೈಸಿ
>   ಸಿದ್ಧಿಯಾಯ್ತಾತ್ಮ ವಿಜ್ಞಾನ !—"[11]

ಈ ಕವಿತೆಯಲ್ಲಿ ಶ್ರೀ ಅರವಿಂದ ದರ್ಶನ ಸಿದ್ಧಿಯ ಕ್ರಮ ನಿಚ್ಚಳವಾಗಿ ನಿರೂಪಿತವಾಗಿದೆ. ನಾವು ತಿಳಿಯಲಿ ತಿಳಿಯದಿರಲಿ, ನಿಧಾನವಾಗಿಯಾದರೂ ಸೃಷ್ಟಿ ಆತ್ಮಸಿದ್ಧಿಯ ಕಡೆಗೆ ಸಾಗುತ್ತಿದೆ. ಈ ಸಿದ್ಧಿಗೆ ಯಾವುದು ಅನುಗುಣವೋ ಸಹಾಯಕವೋ ಅನಿವಾರ್ಯವೋ ಅದು ಅವನ ಇಚ್ಛೆಯಂತೆ ಬಂದೊದಗುತ್ತದೆ ; ಸಹಾಯಕವಾಗುತ್ತದೆ ; ಸೃಷ್ಟಿಯ ಘಟನೆಗಳೆಲ್ಲವೂ ನಡೆಯುತ್ತವೆ. ಯಾವುದು ಮನುಷ್ಯಬುದ್ಧಿಗೆ ಅಯೋಗ್ಯವೂ ಅನಿಷ್ಟವೂ ಅಮಂಗಳಕರವೂ ಆಗಿ ತೋರುವುದೋ ಅದು ಆ ಸರ್ವಜ್ಞನ ದೃಷ್ಟಿಯಲ್ಲಿ, ತಾನಿಟ್ಟುಕೊಂಡ ಗುರಿಯ ಸಾಧನೆಯಲ್ಲಿ (ಹಾರೈಸಿ ಹಾರೈಸಿ ಅನ್ನಮಯದಿಂದ ಆನಂದಮಯದ ವರೆಗೆ ಏರಿ ಆತ್ಮಸಿದ್ಧಿ ಮಾಡಿಕೊಳ್ಳುವ ಗುರಿಯ ಸಾಧನೆಯಲ್ಲಿ) ಯೋಗ್ಯವೂ, ಇಷ್ಟವೂ, ಪರಮ ಮಂಗಳಕರವೂ ಆಗಬಹುದು. ಅದನ್ನು ಮರ್ತ್ಯ ತರ್ಕ, ಮರ್ತ್ಯಬುದ್ಧಿಯಿಂದ 'ಸರಿತಪ್ಪು' ಎಂದು ನಿಷ್ಕರ್ಷಿಸುವುದು ಮರ್ತ್ಯನೀತಿಗೆ ಸರಿಯಾಗಬಹುದು, ಆದರೆ ಇಚ್ಛಾಶಕ್ತಿ ಇಟ್ಟುಕೊಂಡ ಗುರಿಯ ಸಿದ್ಧಿಯ ರೀತಿಗೆ ಅದೆಲ್ಲವೂ—ಮನುಷ್ಯನ 'ಸರಿತಪ್ಪು' ಎಂಬ ತೀರ್ಮಾನವು—ಕೇವಲ ಕ್ಷುಲ್ಲಕ !

ಅಂದ ಮೇಲೆ ಯಾರು ಬೇಡವೆಂದರೂ ಕೇಳದೆ ಸೃಷ್ಟಿಯೆಲ್ಲವೂ—ಅದೆಷ್ಟೇ ಮಂದಗತಿಯಲ್ಲಿ ಆಗಲೊಲ್ಲದೇಕೆ—ಆತ್ಮಸಿದ್ಧಿಯ ಕಡೆಗೆ ಚಣಚಣವೂ ಸಾಗುತ್ತಿದೆ. ನಾವು ಈ ಸಿದ್ಧಿಕಾರ್ಯದಲ್ಲಿ ಪ್ರಜ್ಞಾಪೂರ್ವಕವಾಗಿ ಭಾಗಿಗಳಾಗಲಿ, ಆಗದಿರಲಿ ಅದು ನಡೆದೆ ಇದೆ. ಆದರೆ, ಈ ಕಾರ್ಯದಲ್ಲಿ ನಾವು ಪ್ರಜ್ಞಾಪೂರ್ವಕವಾಗಿ ಪಾಲ್ಗೊಳ್ಳಬೇಕಾಗಿದೆ ; ಸಹಕರಿಸಬೇಕಾಗಿದೆ. ಅದನ್ನೇ ಶ್ರೀ ಅರವಿಂದರು, 'ಸ್ವರ್ಗ

---

11 'ಅಗ್ನಿಹಂಸ' (ಕವನಸಂಗ್ರಹ) ಶ್ರೀ ಕುವೆಂಪು, "ಹಾರೈಸು" ಎಂಬ ಕವನ, ಪುಟ ೮೯.

ಸಾಮ್ರಾಜ್ಯಕ್ಕೆ ಲಗ್ಗೆಹಾಕಿ ಸ್ವಾಧೀನಪಡಿಸಿಕೊಳ್ಳಬೇಕಾಗಿದೆ'[12] ಎಂದು ಹೇಳು ತ್ತಿದ್ದರು. ಅದಕ್ಕೆ ಪೂರ್ಣಯೋಗವೇ ದಾರಿ ಹಾಗೂ ಗುರಿ ಎಂದು ಹೇಳಿದ್ದಾರೆ.

ಶ್ರೀ ಅರವಿಂದ ದರ್ಶನದ ಸ್ಥೂಲಸ್ವರೂಪ ಇಂಥದು. ಅವರ ಮಹಾ ದಾರ್ಶನಿಕ ಉದ್ಗ್ರಂಥ 'ಲೈಫ್ ಡಿವೈನ್'ನಲ್ಲಿ ತಮ್ಮ ಕಾಣ್ಕೆಯನ್ನು ಇತರರಿಗೂ ಕಾಣಿಸುವ ಕೃಪಾಕಾರ್ಯವನ್ನು ಮಾಡಿದ್ದಾರೆ. ಅತಿಮನಸ್ಸಿನಿಂದ ಮಾತ್ರ ಗೋಚರಸಾಧ್ಯವಾದ ಆ ಭಾಷೆಗೆ ಸಿಲುಕದ ದರ್ಶನವನ್ನು ಅತಿಜಡಮನಸ್ಸಿನ ಮಾನವನಿಗೂ ಲಭ್ಯವಾಗುವಂತೆ ಈ ಮಹಾಗ್ರಂಥದಲ್ಲಿ ಭೌತಿಕಭಾಷೆಯಲ್ಲಿ ವಿವರಿ ಸಿದ್ದಾರೆ. ಎಂಥ ಹೆಳವನೂ ಹತ್ತಬಹುದಾದಷ್ಟು ಪುಟ್ಟ ಪುಟ್ಟ ಮೆಟ್ಟಲುಗಳನ್ನು ಕಟ್ಟಿ; 'ಈಶಾವಾಸ್ಯಮಿದಂ ಸರ್ವಂ' ಎಂಬ ಸತ್ಯವನ್ನು ಬುದ್ಧಿ ಒಪ್ಪುವಂತೆ ವಿವರಿ ಸಿದ್ದಾರೆ. ಇದೇ ದರ್ಶನವನ್ನೇ ಶ್ರೀ ಅರವಿಂದರು 'ಸಾವಿತ್ರಿ'ಯಲ್ಲಿ ಕಾವ್ಯಮಯ ವಾಗಿ ಹಾಡಿದ್ದಾರೆ; ಶ್ರೀ ಕುವೆಂಪು ಶ್ರೀ ರಾಮಾಯಣ ದರ್ಶನದಲ್ಲಿ ಮೂಡಿಸಿದ್ದಾರೆ.

೩

'ಇಲ್ಲಿ ಬಿದ್ದಿರುವ ಈ ಕಲ್ಲಿನಲ್ಲಿ, ಆ ಗಿಡದಲ್ಲಿರುವ ಚೇತನದಷ್ಟೇ ಅದ್ಭುತವಾದ ಶಕ್ತಿ ಹುದುಗಿದೆ' ಎಂಬ ಶ್ರೀ ಕುವೆಂಪು ಅವರ ದರ್ಶನ ಶ್ರೀ ರಾಮಾಯಣದ ಉದ್ದಕ್ಕೂ ಧ್ವನಿತವಾಗುತ್ತದೆ.

ಶ್ರೀ ರಾಮಲಕ್ಷ್ಮಣರು ವಿಶ್ವಾಮಿತ್ರಮುನಿಯೊಡನೆ ತಪೋವನಕ್ಕೆ ಬರುತ್ತಾರೆ. ಚಿರಪರಿಚಿತವಾದ ವನವಾದರೂ ದಾರಿತಪ್ಪಿ ರಾತ್ರಿಯೆಲ್ಲವೂ ಅಲೆಯುತ್ತಾರೆ, ಬೆಳ ಗಾಗುತ್ತದೆ. ಋಷಿವನ ಸದೃಶ ಕಾನನವೊಂದು ಕಾಣಿಸುತ್ತದೆ. ಅದನ್ನು ಹೊಗು ತ್ತಾರೆ. ಆದರೆ

> 'ತಾಯಿ ಕೌಸಲ್ಯೆ
> ಗೋಳಿಡುತೆ ತನ್ನ ಪೆಸರಂ ಪಿಡಿದು ಕರೆವವೊಲ್
> ಕಲ್ಗಳಿಂ ಪುಲ್ಗಳಿಂ ಮರಮರದ ಹೃದಯದಿಂ
> ಮೂಡಿ ಕೇಳ್ದುದು ಸಂಕಟಂ ರಾಮನೊರ್ವಂಗೆ'[13]

ಅದನ್ನು ಕೇಳಿದ ಶ್ರೀ ರಾಮಚಂದ್ರನಿಗೆ ಭಾವಸಮಾಧಿಯುಂಟಾಗುತ್ತದೆ. ಭಾವ ಸಮಾಧಿಯಲ್ಲೇ ನೃತ್ಯದಲ್ಲಿ ತೊಡಗುತ್ತಾನೆ. ಮುಂದೆ ಮುಂದೆ ನಡೆಯುತ್ತಾನೆ. ಎದುರಿಗೆ 'ಕಲ್ಬಂಡೆಯೊಂದು' ಬಿದ್ದಿರುತ್ತದೆ. ಅದರ ಸುತ್ತಲು ಬಿದಿರ್ಮೆಳೆ ಬೆಳೆದಿರುತ್ತದೆ. ಆಗ

[12] "Seize the Kingdom of Heaven by Storm."
[13] ಶ್ರೀ ರಾಮಾಯಣ ದರ್ಶನಂ, ಪ್ರಥಮ ಸಂಪುಟ, ಪುಟ ೩೬, ಸಾ. ೨೩೩.

'ಋಷಿಕೃಪಾವಚನದೊಲ್ ರಾಮನೇರ್ದನು ಬಂಡೆಯಂ,
ಲಾಸ್ಯಮಂ ತೊಡಗಿ.'

ಆಗ ಏನಾಯಿತು?

'ಒಯ್ಯನೆ ಚರಣ ಚುಂಬನಕೆ
ಕಲ್ಲೆ ತಾಂ ಬೆಣ್ಣೆಯಾಯ್ತೆನೆ ಕಂಪಿಸಿತು ಬಂಡೆ,
ಪ್ರೇಮ ಸಾಮೀಪ್ಯದಿಂ ಸಾನ್ನಿಧ್ಯದಿಂ ಮತ್ತೆ
ಸಂಸರ್ಗದಿಂ ತಲ್ಲಣಂಗೊಳ್ಳುವಬಲೆಯೋಲ್.
ಬಿಲ್ಲು ಬೆರಗಾಗಿ ನೆರೆದವರೆಲ್ಲರೀಕ್ಷಿಸಿರೆ,
ಬೆಂಗದಿರನುರಿಗೆ ಕರ್ಪೂರಶಿಲೆಯಂತೆವೋಲ್
ದ್ರವಿಸಿತಾ ಕರ್ಬಂಡೆ: ದಿವ್ಯ ಮಾಯಾ ಶಿಲ್ಪಿ
ಕಲ್ಪನಾ ದೇವಿಯಂ ಕಲ್ಲಸೆರೆಯಂ ಬಿಡಿಸಿ
ಕೃತಿಸಿದನೆನಲ್, . . . . . .
. . . . ನಿಂದುದೊಂದು ತಪಸ್ವಿನೀ ವಿಗ್ರಹಂ,'[14]

ಗೌತಮಮುನಿಯ ಶಾಪದಿಂದ ಕಲ್ಲಾಗಿ ಬಿದ್ದಿದ್ದ ಅಹಲ್ಯೆ ಶ್ರೀ ರಾಮಚಂದ್ರ ಚರಣ ಸ್ಪರ್ಶದಿಂದ ಉದ್ಧಾರವಾಗಿ ಪೂರ್ವರೂಪು ಪಡೆದಳು ಎಂಬುದು ಕಥೆ. ಆದರೆ ಚೈತನ್ಯ ಭರಿತಳಾದ ಸ್ತ್ರೀ ಕಲ್ಲಾಗುವುದು ಸಾಧ್ಯವೆ? ಕಲ್ಲಾದವಳು ಮತ್ತೆ ಚೇತನವಾದಾಳೆಯೆ? 'ತತ್ಕಾಲದ ಲೋಕಧರ್ಮವೇ ಪರಮಪ್ರಮಾಣವೆಂದು ಭಾವಿಸುವ ಕೆಲವು ಆಧುನಿಕರಿಗೆ' ಈ ಅಹಲ್ಯೋದ್ಧಾರ ಪ್ರಸಂಗ ಕೇವಲ ಕಟ್ಟುಕಥೆಯಾಗಿ ತೋರಬಹುದು!

ಆದರೆ 'ಈಶಾವಾಸ್ಯಮಿದಂ ಸರ್ವಂ' ಎಂಬ ಸತ್ಯದರ್ಶನವಾದ ಕವಿಗೆ ಇದು ಕೇವಲ ಸತ್ಯವಾದ ಕಥೆ! ಕೇವಲ ಚೈತನ್ಯಸ್ವರೂಪಿಯೂ ಆನಂದಸ್ವರೂಪಿಯೂ ಅವ್ಯಕ್ತನೂ ಆದ ಕೇವಲ ಬ್ರಹ್ಮನು ಅತ್ಯಂತ ಮೃಣ್ಮಯವಾಗಿ ಜಡವಾಗಿ ವ್ಯಕ್ತವಾಗಿರುವುದನ್ನು ನಾವು ನೋಡುತ್ತಿಲ್ಲವೆ? ಕೇವಲ ಬ್ರಹ್ಮನು, ಆಕಾಶವಾಗಿ, ಆಕಾಶದಿಂದ ವಾಯುವಾಗಿ, ವಾಯುವಿನಿಂದ ಅಗ್ನಿಯಾಗಿ, ಅಗ್ನಿಯಿಂದ ಅಪ್ ಆಗಿ ಅಪ್ಪುವಿನಿಂದ ಪೃಥ್ವಿಯಾಗಿ, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯಗಳೆಂಬ ಪಂಚಕೋಶಗಳನ್ನು ಹೊದ್ದು ಸೃಷ್ಟಿ ಉಂಟಾಗಿಲ್ಲವೆ? ಆನಂದಮಯವೇ ಅನ್ನಮಯವಾಗಿದೆ. 'ಅನ್ನಮಯಮಾನಂದಮಯವನೊಳ'ಗೊಂಡಿದೆ. ಸಚ್ಚಿದಾನಂದ ಚೈತನ್ಯವು ತನ್ನ ಸ್ವಸ್ವರೂಪದ ಮರವೆಯಿಂದ ಕಲ್ಲಾಗಿ ಬಿದ್ದಿರುವುದು ಈಗ ವೈಜ್ಞಾನಿಕ ಸತ್ಯವೂ ಆಗಿದೆ. ಅಹಲ್ಯೆ ತನ್ನ ಪತಿಯ ಶಾಪದಿಂದ ತನ್ನ ಸ್ವಸ್ವರೂಪವನ್ನು ತ್ಯಜಿಸಿ (ಮರೆತು) ಕಲ್ಲಾಗಿ ಬಿದ್ದಿದ್ದುದರಲ್ಲಿ ಆಶ್ಚರ್ಯವೇನು?

[14] ಶ್ರೀ ರಾ. ದ. ಪ್ರಥಮ ಸಂಪುಟ, ಪುಟ ೩೮, ಸಾಲು. ೨೭೯ ರಿಂದ ೨೮೮.

ಹೆಟ್ಟುಕತೆಯೆಲ್ಲಿದೆ? ಅಂದಮೇಲೆ, ಚೇತನ, ಕಲ್ಲಾದ ಮಾತ್ರಕ್ಕೆ ಅದರ ಸ್ವಭಾವ, ಸ್ವಗುಣವನ್ನು ಸಂಪೂರ್ಣ ತೊರೆಯಿತೆಂದಲ್ಲ. ವ್ಯಕ್ತವಾಗಿದ್ದ ಚೇತನ, ಅವ್ಯಕ್ತವಾಗಿ, ಸುಪ್ತವಾಗಿ ಜಡದಲ್ಲಿ ಮಲಗಿ ನಿದ್ರಿಸುತ್ತಿರುತ್ತದೆ. ಅದು ಕ್ರಮೇಣ, ಕ್ರಮೇಣ ತನ್ನ ಪಂಚಕೋಶಗಳನ್ನೂ ಹರಿದೊಗೆದು ಆನಂದಮಯದಲ್ಲಿ ಲೀನವಾಗಿಯೇ ಆಗುವುದು. ಯಾರು ಬೇಡವೆಂದರೂ ಅದು ನಿಲ್ಲುವುದಿಲ್ಲ. ಕಲ್ಲು, ಮಣ್ಣಾಗಿ, ಮರವಾಗಿ, ಖಗವಾಗಿ, ಮೃಗವಾಗಿ, ವಾನರನಾಗಿ, ನರನಾಗಿ, ನಾರಾಯಣನಾಗಲೇಬೇಕು. ಆದರೆ ಗುರುಕೃಪೆಯಾದಾಗ, ಕಲ್ಲು ನೇರವಾಗಿ ನಾರಾಯಣನೇ ಆಗಬಹುದು!

ಇಲ್ಲಿ ಅಹಲ್ಯೋದ್ಧಾರದ ಕಥೆಯಲ್ಲಿ ಆದುದೂ ಹೀಗೆಯೇ!

'ಕಲ್ಲಾದರೇನ್?
ತೀವ್ರತಪದಿಂದೆ ಚೇತನ ಸಿದ್ಧಿಯಾಗದೇಂ
ಜಡಕೆ? ಕಲ್ಲಾದ ಪೆಣ್ಣರಕೆ ತಾಂ ಕೌಶಿಕಗೆ
ಬಟ್ಟೆದಪ್ಪಿಸಿ ಸೆಳೆಯದೇನಿಹುದೆ, ಪೇಳ್, ಚರಣಮಂ
ಶ್ರೀ ರಾಮನಾ?'[15]

ತೀವ್ರ ತಪದಿಂದ ಭಗವತ್ ಕೃಪೆಯುಂಟಾಗಿಯೇ ಆಗುತ್ತದೆ. ಆಗ ಭಗವಂತ ತಪದ ಕರೆಗೆ ಓಗೊಟ್ಟು ಎಲ್ಲಿಂದಲಾದರೂ ಬಂದೇ ಬರುತ್ತಾನೆ. ಅವನ ಪ್ರೇಮಮಯ ಸಾಮೀಪ್ಯದಿಂದ, ಸಾನ್ನಿಧ್ಯದಿಂದ, ಸಂಸರ್ಗದಿಂದ ಚೇತನಸಿದ್ಧಿಯಾಗದೆ ಇರುತ್ತದೆಯೆ? ಆದರೆ ಅಹಲ್ಯೆಗಿದ್ದಂತಹ ಹಾರೈಕೆ ಬೇಕು. 'ಸ್ವರ್ಗಸಾಮ್ರಾಜ್ಯವನ್ನು ಲಗ್ಗೆಹಾಕಿ ವಶಪಡಿಸಿಕೊಳ್ಳುವ ಅಹಲ್ಯಾಕಾಂಕ್ಷೆ ಬೇಕು!'

ಈ ರಾಮಾಯಣ ದರ್ಶನದ ಇದೊಂದೇ ಪ್ರಸಂಗದಲ್ಲಿ ಶ್ರೀ ಅರವಿಂದ ದರ್ಶನದ ಸಾರಸರ್ವಸ್ವವೇ ಪ್ರತಿಮಿತವಾಗಿದೆ. ಕೇವಲ ಕಲ್ಲಾಗಿ ಬಿದ್ದಿದ್ದ ಮೃತಮೃಣ್ಮಯಕ್ಕೆ ಗುರುಕೃಪೆಯಿಂದ, ಭಗವತ್ ಪಾದಸ್ಪರ್ಶದಿಂದ—ಚೇತನವುದಿಸುವುದು ಸಾಧ್ಯ, ಸತ್ಯ ಎಂಬುದಾದರೆ ಸೃಷ್ಟಿಯ ವಿಕಸನಕ್ರಮದಲ್ಲಿ ಕಲ್ಲಿಗಿಂತಲೂ ಉನ್ನತಮಟ್ಟದಲ್ಲಿ—ಅನ್ನಮಯ ಮಟ್ಟದಿಂದ ಮೇಲಿನ ಮಟ್ಟದಲ್ಲಿರುವ ಪ್ರಾಣಮಯ, ಮನೋಮಯ ಭೂಮಿಕೆಗಳಲ್ಲಿರುವ ಖಗಮೃಗವಾನರರು ಚೇತನಸಿದ್ಧಿ ಪಡೆಯಲಾರರೆ?

ಅದನ್ನು ಶ್ರೀ ರಾಮಾಯಣ ದರ್ಶನದ ಇನ್ನೊಂದು ಪ್ರಸಂಗದಿಂದ ನಾವು ಕಾಣಬಹುದು. ಕಲ್ಲಿಗಿಂತಲೂ ಖಗ, ವಿಕಸನಕ್ರಮದಲ್ಲಿ ಎಷ್ಟೋ ಮೆಟ್ಟಲುಗಳು ಮೇಲೆ ಇದೆ. ಅಂತೆಯೇ ಅದಕ್ಕೆ ಚೇತನಸಿದ್ಧಿ, ಕಲ್ಲಿಗಿರುವಷ್ಟು ಕಷ್ಟವಲ್ಲ, ದೀರ್ಘವಲ್ಲ. ಈ ಸತ್ಯವನ್ನು ಜಟಾಯುವಿನ ಆಖ್ಯಾನದಿಂದ ನಾವು ಗ್ರಹಿಸಬಹುದು.

---

[15] ಶ್ರೀ ರಾ. ದ. ಮಹಾಸಂಪುಟ ೧, ಪುಟ ೩೯, ಸಾ. ೨೯೭.

ಇದೇ ಸತ್ಯವೇ ಮಾರೀಚನ ಮೃಗಶರೀರ ಛೇದನೆಯಲ್ಲಿ, ಶಬರಜ್ಜಿಯ ಮುಕ್ತಿಯಲ್ಲಿ, ವಾಲಿಯ ವಧೆಯಲ್ಲಿ, ರಾವಣನ ಸಂಹಾರದಲ್ಲಿ—ವಿವಿಧ ಭೂಮಿಕೆಗಳಲ್ಲಿ ವ್ಯಕ್ತವಾಗಿದೆ. ಕೇವಲ ತಮೋಗುಣ ರಜೋಗುಣ ಪ್ರಧಾನವಾಗಿರುವ ರಾವಣ, ರಾಮಾಸ್ತ್ರತತಿಯಿಂದ ತನ್ನ ರಾವಣತ್ವವನ್ನು ಉಳಿದು ರಾಮತ್ವವನ್ನು ಪಡೆಯುವುದನ್ನು ಕಾಣುತ್ತೇವೆ. ಹಾಗೆಯೇ ಸತ್ವಗುಣಪ್ರಧಾನವಾಗಿದ್ದ ವಿಭೀಷಣಸುಗ್ರೀವರು ಶ್ರೀ ರಾಮಚಂದ್ರನ ಸತ್ಯದಿಂದ ಚೇತನಸಿದ್ಧಿ ಪಡೆದುದನ್ನು ಕಾಣುತ್ತೇವೆ. ಕೊನೆಗೆ ಪರಬ್ರಹ್ಮ ಪುರುಷಸ್ವರೂಪಿಯೇ ಆದ ಶ್ರೀ ರಾಮಚಂದ್ರನೂ, ಪ್ರಕೃತಿರೂಪಿಣಿಯಾದ ಸೀತಾಮಾತೆಯೂ ತಮಗೆ ಸುತ್ತಿದ್ದ ಮಾಯೆಯನ್ನು ಹರಿದೊಗೆದು ತಮ್ಮ ಸ್ವಸ್ವರೂಪವನ್ನು ಮರಳಿ ಪಡೆದ ಕಥೆಯನ್ನೇ ಶ್ರೀ ರಾಮಾಯಣ ದರ್ಶನದಲ್ಲಿ ಕಾಣುತ್ತೇವೆ.

೪

ಸೀತಾದೇವಿಯನ್ನು ರಾವಣ ಎತ್ತಿಕೊಂಡು ಹೋಗುತ್ತಾನೆ. ಶ್ರೀ ರಾಮಚಂದ್ರ, ಪಂಚವಟಿಯಲ್ಲಿ ಸೀತಾದೇವಿ ಇಲ್ಲದುದನ್ನು ನೋಡಿ "ಓ ಸೀತೆ! ಓ ಸೀತೆ! ಓ ಸೀತೆ! ಓ ಓ ಸೀತೆ" ಎಂದು ಬೊಬ್ಬೆಯಿಟ್ಟು ಕೂಗುತ್ತಾನೆ. ಅವನ ಆ ಕೂಗಿನಿಂದಲೇ "ಮರುದನಿಗಳೆದ್ದುವಯ್ ಮರದಿಂದೆ ಗಿಡದಿಂದೆ ಲತೆಯಿಂದೆ ನದಿಯಿಂದೆ ಪರ್ವತಾರಣ್ಯಂಗಳಿಂದೆ. ದಶದಶಕೋಟಿ ಕಂಠಂಗಳಿಂದೆ ದೆಸೆದೆಸೆ ತಲ್ಲಣಿಸುವಂತೆ ಕೂಗಿತನುಕಂಪದಿಂ ಸೃಷ್ಟಿ." ಆ ಮರುದನಿಯನು ಆಲಿಸಿದ ಶ್ರೀ ರಾಮ:

'ಕಂಡೆಯಾ,
ಸೌಮಿತ್ರಿ, ಮೈಥಿಲಿಯ ಮಾಯೆಯಂ. ಪುಸಿಯಲ್ತು
ದಿಟಮಾಕೆ ಭೂಮಿಜಾತೆಯೆ ವಲಂ.
. . . . . . . . . . . . . ಶೈಲಗತೆ
ತಾನೊರ್ಮೆ, ಕಾಂತಾರಗತೆಯೊರ್ಮೆ, ತರುಗತೆಯೊರ್ಮೆ;
ಒರ್ಮೆ ಖಗಗತೆ, ಒರ್ಮೆ ಮೃಗಗತೆ, ತರಂಗಗತೆ
ಇನ್ನೊರ್ಮೆ! ಒರ್ಮೆ ಖಂಜನ ಪಕ್ಷಿ ಕೂಜಿತಳ್;
ಒರ್ಮೆ ಕೋಕಿಲ ಕಂಠ ಭಾಷಿತಳ್. ಅದೊ ಅಲ್ಲಿ
ಸುಸಮೀರ ಲೋಲ ಕುಸುಮಿತ ಲತಾ ರಾಜಿತಳ್;
ಇದೊ ಇಲ್ಲಿ . . . ಕಣ್ಬನಿಗರೆವೆಯೇಕೆ, ಲಕ್ಷ್ಮಣಾ?'' [16]

---

[16] ಶ್ರೀ ರಾ. ದ. ಮಹಾಸಂಪುಟ ೧, ಪುಟ ೨೫೩, ಸಾ. ೬೮೧.

ರಘುವರನ ಈ ವರ್ತನೆ ಉನ್ಮಾದನೆಂದು ಲಕ್ಷ್ಮಣ ಹೇಳುತ್ತಾನೆ. ಆದರೆ, ರಘುರಾಮ ‘ಉನ್ಮಾದ’ದಲ್ಲಿಯೇ ಸತ್ಯಸ್ಯಸತ್ಯವನ್ನು ಕಾಣುತ್ತಾನೆ! ಮಹಾಮಾತೆ, ಕಾಳಿ, ಪ್ರಕೃತಿಯ ಸಕಲ ಚರಾಚರಗಳಲ್ಲೂ ಇದ್ದಾಳೆ—‘ಸರ್ವಂ ಖಲ್ವಿದಂ ಬ್ರಹ್ಮ’ “ಈಶಾವಾಸ್ಯಮಿದಂ ಸರ್ವಂ” ಎಂಬ ಸತ್ಯ ಇದಕ್ಕಿಂತಲೂ ಉತ್ತಮವಾಗಿ ಪ್ರದರ್ಶನಗೊಳ್ಳುವುದು ಹೇಗೆ ಸಾಧ್ಯ? ಶ್ರೀ ರಾಮಚಂದ್ರನ ‘ಉನ್ಮಾದ’ ದಿವ್ಯೋನ್ಮಾದವೆಂದೇ ಹೇಳಬೇಕಾಗುತ್ತದೆ. ಶ್ರೀ ಕೃಷ್ಣನಿಗಾಗಿ ಗೋಪಿಯರಿಗೆ ಬಂದೊದಗಿದ್ದ ಮಧುರಭಾವವೇ ಶ್ರೀ ರಾಮನಿಗೆ ಒದಗಿತ್ತು ಎಂದರೆ ತಪ್ಪೇನಿದೆ?

ಇಲ್ಲಿ ಶ್ರೀ ರಾಮಚಂದ್ರ ಸೀತೆಯನ್ನು ಕಳೆದುಕೊಳ್ಳುತ್ತಾನೆ. ಎಂದರೆ, ಕೇವಲ ಪುರುಷೋತ್ತಮನಾದ ಶ್ರೀ ರಾಮಚಂದ್ರನಿಗೆ ಚೈತ್ಯಸಂಪ್ರಜ್ಞೆ ಕಳೆದುಹೋಗುತ್ತದೆ. ಶ್ರೀ ರಾಮಚಂದ್ರನಿಗೆ ತನ್ನ ಸ್ವಸ್ವರೂಪದ ಮರವೆ ಉಂಟಾಗುತ್ತದೆ. ಮತ್ತೆ ಆ ಚೈತ್ಯಸಂಪ್ರಜ್ಞೆಯನ್ನು ಹುಡುಕಿ ಕಂಡುಕೊಳ್ಳಬೇಕು. ಆಕೆ, ರಾವಣನ ಅವಿದ್ಯಾಮಾಯೆಯಲ್ಲಿ ಸುಪ್ತಚಿತ್ತದ ಗುಪ್ತತಿಮಿರದ ಸೆರೆಯಲ್ಲಿ ಬಂಧಿತಳಾಗಿದ್ದಾಳೆ. ಆ ಚೈತ್ಯಸಂಪ್ರಜ್ಞೆ ರಾಮನನ್ನು ಬಿಟ್ಟಗಲಿರುವ ವರೆಗೆ ಶ್ರೀ ರಾಮಚಂದ್ರನಿಗೆ ಮಾಯೆ ಮುಸುಕಿದೆ. ಆ ಮಾಯೆಯನ್ನು ತಾನೇ ಸಾಧನೆಯ ಮೂಲಕ, ದಂಡಕಾರಣ್ಯದಿಂದ ಲಂಕೆಯ ವರೆಗೆ ದುರ್ಗಮವಾದ ದಾರಿಯನ್ನು ಬಳಸಿ, ನಿಸ್ಸೀಮವಾದ ಸಾಗರವನ್ನೇ ದಾಟಿ, ಸೀತೆಯನ್ನು ವರಿಸಬೇಕು. ತಾನೂ ಚೇತನಸಿದ್ಧಿಯನ್ನು ಪಡೆಯಬೇಕು. ಆಗ ದಶರಥನ ಸೂನು ಶ್ರೀ ರಾಮನಾಗುತ್ತಾನೆ.

ಹೀಗೆ ಸೃಷ್ಟಿಯೆಲ್ಲವೂ ಚೇತನಸಿದ್ಧಿಯ ಕಡೆಗೆ ಧಾವಿಸುತ್ತಿರುವುದನ್ನು ಶ್ರೀ ರಾಮಾಯಣ ದರ್ಶನದಲ್ಲಿ ನೋಡುತ್ತೇವೆ. ಈ ಮುಖ್ಯಗುರಿಯನ್ನು ಸಾಧಿಸಲು ಯಾವ ಯಾವ ಘಟನೆ ನಡೆಯಬೇಕೋ ಅವೆಲ್ಲವೂ ಅವನೇ ನಿರ್ಧರಿಸಿದ ಕ್ರಮದಲ್ಲಿ ನಡೆಯಲೇಬೇಕು; ಅದರಂತೆ ನಡೆದೂ ನಡೆಯುತ್ತದೆ. ಅದನ್ನು ‘ಸರಿತಪ್ಪು’ ಎಂದು ನಾವು ಹೇಳುವಂತಿಲ್ಲ.

ಶ್ರೀ ರಾಮಚಂದ್ರನನ್ನು ಅಡವಿಗಟ್ಟುವ ಪ್ರಸಂಗವು, ಮರ್ತ್ಯಬುದ್ಧಿ, ಮರ್ತ್ಯತರ್ಕ, ಮರ್ತ್ಯರೀತಿ ನೀತಿಗಳಿಗೆ ತೀರಾ ಅಪ್ರಿಯವಾದ, ಅನಿಷ್ಟವಾದ, ಅಮಂಗಳಕರವಾದ ಘಟನೆ. ಒಂದು ಅರ್ಥದಲ್ಲಿ ನಮ್ಮ ದೃಷ್ಟಿಯಲ್ಲಿ ‘ಅಧರ್ಮ’ವೂ ಕೂಡ. ಆಗ ಲಕ್ಷ್ಮಣನಂತೆ:

> “. . . ಕಾಮಾಂಧವಶನಾಗಿ ಲಂಪಟನೊರ್ವ
> ಮತಿಗೆಟ್ಟ ಮುಪ್ಪು ದೊರೆ ಹೆಂಗುಸೊರ್ವಳ ಪದಕೆ
> ದಾಸನಾಗುರುಳಿದರೆ, ಪೂಜ್ಯನೀ ರಾಮಚಂದ್ರಂ

ರಾಜ್ಯಮಂ ತ್ಯಜಿಸಿ ವಿಪಿನಾಂತರದ ವಾಸಮಂ
ಕೈಕೊಳ್ವುದೇಕೆ?" [17]

ಎಂದು ನಾವೂ ಸಿಡಿಮಿಡಿಗೊಳ್ಳುತ್ತೇವೆ. ಆದರೆ ದಶರಥನ ಆತ್ಮಜ ಶ್ರೀ ರಾಮಚಂದ್ರನಾಗಬೇಕೆಂಬ ಸೃಷ್ಟಿನಿಯಮ ನೆರವೇರಬೇಕಾಗಿದ್ದರೆ ರಾಮ ಅಡವಿಗೆ ಹೋಗಲೇಬೇಕಾಗಿತ್ತು. ಅದನ್ನು ಕಂಡ ಕವಿ

"ಕರೆದವಿದ್ಯಾಮಾಯೆಯಿಂ ಬೆಸಸಿದನು ವಿಧಿ:
ವಿಭೂತಿಯಾವಿಷ್ಕಾರ ಸಾಧನಾರ್ಥಂಬೇಗಮಾ
ಕೈಕೆಯಾತ್ಮಂಬೊಕ್ಕು ರಚಿಸು ವಿನ್ಯಾಸಮಂ"! [18]

ಎಂದೂ

"ಬೆರಳಿಚದ ಕೂರ್ಮೊನೆಯ ಮಿಡಿವ ಹಿಂಸೆಗೆ ತಂತಿ ತಾಂ
ಬೀಣೆಯಿಂಚರವೀಯುವಂತೆ, ನೀನುಗುರಾಗಲಾ
ವೈಣಿಕ ವಿಧಿಯ ಕೈಗೆ, ಪುಣ್ಮೆದತ್ತಿಂಪಾಯ್ತು ಮೇಣ್
ಭಗವದ್ ರಸಧಿಯಾಯ್ತು ರಾಮಾಯಣ ಬೃಹದ್‌ಗೀತೆ!" [19]

ಎಂದೂ ಹಾಡುತ್ತಾರೆ. ಶ್ರೀ ರಾಮಚಂದ್ರನಲ್ಲಿ ವಿಭೂತಿಯಾವಿಷ್ಕಾರವಾಗಬೇಕಾಗಿತ್ತು. ನಿತ್ಯರಾಮನೊಬ್ಬನು ಮೂಡಬೇಕಾಗಿತ್ತು. ಆ ಕಾರ್ಯವನ್ನು ಈಶ್ವರಶಕ್ತಿ ತನಗೆ ಬೇಕಾದ ರೀತಿಯಲ್ಲಿ ನೆರವೇರಿಸಿಕೊಳ್ಳುತ್ತದೆ. ಇದೂ ಶ್ರೀ ಅರವಿಂದ ದರ್ಶನಕ್ಕೆ ಅನುಗುಣವಾಗಿದೆ.

೫

ಶ್ರೀ ಅರವಿಂದ ದರ್ಶನಕ್ಕೂ ಇತರ ದರ್ಶನಗಳಿಗೂ ಅತ್ಯಂತ ಮುಖ್ಯವಾದ ಮಹತ್ವವಾದ ವ್ಯತ್ಯಾಸವೆಂದರೆ; 'ಸ್ವರ್ಗ ಮರ್ತ್ಯವೆಂಬುದು ಬೇರಿಲ್ಲ ಕಾಣಿರೋ' ಎಂಬುದು. ಜಗತ್ತು, ಜೀವ, ದೇಹಗಳೆಂಬುವು ಅತೀತಲೋಕಕ್ಕೆ ಹತ್ತಲು ಉಪಯೋಗವಾಗುವ ನಿಚ್ಚಣಿಕೆ ಎಂದೂ, ಅತೀತಾವಸ್ಥೆಗೆ ಸಂದ ಮೇಲೆ ಅವುಗಳನ್ನು ಕಡೆಗೊದ್ದು ಕಡೆಗಣಿಸಬಹುದೆಂದೂ ಹಿಂದಿನ ಬಹುಜನ ದಾರ್ಶನಿಕರು ಬಗೆದಿದ್ದರು. ಆ ಮನೋಭಾವ, 'ಬ್ರಹ್ಮಸತ್ಯ, ಜಗನ್ಮಿಥ್ಯಾ' ಎಂಬುದಕ್ಕೆ ಅನುಗುಣವೂ ಆಗಿದ್ದಿತು. ಆದರೆ ಶ್ರೀ ಅರವಿಂದ ದರ್ಶನದಲ್ಲಿ ಇಹವೂ ಪರದಷ್ಟೇ ಸತ್ಯ. ಇಹವಿಲ್ಲದೆ ಪರ ಇರಲಾರದು—ಎಂಬುದು ಅದರ ವೈಶಿಷ್ಟ್ಯ. ಈ ದರ್ಶನಸಾರ ಶ್ರೀ ರಾಮಾಯಣ ದರ್ಶನಂ ಮಹಾ

---

[17] ಶ್ರೀ ರಾ. ದ. ಪ್ರಥಮ ಮಹಾಸಂಪುಟ, ಪುಟ ೮೦, ಸಾ. ೬೪ ರಿಂದ.

[18] ಅದೇ, ಪುಟ ೭೩, ಸಾ. ೫೦೭.

[19] ,, ಪುಟ ೧೧೧, ಸಾ. ೩೦೫.

ಕಾವ್ಯದಲ್ಲಿ ಮೈವೆತ್ತುದನ್ನು ನಾವು ಅಲ್ಲಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಅಂಥ ಒಂದು ಪ್ರಸಂಗವನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಿದ್ದೇವೆ.

ಇಂದ್ರಜಿತುವಿನ ಇಂದ್ರಜಾಲತಂತ್ರದಿಂದ ಸೃಷ್ಟಿಸಲ್ಪಟ್ಟ ಅಗ್ನಿಚಕ್ರದಲ್ಲಿ ಲಕ್ಷ್ಮಣ ಕಾಲಿಡುತ್ತಾನೆ. "ಬ್ರಹ್ಮಾಂಡಮೊಡೆದುದೊ ಸಿಡಿಲ್ಗೆಸಲ್ ಸದ್ದುದು ಲಕ್ಷ್ಮಣ ಕಳೇಬರಂ ಸಿಡಿದು ಕೆಡೆದುದು ಸೀದ ಶವದಂತೆ." ಕೆಲವೇ ನಿಮಿಷಗಳಲ್ಲಿ ಲಕ್ಷ್ಮಣನ ಕಳೇಬರ:

'ಗುರುತಿಸಲ್ಕಸದಳಮೆನಲ್ಕೆ ರವಿವಂಶಜನ
ಮೆಯ್ಯಗ್ಗದರ್ದತ್ತು ಕಾಜಾಣವಕ್ಕಿಯ ಗರಿಯ
ಕಾಡಿಗೆಯ ಕರ್ಪುಬಣ್ಣಂ. ಪಿಸುಳ್ದಂತೆವೋಲ್
ಕಣ್‌ಬರಳ್ ಪೊರಪೊಣ್ಮೆ ವಿಕೃತವಾದುದು ವದನ
ಮಂಡಲಂ. ಬೆಳ್ಪೆಸೆಯುತಲ್ಲಲ್ಲಿ ಸುಲಿದ ಮೆಯ್
ಪೇಸಿದೊಲ್ ಸೋರ್ದತ್ತು ಗಾಯಂಗಳಿಂದೊಸರಿ
ದುರ್ನಿರ್ಗಳಂ"[20]

ಆಗ ಲಕ್ಷ್ಮಣನನ್ನು ಎಚ್ಚರಿಸಲು ಮಾಂತ್ರಿಕ ಮಹಾಭಿಷಗ್ ಗುರು ಸುಷೇಣ ಪರೀಕ್ಷೆಮಾಡಿ ಓಷಧೀಯಂತ್ರವನ್ನು ತಂದುಕೊಟ್ಟರೆ ರಾಮಾನುಜ ಬದುಕುತ್ತಾನೆಂದೂ ಯಾರಾದರೂ ಕೈಲಾಸ ಋಷಭಾದ್ರಿಗಳ ಮಧ್ಯೆ ಇರುವ ಆ ಓಷಧೀ ಲತೆಯ ಬೇರುಗಳನ್ನು ತರಬೇಕೆಂದು ಸೂಚಿಸುತ್ತಾನೆ. ಆಗ ಆಂಜನೇಯ, 'ನಾನು ಹೋಗಿ ತರುತ್ತೇನೆ' ಎಂದು ಹೇಳುತ್ತಾನೆ. 'ಅನ್ನಮಯ ಕಾಲದೇಶದ ಜಗನ್ಮಾರ್ಗದಿಂ' ಹೋಗಿಬರಲು ದಿನದಿನಗಳಾಗುವವು. ಆದಕಾರಣ 'ಮನೋಮಯ ಮಾರ್ಗದಿಂ' ಹೋಗೆಂದು ಸೂಚಿಸುತ್ತಾನೆ. ಆಂಜನೇಯ ಈ ಸೂಚನೆಯಂತೆ, ಅನ್ನಮಯ ಕೋಶವನ್ನು ತ್ಯಜಿಸಿ, ಪ್ರಾಣಮಯ ರೂಪವನ್ನು ಬೀಳ್ಕೊಂಡು, ಮನೋಮಯ ಸಾತ್ತ್ವಿಕಾಕಾಶಕ್ಕೆ ಚಿದಾಕಾರವನ್ನು ಧರಿಸಿ ಹೊಗುತ್ತಾನೆ! ಅಲ್ಲಿ ಅವನಿಗಾದ ಅನುಭವವನ್ನು ಯಾವ ಕವಿ ಬಣ್ಣಿಸಬಲ್ಲನು? ಆದರೆ ಮಹಾಕವಿ ಕುವೆಂಪು ಹೀಗೆ ವರ್ಣಿಸುತ್ತಾರೆ:

"ತಾನೆಲ್ಲವಾದಂತೆ ಮೇಣ್
ತನ್ನೊಳಾದಂತೆಲ್ಲಮುಂ ವಿರಾಣ್‌ಮನನಾಗಿ

---

[20] ಶ್ರೀ ರಾ. ದ. ದ್ವಿತೀಯ ಮಹಾಸಂಪುಟ, ಮಡಿದನಿಂದ್ರಜಿತು ಇಂದ್ರಾಸ್ತ್ರದಿಂ, ಪುಟ ೭೧೯, ಸಾ. ೮೩.

ತನ್ನ ಸಿದ್ಧಿಗೆ ತಾನೆ ಬೆರಗಾದನಂಜನಾ
ಪ್ರಿಯಕುಮಾರಂ . . .
. . . ದಿವ್ಯಾನುಭವಕೆ ರಸವಶಿಯಾಗಿ "[21]

ಆ ದಿವ್ಯಾನುಭವದಲ್ಲಿ, ತನ್ನ ಯೋಗತಪಶ್ಯಕ್ತಿಯನ್ನು, ಹೀಗೆ ಅಲ್ಪ ಕಾರ್ಯಕ್ಕಾಗಿ—ಒಬ್ಬ ಲಕ್ಷ್ಮಣನ ಪ್ರಾಣವನ್ನುಳಿಸುವ ಅಲ್ಪ ಕಾರ್ಯಕ್ಕಾಗಿ—ಉಪಯೋಗ ಮಾಡಬೇಕಾದುದನ್ನು ನೆನೆದು :

" ಭೂಮವಿರೆ
ಅಲ್ಪಸಾಹಸಕಾತ್ಮಮಂ ನಿವೇದಿಸುವೆನ್ನ ಈ
ಮೂರ್ಖತೆಗೆ ಧಿಕ್ಕಾರ ! ತೊರೆವೆನಾ ಅಲ್ಪಮಂ ;
ಕೈಕೊಳ್ವೆನೊಂದನೀ ಭೂಮಸಾಧನೆಗಳಲಿ
ಮೇಲಾದುದಂ ! "[22]

ಸ್ವಪ್ನಸಿದ್ಧಿಯ ಲೋಭ ಆಂಜನೇಯನಿಗೆ ಆವರಿಸಿತು. ಆಗ ಆಂಜನೇಯನ ವಿವೇಕ ಎಚ್ಚರಿಸಿ :

" ಲೋಕಲೀಲೆಗೊಪ್ಪಿಗೆಯಿತ್ತು
ಆ ಲೋಕಕ್ಕೈತರಲ್ ಲೀಲೆ ಕೊನೆಗೊಳ್ಳುವಾ
ಮುನ್ನಮಲ್ಲಿಂದನ್ಯಲೋಕಕಾಶಿಸುವವನೆ
ನಿತ್ಯಬದ್ಧಂ. ಲೋಕಮಾವುದಾದೊಡಮೇನ್ ?
ಪೆಚ್ಚುರ್ಗೆ ಕಡಮೆಗಳೊಳವೆ ಸಚ್ಚಿದಾನಂದದೀ
ಲೀಲಾ ವಿನೋದದೊಳ್ ?"[23]

ಎಂಬ ಆತ್ಮವಾಣಿ ಕೇಳುತ್ತದೆ. ಈ ಸಾಲುಗಳಲ್ಲಿ ಶ್ರೀ ಕುವೆಂಪು ಶ್ರೀ ಅರವಿಂದ ದರ್ಶನದ ಬಹು ಮುಖ್ಯವಾದ ಅಂಶವನ್ನು ಪ್ರತಿಮಿಸಿದ್ದಾರೆ. ಆಲೋಕವಾದರೇನು ? ಈಲೋಕವಾದರೇನು ? ಎರಡೂ ಸಚ್ಚಿದಾನಂದದ ಲೀಲಾ ವಿನೋದಗಳೇ ! ಅದೇ ಸತ್ಯ ; ಇದು ಮಿಥ್ಯೆ ಎಂದು ಹೇಳುವುದು ಖಂಡ ಮನಸ್ಸಿನ ಖಂಡದೃಷ್ಟಿ ! ಅದು ಅಸತ್ಯವಲ್ಲದಿದ್ದರೂ, ಅರೆಸತ್ಯವಾಗುತ್ತದೆ. ಶ್ರೀ ಅರವಿಂದರದು ಪೂರ್ಣ ಯೋಗ ; ಪೂರ್ಣ ಸತ್ಯ ! ಅದೇ ದರ್ಶನ ಸತ್ಯವೇ ಶ್ರೀ ರಾಮಾಯಣ ದರ್ಶನದಲ್ಲಿ ಮೂಡಿದೆ.

---

[21] ಶ್ರೀ ರಾ. ದ. ದ್ವಿ-ಸಂಪುಟ, ಪುಟ ೭೨೩, ಸಾ. ೩೮೬.
[22] ಶ್ರೀ ರಾ. ದ. ದ್ವಿ-ಸಂಪುಟ, ಪುಟ ೭೨೪, ಸಾ. ೪೨೫.
[23] ಶ್ರೀ ರಾ. ದ. ದ್ವಿ-ಸಂಪುಟ. ಪುಟ ೭೨೫, ಸಾ. ೪೩೨ ರಿಂದ.

೬

ಸೃಷ್ಟಿಯೆಲ್ಲವೂ ಅನ್ನಮಯದಿಂದ ಆನಂದಮಯದ ವರೆಗೆ ಕ್ರಮೇಣ ಕ್ರಮೇಣ ವಿಕಸನಗೊಂಡು ಲೋಕದಲ್ಲಿ ಅತಿಮನಸ್ಸು ಅವತರಿಸುವುದು ಎಂಬ ಶ್ರೀ ಅರವಿಂದ ದರ್ಶನದ ಮತ್ತೊಂದು ಮಹತ್ವ ಸತ್ಯ. ಇದು ಶ್ರೀ ರಾಮಾಯಣ ದರ್ಶನದಲ್ಲಿ ಹೇಗೆ ರೂಪಿತವಾಗಿದೆ ಎಂಬುದನ್ನು ನೋಡೋಣ.

ರಾವಣನ ವಧೆಯಾದನಂತರ ಸೀತಾಮಾತೆಯನ್ನು ಲಂಕೆಯಿಂದ ಕರೆತಂದು ಶ್ರೀ ರಾಮಚಂದ್ರನ ಮುಂದೆ ನಿಲ್ಲಿಸುತ್ತಾರೆ. ಆಗ ಶ್ರೀ ರಾಮ: 'ಮೂರ್ಖೆ ನೀನೆಲ್ಲಿಗಾದೊಡಂ ತೊಲಗು' ಎಂದು ನಿಷ್ಠುರವಾಗಿ ನುಡಿಯುತ್ತಾನೆ. ಆ ಮಿಥ್ಯಾಪವಾದಕ್ಕೆ ಸಿಲುಕಿ ಬದುಕಿರಲಾರದೆ ಸೀತಾದೇವಿ ಅಗ್ನಿಪ್ರವೇಶ ಮಾಡುತ್ತಾಳೆ. ಅವಳು ಅಗ್ನಿಪ್ರವೇಶ ಮಾಡಿದುದು: 'ಮಂಗಳಾಜ್ಯಾಹುತಿಯವೋಲ್,' ಇತ್ತು. ಅವಳು ಧಗಧ್ಧಗಿಸುವ ಉಜ್ವಲ ಅಗ್ನಿಪ್ರವೇಶ ಮಾಡುವುದನ್ನು ಸಾಕ್ಷಿಯಂತೆ ನೋಡುತ್ತ ನಿಂತಿದ್ದ ಶ್ರೀ ರಾಮಚಂದ್ರ, ಇದ್ದಕ್ಕಿದ್ದಂತೆ ಅದೇ ಅಗ್ನಿ ಮಧ್ಯದಲ್ಲಿಯೆ ಮರೆಯಾಗುತ್ತಾನೆ. ಆಗ ಮುಂದಾದುದನ್ನು ಕವಿ ಕುವೆಂಪು ಹೀಗೆ ಹಾಡಿದ್ದಾರೆ:

> ಪೇಳ್ವೆನೇಂ
> ಮುನ್ನಡೆದುದಂ? ಸೇಂದ್ರಿಯಕತೀಂದ್ರಿಯಂ ತನ್ನ
> ಪೆರ್ಬಾಗಿಲಂ ತೆರೆದುದೆನೆ ಕೇಳ್ದುದನಿಬರಿಂಗೆ,
> ಅಸಂಖ್ಯೇಯ ಗೀರ್ವಾಣ ಕಂಠಸ್ವನಂವೆರಸಿ
> . . . . . . . .
> ನಯನೇಂದ್ರಿಯಂ
> ತಾಂ ಕಂಡುದನ್ನೆಗಂ ಕಾಣದಿರ್ದಚ್ಚರಿಯ
> ವರ್ಣಂಗಳಂ: ಮಣ್ ತನ್ನ ಜಾಡ್ಯವನುಳಿದು
> ಕಾಂತಿಮಯವಾಯ್ತು. ವಿವಿಧಜ್ಯೋತಿಗಳನುಣ್ಮಿ
> ಮಿರುಗತೊಡಗಿದವು ಕಲ್. ಮರ್ತ್ಯತೆಯನುಳಿದುವೆನೆ
> ವರ್ಣಶಿಲ್ಪಿಯ ರುಚಿರ ಸೌಂದರ್ಯಗಳನಾಂತು
> ತರುಗಳುಂ ಸೂಸಿದುವು ಚಿನ್ಮಯ ಸುಗಂಧಮಂ,'[24]

ಅಗ್ನಿಗೆ ಆಜ್ಯವು ಆಹುತಿಯಾದಂತೆ ಸೀತಾಮಾತೆ ಅಗ್ನಿಪ್ರವೇಶ ಮಾಡಿದಳು. ತುಪ್ಪವನ್ನು ಅಗ್ನಿಯಲ್ಲಿ ಸುರಿದಾಗ ಅದು ಮರಳಿ ಬರಲಾರದು. ಆದರೆ ಇಲ್ಲಿ ಸೀತೆ ಮರಳಿ ಬರುತ್ತಾಳೆ. ಹಾಗಾದರೆ ಈ ಉಪಮಾನ ಸರಿಯೆ? ಬೆಂಕಿಯಲ್ಲಿ ಸುಟ್ಟು

[24] ಶ್ರೀ ರಾ. ದ. ದ್ವಿ-ಮಹಾಸಂಪುಟ, ಪುಟ ೮೪೬, ಸಾಲು ೫೧೮ ರಿಂದ ೫೩೪.

ಹೋದ ತುಪ್ಪಕ್ಕೂ ಬೆಂಕಿಯಿಂದ ಹೊರಬಂದ ಸೀತೆಗೂ ಸಾಮ್ಯವೆಲ್ಲಿದೆ? ಎಂದು ಕೇಳಬಹುದು.

ಯಜ್ಞದ ಕಾಲಕ್ಕೆ ಅಗ್ನಿಯಲ್ಲಿ ಸುರಿದ ತುಪ್ಪ ಸುಟ್ಟುಹೋಯಿತು ಎಂಬುದು ಒಂದರ್ಥದಲ್ಲಿ ನಿಜ. ಆದರೆ ಇನ್ನೊಂದು ಅರ್ಥ—ಅದೇ ನಿಜವಾದ ಅರ್ಥ—ದಲ್ಲಿ ಅದು ಸುಳ್ಳು. ಯಾಕೆಂದರೆ ತುಪ್ಪವನ್ನು ಅಗ್ನಿಗೆ ಸುರಿದಾಗ ಸುಟ್ಟುಹಾಕುವುದು ಉದ್ದೇಶವಲ್ಲ. ಅದು ಭಗವಂತನಿಗೆ ಅರ್ಪಿತವಾಗಲಿ ಎಂಬುದು ಉದ್ದೇಶ. ಅದು ಹವಿಸ್ಸಾಗಿ ಭಗವಂತನಿಗೆ ಅರ್ಪಿತವಾಗುತ್ತದೆ. ಆದರೆ ಇನ್ನೊಂದು ಪರಿವರ್ತಿತ ರೂಪದಲ್ಲಿ. ಆದರೆ ತುಪ್ಪ ಸಂಪೂರ್ಣ ಸುಟ್ಟೇಹೋಗಿಲ್ಲ. ಇನ್ನೊಂದು ರೂಪದಲ್ಲಿ ಅವನಿಗೆ ಅರ್ಪಿತವಾಗಿದೆ.

ಹಾಗೆಯೇ ಇಲ್ಲಿಯೂ ಕೂಡ, ಸೀತಾದೇವಿ ಮರ್ತ್ಯಳಾಗಿ ಅಗ್ನಿಪ್ರವೇಶ ಮಾಡಿ ಅಮರ್ತ್ಯಳಾಗಿ—ಸಂಪೂರ್ಣ ಪರಿವರ್ತನೆ ಹೊಂದಿ—ಹೊರಬರುತ್ತಾಳೆ. ಶ್ರೀ ರಾಮಚಂದ್ರನು ಅಗ್ನಿಪ್ರವೇಶ ಮಾಡಿದುದು ಸೀತೆಯನ್ನು ಉದ್ಧರಿಸಲೆಂದು—ಪ್ರಕೃತಿಯನ್ನು ಉದ್ಧರಿಸಲು ಪುರುಷನು ಕೃಪೆಗೈಯ್ಯುವಂತೆ! ಅವರಿಬ್ಬರೂ ಅಗ್ನಿಯಿಂದ ಹೊರಗೆ ಬಂದಾಗ ಮೊದಲಿನ ಸೀತಾರಾಮರಾಗಿರಲಿಲ್ಲ. "ಶ್ರೀಮದ್ ದಿವ್ಯ ದೇಹದಿಂ, ದಿವ್ಯ ಮಾಲ್ಯಾಂಬರಗಳಿಂ ದಿವ್ಯ ತೇಜದಿಂ ಶೋಭಿಸುತ್ತಿರ್ದ"ರು.

ಲೋಕದಲ್ಲಿ ಅತಿಮನಸ್ಸು ಅವತರಿಸಿದಾಗ ಏನಾಗುತ್ತದೆ ಎಂದು ಶ್ರೀ ಅರವಿಂದರು ತಮ್ಮ ದರ್ಶನದಲ್ಲಿ ಕಂಡು ಹೇಳಿದ್ದಾರೆಯೋ ಅದೇ ಶ್ರೀ ರಾಮಾಯಣ ದರ್ಶನದ ಈ ಪ್ರಸಂಗದಲ್ಲೂ ಆಗಿರುವುದು! ಆಗ ಮರ್ತ್ಯದಲ್ಲಿಯೇ ಸ್ವರ್ಗ ಸ್ಥಾಪನೆಯಾಗುತ್ತದೆ. ಕಲ್ಲು ಮಣ್ಣು ಮರ ಮುಂತಾದವುಗಳೆಲ್ಲವೂ ಚೇತನಭರಿತವಾಗುತ್ತವೆ!

೭

ಶ್ರೀ ರಾಮಾಯಣ ದರ್ಶನದಲ್ಲಿ ಶ್ರೀ ಅರವಿಂದ ದರ್ಶನ ಧ್ವನಿಪೂರ್ಣವಾಗಿ ನಿರೂಪಿತವಾಗಿದೆ. ಈಗ ನಾವು ಶ್ರೀ ರಾಮಾಯಣ ದರ್ಶನವನ್ನು ಇಲ್ಲಿ ಅರ್ಥಮಾಡಿಕೊಡುವ ರೀತಿಯಲ್ಲಿ ಅಷ್ಟೇ ಸ್ಪಷ್ಟಮಾತುಗಳಲ್ಲಿ ಕವಿ ರಚಿಸಿದ್ದರೆ ಅದು ಕಾವ್ಯವಾಗುತ್ತಿರಲಿಲ್ಲ; ದರ್ಶನಗ್ರಂಥವಾಗುತ್ತಿತ್ತು. ದರ್ಶನಗ್ರಂಥಕ್ಕೂ ಕಾವ್ಯಕ್ಕೂ ಇರುವ ವ್ಯತ್ಯಾಸ, "ಲೈಫ್ ಡಿವೈನ್" ಮತ್ತು "ಸಾವಿತ್ರಿ"ಗಳಿಗಿರುವಷ್ಟು ವ್ಯತ್ಯಾಸ!

ಇದನ್ನೆಲ್ಲ ಬುದ್ಧಿಪೂರ್ವಕವಾಗಿ ಶ್ರೀ ಕುವೆಂಪು ರಚಿಸಿದರೆಂದು ಭಾವಿಸಬಾರದು. ಶ್ರೀ ರಾಮಾಯಣ ದರ್ಶನವನ್ನು ಅರ್ಧದಷ್ಟು ಬರೆಯುವ ತನಕ ಶ್ರೀ ಕುವೆಂಪು ಅವರಿಗೆ ಶ್ರೀ ಅರವಿಂದ ದರ್ಶನ ಅವರ ಪುಸ್ತಕದಿಂದ ತಿಳಿದೇಯಿರಲಿಲ್ಲ. ಹಾಗಾದರೆ

ಈ ಮಹಾಕಾವ್ಯದ ಮೇಲೆ ಶ್ರೀ ಅರವಿಂದರ ದರ್ಶನದ ಪ್ರಭಾವ ಎಷ್ಟಿದೆ? ಎಂಬುದಕ್ಕೆ ಶ್ರೀ ಕುವೆಂಪು ಅವರೇ ಹೀಗೆ ಉತ್ತರ ಕೊಟ್ಟಿದ್ದಾರೆ:

"ಅವರ ಪ್ರಭಾವ ಇಲ್ಲವೆಂದು ಹೇಳುವಂತಿಲ್ಲವಾದರೂ ಇದೆಯೆಂದೂ ಹೇಳುವಂತಿಲ್ಲ . . . ನಾನು ಎಂದೋ ಒರೆದ "ಶಿಲಾತಪಸ್ವಿ"ಯೆ ಇದಕ್ಕೆ ಸಾಕ್ಷಿ. ಅರವಿಂದರ ಗ್ರಂಥಗಳ ಪರಿಚಯವಾದದ್ದು ಇತ್ತೀಚೆಗೆ, ಮೊದಮೊದಲು ಅವರ ವಿಷಯದಲ್ಲಿ ಏನೇನೂ ಆಸಕ್ತಿ ಇರಲಿಲ್ಲ . . . ನಾನು ಅರವಿಂದರ ಗ್ರಂಥಗಳನ್ನು ಓದುವುದಕ್ಕೆ ಮುಂದೆಯೇ ಶ್ರೀ ರಾಮಾಯಣ ದರ್ಶನವನ್ನು ಬರೆಯಲು ಆರಂಭಿಸಿದ್ದೆ. ಆ ಹೊತ್ತಿಗೆ (೧೯೪೨ ರ ಹೊತ್ತಿಗೆ) ಅರ್ಧಕ್ಕಿಂತ ಹೆಚ್ಚಾಗಿಯೇ ಕೆಲಸ ಸಾಗಿತ್ತು. ರಾಮಾಯಣದ ಸಂಪುಟ ವಿಭಾಗವನ್ನೂ ಸಂಪುಟ ನಾಮಕರಣವನ್ನೂ ಈಗ ಆಲೋಚಿಸಿದರೆ ಇದೇನು ಅರವಿಂದರ ದರ್ಶನಕ್ಕೂ ಈ ದರ್ಶನಕ್ಕೂ ಎಷ್ಟು ಸಾಮ್ಯವಿದೆಯೆಂಬ ಅಂಶ ಗೊತ್ತಾಗದಿರದು!" [25]

—ಕೋ. ಚನ್ನಬಸಪ್ಪ.

---

[25] ಶ್ರೀ ಕುವೆಂಪು ಸಂದರ್ಶನ (ದ್ವಿತೀಯ ಮುದ್ರಣ) ಪುಟ ೩೪.

## ೨. ನನ್ನಾತ್ಮ ಬಿಂಬವೈ

ಸಚ್ಚಿದಾನಂದವನು
ಸೌಂದರ್ಯಸಿಂಧುವನು
ಪಡೆದೆ ನಿನ್ನಲಿ ಕಂದ
ಪುಣ್ಯಸಿಂಧು!
ನಕ್ಷತ್ರಗಳನೆಲ್ಲ
ಪೋಣಿಸಿದ ಸರದಂತೆ
ಪೊಳೆವೆ ನನ್ನಯ ಕಂದ
ದಿವ್ಯ ಅಮೃತೇಂದು!
ತಂದೆಯೆದೆ ಬಾನಿನಲಿ
ತಾಯಿಯಾನಂದದಲಿ
ತೇಲಿ ನಲಿಯೈ ಕಂದ
ಪೂರ್ಣ ಚಂದ್ರ!
ತಾತರಿರ್ವರು ನಿನ್ನ
ತನುವಿನೊಳು ಮೂಡಿಹರು
ನೀನಲ್ತೆ ಪರಿಶುದ್ಧ
ಪ್ರೇಮಬಂಧ!
ನನ್ನಾತ್ಮ ಬಿಂಬವೈ
ನನ್ನಂದ ಕಂದ!
ಬಾಳ ಪೂಜೆಯದೆಲ್ಲ
ನಿನಗೆ ಅರವಿಂದ!

ಕುಮುದ.

# ಭಾರತೀಯ ಜನಜೀವನ*

## ೧೧ ನೇ ಶತಮಾನದಿಂದ ೧೭ ನೇ ಶತಮಾನದ ವರೆಗೆ

೧೧ ನೇ ಶತಮಾನದಲ್ಲಿ ಭಾರತದ ಚರಿತ್ರೆಯಲ್ಲಿ ಒಂದು ದೊಡ್ಡ ಬದಲಾವಣೆಯಾಗಿತ್ತು. ವಿಶಾಲವಾದ ಭಾರತದಲ್ಲಿ ರಾಜಕೀಯ ಐಕಮತ್ಯವು ಅಳಿದುಹೋಗಿ ಅನೇಕ ಸಣ್ಣ ರಾಜ್ಯಗಳು ಹುಟ್ಟಿಕೊಂಡಿದ್ದುವು. ಒಂದರೊಡನೊಂದು ಕಲಹದಲ್ಲಿ ತೊಡಗಿದ್ದ ಈ ಸಣ್ಣಪುಟ್ಟ ರಾಜ್ಯಗಳನ್ನು ಒಟ್ಟುಗೂಡಿಸಿ ಒಂದು ಬಲವಾದ ಕೇಂದ್ರ ಸರ್ಕಾರವನ್ನು ಸ್ಥಾಪಿಸುವ ದಕ್ಷನಾದ ಮತ್ತು ಶಕ್ತನಾದ ಯಾವ ಸಾಮ್ರಾಟನೂ ಆಗ ಇರಲಿಲ್ಲ. ಚಂದ್ರಗುಪ್ತಮೌರ್ಯ, ಅಶೋಕ ಮತ್ತು ಹರ್ಷನಂತಹ ಚಕ್ರವರ್ತಿಗಳು ಕಣ್ಮರೆಯಾಗಿ ಶತಮಾನಗಳು ಉರುಳಿಹೋಗಿದ್ದುವು. ಪ್ರಬಲವಾದ ಒಂದು ಕೇಂದ್ರಸರ್ಕಾರದ ಅವಶ್ಯಕತೆಯು ಭಾರತದಲ್ಲಿ ೧೧ ನೇ ಶತಮಾನದಲ್ಲಿ ಇದ್ದಷ್ಟು ಮತ್ತೆ ಯಾವಾಗಲೂ ಇರಲಿಲ್ಲ. ಏಕೆಂದರೆ ಭಾರತಕ್ಕೆ ಆಗ ಪರಕೀಯರ ಧಾಳಿ ಪರಂಪರೆಯಾಗಿ ನಡೆಯಲು ಪ್ರಾರಂಭವಾಯಿತು. ಭಾರತದಲ್ಲಿ ಮುಸ್ಲಿಂ ರಾಜ್ಯ ಗುಲಾಮೀ ಅರಸರಿಂದ ಸ್ಥಾಪನೆಯಾಯಿತು. ಆದರೆ ಹಿಂದುಗಳನ್ನು ನಾಶಮಾಡುವುದು ಸರಿಯಲ್ಲವೆಂದೂ ಮತ್ತು ಅಸಾಧ್ಯವೆಂದೂ ಅವರು ಬಹುಬೇಗ ಕಂಡುಕೊಂಡರು. ಸಂಖ್ಯಾಬಲದಿಂದಲೂ, ಸಾಂಸ್ಕೃತಿಕ ಪ್ರತಿಭೆಯಿಂದಲೂ ಕೂಡಿದ ಅವರನ್ನು ತುಳಿಯಲು ಸಾಧ್ಯವೂ ಆಗಿರಲಿಲ್ಲ. ರಾಜಕೀಯ ರಂಗದಲ್ಲಿ ಅವರ ಪ್ರಾಮುಖ್ಯತೆಯೇನೋ ಕಳೆದುಹೋಗಿತ್ತು. ಆದರೆ ಹಿಂದೂ ಸಂಸ್ಕೃತಿ, ಆಡಳಿತಕ್ರಮದಲ್ಲಿ ಅವರಿಗಿದ್ದ ಪರಿಶ್ರಮ, ಅವರ ವಾಸ್ತುಶಿಲ್ಪ ಮೊದಲಾದುವು ಹೊಸದಾಗಿ ಇಲ್ಲಿ ಬಂದು ನೆಲೆಸಿ ರಾಜ್ಯ ಕಟ್ಟಿದ ಮುಸ್ಲಿಂ ಜನಾಂಗವನ್ನು ಬೆರಗುಗೊಳಿಸಿತು. ಮಹಮ್ಮದ್ ಘಸ್ನಿಯ ಜೊತೆಯಲ್ಲಿ ಬಂದ ಆಲ್‌ಬೆರೂನಿ ಈ ವಿಷಯವನ್ನೇ ತಾನು ಬರೆದ 'ಕಿತಾಬ್ ಬುಲ್ ಹಿಂದ್' ಎಂಬ ಪುಸ್ತಕದಲ್ಲಿ ಒತ್ತಿ ಎತ್ತಿ ಹೇಳಿದ್ದಾನೆ. ಅವನು ಭಾರತದಲ್ಲಿ ಸಂಚರಿಸಿ, ಪಂಡಿತರನ್ನು ಸಂದರ್ಶಿಸಿ ಸಂಸ್ಕೃತ ಮತ್ತು ಗಣಿತಶಾಸ್ತ್ರದಲ್ಲಿ ಅಪಾರವಾದ ಪಾಂಡಿತ್ಯವನ್ನು ಗಳಿಸಿದನು. ಅವನು ೧೧ ನೇ ಶತಮಾನದ ಪ್ರಥಮಾರ್ಧದಲ್ಲಿ (ಕ್ರಿ. ಶ. ೧೦೦೦-೧೦೨೬) ಹಿಂದೂ ಸಮಾಜದಲ್ಲಾಗಿದ್ದ ಒಂದೆರಡು ಬದಲಾವಣೆಗಳ ವಿಚಾರವನ್ನು ವಿಷಾದದಿಂದ ಬರೆದಿದ್ದಾನೆ. ಆಗ ಭಾರತದ ಜನಗಳಲ್ಲಿ ಸ್ವಲ್ಪಮಟ್ಟಿಗೆ ಸಂಕುಚಿತದೃಷ್ಟಿ ಮತ್ತು ಅಹಂಕಾರ ಮೂಡಿತ್ತೆಂದು ಗೊತ್ತಾಗುವುದು. ೫ ನೇ

---

* ಆಕಾಶವಾಣಿಯ ಕೃಪೆಯಿಂದ.

ಶತಮಾನ ಮತ್ತು ೭ ನೇ ಶತಮಾನದಲ್ಲಿ ಭಾರತದ ದೃಷ್ಟಿಕೋನ ಹೀಗಿರಲಿಲ್ಲವೆಂದು ಹೇಳಲು ನಮಗೆ ಆಧಾರವಿದೆ. ವರಾಹಮಿಹಿರನು ಯವನರ ಸಿದ್ಧಾಂತದ ವಿಚಾರ ಮಾತನಾಡುತ್ತಾ ಅವರಿಗೆ ಗೌರವ ತೋರಿಸಬೇಕೆಂಬ ಮನೋಭಿಪ್ರಾಯವನ್ನು ತೋರಿದ್ದಾನೆ. ೭ ನೇ ಶತಮಾನದಲ್ಲಿ ಭಾರತಕ್ಕೆ ಬಂದ ಚೀಣೀ ವಿದ್ವಾಂಸ ಹುಯಾನ್‌ತ್ಸಾಂಗನಿಗೆ ಭಾರತದ ಜನ ಅಪೂರ್ವ ವಿಶ್ವಾಸ ಆದರಗಳನ್ನು ತೋರಿದರು. ನಾಲಂದ ವಿಶ್ವವಿದ್ಯಾನಿಲಯವು ಅವನ ವಿದ್ವತ್ತಿಗೆ ಮೆಚ್ಚಿ ಅವನಿಗೆ ಮರ್ಯಾದೆ ನೀಡಿತು. ಅವನು ವಿದೇಶೀಯನೆಂದು ತಿರಸ್ಕಾರಭಾವನೆಯನ್ನು ತಾಳಿರಲಿಲ್ಲ, ತೋರಲಿಲ್ಲ.

ಅಶುದ್ಧವಾದುದನ್ನು ಶುದ್ಧಿಮಾಡಿ ತನ್ನ ಜೊತೆಗೆ ಸೇರಿಸಿಕೊಳ್ಳುವ ಹಿಂದೂಮತದ ಆಚಾರ ಈ ವೇಳೆಗೆ ಕಳೆದುಹೋಗಿತ್ತು. ಹಿಂದೆ ಶಕರು, ಗ್ರೀಕರು, ಹೂಣರು ಇವರುಗಳನ್ನು ಹಿಂದೂಮತವು ತನ್ನ ಮಡಿಲಿನಲ್ಲಿ ಸೇರಿಸಿ ಬೆಳೆಸಿಕೊಂಡ ಮನೋಭಾವನೆ ದೂರವಾಗಿತ್ತು. ಇವರಲ್ಲಿ ಕೆಲವರು ವಿಷ್ಣುವಿನ ಭಕ್ತರಾಗಿದ್ದರು. ಕೆಲವರು ಶಿವನನ್ನು ನಂಬಿ ಅವನ ತ್ರಿಶೂಲವನ್ನೂ ಮತ್ತು ನಂದಿಯನ್ನೂ ಪೂಜಿಸುತ್ತಿದ್ದರು. ಮತ್ತೆ ಕೆಲವರು ರಾಜಪುತ್ರರಾಗಿ ರಾಜ್ಯವನ್ನೇ ಕಟ್ಟಿದ್ದರು. ಆದರೆ ಆಲ್‌ಬೆರೂನಿಯ ಕಾಲದ ವೇಳೆಗೆ ಹಿಂದೂಗಳಲ್ಲದವರು 'ಮ್ಲೇಚ್ಛ'ರೆಂಬ ಭಾವನೆ ಚೆನ್ನಾಗಿ ಬೇರೂರಿ ಹಿಂದೂ ಮತದಲ್ಲಿದ್ದ ಚಿನ್ನವು ಸೀಸದಿಂದ ಮುಚ್ಚಿಹೋಗಿತ್ತು. ಈ ಕಾಲದಲ್ಲಿ ಭಾರತದ ಸಂಪರ್ಕವು ಇತರ ದೇಶಗಳೊಡನೆ ಇಲ್ಲದೆ ಹೋಗಿದ್ದುದೇ ಇದಕ್ಕೆ ಕಾರಣವೆಂದು ಹೇಳಬಹುದು.

೧೪ ನೇ ಶತಮಾನದ ವೇಳೆಗೆ ಭಾರತದಲ್ಲಿ ಮುಸ್ಲಿಮರ ರಾಜ್ಯಭಾರವು ಸ್ಥಿರಗೊಳಿಸಲ್ಪಟ್ಟಿತೆಂದು ಹೇಳಬಹುದು. ಅಲ್ಲಾವುದ್ದೀನ್ ಖಿಲ್ಜಿ ಉತ್ತರದಲ್ಲಿ ಮಂಗೋಲರ ಹಾವಳಿಯನ್ನು ತಪ್ಪಿಸಿ ದಕ್ಷಿಣದಲ್ಲಿ ಹೊಯ್ಸಳರು, ಕಾಕತೀಯರು, ಯಾದವರು ಮೊದಲಾದ ರಾಜ್ಯಗಳ ಮೇಲೆ ಧಾಳಿಮಾಡಿ ಗುಜರಾತ್, ಚಿತ್ತೂರು, ರಂತಂಬೋರ್ ರಾಜ್ಯಗಳನ್ನು ರಾಜಪುತ್ರರಿಂದ ಗೆದ್ದುಕೊಂಡನು. ರಜಪುಟಾಣದ ಚರಿತ್ರೆಯನ್ನು ೧೪-೧೫-೧೬ ನೇ ಶತಮಾನಗಳಲ್ಲಿ ಅವಲೋಕಿಸಿದರೆ ಅಲ್ಲಿಯ ಹೆಣ್ಣು ಮಕ್ಕಳಿಗೆ ಒದಗುತ್ತಿದ್ದ ಅಪಾಯ ಎಷ್ಟೆಂಬುದು ನಮಗೆ ವ್ಯಕ್ತವಾಗುತ್ತದೆ. ಈ ಜನಾಂಗದ ಚರಿತ್ರೆಯಲ್ಲಿ ಉದ್ದಾಮಪಂಡಿತರಾದ ಕರ್ನಲ್ ಟಾಡ್ ಎಂಬುವರು ಹೇಳುವಂತೆ ಹುಟ್ಟಿದಾರಭ್ಯ ಸಾಯುವ ವರೆಗೂ (From the Cradle to the Crematorium) ಅವರಿಗೆ ಕಷ್ಟಕೋಟಲೆಗಳು ತಪ್ಪುವಂತಿರಲಿಲ್ಲ. ಕೋಟೆಗಳು ಶತ್ರುಗಳ ವಶವಾದಾಗ ಅವರ ಕಣ್ಣಿಗೆ ಬೀಳುತ್ತಿದ್ದುದು "ಜೌಹರಿನ" ಘೋರ

ಚಿತ್ರ. ಶತ್ರುಗಳ ಕೈಗೆ ಸಿಕ್ಕಿಬೀಳುವುದರ ಬದಲು ಅಗ್ನಿಯಲ್ಲಿ ಅವರು ಪ್ರಾಣತ್ಯಾಗ ಮಾಡುತ್ತಿದ್ದರು.

ಅಲ್ಲಾವುದ್ದೀನನ ಕಾಲದ ಜನಜೀವನವನ್ನು ಅರಿಯಲು ಅಮೀರ್ ಖುಸ್ರು ಮತ್ತು ಬರಾನಿ ನಮಗೆ ಸಹಾಯಕರಾಗಿದ್ದಾರೆ. ಆಗಿನ ಕಾಲದಲ್ಲಿ ವರ್ತಕರ ಅಪ್ರಮಾಣಿಕತೆಯನ್ನು ಸರ್ಕಾರವು ಸ್ವಲ್ಪವೂ ಸಹಿಸುತ್ತಿರಲಿಲ್ಲ. ಅಲ್ಲಾವುದ್ದೀನ್ ಪದಾರ್ಥಗಳ ಬೆಲೆಯನ್ನು ನಿಷ್ಕರ್ಶಿಸಿ ಅದಕ್ಕಿಂತ ಹೆಚ್ಚಾಗಿ ಮಾರಕೂಡದೆಂಬ ಕಟ್ಟಾಜ್ಞೆಯನ್ನು ಮಾಡಿದ್ದನು. ಮಾರ್ಕೆಟ್‌ಗಳ ಮೇಲ್ವಿಚಾರಣೆಗಾಗಿ "ದಿವಾನಿ ರಿಯಾಸತ್ ಮತ್ತು ಷಾನಾಯಿಮಂಡಿ" ಎಂಬ ಇಬ್ಬರು ಅಧಿಕಾರಿಗಳಿದ್ದರು. ವರ್ತಕರು ಕಾನೂನಿಗೆ ವಿರುದ್ಧವಾಗಿ ವರ್ತಿಸಿದುದನ್ನೂ, ಅಧಿಕಾರಿಗಳ ಆಡಳಿತದ ಲೋಪದೋಷಗಳನ್ನೂ ಸುಲ್ತಾನನಿಗೆ ತಿಳಿಸಲು ಅನೇಕ ಗೂಢಚಾರರಿದ್ದರು. ಹೀಗೆ ಅಲ್ಲಾವುದ್ದೀನ್ ಖಿಲ್ಜಿಯು ನೆಪೋಲಿಯನ್ನನಂತೆ ಮಾರ್ಕೆಟ್ಟಿನ ಮತ್ತು ವರ್ತಕರ ಮೇಲಿನ ಹತೋಟಿಯಿಂದ ಸಾಮಾನ್ಯ ಜನರಿಗೆ ಜೀವನವು ಸುಲಭವಾಗಿ ನಡೆಯು ವಂತೆ ಮಾಡುವುದರ ಮೂಲಕ ತನ್ನ ರಾಜತಂತ್ರಜ್ಞತೆಯನ್ನು ತೋರ್ಪಡಿಸಿಕೊಂಡನು.

ಹಿಂದೂ ಮತ್ತು ಮುಸ್ಲಿಂ ಮತಗಳು ಕಾಲಕ್ರಮೇಣ ಜನಗಳ ಮನಸ್ಸಿನ ಮೇಲೆ ತಮ್ಮ ತಮ್ಮ ಪ್ರಭಾವವನ್ನು ಬೀರಿ ಒಂದು ಹೊಸ ಮತೀಯ ಪ್ರತಿಭೆಯನ್ನು ೧೪ ನೇ ಶತಮಾನದಿಂದ ೧೬ ನೇ ಶತಮಾನದ ವರೆಗೆ ಬೀರಿದವು. ಮುಸ್ಲಿಮರ ಸೂಫಿ ತತ್ತ್ವವೂ, ಹಿಂದುಗಳ ಭಕ್ತಿಪಂಥವೂ ಒಂದಕ್ಕೊಂದು ಮಿಳಿತವಾದುವು. ಜಾತಿ ಮತ್ತು ಮತಗಳ ಹಿಡಿತವು ಸಡಿಲವಾಗಿ ಮುಕ್ತಿಗೆ ಭಕ್ತಿಯೇ ಮುಖ್ಯವೆಂಬ ತತ್ತ್ವವು ಮೂಡಿತು. ರಮಾನಂದ, ಕಬೀರ್, ನಾನಕ್ ಮತ್ತು ದಾದು ಒಂದು ಕಡೆ, ಚಿಷ್ಟಿ, ಲತೀಫ್, ಮುಬಾರಕ್, ಫೈಜಿ, ಫಸಲ್ ಮೊದಲಾದವರು ಮತ್ತೊಂದು ಕಡೆ ಸೇರಿ ಮತೀಯ ಮಿಳಿತಕ್ಕೆ ಕಾರಣರಾದರು. ಇವರುಗಳ ಬೋಧನೆಯ ಫಲವಾಗಿ "ರಾಂ ರಹೀಮ್ ಕೇಶವ್ ಕರೀಂ" ಎಂಬುದು ಜನಗಳಲ್ಲಿ ಬೇರೂರಿತು. ಅಕ್ಬರನ 'ದಿನೇ ಇಲಾಹಿ' ಈ ಹೊಸ ಮತೀಯ ದೃಷ್ಟಿಗೆ ಒಂದು ಉದಾಹರಣೆಯೆಂದು ಹೇಳ ಬಹುದು. ಅವನ ಆಸ್ಥಾನದಲ್ಲಿ ನಡೆಯುತ್ತಿದ್ದ ಮತೀಯ ಚರ್ಚೆಯಲ್ಲಿ ಸುನ್ನಿ, ಷಿಯಾ, ಹಿಂದೂ, ಪಾರ್ಸಿ, ಜೈನ, ಸಿಕ್, ಬೌದ್ಧ ಮತ್ತು ಕ್ರೈಸ್ತಮತಗಳ ಪ್ರತಿನಿಧಿ ಗಳು ಭಾಗವಹಿಸುತ್ತಿದ್ದರು.

ಮೇಲ್ತರಗತಿಯ ಜನಗಳಲ್ಲಿ ಸಾಹಿತ್ಯ ಮತ್ತು ಸಂಗೀತದ ಅಭಿರುಚಿ ಮೊಗಲರ ಕಾಲದಲ್ಲಿ ತೀವ್ರವಾಗಿ ಮುಂದುವರಿಯಿತು. ಮೊಗಲರ ಕಾಲಕ್ಕಿಂತ ಮುಂಚೆಯೇ ಅಮೀರ್ ಖುಸ್ರು "ಭಾರತದ ಬುಲ್ ಬುಲ್" ಎಂದು ಪ್ರಸಿದ್ಧನಾಗಿದ್ದನು.

ಅಕ್ಬರನ ಆಸ್ಥಾನದಲ್ಲಿ ಅನೇಕ ಜನ ಸಂಗೀತ ವಿದ್ವಾಂಸರಿದ್ದರು. ಅವರಲ್ಲಿ ಅತ್ಯಂತ ಪ್ರಸಿದ್ಧನಾದವನು ಮಿಯಾನ್ ತಾನ್‌ಸೇನ್. ಅಕ್ಬರನ ಆಳ್ವಿಕೆಯ ೭ ನೇ ವರ್ಷ ದಲ್ಲಿ ರೇವಾ ದೇಶದ ರಾಜನಾದ ರಾಮಚಂದ್ರನು ಅವನನ್ನು ಅಕ್ಬರನ ಆಸ್ಥಾನಕ್ಕೆ ಕಳುಹಿಸಿದನು. ತಾನ್‌ಸೇನ್ ತೋಮರರಾಜ ಮಾನಸಿಂಗನು ಗ್ವಾಲಿಯರ್‌ನಲ್ಲಿ ಸ್ಥಾಪಿಸಿದ್ದ ಕಲಾಶಾಲೆಯಲ್ಲಿ ಸಂಗೀತ (೧೪೮೬-೧೫೧೮) ಕಲಿತನು. ಸಾವಿರ ವರ್ಷಗಳಿಂದೀಚೆಗೆ ಅವನಂತಹ ಸಂಗೀತಗಾರನನ್ನೇ ಭಾರತ ಕಂಡಿಲ್ಲವೆಂದು ಅಕ್ಬರನ ಸ್ನೇಹಿತನಾದ ಅಬುಲ್‌ಫಸಲ್ ಬರೆದಿದ್ದಾನೆ. ಲಾಲ್ ಕಲಾವಂತ್ ಮತ್ತು ಮಾಳ್ವದ ರಾಜನಾಗಿದ್ದ ಬಾಜ್ ಬಹದ್ದೂರ್ ಅಕ್ಬರನ ಕಾಲದ ಇತರ ಪ್ರಖ್ಯಾತ ಸಂಗೀತ ವಿದ್ವಾಂಸರಾಗಿದ್ದರು. ಮೊಗಲ್ ಚಕ್ರವರ್ತಿಗಳಂತೆಯೇ ಶ್ರೀಮಂತರು ಮತ್ತು ಅಧಿಕಾರಿಗಳು ಸಂಗೀತ ಸಾಹಿತ್ಯಗಳಿಗೆ ಉತ್ತೇಜನ ಕೊಡುತ್ತಿದ್ದರು.

ಮಧ್ಯಮಕಾಲದ ಭಾರತದ ಸಾಹಿತ್ಯಚರಿತ್ರೆಯಲ್ಲಿ ಅಬ್ದುರ್‌ರಹೀಂ ಮತ್ತು ತುಲಸೀದಾಸ ಇವರ ಹೆಸರು ಅಚ್ಚಳಿಯದೆ ನಿಂತಿದೆ. ಅಬ್ದುರ್‌ರಹೀಂ ಬೈರಾಂಖಾನನ ಮಗ. ಅವನ ತಂದೆಯು ಮಡಿದಾಗ ಅವನಿಗೆ ಕೇವಲ ನಾಲ್ಕೇ ವರ್ಷ. ಅವನು ಅಕ್ಬರನ ಆಸ್ಥಾನಕ್ಕೆ ಸೇರಿ ಆಗಿನ ಕಾಲದಲ್ಲೆಲ್ಲಾ ಅತ್ಯಂತ ಶಕ್ತನಾದ ಯೋಧ ನಾದನು. ಅದಕ್ಕಿಂತ ಹೆಚ್ಚಾಗಿ ಅತ್ಯಂತ ದೊಡ್ಡ ಸಾಹಿತಿಯಾದನು. ಅಷ್ಟೇ ಅಲ್ಲದೆ ಅನೇಕ ಸಣ್ಣಪುಟ್ಟ ಕವಿಗಳ ಆಶ್ರಯದಾತನೂ ಆಗಿದ್ದನು. ಹಿಂದಿ, ಪಾರಸೀ, ಸಂಸ್ಕೃತ, ತುರ್ಕಿ ಮೊದಲಾದ ಭಾಷೆಗಳಲ್ಲಿ ಅವನು ನಿಸ್ಸೀಮನಾಗಿದ್ದನು. ಅವನಿ ಗಿಂತಲೂ ಅವನ ಸ್ನೇಹಿತನಾದ ತುಲಸೀದಾಸನು ಸಾಹಿತ್ಯದ ಚರಿತ್ರೆಯಲ್ಲಿ ಉನ್ನತ ವಾದ ಸ್ಥಾನವನ್ನು ಅಲಂಕರಿಸಿದ್ದಾನೆ. ಅವನು ಹಿಂದಿಯಲ್ಲಿ ಬರೆದ 'ರಾಮಚರಿತ ಮಾನಸ್' ಈಗಿನಂತೆಯೇ ಆಗಲೂ ಹಿಂದುಗಳಲ್ಲಿ ಜನಪ್ರಿಯವಾಗಿತ್ತು. ೧೬ ಮತ್ತು ೧೭ ನೇ ಶತಮಾನಗಳಲ್ಲಿ ಕಾಶಿಯು ವಿದ್ವಾಂಸರ ಕೇಂದ್ರವಾಗಿತ್ತು. ಮೀಮಾಂಸಕಾರ ಖಂಡದೇವ, ತರ್ಕಶಾಸ್ತ್ರ ಪಾರಂಗತ ರಘುನಾಥ ಶಿರೋಮಣಿ, ಖಗೋಳಶಾಸ್ತ್ರಜ್ಞ ಕಮಲಾಕರ ಮತ್ತು ಫ್ರೆಂಚ್ ಪ್ರವಾಸಿಯಾದ ಡಾ|| ಬರ್ನಿಯರ್ ಎಂಬುವನ ಸ್ನೇಹಿತ ಕವೀಂದ್ರ ಸರಸ್ವತಿ ಮೊದಲಾದವರು ಇವರಲ್ಲಿ ಪ್ರಮುಖರು. ಕವೀಂದ್ರ ಸರಸ್ವತಿ ಷಹಜಹಾನ್ ಚಕ್ರವರ್ತಿಯ ಗೌರವಕ್ಕೆ ಪಾತ್ರ ನಾಗಿದ್ದುದಲ್ಲದೆ ರಾಜನ ಗುರುವೂ ಆಗಿದ್ದನು.

ಶ್ರೀಮಂತರ ಮತ್ತು ಅಧಿಕಾರಿಗಳ ಜೀವನ ಭೋಗಮಯವಾಗಿತ್ತೆಂದು ನಮಗೆ ಪಾಶ್ಚಾತ್ಯ ಪ್ರವಾಸಿಗಳ ಬರವಣಿಗೆಯಿಂದ ಗೊತ್ತಾಗಿದೆ. ರೇಷ್ಮೆ, ಜರತಾರಿ ಮತ್ತು ಮಸ್ಲಿನ್ ಅವರ ಉಡಿಗೆ ತೊಡಿಗೆಗಳಿಗೆ ಉಪಯೋಗಿಸಲ್ಪಡುತ್ತಿದ್ದವು. ಹಿಂದುಗಳು

ಮುಸ್ಲಿಂ ಜನಾಂಗದ ಉಡಿಗೆ ತೊಡಿಗೆಗಳನ್ನು ಅನುಕರಿಸುತ್ತಿದ್ದರೆಂದು ನಾನಕನ ಒಂದು ವಿಷಾದಮಯವಾದ ಹೇಳಿಕೆಯಿಂದ ವ್ಯಕ್ತವಾಗುವದು. ಶಿವಾಜಿಯಂತಹ ಹಿಂದೂ ವೀರನೂ ಕೂಡಾ ಮುಸ್ಲಿಂ ಉಡುಪುಗಳನ್ನು ಧರಿಸುತ್ತಿದ್ದುದನ್ನು ನೋಡಿದರೆ ಈ ಪದ್ಧತಿಯು ಎಷ್ಟರಮಟ್ಟಿಗೆ ಸಮಾಜದ ಉತ್ತಮ ಮತ್ತು ಮಧ್ಯಮ ವರ್ಗಗಳಲ್ಲಿ ಹರಡಿತ್ತೆಂಬುದು ಮಂದಟ್ಟಾಗುವುದು. ಕೆಳದರ್ಜೆಯ ಹಿಂದುಗಳು ಧೋತಿಯನ್ನು ಉಡುತ್ತಿದ್ದರು. ಆದರೆ ಪಾಯಿಜಾಮು ಮತ್ತು ಚೌಪ್‌ಕಾನ್ ಮಧ್ಯಮ ವರ್ಗದವರನ್ನೂ ಮತ್ತು ಶ್ರೀಮಂತರನ್ನೂ ಬೆನ್ನುಹತ್ತಿತ್ತು.

ಅವರಲ್ಲಿ ಆಹಾರದಲ್ಲಿಯೂ ತುಂಬ ಬದಲಾವಣೆಯಾಗಿತ್ತು. ಚೀಣಾದೇಶದಲ್ಲಿ ತಯಾರಾದ 'ಜೇಡ್' ಎಂಬ ಮಿರಮಿರನೆ ಗಾಜಿನಂತೆ ಹೊಳೆಯುವ ತಟ್ಟೆಯಲ್ಲಿ ಆಹಾರವನ್ನು ಅವರಿಗೆ ಬಡಿಸಲಾಗುತ್ತಿತ್ತು. ಜಹಾಂಗಿರಿ-ಕಬಾಲ್ ಷಹಜಹಾನಿ ಪಲಾವ್ ಆಗಿನ ಕಾಲದ ಊಟದ ಪದಾರ್ಥಗಳ ಜ್ಞಾಪಕವನ್ನು ನಮಗೆ ತರುತ್ತವೆ.

ಕೂಲಿಕಾರರ ಮತ್ತು ಕೆಳದರ್ಜೆಯ ಜನಗಳ ಜೀವನದ ವಿಚಾರವಾಗಿ ನಮಗೆ ಏನೂ ಗೊತ್ತಿಲ್ಲ. ಲೇನ್‌ಪೂಲ್ ಎಂಬ ಪಾಶ್ಚಾತ್ಯ ವಿದ್ವಾಂಸನು ಅನೇಕ ವರ್ಷಗಳ ಹಿಂದೆ ಹೇಳಿದಂತೆ ಪೂರ್ವ ದೇಶಗಳ ಚರಿತ್ರೆ ಬಡಜನಗಳ ವಿಚಾರದಲ್ಲಿ (Simple annals of the poor) ಮೌನ ತಾಳಿದೆ. ಅವರ ಚರಿತ್ರೆಯನ್ನು ಕಟ್ಟಲು ನಮಗೆ ಆಧಾರಗಳಂತೂ ಅತಿ ವಿರಳ. ಆದರೆ ಐನಿ ಅಕ್ಬರಿಯಲ್ಲಿ ಕೆಲವು ವಿಷಯಗಳಿವೆ. ಒಬ್ಬ ಚತುರನಲ್ಲದ ಕೂಲಿಗಾರನಿಗೆ ರೂಪಾಯಿಯ $\frac{೧}{೨೦}$ ಭಾಗ (೨ ದಾಮ್) ದಿನ ಕೂಲಿ ಸಿಗುತ್ತಿತ್ತೆಂದು ಹೇಳಿದೆ. ಚತುರನಾದ ಮರಗೆಲಸದವನಿಗೆ ೭ ದಾಮ್ ಕೂಲಿ ಕೊಡಲಾಗುತ್ತಿತ್ತು. ಅಂದರೆ ಅವರ ಕೂಲಿ ೧$\frac{೨}{೩}$ ಆಣೆಯಿಂದ ೪$\frac{೨}{೩}$ ಆಣೆ. ಆದರೆ ಅಕ್ಬರನ ಕಾಲದಲ್ಲಿ ಪದಾರ್ಥಗಳ ಬೆಲೆ ಅತಿ ಸುಲಭವಾಗಿದ್ದುದರಿಂದ ಇದರಿಂದಲೇ ಜೀವನ ನಡೆಸಲು ಒಬ್ಬನಿಗೆ ಸಾಕಾಗುತ್ತಿತ್ತು. ಒಂದೆರಡು ಮುಖ್ಯ ಪದಾರ್ಥಗಳ ಬೆಲೆಯನ್ನು ಇಲ್ಲಿ ಉದಾಹರಿಸಬಹುದು. ಒಂದು ಕುರಿಗೆ ೧$\frac{೧}{೨}$ ರೂ. ಒಂದು ರೂಪಾಯಿಗೆ ೮೯ ಪೌಂಡು ಅಥವಾ ೪೪ ಸೇರು ಹಾಲು. ಪದಾರ್ಥಗಳ ಬೆಲೆಯು ಬಹಳ ಅಗ್ಗವಾಗಿತ್ತೆಂದು ಪಾಶ್ಚಿಮಾತ್ಯ ಪ್ರವಾಸಿಗಳಾದ ರೊ, ಟೆರ್ರಿ, ಟಾಂಕಾರಿಯಟ್ ಹೇಳಿರುವುದು ಐನಿ ಅಕ್ಬರಿಯ ಆಧಾರವನ್ನು ಪುಷ್ಟೀಕರಿಸುತ್ತದೆ. ಆಗಿನ ಕಾಲದಲ್ಲಿ ಪದಾರ್ಥಗಳ ಬೆಲೆಯು ಭಾರತದಲ್ಲೇ ಅಲ್ಲದೆ ಪಶ್ಚಿಮ ಏಷ್ಯದಲ್ಲೂ ತೀರ ಅಗ್ಗವಾಗಿತ್ತು. ಟಾಂಕಾರಿಯಟ್ ಎಂಬ ಪ್ರವಾಸಿಯು ನಡಿಗೆಯಲ್ಲೇ ಸಿರಿಯಾ, ಆರ್ಮೀನಿಯಾ, ಮೆಸಪೊಟೋಮಿಯಾ ಮತ್ತು ಪರ್ಷಿಯಾದ ಮಾರ್ಗವಾಗಿ ಲಾಹೋರಿಗೆ ಬಂದನು. ಅವನು ಅಲೆಪ್ಪೋವಿನಿಂದ ಕಾಂದಹಾರಿಗೆ ಬರಲು ಹತ್ತು ತಿಂಗಳು ಹಿಡಿಯಿತು.

ಈ ಕಾಲದಲ್ಲಿ ಅವನಿಗೆ ಮೂರು ಪೌಂಡ್ (£) ಖರ್ಚಾಯಿತು. ಅದರಲ್ಲೂ ಹತ್ತು ಸಿಲಿಂಗ್ ಕಳುವಾಗಿತ್ತು. ಹೀಗೆ ಅವನು ದಿನ ಒಂದಕ್ಕೆ ಎರಡು ಪೆನ್ನಿ ಮತ್ತು ಕೆಲವು ದಿನಗಳು ಒಂದೇ ಪೆನ್ನಿಯಲ್ಲಿ ಜೀವನ ಮಾಡಿದನು. ಟೆರ್ರಿ ಒಬ್ಬ ಆಳಿನ ಸಂಬಳ ಎರಡೇ ರೂಪಾಯಿ ಎಂದು ಬರೆಯುತ್ತಾನೆ. ಈ ಹಣಕ್ಕೆ ४೦೦ ಪೌಂಡು ಗೋಧಿ ಸಿಕ್ಕುತ್ತಿತ್ತು.

ಪಟ್ಟಣಗಳ ವಿಚಾರವಾಗಿ ನಮಗೆ ಪಾಶ್ಚಾತ್ಯ ಪ್ರವಾಸಿಗಳ ಬರವಣಿಗೆಯಿಂದ ಸ್ವಲ್ಪ ವಿಚಾರಗಳು ತಿಳಿದಿವೆ. ಆಗ್ರಾ ಮತ್ತು ಲಾಹೋರ್ ಮೊಗಲರ ಕಾಲದಲ್ಲಿ ಪ್ರಪಂಚದಲ್ಲೆಲ್ಲಾ ದೊಡ್ಡ ಪಟ್ಟಣಗಳಾಗಿದ್ದುವು. ಡಿಲಾಟ್ (Delaet) ಎಂಬ ಡಚ್ ಪ್ರವಾಸಿಯು ಲಾಹೋರ್ ಲಂಡನ್ ಅಥವಾ ಪ್ಯಾರಿಸ್ಸಿಗಿಂತ ದೊಡ್ಡದಾಗಿತ್ತೆಂದು ಹೇಳಿದ್ದಾನೆ. ಮೊಗಲರ ರಸ್ತೆಗಳು ಮೌರ್ಯರ ಕಾಲದ ರಸ್ತೆಗಳನ್ನು ನೆನಪಿಗೆ ತರುತ್ತವೆ. ಷೇರ್‌ಷಹ ಈಗಿರುವ ಗ್ರಾಂಡ್ ಟ್ರಂಕ್ ರಸ್ತೆಯ ಮಾದರಿಯಲ್ಲಿ ಬಂಗಾಳದಿಂದ ಪೆಷಾವರ್ ತನಕ ರಸ್ತೆಯನ್ನು ಮಾಡಿಸಿದ್ದನು. ಮೊಗಲರ ಕಾಲದ ಮತ್ತೊಂದು ರಸ್ತೆ ಆಗ್ರಾದಿಂದ ಹೊರಟು ಬಿಯಾನ, ಗ್ವಾಲಿಯರ್, ಅಹಮ್ಮದಾಬಾದ್ ಮೂಲಕ ರೇವುಪಟ್ಟಣವಾದ ಸೂರತ್ತನ್ನು ಸೇರುತ್ತಿತ್ತು.

ದಕ್ಷಿಣದಲ್ಲಿ ಬಹಮನಿ ಮತ್ತು ವಿಜಯನಗರ ರಾಜ್ಯಗಳು ಸ್ಥಾಪಿಸಲ್ಪಟ್ಟು ಪ್ರಸಿದ್ಧಿಗೆಬಂದಿದ್ದುವು. ಈ ರಾಜ್ಯಗಳಿಗೆ ಆಗಾಗ್ಗೆ ಯುದ್ಧಗಳು ನಡೆದು, ವಿಜಯನಗರವು ೧೫೬೫ರಲ್ಲಿ ನಾಶವಾಗಿ, ಇತರ ಬಹಮನಿ ರಾಜ್ಯಗಳಾದ ಬಿಜಾಪುರ, ಗೋಲ್ಕಂಡ, ಅಹಮ್ಮದ್ ನಗರ, ಬೀದರ್ ಮತ್ತು ಬೀರಾರ್ ೧೭ ನೇ ಶತಮಾನದ ಅಂತ್ಯದಲ್ಲಿ ಮೊಗಲರ ಕೈವಶವಾಗಿದ್ದುವು. ಮೂರನೇ ಮಹಮ್ಮದ್‌ಷಹನ ಮಂತ್ರಿಯಾಗಿದ್ದ ಮಹಮ್ಮದ್‌ಗವಾನ್ ಬಹಮನಿ ಚಕ್ರಾಧಿಪತ್ಯದ ಪ್ರಗತಿಯ ಶಿಲ್ಪಿಯಾಗಿದ್ದನೆಂದು ಹೇಳಬಹುದು. ಅವನು ಜಮೀನುಗಳನ್ನು ಅಳತೆಮಾಡಿಸಿ ಅದರ ಆಧಾರದ ಮೇಲೆ ಸರಿಯಾದ ಕಂದಾಯವನ್ನು ನಿಷ್ಕರ್ಷೆಮಾಡಿ ರೈತಾಪಿ ಜನಗಳ ಹಿತಸಾಧನೆ ಮಾಡಿದನು. ಅವನ ಕೊಲೆಯೊಂದಿಗೆ ಆ ಚಕ್ರಾಧಿಪತ್ಯವೂ ಅಳಿದುಹೋಯಿತು.

ವಿಜಯನಗರಕ್ಕೆ ಎರಡನೆ ದೇವರಾಯನ ಕಾಲದಲ್ಲಿ ಬಂದ ಇಟಲಿಯ ಪ್ರಯಾಣಿಕ ನಿಕಾಲೊ ಕಾಂಟಿ ಜನಗಳ ಸಂತೋಷಜೀವನವನ್ನು ನೋಡಿ ತಾನೂ ಸಂತೋಷಗೊಂಡನು. ದಿವಾಲಿ, ಹೋಳಿ, ನವರಾತ್ರಿಗಳನ್ನು ಬಹಳ ಸಂಭ್ರಮದಿಂದ ಜನರು ಆಚರಿಸುತ್ತಿದ್ದರು. ಇವನ ನಂತರ ಇಪ್ಪತ್ತು ವರ್ಷಗಳ ಮೇಲೆ ಬಂದ ಪರ್ಷಿಯದ ಅಬ್ದುರ್ ರಜಾಕ್ ವಿಜಯನಗರದ ಪೇಟೆಯಲ್ಲಿ ಮಾರಾಟಕ್ಕೆ ಇಟ್ಟಿದ್ದ ಕೆಂಪು, ವಜ್ರ, ಪಚ್ಚೆ ಮತ್ತು ಮುತ್ತುಗಳನ್ನು ನೋಡಿ ಮುಗ್ಧನಾದನು.

ಐಶ್ವರ್ಯದಿಂದ ತುಂಬಿ ತುಳುಕಾಡುತ್ತಿದ್ದ ವಿಜಯನಗರದ ಭೋಗಮಯ ಜೀವನವು ವಿದೇಶೀಯ ಪ್ರಯಾಣಿಕರ ಗಮನ ಸೆಳೆಯದೆ ಇರಲಿಲ್ಲ. ಕೃಷ್ಣದೇವ ರಾಯನ ಕಾಲದಲ್ಲಿ ವಿಜಯನಗರಿಗೆ ಭೇಟಿಕೊಟ್ಟ ಪೋರ್ಚುಗೀಸ್ ಪ್ರವಾಸಿ ನ್ಯೂನಿಸ್ ಜಿಲೆವೆಣ್ಣುಗಳ ಬಜಾರು ಟಂಕಸಾಲೆಯ ಹಿಂದೆ ೩೦೦ ಗಜ ಉದ್ದ ವಾಗಿಯೂ ೨೦ ಗಜ ಅಗಲವಾಗಿಯೂ ಇತ್ತೆಂದು ವರ್ಣಿಸಿದ್ದಾನೆ. ಹಾಳು ಹಂಪೆಯಲ್ಲಿ ಈ ಬೀದಿ ಈಗಲೂ ಇದೆ. ಆಗಿನ ಸರ್ಕಾರವು ಇವರಿಂದ ಬಂದ ೧೨,೦೦೦ ಪಣವನ್ನು ಪೋಲೀಸರ ಪಡೆಯ ಸಂಬಳಕ್ಕೆ ಉಪಯೋಗಿಸುತ್ತಿತ್ತು.

ಸಾಮಾನ್ಯವಾಗಿ ಜನಗಳು ಹೂಗಳಿಲ್ಲದೆ ಜೀವನ ಮಾಡುತ್ತಿರಲಿಲ್ಲವೆಂದೂ, ಹೊಟ್ಟೆಗಿಲ್ಲದಿದ್ದರೂ ಅದು ಅವರ ನಿತ್ಯಜೀವನದಲ್ಲಿ ಬೇಕೇಬೇಕಾಗಿತ್ತೆಂದೂ ಮತ್ತೊಬ್ಬ ಪ್ರವಾಸಿ ಬರೆಯುವುದನ್ನು ನೋಡಿದರೆ ಹೊಟ್ಟೆಗೆ "ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂವು" ಎನ್ನುವುದರಲ್ಲಿ ಸ್ವಲ್ಪ ಸತ್ಯವಿದೆಯೆಂದು ನಮಗೆ ಅನ್ನಿಸುತ್ತದೆ.

ಮತ್ತೊಂದು ಗಮನಾರ್ಹ ವಿಚಾರವೆಂದರೆ ಮತೀಯ ಸಹಿಷ್ಣುತೆ. ವಿಜಯ ನಗರದಲ್ಲಿ ಹಿಂದುಗಳು, ಮಹಮ್ಮದೀಯರು, ಜ್ಯೂ, ಕ್ರಿಶ್ಚಿಯನ್ ಜನಾಂಗಗಳು ನೆಮ್ಮದಿಯಾಗಿ ತಮ್ಮ ತಮ್ಮ ಮತಾಚಾರಗಳನ್ನು ನಿರ್ಭಯವಾಗಿ ಅನುಸರಿಸಿ ಬಾಳುತ್ತಿದ್ದ ಚಿತ್ರ ಪ್ರಶಂಸನೀಯವಾದುದು. ಹಿಂದೂ ರಾಜ್ಯವಾದ ವಿಜಯ ನಗರದಲ್ಲಿ ಅನೇಕ ಮಸೀದಿಗಳೂ ಮತ್ತು ಚರ್ಚುಗಳೂ ಇದ್ದುದನ್ನು ಕಂಡು ವಿದೇಶೀ ಪ್ರವಾಸಿಗಳು ಆಶ್ಚರ್ಯಚಕಿತರಾದರು.

ಎಂ. ಶೇಷಾದ್ರಿ

---

## ಜೋಗುಳವ ನೀ ಹಾಡಿದೆ

ಜೋಗುಳವ ನೀ ಹಾಡಿದೆ,
ಆಲಿಸುತೆ ನಾ ಸೋಡಿದೆ!

ನಿನ್ನ ಹೃದಯದ ಹೂವು ತೊಟ್ಟಿಲ
ಮೃದುಲ ಕೇಸರದೊಳಗಡೆ,
ಮಲಗಿ ಸುಮ್ಮನೆ ಲಾಲಿಯಾಲಿಸೆ
ಬಂತು ಕರಣಕೆ ಬಿಡುಗಡೆ!
ಜೋಗುಳವ ನೀ ಹಾಡಿದೆ. . . .

ನಿನ್ನ ಕಂಗಳ ಬಾನಿಸಂಚಿನ
ಮೂಡು ಪಡುವಣ ದೆಸೆಯಲಿ,
ಅಶ್ರುಮಾಲೆಯ ಧರಿಸಿ ರವಿ ಶಶಿ
ಇರಲು ರನ್ನದ ಹಸೆಯಲಿ,
ಜೋಗುಳವ ನೀ ಹಾಡಿದೆ. . . .

ಹರಕೆ ತುಳುಕುವ ನಿನ್ನ ವದನದಿ
ಮಂದಹಾಸವು ಮಿಂಚಲು
ನನ್ನ ಬಯಕೆಯ ಬಳ್ಳಿ ತಳೆಯಿತು
ಹರುಷ ಹೂವಿನ ಗೊಂಚಲು!
ಜೋಗುಳವ ನೀ ಹಾಡಿದೆ. . . .

ವೇದ ವಾಣಿಯ ಮಧುರ ವೀಣೆಯ
ನಿನ್ನ ಸುಚ್ ದನಿ ಉಲಿಯಲು
ನನ್ನ ಒಳಗಿನ ವೇದ ಪುರುಷನು
ಬೆಳೆದು ನನ್ನನು ಮೆಟ್ಟಲು
ಜೋಗುಳವ ನೀ ಹಾಡಿದೆ
ಆಲಿಸುತೆ ನಾ ಸೋಡಿದೆ!

ಪ್ರಭುಶಂಕರ

# ಶ್ರೀ ಶಂಕರ

ಕ್ರಿ.ಶ. ಎಂಟನೆ ಶತಮಾನದ ಅಂತ್ಯ. ಭರತಖಂಡದ ಇತಿಹಾಸದಲ್ಲಿ ಒಂದು ಸಂದಿಗ್ಧ ಸಮಯ. ವೇದೋಪನಿಷತ್ತಿನ ಸಂದೇಶ ಮಾಯವಾಗಿದೆ. ಎಲ್ಲಿ ನೋಡಿದರೂ ಬೌದ್ಧಧರ್ಮದ ಪ್ರಚಂಡ ತರಂಗ ಕಾಡಿಸುತ್ತಿದೆ. ಹಿಂದೂಧರ್ಮದ ಅವಸಾನ ಕಾಲ ಪ್ರಾಪ್ತವಾಯಿತೊ ಎಂಬ ಅನುಮಾನವನ್ನು ಹುಟ್ಟಿಸುವಂತೆ ಇದೆ. ಅಳಿದುಳಿದ ಹಿಂದೂಧರ್ಮ ಕೆಲಸಕ್ಕೆಬಾರದ ಆಚಾರವ್ಯವಹಾರದ ಮಹಾ ಮರುಭೂಮಿಯಲ್ಲಿ ನಾಶವಾಗುತ್ತಿದೆ. ಮತ್ತೆ ಕೆಲವು ಅತಿ ಹೀನ ಆಚಾರ, ಅಶ್ಲೀಲ ಪೂಜಾವಿಧಾನ ಮುಂತಾದ ಕಳೆಯಿಂದ ಕೂಡಿದೆ. ಇಂತಹ ಒಂದು ಸಂದಿಗ್ಧ ಸಮಯದಲ್ಲಿ ಭಾರತ ರಂಗಭೂಮಿಯ ಮೇಲೆ ಅದ್ವೈತಕೇಸರಿ ವೀರಶಂಕರಾಚಾರ್ಯರು ಬಸ್ತ್ರವೆತ್ತಿದರು.

ಕ್ರಿ.ಶ. ೭೮೮ ರಲ್ಲಿ ಮಲಬಾರಿನ ಕಾಲಡಿ ಎಂಬ ಗ್ರಾಮದಲ್ಲಿ ಶಿವಗುರು ಮತ್ತು ಆರ್ಯಾಂಬಾಮಾದೇವಿ ಎಂಬ ದಂಪತಿಗಳಿಗೆ ಜನಿಸಿದ ಮೊದಲನೆ ಶಿಶುವೆ ಶ್ರೀ ಶಂಕರಾಚಾರ್ಯ. ಮಗು ಬಾಲಲೀಲೆಯೆಲ್ಲ ಕಳೆದು ಉಪನಯನವಾಗುವ ಸಮಯದಲ್ಲಿ ತಂದೆ ತೀರಿಹೋದರು. ತಾಯಿ ನೆರೆಹೊರೆಯವರ ಸಹಾಯದಿಂದ ಉಪನಯನ ಮಾಡಿ ವಿದ್ಯಾಭ್ಯಾಸಕ್ಕೆ ಗುರುಗಳ ಸಮೀಪಕ್ಕೆ ಕಳುಹಿಸಿದಳು. ಕೆಲವು ವರುಷ ವೇದ ವೇದಾಂತಗಳನ್ನು ಕಲಿತು ಹುಡುಗ ಮನೆಗೆ ಬಂದನು. ಹಲವು ಜನ, ಹುಡುಗನ ಮದುವೆಗೆ ಹೆಣ್ಣನ್ನು ನಾನುತಾನೆಂದು ಕೊಡಲು ಬಂದರು. ಆದರೆ ಶಂಕರನಿಗೆ ಸಂನ್ಯಾಸಜೀವನದಲ್ಲಿ ಆಸಕ್ತಿ. ಮದುವೆಯಾಗಲೊಲ್ಲ. ಆದರೆ ತಾಯಿ ಸುಲಭವಾಗಿ ಒಪ್ಪಿಗೆ ಕೊಡಲಿಲ್ಲ. ಶಂಕರನಿಗೆ ತಾಯಿಯ ಮೇಲೆ ಬಹಳ ಮಮತೆ. ತನ್ನ ಬಾಲ್ಯದಲ್ಲೆ ತಂದೆಯನ್ನು ಕಳೆದುಕೊಂಡಿದ್ದ. ಅವನನ್ನು ಸಾಕಿ ಸಲಹಿದವಳು ತಾಯಿ. ಎಷ್ಟು ಭವಿಷ್ಯದ ಹೊಂಗನಸುಗಳನ್ನು ಮಗನ ಜೀವನದ ಮೇಲೆ ಕಟ್ಟಿಕೊಂಡಿದ್ದಳೊ! ಬಲಾತ್ಕಾರವಾಗಿ ತಾಯಿಯನ್ನು ಅಗಲಿಹೋಗಲೂ ಹೃದಯ ಒಪ್ಪದು. ಅದಕ್ಕಾಗಿ ಒಂದು ಸಮಯ ಕಾಯುತ್ತಿದ್ದನು. ಒಂದು ದಿನ ತಾಯಿ ಮಗ ಇಬ್ಬರೂ ಸ್ನಾನಕ್ಕೆ ಹೊಳೆಗೆ ಹೋಗಿದ್ದರು. ಶಂಕರಾಚಾರ್ಯರು ನೀರಿನಲ್ಲಿದ್ದಾಗ ಒಂದು ಮೊಸಳೆ ಬಂದು ಇವರ ಕಾಲನ್ನು ಹಿಡಿದಂತೆ ಆಯಿತು. ಆಗ ದಡದಲ್ಲಿದ್ದ ತಾಯಿಯನ್ನು ನೋಡಿ "ಅಂತೂ ಮೊಸಳೆಪಾಲು ನಾನಾಗುತ್ತೇನೆ. ನನ್ನ ಜೀವನದ ಏಕಮಾತ್ರ ಬಯಕೆ

ಸಂನ್ಯಾಸಿಯಾಗುವ್ರದು. ಈಗಲಾದರೂ ನೀನು ಒಪ್ಪಿಗೆ ಕೊಟ್ಟರೆ ಮನಸ್ಸಿನಲ್ಲಿಯೇ ಸಂನ್ಯಾಸಿಯಾಗಿ ಪ್ರಾಣಬಿಡುತ್ತೇನೆ" ಎಂದರು. ತಾಯಿ ವಿಧಿಯಿಲ್ಲದೆ ಒಪ್ಪಿಕೊಳ್ಳ ಬೇಕಾಯಿತು. ಹಿಡಿದ ಮೊಸಳೆ ಬಿಟ್ಟುಹೋಯಿತು. ಅಂತೂ ಅವರ ಕಾಲನ್ನು ಹಿಡಿದದ್ದು ನಿಜವಾದ ಮೊಸಳೆಯೋ ಅಥವಾ ಸಂಸಾರಸಾಗರದಲ್ಲಿರುವ ಮೋಹವೆಂಬ ಮೊಸಳೆಯೊ ಗೊತ್ತಿಲ್ಲ. ಅಲ್ಲಿಂದ ತಾಯಿಯ ಅನುಮತಿಯನ್ನು ಪಡೆದು ಅವಳ ಅವಸಾನ ಸಮಯದಲ್ಲಿ ತಾನು ಎಲ್ಲಿದ್ದರೂ ತಾಯಿಯ ಹತ್ತಿರ ಬರುವೆನೆಂದು ಭರವಸೆಕೊಟ್ಟು ಶ್ರೀ ಶಂಕರಾಚಾರ್ಯರು ನರ್ಮದಾ ನದೀತೀರದಲ್ಲಿ ವಾಸಿಸುತ್ತಿದ್ದ ಗೋವಿಂದಪಾದ ರೆಂಬ ಪ್ರಖ್ಯಾತ ಗುರುವರ್ಯರೆಡೆಗೆ ಹೊರಟರು. ಅವರ ಹತ್ತಿರ ಹಲವು ವರುಷ ಶಿಷ್ಯರಾಗಿ ಸಂನ್ಯಾಸಾಶ್ರಮ ಸ್ವೀಕರಿಸಿ ಕಾಶಿಗೆ ಹೊರಟರು.

ಆಗಿನ ಕಾಲದಲ್ಲಿ ಕಾಶಿ ಹಿಂದೂ ಸಂಸ್ಕೃತಿಯ ಕೇಂದ್ರವಾಗಿತ್ತು. ಯಾವ ಹೊಸ ತತ್ತ್ವ ಅಥವಾ ಸಂಪ್ರದಾಯ ರೂಢಿಗೆ ಬರಬೇಕಾದರೂ, ಮೊದಲು ಅದು ಕಾಶಿಯ ವಿದ್ವಜ್ಜನರ ಮೆಚ್ಚಿಗೆಗೆ ಪಾತ್ರವಾಗಬೇಕು. ನಂತರ ಮಾತ್ರ ಅದು ಉಳಿದ ಕಡೆ ಸ್ವೀಕಾರಕ್ಕೆ ಯೋಗ್ಯವಾಗುತ್ತಿತ್ತು. ಶಂಕರಾಚಾರ್ಯರು ಅದ್ವೈತ ತತ್ತ್ವದ ಪ್ರತಿಷ್ಠಾಪನಾಚಾರ್ಯರಲ್ಲ. ಅವರಿಗಿಂತ ಹಿಂದಿನಿಂದಲೂ ಈ ಮಹಾ ಸಂಪ್ರದಾಯ ಹರಿದು ಬಂದಿತ್ತು. ಆದರೆ ಶಂಕರಾಚಾರ್ಯರು ಇದನ್ನು ಪ್ರಸ್ಥಾನತ್ರಯಗಳ ಆಧಾರದ ಮೇಲಿಟ್ಟು ಮತ್ತೆ ಸುವ್ಯಸ್ಥಿತಗೊಳಿಸಿ ಹಲವು ಮಠಗಳನ್ನು ಸ್ಥಾಪನೆಮಾಡಿ ಪ್ರಖ್ಯಾತ ಶಿಷ್ಯವೃಂದವನ್ನು ಗಳಿಸಿದರು. ಶಂಕರಾಚಾರ್ಯರು ಪ್ರಸ್ಥಾನತ್ರಯಗಳ ಮೇಲೆ ಭಾಷ್ಯವನ್ನು ಬರೆದವರು ಮಾತ್ರವಲ್ಲ; ಹಲವು ಸ್ವತಂತ್ರ ಪ್ರಕರಣಗ್ರಂಥ ಗಳನ್ನೂ ಬರೆದರು. ಪಂಡಿತಪಾಮರರೆಲ್ಲರಿಗೂ ರುಚಿಸುವಂತಹ ಭಕ್ತಿರಸದಿಂದ ತುಂಬಿ ತುಳುಕಾಡುವ ಹಲವು ಸ್ತೋತ್ರಗಳನ್ನು ರಚಿಸಿದರು. ವಿದ್ವತ್ ಜನರ, ಸಾಧುಸಂತರ ಮೆಚ್ಚುಗೆ ಅವಕ್ಕೆ ದೊರೆತವು. ಕ್ರಮೇಣ ಅವರ ಖ್ಯಾತಿ ಹರಡಿತು.

ಭರತಖಂಡದಲ್ಲಿ ಸಂಚರಿಸಿ ತಮ್ಮ ತತ್ತ್ವ ಜನರಿಗೆ ಪ್ರಚಾರಮಾಡುವುದಕ್ಕಾಗಿ ಸಂಚಾರ ಕೈಕೊಂಡರು. ಮೊದಲು ತ್ರಿವೇಣೀಸಂಗಮಕ್ಕೆ ಹೋದರು. ಅಲ್ಲಿ ಮಾತಾಪಿತೃಗಳನ್ನು ನೆನಸಿಕೊಂಡು ಸ್ನಾನಮಾಡಿ ಒಂದು ಮರದಡಿ ಶಿಷ್ಯಪರಿವಾರ ದೊಂದಿಗೆ ವಿಶ್ರಮಿಸಿಕೊಳ್ಳುತ್ತಿದ್ದರು. ಆಗಲೆ ಪ್ರಖ್ಯಾತಪೂರ್ವಮೀಮಾಂಸಪಂಡಿತ ನಾದ ಕುಮಾರಿಲಭಟ್ಟನೆನ್ನುವವನು ಬೆಂಕಿಗೆ ಬೀಳುವುದರಲ್ಲಿ ಇರುವನು ಎಂಬ ಸುದ್ದಿ ಯನ್ನು ಕೇಳಿದರು. ಆ ಪ್ರಖ್ಯಾತ ಪ್ರಚಂಡ ಬೌದ್ಧವಿರೋಧಿಯೊಂದಿಗೆ ಮಾತನಾಡ ಬೇಕೆಂದು ಅವಸರದಿಂದ ಅಲ್ಲಿಗೆ ಬಂದರು. ಕುಮಾರಿಲಭಟ್ಟ ತಾನೆ ಬೌದ್ಧನಾಗಿ ಬೌದ್ಧರ ಬಲಾಬಲಗಳನ್ನು ತಿಳಿದುಕೊಂಡು ನಂತರ ಹಿಂದುವಾಗಿ ಬೌದ್ಧರನ್ನು

ವಿರೋಧಿಸಿದನು. ಹಾಗೆ ಬೌದ್ಧಗುರುನಿಂದೆಯ ಪ್ರಾಯಶ್ಚಿತ್ತಕ್ಕಾಗಿ ತಾನೆ ಬೆಂಕಿ ಹತ್ತಿಸಿ ಅದರಲ್ಲಿ ತನ್ನ ದೇಹವನ್ನು ಅರ್ಪಿಸಿದನು. ಇದೊಂದು ಧೀರವ್ಯಕ್ತಿಯ ಜೀವನದ ಕೊನೆಗಾಲದ ಮಹಾಸಾಹಸದ ರುದ್ರದೃಶ್ಯ. ಶಂಕರಾಚಾರ್ಯರು ಅಲ್ಲಿಗೆ ಬಂದಾಗ ಆಗಲೆ ಸಮಯ ಮೀರಿತ್ತು. ದೇಹ ಬೆಂದುಹೋಗುತ್ತಿತ್ತು. ಆಗ ಕುಮಾರಿಲಭಟ್ಟ ತನ್ನ ಭಾವ ಮಂಡನಮಿಶ್ರ ತನ್ನಷ್ಟೇ ವಿದ್ಯಾವಂತನೆಂದೂ ಅವನೊಂದಿಗೆ ಹೋಗಿ ಮಾತನಾಡಬಹುದೆಂದೂ ಹೇಳಿ ತನ್ನ ದೇಹವನ್ನು ಜ್ವಾಲೆಗಿತ್ತು ಮಾಯವಾದನು.

ನಂತರ ಶಂಕರಾಚಾರ್ಯರು ಮಂಡನಮಿಶ್ರನೊಂದಿಗೆ ವಾದಮಾಡಲು ಮಾಹಿಷ್ಮತಿ ನಗರಿಗೆ ಬಂದರು. ಮಂಡನಮಿಶ್ರನ ಸತಿ ಭಾರತಿ ಪ್ರಖ್ಯಾತ ವಿದ್ಯಾವಂತಳಾಗಿದ್ದಳು. ಆ ಕಾಲದಲ್ಲಿ ತನ್ನ ಪತಿಯ ಮತ್ತು ಯತಿಯ ವಾದದಲ್ಲಿ ತೀರ್ಪನ್ನು ಕೊಡಲು ಭಾರತಿಯನ್ನೇ ಗೊತ್ತುಮಾಡಿದರು. ಮಂಡನಮಿಶ್ರ ಸೋತರೆ ಸಂನ್ಯಾಸಿಯಾಗಿ ಶಂಕರಾಚಾರ್ಯರನ್ನು ಅನುಸರಿಸಲು ಸಿದ್ಧನಾಗಿದ್ದನು. ಮಂಡನಮಿಶ್ರ ವಾದದಲ್ಲಿ ಸೋಲುವ ಸ್ಥಿತಿಗೆ ಬಂದನು. ಆಗ ಭಾರತಿ ಶಂಕರಾಚಾರ್ಯರನ್ನು ಯತಿಯ ಅನುಭವಕ್ಕೆ ಬಾರದ ಕೆಲವು ಪ್ರಶ್ನೆಗಳಿಂದ ಎದುರಿಸಿದಳೆಂದೂ ಶಂಕರಾಚಾರ್ಯರು ಕಾಲಾವಕಾಶವನ್ನು ಪಡೆದು ಪರಕಾಯಪ್ರವೇಶಮಾಡಿ ಅನುಭವ ಗಳಿಸಿ ಆಕೆಯ ಪ್ರಶ್ನೆಗೆ ಉತ್ತರ ಕೊಟ್ಟರೆಂದೂ ಹೇಳಿದೆ. ಮಂಡನಮಿಶ್ರ ಸಂನ್ಯಾಸಿಯಾಗಿ ಶಂಕರಾಚಾರ್ಯರನ್ನು ಅನುಸರಿಸಿದನು. ಈಕೆಯೂ ಕೂಡ ಸಂಚಾರ ತ್ಯಜಿಸಿ ನಿವೃತ್ತಿಮಾರ್ಗವನ್ನು ಹಿಡಿದಳೆಂದೂ ಶೃಂಗೇರಿಯಲ್ಲಿ ಶಂಕರಾಚಾರ್ಯರು ಕಟ್ಟಿಸಿದ ಮಠದಲ್ಲಿ ಇದ್ದಳೆಂದೂ, ತನ್ನ ಕೊನೆಗಾಲವನ್ನು ಪ್ರಾರ್ಥನೆ ಧ್ಯಾನಾದಿಗಳಲ್ಲಿ ಕಳೆದಳೆಂದೂ ಹೇಳುವರು. ಶಂಕರಾಚಾರ್ಯರೇ ಆ ಮಹಾ ತಾಯಿಯ ಜ್ಞಾಪಕಾರ್ಥವಾಗಿ ಆ ಸ್ಥಳದಲ್ಲಿ ಶಾರದಾ ದೇವಸ್ಥಾನವನ್ನು ಕಟ್ಟಿಸಿದರು.

ಮಾಹಿಷ್ಮತಿಯಿಂದ ಶಂಕರಾಚಾರ್ಯರು ಮಹಾರಾಷ್ಟ್ರ ದೇಶಕ್ಕೆ ಬಂದರು. ಅಲ್ಲಿನ ಜನರ ಹಲವು ಅನಾಚಾರಗಳನ್ನು ಖಂಡಿಸಿದರು. ಅವರಿಗೆ ವಿವೇಕೋದಯವಾಗುವಂತೆ ಮಾಡಿದರು. ನಂತರ ನರಬಲಿ ಮುಂತಾದುವನ್ನು ಕೊಡುತ್ತಿದ್ದ ಕಾಪಾಲಿಕರ ಕೈಗೆ ಸಿಕ್ಕಿ ಅವರಿಂದ ಪಾರಾಗಿ ಬಂದರು. ಇಲ್ಲಿಂದ ದಕ್ಷಿಣಕ್ಕೆ ಹೊರಟು ತುಂಗಾತೀರದಲ್ಲಿ ಶೃಂಗೇರಿಮಠ ಸ್ಥಾಪನೆಮಾಡಿ ಅಲ್ಲಿಗೆ ಸಂನ್ಯಾಸಿಯಾದ ಮಂಡನಮಿಶ್ರನನ್ನೇ ಸುರೇಶ್ವರಾಚಾರ್ಯರೆಂದು ಅಧಿಪತಿಯಾಗಿ ಮಾಡಿದರು.

ಈ ಸಮಯದಲ್ಲೆ ತಮ್ಮ ತಾಯಿಯ ಸ್ಥಿತಿ ತುಂಬಾ ಚಿಂತಾಜನಕವಾಗುತ್ತಿದೆ ಎಂಬ ಸಮಾಚಾರ ಮುಟ್ಟಿ ಹಿಂದೆ ತಾವು ಮಾತುಕೊಟ್ಟಂತೆ ತಾಯಿಯ ಸಮೀಪಕ್ಕೆ

ಬಂದರು. ತಾಯಿಯ ಅವಸಾನದ ಸಮಯದಲ್ಲಿ ಅವರ ಹತ್ತಿರ ಕುಳಿತುಕೊಂಡು ದೇವರ ವಿಷಯವನ್ನು ಮಾತನಾಡುತ್ತಿದ್ದರು. ಭವಬಂಧನದಿಂದ ಪಾರಾಗಿ ಆತ್ಮಾನುಭವವನ್ನು ತಾನು ಅನುಭವಿಸಿ ಇತರರಿಗೂ ಕೊಡಲು ಶ್ರಮಿಸುತ್ತಿದ್ದ ಮಗ ತನ್ನ ಕೊನೆಗಾಲದಲ್ಲಿ ಹತ್ತಿರ ಇದ್ದುದರಿಂದ ಆಕೆಯ ಮನಸ್ಸಿಗೆ ಎಷ್ಟೋ ಶಾಂತಿ ದೊರಕಿರಬಹುದು. ತಾಯಿಯ ಕಾಲಾನಂತರ ಅವರ ಶವಸಂಸ್ಕಾರಕ್ಕೆ ನೆರೆಹೊರೆಯವರಾರೂ ಸಹಾಯಕ್ಕೆ ಬರಲಿಲ್ಲ. ಸಂನ್ಯಾಸಿ ಇಂತಹ ಕ್ರಿಯೆಗಳನ್ನು ಮಾಡುವುದು ಶಾಸ್ತ್ರವಿರುದ್ಧವೆಂದರು. ಆದರೆ ಶಂಕರಾಚಾರ್ಯರು ಬಣಶಾಸ್ತ್ರದ ಕಟ್ಟಳೆಗೆ ಸೋಲುವವರಲ್ಲ. ಅವರು ವೀರ ಅದ್ವೈತಿಯಾದರೂ ಹೃದಯ ಅತಿ ಮೃದು ; ತಾಯಿಯ ಮೇಲೆ ಅಷ್ಟು ಪೂಜ್ಯಭಾವ. ಯಾವ ತಾಯಿಯ ಪ್ರಾರ್ಥನೆಯಿಂದ ಜಗತ್ತಿಗೆ ಬಂದರೋ, ಯಾವ ತಾಯಿಯ ಆಶೀರ್ವಾದದಿಂದ ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿದರೋ, ಅಂತಹ ಮಹಾತಾಯಿಗೆ ಮಗ ಮಾಡುವ ಕರ್ತವ್ಯವನ್ನು ಎಲ್ಲರಿಗೂ ವಿರೋಧವಾದರೂ ಮಾಡಿಯೇ ಮಾಡಿದರು. ದೇಹವನ್ನು ಇವರೇ ಹೊತ್ತು ಸಂಸ್ಕರಿಸಿದರು. ಆಕೆಯ ಆತ್ಮಕ್ಕಾಗಿ ಪ್ರಾರ್ಥಿಸಿ ಹಿಂತಿರುಗಿದರು. ಒಮ್ಮೆ ಸ್ವಾಮಿ ವಿವೇಕಾನಂದರು ತಾಯಿಯನ್ನು ಆರಾಧಿಸದವರಾರೂ ಮಹಾತ್ಮರಾಗಿಲ್ಲವೆಂದರು. ಶಂಕರಾಚಾರ್ಯರ ಜೀವನದಲ್ಲಿ ನಮ್ಮೆದೆ ಮುಟ್ಟುವ ದೃಶ್ಯ ಈ ಘಟನೆ. ತಾಯಿಯ ಮೇಲೆ ಅಷ್ಟು ಮಮತೆ ಮತ್ತು ಗೌರವ ಇವರಿಗೆ.

ಶೃಂಗೇರಿಗೆ ಹಿಂತಿರುಗಿ, ಕೆಲವು ಕಾಲವಿದ್ದು ಪುನಃ ಕಂಚಿ ಮಧುರೆ ಮುಂತಾದ ಸ್ಥಳಗಳಿಗೆ ಹೋಗಿ ಅಲ್ಲಿ ಶಾಸ್ತ್ರಸಂಪ್ರದಾಯದಲ್ಲಿ ಕಾಲಕ್ರಮೇಣ ಬಂದ ಹಲವು ನ್ಯೂನತೆ ಪರಿಹರಿಸಿ ಅತಿ ಉತ್ಕೃಷ್ಟದೃಷ್ಟಿಯಿಂದ ಜಗನ್ಮಾತೆಯ ಆರಾಧನೆಯನ್ನು ರೂಢಿಗೆ ತಂದರು. ಈಗಲೂ ಕಂಚಿ ಕಾಮಾಕ್ಷಿ ಮಧುರೆ ಮೀನಾಕ್ಷಿ ದೇವಸ್ಥಾನದಲ್ಲಿ ಶಂಕರಾಚಾರ್ಯರು ಬಂದುಹೋದುದು ಸ್ಥಳಪುರಾಣದಲ್ಲಿದೆ.

ಇದಾದ ಮೇಲೆ ಕೊನೆಯ ಬಾರಿ ದಕ್ಷಿಣವನ್ನು ಬಿಟ್ಟು ಉತ್ತರದಲ್ಲಿ ಕಾಮರೂಪಕ್ಕೆ ಹೋಗಿ ಅಭಿನವಗುಪ್ತನೆಂಬ ಶಾಸ್ತ್ರಭಾಷ್ಯಕಾರನೊಂದಿಗೆ ವಾದಮಾಡಿ ಗೆದ್ದರು. ಕೆಲವು ದಿನಗಳು ಅಲ್ಲಿ ರೋಗರುಜಿನಗಳಿಗೆ ತುತ್ತಾಗಿ ನಂತರ ಆರೋಗ್ಯ ಪಡೆದ ಮೇಲೆ ಹಿಮಾಲಯದಲ್ಲಿರುವ ಬದರಿಗೆ ಹೋದರು. ಅಲ್ಲಿ ಒಂದು ಮಠ ಸ್ಥಾಪನೆ ಮಾಡಿ ಶ್ರೀಮನ್ನಾರಾಯಣನಿಗೆ ಒಂದು ಗುಡಿಯನ್ನು ಕಟ್ಟಿಸಿದರು. ಕೊನೆಗೆ ಕೇದಾರನಾಥಕ್ಕೆ ಹೋಗಿ ಧ್ಯಾನಮಗ್ನ ಶಿವನ ನೆನಪನ್ನು ತರುವ ಧವಳ ಹಿಮಾಲಯ ಪಂಕ್ತಿಯ ಮಡಿಲೊಳಗೆ . ಮಲಗಿದರು. ನಿರ್ವಿಕಲ್ಪ ಸಮಾಧಿಯಲ್ಲಿ ತಮ್ಮ ಮೂವತ್ತೆರಡನೆಯ ವಯಸ್ಸಿನಲ್ಲಿ ದೇಹವನ್ನು ತ್ಯಜಿಸಿದರು. ಆ ಬೃಹತ್

ಹಿಮಾಲಯಕ್ಕೂ ವೀರಯತಿ ಶಂಕರಾಚಾರ್ಯರಿಗೂ ಒಂದು ಸಾಮ್ಯವಿದೆ. ಹಿಮಾಲಯು ದಲ್ಲಿ ಮಾನವನ ಸಾಹಸವನ್ನು ಅಣಕಿಸುತ್ತಿರುವ ಶಿಖರಗಳಿವೆ. ಎಲ್ಲೋ ಕೆಲವು ಸಾಹಸಿಗಳಿಗೆ ಮಾತ್ರ ಏರಲು ಸಾಧ್ಯವಾಗುವ ಉತ್ತುಂಗ ಶಿಖರಗಳಿವೆ. ಅಲ್ಲಿಯ ಸೌಂದರ್ಯದ ಗಭೀರತೆ ಆಶ್ಚರ್ಯವನ್ನುಂಟುಮಾಡುವುದು. ಶ್ರೀ ಶಂಕರರು ಮತ್ತೊಂದು ಆಧ್ಯಾತ್ಮಿಕ ಹಿಮಾಲಯು ಸ್ತೋಮ. ಅವರ ಪ್ರತಿಭೆ ಅವರ ಸಾಹಸ ಅವರ ವಿದ್ವತ್ ಎಂತಹವನನ್ನೂ ಮೂಕನನ್ನಾಗಿ ಮಾಡುವುದು.

ಶಂಕರಾಚಾರ್ಯರ ಸಿದ್ಧಾಂತವನ್ನು ಅದ್ವೈತವೆನ್ನುವರು. ಇದು ದ್ವೈತ ವಿಶಿಷ್ಟಾ ದ್ವೈತಗಳೊಂದಿಗೆ ಎಲ್ಲಿಯ ವರೆವಿಗೂ ಹೋಗಬಹುದೋ ಅಲ್ಲಿಯ ವರೆವಿಗೂ ಹೋಗಿ, ಎಲ್ಲಿ ಅವು ನಿಲ್ಲುವುವೊ ಅಲ್ಲಿಂದ ಮುಂದೆ ಹೋಗಿ ಒಂದರಲ್ಲಿ ಐಕ್ಯವಾಗುವುದು. ಇವರ ತತ್ತ್ವವನ್ನು ಮೂರು ಮಹಾವಾಕ್ಯಗಳಲ್ಲಿ ಸಂಗ್ರಹಿಸಬಹುದು. ಮೊದಲನೆಯದು ಬ್ರಹ್ಮ ಸತ್ಯ ಜಗನ್ಮಿಥ್ಯಾ ಎಂಬುದು. ಬ್ರಹ್ಮವೊಂದೇ ಸತ್ಯ ಉಳಿದುದೆಲ್ಲ ಅಸತ್ಯ. ನಮಗೆ ಈಗ ಅಸತ್ಯವೂ ಸತ್ಯವಾಗಿ ಕಾಣುತ್ತಿದೆ. ಆದರೆ ಇದು ತಾತ್ಕಾಲಿಕ. ಇದೇ ಪರಮ ಸತ್ಯವಲ್ಲ. ಪರಮಸತ್ಯ ಒಂದೇ ಒಂದು. ಅದೇ ಬ್ರಹ್ಮ. ಆದರೂ ಈ ವೈವಿಧ್ಯತೆಯಿಂದ ಕೂಡಿದ ಜಗತ್ತು ಸತ್ಯವಾಗಿ ಕಾಣುತ್ತಿದೆಯಲ್ಲಾ ಅದಕ್ಕೆ ಕಾರಣವೇನು ಎಂದು ಪ್ರಶ್ನಿಸಬಹುದು. ಇದನ್ನೇ ಶಂಕರಾಚಾರ್ಯರು ಅನಿರ್ವಚನೀಯ ಎನ್ನುವರು. ಅದನ್ನು ಇದೆ ಎನ್ನುವುದಕ್ಕೆ ಆಗುವುದಿಲ್ಲ. ಇಲ್ಲ ಎನ್ನುವುದಕ್ಕೆ ಆಗುವುದಿಲ್ಲ. ಬದ್ಧರಾದಾಗ ಇದೆ, ಮುಕ್ತರಾದಾಗ ಇಲ್ಲ. ಆದರೆ ಹಾಗೆ ಬದ್ಧರಿಗೆ ಏತಕ್ಕೆ ಇರುವುದು ಎಂದರೆ ಮಾಯೆಯಿಂದ ಇಲ್ಲದುದು ಇರುವಂತೆ ಕಾಣುವುದು, ಇರುವುದು ಇಲ್ಲದಂತೆ ಕಾಣುವುದು. ಈ ಮಾಯೆ ಹೇಗೆ ಆಯಿತು ಎನ್ನುವುದಕ್ಕೆ ಯಾವ ಕಾರಣವೂ ಇಲ್ಲ. ಅಂತೂ ಇದೆ. ಇದರಿಂದ ಪಾರಾಗಿ ಹೋಗಲು ದಾರಿ ಇದೆ ಎಂದು ನಿಸ್ಸಂಕೋಚದಿಂದ ಹೇಳುವರು. ಈ ಮಾಯೆ ಜೀವಿಗಳ ಮುಂದೆ ಹಲವಾರು ಆತಂಕ ಗಳನ್ನು ತಂದೊಡ್ಡುವುದು. ಪ್ರಪಂಚದ ಅನುಭವದಿಂದ, ಕ್ರಮೇಣ ನಮ್ಮ ಭ್ರಾಂತಿ ಯಿಂದ ಪಾರಾಗಿ ಹೋದ ಮೇಲೆ 'ಜೀವೋಬ್ರಹ್ಮೈವ ನಾ ಪರಃ' ಎಂಬ ಎರಡನೇ ಮಹಾವಾಕ್ಯಕ್ಕೆ ಬರುತ್ತೇವೆ. ಜೀವಿಯ ನಿಜವಾದ ಹಿನ್ನೆಲೆ ಬ್ರಹ್ಮ. ಆತನಿಂದ ಬಂದುದು, ಅಲ್ಲಿಗೇ ಹೋಗುವುದು. ಸಮುದ್ರದ ನೀರಿನಿಂದ ಆದ ಉಪ್ಪಿನ ಗೊಂಬೆ ಸಮುದ್ರವನ್ನು ಪರೀಕ್ಷಿಸಲು ಹೊರಟಾಗ ಸ್ವಲ್ಪ ದೂರದಲ್ಲಿ ಐಕ್ಯವಾಗುವುದು. ಹಲವು ನಾಮರೂಪಗಳನ್ನು ತಾಳಿ ಬೇರೆ ಬೇರೆ ಕಡೆಯಿಂದ ಹರಿದುಬಂದ ನದಿ ಸಾಗರವನ್ನು ಸೇರಿದ ಮೇಲೆ ಅದರಲ್ಲಿ ಐಕ್ಯವಾಗುವುದು. ನಾನಾರು ಎಂಬ ಪ್ರಶ್ನೆ ಯಿಂದ ನಮ್ಮನ್ನು ನಾವು ವಿಭಜಿಸಿಕೊಳ್ಳುತ್ತಾ ಹೋದರೆ ಕೊನೆಗೆ ನಾನೇ ಮಾಯ

ವಾಗುವುದು. ಇರುವ ಎಲ್ಲಾ ವಸ್ತುವಿನ ಮೂಲಕ್ಕೆ ಬರುವೆವು. ಜೀವಿಯ ಗುರಿ ಅದರಲ್ಲಿ ಐಕ್ಯವಾಗುವುದು.

ಐಕ್ಯವಾದಮೇಲೆ 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಮೂರನೆ ಭಾವನೆ ಬರುವುದು. ಈ ಪ್ರಪಂಚದಲ್ಲಿ ಏನಿದೆ ಅದೆಲ್ಲ ಒಂದೇ ವಸ್ತುವಿನಿಂದ ಆದುದು. ಸಾಗರದ ಮೇಲೆ ಹಲವಾರು ಅಲೆಗಳು ಎದ್ದು ಬೀಳುತ್ತಿರಬಹುದು. ಅವೆಲ್ಲ ಸಾಗರ ದಿಂದ ಬೇರೆಯಾಗಿಲ್ಲ. ಮೊದಲು ಜಗತ್ತನ್ನು ಮಿಥ್ಯವೆಂದು ಸಾರಿ ಈಗ ಸರ್ವಂ ಖಲ್ವಿದಂ ಬ್ರಹ್ಮವೆಂದರೆ ವಿರೋಧದಂತೆ ಕಾಣಬಹುದು. ಜಗತ್ತು ಬ್ರಹ್ಮದಿಂದ ಬೇರೆ ಇದೆ, ಅದಕ್ಕೇ ಪ್ರತ್ಯೇಕಸ್ಥಾನವಿದೆ, ಯಾವುದಿಲ್ಲದಿದ್ದರೂ ಅದು ಇರಬಹುದು ಎಂಬ ಭಾವನೆ ಮಿಥ್ಯ ಅಷ್ಟೆ. ಆದರೆ ಅದಕ್ಕೆ ದೇವರ ಹಿನ್ನಲೆ ಸಿಕ್ಕಿದಾಗ ಸತ್ಯ. ಅಲೆ ಸಾಗರದಿಂದ ಬೇರೆ ಇರಲಾರದು. ಬೇರೆ ಇದ್ದರೆ ಅದು ಅಸತ್ಯ. ಸಾಗರದ ಒಂದು ಆವಿರ್ಭಾವದಂತೆ ಇದು ಇರಬಹುದು.

ಇದು ಕೇವಲ ಗುರಿಯಾಯಿತು. ಈ ಗುರಿಯನ್ನು ಮುಟ್ಟಬೇಕಾದರೆ ಒಂದು ದಾರಿ ಆವಶ್ಯಕ. ಅದನ್ನೇ ಸಾಧನೆ ಎನ್ನುವರು. ವೇದಾಂತದಲ್ಲಿ ಇದನ್ನು ಸಾಧನ ಚತುಷ್ಟಯವೆನ್ನುವರು. ಸಾಧನಚತುಷ್ಟಯದ ತಳಹದಿ ಇಲ್ಲದೆ ಇದೊಂದು ಕೇವಲ ಒಣವಿಚಾರಮಾರ್ಗವೆಂದು ಭಾವಿಸಿದರೆ ಸರ್ವಜ್ಞ ಕವಿ ಅದ್ವೈತದ ಮೇಲೆ ನುಡಿದ ಒಂದು ವಚನ ಜ್ಞಾಪಕಕ್ಕೆ ಬರುವುದು. "ಅದ್ವೈತಕೆ ಹೋರಾಡಿ, ಇದ್ದುದನು ನೀಗಾಡಿ, ಉದ್ದನಾ ಮರವೇರಿ ತಲೆಕೆಳಕಾಗಿ ಬಿದ್ದಂತೆ ಸರ್ವಜ್ಞ." ಸಾಧನ ಚತುಷ್ಟಯದಲ್ಲಿ ಮೊದಲನೆಯದೆ ನಿತ್ಯಾನಿತ್ಯ ವಿವೇಕ, ಎರಡನೆಯದೆ ಫಲಭೋಗ ವಿರಾಗ (ಇಲ್ಲಿ ಮತ್ತು ನಂತರ ಬರುವ ಫಲದ ಮೇಲೆ ಅನಾಸಕ್ತಿ), ಮೂರನೆಯದೆ ಶಮ, ದಮ, ಉಪರತಿ, ತಿತಿಕ್ಷೆ, ಕೊನೆಯದೆ ಮುಮುಕ್ಷುತ್ವ. ಈ ಜಗತ್ತಿನ ಅನಿತ್ಯತೆ ನಮಗೆ ಅರಿವಾಗಿ, ದುಃಖ ನಮ್ಮೆದೆಗೆ ತಾಕಿ, ಇದರಿಂದ ಪಾರಾಗಬೇಕೆಂಬ ಒಂದು ತೀವ್ರ ಆಕಾಂಕ್ಷೆ ಬಡಬಾನಲನಂತೆ ನಮ್ಮ ಎದೆ ಅಂತರಾಳದಲ್ಲಿರಬೇಕು. ಈ ಸಾಧನ ಚತುಷ್ಟಯವಿಲ್ಲದೇ ಇದ್ದರೆ ಅದ್ವೈತ ಕೇವಲ ಮೂರ್ತಿಮಲ್ಲರಿಗೆ ಕಾಲಹರಣಕ್ಕೆ ಅವಕಾಶ ಒದಗಿಸಿಕೊಡುವುದೇ ವಿನಃ ಮುಕ್ತಿ ಶ್ರೀ ದೊರಕದು.

ಅದ್ವೈತದಲ್ಲಿ ಜೀವಿಗಿಂತ ಬೇರೆಯಾದ ಬೇರೆ ದೇವರೊಬ್ಬನಿಗೆ ಸ್ಥಳವಿದೆಯೇ ಎಂದು ಕೇಳಬಹುದು. ಒಂದು ಕಾಲದಲ್ಲಿದೆ. ಆ ಸಮಯದಲ್ಲಿ ಈಗ ನಮ್ಮ ವ್ಯಕ್ತಿತ್ವ ದಷ್ಟೇ ಅಥವಾ ಅದಕ್ಕಿಂತ ಹೆಚ್ಚು ಸತ್ಯ ಆ ದೇವರು. ಈ ಮಾಯೆ ಕೂಡ ಆತನ ಆಧೀನ. ಎಲ್ಲಿಯ ವರೆವಿಗೂ ಜೀವ ಬೇರೆ ಪ್ರಪಂಚ ಬೇರೆ ಎಂಬ ಭಾವ ನಮ್ಮಲ್ಲಿ ಬೇರೂರಿವೆಯೊ ಅಲ್ಲಿಯ ವರೆಗೆ ಈ ಜೀವ ಜಗತ್ತುಗಳ ಸ್ವಾಮಿಯಾದ ಈಶ್ವರನು

ಇದ್ದೇ ಇರುವನು. ಆತ ನಮ್ಮ ಪ್ರಾರ್ಥನೆಯನ್ನು ಕೇಳುವನು, ದುಃಖವನ್ನು ಪರಿಹರಿಸುವನು. ನಿರಾಸೆಯ ಎದೆಯಲ್ಲಿ ಆಸೆಯ ಹಣತೆಯನ್ನು ಹಚ್ಚುವನು. ನಿರಾಕಾರ ಬ್ರಹ್ಮನೇ ಸಾಕಾರ ಈಶ್ವರನಾಗಿ ಬದ್ಧ ಜೀವಿಗಳ ಎದುರಿಗೆ ನಿಂತು, ಜೀವನದ ಕಡುಕಷ್ಟಮಾರ್ಗದಲ್ಲಿ ನಮ್ಮ ಜಬಾಬ್ದಾರಿಯನ್ನು ವಹಿಸಿಕೊಂಡು ಗುರಿಯ ಎಡೆಗೆ ಕರೆದೊಯ್ಯಲು ಮಾರ್ಗದರ್ಶಕನಾಗುವನು. ಅವನನ್ನು ಹಲವಾರು ಹೆಸರಿನಿಂದ ಕರೆಯಬಹುದು, ಹಲವು ಭಾವದಿಂದ ಪೂಜಿಸಬಹುದು. ಶ್ರೀ ಶಂಕರಾಚಾರ್ಯರೇ ಅಂತಹ ಹಲವು ಸ್ತೋತ್ರಗಳನ್ನು ರಚಿಸಿರುವರು. ಅಹಂಬ್ರಹ್ಮಾಸಿ ಎಂದು ಘರ್ಜಿಸಿದವರೇ, ಭಜಗೋವಿಂದಂ, ಭಜಗೋವಿಂದಂ ಭಜ ಮೂಢಮತೆ ಎನ್ನುವರು. ಶಂಕರಾಚಾರ್ಯರು ತಮ್ಮ ಅನುಷ್ಠಾನದಲ್ಲಿ ಎಲ್ಲಾ ಭಾವಗಳನ್ನೂ, ಎಲ್ಲಾ ಮಾರ್ಗಗಳನ್ನೂ ಅಳವಡಿಸಿಕೊಂಡು ಪೂರ್ಣತೆಯ ಎಡೆಗೆ ಹೋಗಿರುವರು.

ಶಂಕರಾಚಾರ್ಯರ ಜೀವನ ಆಧ್ಯಾತ್ಮಿಕ ಜೀವನದ ಒಂದು ಮಹಾದಂಡಯಾತ್ರೆ. ಅಸಾಧ್ಯ ವಿಜಯಪರಂಪರೆಗಳನ್ನು ಗಳಿಸಿ ಹಿಂದೂಧರ್ಮವನ್ನು ಪುನಃ ಸ್ಥಾಪನೆ ಮಾಡಿದರು. ಈ ಒಬ್ಬ ಯತೀಶ್ವರರು ಆಗಿನ ಕಾಲದಲ್ಲಿ, ಅತ್ಯಲ್ಪಸಮಯದಲ್ಲಿ, ಈಗಿನ ಒಂದು ಸುಧಾರಕರ ಸೇನೆ ಯಾವುದನ್ನು ಸಾಧಿಸಲು ಅಸಾಧ್ಯವೋ, ಅದನ್ನು ಸಾಧಿಸಿದರು. ಅದನ್ನು ಇಪ್ಪತ್ತನೇ ಶತಮಾನದಲ್ಲಿ ನಿಂತ ನಾವು ನೆನಸಿಕೊಂಡರೂ ರೋಮಾಂಚನವಾಗುವುದು. ಈಗಿನ ಯುಗದಲ್ಲಿ ಕಾಲದೇಶವನ್ನು ಮಾನವನು ಲೀಲಾಜಾಲವಾಗಿ ತನ್ನ ಅಧೀನಕ್ಕೆ ತಂದಿರುವನು. ರೈಲು ಆಕಾಶವಿಮಾನದ ಯುಗ ಇದು. ವಿದ್ಯುತ್‌ಶಕ್ತಿ ಕಣ್ಣುಮಿಟಿಕಿಸುವುದರೊಳಗೆ ಸುದ್ದಿಯನ್ನು ಜಗದ ಮೂಲೆಮೂಲೆಗೆ ಹರಡಬಲ್ಲದು. ಆದರೆ ಶಂಕರಾಚಾರ್ಯರ ಕಾಲದಲ್ಲಿ ವಾಹನ ಸೌಕರ್ಯವಿಲ್ಲ, ಅಂಚೆ ಇಲಾಖೆ, ವೃತ್ತಪತ್ರಿಕೆಗಳಿಲ್ಲ. ಆದರೂ ಮೂವತ್ತೆರಡು ವಯಸ್ಸಿನೊಳಗೆ ಎಷ್ಟೊಂದನ್ನು ಸಾಧಿಸಿದರು! ಹಿಂದೂಧರ್ಮವನ್ನು ನಿರ್ನಾಮಮಾಡುತ್ತಿದ್ದ ಬೌದ್ಧರೊಡನೆ ಯುಕ್ತಿಕೂರಸಿಯಿಂದ ಹೋರಾಡಿ ಸೋಲಿಸಿದರು. ಹಿಂದೂಧರ್ಮದಲ್ಲೆ ಬೆಳೆದ ಮೂಢನಂಬಿಕೆಯ ಕಳೆಯನ್ನು ಕಿತ್ತರು. ಕೊಳೆತು ನಾರುತ್ತಿರುವ ಜಿಗುಪ್ಸಾಕಾರಕ ಲುಪ್ತ ಧಾರ್ಮಿಕ ಪಂಗಡದ ಕಸವನ್ನು ಗುಡಿಸಿದರು. ತಮ್ಮ ಬಾಳಿನ ತಪಶ್ಶಕ್ತಿಯನ್ನು ಧಾರೆ ಎರೆದು, ಹಿಂದೂಸಂಸ್ಕೃತಿಯ ನಾಡಿನಾಡಿಯಲ್ಲಿ ಹೊಸ ಜೀವ ಸಂಚರಿಸುವಂತೆ ಮಾಡಿದರು. ಈ ಯತಿ ಜಗತ್ತೆಲ್ಲ ಮಾಯೆ, ಭ್ರಾಂತಿ ಎಂದು ಜರಿದು, ಯಾವುದೋ ಗಿರಿಕಂದರದಲ್ಲಿ ಕುಳಿತು ತಪಸ್ಸು ಮಾಡಿ ತನ್ನ ದೇಹವನ್ನು ಆಚೆಗೆ ಎಸೆದ ಋಷಿಗಳಲ್ಲೊಬ್ಬರಲ್ಲ. ಸಂಸಾರ ತಾತ್ಕಾಲಿಕ ಸತ್ಯವಾದರೂ, ನಮ್ಮ ಕಣ್ಣೆದುರಿಗೆ ಅನವರತವೂ ನಿಂತು ಪೀಡಿಸಿ ಕಾಡುತ್ತಿರುವ ಅನಾಚಾರ,

ಅಧರ್ಮ, ಅನ್ಯಾಯದೊಂದಿಗೆ ಹೋರಾಡಿ, ಅದನ್ನು ನಿರ್ಮೂಲಮಾಡಲು ಬಾಳನ್ನು ಮುಡಿಪಿಟ್ಟ ವೀರಯತಿಪುಂಗವ ಶ್ರೀ ಶಂಕರ !

ಇಂತಹ ಸುಪುತ್ರನಿಗೆ ಜನ್ಮವಿತ್ತ ತಾಯಿತಂದೆಗಳು ಧನ್ಯರು. ಅವರ ಪಾದ ಧೂಳಿ ಹೊತ್ತ ನಾಡು ಪುಣ್ಯಭೂಮಿ.

ಸೋಮನಾಥಾನಂದ

# ಕವಿ—ವ್ಯಕ್ತಿ

ಮೊನ್ನೆ ಧಾರವಾಡದಲ್ಲಿ, ಕವಿ ಬೇಂದ್ರೆಯವರ ಷಷ್ಠ್ಯಬ್ದಿಪೂರ್ತಿಯ ಸಂದರ್ಭದಲ್ಲಿ, ಧಾರವಾಡದ ಸಹೃದಯವೃಂದ ಅವರನ್ನು ಸನ್ಮಾನಿಸಿ ಗೌರವಿಸಿದಾಗ ಬೇಂದ್ರೆಯವರು ಆ ಸಮಾರಂಭದಲ್ಲಿ ತಮ್ಮ ಭಾಷಣವನ್ನು ಹೀಗೆ ಆರಂಭಮಾಡಿದರು: 'ಈ ಎಲ್ಲ ಸನ್ಮಾನಕ್ಕೆ, ಗೌರವಕ್ಕೆ ಪಾತ್ರನಾದ ನನ್ನೊಳಗಿನ ಕವಿ ಬೇಂದ್ರೆಗೆ ಈ ಬೇಂದ್ರೆಯ ನಮಸ್ಕಾರ'—ಎಂದು; ಈ ಒಂದು ಮಾತಿನಲ್ಲಿ ಬೇಂದ್ರೆಯವರು, ಒಂದೇ ಮೈಯಲ್ಲಿ ತುಂಬಿನಿಂತ ಎರಡು ವ್ಯಕ್ತಿತ್ವದ ಪರಿಯನ್ನು ಸ್ಪಷ್ಟಪಡಿಸಿದ್ದಾರೆ. ಅಂತೆಯೇ ಲೋಕ ವ್ಯಕ್ತಿ ಮತ್ತು ಕವಿವ್ಯಕ್ತಿ—ಇದರ ಒಗಟನ್ನು ಬಹು ಸುಲಭವಾದ ರೀತಿಯಲ್ಲಿ ಬಿಡಿಸಿ ತೋರಿದ್ದಾರೆ. ಲೋಕವ್ಯಕ್ತಿಯ ಮಜಲಿನಲ್ಲಿ ನಿಂತು ಕವಿವ್ಯಕ್ತಿಯನ್ನು ಅವ ಲೋಕಿಸಿದ ಪ್ರಸಂಗ ಇಲ್ಲಿನದು. ಅಂತೆಯೇ ಕವಿವ್ಯಕ್ತಿಯ ಮಜಲಿನಲ್ಲಿ ನಿಂತು ಲೋಕವ್ಯಕ್ತಿಯನ್ನು ಅವಲೋಕಿಸಿದ ಪ್ರಸಂಗವೊಂದನ್ನು 'ಕವಿ—ಸಂಸಾರಿ' ಎಂಬ ಕವನವೊಂದರಲ್ಲಿ ಚಿತ್ರಿಸಿದ್ದಾರೆ ಕುವೆಂಪು ಅವರು. ಮಡದಿಯನ್ನು ತೌರೂರಿಗೆ ಕಳುಹಿಸಿದ ಕವಿ ಹೂತುಂಬಿದ ಉದ್ಯಾನವನದಲ್ಲಿ ನಿಂತಾಗ ಅವರೊಳಗಿನ ಸಂಸಾರಿ ಮತ್ತು ಕವಿ ಒಂದೇ ವಸ್ತುವನ್ನು ಹೇಗೆ ಹೇಗೆ ನೋಡಿದರೆಂಬ ಸ್ವಾರಸ್ಯವಾದ ಚಿತ್ರಣ ಅಲ್ಲಿ ಚಿತ್ರಿತವಾಗಿದೆ. ಕವನದ ಆರಂಭ ಹೀಗಿದೆ:

ಕರುಬಿದನು ಸಂಸಾರಿ;
ಕವಿ ನಲಿದನು:
ಹೂವಿಡಿದ ಸೂರ್ಯ ಕಾಂತಿಯ ಗಿಡಗಳೆಡೆಯಲ್ಲಿ
ವೈಶಾಖುದುದಯ ಸೂರ್ಯನ ಕಾಂತಿಯಲ್ಲಿ
ಬೀಸಿ ಬಹ ಹೊತ್ತರೆಯ ತಣ್ಣನೆಯೆಲರಿನಲ್ಲಿ
ಕಣ್ಗೊಸಗೆಯಾಗುತಿರೆ ಮನಸಿನಲ್ಲಿ
ಕರುಬಿದನು ಸಂಸಾರಿ:
ಕವಿ ನಲಿದನು:

[ಜೇನಾಗುವಾ: ಕುವೆಂಪು; ಪುಟ ೨೪]

ಇಲ್ಲಿ ಏಕಕಾಲದಲ್ಲಿಯೇ ವ್ಯಕ್ತಿದ್ವಂದ್ವದ ಭಾವನಾವೈವಿಧ್ಯವನ್ನು ಕವಿ ಬಹು ಸ್ವಾರಸ್ಯವಾಗಿ ಗುರುತಿಸಿದ್ದಾರೆ. ಲೋಕವ್ಯಕ್ತಿ ಬೇರೆ, ಕವಿವ್ಯಕ್ತಿ ಬೇರೆ ಎನ್ನುವುದು ಸ್ಪಷ್ಟ. ಬಲು ಹಿಂದೆಯೇ ನಾರಣಪ್ಪ ಈ ಮಾತನ್ನು ಹೇಳಿದ್ದಾನೆ—'ವೀರ

ನಾರಾಯಣನೆ ಕವಿ, ಲಿಪಿಕಾರ ಕುಮಾರವ್ಯಾಸ, ಎಂಬ ಮಾತಿನಲ್ಲಿ. ನಾನು ವೀಣೆ ಅವನು ವೈಣಿಕ, ಅವನು ಮಿಡಿದಂತೆ ನಾನು ನುಡಿಯುತ್ತೇನೆ—ಎಂಬ ಮಾತಿನಲ್ಲಿ ಕವಿ ಲಕ್ಷ್ಮೀಶನೂ ಈ ಮಾತನ್ನೆ ಹೇಳಿದ್ದಾನೆ. ಕವಿಯ ವ್ಯಕ್ತಿತ್ವವನ್ನು ಕುರಿತು

ಕವಿಯ ಹೃದಯವೊಂದು ವೀಣೆ
ಲೋಕ ಅದನು ಮಿಡಿವುದು
ಕವಿಗೆ ವ್ಯಕ್ತಿತನವೆ ಇಲ್ಲ
ಅವನು ಇಲ್ಲ ಅಥವ ಎಲ್ಲ

ಎಂದು ಕುವೆಂಪು ಅವರೂ ಸ್ಪಷ್ಟಪಡಿಸಿದ್ದಾರೆ. ಕಲಾವ್ಯಕ್ತಿ—ಲೋಕವ್ಯಕ್ತಿ ಇದರ ಒಗಟನ್ನು ಪುರಾತನ ಕವಿಯಿಂದ ನೂತನ ಕವಿಯ ವರೆಗೂ, ಕವಿಗಳೇ ಬಿಡಿಸಿ ಹೇಳಿದರೂ ಸಹೃದಯರು ಮತ್ತು ವಿಮರ್ಶಕರು ಕವಿಯಲ್ಲಿರುವ ಲೋಕವ್ಯಕ್ತಿ, ಕಲಾವ್ಯಕ್ತಿ ಇದರ ದ್ವಂದ್ವವನ್ನು ಗಮನಿಸದೆ, ಅವುಗಳ ಪರಸ್ಪರ ವ್ಯತ್ಯಾಸವನ್ನು ಗುರುತಿಸದೆ ವಿಚಿತ್ರವಾದ ಅಭಿಪ್ರಾಯಗಳನ್ನು ಮಂಡಿಸುತ್ತ ಬಂದಿರುವುದು ಒಂದು ಸೋಜಿಗವೇ ಸರಿ ಎನ್ನಿಸುತ್ತದೆ.

ಸುದೈವದಿಂದಲೋ ದುರ್ದೈವದಿಂದಲೋ ನಮ್ಮಲ್ಲಿ ಕವಿಗಳ ಕಾವ್ಯದ ಬಗೆಗೆ ಮಾತ್ರ ಜನ ಮನಸ್ಸುಕೊಟ್ಟು, ಕವಿಗಳ ಜೀವನಚರಿತ್ರೆಯ ಬಗೆಗೆ ಕುತೂಹಲ ವನ್ನಾಗಲೀ, ಅದನ್ನು ಬರೆದಿಡಬೇಕೆನ್ನುವ ಆಸಕ್ತಿಯನ್ನಾಗಲೀ ತೋರಲಿಲ್ಲ. ಹೀಗಾಗಿ ಕವಿಯ ಜೀವನದ ಚಿತ್ರ ಕಾವ್ಯದಲ್ಲಿ ದೊರೆಯುವ ಒಂದೊಂದು ಮಾತಿ ನಿಂದೇನಾದರೂ ಸೂಚಿತವಾಗಬಹುದೇ ಹೊರತು ಅವನ ನಿತ್ಯಜೀವನ ಹೇಗಿತ್ತು, ಅದರ ಸ್ವಾರಸ್ಯವೇನು—ಎಂಬುದು ನಮಗೆ ತಿಳಿಯುವುದಿಲ್ಲ. ಇದರ ಮೇಲೆ ನಾಲ್ಕು ಕಾಲ ಇದ್ದು ಮರೆಯಾಗುವ ಲೋಕವ್ಯಕ್ತಿಗಿಂತ ಕೃತಿಯಲ್ಲಿ ನೆಲೆಗೊಂಡ ಶಾಶ್ವತ ವ್ಯಕ್ತಿತ್ವದ ಬಗೆಗೆ ನಮ್ಮ ಜನ ವಿಶೇಷ ಗಮನ ಕೊಟ್ಟರೇನೋ. ಪರಿಸ್ಥಿತಿ ಹೀಗಾಗಿ ಕವಿಗಳ ಜೀವನಚರಿತ್ರೆಗಳ ಬದಲು ಆಯಾ ಕವಿಗಳನ್ನು ಕುರಿತ ದಂತಕಥೆಗಳು ಹುಟ್ಟಿ ಹರಿದುಕೊಂಡು ಬಂದಿವೆ. ಕಾಳಿದಾಸನನ್ನು ಕುರಿತ ಶೃಂಗಾರದ ಕಥೆಗಳು; ಹರಿಶ್ಚಂದ್ರಕಾವ್ಯವನ್ನು ಬರೆದ ರಾಘವಾಂಕನ ಹಲ್ಲುಗಳನ್ನು ಹರಿಹರ ಮುರಿದ ಎಂಬ ಕಥೆಗಳು; ಕುಮಾರವ್ಯಾಸನಿಗೂ ಚಾಮರಸನಿಗೂ ಸ್ಪರ್ಧೆಯುಂಟಾದ ಕಥೆಗಳು ಬೆಳೆದಿವೆ. ಇವುಗಳಲ್ಲಿ ಕಥೆಗಳಿಗಿರಬೇಕಾದ ಸ್ವಾರಸ್ಯದ ಜೊತೆಗೆ ಅಂದಿನ ಸನ್ನಿವೇಶದ ಸತ್ಯದ ಹೊಳಹು ಒಂದಿನಿತು ಇದ್ದರೂ ಅವು ಅನೇಕ ವೇಳೆ ಅಸಂಬದ್ಧವೂ, ಜಾತಿ ಮಾತ್ಸರ್ಯಾದಿ ಪೂರ್ವಗ್ರಹ ಜನ್ಯವೂ ಆದುವೆಂಬುದು ಸ್ಪಷ್ಟ. ಇವುಗಳಿಂದ ಕವಿವ್ಯಕ್ತಿಯ ಜೀವನವನ್ನು ನಾವು ಗುರುತಿಸುವುದು ದುಸ್ಸಾಧ್ಯ. ಆದರೆ ಪಾಶ್ಚಾತ್ಯ

ರಲ್ಲಾದರೋ ಆಯಾ ಕವಿ ಬದುಕಿದ ಕಾಲದಲ್ಲಿ ಅವನ ಹಿತೈಷಿಗಳೋ, ಸ್ನೇಹಿತರೋ ಬರೆದಿಟ್ಟ ಅವನ ಜೀವನದ ಹಲವು ಪ್ರಸಂಗಗಳಿಂದ, ಕವಿಯೇ ಬರೆದ ದಿನಚರಿಗಳಿಂದ, ಪತ್ರಗಳಿಂದ, ಅವನ ಕಾವ್ಯದ ಜೊತೆಗೆ ನೆಳಲಾಗಿ ಅವನ ಜೀವನಚರಿತ್ರೆಯೂ ಬಹು ಮಟ್ಟಿಗೆ ನಡೆದುಬಂದಿದೆ. ಕವಿಯ ಕಾವ್ಯವನ್ನೋದಿ ಸಂತೋಷಪಟ್ಟ ವಿಮರ್ಶಕವೃಂದ ಸಹಜ ಕುತೂಹಲದಿಂದ, ತಮಗೆ ದೊರಕಬಹುದಾದ ಕವಿಯ ಜೀವನವನ್ನು ಅವ ಲೋಕಿಸಲು ಬಯಸುತ್ತದೆ—ಇಂತಹ ಉದಾತ್ತ ಜೀವನದ ಧ್ಯೇಯಗಳನ್ನು ಕಾವ್ಯ ದಲ್ಲಿ ಸಾರಿ ಹೇಳಿದ ಕವಿಯ ಜೀವನ ಎಷ್ಟು ಮಹತ್ತಾಗಿರಬಹುದು ಎಂಬ ಊಹೆ ಯಿಂದ. ಆದರೆ ಕವಿಯ ಕಾವ್ಯದ ಧ್ಯೇಯಗಳಿಗೂ ಅವನ ದೈನಂದಿನ ವ್ಯವಹಾರ ಜೀವನಕ್ಕೂ ಸಂಬಂಧವಿರದೆಡೆಗಳನ್ನು ಕಂಡು ಬೆಬ್ಬಳಿಸುತ್ತದೆ. ಕವಿಯ ಕಾವ್ಯ ಮಾತ್ರ ಎಷ್ಟು ಉದಾತ್ತವಾಗಿದೆ, ಆದರೆ ಅವನ ಜೀವನ ಮಾತ್ರ ಅದಕ್ಕೆ ಅನುಗುಣ ವಾಗಿ ಇಲ್ಲವಲ್ಲ; ಈ ಎರಡರ ಸಂಬಂಧವೇನು? ಇವೆರಡಕ್ಕೆ ಸಮನ್ವಯ ಹೇಗೆ ಎಂಬ ಸಮಸ್ಯೆ ಅವನಲ್ಲಿ ಉದ್ಭವಿಸುತ್ತದೆ.

ಈ ಸಮಸ್ಯೆಯ ಉದ್ಭವಕ್ಕೆ ಕವಿಗಳ ಜೀವನವೂ ಧಾರಾಳವಾಗಿ ಸಾಮಗ್ರಿ ಗಳನ್ನೊದಗಿಸಿದೆ. ಗಾಡ್ವಿನ್ನನ ಮಗಳೊಡನೆ ಓಡಿಹೋದ ಷೆಲ್ಲಿಯ ಜೀವನ: ಬೈರನ್ನನ ಪ್ರಖ್ಯಾತ ಪ್ರಣಯ ಸಾಹಸಗಳ ಚರಿತ್ರೆ; ಫ್ರಾನ್ಸ್ ದೇಶಕ್ಕೆ ಹೋದಾಗ ಫ್ರೆಂಚ್ ಭಾಷೆಯನ್ನು ಕಲಿಯಲು ಉಪಾಧ್ಯಾಯಿನಿಯೊಬ್ಬಳನ್ನು ನೇಮಿಸಿಕೊಂಡು, ಆವಳನ್ನು ತನ್ನ ರಮಣಿಯನ್ನಾಗಿ ಮಾಡಿಕೊಂಡ ವರ್ಡ್ಸ್‌ವರ್ತ್ ಅನಂತರ ಅವಳ ಬಗೆಗೆ ನಡೆದುಕೊಂಡ ರೀತಿಗಳು[1]—ಈ ವಿವರಗಳನ್ನು ಅವಲೋಕಿಸಿದ ಸಾಮಾನ್ಯ ಸಹೃದಯನ ಮನಸ್ಸಿನಲ್ಲಿ ಇಂತಹ ಹಲವು ಘಟನೆಗಳು ನಿಂತು ಅವನು ಆಯಾ ಕವಿ ಗಳ ಕಾವ್ಯಗಳನ್ನೋದುವಾಗಲೂ ಅವು ತನ್ನ ನೆಳಲನ್ನು ಚೆಲ್ಲತೊಡಗುತ್ತವೆ. ಆಯಾ ಕವಿಗಳ ಅತ್ಯುತ್ತಮ ಕೃತಿಗಳನ್ನೋದುವಾಗಲೂ, ಅವರ ಜೀವನಚರಿತ್ರೆಯ ಹಲವು ಘಟನೆಗಳ ನೆನವು ಅವನ ಕಾವ್ಯಾಸ್ವಾದಕ್ಕೆ ಭಂಗತರಬಹುದು. ಅಥವಾ ಅವನ ಕಣ್ಣಿಗೆ ಕವಿಯ ಸತ್ಕೃತಿಯೂ ಮಸುಳಾಗಿ ತೋರಬಹುದು. ಚೆನ್ನಾಗಿಲ್ಲದ ಕೃತಿಯನ್ನಂತೂ ವಿಮರ್ಶೆ ಎಂಬ ಹೆಸರಿನಲ್ಲಿ ಮಾತನಾಡುವ ನಾಲಗೆಗೆ ಈ ಪ್ರಸಂಗ ಗಳ ನೆರವು ಬಂದು ವಿಮರ್ಶಕನೆನಿಸಿಕೊಂಡವನು ಭಾಷಣದ ವೇದಿಕೆಯ ಮೇಲೆ ಆ ಕವಿಯನ್ನು ಯಶಸ್ವಿಯಾಗಿ ಬಲಿಹಾಕಬಹುದು. ಲೋಕಜೀವನದಲ್ಲಿ ತೀರ ಸಾಮಾನ್ಯನೂ ಇಳಿಯಲಾರದ, ಇಳಿಯಲಾಗದ ಮೆಟ್ಟಲುಗಳಿಗೆಲ್ಲಾ ಇಳಿದು, ಕಾವ್ಯದಲ್ಲಿ ಮಾತ್ರ ಮಹ ಮಹಾತತ್ತ್ವಗಳನ್ನು ಉಪದೇಶಿಸುವ ಕವಿಯ ಬಗೆಗೆ, ಅವರ

---

[1] *William Wordsworth and Annette Valloin* by EMILE LEGOIUS.

ಕೃತಿಗಳ ಬಗೆಗೆ ಒಂದು ಬಗೆಯ ತಿರಸ್ಕಾರ ಹುಟ್ಟಬಹುದು. ಇದರ ಆಧಾರದಿಂದ ಕವಿಯ ಕೃತಿಯ ಬಗೆಗೇ ಓದುಗ ಆತುರದ ಸಿದ್ಧಾಂತವನ್ನೂ ಮಾಡಬಹುದು. ಆದರೆ ಹೀಗಾಗುವುದು ವಿಚಾರಶೀಲನಾದ ವಿಮರ್ಶಕನಿಗಲ್ಲ; ರಭಸಮತಿಯಾದ ವಿಮರ್ಶಕನಿಗೆ.

ಕವಿಯ ಕಾವ್ಯವನ್ನೋದಿದ ನಾವು ಅವನ ಜೀವನದ ಬಗೆಗೂ ಆಸಕ್ತಿ ತೋರುವುದರಲ್ಲಿ ಮೊದಲ ಕಾರಣ ಕವಿಯೇ ಜೀವನ ಹೇಗಿರಬೇಕು ಎಂದು ಹೇಳುವುದರಿಂದ; ಜೀವನದ ಆದರ್ಶಗಳನ್ನು ಕಾವ್ಯಮುಖೇನ ಇಷ್ಟು ಎತ್ತಿಹಿಡಿಯುವ ಈತನ ಜೀವನ ಹೇಗಿದೆ ಎಂಬ ಸಹಜ ಕುತೂಹಲದಿಂದ. ಜೀವನ ಹೇಗಿರಬೇಕೆಂದು ಈತ ಹೇಳುವಾಗ ಮೊದಲು ಅವನ ಜೀವನ ಈ ತತ್ತ್ವವನ್ನು ಹೇಳಲು ಅಧಿಕಾರ ಹೊಂದಿದೆಯೇ ಎಂದು ಅವನ ಕಾವ್ಯದ ಸೂತ್ರವನ್ನು ಅವನ ಜೀವನದ ವ್ಯವಹಾರಗಳಿಗೇ ಅನ್ವಯಿಸಿ ನೋಡಲು ತೊಡಗುತ್ತೇವೆ. ಎಷ್ಟೋ ಜನ ಲೋಕದಲ್ಲಿ ನಮ್ಮ ಸುತ್ತ ಹೊಲಸಾಗಿ, ಅನೀತಿಯುತವಾಗಿ ಬಾಳಿದರೂ ಅವರ ಬಗ್ಗೆ ನಮಗೆ ಅಂತಹ ಆಸಕ್ತಿಯೇನೊ ಬಹುಮಟ್ಟಿಗೆ ಇರುವುದಿಲ್ಲ. ಏಕೆಂದರೆ ಅವರೇನೂ ಜೀವನದ ಬಗ್ಗೆ ನಮಗೆ ಯಾವ ಧ್ಯೇಯ ನಿರ್ದೇಶನವನ್ನೂ ಕೊಡುವುದಿಲ್ಲ. ಆದರೆ ತನ್ನ ಕಾವ್ಯದ ಉದಾತ್ತ ಧ್ಯೇಯಗಳಿಂದ ನಮ್ಮ ಗಮನವನ್ನು, ಗೌರವವನ್ನು ಸೆಳೆದ ಕವಿಯಲ್ಲಿ ಇಂತಹ ಕುಂದುಕೊರತೆಗಳನ್ನು ಕಂಡಾಗ ದಿಗ್ಭ್ರಮೆಗೊಳ್ಳುತ್ತೇವೆ. ಅವೂ ಮಾನವ ಸಹಜವಾದ ದೌರ್ಬಲ್ಯಗಳೆಂದು ಅವಜ್ಞೆಗೈಯಲು ನಮ್ಮ ಮನ ಒಪ್ಪುವುದಿಲ್ಲ ಆದರೆ ವ್ಯಕ್ತಿ ಜೀವನದಲ್ಲೂ ಸಹ ಏರಿಳಿತಗಳಿರುತ್ತವೆ. ಅವನು ಯಾವ ಎತ್ತರಕ್ಕೆ ಏರಿದ್ದಾನೆಂಬುದನ್ನು ಗಮನಿಸದೆ, ಅವನು ಯಾವ ಕೀಳ್ಮೆಗೆ ಇಳಿದಿದ್ದಾನೆ ಎನ್ನುವುದನ್ನು ಮಾತ್ರ ಜೀವನದ ಪ್ರಧಾನಾಂಶವೆಂದು ನೋಡಲು ಹೊರಡುವುದು ಓದುಗನ ಕುಸಂಸ್ಕೃತಿಯ ಕುರುಹು ಮಾತ್ರ. ಆ ಏರಿಳಿತಗಳಲ್ಲಿ ವ್ಯಕ್ತಿ ಮುಟ್ಟಿರುವ ಮಜಲು ಏನೆಂಬುದನ್ನು ವಿಚಾರಶೀಲನಾದವನು ನೋಡುತ್ತಾನೆ.[2]

---

[2] When I have heard small talk about great men  
I climb to bed; light my two candles: then  
Consider what was said; and put aside  
What such-a-one remarked and someone-else replied  
They have spoken lightly of my deathless friends,  
(Lamps for my gloom, hands guiding where I stumble,)  
Quoting, for shallow conversational ends,  
What Shelley shrilled, what Blake once wildly muttered. . .  
How can they use such names and be not humble?  
I have sat silent; angry at what they uttered

ವಿಚಾರಶೀಲನಾದ ವಿಮರ್ಶಕ ಈ ಎರಡು ಭೂಮಿಕೆಗಳನ್ನು ಬೆರೆಸುವ ಗೊಂದಲಕ್ಕೆ ಕೈಹಾಕುವುದಿಲ್ಲ. ಅವನಲ್ಲಿ ಕವಿಕಾವ್ಯದ ಬಗೆಗೆ ಹಲವು ಪ್ರಶ್ನೆಗಳು ಏಳುತ್ತವೆ: ಕವಿ ಕಾವ್ಯವನ್ನು ಬರೆಯುವಾಗ ಮತ್ತು ಕಾವ್ಯದ ಅನುಭವವನ್ನು ಪಡೆಯುವಾಗ ಇರುವಂತಹ ಸ್ಥಿತಿ, ಅವನು ಲೋಕದ ದೈನಂದಿನ ವ್ಯವಹಾರದಲ್ಲಿರುವಾಗಲೂ ಇರುತ್ತದೆಯೆ? ಕಾವ್ಯವನ್ನು ಬರೆಯುವಾಗ ಅವನು 'ಕವಿ'ಯಾಗಿರುವಷ್ಟು, ಕಾವ್ಯವನ್ನು ಬರೆಯದ ಹೊತ್ತಿನಲ್ಲೂ 'ಕವಿ'ಯಾಗಿರುತ್ತಾನೆಯೆ? ಲೋಕವ್ಯಕ್ತಿ, ಕವಿವ್ಯಕ್ತಿ ಬೇರೆಬೇರೆಯೆ? ಕವಿ ಕಾವ್ಯವನ್ನು ಬರೆಯುವಾಗ ಆಗುವ ಅನುಭವ ಅವನ ಲೋಕವ್ಯಕ್ತಿಯನ್ನೂ ಸಂಸ್ಕರಿಸಿ ಲೌಕಿಕ ವ್ಯವಹಾರವನ್ನೂ ಕಾವ್ಯದಲ್ಲಿ ಕಾಣುವಷ್ಟೇ ಘನವನ್ನಾಗಿ ಮಾಡಲಾರದೆ? ಈ ವ್ಯಕ್ತಿತ್ವ ಎನ್ನುವುದು ಏನು? ಇದು ಎಷ್ಟು ತೊಡಕಾದುದು! ಇದಕ್ಕೆ ಪರಿಹಾರವಿದೆಯೆ? ಕೃತಿವಿಮರ್ಶೆಯಲ್ಲಿ ಲೋಕವ್ಯಕ್ತಿಯ ಚಾರಿತ್ರ್ಯದ ಪ್ರಸಂಗಗಳೂ ನೆರವಾಗಬಲ್ಲವೆ?—ಎಂಬ ಹಲವಾರು ಪ್ರಶ್ನೆಗಳು ಅವನಲ್ಲಿ ಉದ್ಭವಿಸುತ್ತವೆ.

ಈ ಸಮಸ್ಯೆಗಳ ಪರಿಹಾರಕ್ಕೆ ನಾವು ಮೊದಲು ಮನಶ್ಶಾಸ್ತ್ರದ ಕಡೆ ನೋಡುತ್ತೇವೆ. ಸುಪ್ರಸಿದ್ಧ ಮನಶ್ಶಾಸ್ತ್ರಜ್ಞರಾದ ಸಿ. ಜಿ. ಯೂಂಗ್ ಅವರು ಕವಿಯ ವ್ಯಕ್ತಿತ್ವದ ಬಗ್ಗೆ ಹೀಗೆ ಬರೆಯುತ್ತಾರೆ: "ಸೃಷ್ಟಿಶೀಲನಾದ ಪ್ರತಿಯೊಬ್ಬ ಕಲೆಗಾರನದೂ ದ್ವಂದ್ವ ಇಲ್ಲವೆ ಸಮನ್ವಿತ ವ್ಯಕ್ತಿತ್ವ. ಒಂದು ಕಡೆ ಅವನು ವೈಯಕ್ತಿಕಾನುಭವ ಉಳ್ಳ ಲೋಕವ್ಯಕ್ತಿ; ಮತ್ತೊಂದು ಕಡೆ ವಿಶಿಷ್ಟವಾದ ಕಲಾಶಕ್ತಿಯನ್ನುಳ್ಳ ಕಲಾವ್ಯಕ್ತಿ . . . ಆದರೆ ವಾಸ್ತವವಾಗಿ ನಾವು ಅವನನ್ನು ಅರಿತುಕೊಳ್ಳಬೇಕಾದುದು ಅವನ ಕಲಾಸಿದ್ಧಿಗಳಿಂದ. ಕಲೆಗಾರನ ಜೀವನ ಸಹಜವಾಗಿಯೇ ತುಮುಲಗಳಿಂದ ತುಂಬಿರುತ್ತದೆ. ಏಕೆಂದರೆ ಅವನಲ್ಲಿ ನಿರಂತರವಾಗಿ ಎರಡು ಶಕ್ತಿಗಳ ಘರ್ಷಣೆಯನ್ನು ಕಾಣುತ್ತೇವೆ. ಒಂದು, ಸಾಮಾನ್ಯ ಭೋಗಲಾಲಸೆ; ಮತ್ತೊಂದು, ತನ್ನ ಎಲ್ಲ ಭೋಗಲಾಲಸೆಗಳನ್ನು ತೃಣೀಕರಿಸುವ ಪ್ರಬಲವಾದ ಕಲಾಪ್ರವೃತ್ತಿ. ಈ ಕಲಾಪ್ರವೃತ್ತಿ ಎಷ್ಟರಮಟ್ಟಿಗೆ ಅವನ ವ್ಯಕ್ತಿತ್ವವನ್ನು ಶೋಷಣೆಗೈಯ್ಯಬಹುದೆಂದರೆ, ಆ ಕಲೆಗಾರನಲ್ಲಿ ಅಹಂಕಾರಮೂಲವಾದ ಸ್ವಾರ್ಥ ಕ್ಷುದ್ರಾದಿಗಳನ್ನು ಉಳಿಸುವಷ್ಟರಮಟ್ಟಿಗೆ! ಇವು ಅವನ ವ್ಯಕ್ತಿತ್ವ, ಆ ಪ್ರಚಂಡಶಕ್ತಿಯ ಪ್ರವಾಹದಲ್ಲಿ ಕೊಚ್ಚಿ ಹೋಗದಂತೆ ತಡೆಯಲು ಅಗತ್ಯ . . . ಒಂದು ವಿಶೇಷ ಶಕ್ತಿಲಾಭ ಎಂದರೆ, ಒಂದು ದಿಕ್ಕಿನಲ್ಲಿ ಅವನ ಚೇತನಕ್ಕೊದಗುವ ಅಪಾರ ಶಕ್ತಿವ್ಯಯ; ತತ್ಪರಿಣಾಮ

---

The dead bequeathed them life; the dead have said
What these can only memorize and mumble.
—*Grandeur of Ghosts*—by Siegfried Sassoon.

ವಾದ ಒಂದು ಶೋಷಣೆ . . . ಕಲಾಪ್ರವೃತ್ತಿ ಎಂದರೆ ವ್ಯಕ್ತಿಯನ್ನು ತನ್ನದೊಂದು ಉಪಕರಣವನ್ನಾಗಿ ಮಾಡಿಕೊಳ್ಳುವ ಪ್ರಬಲವಾದ ಶಕ್ತಿ. ಅವನಿಗೆ ತನ್ನ ಸುಖಾಭಿಲಾಷೆಗಳನ್ನು ಕಂಡುಕೊಳ್ಳುವ ಸ್ವಾತಂತ್ರ್ಯವನ್ನೂ ಬಿಡದಂತೆ ಆಕ್ರಮಿಸಿ ಅವನ ಮೂಲಕ ಈ ಸಮಷ್ಟಿಚಿತ್ ಅಥವಾ ಯುಗಮನಸ್ಸು ('Collective Unconscious') ತನ್ನ ಉದ್ದೇಶವನ್ನು ಪ್ರಕಟಿಸುತ್ತದೆ. ಹೀಗಾಗಿ ಕಲೆಗಾರನಿಗೆ ಅವನದೇ ಆದ ವಿಶಿಷ್ಟ ಮನೋವ್ಯಾಪಾರಕ್ಕಿಂತ ಸಮಷ್ಟಿ ಮನಸ್ಸು ಆತನ ಮನಸ್ಸನ್ನು ಆಕ್ರಮಿಸಿರುತ್ತದೆ. . . ."[3]

ಮನಶ್ಶಾಸ್ತ್ರಜ್ಞ ಸಿ. ಜಿ. ಯೂಂಗ್ ಅವರೊಂದಿಗೆ ಶ್ರೀ ಅರವಿಂದರೂ ದನಿಗೂಡಿಸಿದ್ದಾರೆ: "ಕಲಾವಿದನ ಕಲಾಕ್ರಿಯೆಯ ಕೀಲಿಕೈಯನ್ನು ಹುಡುಕಬೇಕಾದುದು ಅವನ ಬಹಿರಂಗ ಮನಸ್ಸಿನ ಜೀವನದಲ್ಲಿ ಅಲ್ಲ; ಅವನ ಅಂತರಂಗ ವ್ಯಕ್ತಿತ್ವದಲ್ಲಿ. ಲೋಕದ ಸಹಸ್ರಾರು ಮಂದಿಯಿಂದ, ಮತ್ತು ಉಳಿದ ಕಲಾವ್ಯಕ್ತಿಗಳಿಂದ ಇವನು ಬೇರೆಯಾದವನೆಂದು ತೋರಿಸುವ ಆ ಕಲಾಶಕ್ತಿಯನ್ನು ಪಡೆದ ಕಲಾವ್ಯಕ್ತಿ ನಮಗೆ ಪ್ರಧಾನ. ಆ ಸೃಷ್ಟಿಶಕ್ತಿಗೆ ಕಲಾವಿದ ಒಂದು ಒದಗೆಯೋ ಮಾಧ್ಯಮವೋ ಮಾತ್ರ. ಒಬ್ಬ ವ್ಯಕ್ತಿ ಅನೇಕ ವ್ಯಕ್ತಿತ್ವಗಳ ಮಿಶ್ರಣ. ಅವು ಬಹಿರಂಗದಲ್ಲಿ ಒಂದಕ್ಕೊಂದು ಸೇರಿಕೊಂಡರೂ ಅಂತರಂಗದಲ್ಲಿ ಬಿಡಿಬಿಡಿಯಾಗಿರಬಹುದು. ಇಂತಹ ಅನೇಕ ವ್ಯಕ್ತಿತ್ವಗಳಲ್ಲಿ, ಕವಿವ್ಯಕ್ತಿತ್ವವೆಂಬುದು ಕೇವಲ ಸೃಷ್ಟಿಶೀಲ ಮಾತ್ರವಾದ ಒಂದು ವ್ಯಕ್ತಿತ್ವವಾಗಿರಬಹುದು ಅವನಲ್ಲಿ. ಆ ಸೃಷ್ಟಿಶೀಲವಾದ ಕಲಾಶಕ್ತಿ ಅವನನ್ನು ತನ್ನ ಉಪಕರಣವನ್ನಾಗಿ ಮಾಡಿಕೊಂಡು, ತನ್ನ ಉದ್ದೇಶ ಮುಗಿದನಂತರ ಅವನನ್ನು ಸಾಮಾನ್ಯರತ್ತ ಎಸೆದು ನಡೆಯಬಹುದು. . . ."[4]

ಈ ಮೇಲಿನ ವಿಚಾರಸರಣಿಯಿಂದ ಒಂದು ಅಂಶ ಸ್ಪಷ್ಟವಾಗುತ್ತದೆ. ಕವಿವ್ಯಕ್ತಿ--ಲೋಕವ್ಯಕ್ತಿ ಬೇರೆ ಬೇರೆ.[5] ಈ ವ್ಯಕ್ತಿತ್ವ ಬಹಳಮಟ್ಟಿಗೆ ದ್ವಂದ್ವ; ಇದರ

---

[3] *Modern Man in Search of a Soul*: C. J. Jung, p, 194, 195, 196.

[4] *Letters of Aurobindo*. III Series, p. 53, 54.

[5] ಪು. ತಿ. ನ. ಅವರು 'ಚಿಕುಹೂ' ಎಂಬ ಕವನದಲ್ಲಿ ಕವಿಯಲ್ಲಿರುವ ಅನೇಕ ವ್ಯಕ್ತಿತ್ವಗಳ ಪರಿಯನ್ನು ಬಲು ಸೊಗಸಾಗಿ ಈ ಹಲವು ಸಾಲುಗಳಲ್ಲಿ ಹೇಳಿದ್ದಾರೆ:—

ಭವಿ ನಾ ತಾಪಸಿ ನಾನು
ಕವಿ ನಾ ಕಿಂಕರ ನಾನು
ನಾನಾ ಇದಕಿತಿಯೇನಿದೆ
ಮಿತಿಯೇನಿದೆ,

[ಗಣೇಶ ದರ್ಶನ: ಪು. ತಿ. ನ., p. ೬೩]

ಸಮನ್ವಯ ಅಪೂರ್ವ. ಈ ವ್ಯಕ್ತಿತ್ವವೇನಿದ್ದರೂ ಪ್ರಬಲವಾದ ಕಲಾಶಕ್ತಿಯ ಉಪಕರಣ ಮಾತ್ರ. ಈ ಕಲಾಪ್ರವೃತ್ತಿ ಎನ್ನುವುದು ಸಮಷ್ಟಿಚಿತ್ತದ ಹಾರೈಕೆ. ಅದು ಕವಿಯ ಮೂಲಕ ಪ್ರಕಟನೆಗೊಳ್ಳುವಲ್ಲಿ ಅವನ ಲೌಕಿಕ ವ್ಯಕ್ತಿತ್ವದ ಕುಂದು, ಕರೆ, ದೋಷಗಳ ಬಗೆಗೆ ನಮ್ಮಂತೆ ನೈತಿಕದೃಷ್ಟಿಯಿಂದ ವರ್ತಿಸುವುದಿಲ್ಲ.[6]

ಓದುಗ ಕವಿಯ ಕಾವ್ಯವನ್ನೋದಿ, ಅವನ ಲೋಕಜೀವನ ಎಷ್ಟು ಮಹತ್ತಾಗಿರ ಬಹುದೋ ಎಂದು ಊಹಿಸುವುದು ತಪ್ಪಲ್ಲ; ಕವಿಜೀವನವನ್ನು ಈ ಒಂದು ಊಹೆಯ ಆಧಾರದಿಂದ ಪರಿಶೀಲಿಸಿದ ಸಹೃದಯ; ಅದು ತಾನೆಣಿಸಿದುದರಿಂದ ಬೇರೊಂದಾ ಗಿರುವುದನ್ನು ಕಂಡು ಬೆಚ್ಚಿಬೀಳುವುದೂ ತಪ್ಪಲ್ಲ. ಆದರೆ ತಪ್ಪು ಒಂದೇ ಕಡೆ: ಓದುಗ ಕಾವ್ಯವನ್ನು ಓದುವಾಗ ಕಾವ್ಯದಲ್ಲಿ ಮೈಗೊಂಡ ಕವಿಯ ಅನುಭವವನ್ನು ಮಾತ್ರ ನೋಡದೆ, ಲೋಕದಲ್ಲಿ ಮೈಗೊಂಡ ಕವಿಯ ಚರ್ಯೆಗಳನ್ನು ಗಮನದಲ್ಲಿರಿಸಿ ಕೊಂಡಿರುವೆಡೆ. ಆದರೆ ಕವಿಯದು ದ್ವಂದ್ವವ್ಯಕ್ತಿತ್ವ. ರಾಗದ್ವೇಷಾದಿಗಳಿಂದ ತುಂಬಿದ ಲೋಕವ್ಯಕ್ತಿ ಬೇರೆ; ಮಹೋನ್ನತ ಹಾರೈಕೆಗಳಿಂದ ತುಡಿಯುವ ಕಲಾವ್ಯಕ್ತಿ ಬೇರೆ. ಏಕೆಂದರೆ ಒಂದು ಅಳಿಯತಕ್ಕದ್ದು; ಮತ್ತೊಂದು ಉಳಿಯತಕ್ಕದ್ದು.[7] ಕೇವಲ ವ್ಯಕ್ತಿ ಯೊಬ್ಬನ ಬಹಿರಂಗ ಚರ್ಯೆಗಳನ್ನು ಗಮನಿಸಿ ಅವನ ಅಂತರಂಗದ ಜೀವನದ ಪರಿ ಯನ್ನು ನಾವು ನಿರ್ಣಯಿಸುವುದು ಅಸಾಧ್ಯ. ಕೇವಲ ಒಂದೆರಡು ಪ್ರಸಂಗಗಳಲ್ಲಿ ವ್ಯಕ್ತಿ ನಡೆದುಕೊಂಡ ರೀತಿಯಿಂದ ಅವನ ಸಮಸ್ತ ಜೀವನವನ್ನೆ ನಾವು ಅಳೆದು ತೂಗ ಬಲ್ಲೆವೆ? ಅಥವಾ ವ್ಯಕ್ತಿಯ ಸಮಸ್ತ ಜೀವನವೂ ಅವನ ಬಹಿರಂಗವರ್ತನೆಗಳಲ್ಲಿ ಸಂಪೂರ್ಣವಾಗಿ ವ್ಯಕ್ತವಾಗಲು ಸಾಧ್ಯವೆ? ಒಬ್ಬನ ಜೀವನವನ್ನು ಮತ್ತೊಬ್ಬ ಎಷ್ಟರಮಟ್ಟಿಗೆ ಕಾಣಬಲ್ಲ? ಮತ್ತೊಬ್ಬನ ಜೀವನವಿರಲಿ ನಮ್ಮ ಅಂತರಂಗದ ಜೀವನ ವನ್ನೇ ನಾವು ಎಷ್ಟರಮಟ್ಟಿಗೆ ಕಂಡಿದ್ದೇವೆ? ವ್ಯಕ್ತಿತ್ವ ಎನ್ನುವುದು ಅಷ್ಟು ಸರಳವಲ್ಲ; ಅದಕ್ಕೆ ನೂರು ಪದರವಿದೆ. ಮನಶ್ಶಾಸ್ತ್ರವೂ ಯಾವುದೋ ಒಂದು ಪದರದಲ್ಲಿ ನಿಲ್ಲುವು ದಷ್ಟೆ? ಹೀಗಿರುವಾಗ ಬಹುಮುಖ ವ್ಯಕ್ತಿಯಾದ ಕವಿಯ ಜೀವನವನ್ನು ಅವನ ಜೀವನ ಚರಿತ್ರೆಯ ಒಂದೆರಡು ಪ್ರಸಂಗಗಳ ಆಧಾರದಿಂದ ಯಾವುದೋ ನಿರ್ಣಯಕ್ಕೆ ಬಂದು,

---

[6] ಮನಶ್ಶಾಸ್ತ್ರ ಹೀಗೆ ಹೇಳುತ್ತದೆ ಎಂದಾಗಲೀ, ಹೀಗೆ ಅಸ್ತವ್ಯಸ್ತವಾಗಿ ಬಾಳುವುದು ಉತ್ತಮ ಕಲೆಗಾರನ ಸಲ್ಲಕ್ಷಣವೆಂದಾಗಲೀ ಭಾವಿಸಿ ಎಲ್ಲ ಬಗೆಯ ಕಲಾವಿದರೂ ತಮ್ಮ ಚಾರಿತ್ರ್ಯ ವನ್ನು ಸಮರ್ಥಿಸಿಕೊಳ್ಳತೊಡಗಿದರೆ ಅದಕ್ಕೆ ಅವರೇ ಹೊಣೆ, ಮನಶ್ಶಾಸ್ತ್ರವಲ್ಲ!

[7] ಆದರೆ ಕಾವ್ಯಕ್ಕಿಂತ ಜೀವನ ದೊಡ್ಡದು. ಮಹಾ ವ್ಯಕ್ತಿಗಳ ಜೀವನವೇ ಈ ಕವಿಗಳ ಕಾವ್ಯದ ವಸ್ತುವಾಗಿ ಅದರ ಉಳಿವಿಗೂ ಕಾರಣವಾಗುತ್ತದೆ ಎನ್ನುವುದನ್ನು ಮರೆಯಬಾರದು ಆದರೆ ಕವಿಜೀವನದ ಬಗ್ಗೆ ಆ ಮಾತು ಬೇರೆ.

ಅದನ್ನು ಅವನ ಕೃತಿವಿಮರ್ಶೆಗೆ ಬಳಸುವದು ಸಾಧುವೆ? ಕವಿಯ ವ್ಯಕ್ತಿತ್ವ ಹಡಗಿನಂತೆ. ಅದರ ಬಹುಭಾಗ ನೀರಿನಲ್ಲಿರುತ್ತದೆ. ಅಂತೆಯೇ ಕವಿಯ ಚಿತ್ತ ಸಂಯಮಪೂರ್ಣವಾದ ಪರಿಭಾವನೆಯಲ್ಲಿ ಮುಳುಗಿರುತ್ತದೆ; ಅಲ್ಲಿಂದಲೇ ಕಾವ್ಯಸೃಷ್ಟಿ. ಬಹಿರಂಗದಲ್ಲಿ ಅವನ ಚರ್ಯೆ ಅಸಂಯಮಪ್ರವೃತ್ತಿಯಂತೆ ಕಂಡರೂ, ಕಾವ್ಯಕಲೆಯ ಉಗಮ ಮಾತ್ರ ಅಂತರಂಗದ ಸಂಯಮದಿಂದಲೇ. ಕವಿಯ ಕೇವಲ ಬಹಿರಂಗಜೀವನದಲ್ಲಿ ಕಾವ್ಯವನ್ನರಸುವುದು ಮರದ ತೊಗಟೆಯಲ್ಲಿ ಹೂವಿನ ನವುರನ್ನು ಹುಡುಕಿದಂತೆ. ನಿಜ, ಮರವಿಲ್ಲದೆ ಹೂವಿಲ್ಲ. ಆದರೆ ಹೂವು ರೂಕ್ಷವಾದ ಮರದಲ್ಲಿ ಆದ ಒಂದು ಕೋಮಲ ಸುಂದರ ಪವಾಡ. ಅಷ್ಟೇ ಅಲ್ಲ ಈ ತೊಗಟೆಯ ರೂಕ್ಷತೆಯ ಅಂತರಾಳದ ರಸದಿಂದ ಆದುದು ಈ ಹೂವು; ಆ ರಸವೇ ಈ ತೊಗಟೆಗೂ ಈ ಹೂವಿಗೂ ಕಾರಣ ಎಂಬುದನ್ನು ಮರೆಯಬಾರದು. ಈ ಮರವೇನಿದ್ದರೂ ಹೂವಿನ ಸೃಷ್ಟಿಗೆ ಒಂದು ಉಪಕರಣ ಅಥವಾ ಮಾಧ್ಯಮ. ಮರದ ಬಹಿರಂಗದ ತೊಗಟೆಯ ರೂಕ್ಷತೆ ಯಾವ ರೀತಿಯಿಂದಲೂ ಆ ಹೂವಿನ ಕೋಮಲತೆಗೆ ಭಂಗತಾರದು; ಅದರ ಬದಲು ಆ ಹೂವಿನ ಸೊಗಸಿನಿಂದ ಮರಕ್ಕೂ ಸೊಗಸು ಬರುತ್ತದೆ.

ಹಾಗಾದರೆ ಕವಿಯ ಜೀವನಚರಿತ್ರೆ ಕವಿಯ ಕೃತಿವಿಮರ್ಶೆಯಲ್ಲಿ ಯಾವ ರೀತಿಯಲ್ಲಿಯೂ ನೆರವಾಗಲಾರದೆ! ಅಥವಾ ನಾವು ಅದನ್ನು ಬಳಸಲೇ ಬಾರದೆ?— ಎಂಬ ಪ್ರಶ್ನೆ ಏಳುತ್ತದೆ. ಕಾವ್ಯಾವಲೋಕನದಲ್ಲಿ ನಮಗೆ ಕಾವ್ಯ ಮುಖ್ಯವೇ ಹೊರತು ಕವಿಯ ಜೀವನಚರಿತ್ರೆಯಲ್ಲ.[8] ಕವಿಯ ಜೀವನಚರಿತ್ರೆಯ ಆಧಾರದಿಂದ ಕೃತಿವಿಮರ್ಶೆ ಮಾಡಬೇಕು ಎಂದರೆ ಕಾವ್ಯಾಸ್ವಾದಕಾಲದಲ್ಲಿ ಕೃತಿಯ ಮೇಲೆ ಕೇಂದ್ರೀಕೃತವಾಗಬೇಕಾದ ಗಮನವನ್ನು ಕವಿಯ ಕಡೆ ತಿರುಗಿಸಬೇಕು ಎಂದು ಹೇಳಿದಂತಾಗುತ್ತದೆ. ಉತ್ತಮ ವಿಮರ್ಶಕ ಕಾವ್ಯವನ್ನೋದುವಾಗ ಕೃತಿವಲಯದಲ್ಲಿ ಮಾತ್ರ ನಿಲ್ಲುತ್ತಾನೆ. ಅವನ ಜೀವನಚರಿತ್ರೆಯ ಅಂಶಗಳಿಂದ ಕೃತಿ ವಿಮರ್ಶೆಗೆ ಹಲವು ಸಲ ಅನುಕೂಲವೇನೋ ಆದರೂ ಅನೇಕ ವೇಳೆ ಅನಾನುಕೂಲವಂತೂ ಆಗುತ್ತದೆ. ಆದರೆ ಅವನ ಜೀವನಚರಿತ್ರೆಯ ಘಟನೆಗಳನ್ನೇ ಪ್ರಬಲವಾದ ಆಧಾರವನ್ನಾಗಿಟ್ಟುಕೊಂಡು ಕೃತಿಯನ್ನವಲೋಕಿಸುವುದು ಈ ಸಮಸ್ತಕಾವ್ಯಕ್ಕೆ ಲೋಕ ಘಟನೆಗಳನ್ನೂ ಮೀರಿದ ಬೇರೊಂದು ವಿಶೇಷ ಶಕ್ತಿ ಅವನಲ್ಲಿದೆ ಎಂಬುದನ್ನು ಅವಜ್ಞೆ

[8] ಅಧ್ಯಾತ್ಮಪುರುಷನಾದವನು ಬಾಯಲ್ಲಿ ಒಂದು ಹೇಳುತ್ತಾ ಆಚರಣೆಯಲ್ಲಿ ಬೇರೊಂದು ಬಗೆಯಾಗಿ ನಡೆದರೆ ಜನತೆ ಅವನನ್ನು ಪೂಜ್ಯನೆಂದು ಒಪ್ಪದೆ ಕೂಡಲೇ ಬಹಿಷ್ಕರಿಸುತ್ತದೆ. ಆದರೆ ಕವಿಯ ಬಗೆಗೆ ಮಾತ್ರ ಅವನಲ್ಲಿ ಈ ಅಸಾಮಂಜಸ್ಯವನ್ನು ಕಂಡರೂ ಜನತೆ ಅದನ್ನು ಅಷ್ಟಾಗಿ ಗಮನಿಸದೆ ಅವನ ಕೃತಿಗಾಗಿ ಗೌರವಿಸುತ್ತಾ ಬಂದಿರುವುದು ಗಮನಾರ್ಹವಾದ ಸಂಗತಿ.

ಗೈದಂತಾಗುತ್ತದೆ. ಅವನ ಜೀವನಚರಿತ್ರೆ, ಅವನ ಕಾಲದ ಆವರಣದ ಚರಿತ್ರೆ ಸ್ವಾರಸ್ಯವೂ ಸುಂದರವೂ ಆಗಿರಬಹುದು. ಅದು ತನಗೆ ತಾನೇ ಒಂದು ಬಗೆಯ ಚಾರಿತ್ರಿಕ ಮೌಲ್ಯವನ್ನು ಹೊಂದಿರಬಹುದು; ಆದರೆ ಚರಿತ್ರೆ ವಿಮರ್ಶೆಯಲ್ಲ. ಅದರ ಆಧಾರದಿಂದ ಕೃತಿಯನ್ನಳೆಯುವುದು ಸರಿಯಾಗುವುದಿಲ್ಲ; ಕೃತಿಯ ಮಹತ್ತ್ವನ್ನು ಕೃತಿಯಲ್ಲಿ, ಅದು ನೀಡುವ ಅನುಭವದಲ್ಲಿ ಕಾಣಬೇಕು.[9]

ಕವಿಯ ವ್ಯಕ್ತಿತ್ವ ಬಹು ಶ್ರೇಣಿ ಸಂಚಾರಿ—ವಾದ್ಯವೊಂದರ ವಿವಿಧ ಸ್ವರಸ್ಥಾನಗಳ ಮೇಲಾಡುವ ವಾದಕನ ಬೆರಳುಗಳಂತೆ. ಅವನ ಸಂಚಾರಶ್ರೇಣಿಯಲ್ಲಿ ಈ ಲೌಕಿಕವೂ ಅಂತಹದೊಂದು ಸ್ವರಸ್ಥಾನವಾಗಬಹುದು. ಅವನು ಇಲ್ಲಿ ನಿಂತು ಒಮ್ಮೆ ಅಧ್ಯಾತ್ಮದ, ಒಮ್ಮೆ ಪ್ರೇಮದ, ಒಮ್ಮೆ ಸಾಮಾಜಿಕದ—ವಿವಿಧ ಮಜಲುಗಳನ್ನು ಮುಟ್ಟಿಮುಟ್ಟಿ ಬರುತ್ತಾನೆ. ಅಧ್ಯಾತ್ಮದ ಮಜಲಿಗೇರಿದಾಗ, ಆ ಅನುಭವದ ಸ್ವರಸ್ಥಾನದಲ್ಲಿ ನಿಂತಾಗ ಅವನು ಅಧ್ಯಾತ್ಮಕವಿ; ಪ್ರೇಮದ ಮಜಲಿನಲ್ಲಿ ಪ್ರೇಮಕವಿ; ಹೀಗೆ ಆಯಾ ಅನುಭವವನ್ನು ಅವನು ಮುಟ್ಟಿ ಮಿಡಿದಾಗ ಆಯಾ ಮಟ್ಟದ ಕವಿ. ಆದರೆ ಅವನ ಒಲವು ಯಾವ ಒಂದು ನಿರ್ದಿಷ್ಟವಾದ ಶ್ರೇಣಿಯ ಬಗೆಗಿದೆಯೋ, ಯಾವುದನ್ನು ಅವನು ತನ್ನ ಜೀವ ಜೀವಾಳವನ್ನಾಗಿ ಮಾಡಿಕೊಂಡಿದ್ದಾನೆಯೋ ಅದರ ಮೇಲೆ ನಾವು ಆತನ ವಿಶಿಷ್ಟತೆಯನ್ನು ಗುರುತಿಸುತ್ತೇವೆ.

ಒಟ್ಟಿನಲ್ಲಿ ಕವಿ-ವ್ಯಕ್ತಿಯ ಸಮಸ್ಯೆ ತುಂಬಾ ಜಟಿಲವಾದುದು; ಮತ್ತು ವಿವಾದಾಸ್ಪದವಾದುದು. ಇದುವರೆಗೂ ಮೇಲೆ ಹೇಳಿರುವ ವಿಚಾರವೆಲ್ಲಾ ಒಂದು ಬಗೆಯ ವಿವರಣಾತ್ಮಕವಾದ ಸಮಾಧಾನವೇ ಹೊರತು ಸಿದ್ಧಾಂತವಲ್ಲ. ಆದರೆ ಇಷ್ಟು ಮಾತ್ರ ಸ್ಪಷ್ಟ: ಕವಿಯ ಕಾವ್ಯದ ಆದರ್ಶಗಳನ್ನು ನೋಡಿ, ಅವನ ಜೀವನ ಅದಕ್ಕೆ ಸಮರ್ಥನೀಯವಾಗಿಲ್ಲವೆಂಬ ಕಾರಣದಿಂದ ಕಾವ್ಯದ ಮಹತ್ವವನ್ನು ಕೀಳ್ಗಳೆಯುವುದಾಗಲೀ, ಕವಿಯ ಜೀವನದ ಮಹತ್ತನ್ನು ನೋಡಿ ಸುಮಾರಾದ ಕವಿತೆಯನ್ನೂ ಸಹ ಅತ್ಯುತ್ಕೃಷ್ಟ ಎಂದು ಅಟ್ಟಕ್ಕೇರಿಸುವುದಾಗಲೀ—ಎರಡೂ ವಿಮರ್ಶಕನ ಕಾರ್ಯವಲ್ಲ. ಅತ್ಯುತ್ತಮ ಕವಿತೆಯನ್ನು ಬರೆಯುವುದಕ್ಕಿಂತ ಅತ್ಯುತ್ತಮವಾದ ಜೀವನವನ್ನು ನಡೆಸುವುದು ಮಹತ್ತಾದುದು ಎನ್ನುವುದನ್ನು

---

[9] "The historical method is certainly an attractive one and it leads to some distinct advantages, for it decidedly aids those who are not gifted with fine insight and literary discrimination, to understand certain sides of poet's work more clearly and intelligently. But while it increases our knowledge of the workings of the human mind, it does not in the end assist or improve our critical appreciation of poetry. . . ."

[*Kalidasa*, II Series: Sri Aurobindo, p. 12]

ಒಪ್ಪಿದರೂ ಕಾವ್ಯವಿಮರ್ಶೆಯಲ್ಲಿ ಮಾತ್ರ ಕವಿಯ ಜೀವನಚರಿತ್ರೆಯ ಘಟನೆಗಳನ್ನು ಆ ಕಾಲದಲ್ಲಿ ತಾರದೆ, ಅದನ್ನು ಚಾರಿತ್ರಿಕ ಕುತೂಹಲದಿಂದ ನೋಡುವುದೊಳ್ಳಿತು. ಏಕೆಂದರೆ "ಮಹಾ ವ್ಯಕ್ತಿಗಳು ಅಪೂರ್ವ, ಕವಿಗಳು ಅಪೂರ್ವ, ಮಹಾ ವ್ಯಕ್ತಿಯಾದ ಕವಿ ಅತ್ಯಪೂರ್ವ "[10].

ಜಿ. ಎಸ್. ಶಿವರುದ್ರಪ್ಪ.

---

[10] John Drink Water: 'The Lyric'

# (Glycerine) ಗ್ಲಿಸರೀನು [$C_3 H_5 (OH)_3$]

ಯುದ್ಧಕಾಲದಲ್ಲಿಯೂ ಮತ್ತು ಶಾಂತಿಕಾಲದಲ್ಲಿಯೂ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿರುವ ಅನೇಕ ರಾಸಾಯನಿಕ ವಸ್ತುಗಳಲ್ಲಿ ಗ್ಲಿಸರೀನೂ ಒಂದು, ಎಂದು ತಿಳಿಸಬಹುದು. ಇದು ಸಾಬೂನಿನ ತಯಾರಿಕೆಯಲ್ಲಿ ಉತ್ಪತ್ತಿಯಾಗುವ ಒಂದು ಉಪಪದಾರ್ಥವಾದರೂ, ಕೆಲವು ಸಂದರ್ಭಗಳಲ್ಲಿ ಅದಕ್ಕಿಂತ ಹೆಚ್ಚು ಬೆಲೆಯುಳ್ಳದ್ದಾಗಿದೆ. ಸಾಬೂನು ಚರ್ಮದ ಮೇಲಾಗಲೀ, ಅಥವಾ ಬಟ್ಟೆಗಳ ಮೇಲಾಗಲೀ ಸೇರುವ ಕೊಳೆಯನ್ನು ತೆಗೆಯುವುದಕ್ಕೆ ಮಾತ್ರ ಉಪಯೋಗಿಸಲ್ಪಡುವುದಾದರೆ, ಗ್ಲಿಸರೀನಿಗೆ ಅನೇಕ ಬಗೆಯ ಉಪಯೋಗಗಳಿವೆ. ಆದುದರಿಂದಲೇ, ಈ ಪದಾರ್ಥಕ್ಕೆ ಎಲ್ಲಿ ಹೆಚ್ಚು ಆವಶ್ಯಕತೆ ಇದೆಯೋ, ಅಲ್ಲಿ ಸಾಬೂನಿನ ಕೈಗಾರಿಕೆಯೂ ಬೆಳೆಯುತ್ತಿದೆ ಎಂಬುವುದರಲ್ಲಿ ನಮಗೆ ಸಂದೇಹವಿಲ್ಲ. ನಮ್ಮ ಸಂಸ್ಥಾನದಲ್ಲಿ "ಬೆಂಗಳೂರಿನಲ್ಲಿರುವ ಸರ್ಕಾರದ ಸಾಬೂನಿನ ಕಾರ್ಖಾನೆಯಲ್ಲಿ ಮುಂದಕ್ಕೆ ಗ್ಲಿಸರೀನನ್ನು ತೆಗೆದು ಮಾರಾಟಕ್ಕೆ ಇಡುವ ಯೋಜನೆಯಿಂದ ಏರ್ಪಾಡುಗಳು ಈಗಾಗಲೇ ನಡೆದಿವೆ" ಎಂಬ ವರದಿಯು ಸಮ್ಮ ಮನಸ್ಸಿನಲ್ಲಿ ಉತ್ಸಾಹವನ್ನುಂಟುಮಾಡಿದೆ.

ಈ ಗ್ಲಿಸರೀನನ್ನು ಮೊಟ್ಟಮೊದಲು ಕಂಡುಹಿಡಿದವರು ಯಾರು, ಮತ್ತು ಇದು ಯಾವ ಸ್ವಭಾವವನ್ನು ಹೊಂದಿದೆ, ಯಾವ ರೀತಿಯಲ್ಲಿ ನಮಗೆ ಇದು ಹೆಚ್ಚು ಉಪಯೋಗವುಳ್ಳದ್ದಾಗಿದೆ ಎಂಬುದನ್ನು ಈ ಪುಟ್ಟ ಲೇಖನದ ಮೂಲಕ ತಿಳಿಸಲು ಪ್ರಯತ್ನಿಸಿದ್ದೇನೆ. ಗ್ಲಿಸರೀನು ಮದ್ಯಸಾರದ (Alcohol) ಗುಂಪಿಗೆ ಸೇರಿದ, ನೀರಿನಲ್ಲಿ ಕರಗುವ, ಮತ್ತು ಮಂದವಾಗಿರುವ ಒಂದು ದ್ರವಪದಾರ್ಥ. ಇದು ಪಾಕದಂತೆ ಗಟ್ಟಿಯಾಗಿಯೂ, ಸಕ್ಕರೆಗಿಂತ ಹೆಚ್ಚು ಸಿಹಿಯಾಗಿಯೂ ಇರುತ್ತದೆ. ಆದುದರಿಂದಲೇ ಇದನ್ನು ಕೆಲವು ಸಿಹಿಪಾನೀಯಗಳಲ್ಲಿ ಸೇರಿಸಿರುತ್ತಾರೆ. ಆದರೆ ಇದೊಂದೇ ಉಪಯೋಗವಲ್ಲ. ಬೇರೆ ಉಪಯೋಗಗಳೂ ಇವೆ. ಅವುಗಳನ್ನು ಮುಂದೆ ತಿಳಿಸಲಾಗಿದೆ.

ಈ ಪದಾರ್ಥವನ್ನು ಮೊಟ್ಟಮೊದಲು ಕಂಡುಹಿಡಿದವರು "ಷೀಲೆ" (Scheele) ಎಂಬ ಸ್ವೀಡನ್ ದೇಶದ ವಿಜ್ಞಾನಿಗಳು. ಇವರು 1779 ನೆಯ ವರ್ಷದಲ್ಲಿ ಆಲಿವ್ ಎಣ್ಣೆಯನ್ನು "ಸೀಸದ ಆಕ್ಸೈಡು" (Litharge) ಎಂಬ ಲವಣದ ಜೊತೆಯಲ್ಲಿ ಸೇರಿಸಿ ಕುದಿಸಿದರು. ಇವರು ಸೀಸದ ಆಕ್ಸೈಡಿನ ಸಹಾಯದಿಂದ ಒಂದು ತರಹ ಸೀಮೆಂಟನ್ನು ತಯಾರಿಸಬೇಕೆಂತಿದ್ದರು. ಆದರೆ ನೀರಿನಲ್ಲಿ ಕರಗುವ ಒಂದು ಸಿಹಿ

ಪದಾರ್ಥವು ಉತ್ಪತ್ತಿಯಾದುದನ್ನು ಇವರು ಕಂಡುಹಿಡಿದರು. ಇದರ ಫಲವಾಗಿ ಅನೇಕ ಸಂಶೋಧನೆಗಳು ನಡೆದವು. ಆಲಿವ್ ಎಣ್ಣೆಯಂತೆಯೇ ಇತರ ಎಣ್ಣೆಗಳನ್ನೂ, ಕೊಬ್ಬನ್ನೂ ಉಪಯೋಗಿಸಿದಾಗಲೂ, ಇದೇ ಪದಾರ್ಥವು ಉತ್ಪತ್ತಿಯಾದುದನ್ನು ರಾಸಾಯನಿಕ ವಿಜ್ಞಾನಿಗಳು ಕಂಡುಹಿಡಿದರು. ಈ ರೀತಿಯಾಗಿ ಎಣ್ಣೆ ಕೊಬ್ಬುಗಳನ್ನು ಉಪಯೋಗಿಸಿ, ಗ್ಲಿಸರೀನನ್ನು ತೆಗೆಯುವ ರಾಸಾಯನಿಕ ಬದಲಾವಣೆಯನ್ನು "ಸೆಪಾನಿಫಿಕೇಷನ್ ವಿಧಾನ" (Saponification) ವೆಂದು ಕರೆಯುತ್ತಾರೆ. ಈ ವಿಧಾನದಿಂದ ಮೊದಲು ಸಾಬೂನನ್ನು (Soap) ಉತ್ಪತ್ತಿ ಮಾಡಿದುದರಿಂದ, ವಿಜ್ಞಾನಿಗಳು ಇದಕ್ಕೆ ಈ ಹೆಸರನ್ನು ಕೊಟ್ಟಿದ್ದಾರೆಂದು ತಿಳಿಸಬಹುದು. ಕೆಲವು ವರ್ಷಗಳನಂತರ, ಅಂದರೆ ೧೮೧೨ ರಲ್ಲಿ ಷೆವ್‌ರೂಯಲ್ (Chevreul) ಎಂಬ ಫ್ರೆಂಚ್ ದೇಶದ ವಿಜ್ಞಾನಿಯು, ಎಣ್ಣೆ ಮತ್ತು ಕೊಬ್ಬುಗಳ ರಾಸಾಯನಿಕ ಲಕ್ಷಣಗಳನ್ನು ಕಂಡುಹಿಡಿಯುವುದಕ್ಕೋಸ್ಕರ ನಡೆಸಿದ ಪರೀಕ್ಷೆಗಳಿಂದ ಒಂದು ಮುಖ್ಯವಾದ ಸಂಗತಿಯನ್ನು ಹೊರಪಡಿಸಿದನು. ಅದೇನೆಂದರೆ, ಎಣ್ಣೆಗಳಿಂದಾಗಲೀ, ಕೊಬ್ಬಿನಿಂದಾಗಲೀ ಒಂದು ಸಿಡಿಪದಾರ್ಥವನ್ನು ಸೆಪಾನಿಫಿಕೇಷನ್ ವಿಧಾನದಿಂದ ಉತ್ಪತ್ತಿಮಾಡಬಹುದು ಎಂಬುದು. ಆ ಪದಾರ್ಥವೇ ಗ್ಲಿಸರೀನು—$C_3H_5\,(OH)_3$ ಇದಕ್ಕೆ ಈ ಹೆಸರು ಕೊಡುವುದಕ್ಕೆ ಅದು ಸಿಹಿಯಾಗಿರುವುದೇ ಕಾರಣ, ಎಂಬುದಾಗಿಯೂ ಅವರು ತಿಳಿಸಿದರು.

ಎಣ್ಣೆ ಮತ್ತು ಕೊಬ್ಬುಗಳನ್ನು ಗ್ಲಿಸರೀನು ಮತ್ತು ಕೆಲವು ಆಮ್ಲಗಳಿಂದ ಉತ್ಪತ್ತಿಯಾದ "ಎಸ್ಟರ್ಸ್" ಎಂಬುದಾಗಿ ಕರೆಯಬಹುದು. ಈ ಎಸ್ಟರುಗಳನ್ನು "ಟ್ರೈಗ್ಲಿಸರೈಡುಗಳು" ಎಂಬುದಾಗಿಯೂ ಕರೆಯುತ್ತಾರೆ. ಸ್ಟಿಯರಿಕ್ ಆಮ್ಲದಿಂದ ($C_{17}H_{35}COOH$) ಬರುವ ಎಸ್ಟರನ್ನು "ಟ್ರೈಸ್ಟಿಯರಿನ್" ಎಂಬುದಾಗಿ ಕರೆಯುತ್ತಾರೆ. ಈ ಗ್ಲಿಸರೈಡುಗಳು ಕಾಸ್ಟಿಕ್ ಸೋಡಾ ಅಥವಾ ಕಾಸ್ಟಿಕ್ ಪೊಟಾಷ್ ಕ್ಷಾರಕದ ಜೊತೆಯಲ್ಲಿ ಸೇರಿಸಿ ಕುದಿಸಿದಾಗ, ಸೆಪಾನಿಫಿಕೇಷನ್ ಹೊಂದಿ, ಅದರಿಂದ ಗ್ಲಿಸರೀನನ್ನೂ, ಸೋಡಿಯಂ ಅಥವಾ ಪೊಟಾಸಿಯಂ ಸ್ಟಿಯರೇಟು ಲವಣವನ್ನೂ ಉತ್ಪತ್ತಿಮಾಡುತ್ತವೆ. ಈ ಲವಣವೇ ಸಾಬೂನು. ಈ ರೀತಿಯಾಗಿ ಉತ್ಪತ್ತಿಯಾದ ಸಾಬೂನನ್ನು ಉಪ್ಪಿನ ದೆಸೆಯಿಂದ ಕೆಳಗೆ ಗಡ್ಡೆಕಟ್ಟಿಸಬಹುದು. ಆದರೆ ಗ್ಲಿಸರೀನು ಮಾತ್ರ ಬೇರೆ ಬರುತ್ತದೆ. ಆದುದರಿಂದ ಗ್ಲಿಸರೀನನ್ನು ಸಾಬೂನಿನ ತಯಾರಿಕೆಯಲ್ಲಿ ಬರುವ ಮುಖ್ಯವಾದ ಉಪಪದಾರ್ಥವೆನ್ನಬಹುದು. ಮೇಲೆ ವಿವರಿಸಿದ ವಿಧಾನದಲ್ಲಿ ಗ್ಲಿಸರೀನು ಹೇಗೆ ಉತ್ಪತ್ತಿಯಾಗುತ್ತದೆ ಎಂಬುದನ್ನು ಕೆಳಗೆ ಕೊಟ್ಟಿರುವ ಸಮೀಕರಣದ ಮೂಲಕ ತಿಳಿಯಬಹುದು.

$$\text{(ಟ್ರೈಸ್ಟಿಯರಿನ್ ಕೊಬ್ಬು)}\quad \begin{array}{l} CH_2\cdot \boxed{O\cdot OC\cdot C_{17}H_{35} + Na} \, OH \\ \,| \\ CH\cdot \boxed{O\cdot OC\cdot C_{17}H_{35} + Na} \, OH \\ \,| \\ CH_2\cdot \boxed{O\cdot OC\cdot C_{17}H_{35} + Na} \, OH \end{array} \xrightarrow{\text{(ಕ್ಷಾರಕ)}}$$

$$\text{(ಗ್ಲಿಸರೀನು)}\quad \begin{array}{l} CH_2\cdot OH \\ \,| \\ CH\cdot O + 3\ C_{17}H_{35}COONa \\ \,| \\ CH_2\cdot OH \quad \text{(ಸಾಬೂನು)} \end{array}$$

ಸಾಬೂನಿನ ತಯಾರಿಕೆಯಲ್ಲಿ ಗ್ಲಿಸರೀನು ಸ್ವಲ್ಪಪ್ರಮಾಣದಲ್ಲಿ ಮಾತ್ರ ಉತ್ಪತ್ತಿಯಾದರೆ ಅದನ್ನು ಬೇರೆಯಾಗಿ ತೆಗೆಯುವುದಿಲ್ಲ. ಏಕೆಂದರೆ, ಅದನ್ನು ಬೇರ್ಪಡಿಸುವ ವಿಧಾನದ ಖರ್ಚು ಅದರಿಂದ ಬರುವ ಗ್ಲಿಸರೀನಿನ ಬೆಲೆಗಿಂತ ಅಧಿಕವಾಗಿರುತ್ತದೆ. ಆದರೆ ದೊಡ್ಡ ಕಾರ್ಖಾನೆಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಗ್ಲಿಸರೀನು ಉತ್ಪತ್ತಿಯಾಗುವುದರಿಂದ, ಇದನ್ನು ಬೇರೆಯಾಗಿ ತೆಗೆಯುವುದು ಲಾಭಕರ. ಬೆಂಗಳೂರಿನ ಕಾರ್ಖಾನೆಯಲ್ಲಿ ಇನ್ನು ಮುಂದೆ ಸಾಬೂನಿನ ಉತ್ಪತ್ತಿಯನ್ನು ಹೆಚ್ಚುಮಾಡಿ, ವರ್ಷಕ್ಕೆ ಸುಮಾರು ೭೫ ಟನ್ನುಗಳಷ್ಟು ಗ್ಲಿಸರೀನನ್ನು ತೆಗೆಯುವ ಏರ್ಪಾಡುಗಳು ಈಗಲೇ ನಡೆದಿವೆ ಎಂಬುದು ವರದಿಗಳ ಮೂಲಕ ತಿಳಿದಿದೆ. ಇದರಿಂದ ನಮ್ಮ ಸಂಸ್ಥಾನದ ಆದಾಯವು ಹೆಚ್ಚುವುದರಲ್ಲಿ ನಮಗೆ ಸಂದೇಹವಿಲ್ಲ.

ಸಾಬೂನು ಮತ್ತು ಗ್ಲಿಸರೀನುಗಳ ತಯಾರಿಕೆಯಲ್ಲಿ ಉಪಯೋಗಿಸಬಹುದಾದ ಎಣ್ಣೆ ಮತ್ತು ಕೊಬ್ಬುಗಳಲ್ಲಿ ದನದ ಕೊಬ್ಬನ್ನೂ ಕೊಬ್ಬರಿ ಎಣ್ಣೆಯನ್ನೂ, ಆಲಿವ್ ಮತ್ತು ತಿಮಿಂಗಲದ ಎಣ್ಣೆಗಳನ್ನೂ (Whale oil) ತಿಳಿಸಬಹುದು. ಅನೇಕ ಎಣ್ಣೆಗಳಲ್ಲಿ ಇರುವ ಎಸ್ಟರುಗಳಲ್ಲಿ "ಸ್ಟಿಯರಿನ್" $C_3H_5$ $(C_{17}H_{35}COO)$ ಮತ್ತು ಪಾಮಿಟಿನ್ $C_3H_5\ (C_{16}H_{33}COO)_3$ ಗಳನ್ನು ಇಲ್ಲಿ ತಿಳಿಸಬಹುದು.

**ಗ್ಲಿಸರೀನಿನ ತಯಾರಿಕೆ**—ಮೇಲೆ ತಿಳಿಸಿದ ಕೆಲವು ಎಣ್ಣೆಗಳನ್ನು ಕ್ಷಾರಕಗಳ ಜೊತೆಯಲ್ಲಿ ಕುದಿಸಿದರೆ, ಗ್ಲಿಸರೀನು ಮತ್ತು ಸಾಬೂನುಗಳುಳ್ಳ (Soap lye) ಒಂದು ದ್ರಾವಣವು ಉತ್ಪತ್ತಿಯಾಗುತ್ತದೆ. ಇದರಲ್ಲಿ ರಾಸಾಯನಿಕ ಬದಲಾವಣೆಯನ್ನು ಹೊಂದದೇ ಇರುವ ಕ್ಷಾರಕವೂ ಸ್ವಲ್ಪಪ್ರಮಾಣದಲ್ಲಿ ಸೇರಿರುತ್ತದೆ. ಕ್ಷಾರಕವುಳ್ಳ ಈ ದ್ರಾವಣವನ್ನು ಹಾಗೆಯೇ ಉಪಯೋಗಿಸುವುದು ಹಾನಿಕರ. ಇದರಲ್ಲಿರುವ ಸಾಬೂನನ್ನು ಅಡಿಗೆಗೆ ಉಪಯೋಗಿಸುವ ಉಪ್ಪಿನ ಸಹಾಯದಿಂದ ಗಡ್ಡೆಕಟ್ಟಿಸಿ,

ಬೇರೆಯಾಗಿ ತೆಗೆಯಬಹುದು. ಇದಾದನಂತರ, ಉಳಿಯುವ ದ್ರಾವಣದಲ್ಲಿ ಕ್ಷಾರಕವೂ, ಉಪ್ಪೂ, ಗ್ಲಿಸರೀನೂ ಸೇರಿರುತ್ತವೆ. ಇದರಲ್ಲಿ ಸುಮಾರು ಸೇ. 35 ರಷ್ಟು ಮಾತ್ರ ಗ್ಲಿಸರೀನು ಇರುತ್ತದೆ. ಇದರಲ್ಲಿ ಗಡ್ಡೆಕಟ್ಟದೇ ಇರುವ ಸಾಬೂನೂ ಅಲ್ಪಪ್ರಮಾಣ ದಲ್ಲಿ ಇರುತ್ತದೆ. ಈ ದ್ರಾವಣವನ್ನು "ಸೋಪ್ ಲೈ" ಎಂಬುದಾಗಿ ಕರೆಯುತ್ತಾರೆ. ಇದರ ಜೊತೆಗೆ ಸ್ವಲ್ಪ ಕಬ್ಬಿಣದ ಆಕ್ಸೈಡನ್ನೂ ಸ್ವಲ್ಪ ಸುಣ್ಣವನ್ನೂ ಸೇರಿಸುತ್ತಾರೆ. ಇದರಿಂದ ಸಾಬೂನು ಪುನಃ ಗಡ್ಡೆ ಕಟ್ಟಿ (Coagulation) ಕೆಳಗೆ ಬೇರೆಯಾಗುತ್ತದೆ. ಇದನ್ನು ಬೇರ್ಪಡಿಸಿದನಂತರ ಉಳಿಯುವ ದ್ರಾವಣವನ್ನು ಬಾಷ್ಪಕಾರಕ ಪಾತ್ರೆ (Evaporators) ಗಳಲ್ಲಿ ಹಾಕಿ ಚೆನ್ನಾಗಿ ಕುದಿಸುತ್ತಾರೆ. ಈ ದ್ರಾವಣದಲ್ಲಿರುವ ನೀರು ಇಂಗಿಹೋದಮೇಲೆ ಗ್ಲಿಸರೀನಿನ ಪ್ರಮಾಣವೂ ಸೇ. 80 ರಷ್ಟಕ್ಕೆ ಏರುತ್ತದೆ. ಸಾಬೂನಿನ ಜೊತೆಗೆ ಸ್ವಲ್ಪ ಉಪ್ಪೂ ಗಡ್ಡೆಕಟ್ಟಿ ಬೇರೆಯಾಗುವುದರಿಂದ ಅದನ್ನು ಮೊದಲೇ ತೆಗೆದುಬಿಡುತ್ತಾರೆ. ಮೇಲಿನ ವಿಧಾನದಲ್ಲಿ ಬರುವ ಸೇ. 80 ರಷ್ಟು ಗ್ಲಿಸರೀನುಳ್ಳ ದ್ರವವನ್ನು ಹಾಗೆಯೇ ಉಪಯೋಗಿಸುತ್ತಾರೆ.

ಕೊಬ್ಬು ಮತ್ತು ಎಣ್ಣೆಗಳನ್ನು "ಲಿಪೇಸ್" ಎನ್‌ಸೈಮಿನ ಸಹಾಯದಿಂದ, ನೀರಿನ ಜೊತೆಯಲ್ಲಿ ಸೇರಿಸಿ ಕುದಿಸಿದಾಗಲೂ ಸುಣ್ಣದ ಜೊತೆಯಲ್ಲಿ ಸೇರಿಸಿ, ಆವಿಯು ಹೊರಗೆ ಹೋಗದಂಥ ಮುಚ್ಚಳವುಳ್ಳ ಉಸಿರು ಪಾತ್ರೆಗಳಲ್ಲಿ (Autoclaves) ಕುದಿಸಿ, 140° ಸೆ. ಗೆ ಕಾದ ನೀರಿನ ಹಬೆಯನ್ನು ಹಾಯಿಸುವುದರಿಂದಲೂ, ಸೆಪಾನಿಫಿ ಕೇಷನ್ ವಿಧಾನವು ಉಂಟಾಗಿ ಗ್ಲಿಸರೀನು ಉತ್ಪತ್ತಿಯಾಗುತ್ತದೆ. ಇದಲ್ಲದೆ, ನೀರಿನ ಜೊತೆಯಲ್ಲಿ ಕೆಲವು ರಾಸಾಯನಿಕ ವಸ್ತುಗಳನ್ನು ಸೇರಿಸಿ ಕುದಿಸುವುದ ರಿಂದಲೂ, ಸೆಪಾನಿಫಿಕೇಷನ್ ಉಂಟುಮಾಡಬಹುದು. ಕೊನೆಯ ವಿಧಾನದಲ್ಲಿ ಉಪಯೋಗಿಸುವ ನ್ಯಾಫ್ಥಲೀನ್, ಒಲೆಯಿಕ್ ಆಮ್ಲ, ಮತ್ತು ಗಂಧಕಾಮ್ಲಗಳುಳ್ಳ (Twitchell's reagent) ಮಿಶ್ರಣವನ್ನು ಇಲ್ಲಿ ತಿಳಿಸಬಹುದು.

ಕಾಕಾಂಬಿ (Molasses) ಯಿಂದ ಮದ್ಯಸಾರವನ್ನು ಉತ್ಪತ್ತಿಮಾಡುವ ಫರ್ಮೆಂಟೇಷನ್ ವಿಧಾನದಲ್ಲಿ ಸೇ. 3 ರಷ್ಟು ಗ್ಲಿಸರೀನು ಉಪಪದಾರ್ಥವಾಗಿ ಬರುತ್ತದೆ. ಈ ವಿಧಾನದಿಂದ 1914-1918 ನೆಯ ಯುದ್ಧದಲ್ಲಿ ಜರ್ಮನಿ ದೇಶದಲ್ಲಿ ಸುಮಾರು ತಿಂಗಳಿಗೆ 1,000 ಟನ್ನುಗಳಷ್ಟು ಗ್ಲಿಸರೀನು ತಯಾರಾಗುತ್ತಿತ್ತು. ಹೀಗೆ ತಯಾರಾದ ಗ್ಲಿಸರೀನನ್ನೆಲ್ಲಾ ಸಿಡಿಮದ್ದಿನ ತಯಾರಿಕೆಗೆ ಮಾತ್ರ ಉಪಯೋಗಿಸುತ್ತಿ ದ್ದರು. ಸೋಡಿಯಂ ಸಲ್ಫೇಟು ಲವಣವನ್ನು ಉಪಯೋಗಿಸುವುದರಿಂದ, ಕೆಲವು ಬ್ಯಾಕ್ಟೀರಿಯಾ ಕ್ರಿಮಿಗಳನ್ನು ನಿರ್ನಾಮಮಾಡಿ ಗ್ಲಿಸರೀನಿನ ಉತ್ಪತ್ತಿಯನ್ನು ಸೇ. 36 ರಷ್ಟು ಪ್ರಮಾಣಕ್ಕೆ ಹೆಚ್ಚಿಸಿದ್ದಾರೆ. ಈ ವಿಧಾನದಿಂದ ಪ್ರತಿ 10 ಟನ್ನುಗಳಷ್ಟು ಕಾಕಾಂಬಿಯಿಂದ ಒಂದು ಟನ್ನಿನಷ್ಟು ಗ್ಲಿಸರೀನು ಬರುತ್ತಿದೆ.

ನಮ್ಮ ದೇಶದಲ್ಲಿರುವ ಕೆಲವು ಸಾಬೂನಿನ ಕಾರ್ಖಾನೆಗಳಲ್ಲಿ ಮಾತ್ರ ಗ್ಲಿಸರೀನನ್ನು ತಯಾರಿಸುತ್ತಿದ್ದಾರೆ. ಸಿಡಿಮದ್ದಿನ ತಯಾರಿಕೆಯು ಎಲ್ಲಿ ಹೆಚ್ಚಾಗಿದೆಯೋ ಅಲ್ಲಿ ಗ್ಲಿಸರೀನು ಉತ್ಪತ್ತಿಯಾದರೆ ಅದಕ್ಕೆ ವ್ಯಾಪಾರವಿದೆ. ನಮ್ಮ ದೇಶದಲ್ಲಿ ಸಿಡಿಮದ್ದಿನ ಕಾರ್ಖಾನೆಗಳು ವಿರಳವಾದ್ದರಿಂದ, ಗ್ಲಿಸರೀನಿಗೆ ಹೆಚ್ಚು ಪ್ರದೇಶಗಳಲ್ಲಿ ವ್ಯಾಪಾರವಿಲ್ಲ. ಆದುದರಿಂದ ಅದರ ತಯಾರಿಕೆಯು ಇಲ್ಲಿ ಅಷ್ಟು ಲಾಭಕರವಲ್ಲ. ಆದರೆ ಗ್ಲಿಸರೀನಿಗಿರುವ ಇತರ ಉಪಯೋಗಗಳು ನಮಗೆ ಗೋಚರವಾದಮೇಲೆ ಸಾಬೂನಿನ ಮತ್ತು ಗ್ಲಿಸರೀನಿನ ತಯಾರಿಕೆಗಳು ಬೆಳೆಯುತ್ತಿವೆ. ಈಗ ನಮ್ಮ ದೇಶದಲ್ಲಿ ತಯಾರಾಗುವ ಪ್ರತಿ 110 ಟನ್ನುಗಳಷ್ಟು ಸಾಬೂನಿಗೆ 10 ಟನ್ನುಗಳಷ್ಟು ಗ್ಲಿಸರೀನು ಉಪಪದಾರ್ಥವಾಗಿ ಬರುತ್ತಿದೆ ಎಂದು ವರದಿಗಳ ಮೂಲಕ ತಿಳಿದಿದೆ.

ಗ್ಲಿಸರೀನಿಗೆ ಇರುವ ಉಪಯೋಗಗಳಲ್ಲೆಲ್ಲಾ ಮುಖ್ಯವಾದುದು ಬಂಡೆಗಳನ್ನು ಸಿಡಿಸುವುದಕ್ಕೆ ಉಪಯೋಗಿಸುವ ಡೈನಾಮಿಟ್‌ಸಲ್ಲೇ ಎಂದು ತಿಳಿಸಬಹುದು. ಗ್ಲಿಸರೀನಿನಿಂದ ತಯಾರಿಸಲ್ಪಟ್ಟ ನೈಟ್ರೋಗ್ಲಿಸರೀನ್ ಎಂಬ ದ್ರವರೂಪದ ಸಿಡಿಮದ್ದನ್ನು ಬಂಡೆಗಳನ್ನು ಒಡೆಯುವುದಕ್ಕೆ ಉಪಯೋಗಿಸುವ ಕಾರ್ಡೈಟು (Cordite), ಬ್ಲಾಸ್ಟಿಂಗ್ ಜಿಲೆಟಿನ್ (Blasting Gelatin) ಮುಂತಾದ ಪುಡಿಗಳಲ್ಲಿ ಸೇರಿಸುವುದುಂಟು. ಇದರ ಜೊತೆಗೆ ಇನ್ನೂ ಇತರ ಪದಾರ್ಥಗಳನ್ನು ಸೇರಿಸುತ್ತಾರೆ. ಡೈನಾಮಿಟ್ಟುಗಳಲ್ಲಿ ಉಪಯೋಗಿಸಬೇಕಾದ ನೈಟ್ರೋಗ್ಲಿಸರೀನನ್ನು ತಯಾರಿಸಬೇಕಾದರೆ, ಸೇ. 95 ರಷ್ಟು ಶುದ್ಧವಾದ ಗ್ಲಿಸರೀನು ಬೇಕು. ಈ ರೀತಿಯಾದ ಗ್ಲಿಸರೀನನ್ನು ಹೆಚ್ಚಿನ ವಾಯು ಒತ್ತಡವುಳ್ಳ ಭಟ್ಟಿ ಪಾತ್ರೆಯಲ್ಲಿ, ಹೆಚ್ಚಾಗಿ ಕಾದ ನೀರಿನ ಹಬೆಯ ಸಹಾಯದಿಂದ ಭಟ್ಟಿ ಇಳಿಸಬೇಕು. ಈ ವಿಧಾನದಿಂದ ಬರುವ ಗ್ಲಿಸರೀನಿಗೆ ಸ್ವಲ್ಪ ಹಳದೀ ಬಣ್ಣವು ಇರುತ್ತದೆ. ಇದನ್ನು ಇದ್ದಲುಪುಡಿಯ ಜೊತೆಗೆ ಸೇರಿಸಿ ಕುದಿಸಿದರೆ, ಬೆಳ್ಳಗಿರುವ ಪದಾರ್ಥವು ಬರುತ್ತದೆ. ಇದನ್ನು ಪುನಃ ಭಟ್ಟಿ ಇಳಿಸಿ ; ಮತ್ತೆ ಇದ್ದಲಿನ ಪುಡಿಯ ಜೊತೆಗೆ ಸೇರಿಸಿ ಕುದಿಸಿದರೆ, ಅತಿ ಶುದ್ಧವಾದ ಗ್ಲಿಸರೀನು ಬರುತ್ತದೆ. ಒಳ್ಳೆಯ ಗ್ಲಿಸರೀನಿನಲ್ಲಿ ಯಾವ ಕಶ್ಮಲಗಳೂ ಇರಬಾರದು. ತಾಮ್ರ, ಸೀಸ ಮುಂತಾದ ಲೋಹಗಳಾಗಲೀ, ಆರ್ಸನಿಕ್ ಆಗಲೀ ಇರಬಾರದು. ಅವುಗಳಲ್ಲಿ ಯಾವುದು ಇದ್ದರೂ, ಆ ಗ್ಲಿಸರೀನು ರಾಸಾಯನಿಕ ಕ್ರಿಯೆಗಳಿಗೆ ಅಷ್ಟು ಯೋಗ್ಯವಲ್ಲವೆಂದು ತಿಳಿದುಬಂದಿದೆ. ಅತಿಶುದ್ಧವಾದ (Chemically pure) ಗ್ಲಿಸರೀನನ್ನು ದೇಹಕಾಂತಿವರ್ಧಕ ವಸ್ತುಗಳ ತಯಾರಿಕೆಯಲ್ಲೂ, ಔಷಧಗಳ ತಯಾರಿಕೆಯಲ್ಲೂ ಉಪಯೋಗಿಸುತ್ತಾರೆ.

**ನೈಟ್ರೋಗ್ಲಿಸರೀನಿನ ತಯಾರಿಕೆ**—ಸುಮಾರು 5 ಭಾಗದಷ್ಟು ಗಂಧಕಾಮ್ಲ

ವನ್ನೂ ಮತ್ತು 3 ಭಾಗದಷ್ಟು ನೈಟ್ರಿಕ್ ಆಮ್ಲವನ್ನೂ ಸೇರಿಸಿ, ತಣ್ಣಗೆ ಮಾಡಿ, ಆ ತಣ್ಣಗಾದ ಮಿಶ್ರಣವನ್ನು ಒಂದು ತೊಟ್ಟಿಯಲ್ಲಿರಿಸಿ, ಇದರ ಜೊತೆಗೆ ಒಂದು ಭಾಗದಷ್ಟು ಡೈನಾಮಿಟ್ ಗ್ಲಿಸರೀನನ್ನು ಚುರುಕಿಯೋಪಾದಿಯಲ್ಲಿ ಹರಿಸುತ್ತಾರೆ. ಹೀಗೆ ಗ್ಲಿಸರೀನನ್ನು ಸೇರಿಸಿದಾಗ ನೈಟ್ರೋಗ್ಲಿಸರೀನು ಉತ್ಪತ್ತಿಯಾಗುತ್ತದೆ. ಇದರ ಉತ್ಪತ್ತಿಯ ಜೊತೆಗೆ, ಶಾಖವೂ, ನೀರೂ ಉತ್ಪತ್ತಿಯಾಗುವುದುಂಟು. ನೀರು ಗಂಧಕಾಮ್ಲದಿಂದ ಹೀರಲ್ಪಡುತ್ತದೆ. ಇದರಿಂದ ಮತ್ತಷ್ಟು ಶಾಖವು ಉತ್ಪತ್ತಿಯಾಗಿ, ನೈಟ್ರೋಗ್ಲಿಸರೀನು ಸಿಡಿಯಬಹುದು. ಇದು ಸಿಡಿಯದೇ ಇರುವ ಹಾಗೆ ಮಾಡಬೇಕಾದರೆ, ತೊಟ್ಟಿಯಲ್ಲಿರುವ ಆಮ್ಲಗಳ ಮಿಶ್ರಣದ ಉಷ್ಣತೆಯು 25° ಸೆ. ಮೀರದಂತೆ ನೋಡಿಕೊಳ್ಳುವುದು ಅತ್ಯಗತ್ಯ. ಮೇಲಿನ ವಿಧಾನದಲ್ಲಿ ಉಂಟಾಗುವ ರಾಸಾಯನಿಕ ಬದಲಾವಣೆಯನ್ನು ಕೆಳಗೆ ಕೊಟ್ಟಿರುವ ರೀತಿಯಲ್ಲಿ ತಿಳಿಸಬಹುದು:—

$$\begin{array}{l|l|l l}
CH_2\cdot & OH + H & O\cdot NO_2 & CH_2-O-NO_2 \\
\quad | & & & \quad | \\
CH\cdot & OH \quad\; H & O\cdot NO_2 \rightarrow & CH-O-NO_2 + 3\ H_5O \\
\quad | & & & \quad | \qquad\qquad\qquad (\text{ನೀರು}) \\
CH_2\cdot & OH \quad\; H & O\cdot NO_2 & CH_2-O-NO_2
\end{array}$$

(ಗ್ಲಿಸರೀನು) (ನೈಟ್ರಿಕ್ ಆಮ್ಲ) (ನೈಟ್ರೋಗ್ಲಿಸರೀನು)

ಈ ರೀತಿಯಲ್ಲಿ ತಯಾರಾದ ನೈಟ್ರೋಗ್ಲಿಸರೀನು, ಒಂದು ಹಳದೀ ಬಣ್ಣದ ಎಣ್ಣೆಯ ರೂಪದಲ್ಲಿ, ಗಂಧಕಾಮ್ಲವುಳ್ಳ ನೀರಿನ ಮೇಲೆ ತೇಲುತ್ತದೆ. ಇದನ್ನು ಬೇರೆಯಾಗಿ ತೆಗೆದು, ತಣ್ಣಗಿರುವ ನೀರಿನಿಂದ ತೊಳೆಯುತ್ತಾರೆ. ಇದರ ಜೊತೆಯಲ್ಲಿ ಸೇರಿರುವ ಆಮ್ಲಗಳನ್ನು ಸೋಡಿಯಂ ಕಾರ್ಬೊನೇಟು ಲವಣದ ದ್ರಾವಣದ ಸಹಾಯದಿಂದ ತೆಗೆದು ಪುನಃ ನೈಟ್ರೋಗ್ಲಿಸರೀನು ಎಣ್ಣೆಯನ್ನು ನೀರಿನಿಂದ ತೊಳೆದು ನೀರನ್ನೆಲ್ಲಾ ತೆಗೆಯುತ್ತಾರೆ. ನೈಟ್ರೋಗ್ಲಿಸರೀನನ್ನು ಗ್ಲಿಸರೀನು ಮತ್ತು ನೈಟ್ರಿಕ್ ಆಮ್ಲಗಳ ಎಸ್ಟರು ಎಂದು ಕರೆಯಬಹುದು. ಇದರಲ್ಲಿರುವ ಸಿಡಿಯುವ ಸ್ವಭಾವವನ್ನು ಕಂಡುಹಿಡಿದವನು ಸ್ವೀಡನ್ ದೇಶದ ಆಲ್ಫ್ರೆಡ್ ನೋಬೆಲ್ (Alfred Nobel) ಎಂಬಾತ. ಈತ 1863ನೆಯ ಇಸವಿಯಲ್ಲಿ ಇದನ್ನು ಮೊದಲು ಡೈನಾಮಿಟ್ ಸಿಡಿಮದ್ದಿನಲ್ಲಿ ಉಪಯೋಗಿಸಿದನು. ನೈಟ್ರೋಗ್ಲಿಸರೀನು ಒಳ್ಳೆಯ ಸಿಡಿಮದ್ದಾಗುವುದಕ್ಕೆ ಕಾರಣವೇನೆಂದರೆ, ಅದು ಸ್ವಲ್ಪ ಅಲ್ಲಾಡಿಸಿದರಾಗಲೀ ಕಾಯಿಸಿದರಾಗಲೀ, ವಿಭಜನೆ ಹೊಂದಿ ಅನಂತರ ಹೊಂದುವ ರಾಸಾಯನಿಕ ಬದಲಾವಣೆಯ ಫಲವಾಗಿ,

ಹೆಚ್ಚಿನ ಪ್ರಮಾಣದಲ್ಲಿ ಇಂಗಾಲಾಮ್ಲ, ಸಾರಜನಕ, ಆಮ್ಲಜನಕ ಅನಿಲಗಳನ್ನೂ ನೀರಿನ ಹಬೆಯನ್ನೂ ಅತಿವೇಗದಿಂದ ಉತ್ಪತ್ತಿಮಾಡುವುದರಿಂದಲೇ ಎಂದು ತಿಳಿಸಬಹುದು. ಈ ಅನಿಲಗಳು ರಭಸದಿಂದ ಉತ್ಪತ್ತಿಯಾಗುವುವಲ್ಲದೆ, ಅಧಿಕಪ್ರಮಾಣದ ಪ್ರದೇಶವನ್ನು ಆವರಿಸಿಕೊಂಡು, ಹೆಚ್ಚು ಒತ್ತಡವನ್ನುಂಟುಮಾಡುವುದರಿಂದ ಭೂಮಿಯಲ್ಲಿರುವ ಬಂಡೆಯು ಬೇಗನೆ ಸಿಡಿಯುತ್ತದೆ. ಈ ನೈಟ್ರೋಗ್ಲಿಸರೀನಿನಲ್ಲೇ ಆಮ್ಲಜನಕವು ಹೆಚ್ಚಾಗಿರುವುದರಿಂದ, ಮೇಲೆ ವಿವರಿಸಿದ ರಾಸಾಯನಿಕ ಬದಲಾವಣೆಯು ಅತಿ ಸುಲಭವಾಗಿ, ಹೊರಗಿನ, ಅಂದರೆ ಗಾಳಿಯಲ್ಲಿರುವ ಆಮ್ಲಜನಕದ ಸಹಾಯವಿಲ್ಲದೆ ನಡೆಯುತ್ತದೆ, ಮತ್ತು ಇದರಿಂದ ಸಿಡಿಯುವುದಕ್ಕೆ ಸಹಾಯವಾಗುತ್ತದೆ.

ನೈಟ್ರೋಗ್ಲಿಸರೀನು ಅತಿವೇಗದಿಂದ ಸಿಡಿಯುವುದರಿಂದ, ಕೆಲವು ಸಮಯದಲ್ಲಿ ಅದು ನಮ್ಮ ಹತೋಟಿಗೆ ಬರುವುದಿಲ್ಲ. ಈ ರೀತಿಯಾಗಿ ಅತಿ ವೇಗದಿಂದ ಸಿಡಿಯುವುದನ್ನು ತಡೆಗಟ್ಟಬೇಕಾದುದು ಆವಶ್ಯಕ. ಇದಕ್ಕೋಸ್ಕರ, ಭೂಮಿಯಲ್ಲಿ ದೊರಕುವ ಕಿಸಲ್‌ಘರ್ (Kieselghur) ಎಂಬ ಒಂದು ಬಗೆಯ ಶಿಲೆಯ ಪುಡಿಯನ್ನು ಡೈನಾಮಿಟ್ಟುಗಳಲ್ಲಿ ಉಪಯೋಗಿಸುತ್ತಾರೆ. ಇದು ನೈಟ್ರೋಗ್ಲಿಸರೀನನ್ನು ಬೇಗನೆ ಹೀರುವ ಶಕ್ತಿಯನ್ನು ಹೊಂದಿ ಅದು ಸುಲಭವಾಗಿ ಸಿಡಿಯದೇ ಇರುವ ಹಾಗೆ ಮಾಡುವುದರಿಂದ, ಇಲ್ಲಿ ಉಪಯೋಗಿಸಲ್ಪಡಲು ಯೋಗ್ಯವಾಗಿದೆ.

ಮೇಲೆ ತಿಳಿಸಿದಂತೆ, ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಿರುವ ನೈಟ್ರೋಗ್ಲಿಸರೀನಿನ ತಯಾರಿಕೆಗೆ ಮೂಲವಾದ ಗ್ಲಿಸರೀನನ್ನು ಇನ್ನೂ ಅನೇಕ ವಿಧಗಳಲ್ಲಿ ಉಪಯೋಗಿಸಬಹುದು. ನಮ್ಮ ಚರ್ಮವು ಬೆಂಕಿಯಿಂದ ಸುಟ್ಟುಹೋದಾಗ ಸ್ವಲ್ಪ ಗ್ಲಿಸರೀನನ್ನು ಸವರುವುದರಿಂದ, ನೋವು ಕಡಿಮೆಯಾಗುತ್ತದೆ. ಆದುದರಿಂದ ರಾಸಾಯನಿಕ ಪ್ರಯೋಗಶಾಲೆಗಳಲ್ಲಾಗಲೀ ಕಾರ್ಖಾನೆಗಳಲ್ಲಾಗಲೀ ಇದು ಆವಶ್ಯಕವಾದ ಒಂದು ವಸ್ತು. ಗ್ಲಿಸರೀನು ಸೇರಿಸಲ್ಪಟ್ಟ ಹಣ್ಣಿನ ಮತ್ತು ಇತರ ಆಹಾರ ಪದಾರ್ಥಗಳು, ಫರ್ಮೆಂಟೇಷನ್ ಹೊಂದದೆ ಎಷ್ಟು ದಿವಸಗಳಾದರೂ ಕೆಡದೆ ಇರುತ್ತವೆ. ಇವಲ್ಲದೆ, ಮುದ್ರಣಾಲಯಗಳಲ್ಲಿ ಉಪಯೋಗಿಸುವ ಶಾಯಿಯಲ್ಲಿಯೂ (Printers ink) ಬೂಟ್ ಪಾಲಿಸ್ ತಯಾರಿಕೆಯಲ್ಲೂ, ಇದಕ್ಕೆ ಉಪಯೋಗವಿದೆ. ಬಟ್ಟೆಗಳ ತಯಾರಿಕೆಯಲ್ಲೂ, ಬಣ್ಣಗಳಲ್ಲಿಯೂ, ಕಾಂತಿವರ್ಧಕ ಪದಾರ್ಥಗಳಲ್ಲಿಯೂ (Cosmetics) ಗ್ಲಿಸರೀನನ್ನು ಉಪಯೋಗಿಸಿ, ಮೃದುವಾದ ಪದಾರ್ಥಗಳನ್ನು ನಾವು ಪಡೆಯುತ್ತಿರುವುದರಿಂದ, ಅದು ಎಷ್ಟು ಒಳ್ಳೆಯ ಪದಾರ್ಥವೆಂದು ನಾವು ತಿಳಿಯಬಹುದು.

ಈ ರೀತಿಯಲ್ಲಿ ಅನೇಕ ಉಪಯೋಗಗಳುಳ್ಳ ಗ್ಲಿಸರೀನನ್ನು ಈಚೆಗೆ ಕೃತಕವಾಗಿಯೂ ತಯಾರಿಸಿದ್ದಾರೆ. ಕೇವಲ ಇಂಗಾಲ, ಜಲಜನಕ ವಸ್ತುಗಳಿಂದ, ಅನೇಕ ರಾಸಾಯನಿಕ ಬದಲಾವಣೆಗಳ ಮೂಲಕ, ಈ ಪದಾರ್ಥವನ್ನು ಪಡೆಯುತ್ತಿದ್ದಾರೆ. ಸಾಕಾದಷ್ಟು ಗ್ಲಿಸರೀನು ಉಪಪದಾರ್ಥವಾಗಿ ದೊರಕದಿದ್ದ ಸ್ಥಳಗಳಲ್ಲಿ ನಾವು ಅದನ್ನು ಕೃತಕವಾಗಿಯೂ ತಯಾರಿಸಿ, ಮೇಲೆ ತಿಳಿಸಿದ ಅನೇಕ ಪದಾರ್ಥಗಳನ್ನು ತಯಾರು ಮಾಡಬಹುದು. ಈ ರೀತಿಯಾಗಿ ಹೆಚ್ಚಿನ ಉಪಯೋಗವುಳ್ಳ ಗ್ಲಿಸರೀನನ್ನೂ ಮತ್ತು ಇನ್ನೂ ಇತರ ಪದಾರ್ಥಗಳನ್ನೂ ಕೃತಕವಾಗಿ ತಯಾರು ಮಾಡುವುದಕ್ಕೆ ತಳಹದಿ ಹಾಕಿರುವ ರಸಾಯನ ವಿಜ್ಞಾನಶಾಸ್ತ್ರಕ್ಕೆ ನಾವು ಸರ್ವದಾ ಕೃತಜ್ಞರಾಗಿರಬೇಕು.

ಕೆ. ಎಸ್. ಲಕ್ಷ್ಮಣರಾವ್.

---

# ರಾಣಿ ದುರ್ಗಾವತಿ

ಜಿ. ಎಸ್. ಶಿವರುದ್ರಪ್ಪ
ಕೆ. ಬಿ. ಪ್ರಭುಪ್ರಸಾದ

ಅಗಸ್ಟ 15, 1954 ರಲ್ಲಿ A.I.R. ಮೈಸೂರಿನಲ್ಲಿ ಪ್ರಸಾರವಾದ ನಾಟಕ

**ಪ್ರಸಾರ ನಾಟಕ**

**ಕಾಲಾವಧಿ : 20 ನಿಮಿಷ**

## ಪಾತ್ರವಿವರ

ಇಬ್ಬರು ಪ್ರವಾಸಿಕರು

ನಿರ್ದೇಶಕ

ರಾಣಿ ದುರ್ಗಾವತಿ

ವೀರಸಿಂಹ—ವೃದ್ಧ } ಸರದಾರರು
ಜಯಸಿಂಹ—ಯುವಕ }

ಅಕ್ಬರ್ ಬಾದಷಹ

ಅಫಸಲ್ ಖಾನ್—ಖರ ಪ್ರಾಂತ್ಯದ ಮುಖ್ಯಾಧಿಕಾರಿ

ರಹಮತ್ } ದಳಪತಿಗಳು
ಅಬ್ದುಲ್ }

## ದೃಶ್ಯ ೧

[ಗೊಂಡವಾನದ ಕಾನನ ಕಂದರ. ಸಂಜೆಯ ಹೊತ್ತು. ಹಕ್ಕಿಗಳ ಚಿಲಿಪಿಲಿ. ಕಿರ ತೊರೆಯೊಂದು ಉರುಳಿ ಕಣಿವೆಯ ತುಂಬ ಮಂಜುಳಗೀತವೊಂದನ್ನು ಹರಹುತ್ತಿದೆ. ಮರಗಳ ನಡುವೆ ಬೀಸುವ ಗಾಳಿ ಸುಯ್ಯೆನುತ್ತಿದೆ. ದೂರದ ಎಲ್ಲಿಂದಲೊ ಕೊಳಲಿನ ಇನಿದಾದ ಇಂಚರ ತೇಲಿಬರುತ್ತಿದೆ. ಹಾಗೆಯೇ ಸುರುಳಿಸುರುಳಿಯಾಗಿ ಕರಗಿ ಹೋಗುತ್ತಿದೆ.]

ಮೊದಲನೆ ಪ್ರವಾಸಿ (ಬೆರಗು ದನಿಯಲ್ಲಿ)—ಆಹಾ ಎಷ್ಟು ಚೆಲುವಾಗಿದೆ ಈ ಪ್ರದೇಶ! ಈ ಕಣಿವೆ, ಈ ಕಾಡು ಯಾವುದೋ ಹಳೆಯ ಕಥೆಯೊಂದನ್ನು ಹೇಳಲು ನಿಂತ ಶಾಸನದಂತೆ ತೋರುತ್ತದೆ.

ಎರಡನೆ ಪ್ರವಾಸಿ—ಏನು ಪ್ರಶಾಂತತೆ ಇಲ್ಲಿ! ಓ, ಅದೇನು ಅಲ್ಲಿ ವಿಸ್ತಾರವಾಗಿ ಹರಡಿರುವ ಮರದ ಕೆಳಗೆ ಅದು ಯಾರ ಸಮಾಧಿ? ಇದೆಲ್ಲಾ ನೋಡಿದರೇ ಸಾಕು, ಗೌರವ ಹುಟ್ಟಿಸುವಂತಿದೆಯಲ್ಲ!

ನಿರ್ದೇಶಕ—ಇದೇ ಬಾಬೂಜಿ ನಾ ಹೇಳುತ್ತಿದ್ದ ರಾಣಿ ದುರ್ಗಾವತಿಯ ವೀರ ಭೂಮಿ. ಅಗೋ ಅದೇ ತಾಯಿಯ ಸಮಾಧಿ. ಬನ್ನಿ ಹತ್ತಿರ ನೋಡಿ. ಇದೊ ಈ ಬಣ್ಣಬಣ್ಣದ ಕಲ್ಲುಗಳನ್ನು ನೋಡಿ. ಇಲ್ಲಿ ಹಾದುಹೋಗುವ ಪಯಣಿಗರು ಅಮ್ಮನವರ ಪದತಲದಲ್ಲಿ ಅರ್ಪಿಸುವ ಭಕ್ತಿಯ ಕಾಣಿಕೆ ಇವು. ಅದೊ ಆ ಕಡೆ ಎರಡು ನಗಾರಿಗಳ ಆಕಾರದ ಕಲ್ಲುಬಂಡೆಗಳಿವೆ ನೋಡಿದಿರಾ. . . .

ಮೊದಲ ಪ್ರವಾಸಿಕ—ಹೌದು, ಹೌದು, ಏನು ಅವು?

ನಿರ್ದೇಶಕ—ಅರಮನೆ ನಗಾರಿಗಳು ಸ್ವಾಮಿ. ಈಗ ಕಲ್ಲಾಗಿಬಿಟ್ಟಿವೆ. ರಾಣಿ ಅವುಗಳನ್ನು ಬಡಿಯಿಸುತ್ತಲೇ ಜನತೆ ನಾಡಿನ ರಕ್ಷಣೆಗಾಗಿ ಹೋರಾಡಲು ಉತ್ಸಾಹಗೊಳ್ಳುತ್ತಿತ್ತಂತೆ.

ಎರಡನೆ ಪ್ರವಾಸಿಕ—ಓ . . . ಹಾಗೇ!

ನಿರ್ದೇಶಕ—ನೀವು ನಂಬುತ್ತೀರೊ ಇಲ್ಲವೊ. ಈಗಲೂ ಈ ನಗಾರಿಗಳ ಸದ್ದು ಒಮ್ಮೊಮ್ಮೆ ಕೇಳಿಬರುತ್ತದೆ! ಹುಣ್ಣಿಮೆಯ ರಾತ್ರಿ ಒಂದೊಂದು ಸಲ ಈ ಕಾಡು ಮೈಯೆಲ್ಲ ಬೆಳುದಿಂಗಳನ್ನು ಹೊದ್ದು ಮಲಗಿದಾಗ ಇದ್ದಕ್ಕಿದ್ದಂತೆ ನಗಾರಿ ಬಡಿಯುವ ಸದ್ದು ಕೇಳಿಸುತ್ತದೆ. ಎದೆ ಬಡಿಯುತ್ತದೆ. ಇಲ್ಲಿ ಸುತ್ತಮುತ್ತ ಇರುವ ಸಾವಿರ ಗೋರಿಗಳಿಂದ ಆಕೆಯ ವೀರಯೋಧರ ಜೀವಗಳು ಹೊರಬರುತ್ತವಂತೆ!

ಮೊದಲ ಪ್ರವಾಸಿಕ—ಅಬ್ಬ! ಇದನ್ನು ಕೇಳಿದರೇ ಮೈ ನವಿರೇಳುತ್ತದೆ. ಇತಿಹಾಸದ ಆ ಪುಟ ಮಗುಚಿ ಎಷ್ಟು ಕಾಲವಾಗಿರಬಹುದು?

ನಿರ್ದೇಶಕ—ಸುಮಾರು ನಾನೂರು ವರ್ಷವಾಗಿರಬಹುದು. ಅಕ್ಬರ್ ಬಾದಷಹನ ಕಾಲ ನೋಡಿ. ಆಗ ಈ ಪುಣ್ಯಭೂಮಿ, ಗೊಂಡವಾನ ಹೀಗಿತ್ತೆ? ಈ ನಿಸರ್ಗದ ಚೆಲುವಿನಿಂದ ಮಾತ್ರವಲ್ಲ, ಸಕಲ ಸಂಪತ್ತಿನಿಂದ ನಗುನಗುತ್ತಾ ಇತ್ತು. ಈ ಹಾಳು ಸುರಿಯುವ ಕಾಡು ಕಣಿವೆಯ ನಡುವೆ ಹಿಂದೆ; ಒಂದು ವೀರಜನತೆ ಆತ್ಮಗೌರವದಿಂದ, ಪೌರುಷದಿಂದ ತಲೆ ಎತ್ತಿನಿಂತಿತ್ತು. ಶಾಂತಿ, ಸಮಾಧಾನಗಳಿಂದ ಸಮೃದ್ಧಿಯಾಗಿ ಬಾಳುತ್ತಿತ್ತು. ವೀರರಾದ ದೇಶಭಕ್ತರ ದಿವ್ಯಚೇತನದಿಂದ ಈ ನಾಡು ಜೀವಂತವಾಗಿತ್ತು.

ಮೊದಲ ಪ್ರವಾಸಿಕ—ದುರ್ಗಾವತಿ ರಾಣಿ ಆಳುತ್ತಿದ್ದ ಕಾಲದಲ್ಲೇ?

ನಿರ್ದೇಶಕ—ಹೌದು ಸ್ವಾಮಿ. ರಾಣಿ ದುರ್ಗಾವತಿ ಅದರ ಸಾಮ್ರಾಜ್ಞಿ. ಒಂದಲ್ಲ ಎರಡಲ್ಲ ಎಪ್ಪತ್ತು ಸಹಸ್ರ ಹಳ್ಳಿ, ನಗರಗಳಿಂದ ಕೂಡಿದ ವಿಸ್ತಾರವಾದ ಈ ನಾಡಿಗೆಲ್ಲ ಒಡತಿ. ಹೆಸರಾದ ಕುದುರೆಪಡೆ, ಗಜಸೇನೆ ಸಾವಿರ ಸಾವಿರ! ಪಾಪ! ಮದುವೆಯಾದ ಹೊಸದರಲ್ಲೆ ವಿಧವೆಯಾದಳು ತಾಯಿ. ಮಗ ವೀರನಾರಾಯಣ ಎಳೆಯ ಮಗು. ಇದರಿಂದ ಸುಖದ ಸುಪ್ಪತ್ತಿಗೆಯ ಮೇಲೆ ಓಲಾಡಬೇಕಾದವಳು ಕಠಿಣವಾದ ರಾಜ್ಯದ ಆಡಳಿತ ವಹಿಸಬೇಕಾಯಿತು. ಗೊಂಡವಾನದ ಸಂಪತ್ತು, ಬಲ ಎಂದರೆ ಮೊಗಲರಿಗೂ ದಿಗಿಲು. ಅಂತಹ ಧೀರ ರಾಜ್ಯ ಕಣ್ಮರೆಯಾಗಿ ಹೋಯಿತು. ಹುಂ, ಆದರೇನು, ನಾಡಿನ ಸ್ವಾತಂತ್ರ್ಯದ ಶಕ್ತಿಯಾಗಿದ್ದ ಮಾತಾಯಿ ಇಂದಿಗೂ ನಮ್ಮ ಎದೆಗಳಲ್ಲಿ ಉಳಿದಿದಾಳೆ.

ಮೊದಲ ಪ್ರವಾಸಿ—ಆ ಇತಿಹಾಸದ ಕಥೆಯನ್ನೆಲ್ಲ ಕೇಳಬೇಕು ಎನಿಸುತ್ತದೆ. ಹೇಳುತ್ತೀಯಾ? ಬಾ ಅಣ್ಣ ಇಲ್ಲಿ ಈ ಬಂಡೆಯ ಮೇಲೆ ಕುಳಿತುಕೊಳ್ಳೋಣ.

ನಿರ್ದೇಶಕ—ಅದೊಂದು ದೊಡ್ಡ ಕಥೆ ಸ್ವಾಮಿ . . . ಹ್ಞೂ! . . . ಒಂದು ರಾಜ್ಯ ಬಲಿಷ್ಟವಾದ ಮಾತ್ರಕ್ಕೆ ಇನ್ನೊಂದು ರಾಜ್ಯದ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲು ಹೋಗುವ ದುರಾಸೆ ಇದೆಯಲ್ಲ ಸಾಮಾನ್ಯವಾಗಿ ಈ ಪ್ರಪಂಚದಲ್ಲಿ. ಅದು ಯಾವ ಕಾಲದಿಂದಲೂ ಹಾಗೇ ಇದೆ ನೋಡಿ. ಅದು ಮಾಡುವ ಅನ್ಯಾಯ ಎಷ್ಟು ಎಂದು ತಿಳಿಯುತ್ತೆ ನೋಡಿ ಈ ಕಥೆ ಕೇಳಿದರೆ.

ಎರಡನೆ ಪ್ರವಾಸಿಕ—ಹೌದಪ್ಪ. ಇತಿಹಾಸದುದ್ದಕ್ಕೂ ಇಂಥದೇ ಕಥೆಗಳು ತುಂಬಿವೆ. ಹ್ಞೂ. ಹೇಳು ಇನ್ನು ಈ ಕಥೆ ಎಷ್ಟು ದಾರುಣವಾದುದೊ!

ನಿರ್ದೇಶಕ—ಅಕ್ಬರ್ ಬಾದಷಹನ ಕಾಲ ಅಂದೆಸಲ್ಲ, ಆಗ ಈ ಗೊಂಡವಾನದ ಸಂಪತ್ತು ಮೊಗಲ್ ಸರದಾರರ ಕಣ್ಣು ಕುಕ್ಕಿತು. ಅವರಿಗೆ ಸಹಿಸದಾಯಿತು. ಏನಾದರೂ ಮಾಡಿ ಈ ರಾಜ್ಯವನ್ನು ಸುಂಗಿಹಾಕಿ ಸಂಪತ್ತನ್ನು ದೋಚಬೇಕೆಂದು ಕಾಯುತ್ತಿದ್ದರು. ಆದರೆ ಅವರ ದೊರೆ ಇದಕ್ಕೊಪ್ಪುವಂತಹನಲ್ಲ. ಒಂದು ಸಲ ಅಕ್ಬರ್ ಬಾದಷಹನ ಆಸ್ಥಾನದಲ್ಲಿ ಈ ಮಾತು ಬಂತು. ಆಗ. . . .

ಗಿರಿಕಂದರದ ದೃಶ್ಯ ಮರೆಯಾಗಿ, ಇತಿಹಾಸದ ಆ ಹಿಂದಿನ ಪುಟ ತಿರುವಿಹಾಕಿದಂತೆ ಅಕ್ಬರನ ಆಸ್ಥಾನ—ಆ ವೈಭವ, ಗಾಂಭೀರ್ಯಗಳಿಂದ—ಮೂಡುತ್ತದೆ. ರಾಜಮರ್ಯಾದೆಯ ವಾದ್ಯ, ಪರಾಕು ಒಂದಾದಮೇಲೊಂದು ಕೇಳುತ್ತವೆ.

## ದೃಶ್ಯ ೨

ಅಕ್ಬರ್ (ಗಂಭೀರಸ್ವರದಿಂದ)—ಆದಾಗದು ಅಫ್‌ಸಲ್‌ಖಾನ್, ಆದಾಗದು. ಮೊಗಲ್ ಸಾಮ್ರಾಟನಾದ ನಾನು ಕೇವಲ ಹೆಣ್ಣು ಹೆಂಗಸಾದ ಅದರಲ್ಲೂ ವಿಧವೆಯಾದ ರಾಣಿ ದುರ್ಗಾವತಿಯ ಮೇಲೆ ಕೈಮಾಡುವುದೇ? ನಾಳಿನ ಜನ ಏನೆಂದಾರು? ಹಿಂದೂ ಮುಸ್ಲಿಂ ಐಕ್ಯದ ನನ್ನ ಆದರ್ಶ ಏನಾದೀತು? ಅದು ಸಲ್ಲದ ಮಾತು.

ಅಫ್‌ಸಲ್—ಕ್ಷಮಿಸಬೇಕು ಜಹಪನಾ, ಕ್ಷಮಿಸಬೇಕು. ತಮ್ಮ ಆದರ್ಶಕ್ಕೆ ಇದರಿಂದ ಚ್ಯುತಿ ಬರುವುದಿಲ್ಲ. ಗೊಂಡವಾನ ದಿನೇ ದಿನೇ ಪ್ರಬಲವಾಗುತ್ತಿದೆ. ಹೆಣ್ಣು ಹೆಂಗಸೆಂದು ಉಪೇಕ್ಷೆ ಮಾಡಿದರೆ ನಾಳೆ ನಮ್ಮ ರಾಜ್ಯಕ್ಕೇ ಧಕ್ಕೆ ಬಂದೀತೆಂಬ ಸ್ವಾಮಿಭಕ್ತಿಯಿಂದ ಮಾತ್ರ ಬಿನ್ನೈಸಿಕೊಳ್ಳುತ್ತಿದೇನೆ. ಆಕೆ ನಾಳೆ ನಮ್ಮ ರಾಜ್ಯದ ಮೇಲೆ ತಿರುಗಿಬಿದ್ದರೆ?

ಅಕ್ಬರ್—ತಿರುಗಿಬಿದ್ದಾಗ ನಾವು ಎದುರುಬೀಳುವುದೇನೊ ರಾಜನೀತಿ. ಆದರೆ ಸುಮ್ಮನಿರುವವರ ಮೇಲೆ ಕೈಮಾಡುವುದು ಯಾವ ನ್ಯಾಯ?

ಅಫಸಲ್—ಹಾಗಲ್ಲ ಜಹಪನಾ. ತಾವು ದಿಲ್ಲಿಯಲ್ಲಿದ್ದೀರಿ. ಖರಾ ಜಿಲ್ಲೆಯ ಅಧಿಕಾರಿಯನ್ನಾಗಿ ನನ್ನನ್ನು ನೇಮಿಸಿದ್ದೀರಿ. ನಮ್ಮ ಗೂಢಚಾರರ ಮೂಲಕ ದುರ್ಗಾವತಿಯ ರಾಜ್ಯದಲ್ಲಿ ನಡೆಯುತ್ತಿರುವ ಸಂಚನ್ನೆಲ್ಲ ತಿಳಿದುಕೊಂಡಿದ್ದೇನೆ, ಖಾವಂದ್. ಅಪ್ಪಣೆಯಾದರೆ ಬಿನ್ನೈಸಿಕೊಳ್ಳುತ್ತೇನೆ.

ಅಕ್ಬರ್—ಅದೇನು ಹೇಳಿ.

ಅಫಸಲ್—ತಮ್ಮ ಉಪ್ಪುಂಡು ಬೆಳೆದ ನಾವು, ತಮ್ಮ ಘನತೆಗೆ ಕುಂದುತರುವ ಕೆಲಸ ಮಾಡುವುದಿಲ್ಲ ಜಹಪನಾ. ಗೊಂಡವಾನದ ಮೇಲೆ ಕಳೆದ ಸಲ ದಂಡೆತ್ತಿ

ಹೋದ ಮಾಳವದ ಬಾಜ್ ಬಹದೂರನ ಗತಿ ಏನಾಯಿತು? ಆತನ ಸೈನ್ಯದಲ್ಲಿ ಒಂದು ಪಿಳ್ಳೆಯೂ ಉಳಿಯದಂತೆ ಧ್ವಂಸಮಾಡಿತು ರಾಣಿ ದುರ್ಗಾವತಿಯ ಸೇನೆ. ಆ ವಿಜಯದಿಂದ ಮದಿಸಿ ಈಗ ಮೊಗಲ್ ಸಾಮ್ರಾಜ್ಯವನ್ನೇ ಕಬಳಿಸುವ ಸನ್ನಾಹದಲ್ಲಿ ಆ ರಾಣಿ ತೊಡಗಿದ್ದಾಳೆ. ನೀವು ಮುಸಲ್ಮಾನ್ ಪಕ್ಷಪಾತಿ; ಹಿಂದೂಗಳ ಮೇಲಿನ ಪ್ರೀತಿಯೆಲ್ಲ ಬರಿ ಕುಹಕ ಎಂದು ತಮ್ಮವರಲ್ಲೆಲ್ಲ ಪ್ರಚಾರಮಾಡಿದ್ದಾಳೆ.

ಖಾವಂದರು ಅಪ್ಪಣೆ ಕೊಟ್ಟರೆ ಒಂದೇ ದಿನದಲ್ಲಿ ಆ ಗೊಂಡವಾನ ರಾಜ್ಯ ತಮ್ಮ ಪದತಲದಲ್ಲಿ ಉರುಳುವಂತೆ ಮಾಡುತ್ತೇನೆ.

ಅಕ್ಬರ್—ಒಂದು ಮಾತು ಅಫಸಲ್.

ಅಫಸಲ್—ಅಪ್ಪಣೆಯಾಗಬೇಕು ಖಾವಂದ್.

ಅಕ್ಬರ್—ನೀನು ಹೇಳುವ ಸುದ್ದಿ ಸತ್ಯವಾಗಿದ್ದಲ್ಲಿ, ನೀನೂ ನಿನ್ನ ಸರದಾರರೂ ಆ ರಾಜ್ಯದ ಮೇಲೆ ದಂಡೆತ್ತಿಹೋಗಲು ನನ್ನ ಅಡ್ಡಿಯಿಲ್ಲ. ಆದರೆ . . .

ಅಫಸಲ್—ಆದರೆ! ಮತ್ತೇನು ಜಹಪನಾ?

ಅಕ್ಬರ್—ಆದರೆ ರಾಣಿ ದುರ್ಗಾವತಿ ಹೆಂಗಸು ಎನ್ನುವುದನ್ನು ಮರೆಯಬಾರದು. ಅಕ್ಬರನಾಗಲೀ ಆತನ ಕಡೆಯವರಾಗಲೀ, ಹೆಂಗಸನ್ನು ಮರ್ಯಾದೆಯಿಂದ ಕಾಣತಕ್ಕವರು. ರಾಣಿಯನ್ನು ಸೆರೆಹಿಡಿದು ಸುರಕ್ಷಿತವಾಗಿ ಎಲ್ಲ ಗೌರವ—ಮರ್ಯಾದೆಗಳಿಂದ ಇಲ್ಲಿಗೆ ಕರೆತರಬೇಕು. ತಿಳಿಯಿತೇ?

ಅಫಸಲ್—ಬಾದಷಹರ ಆಜ್ಞೆ.

[ವಾದ್ಯ ಮೊಳಗುವುವು. ಅಕ್ಬರನ ಆಸ್ಥಾನ ಮರೆಯಾಗಿ ಆ ಗಿರಿ-ಕಂದರ ಮತ್ತೆ ಕಾಣಿಸಿಕೊಳ್ಳುತ್ತದೆ. ಅದೇ ಕೊಳಲ ದನಿ, ಅದೇ ತೊರೆಯ ಮಂಜುಳನಾದತರಂಗ.]

ನಿರ್ದೇಶಕ—ಅಕ್ಬರನ ಆಸ್ಥಾನದಲ್ಲಿ ಹೀಗಾಯಿತು. ಅಫಸಲ್ ಮಹಾ ಕುಹಕಿ. ರಾಣಿ ದುರ್ಗಾವತಿ ತನ್ನ ಪಾಡಿಗೆ ತಾನು ಇದ್ದವಳು. ಆದರೆ ಅಫ್‌ಸಲ್‌ನಿಗೆ ದುರಾಲೋಚನೆ. ಅವಳ ಅಪಾರವಾದ ಸಂಪತ್ತು, ಅಪೂರ್ವ ಸೌಂದರ್ಯಗಳಿಗೆ ಅವನ ಮನ ಮಾರುಹೋಯಿತು. ನೂರಾರು ಸವಿಗನಸುಗಳನ್ನು ಕಟ್ಟತೊಡಗಿತು.

ಮೊದಲ ಪ್ರವಾಸಿ—ಅಕ್ಬರ್ ಎಷ್ಟು ದೊಡ್ಡವನು. ಆದರೆ ಆತನ ಕೈಕೆಳಗಿನವರು ಎಷ್ಟು ಸಣ್ಣವರು!

ಎರಡನೆ ಪ್ರವಾಸಿ—ಸರಿ, ಆಮೇಲೆ? ಯುದ್ಧಕ್ಕೆ ರಾಣಿ ಸಿದ್ಧಳಾಗಿದ್ದಳೇ?

ನಿರ್ದೇಶಕ—ರಾಣಿ ದುರ್ಗಾವತಿ ವೀರರಮಣಿ. ಅವಳಿಗೂ ಗೂಢಚಾರರಿಂದ ಅಫಸಲ್‌ನ ಯುದ್ಧಸನ್ನಾಹ ತಿಳಿಯಿತು. ಆಗ . . . .

## ದೃಶ್ಯ ೩

ಗಿರಿಕಂದರ ಕಾನನ ಒಯ್ಯೊಯ್ಯನೆ ಕರಗಿ ವೀರರಾಣಿ ದುರ್ಗಾವತಿಯ ಅರಮನೆಯೆ ಮುಂದಿನ ಬಯಲು—ಸುಸಜ್ಜಿತವಾಗಿ ನಿಂತ ಆಕೆಯ ಅಪಾರಸೇನೆ. ವೀರಸರದಾರರು, ಪುರಪ್ರಮುಖರು ನಿಂತಿದ್ದಾರೆ. ಭೋರ್ಗರೆವ ರಣವಾದ್ಯ ಮೊಳಗುತ್ತದೆ. ನಗಾರಿಗಳ ಗಂಭೀರನಾದ, ಕುದುರೆಗಳ ಹೇಷಾರವ. ಗುಜುಗುಜು.

ರಾಣಿ ದುರ್ಗಾವತಿಯ ವೀರವಾಣಿ ಮೊಳಗುತ್ತದೆ. ಸ್ತಬ್ಧತೆ ಆವರಿಸುತ್ತದೆ.

ರಾಣಿ—ಗೊಂಡವಾನದ ಗಂಡುಗಲಿಗಳೇ, ರಜಪೂತ ಸರದಾರರೇ, ಪ್ರತಾಪ ಸಿಂಹನ ವಂಶದ ವೀರಪುತ್ರರೇ ಕೇಳಿ—ಶತ್ರುಸೈನ್ಯದ ರಣವಾದ್ಯವನ್ನು ಕೇಳಿ ಉತ್ಸಾಹಗೊಂಡು ನಿಂತಿರುವ ಸಿಡಿಲಾಳುಗಳೇ! ಇಂದು ನಮ್ಮ ನಾಡಿನ ಪ್ರಾಣ, ಮಾನ ನಿಮ್ಮದು. ಯಾವ ರಾಜ್ಯದ ಕಟ್ಟಾಳುಗಳು ಕಳೆದ ಸಲ ಬಾಜ್ ಬಹದ್ದೂರನ ಸೇನೆಯನ್ನು ಕ್ಷಣಮಾತ್ರದಲ್ಲಿ ಧೂಳೀಪಟ ಮಾಡಿದರೋ ಆ ಕಟ್ಟಾಳುಗಳೇ ಇಂದು ರಾಜ್ಯಲಕ್ಷ್ಮಿಯ ಮಾನಸಂರಕ್ಷಣೆಗೆ ನಿಂತಿದ್ದೀರಿ. ನಿಮ್ಮ ಧಮನಿ ಧಮನಿಯಲ್ಲಿ ರಜಪೂತ ರಕ್ತ ಹರಿಯುತ್ತಿದೆ. ನಿಮ್ಮ ಉಸಿರಿನಲ್ಲಿ ಗೊಂಡವಾನದ ಪ್ರಜೆಗಳೆಲ್ಲರ ಆಸೆ ಆಕಾಂಕ್ಷೆಗಳು ಹೊಮ್ಮುತ್ತಿವೆ; ನಿಮ್ಮ ಚೇತನದಲ್ಲಿ ಈ ರಜಪೂತ ನಾಡಿನ ಪರ್ವತಾರಣ್ಯಗಳ ಧೀರತೆ ತುಂಬಿಕೊಂಡಿದೆ; ಏಳಿ, ಒರೆಯಲ್ಲಿ ನಿದ್ರಿಸುತ್ತಿರುವ ಖಡ್ಗಸರ್ಪಗಳನ್ನು ಎಚ್ಚರಿಸಿ. ಏಳಿ, ಮೇಲೆ ಬರುವ ಮೇಘಸಂಕುಲವನ್ನು ತಡೆಯುವ ಬೆಟ್ಟಗಳಂತೆ ಸ್ಥೈರ್ಯದಿಂದ ನಿಲ್ಲಿ. ನಿಮ್ಮ ಕೀರ್ತಿಯ ಪತಾಕೆಗಳನ್ನು ಮೋಡಮೋಡಗಳ ಕೊತ್ತಳಗಳಲ್ಲಿ ಹಾರಾಡಿಸಿ. ಎಲ್ಲ ಅನ್ಯಾಯ, ಅನಾಚಾರಗಳಿಗೂ ನಿಮ್ಮ ವೀರ ಪ್ರತಿಭಟನೆಯನ್ನು ಸಲ್ಲಿಸಿ ಆತ್ಮಗೌರವಕ್ಕೆ ಹಾನಿಬರುವ ವೇಳೆ ಪ್ರಾಣವನ್ನಾದರೂ ಅರ್ಪಿಸಿ ಅದನ್ನು ಕಾಯ್ದುಕೊಳ್ಳಿ. ಓ ಏಳಿ. ನನ್ನ ವೀರಪುತ್ರರೇ! ಏಳಿ-ಸ್ವಾತಂತ್ರದೇವಿಯ ಯಜ್ಞಕುಂಡದ ಕಿಡಿಗಳಂತೆ ಮೇಲೇಳಿ.

[ಸೈನಿಕರು ಜಯಕಾರಮಾಡುವ ನಿರ್ಘೋಷ: "ಜೈ ರಾಣಿ ದುರ್ಗಾವತಿ" ರಣವಾದ್ಯ ಮೊಳಗುತ್ತದೆ. . . 'ಹರ ಹರ ಮಹಾದೇವ್'. . . 'ಅಲ್ಲಾ ಹೋ ಅಕ್ಬರ್'—ವೀರಕೂಗುಗಳು—ರಣರಂಗ—ಕದನ—ಬಾಣಗಳ ಸುಂಯೆಂಬ ಸದ್ದು. ಖಡ್ಗಗಳ ಖಣಿಲ್ ಖಟಲ್ ಎಂಬ ಸದ್ದು ಕೋಲಾಹಲ ಕುದುರೆಗಳ ಖುರಪುಟಧ್ವನಿ. ರಾಣಿ ದುರ್ಗಾವತಿಯ ಸೇನೆ—'ಜೈ ರಾಣಿ ದುರ್ಗಾವತಿ' ಎಂದು ವಿಜಯಘೋಷ ಮಾಡುತ್ತದೆ.]

## ದೃಶ್ಯ ೪

ರಾತ್ರಿ—ಕಾನನಾಂತರದ ಒಂದು ಕಡೆ. ಅಫಸಲನ ಶಿಬಿರ. ರಾತ್ರಿಯ ಹಕ್ಕಿಗಳ ದನಿ—ಜೀರುಂಡೆ ಮೇಳದನಿ—ಕಪ್ಪೆಗಳ ಟ್ರೋಂಕಾರ ಆ ನಿಶಾಭೀಕರ ಮೌನವನ್ನು ಮಥಿಸುವ ಹಿನ್ನೆಲೆ.

ಅಫಸಲ್ (ನಿಡುಸುಯ್ದು—ಕಟಕಟನೆ ಹಲ್ಲು ಕಡಿಯುತ್ತ)—ಥೇ! ಎಂಥ ಅಪಮಾನ! ಮೊಗಲ್ ಸಾಮ್ರಾಟನ ವೀರಸೇನಾನಿಯಾದ ನನಗೆ ಎಂತಹ ಅಪಮಾನ! ಅಬ್ಬ! ಆ ಸೈನ್ಯ ಭೋರ್ಗರೆವ ಕಡಲಂತೆ ಬಂದು ಅಪ್ಪಳಿಸಿಬಿಟ್ಟಿತು. ರಾಣಿ ದುರ್ಗಾವತಿ! ನಾರಿಯಲ್ಲ ಮಾರಿ! ದುರ್ಗೆಯೇ ಸರಿ. ಏನು ಮಾಡಲಿ? ಬಾದಷಹರಿಗೆ ಈ ಸೋತ ಮುಖ ಹೇಗೆ ತೋರಿಸಲಿ? ಕುಹಕದಿಂದ ಹೇಗೋ ಅವರ ಅಪ್ಪಣೆಯನ್ನೇನೋ ಪಡೆದೆ. ಹೇಳು, ರಹಮತ್ ಏನು ಮಾಡಲಿ ಹೇಳು.

ರಹಮತ್—ಏನು ಮಾಡುವುದು ಖಾವಂದರೇ? ಮತ್ತೆ ಯುದ್ಧಮಾಡೋಣ.

ಅಫಸಲ್—ಮತ್ತೆ ಯುದ್ಧವೇ? ಇವತ್ತಿನದು ಸಾಲದೇ?

ರಹಮತ್—ಮತ್ತೊಮ್ಮೆ ತಮ್ಮ ಭಾವೀ ರಾಣಿಯವರ ಮುಖ ನೋಡಿ ತಮಗೆ ಸ್ಫೂರ್ತಿಬಂದು ತಮಗೇ ಗೆಲುವಾದರೆ?

ಅಫಸಲ್—ನಿನ್ನದು ಯಾವಾಗಲೂ ಪರಿಹಾಸವೇ! ಹೊತ್ತಿಲ್ಲ ಗೊತ್ತಿಲ್ಲ. ಏನೋ ಯೋಚಿಸುತ್ತ ಸುಮ್ಮನೆ ಕುಳಿತುಬಿಟ್ಟೆಯಲ್ಲ ಅಬ್ದುಲ್; ನೀನಾದರೂ ಹೇಳು. ನಿನ್ನ ಚುರುಕುಬುದ್ಧಿಗೆ ಏನಾದರೂ ಹೊಳೆದೀತು.

ಅಬ್ದುಲ್—ನಾವು ಗೆಲ್ಲಲು ಇರುವುದು ಒಂದೇ ಉಪಾಯ ಸವಾಬರೇ.

ಅಫಸಲ್—ಏನದು?

ಅಬ್ದುಲ್—ನಮ್ಮ ಕಡೆ ಚತುರರಾದ ನಾಲ್ಕು ಜನರನ್ನು ಗುಟ್ಟಾಗಿ ಕಳಿಸುವುದು. ಬೇಕಾದಷ್ಟು ಹಣಕೊಟ್ಟು ರಾಣಿಯ ಕಡೆಯ ಸರದಾರರನ್ನು ನಮ್ಮ ಕಡೆ ಮಾಡಿಕೊಂಡರೆ ಆಯಿತು.

ಅಫಸಲ್—ಭೇಷ್. ಉಪಾಯವೇನೋ ಚೆನ್ನಾಗಿದೆ. ಆದರೆ ರಾಣಿಯ ಕಡೆ ಸ್ವಾಮಿದ್ರೋಹ ಮಾಡಿ ನಮ್ಮ ಹಣಕ್ಕೆ ಬಲಿಬೀಳುವ ಸರದಾರರು ಇದ್ದಾರೆಯೇ?

ಅಬ್ದುಲ್ (ಹ್ಞು ಎಂದು ತಿರಸ್ಕಾರದಿಂದ)—ಅಂಥ ಜನ ರಾಣಿ ದುರ್ಗಾವತಿಯ ಬಳಿಯೇ ಏಕೆ, ಜಗತ್ತಿನ ತುಂಬ ಇದ್ದಾರೆ. ಇದರ ಜವಾಬ್ದಾರಿ ನನಗಿರಲಿ. ನಾಲ್ಕು ದಿನ ತಡವಾದರೂ ಚಿಂತೆಯಿಲ್ಲ. ಅಷ್ಟರಲ್ಲಿ ದಿಲ್ಲಿಯಿಂದ ಇನ್ನಷ್ಟು ಸೈನ್ಯ ತರಿಸಿಕೊಳ್ಳೋಣ. ಆಗಬಹುದೇ?

ಅಫಸಲ್—ಆಗಲಿ, ಅಬ್ದುಲ್. ಅದೇ ಸರಿ.

## ದೃಶ್ಯ ೩

## ರಾಣಿ ದುರ್ಗಾವತಿಯ ಅಂತಃಪುರ

ವೀರನಾರಾಯಣ (ಆಟವಾಡುತ್ತ)—ಇದು ನಮ್ಮ ಸೇನೆ. ಆ ಕಡೆ ಮೊಗಲರ ಸೇನೆ, ಸರಿ, ಇನ್ನು ಯುದ್ಧ ಆಗಲಿ. (ವೀರಾವೇಶದಿಂದ)—ಗೊಂಡವಾನದ ಗಂಡುಗಲಿಗಳೇ ಬನ್ನಿ—ಮೊಗಲರನ್ನು ಸದೆಬಡಿದು ಓಡಿಸೋಣ ಇನ್ನೊಂದು ಸಲ ನಮ್ಮ ತಂಟೆಗೆ ಬರುವುದಿಲ್ಲ. ಜೈ ದುರ್ಗಾವತಿ . . . ಕೂ. ಕೂ. (ಕಹಳೆಯನ್ನನುಸರಿಸಿ) (ನಗಾರಿಯಂತೆ) ಡಬ್, ಡಬ್, ಡಬ್.

ರಾಣಿ (ಸ್ವಗತ)—ಯುದ್ಧ ಯುದ್ಧ ಯುದ್ಧ—ಈ ಎಳೆಯ ಮಗುವಿಗೂ ತಟ್ಟಿತೆ ಅದರ ಕಾವು (ಪ್ರಕಟವಾಗಿ) ಭಲೆ! ವೀರನಾರಾಯಣ ದೊರೆಯೇ, ಭಲೆ. ನಿಮ್ಮ ಪರಾಕ್ರಮದ ಮುಂದೆ ಶತ್ರುಸೈನ್ಯ ದಿಕ್ಕುಪಾಲಾಯಿತು.

ವೀರನಾರಾಯಣ—ಹೂಂ (ಹೆಮ್ಮೆಯಿಂದ) ನೋಡಿ ಅಮ್ಮಾಜಿ, ಈ ಮೊಗಲರ ಸೊಕ್ಕನ್ನ. ಸುಮ್ಮನೆ ನಮ್ಮ ಪಾಡಿಗೆ ನಾವಿದ್ದರೆ ಹಿಂಸಿಸೋಕೆ ಬರುತ್ತಾರಲ್ಲ! ಈಗ ಬರಲಿ. . . .

ರಾಣಿ (ಎತ್ತಿ ಮುದ್ದಿಡುತ್ತ)—ನನ್ನ ಚಿಕ್ಕ ದೊರೆಯೇ! ಈಗಲೇ ಹೀಗೆ. ಇನ್ನು ನೀವು ದೊಡ್ಡವರಾಗಿ ರಾಜರಾದ ಮೇಲೆ ನಿಮಗೆ ಸಮ ಯಾರು! ಆ ಪುಣ್ಯದಿನವನ್ನು ನೋಡುವ ಭಾಗ್ಯ ನನಗಿದ್ದೀತೆ. ಸಿಂಹಾಸನದ ಮೇಲೆ ಕುಳಿತು ವೈಭವದಿಂದ ನೀವು ಮೆರೆಯುವುದನ್ನು ನೋಡುವ ಆ ಪುಣ್ಯದಿನ . . . ಬೇಗ ಬರಲಿ.

ವೀರನಾರಾಯಣ—ನಾನು ರಾಜನಾಗುತ್ತೇನೇನಮ್ಮ?

ರಾಣಿ—ಬರಿ ರಾಜ ಏಕೆ. ಚಕ್ರವರ್ತಿ ಆಗುತ್ತೀರಿ.

ವೀರನಾರಾಯಣ—ಆದರೆ ಸಿಂಹಾಸನದ ಮೇಲೆ ನಾ ಕೂತುಕೊಳ್ಳೋಲಮ್ಮ. ನೀವೇ ಅಲ್ಲಿ ಕೂತುಕೋಬೇಕು. ನಾನು ಕತ್ತಿ ಹಿಡಿದು ನಿಮ್ಮ ಕಾವಲಿರುತ್ತೇನೆ. ಯಾರು ಬರುತ್ತಾರೋ ಬರಲಿ . . . ಹ್ಞು . . . ನಾನು ಸೇನಾಪತಿ ಆಗುತ್ತೇನೆ ಅಮ್ಮಾಜಿ.

ರಾಣಿ—ನನ್ನ ಕಂದಾ, ನನ್ನ ಮೇಲೆಷ್ಟು ಪ್ರೀತಿ ನಿಮ್ಮದು. ಹಾಗೇ ಆಗಲಪ್ಪಾ—ನೀವು ಕತ್ತಿ ಹಿಡಿದು ನಿಂತರೆ ನಾನು ಯಾವ ಭಯವೂ ಇಲ್ಲದೆ ಕುಳಿತಿರಬಹುದು.

ದಾಸಿ (ಓಡಿಬಂದು)—ಮಹಾರಾಣಿಯವರು ಕ್ಷಮಿಸಬೇಕು. ಹೊರಗೆ ಸೈನಿಕ ನೊಬ್ಬ ಬಂದಿದಾನೆ. ಮೊಗಲರ ಸೇನೆ ಮತ್ತೆ ದಾಳಿ ಬರುವ ಅಪಾಯವಿದೆಯಂತೆ.

ರಾಣಿ (ಗಂಭೀರವಾಗಿ—ಮುಖ ಗಂಟಿಕ್ಕಿ)—ಅಫ್‌ಸಲ್ . . . ಮತ್ತೆ ದಾಳಿ . . (ಮಗುವನ್ನು ಇಳಿಸಿ) ಪ್ರಭೂ ನೀವು ಧಾದ್ರಿಯ ಬಳಿ ಇರಿ. ನಾನು ಸ್ವಲ್ಪ ಹೋಗಿ ಬರುತ್ತೇನೆ.

ವೀರನಾರಾಯಣ—ಅಫ್ಸಲ್ ! (ಹಲ್ಲು ಕಡಿಯುತ್ತ) ಅಮ್ಮಾಜಿ ನೀವು ಇಲ್ಲೇ ಇರಿ. ನಾನು ಹೋಗಿ ಅವನನ್ನು ಓಡಿಸಿ ಬರುತ್ತೇನೆ. ಏಕೋ ಇವರದು ಮಿತಿಮೀರಿ ಹೋಗಿದೆ.

ರಾಣಿ (ಬಲವಂತದ ನಗು ತಂದು)—ನೀವು ಸಿಂಹದ ಮರಿ, ದೊರೆಯೇ. ನೀವೇ ಏಕೆ ಹೋಗಬೇಕು ಊಳಿಗದವರು ನಾವೇ ಸಾಕಾಗಿರುವಾಗ—(ದಾಸಿಗೆ) ದಾಸೀ ರಾಜಕುಮಾರರನ್ನು ಕರೆದುಕೋ. . . . ಪ್ರತಾಪಸಿಂಹನಿಗೆ ಇವರ ಕಾವಲಿರುವಂತೆ ಅಪ್ಪಣೆ ಮಾಡಿದೆನೆಂದು ಹೇಳು. ಎಲ್ಲಿ ಮಗೂ, ಹೋಗಿಬರುತ್ತೇನಪ್ಪಾ.

ವೀರನಾರಾಯಣ—ಬೇಗ ಬಂದುಬಿಡಬೇಕು ನೋಡಿ ಅಮ್ಮಾಜಿ. ನಿಮ್ಮನ್ನು ಬಿಟ್ಟು ನಾನು ಇರೋಕಾಗೊಲ್ಲ. ನೀವು ಬರುವುದರಲ್ಲಿ ನನ್ನ ಕತ್ತಿ, ಬಿಲ್ಲು ಸರಿಮಾಡಿ ಕೊಂಡಿರುತ್ತೇನೆ. ನನ್ನೂ ಯುದ್ಧಕ್ಕೆ ಕರೆದುಕೊಂಡು ಹೋಗಬೇಕೂ . . . ಹ್ಣಾ. . .

ರಾಣಿ (ನಿಟ್ಟುಸಿರುಬಿಟ್ಟು)—ಆಗಲಪ್ಪಾ. (ಅವಸರದಲ್ಲಿ ಹೊರಟುಹೋಗುವಳು)

## ದೃಶ್ಯ ೬

[ರಾಣಿ ದುರ್ಗಾವತಿ ಅವಸರದ ಗುಪ್ತ ಸಭೆಯೊಂದನ್ನು ಕರೆದಿದ್ದಾಳೆ. ಗಂಭೀರ ಮೌನ.]

ರಾಣಿ—ಏನು ವೀರಸಿಂಹ? ಸುಮ್ಮನೆ ತಲೆಬಾಗಿ ಕುಳಿತೆಯಲ್ಲ. ಸೋತುಹೋದ ಅಫಸಲನು ಮತ್ತೆ ಬರುತ್ತಿದ್ದಾನೆ.

ವೀರಸಿಂಹ—ಹೌದು ಅಮ್ಮಾಜಿ. ಎಂದಿನಂತೆ ನಮ್ಮ ಸೈನ್ಯವೇನೋ ಸಜ್ಜಾಗಿದೆ. ಆದರೆ. . . .

ರಾಣಿ—ಆದರೆ . . . ಮತ್ತೇನು ಶಂಕೆ.

ವೀರಸಿಂಹ—ನಮ್ಮ ಕಡೆಯ ಸರದಾರರೇಕೋ ಯುದ್ಧೋತ್ಸಾಹವನ್ನೆ ತೋರಿಸು ತ್ತಿಲ್ಲ. ಬಹುಶಃ ಅಫಸಲನ ಕಡೆಯವರು ನಮ್ಮ ಹಲವರನ್ನು ಹಣದಾಸೆ ಹಚ್ಚಿ ಒಲಿಸಿಕೊಂಡಂತಿದೆ. ಸ್ವಲ್ಪ ಎಚ್ಚರದಿಂದ ನಡೆಯಬೇಕು. ಈಗ ಯುದ್ಧಕ್ಕಿಂತ ರಾಜತಂತ್ರ ಸಾಧುವಾದುದು.

ರಾಣಿ—ಶಿವ ಶಿವಾ! ಹೀಗಾಯಿತೇ? ವೀರಸಿಂಹ. ಈ ದ್ರೋಹಿಗಳ ವಿಚಾರ ಹಾಗಿರಲಿ. ರಾಣಿ ದುರ್ಗಾವತಿಯ ವೀರಭೂಮಿಯಲ್ಲಿ ಅಂತಹ ದ್ರೋಹಿಗಳು

ಹುಟ್ಟದಿರಲಿ. ಹೋರಾಟದ ಹೊರತು ಬೇರೆ ಉಪಾಯವಿಲ್ಲ. (ದೂರದಿಂದ ಕಹಳೆಸದ್ದು ಕೇಳಿಬರುತ್ತದೆ) ಅದೋ ಆಗಲೇ ಅಫಸಲನ ದಂಡು ಕೋಟೆಯಾಚೆ ಕಹಳೆಯನ್ನೂದುತ್ತಿದೆ.

ಜಯಸಿಂಹ—ಮಹಾರಾಣಿಯವರಲ್ಲಿ ಬಿನ್ನಪ. ತಮ್ಮ ಅಪ್ಪಣೆಯಂತೆ ನಾವು ಸಿದ್ಧರಾಗಿದ್ದೇವೆ. ಈಗ ಯೋಚಿಸಲೂ ಸಮಯವಿಲ್ಲ. ನಮ್ಮ ಕೊನೆಯ ರಕ್ತದ ಹನಿ ಇರುವ ವರೆಗೂ ನಮ್ಮ ನಾಡಿಗಾಗಿ ನಾವು ಹೋರಾಡುತ್ತೇವೆ. ಸೋಲು ಗೆಲುವುಗಳು ದೈವೇಚ್ಛೆ.

ರಾಣಿ—ಭಲೆ ಜಯಸಿಂಹ. ನಿನ್ನ ವಯಸ್ಸಿಗೆ ತಕ್ಕ ವೀರಮಾತು. ತಂದೆಗೆ ತಕ್ಕ ಮಗ! ಗೊಂಡವಾನದ ವಿಜಯ ನಿಶ್ಶಂಕೆಯಾಯಿತು.

ವೀರಸಿಂಹ—ಒಂದು ವೇಳೆ ಶರಣಾಗತರಾಗುವ ಸಂದರ್ಭ ಬಂದರೆ,

ರಾಣಿ—ರಜಪೂತ ರಕ್ತಕ್ಕೆ ಶರಣಾಗತಿ ಒಗ್ಗದ ಮಾತು. ನಾಡಿನ ಸ್ವಾತಂತ್ರ್ಯ ಸಮರದಲ್ಲಿ ಸೋತು ಶರಣಾಗುವ ಹೇಡಿತನಕ್ಕಿಂತ ಹೋರಾಡಿ ವೀರಮರಣವನ್ನಪ್ಪುವುದು, ದೇಶಭಕ್ತರ ಲಕ್ಷಣ. ಯಾವ ತಾಯಿ ನಮಗೆ ಉಸಿರಿತ್ತಳೋ ಅವಳಿಗಾಗಿ ಈ ಸರ್ವಸ್ವವೂ ಸಮರ್ಪಣ. ನಮಗಿರುವ ದಾರಿ ಎರಡೇ. ಒಂದು ವೀರವಿಜಯ. ಇಲ್ಲವೇ ವೀರಸ್ವರ್ಗ.

ಜಯಸಿಂಹಾ, ಯುದ್ಧೋತ್ಸಾಹದ ಜಯಭೇರಿ ಮೊಳಗಲಿ; ನಮ್ಮ ನಗಾರಿಗಳ ಘೋಷ ದೇವಲೋಕದವರನ್ನೆಚ್ಚರಿಸಲಿ; ಶ್ರೀ ಭವಾನಿಯ ಆಶೀರ್ವಾದವೊಂದು ಸದಾ ರಕ್ಷೆಯಾಗಿರಲಿ.

[ರಣವಾದ್ಯ ಮೊಳಗುವುದು. ನಗಾರಿಗಳ ಗಂಭೀರ ನಿನಾದ. ಜೈ ದುರ್ಗಾವತಿ ಎಂದು ಸಹಸ್ರ ಕಂಠಗಳಿಂದ ಜಯಕಾರ. ಅಲ್ಲಾ ಹೋ ಅಕ್ಬರ್—ಕೋಲಾಹಲ. ಬಾಣಗಳ ಸುಯ್ಯೆಂಬ ದನಿ. ಖಡ್ಗಗಳ ದನಿ.]

ವೀರಸಿಂಹ—ಹಾ! ರಾಣಿಯವರ ಮೈಗೆ ಎರಡು ಬಾಣಗಳು ನಾಟಿವೆ! ಮಾಹುತಾ ಆನೆಯನ್ನು ಬೇರೆ ಏಕಾಂತಸ್ಥಳಕ್ಕೆ ತಿರುಗಿಸು.

ರಾಣಿ (ನೋವಿನ ದನಿಯಲ್ಲಿ)—ಬೇಡ ವೀರಸಿಂಹ, ಬೇಡ. ಈ ದೇಹ ನುಚ್ಚು ನೂರಾಗುವ ವರೆಗೂ ಹೋರಾಡಲೇಬೇಕು.

ಯೋಧನೊಬ್ಬ ನುಗ್ಗಿಬಂದು—ತಾಯಿ ರಾಜಕುಮಾರ ವೀರನಾರಾಯಣ ಗಾಯಗೊಂಡು ಮೂರ್ಛಿತರಾಗಿದ್ದಾರೆ.

ರಾಣಿ—ಹಾ ಜಗನ್ಮಾತೆ ರಕ್ಷಿಸು. ರಾಜಕುಮಾರರಿಗೆ ಶುಶ್ರೂಷೆ ನಡೆಯಲಿ. ಹೋರಾಟ ನಿಲ್ಲದಿರಲಿ.

ವೀರಸಿಂಹ—ಅಮ್ಮಾಜೀ ಅದೋ ಅಫಸಲನ ಪಡೆ ಈ ಕಡೆಯೇ ನುಗ್ಗುತ್ತಿದೆ. ನಮ್ಮ ಸೈನ್ಯ ಸೋತು ಓಡುತ್ತಿದೆ. (ಹಲ್ಲು ಕಡಿಯುತ್ತ) ದ್ರೋಹಿಗಳು! ಶತ್ರುಗಳ ಕೈಸೆರೆಯಾಗುವ ಅಪಾಯದಲ್ಲಿದ್ದೇವೆ ತಾಯೀ. ತಮ್ಮ ಆಸೆಯನ್ನು ಸುರಕ್ಷಿತವಾದ ಸ್ಥಳಕ್ಕೆ ಕರೆದೊಯ್ಯುತ್ತೇನೆ.

ರಾಣಿ—ನಿನ್ನ ಸ್ವಾಮಿಭಕ್ತಿಗೆ ಎಣೆಯಿಲ್ಲ ವೀರಸಿಂಹ. ಆದರೆ ಮಾತೃಭೂಮಿಗಾಗಿ ನನ್ನ ಪ್ರಾಣ ಮೀಸಲು. ಇದೋ ಶತ್ರುವಿನ ಕೈಗೆ ಸೆರೆ ಸಿಕ್ಕುವ ಹೀನತೆ ಬೇಡ. ಈ ಭವಾನಿಯ ಕಠಾರಿ ವೀರಸ್ವರ್ಗದ ಬಾಗಿಲನ್ನು ತೆರೆಯುವ ಬೀಗದ ಕೈ ಆಗಲಿ.

(ಇರಿದುಕೊಳ್ಳುವಳು. ಹಾ ಎಂದು ಸಂಯಮಿಸಿದ ನೋವಿನ ಉಸಿರು ಕೇಳುತ್ತದೆ.)

[ಮತ್ತೆ ಅದೇ ಪ್ರಶಾಂತ ಕಣಿವೆಯ ಸನ್ನಿವೇಶ. ಹಕ್ಕಿಗಳ ಚಿಲಿಪಿಲಿ ನಿಂತಿದೆ. ಗಾಳಿ, ಮರಗಳ ಸಂದಿಯಲ್ಲಿ ತೂರಿ ಸಿಳ್ಳೆಯಿಕ್ಕುತ್ತಿದೆ. ಕೊಳಲ ದನಿ ಕೇಳಿಬರುತ್ತದೆ.]

ನಿರ್ದೇಶಕ—ಹೀಗೆ ಗೊಂಡವಾನ ಶತ್ರುವಶವಾಯಿತು. ಹಾಳಾಯಿತು. ರಾಣಿ ತನ್ನ ಅನೇಕ ವೀರಯೋಧರೊಡನೆ ವೀರಸ್ವರ್ಗವನ್ನು ಸೂರೆಮಾಡಿ ಅಮರಳಾದಳು. ಆಕೆಯ ಬಾಳು ಎಷ್ಟು ಹಿರಿಯದೋ ಅಷ್ಟೇ ಸಾರ್ಥಕವಾದುದು ಆಕೆಯ ಸಾವು. ಅಂತಹ ಚೇತನಗಳು ಒಂದು ಕಾಲದವರಲ್ಲ. ಕಾಲಕಾಲಕ್ಕೂ ಉದಾತ್ತ ಧ್ಯೇಯಗಳನ್ನು ಸಂರಕ್ಷಿಸಲು ಬರುತ್ತಾರೆ.

ಮೊದಲನೆ ಪ್ರವಾಸಿ (ನಿಡಿದಾದ ಉಸಿರು ಬಿಟ್ಟು)—ನಿಜ. ಆಕೆ ಭಾರತದ ವೀರ ಮಹಿಳೆ. ದೊಡ್ಡ ಶಕ್ತಿ. ಆಕೆಯ ಕಥೆ ನಮ್ಮ ಮೈಯನ್ನು ರೋಮಾಂಚಿತಗೊಳಿಸುತ್ತದೆ. ಇಂತಹ ನಾಡಿನಲ್ಲಿ ಹುಟ್ಟಿದ ನಮ್ಮ ಬಾಳೂ ಸಾರ್ಥಕ.

ನಿರ್ದೇಶಕ—ಸತ್ಯವಾದ ಮಾತು ಬಾಬೂಜಿ. ಬನ್ನಿ. ನಾವೂ ನಮ್ಮ ಅಲ್ಪ ಕಾಣಿಕೆಗಳನ್ನು ತಾಯಿಯ ಚರಣಗಳಲ್ಲಿಟ್ಟು ನಮಸ್ಕರಿಸೋಣ.

ಎರಡನೆ ಪ್ರವಾಸಿ—ಮನಃಪೂರ್ವಕವಾಗಿ. ಓ ಆಗಲೇ ಬೆಳುದಿಂಗಳು ಕಣಿವೆಯನ್ನೆಲ್ಲ ತುಂಬಿದೆ. ಇಷ್ಟೊಂದು ಹೊತ್ತಾದುದೂ ಗೊತ್ತಾಗಲಿಲ್ಲ. ಬನ್ನಿ ಹೋಗೋಣ.

[ಕಲ್ಲುಗಳನ್ನಿಡುವ ಸದ್ದು. ತರಗೆಲೆಗಳ ಮೇಲೆ ಅವರು ನಡೆದು ದೂರಹೋಗುವ ಸದ್ದು. ಕೊಳಲ ದನಿ ತರಂಗ ತರಂಗವಾಗಿ ತೇಲಿಬರುತ್ತದೆ. ಆರಂಭದಲ್ಲಿ ಎತ್ತಿಕೊಂಡ ಗಂಭೀರವಾದ ಸ್ವಲ್ಪ ಶೋಕಮಿಶ್ರಿತವಾದ ರಾಗದ ಆಲಾಪನೆಯ ಮುಕ್ತಾಯದ ಮಜಲು. ಅಸ್ಪಷ್ಟವಾಗಿ ನಗಾರಿಗಳ ಗಂಭೀರ ನಿನಾದ ಕಣಿವೆಯ ಮೌನವನ್ನು ತುಂಬುತ್ತದೆ]

## ಒಂದಕೊಂದು

ವದನದಲ್ಲಿ ಮಂದಹಾಸ ತುಂಬಿ ತುಳುಕುತಿತ್ತು

ವೇಣಿ ಗಾಳಿಯಲ್ಲಿ ಸುತ್ತಮುತ್ತ ಹೊರಳುತಿತ್ತು.

ಅಹ ಏನು ಮಂದಹಾಸ

ಅಯ್ಯೊ ಏನು ಅಟ್ಟಹಾಸ!

ಮಂದಹಾಸದಿಂದ ಹೊಮ್ಮಿ ಬಂತು ಒಂದು ಭೂತ.

ಪ್ರೇಮದಿದಿರು ಕಾಯಲಿಕ್ಕೆ ಕಾಮವೆಂಬ ಪ್ರೇತ!

ಪ್ರೀತಿಯೆಂದು ಬಲೆಯ ಬೀಸಿ ಕೆಡುಕಿಗೆಳೆಯುತಿತ್ತು

ಅಮೃತವೆಂದು ಮೋಸಮಾಡಿ ವಿಷವನೂಡುತಿತ್ತು

ಪ್ರೇಮವೆಂಬ ಹೆಸರ ಕೆಡಿಸಿ ಕಾಮವಾಳುತಿತ್ತು

ಕಾಮದಲ್ಲಿ ಪಾಪವರಿತು ತುಂಬಿಕೊಂಡು ಇತ್ತು!

ದೂರದಲ್ಲಿ ಹಾರುತಿರುವುದೊಂದು ಬಣ್ಣ ಚಿಟ್ಟೆ,

ಅದನು ಎಂದು ಹಿಡಿಯ ಹೋದೆ ಅಂದೆ ನೀನು ಕೆಟ್ಟೆ!

ದೂರದಲ್ಲಿ ತೋಳುವುದೆಲ್ಲ ನಿನ್ನ ಕಣ್ಣಿಗಂದ

ಹುಳಿತು ಹಾಳು ಬಡಿಯುತಿದ್ದರದೇ ನಿನಗೆ ಚೆಂದ!

ಕಾಯ ಕೆತ್ತಿ ಕುಡಿವ ನೀರು ನಿನಗೆ ರುಚಿಸದು

ಕುಡಿಯ ಮುರಿದು ತರುವ ನೀರೆ ನಿನಗೆ ಹಿತವದು!

ಲೋಕದೆಲ್ಲ ಋಷಿಗಳೆಲ್ಲ ಅದೋ ಹಾಡುತಿರುವರು

ಕಾಮವೆಂಬ ಪ್ರೇತವನ್ನು ಅಟ್ಟಿ ಹೇಳುತಿರುವರು!

ಕೆಟ್ಟ ಕಾಮವೆಂಬುದೊಂದು ಲೋಕ ಕಂಟಕ!

ಎಲ್ಲ ಪಾಪಕದೇ ತುಂಬ ದೊಡ್ಡ ಪಂಟಪ!

ಪೂ. ಚಂ. ತೇ.

# ಮೇಘಮಂದಿರ

ಸಂಧ್ಯೆಯ ಕೆಂಧೂಳಿ ದಿಗಂತವನ್ನು ಮುಸುಕಿತ್ತು. ಎಲ್ಲೆಲ್ಲೂ ಯಾರೊಬ್ಬರೂ ಇರಲಿಲ್ಲ. ನನ್ನ ಹಿಂದೆ ಕಾನನ ಹಬ್ಬಿತ್ತು. ಬಂಡೆಯೊಂದರ ಶಿರದಲ್ಲಿ ಸಾಯಂಸಮೀರನ ತಂಪಿಗೆ ಮೈಯೊಡ್ಡಿ ಮಲಗಿದ್ದೆ. ಪಡುವಣ ದೆಸೆಯಂಚಿನಲ್ಲಿ ಪ್ರಜ್ವಲಿಸುತ್ತಿದ್ದ ಕುಂಕುಮದುಂಡೆ ಮೆಲ್ಲನೆ ಮರೆಯಾಯಿತು. ಸೂರ್ಯಾಸ್ತವಾದ ಕೆಲವು ನಿಮಿಷಗಳಲ್ಲೇ ಗಿರಿಕಂದರಗಳ ಮಡಿಲಿನಿಂದ ಹುಣ್ಣಿಮೆಯ ಚಂದ್ರಬಿಂಬ ಪೂರ್ಣಹಾಸದಿಂದ ಆಗಸದಲ್ಲಿ ಮೇಲಕ್ಕೆದ್ದಿತು. ಬೆಳುದಿಂಗಳು ಜಗತ್ತಿನ ಪಾತ್ರೆಯನ್ನು ತುಂಬಿ ತುಳುಕಿತು. ಬಹು ದೂರದ ವರೆಗೆ ನಿರ್ಭೇದ್ಯವಾದ ನಿರ್ಭರವಾದ ನಿಶ್ಯಬ್ದತೆ ಆಳುತ್ತಿತ್ತು. ಶಬ್ದವಾದರೆ ಮಂದಾನಿಲನ ಹೊಡೆತಕ್ಕೆ ಸಿಕ್ಕಿ ಅಲ್ಲಾಡುವ ತರಗೆಲೆಗಳ ರವರವಧ್ವನಿ ಮಾತ್ರ. ಲೋಕವೆಲ್ಲಾ ಸ್ವಪ್ನಾವಸ್ಥೆಯಲ್ಲಿದ್ದಂತಿತ್ತು. ಅದೊಂದು ರೀತಿಯ ವಿಶ್ವವ್ಯಾಪಕವಾದ, ಅದ್ಭುತವಾದ, ಗಾಢವಾದ ಮೌನವಾರಿಧಿಯಲ್ಲಿ ಸುತ್ತಣ ವಾತಾವರಣ ಮುಳುಗಿತ್ತು.

ಈ ಅನುಪಮ ದೃಶ್ಯವನ್ನು ಕಂಡೊಡನೆ ನನ್ನ ಮನದಲ್ಲಿ ಯಾವುದೋ ಬಹು ದಿನದ ಅನಿರ್ವಚನೀಯವಾದ ಚಿಂತೆ ಚಿಮ್ಮಿತು. ನಾನು ಬಹಿಃಪ್ರಪಂಚವನ್ನು ಮರೆತು, ನಿರ್ನಿಮೇಷನಾಗಿ ಮೇಲುಗಡೆ ಅನಂತವಾಗಿ ಕಾಣುತ್ತಿದ್ದ "ನಕ್ಷತ್ರಖಚಿತ ನೀಲಿ ಮಾವಿತಾನ"ವನ್ನು ನೋಡುತ್ತ ಕುಳಿತೆ. ಎಷ್ಟೋ ಹೊತ್ತಿನ ಅನಂತರ ಅರಿವಾಯಿತು. ಆ ವೇಳೆಗೆ ತಂಗದಿರನು ಆಕಾಶದಲ್ಲಿ ಬಹು ದೂರ ನಡೆದುಬಂದಿದ್ದು ಸರಿಸುಮಾರು ನನ್ನ ನೆತ್ತಿಯ ಮೇಲಿದ್ದ. ನಾನು ಕಣ್ಣುಗಳನ್ನು ಗಗನಪಟದಿಂದ ಕೆಳಗಿಳಿಸಿ ನೇರವಾಗಿ ಮುಂದೆ ನೋಡಿದೆ ಬಾಂದಳದ ಪಶ್ಚಿಮತಟದಲ್ಲಿ ಬೆಳ್ಮುಗಿಲಿನ ಪರ್ವತಮಾಲೆಯೊಂದು ನೇತಾಡುತ್ತಿತ್ತು. ಎದುರಿಗೆ ತೊಳಗುತ್ತಿದ್ದ ಹಿಮಕರನ ಹಿತಕರವಾದ, ಶಾಂತವಾದ, ತೀಕ್ಷ್ಣವಾದ ಕಿರಣಗಳು ಮೋಡಗಳನ್ನು ಬೆಳ್ಳಿಯಂತೆ ಬೆಳಗಿದ್ದವು. ನೀಲಾಕಾಶದಿಂದ ತೆಗೆದ ದೃಷ್ಟಿಯನ್ನು ಈ ಕಾಂತಿಮಯ ಮೇಘರಾಶಿಯ ಮೇಲೆ ನಿಲ್ಲಿಸಿದೆ. ಆ ಅಸಾಮಾನ್ಯ ವಸ್ತುಗಳನ್ನು ಕಣ್ಣು ತಣಿಯುವ ವರೆಗೂ ಎಡೆಬಿಡದೆ ನೋಡಿದೆ. ನೋಡುತ್ತ ಮತ್ತೆ ಸುತ್ತಣ ಸನ್ನಿವೇಶದಿಂದ ವಿಮುಖನಾದೆ. ಆದರೆ ಈ ಸಾರಿ ನವಿಗನಸಿನ ಸಾಮ್ರಾಜ್ಯವನ್ನು ಪ್ರವೇಶಿಸಿದೆ—ಸ್ವರ್ಗಕ್ಕೇರಿದೆ!

ಕನಸೋ, ಕಲ್ಪನೆಯೋ, ನಾನು ಆ ಮೇಘಾದ್ರಿಯ ತುದಿಗೈದಲು ಉಪಕ್ರಮಿಸಿದೆ. ಒಂದೆರಡು ತಾಸಿನಲ್ಲೇ ತುಹಿನಗಿರಿಯ ಅರ್ಧ ಎತ್ತರಕ್ಕೇರಿದೆ. ಎಡಬಲ

ಗಳಲ್ಲಿ ದೃಷ್ಟಿಯೋಡುವ ವರೆಗೂ ಪರ್ಬೆಟ್ಟಗಳು ಹಬ್ಬಿ ಸಾಗರತರಂಗಗಳನ್ನು ಹೋಲಿ ನಿಂತಿದ್ದವು. ಪ್ರಗಾಢವಾದ, ಬಗ್ಗಿ ನೋಡಿದರೆ ಎದೆಯನ್ನು ಝುಲ್ಲೆನ್ನಿಸಬಲ್ಲ ಪ್ರಪಾತಗಳು ಲೆಕ್ಕವಿಲ್ಲದಷ್ಟಿದ್ದವು. ಮೇಲುಗಡೆ ಬೆಳಗುತ್ತಿದ್ದ ಶಶಿಧರನ ಜ್ಯೋತ್ಸ್ನಾ ವೃಷ್ಟಿ ಕಾಡುಮೇಡುಗಳನ್ನೆಲ್ಲಾ ಆಚ್ಛಾದಿಸಿತ್ತು. ಕೌಮುದಿಯ ಕಾಂತಿ ಶ್ವೇತ ನೀಹಾರದ ಪ್ರಕಾಶವನ್ನು ನೂರ್ಮಡಿಗೊಳಿಸಿತ್ತು. ವಸಸುಮಸೌರಭಾನ್ವಿತನಾದ ಮಲಯಮಾರುತನು ಮಂದಗಾಮಿಯಾಗಿ ಸ್ಥಳದಿಂದ ಸ್ಥಳಕ್ಕೆ ಸುಳಿಯುತ್ತಿದ್ದನು. ಗಿರಿತರುಗಳು ಹುಲುಸಾಗಿ ಸೊಂಪಾಗಿ ಬೆಳೆದಿದ್ದ ತಮ್ಮ ತಳಿರ್ವಿಟಪಂಗಳಿಂದ ತಂಬೆಲರನ್ನು ಹೀರಿ ಸಂತಸದಿಂದ ಹೊಗರೇರಿ ಕುಣಿಕುಣಿದು ಕಿಲಕಿಲನೆ ನಕ್ಕು ನಲಿಯುತ್ತಿದ್ದವು. ಇದರೊಡನೆ, ಪರ್ವತ ಖಗಕಂಠೋತ್ಪನ್ನ ಮಂಜುಳಸ್ವನವೂ ಗಿರಿಕಂದರಗಳಲ್ಲಿ ಹರಿದು ದಡದಡನೆ ಧುಮುಧುಮುಕಿ ಮುನ್ನುಗ್ಗಿ ಮುಂಬರಿವ ನೂರಾರು ಪ್ರವಾಹಗಳ ಮಧುರಗೀತಾನಿನದವೂ ಆ ಪ್ರಶಾಂತ ವಾಯುಮಂಡಲ ವನ್ನು ತೀವಿದ್ದವು. ಅಲ್ಲಿಯ ಪ್ರತಿ ವಸ್ತುವೂ ಸೃಷ್ಟಿ ಮಾತೆಯ ಅನುಪಮಾತಿಶಯ ವಾದ ರುಂದ್ರಸುಂದರ ವದನವನ್ನು ಪ್ರತಿಬಿಂಬಿಸಿತ್ತು.

ಬೆಟ್ಟದ ಬಲಪಾರ್ಶ್ವದಲ್ಲಿ, ನಾನು ನಿಂತಿದ್ದೆಡೆಗೆ ಅನತಿದೂರದಲ್ಲಿ ಸೋಪಾ ನಾವಳಿಯೊಂದು ಸರ್ಪದ ತೆರದಲ್ಲಿ ವಕ್ರವಕ್ರವಾಗಿ ಆ ಹಿಮವೆಟ್ಟಿನ ಕೋಡುಗಲ್ಲಿನ ಕಡೆಗೆ ಹೋಗುತ್ತಿದ್ದಂತೆ ಕಂಡುಬಂತು. ನಾನು ಒಡನೆಯೇ ಅದನ್ನೇರಲು ಆರಂಭಿಸಿದೆ. ಮೇಲೇರಿದಂತೆಲ್ಲಾ ಗಿಡಮರಗಳು ವಿರಳವಾದವು; ಸಜೀವಪ್ರಾಣಿಗಳ ವಾಸದ ಕುರುಹುಗಳು ಕಡಿಮೆಯಾಗುತ್ತ ಬಂದವು. ಕೊನೆಗೆ ಭೀಕರವಾದ ಆಕಾರ ಗಾತ್ರಗಳುಳ್ಳ ಅರೆಗಳೇ ಸರ್ವವ್ಯಾಪಿಗಳಾಗಿ ಶೂನ್ಯತೆಯಲ್ಲಿ ಅರಸುಗೈಯುತ್ತಿದ್ದವು. ಅತ್ಯಲ್ಪ ಕಾಲದಲ್ಲೇ ಮೆಟ್ಟಿಲುಗಳನ್ನೆಲ್ಲಾ ಹಿಂದೆಬಿಟ್ಟು ಶೃಂಗವನ್ನು ಸೇರಿದೆ.

ಪರ್ವತಶಿಖರದ ತುತ್ತತುದಿಯಲ್ಲಿ ಕೋಟೆಯ ಗೋಪುರದಂತೆ ಅಮೃತಶಿಲೆಯ ಸೌಧವೊಂದು ಕಂಗೊಳಿಸುತ್ತಿತ್ತು. ಅಲ್ಲಿ ಪ್ರಾಣಿಮಾತ್ರದ ಸುಳಿವಿರಲಿಲ್ಲ. ಇತರ ಪ್ರದೇಶಗಳೊಡನೆ ಸಂಬಂಧ ಬೆಳೆಸಲು ಇಷ್ಟವಿಲ್ಲದೆ ತಾನೊಂದು ಮಾತ್ರ ಅತ್ಯುನ್ನತ ವಾದ ಸ್ಥಳದಲ್ಲಿ ನೆಲೆಸಿ ತನ್ನ ಅನನ್ಯ ವೈಶಿಷ್ಟ್ಯವನ್ನು ದಶದಿಶೆಗಳೆದುರಿಗೆ ಪ್ರದರ್ಶಿಸು ತ್ತಿರುವಂತೆ ಆ ಸಭೋಭವನ ಮೆರೆಯುತ್ತಿತ್ತು. ಅದರ ಒಳಗಡೆ ಹಾಲುಗಲ್ಲಿನ ಗೋಡೆ ಗಳು, ಥಳಥಳಿಸುವ ಬಿಳುಪಿನ ನುಣುಪು ನೆಲ! ಅಗಣ್ಯತಾರಾಪರಿವೃತನಾದ ಶಶಾಂಕ ನೆಸೆಯುತ್ತಿದ್ದ ನೀಲಾಕಾಶವೇ ಆ ಅಂಬರಮಂದಿರದ ಮೇಲ್ಛಾವಣಿ! ಶಶಿಯೊಸರಿದ ಜೊನ್ನನೀರು ಮಳೆಗಾಲದ ವರ್ಷಧಾರೆಯಂತೆ ಏಕಪ್ರಕಾರವಾಗಿ ಸುರಿಯುತ್ತಿತ್ತು. ಸುತ್ತಲೆತ್ತಲೂ ಜೀವದ ಕುರುಹೇ ಇಲ್ಲದೆ, ಎಂತಹ ಎದೆಗಾರನಾದರೂ ಹೆದರಿ ಹಿಂಜರಿಯುವಂತಿತ್ತು ಅಲ್ಲಿನ ನಿಶ್ಶಬ್ದತೆ.

ಭೀತಿಯನ್ನು ಒತ್ತಿ ಹಿಡಿದು ಮನೆಯನ್ನು ಪ್ರವೇಶಿಸಿದೆ. ಮುಂದುಗಡೆ ನಾಲ್ಕಾರು ವಿಶಾಲವಾದ ಕೊಠಡಿಗಳಿದ್ದುವು. ಇವನ್ನೆಲ್ಲಾ ದಾಟಿ ಭವನದ ಮಧ್ಯ ಭಾಗದಲ್ಲಿದ್ದ ಕೋಣೆಯೊಂದರ ಬಾಗಿಲ ಕಡೆಗೆ ಹೊರಟೆ. ಇದು ಇತರ ಕೋಣೆ ಗಳಿಗಿಂತಲೂ ಸ್ವಲ್ಪ ಕಿರಿದಾಗಿ ಕಾಣುತ್ತಿತ್ತು. ಮುಂಬಾಗಿಲಿಗೂ ಈ ಕೋಣೆಗೂ ನಡುವೆ ಅಂತರ ಬಹಳವಾಗಿಯೇ ಇತ್ತು. ನಡೆದಂತೆಲ್ಲಾ ನಿಶ್ಶಬ್ದತೆಯ ಗಭೀರತೆ ಆಳವಾಗುತ್ತಿತ್ತು. ನುಣುಪು ಕಲ್ಲುಗಳ ಮೇಲೆ ಎಷ್ಟು ಮೃದುವಾಗಿ ಹೆಜ್ಜೆಯಿಟ್ಟರೂ ಕಾಲಿನ ಸಪ್ಪುಳ ಕೇಳಿಬರುವಂತಿತ್ತು. ಮುಂದೆ ಅಡಿಯಿಟ್ಟು ಕೋಣೆಯ ಹೊಸ್ತಿಲ ಮೇಲೆ ನಿಂತೆ. ನಿಂತು ಒಳಗೆಲ್ಲಾ ದೃಷ್ಟಿಪ್ರಸಾರ ಮಾಡಿದೆ. ತಿಂಗಳಿನ ಬೆಳಕು ಕೋಣೆಯ ಎಲ್ಲ ಭಾಗವನ್ನೂ ಆವರಿಸಿತ್ತು. ಮಧ್ಯೆ ಎತ್ತರವಾದ ಚಂದ್ರಕಾಂತ ಶಿಲೆಯ ಹಾಸುಬಂಡೆಯೊಂದು ನೆಲದಿಂದ ಉದ್ಭವಿಸಿತ್ತು. ಅದರ ಮೇಲೆ ಏಳೆಂಟು ವರುಷಗಳ ಬಾಲತಪಸ್ವಿನಿಯೊಬ್ಬಳು ಕುಳಿತು ಕೈಜೋಡಿಸಿ ಕಣ್ಣುಗಳನ್ನು ಮೇಲಕ್ಕೆತ್ತಿ ಪ್ರಾರ್ಥನಾಗೀತೆಯೊಂದನ್ನು ಮೆಲುದನಿಯಲ್ಲಿ ಹಾಡಿಕೊಳ್ಳುತ್ತಿದ್ದಳು. ಇಂತಹ ನೀರವ ರಾತ್ರಿಯಲ್ಲಿ ಈ ಗಿರಿಯ ಶಿರದಲ್ಲಿ ನಿರ್ಜನವಾದ ಈ ಬೃಹನ್ಮಂದಿರದಲ್ಲಿ ಒಬ್ಬಳೇ ಕುಳಿತಿದ್ದ ಆ ಹುಡುಗಿ ಯಾರೆಂಬುದನ್ನು ತಿಳಿಯಬೇಕೆಂಬ ಮಾನವ ಸಹಜವಾದ ಕುತೂಹಲ ನನ್ನ ಮನಸ್ಸಿನಲ್ಲಿ ತಲೆದೋರಿತು. ಅವಳ ಸಮೀಪದರ್ಶ ನೋತ್ಸುಕನಾಗಿ ಮುಂದಕ್ಕೆ ಒಂದು ಹೆಜ್ಜೆಯಿಟ್ಟೆ. ಪದರವವನ್ನು ಕೇಳಿ ಅವಳು ನನ್ನ ಕಡೆಗೆ ತಿರುಗಿದಳು. ನೋಡಿದೆ. ನೋಡಿ, ಮಂತ್ರಾಹತನಾದಂತೆ ಸ್ತಂಭಿತನಾಗಿ ನಿಂತೆ! ಅವಳು ಜಲಜ! ನಮ್ಮ ಜಲಜ! ಒಮ್ಮಿಂದೊಮ್ಮೆಗೇ ಪೂರ್ವಪರಿಚಿತ ವಿಷಯಪರಂಪರೆಗಳ ಪ್ರವಾಹ ಸ್ಮೃತಿಪಾತ್ರದಲ್ಲಿ ಹರಿಯತೊಡಗಿತು.

ಜಲಜ ನಮ್ಮ ಅತ್ತೆಯ ಮಗಳು. ಅವಳ ತಂದೆ ಸಣ್ಣ ಹಳ್ಳಿಯೊಂದರ ಗುಡಿಯ ಪೂಜಾರಿ. ಅವರಿದ್ದ ಊರಿನಲ್ಲಿ ಪಾಠಶಾಲೆ ಇರಲಿಲ್ಲ. ಆದಕಾರಣ ಜಲಜಳನ್ನು ಓದುವುದಕ್ಕೆಂದು ನಮ್ಮ ಮನೆಯಲ್ಲೇ ಬಿಟ್ಟಿದ್ದರು. ಅವಳು ನಮ್ಮಲ್ಲಿಗೆ ಬಂದಾಗ ಅವಳಿಗೆ ಎಂಟು ವರುಷ ಮಾತ್ರ. ನನಗೆ ಒಂಭತ್ತು ಕಳೆದು ಹತ್ತನೆಯ ವರುಷ ನಡೆಯು ತ್ತಿತ್ತು. ಆಗ ನಾನು ಮಾಧ್ಯಮಿಕಶಾಲೆಯ ಮೊದಲನೆಯ ತರಗತಿಯಲ್ಲಿದ್ದೆ. ನಮ್ಮ ತಂದೆತಾಯಿಗಳಿಗೆ ನಾನು ಏಕಮಾತ್ರ ಶಿಶು. ನನ್ನೊಡನೆ ಆಡಲು ಅಥವಾ ಮಾತಾಡಲು ಒಡಹುಟ್ಟಿದವರಾಗಲಿ ನೆರೆಹೊರೆಯ ಗೆಳೆಯ ಗೆಳತಿಯರಾಗಲಿ ಇರಲಿಲ್ಲ. ಮನೆಯನ್ನು ಬಿಟ್ಟರೆ ಪಾಠಶಾಲೆ, ಶಾಲೆಯನ್ನು ಬಿಟ್ಟರೆ ಮನೆ—ಇವೇ ನನ್ನ ಬಾಲ್ಯ ಜೀವನದ ಚಲನವಲನಗಳ ಕ್ಷೇತ್ರಗಳಾಗಿದ್ದುವು.

ಈ ಸಮಯದಲ್ಲಿ ಜಲಜ ಬಂದುದು ನನ್ನ ಬಾಳಿನ ಮರಳುಗಾಡಿನಲ್ಲಿ ಗಂಗಾನದಿ

ಹುಟ್ಟಿ ಹದಿಮಂತಾಯಿತು. ಅವಳು ನಮ್ಮ ಮನೆಗೆ ಬಂದ ದಿನದಿಂದಲೇ ನಾನೂ ಅವಳೂ ಜೊತೆಗಾರರಾದೆವು. ಅವಳಿಗೂ ಬೇರೆ ಸಮವಯಸ್ಕರ ಸಹವಾಸವಿರಲಿಲ್ಲ. ಆದ್ದರಿಂದ ನಮ್ಮಿಬ್ಬರ ಮೈತ್ರಿ ದಿನದಿನವೂ ಗಾಢವಾಗುತ್ತಿತ್ತು. ಹೆಣ್ಣುಮಕ್ಕಳ ಶಾಲೆ ನಮ್ಮ ದರ ಸಮೀಪದಲ್ಲೇ ಇದ್ದುದರಿಂದ ಇಬ್ಬರೂ ಜೊತೆಯಲ್ಲಿ ಶಾಲೆಗೆ ಹೋಗಿಬರುತ್ತಿದ್ದೆವು. ಮನೆಯಲ್ಲೂ ಅಷ್ಟೆ. ನಾನು ಯಾವ ಕೆಲಸವನ್ನು ಮಾಡಿದರೂ ಅವಳೂ ಅದರಲ್ಲಿ ಭಾಗ ವಹಿಸುತ್ತಿದ್ದಳು. ಅವಳ ಕಾರ್ಯಕಲಾಪಗಳಲ್ಲಿ ನಾನು ತಪ್ಪದೆ ಸಹಾಯಕನಾಗುತ್ತಿದ್ದೆ. ಏಕೆಂದರೆ ಜಲಜ ನಮ್ಮ ತಾಯಿಯ ಕೆಲಸಗಳಲ್ಲಿ ತನ್ನ ಕೈಲಾದಷ್ಟು ನೆರವಾಗುತ್ತಿದ್ದಳು. ಬೆಳಗ್ಗೆ ಎದ್ದ ಕೂಡಲೆ ಮನೆಯ ಅಂಗಳವನ್ನು ಗುಡಿಸಿ ನೀರು ಚಿಮುಕಿಸಿ, ಸಾರಿಸಿ, ಸರ್ವಾಂಗಸುಂದರವಾದ ಶೈಶವೋಚಿತವಾದ ಕಲೆಗಾರಿಕೆಯನ್ನು ಪ್ರದರ್ಶಿಸಿ ರಂಗವಲ್ಲಿ ಇಡುತ್ತಿದ್ದಳು. ಸಾಯಂಕಾಲ ಮತ್ತೆ ಅಂಗಳವನ್ನು ಗುಡಿಸಿ ಚೊಕ್ಕಟ ಮಾಡುತ್ತಿದ್ದಳು. ದಿನವೂ ತಪ್ಪದೆ ಬಾಗಿಲ ಬಳಿಯಲ್ಲಿದ್ದ ಬೃಂದಾವನಕ್ಕೂ ಮಲ್ಲಿಗೆ ಬಳ್ಳಿಗೂ ನೀರೆರೆದು ಪೋಷಿಸುತ್ತಿದ್ದಳು. ಅವಳು ಮಾಡುತ್ತಿದ್ದ ಇಂತಹ ಚಿಕ್ಕ ಪುಟ್ಟ ಕೆಲಸಗಳು ಇನ್ನೂ ಎಷ್ಟೋ. ಇವುಗಳಲ್ಲೆಲ್ಲಾ ಜಲಜ ಸೇನಾಪತಿ, ನಾನು ಅವಳ ಆಜ್ಞಾಧಾರಕ. ಇದೇ ರೀತಿ ಪಾಠಶಾಲೆಯಿಂದ ಮನೆಗೆ ಬಂದ ಮೇಲೆ ಇಬ್ಬರೂ ಒಂದೇ ದೀಪದ ಬೆಳಕಿನಲ್ಲಿ ಎದುರುಬದರಾಗಿ ಕುಳಿತು ಪಾಠ ಓದುತ್ತಿದ್ದೆವು. ನಮ್ಮ ಉಪಾಧ್ಯಾಯರು ಆಗಾಗ ಕೆಲವು ಪದ್ಯಗಳನ್ನು ಬಾಯಿಪಾಠ ಮಾಡುವಂತೆ ಹೇಳುವರು. ಆಗ ನಾನು ಹತ್ತಾರು ಸಲ ಪದ್ಯಗಳನ್ನು ಓದಿ "ಉರು ಹೊಡೆದು" ಜಲಜಳ ಕೈಯಲ್ಲಿ ಪುಸ್ತಕವನ್ನು ಕೊಡುತ್ತಿದ್ದೆ. ಅವಳು ಪರೀಕ್ಷಕಳಾಗುವಳು. ನಾನು ಒಂದೊಂದಾಗಿ ಪದ್ಯಗಳನ್ನು ಅವಳಿಗೆ "ಒಪ್ಪಿಸುವುದು"; ನಡುವೆ ಸ್ವಲ್ಪ ತಪ್ಪು ಹೇಳಿದರೆ ಅಥವಾ ಮರೆತರೆ "ಅಲ್ಲ! ತಪ್ಪು!" ಎಂದು ಮಂದಹಾಸದಿಂದ ಕೂಡಿದ ಮೊಗವೆತ್ತಿ ಅಧಿಕಾರವಾಣಿಯಿಂದ ಕೂಗಿ ನನ್ನನ್ನು ತಡೆಯುವಳು. ನಾನು ಪದ್ಯಗಳನ್ನೆಲ್ಲಾ ಸರಿಯಾಗಿ "ಒಪ್ಪಿಸುವ" ವರೆಗೂ ಅವಳು ಬಿಡುತ್ತಿರಲಿಲ್ಲ. ಪಾಠ "ಗಟ್ಟಿ ಮಾಡಿದ್ದು" ಮುಗಿದನಂತರ ಇಬ್ಬರೂ ಒಟ್ಟಿಗೆ ಹೋಗಿ ಊಟ ಮಾಡುತ್ತಿದ್ದೆವು. ಬೆಳುದಿಂಗಳ ಕಾಲದಲ್ಲಿ ಜಲಜಳೇ ಸ್ವತಃ ಗುಡಿಸಿ ಸಾರಿಸಿ "ಕನ್ನಡಿಯಂತೆ" ಶುಭ್ರವಾಗಿಟ್ಟಿರುತ್ತಿದ್ದ ಅಂಗಳದಲ್ಲಿ ಕುಳಿತು ಅಮ್ಮನ ಅಮೃತಹಸ್ತದಿಂದ ದತ್ತವಾದ ಕೈತುತ್ತು ತಿಂದು ಸಂತಸದ ಕಡಲಿನಲ್ಲಿ ಓಲಾಡುತ್ತಿದ್ದೆವು. ಮುಂಜಾನೆ ಬೇಗ ಏಳುವುದಕ್ಕೆ ನನಗೂ ಜಲಜಳಿಗೂ ಜೂಜಾಟ ನಡೆಯದ ದಿನವಿಲ್ಲ. ಇಂತಹ 'ಪಂಥ' ಗಳಲ್ಲಿ ಸೋಲು ಯಾವಾಗಲೂ ನನ್ನದೆ! ನಾನು ಎಷ್ಟು ಬಿಗುವಿನಿಂದ ಪಣತೊಟ್ಟು ಮಲಗಿದ್ದರೂ, ಎಷ್ಟು ಪ್ರಯತ್ನಪಟ್ಟರೂ ಹೊತ್ತಿಗೆ ಮುಂಚೆ ಹಾಸಿಗೆ ಬಿಟ್ಟೇಳುವುದು

ವೇನೂ ಅಲ್ಲ. ಅಲ್ಲದೆ ಜಲಜ ನನ್ನನ್ನು ಮರೆತರೂ ನಾನು ಅವಳನ್ನು ಮರೆತಿರಲಿಲ್ಲ. ನಾನೇ ಮೊದಲು ಮಾತಾಡಿಸುತ್ತೇನೆ, ತಪ್ಪೇನು? ಹೀಗೆಲ್ಲಾ ಯೋಚಿಸಿ, ಕೊನೆಗೊಂದು ನಿಶ್ಚಯಕ್ಕೆ ಬಂದು ಬಾಗಿಲ ಬಳಿಯಿಂದಲೇ ಕೂಗಿದೆ.

"ಜಲಜ! ಜಲಜ!"

ಜಲಜ ಮಾತಾಡಲಿಲ್ಲ. ಚಿತ್ರದಲ್ಲಿಯ ಬೊಂಬೆಯಂತೆ ಸುಮ್ಮನೆ ನನ್ನನ್ನೇ ನೋಡತೊಡಗಿದಳು.

"ಜಲಜ"

"__________"

ಜಲಜ ಪಡಿನುಡಿಯದೆ ಇದ್ದುದು ನನ್ನ ಮನಸ್ಸಿಗೆ ಬಹು ಅಸ್ವಸ್ಥತೆಯನ್ನುಂಟು ಮಾಡಿತು. ಅವಳ ಸಮೀಪಕ್ಕೆ ಸರಿದು ಪುನಃ ಕೂಗಿದೆ! ಪುನಃ ಉತ್ತರ ಬರಲಿಲ್ಲ. ಏನಾದರೂ ಆಗಲಿ, ಮಾತಾಡಿಸಲೇಬೇಕು. ಈ ಸುಸಂದರ್ಭವನ್ನು ಕಳೆದುಕೊಂಡರೆ ಜಲಜಳನ್ನು ಮತ್ತೆ ಕಾಣುವುದೆಲ್ಲಿ? ಆದುದರಿಂದ ಅವಳ ಹತ್ತಿರಕ್ಕೆ ಇನ್ನೂ ಸ್ವಲ್ಪ ಸರಿದು, ಅವಳನ್ನು ಅಲುಗಾಡಿಸಿ, ಚೇತನಗೊಳಿಸಲೆಳಸಿ, "ಜಲಜಾ" ಎಂದು ಕೈಚಾಚಿದೆ. ಅಯ್ಯೋ—ಭೂಮ್ಯಾಕಾಶಗಳನ್ನು ತಲೆಕೆಳಗು ಮಾಡುವಂತಹ ಮಹತ್ತರವಾದ ಬಿರುಗಾಳಿಯೆದ್ದು ರೊಯ್ಯನೆ ರಭಸದಿಂದ ಬೀಸಿ ಬಂದಿತು. ಹಿಂದಿನಂತೆಯೇ ದೇವತೆಗಳಿಗೆ ನನ್ನ ಪುಣ್ಯವನ್ನು ಕಂಡು ಅಸೂಯೆ ಕೆರಳಿರಬೇಕು. ಅಷ್ಟು ಹೊತ್ತೂ ನನಗೆ ಆನಂದಾಶ್ರಯವನ್ನಿತ್ತಿದ್ದ ವಿಯತ್ಪ್ರಾಸಾದ ಆ ಪವಮಾನ ಪ್ರವಾಹದಲ್ಲಿ ಕೊಚ್ಚಿಹೋಯಿತು. ಅದರೊಡನೆ ನನ್ನ ಜಲಜಳೂ ತೇಲಿಹೋದಳು.

ಎಂ. ರಾಮರಾವ್

೧೧

ನನ್ನ ಗತಿ ಬದಲಾಯಿತು—
ಕಾವಲಿದ್ದವರೆದೆಯು ಕರಗಿತು!
ದುಃಖಿಕವರುಗಳೊಗ್ಗಿ ಇದ್ದರು ೪೦೦
ಏನೊ ಎಂತೋ ಹೃದಯ ಮರುಗಿತು!
ಕಟ್ಟು ಬಿಚ್ಚಿಹ ಕರಿಯ ಸರಪಣಿ
ಅಂತೆ ಇದ್ದಿತು ನೆಲದ ಮೇಲೆ.
ಒಂದು ಎಡೆಯಿಂ ಒಂದು ಎಡೆಗೆ
ಅತ್ತ ಇತ್ತಲು ಸುತ್ತಮುತ್ತಲು
ಕವಿದ ಕಗ್ಗವಿಯೆಲ್ಲ ಕಡೆಯಲಿ
ಅಲೆವ ಬಿಡುಗಡೆ ದೊರೆಕಿತೆನಗೆ.
ಕಂಬ ಕಂಬವ ಬಳಸಿಕೊಂಡು
ಬಿಟ್ಟ ಎಡೆಯನೆ ಸೇರುತಿದ್ದೆ.
ಒಡನೆ ಹುಟ್ಟಿದ ತಮ್ಮರಿಬ್ಬರ ೪೧೦
ಹೂತ ಎಡೆಯಲಿ ಹೋಗಲೊಲ್ಲೆ.
ಹುಲ್ಲು ಗುರುತೂ ಇಲ್ಲದೆಡೆಯಸು
ಕುರುಡುಗತ್ತಲೆಯಲ್ಲಿ ತುಳಿದೆನೊ,
ಮಲಿನವಾದುದೊ ಏನೊ ಎಂದು
ಬಗೆಯು ಕದಡಲು, ಉಸಿರು ಏದುತ
ಬರುತಲಿತ್ತು; ಹೃದಯ ಹಿಂಡಿದ
ತೆರದಿ ತಲ್ಲಣಗೊಂಡೆನು.
ಬಾಧೆ ಬಲಿಯಲು ನೊಂದೆನು.

೧೨

ಪಾದವಿರಿಸಲು ಗೋಡೆ ಕೊರೆದೆನು.
ಅಲ್ಲ ತಪ್ಪಿಸಿಕೊಳ್ಳಲು. ೪೨೦

ಮನುಜರೂಪವನಾಂತು ನನ್ನನು
ಪ್ರೀತಿಯಿಂದಲಿ ಕಂಡ ಜನರನು
ಕಳೆದುಕೊಂಡಿರೆ ಉಳಿಯದೆ
ಹಬ್ಬಿ ಹರಡಿದ ಭೂಮಿ ಭೂಮಿಯೆ
ದೊಡ್ಡ ಸೆರೆಮನೆಯಂತೆ ತೋರಿತು.
ಶಿಶುವೊ ಒಡೆಯನೊ, ಬಂಧು ಬಳಗವೊ-
ಕುದಿವ ದುಃಖದ ಭಾಗಿಯೋ —
ಯಾರು ಇಲ್ಲ—ನನ್ನ ಪಾಲಿಗೆ
ಯಾರು ಇಲ್ಲ—ಇದನು ನೆನೆದೆನು.
ನೆನೆದು, ಸಂತಸದಿಂದ ತಣಿದೆನು. ೪೩೦
ಅವರ ಹಂಬಲಪಟ್ಟು ಹಿಂದೆ
ಹುಚ್ಚಸಂದದಿ ತೊಳಲಿದೆ.
ಏನೊ ಕೌತುಕದಿಂದ ಒಮ್ಮೆ
ಅಡ್ಡಗಟ್ಟಿದ ಕಿಟಕಿ ಹತ್ತಿ
ದೂರ ದೂರದಿ ಮುಗಿಲ ಮುಟ್ಟುವ
ಮಲೆಯ ಪಂಕ್ತಿಯ ನೋಡಲು
ಮುದವನಾಂತೆನು ಸ್ನಿಗ್ಧಶಾಂತಿಯು
ಕಣ್ಗೆ ಹಿತವನು ನೀಡಲು.

೧೩

ಕುಳಿತು ನೋಡಿದೆ; ಎಲ್ಲ ಅಂತೆಯೆ
ಇದ್ದುವಲ್ಲಿ; ನನ್ನ ಪರಿಯೊಲು ೪೪೦
ಯಾವುದೂ ಕೃಶವಾಗದಿತ್ತು.
ನೂರು ವರುಷದ ಹಿಮದ ರಾಶಿಯು
ಮಲೆಯ ಮೇಲ್ಗಡೆ ತೋರುತಿದ್ದಿತು
ಹೆಪ್ಪುಗಟ್ಟಿ; ಘನ ಸರೋವರ
ಇದ್ದುದಡಿಯಲಿ; ಎರಡು ದಡಗಳ
ತುಂಬಿ ಹರಿದುದು ರ್‍ಹೋನ್ ನದಿ!

ಕಲ್ಲು ಕಣಿವೆಯು ಕೊಟ್ಟೆಲಲ್ಲಿ
ದಟ್ಟವಾಗಿಹ ಪೊದೆಗಳಲ್ಲ
ನುಗ್ಗಿ ಸಾಗುವ ಹೊನಲಿನಬ್ಬರ
ಕೇಳಿ ಬಂದುದು ಜಣ ಜಣ! ೪೫೦
ಮಿರುಗಿ ಬೆಳಗುವ ನಗರವಾವುದೊ
ಕಂಡು ಬಂದಿತು ದೂರ ದೂರ—
ತೇಲುವಂದದಿ ಬಿಳಿಯ ಧ್ವಜಗಳ
ಪಂಕ್ತಿ ಕಂಡಿತು ದೂರ ದೂರ.
ಅತಿ ಸಮೀಪದಿ ನಗುನಗುತ್ತಿಹ
ಸಣ್ಣದಾವುದೊ ದ್ವೀಪ ತೋರಿತು
ಬಂದೆ, ಬಂದೇ ತೋರಿತು!
ಅಚ್ಚ ಹಸುರಿನ ಸಣ್ಣ ದ್ವೀಪ.
ಎನ್ನ ಕಗ್ಗವಿಗಿಂತಲೂ ಅದು
ದೊಡ್ಡದಲ್ಲ; ಮುಗಿಲ ಮುಟ್ಟುವ ೪೬೦
ಮೂರು ಮರಗಳು ಕಂಡುವಲ್ಲಿ.
ಮಲೆಯ ಮಾರುತ ಬೀಸುತಿತ್ತು
ನೀರು ಕೆಲದಲಿ ಹರಿಯುತಿತ್ತು
ಪುಟ್ಟ ಹೂಗಳು—ತಂಪುಗಾಳಿಯು
ಸುತ್ತ ಸೂಸುವ ಬಣ್ಣಬಣ್ಣದ
ಪುಟ್ಟ ಹೂಗಳು—ಇದ್ದವು.
ನೆರೆಯ ಗೋಡೆಯ ಪಕ್ಕದಲ್ಲಿ
ಮಿಂಚಿ ಈಸುವ ಮೀನ್ಗಳೆಲ್ಲ
ತುಂಬು ಹರುಷದಿ ಕಂಡು ಬಂದವು.
ಹದ್ದು, ಸುಂಟರಗಾಳಿಯೆದುರಿಸಿ ೪೭೦
ಎಂದು ಇಲ್ಲದ ರಭಸದಿಂದ
ನುಗ್ಗಿ ಹಾರಿತು ಮೇಲೆ ಮೇಲೆ.
ಕಡೆಗೆ ಕಂಬನಿ ತುಂಬಿ ಬಂದಿತು
ಮನವು ಕಳವಳಗೊಂಡಿತು.
ಏಕೆ ಸರಪಣಿ ಬಿಟ್ಟು ನಡೆದೆನೊ

ಎಂದು ನನ್ನನೆ ಹಳಿದುಕೊಂಡೆನು.
ಹೊರಗು ಒಳಗಡೆ ಗಡಿಬಿ ನಡೆದಿರೆ
ಸುತ್ತ ಕವಿದುದು ಪೆಟ್ಟಿದಾಗಿ.
ಯಾರ ಜೀವವನುಳಿಸಲೆಂದು
ಒಂದೆ ಬಗೆಯಲಿ ಹೊರಗೆ ದುಡಿದೆನೊ — ೧೮೦
ಅವರ ಹೆಣವನೆ ಹೂಳಲೋಸುಗ
　　ಅಗೆದ ಕುಳಿಯೊಳು ಇದ್ದುದು-
ಬಳಲಿ ಕುಂದಿದ ನನ್ನ ನೋಟಕೆ
　　ಅದುವೆ ಬಲು ನೆಮ್ಮದಿತ್ತು.

೧೪

ತಿಂಗಳಾದುವೊ, ವರುಷವಾದುವೊ,
ದಿನಗಳಾದುವೊ, ಲೆಕ್ಕವಿಲ್ಲ.
ಗಣಿಸಲಿಲ್ಲ; ಗವಿಯ ಕತ್ತಲೆ
ಮೋಸ ತಟ್ಟಿದ ನನ್ನ ಕಂಗಳ
ನೆರೆಯ ಬಿಡಿಸುವ ಜನ ಬಿಟ್ಟಿಸ.
ಕಟ್ಟಕಡೆಯಲಿ ನನ್ನ ಬಿಡುಗಡೆ- — ೧೯೦
　　ಗಾಗಿ ಬಂದರು ಆಳ್ಗಳು!
ಏಕೆ ಎಂದು ಕೇಳಲಿಲ್ಲ
ಎತ್ತ ಎಂಬುದ ಗಣಿಸಲಿಲ್ಲ.
ಕಡು ನಿರಾಸೆಯನೊಲಿದು ಒಲಿದೂ
ಕಟ್ಟುವಡೆವುದೊ, ಮುಕ್ತಿ ಪಡೆವುದೊ,
　　ಎಲ್ಲ ಒಂದೇ ಎನಿಸಿತು.
ಅವರು ಹತ್ತಿರ ಬರುವ ವೇಳೆಗೆ
ಬಂದು, ಕಟ್ಟನು ಕಡಿವ ವೇಳೆಗೆ
ಕಲ್ಲು ಗೋಡೆಗಳೆಲ್ಲ ಮನಸಿಗೆ
　　ಅಚ್ಚು ಮೆಚ್ಚಾಗಿದ್ದವು — ೨೦೦
　　ನನ್ನ ಸೊತ್ತಾಗಿದ್ದವು.
ಮರಳಿ ಮನೆಯಿಂ ಬಯ್ವರೇನೋ

## ಗಾಥಾಸಪ್ತಶತಿಯಿಂದ

೧

ಇನಿಯನ ಮೈಯಮೇಲಿದನೆರಚುವೆನೆಂದು
ಹಿಡಿತುಂಬ ಹುಡಿಯ ಹಿಡಿದಿರಲು
ಇನಿಯಳ ಕೈಯೊಳೆ ಗಂಧದ ನೀರಾದು-
ದಾನಂದ ಸಂಭ್ರಮ ಮಿಗಲು.

೨

ಈ ಚಿಕ್ಕ ಹರೆಯದೊಳೆಂತೆಮ್ಮ ಮನವನು
ಸೆಳೆವಳು ಗೌಡನ ಮಗಳು
ಬೆಳೆದ ಮೇಲಿನ್ನೇನನರ್ಥವನೆಸಗಳು
ನಂಜಿನೊಂದಗೆಯವೋಲಿವಳು.

೩

ಈ ಊರಿಗಿಹುದೆಲ್ಲ ಗೌಡನ ಮನೆಯೊಳು
ಬೆಳೆದೊಂದೆ ಪಾಟಲವಲ್ತೆ !
ಆ ಹೂವ ಮೈದುನನಿಷ್ಟೊಂದು ಮುಡಿಯೊಳು
ಮುಡಿವುದು ಸೊಗಸೇನು ಅತ್ತೆ ?

೪

ಒಟ್ಟು ಕುಟುಂಬವು ಒಡೆಯುವುದೆಂದಂಜಿ
ಭಾವನ ಕೇಡಿನ ಬಗೆಯ
ವಾಮಸ್ವಭಾವದ ಪತಿಯೊಡನುಸುರದೆ
ದಿನದಿನ ನವೆಯುವಳಾರ್ಯೆ.

ಎಸ್. ವಿ. ಪರಮೇಶ್ವರಭಟ್ಟ

ಸಾಕೇ ಎಂದರಾಗಲಿ ಅಥವಾ ಸಾರಿಗೆ ಉಪ್ಪು ಸಾಕೇ ಎಂದರಾಗಲಿ ಅವುಗಳನ್ನು ಎದುರಿಗಿಟ್ಟುಕೊಂಡು ನೋಡಿ ರುಚಿ ಹೇಳುವುದು ಸಾಧ್ಯವಿಲ್ಲ. ಪಾನಕದ ಹನಿಯೊಂದು ನಾಲಗೆಯ ಮೇಲೆ ಬಿದ್ದರೆ ಮಾತ್ರ ಸಕ್ಕರೆ ಸಾಕು ಎಂದಾಗಲಿ, ನಾಲಗೆಗೆ ಸಾರು ಸೋಕಿದಾಗ "ಅಯ್ಯೊ! ಸಾರಿಗೆ ಉಪ್ಪೇ ಹಾಕಿಲ್ಲ!" ಎಂದಾಗಲೀ ಹೇಳುವುದಕ್ಕೆ ಸಾಧ್ಯ. ಹಾಗೆಯೆ ಜಾಜಿಯ ಕಂಪನ್ನು ಅನುಭವಿಸಬೇಕಾದರೆ ಅದರ ಮೇಲಿನ ಗಾಳಿ ನಮ್ಮೆಡೆಗೆ ಬೀಸಿದ ಮೇಲಲ್ಲವೆ? ನೋಟವಾಗಲೀ ಶ್ರವಣವಾಗಲೀ ಹಾಗಲ್ಲ. ಬೆಳಕಿನ ಅಲೆ ಅಥವಾ ಧ್ವನಿಯ ಅಲೆ ಕಣ್ಣಿನ ಮೂಲಕ ಇಲ್ಲವೆ ಕಿವಿಯ ಮೂಲಕ ಮೆದುಳಿಗೆ ಹಾಯ್ದು ಸವಿಯನ್ನು ಅನುಭವಿಸುವಂತೆ ಮಾಡುತ್ತದೆ.

ರುಚಿ ಮತ್ತು ವಾಸನೆ ಬಹುಶಃ ರಾಸಾಯನಿಕ ಕ್ರಿಯೆಗಳಿರಬೇಕು. ನಾಲಗೆಯಲ್ಲಿರುವ ಸವಿಕುಡಿಗಳು (Taste-buds) ರುಚಿಯನ್ನು ಗುರುತಿಸುತ್ತವೆ. ನಾಲಗೆ ಮತ್ತು ಅಂಗುಳು ಇವುಗಳಲ್ಲಿ ಹರಡಿರುವ ಈ ಕುಡಿಗಳು ೯,೦೦೦ ದಿಂದ ೧೦,೦೦೦ ವರೆಗೆ ಮನುಷ್ಯನಲ್ಲಿವೆ. ನಾಲಗೆಯ ಪದರಪದರದಲ್ಲಿರುವ 'ಪಾಪಿಲೆ'ಯ (Palcillae) ಸುತ್ತಮುತ್ತ ಸವಿಕುಡಿಗಳಿವೆ. ನಾಲಗೆಯ ಬೇರೆ ಬೇರೆ ಭಾಗಗಳು ವಿವಿಧ ರುಚಿಯನ್ನು ಗುರುತಿಸುತ್ತವೆ. ನಾಲಗೆಯ ತುತ್ತತುದಿಯು 'ಸಿಹಿ' ರುಚಿಗೆ ಸೂಕ್ಷ್ಮವಾಗಿದ್ದರೆ ನಾಲಗೆಯ ಹಿಂಬಾಗ 'ಕಹಿ'ಯನ್ನೂ ಅಕ್ಕಪಕ್ಕಗಳು 'ಹುಳಿ'ಯನ್ನೂ ನಾಲಗೆಯ ಮುಂಭಾಗವು 'ಉಪ್ಪಿ'ನ ರುಚಿಯನ್ನೂ ಗುರುತಿಸುತ್ತವೆ. ಶರೀರವಿಜ್ಞಾನಿಗಳ ಬಹುಮತ ಅಭಿಪ್ರಾಯದಂತೆ 'ಸಿಹಿ' (Sweet) 'ಕಹಿ' (Bitter) ಹುಳಿ (Acid or Sour); ಮತ್ತು 'ಉಪ್ಪು' (Salt) ಎಂಬ ನಾಲ್ಕು ಸರಳ, ನಿರ್ದಿಷ್ಟ ಪ್ರಮುಖ ರುಚಿಗಳಿವೆಯೆಂದೂ, ಈ ಪ್ರಮುಖ ರುಚಿಗಳ ವಿಶೇಷ ಮಿಶ್ರಣದಿಂದ ಇತರ ರುಚಿಗಳನ್ನು ಉಂಟುಮಾಡಬಹುದೆಂದೂ ಹೇಳಬಹುದು. ಇತರ ಮನಶ್ಶಾಸ್ತ್ರನಿಪುಣರ ಅಭಿಪ್ರಾಯದಂತೆ 'ಕ್ಷಾರ' (Alkaline) ಮತ್ತು 'ಲೋಹ' (Metallic) ರುಚಿ ಇವೆರಡೂ ಸಹ-ರುಚಿಗಳೆಂದು ಹೇಳುವುದುಂಟು. ತಾಮ್ರ, ಬೆಳ್ಳಿ ಮತ್ತು ಪಾದರಸ ಈ ಲೋಹಗಳ ಮಿಶ್ರಣ ಅನುಭವ 'ಲೋಹ ರುಚಿ'ಯಾದರೆ ಸಿಹಿ ರುಚಿಯ ಭಾವನೆ 'ಕ್ಷಾರ ರುಚಿ'ಯಲ್ಲಿದೆಯೆಂದೂ ಕೆಲವು ತಜ್ಞರ ಅಭಿಪ್ರಾಯ. ಮೆಣಸಿನ ರುಚಿ ಏನು? ಶುಂಠಿಯ ರುಚಿ ಏನು? ಇವುಗಳನ್ನು ಬಾಯಲ್ಲಿ ಅಗಿದಾಗ ಖಾರ ಆಗುವುದಿಲ್ಲವೆ? ತಂಪು ಉಂಟಾಗುವುದಿಲ್ಲವೆ? ಎಂಬ ಪ್ರಶ್ನೆ ಸಾಧುವಾದುದೆ. ಇವುಗಳನ್ನು ಅಗಿದಾಗ ಉಂಟಾದ ರಸವನ್ನು ಸವಿಕುಡಿಗಳಾವುವೂ ಸ್ವೀಕರಿಸಿ ರುಚಿ ಸೂಚಿಸುವುದಿಲ್ಲವೆಂದೂ ಆದರೆ ಖರತ್ವಕ್ಕೆ ಸೂಕ್ಷ್ಮವಾದ ಸಂಪರ್ಕ ಪಡೆದಿರುವ ನಾಲಗೆಯ ಕೆಲವು ಭಾಗಗಳನ್ನು ಈ ರಸವು ಪ್ರಚೋದಿಸುವುದರಿಂದಲೇ, ಅಥವಾ

ಸೋವನ್ನು ಸೂಚಿಸುವ ನರಗಳ ಪ್ರಚೋದನೆಯಿಂದಲೇ ಈ ವಿಚಿತ್ರ ಅನುಭವ ಉಂಟಾಗುವುದೆಂದು ವಿಜ್ಞಾನಿಗಳ ಮತ.

ನಾಲಗೆಯು ಪದಾರ್ಥದ ರುಚಿಯನ್ನಷ್ಟೇ ಅಲ್ಲದೆ ಆಹಾರವು ಬಿಸಿಯಾಗಿದೆಯೆ, ಆರಿದೆಯೆ, ಮೃದುವಾಗಿದೆಯೆ ಇಲ್ಲ ಘಟ್ಟಿಯಾಗಿದೆಯೆ ಎನ್ನುವುದನ್ನೂ ಸೂಚಿಸುತ್ತದೆ. ಆಹಾರದ ರುಚಿಯು ಅದರ ಖರತ್ವವನ್ನು ಬಹುವಾಗಿ ಅವಲಂಬಿಸಿದೆ. ಬಿಸಿಯಾದ ಖೀರಿನ, ಆರಿದ ಪುಳಿಯೋಗರೆಯ ಸವಿಯ ಅನುಭವವೇ ಇದಕ್ಕೆ ಸಾಕ್ಷಿ. ಐಸ್‌ಕ್ಯಾಂಡಿ ಅಥವಾ ಆಲಿಕಲ್ಲನ್ನು ಬಾಯಲ್ಲಿ ಚಪ್ಪರಿಸಿದ ಕೆಲವು ನಿಮಿಷಗಳಾದ ಮೇಲೆ ಸುಲಭವಾಗಿ ಬೇವಿನ ರಸವನ್ನಾಗಲಿ ಹರಳೆಣ್ಣೆಯನ್ನಾಗಲಿ ಕಹಿರುಚಿಯು ಅರಿವಿಲ್ಲ ದಂತೆ ಎಣ್ಣೆಯ ವಾಕರಿಕೆ ಬಾರದಂತೆ ಸೇವಿಸಬಹುದು. ಮೂಗು ಕಟ್ಟಿದಾಗ ಆಹಾರದ ರುಚಿ ಸರಿಯಾಗಿ ತಿಳಿಯುವುದಿಲ್ಲ ಎಂಬುದು ಎಲ್ಲರ ಅನುಭವ; ಅಂದರೆ ರುಚಿಯ ಸಂಪೂರ್ಣ ಅನುಭವ ಬರಬೇಕಾದರೆ ಆಹಾರದ ವಾಸನೆಯೂ ಸೇರಿರಬೇಕು. ಆಹಾರದ ರಚನೆ, ಖರತ್ವ, ವಾಸನೆ ಇವೆಲ್ಲ ಸೇರಿದ ಮಿಶ್ರಣ ಅನುಭವ ರುಚಿ.

ಆಹಾರವು ಸಿಹಿಯಾಗಿದೆ ಎಂದಾಗ ಅದರೊಡನೆ ಸೇರಿರುವ ಸಕ್ಕರೆ ಅಥವಾ ಸಕ್ಕರೆಯ ಬಳಗಕ್ಕೆ ಸೇರಿದ ಇತರ ರಾಸಾಯನಿಕ ವಸ್ತುವೇ ಈ ಸಿಹಿ ರುಚಿ ಉಂಟು ಮಾಡಲು ಕಾರಣವೆನ್ನಬಹುದು. ಆಹಾರಪದಾರ್ಥವು ಸಿಹಿಯಾಗಬೇಕಾದರೆ ನಮಗೆ ಗೊತ್ತಿರುವ ಒಂದು ಚಿರಪರಿಚಿತ ವಸ್ತು ಸಕ್ಕರೆ. ಈ ನಿತ್ಯಬಳಕೆಯ ಪರಿಚಿತ ಸಕ್ಕರೆ ಯನ್ನಲ್ಲದೆ ಇತರ ಕೆಲವು ಸಾವಯವ ರಾಸಾಯನಿಕ ವಸ್ತುಗಳನ್ನು ಆಹಾರದೊಡನೆ ಬೆರಸಿದಾಗಲೂ ಸಕ್ಕರೆಯ ಪ್ರಭಾವಕ್ಕೂ ಮಿಗಿಲಾದ ಸಿಹಿ ರುಚಿ ಉಂಟಾಗುತ್ತದೆ. ಮೊದಲ ಮಹಾಯುದ್ಧದಲ್ಲಿ ಸಕ್ಕರೆಗೆ ಅಭಾವ ಬಂದಾಗ ಕೃತಕ ಸಿಹಿ ವಸ್ತುಗಳನ್ನು ತಯಾರಿಸುವುದರತ್ತ ವಿಜ್ಞಾನಿಗಳ ಆಸಕ್ತಿ ಹೊರಳಿತು. ಅನೇಕ ಸಂಶೋಧನೆಗಳ ಫಲವಾಗಿ ಅನೇಕ ಸಿಹಿ ರುಚಿ ಕೊಡುವ ರಾಸಾಯನಿಕ ವಸ್ತುಗಳನ್ನು ಪ್ರಯೋಗ ಶಾಲೆಯಲ್ಲಿ ತಯಾರಿಸಿ ಮಾರಾಟ ಮಾಡುವಷ್ಟು ಅಧಿಕಪ್ರಮಾಣದಲ್ಲಿ ತಯಾರಿಸ ಲಾಯಿತು. ಹಾಗೆ ತಯಾರಿಸಿದ ಯಾವ ವಸ್ತುವೂ ಸಕ್ಕರೆಯಂತೆ ದೇಹಪೋಷಣೆಯ ವಸ್ತುವಾಗಿರದೆ ಸಿಹಿ ರುಚಿ ಕೊಡುವ ವಸ್ತುಗಳಾಗಿದ್ದುವು. ಆಹಾರದೊಡನೆ ಬೆರಸಿ ಸವಿ ಅನುಭವಿಸಲು ಸಾಧ್ಯವಾಗಿತ್ತು. ಕೇವಲ ಅಲ್ಪಪ್ರಮಾಣದಲ್ಲಿ ಸಾಕಷ್ಟು ರುಚಿ—ಸಿಹಿ ರುಚಿ—ಕೊಡುವುದಲ್ಲದೆ ಸುಲಭವಾಗಿ ದೊರಕುವ ಮೂಲವಸ್ತುಗಳಿಂದ ಇವು ಗಳನ್ನು ಕಷ್ಟವಿಲ್ಲದೆ ತಯಾರಿಸಬಹುದು. ಇವುಗಳಿಗೆ ಯಾವ ವಿಧವಾದ ಅಹಿತವಾಸ ನೆಯೂ ಇರುವುದಿಲ್ಲ. ಅಂತಹ ಒಂದೆರಡು ವಸ್ತುಗಳ ಪರಿಚಯ ಪಡೆಯೋಣ.

### ಸಾಕರಿನ್ (Saccharin)

ಕೃತಕ ಸಿಹಿ ರಾಸಾಯನಿಕ ವಸ್ತುಗಳಲ್ಲಿ ಸಾಕರಿನ್ ಉತ್ತಮವಾದ ಪದಾರ್ಥ. ೧೮೭೯ ರಲ್ಲಿ ಐ. ರೆಮ್‌ಸನ್ (I. Remsen) ಮತ್ತು ಸಿ. ಫಾಲ್‌ಬರ್ಗ್ (C. Fahlberg) ಎಂಬುವರು ಮೊದಲಬಾರಿಗೆ ಇದನ್ನು ಕಂಡುಹಿಡಿದ ರೀತಿ ಸ್ವಾರಸ್ಯವಾಗಿದೆ. ಜಾನ್ ಹಾಪಕಿನ್ಸ್ (John Hopkins) ವಿಶ್ವವಿದ್ಯಾನಿಲಯದಲ್ಲಿ ರೆಮ್‌ಸನ್ ರಾಸಾಯನಿಕ ಪ್ರಾಧ್ಯಾಪಕ. ಆಗ ಪದವೀಧರನಾದ ಫಾಲ್‌ಬರ್ಗ್ ಹೆಚ್ಚಿನ ಸಂಶೋಧನೆಗಾಗಿ ರೆಮ್‌ಸನನನ್ನು ಕೂಡಿದ. ಒಂದು ಸಂಜೆ ಫಾಲ್‌ಬರ್ಗ್ ಪ್ರಯೋಗಮಂದಿರದಿಂದ ಮನೆಗೆ ಬಂದು ಊಟಕ್ಕೆ ಕುಳಿತು ಬ್ರೆಡ್ ಬಾಯಿಗೆ ಹಾಕಿದಾಗ ಅಪೂರ್ವ ಸಿಹಿಯಾಗಿ ಕಂಡು ಬಂದಿತು. ಬ್ರೆಡ್ ಅಲ್ಲದೆ ಇತರ ಯಾವ ಪದಾರ್ಥವನ್ನಾಗಲೀ ಆಹಾರವನ್ನಾಗಲೀ ಕೈಲಿ ತೆಗೆದುಕೊಂಡು ಬಾಯಿಗೆ ಸೋಕಿಸಿದಾಗ ಸಿಹಿ ರುಚಿ ಪ್ರಧಾನವಾಗಿ ಕಂಡುಬಂತು. ಆಶ್ಚರ್ಯಪಟ್ಟ ವಿಜ್ಞಾನಿ ಇದರ ಮೂಲವನ್ನು ಪತ್ತೆಹಚ್ಚಲು ತನ್ನ ಕೈ ಬೆರಳುಗಳನ್ನು ನಾಲಿಗೆಗೆ ಸೋಕಿಸಿದಾಗ ಸಿಹಿಯಾಗಿ ಕಂಡವು. ಅದೇ ರಾತ್ರಿ ಪ್ರಯೋಗಶಾಲೆಗೆ ಮರಳಿ ತಾನು ಉಪಯೋಗಿಸುತ್ತಿದ್ದ "ಆರ್ಥೋ ಟಾಲುಇನ್ ಸಲ್ಫನಮೈಡ್" (Ortho Toluene Sulphonamide) ಎಂಬ ರಾಸಾಯನಿಕ ವಸ್ತುವನ್ನು ಉತ್ಕರ್ಷಣ ಮಾಡುತ್ತಿದ್ದಾಗ ದೊರೆತ ಹೊಸ ವಸ್ತುವೇ ಇಷ್ಟು ಸಿಹಿ ರುಚಿ ಕೊಡಲು ಕಾರಣವೆಂದು ಕಂಡುಹಿಡಿದ. ಸೂಕ್ಷ್ಮವಾಗಿ ಪರಿಶೀಲಿಸಿದಾಗ ಆ ನವೀನ ವಸ್ತುವು ಬೇರೇನೂ ಅಲ್ಲದೆ ಆರ್ಥೋ ಸಲ್ಫೊ ಬೆಂನಾಯಿಕ್ ಇಮೈಡ್ (Ortho Sulpho Beneoic Imide) ಎಂಬುದು ಗೊತ್ತಾಯಿತು. ಈ ರಾಸಾಯನಿಕ ವಸ್ತುವೇ ಪರಿಚಿತ ಹೆಸರಾದ 'ಸಾಕರಿನ್' ಎಂದು ಮಾರಾಟವಾಗುತ್ತಿರುವುದು. ಈ ರಾಸಾಯನಿಕ ವಸ್ತುವನ್ನು ಈಗ ಅನೇಕ ವಿಧಾನಗಳಲ್ಲಿ ತಯಾರಿಸಬಹುದು. ಬಿಳಿಯ ಹರಳಾದ ಇದು ನೀರಿನಲ್ಲಿ ಬಹು ಸ್ವಲ್ಪಭಾಗ ಕರಗುತ್ತದೆ. ಒಂದು ಭಾಗ ಸಾಕರಿನ್ ೪೦೦ ಭಾಗ ನೀರಿನಲ್ಲಿ ಕರಗುತ್ತದೆ. ತಣ್ಣಗಿರುವ ನೀರಿನಲ್ಲಿ ಬಹಳ ಕಮ್ಮಿ ಕರಗುತ್ತದೆ. ಆದರೆ ಕರಗುವ ಗುಣ ಎಷ್ಟು ಕಿರಿದೋ ಅದರ ರುಚಿ ಅಷ್ಟೇ ಹಿರಿದು. ಒಂದು ಭಾಗ ಸಾಕರಿನ್ ೧,೦೦,೦೦೦ ಭಾಗ ನೀರಿನಲ್ಲಿದ್ದರೂ ರುಚಿ ನೋಡಿ ಸಾಮಾನ್ಯ ಮನುಷ್ಯನೂ ಪತ್ತೆ ಹಚ್ಚಬಹುದು. ಅದೇ ಒಂದು ಭಾಗ ಸಕ್ಕರೆಯು (ಸುಕ್ರೋಸ್) ೨೦೦ ಭಾಗಕ್ಕಿಂತ ಹೆಚ್ಚಿಗೆ ನೀರಿನಲ್ಲಿದ್ದರೆ ರುಚಿಯಿಂದ ಗುರುತಿಸುವುದು ಕಷ್ಟ. ಆದ್ದರಿಂದ ಸಾಕರಿನಿನ ಸಿಹಿ ಪ್ರಭಾವವು ಸಕ್ಕರೆಯ ರುಚಿಯೊಡನೆ ಹೋಲಿಸಿದರೆ ನಾನೂರರಷ್ಟು ಅಧಿಕ. ಸಾಕರಿನ ವಸ್ತುವನ್ನು ಉಪಯೋಗಿಸುವುದರಲ್ಲಿ ಒಂದು ಸಣ್ಣ ದೋಷವಿದೆ. ಸಾಕರಿನ್ ತಿಂದನಂತರ ನಾಲಗೆಯಲ್ಲಿ ಲೋಹದ ರುಚಿ (Metallic Taste) ಅಥವಾ ರಾಸಾಯನಿಕ ರುಚಿ (Chemical Taste) ಉಳಿಯುತ್ತದೆ.

ಒಂದು ಕೋಲಿನ ಉದ್ದವೆಷ್ಟು ಎಂದರಾಗಲೀ ಒಬ್ಬ ಮನುಷ್ಯನ ತೂಕವೆಷ್ಟು ಎಂದರಾಗಲೀ ಉತ್ತರ ಹೇಳಬಹುದು; ಆದರೆ ಒಂದು ಪದಾರ್ಥವನ್ನು ಕೈಗಿತ್ತು ಇದರ ಸಿಹಿ ಎಷ್ಟು ಎಂದರಾಗಲೀ ಅಥವಾ ಆಹಾರವನ್ನು ಬಾಯಿಗೆ ಹಾಕಿ ಎಷ್ಟು ಸಿಹಿ ಯಾಗಿದೆ ಎಂದು ಪ್ರಶ್ನಿಸಿದರೆ ಉತ್ತರ ಹೇಳುವುದು ಬಹಳ ಕಷ್ಟ. ಸಿಹಿರುಚಿಯನ್ನು ಅಳೆಯಲು—ಅದೇಕೆ, ಎಲ್ಲ ಬಗೆಯ ರುಚಿಯನ್ನು ಅಳೆಯಲು ನಿಗದಿಯಾದ ಒಂದು ಅಳತೆಯಿಲ್ಲದಿರುವುದೇ ಇದಕ್ಕೆ ಕಾರಣ. ಆಹಾರದ ರುಚಿಯನ್ನು ಬೇರೆ ಯಾವುದಾ ದರೂ ಆಹಾರದ ರುಚಿಯೊಡನೆ ಹೋಲಿಸಿ ಬೇಕಾದರೆ ಉತ್ತರ ಹೇಳಬಹುದು. ಹಾಗೆ ಹೇಳುವಾಗ ಇದಕ್ಕಿಂತ ಅದು ಹೆಚ್ಚು ಸಿಹಿ ಎಂದಾಗಲೀ ಅಥವಾ ಇದು ಸಿಹಿಯಾಗಿಲ್ಲ ಉಪ್ಪಾಗಿದೆ ಎಂದಾಗಲೀ ಹೇಳಬಹುದು. ಒಂದೇ ರುಚಿಕೊಡುವ ಪದಾರ್ಥಗಳೆರಡ ರಲ್ಲಿ ಆಹಾರಗಳೆರಡರ ರುಚಿ ನೋಡಿ ಒಂದು ಮತ್ತೊಂದಕ್ಕಿಂತ ರುಚಿಯಲ್ಲಿ ತೀಕ್ಷ್ಣವಾಗಿದೆ ಎಂದು ಮಾತ್ರ ಹೇಳಬಹುದು. ಉದಾಹರಣೆಗೆ ಸಾಕರಿನ್ ಸಿಹಿ ವಸ್ತು ಎಂದು ಗೊತ್ತಷ್ಟೆ. ಗೊತ್ತಾದ ತೂಕದ ಈ ವಸ್ತುವನ್ನು ದ್ರವದಲ್ಲಿ ಕರಗಿಸಿ ಎಷ್ಟು ಭಾಗ ಸಕ್ಕರೆ ಕರಗಿದ ದ್ರಾವಣದೊಡನೆ ಇದರ ರುಚಿ ಸರಿನಿಲ್ಲಬಹುದು ಎಂದು ಮಾತ್ರ ಲೆಕ್ಕ ಹಾಕಬಹುದು. ಹೀಗೆ ಮಾಡಿ ಉತ್ತರ ಹೇಳುವುದೂ ಅಷ್ಟು ಸರಿಯಲ್ಲ. ಕಾರಣ, ರುಚಿ ಹೇಳುವ ಸಾಮರ್ಥ್ಯ ಎಲ್ಲರಲ್ಲೂ ಒಂದೇ ಬಗೆಯಾಗಿಲ್ಲ. ಒಬ್ಬರಿಗೆ ತುಂಬ ಸಿಹಿಯಾಗಿ ಕಂಡುಬಂದ ವಸ್ತುವಾಗಲೀ, ಆಹಾರವಾಗಲೀ ಮತ್ತೊಬ್ಬರಿಗೆ ಅಷ್ಟು ಸಿಹಿಯಾಗಿ ಕಾಣಿಸದಿರಬಹುದು. ಇದು ನಮ್ಮ ನಿತ್ಯದ ಅನು ಭವ. ಇದೂ ಅಲ್ಲದೆ ರುಚಿಯು ಅವರವರ ವಯಸ್ಸು, ಲೈಂಗಿಕ ಭೇದ, ಮನೋಧರ್ಮ ಇವುಗಳನ್ನವಲಂಬಿಸಿದೆ. ಕಹಿ, ಸಿಹಿ ಮತ್ತು ಹುಳಿ ಈ ರುಚಿಗಳನ್ನು ಬಹು ಸೂಕ್ಷ್ಮ ವಾಗಿ ಹೆಂಗಸರು ಗುರುತಿಸಬಲ್ಲರಾದರೆ, ಉಪ್ಪಿನ ರುಚಿಯನ್ನು ಪತ್ತೆ ಹಚ್ಚುವುದರಲ್ಲಿ ಗಂಡಸರು ನಿಸ್ಸೀಮರು ಎಂದು ವಿಜ್ಞಾನಿಗಳ ಅನುಭವದ ಅಭಿಪ್ರಾಯ.

ಇಷ್ಟೆಲ್ಲ ತೊಡಕಿದ್ದರೂ ರುಚಿಯನ್ನು ಅಳೆಯಲು ಎರಡು ಮಾರ್ಗಗಳನ್ನನುಸರಿಸ ಲಾಗುತ್ತಿದೆ. ಎಷ್ಟು ಕನಿಷ್ಠಭಾಗ ವಸ್ತುವು ರುಚಿಯನ್ನು ಸೂಚಿಸಬಲ್ಲದು ಎಂಬುದನ್ನು ಕಂಡುಹಿಡಿದು (ಇದಕ್ಕೆ Threshold Concentration ಎನ್ನುತ್ತಾರೆ). ಸಕ್ಕರೆಯ ಎಷ್ಟು ಕನಿಷ್ಠಭಾಗವು ರುಚಿಯನ್ನು ಸೂಚಿಸಬಲ್ಲದು ಎಂಬುದನ್ನು ಗೊತ್ತುಮಾಡಿ ಎರಡನ್ನೂ ಹೋಲಿಸುವುದು ಒಂದು ವಿಧಾನ. ನೇಕಡ ಎರಡು ಭಾಗ ಸಕ್ಕರೆಯ ದ್ರಾವಣವನ್ನು ತಯಾರಿಸಿ ಯಾವ ವಸ್ತುವಿನ ಸಿಹಿ ರುಚಿ ಅಳೆಯಬೇಕೋ ಅದರ ತೀಕ್ಷ್ಣ ಹಾಗೂ ದುರ್ಬಲ ದ್ರಾವಣವನ್ನು ತಯಾರಿಸುವುದು. ಈ ತೀಕ್ಷ್ಣ ಹಾಗೂ ದುರ್ಬಲ ದ್ರಾವಣಗಳ ನಡುವಣ ಯಾವ ದ್ರಾವಣವು ಎರಡು ಭಾಗ ಸಕ್ಕರೆಯ

ದ್ರಾವಣದೊಡನೆ ಸರಿಬರುವುದು ಎಂದು ಹೋಲಿಸುವುದು ಎರಡನೆಯ ವಿಧಾನ. ಇವೆರಡೂ ಸಾಧುವಾದ ಮಾರ್ಗಗಳಾದರೂ ವಿವಿಧ ರುಚಿಯನ್ನು ನೆನಪಿನಲ್ಲಿಟ್ಟು ಕೊಳ್ಳುವುದು ಕಷ್ಟ; ಅಲ್ಲದೆ ಮೇಲೆ ಹೇಳಿದಂತೆ ರುಚಿ ಹೇಳುವ ಸಾಮರ್ಥ್ಯ ಎಲ್ಲರಲ್ಲೂ ಒಂದೇ ಬಗೆಯಾಗಿಲ್ಲ. ಬೇರೆ ಮಾರ್ಗವಿಲ್ಲದ್ದರಿಂದ ಈ ಎರಡು ಮಾರ್ಗಗಳನ್ನೇ ಅನುಸರಿಸಬೇಕಾಗಿದೆ. ಸಾಧ್ಯವಾದಷ್ಟು ಉತ್ತಮ ಫಲಿತಾಂಶ ದೊರೆಯಬೇಕಾದರೆ ಅನೇಕರನ್ನು ಆಹ್ವಾನಿಸಿ ಅವರ ರುಚಿಯ ಅಭಿಪ್ರಾಯ ಪಡೆದು ಅನೇಕ ಪ್ರಯೋಗ ಗಳನ್ನು ನಡೆಸಿದ ನಂತರ ಗೊತ್ತುಮಾಡಬಹುದು. ಸಾಕರಿನಿನ ಬಗ್ಗೆ ಹೀಗೆ ಮಾಡಿ, ಸಕ್ಕರೆಗಿಂತ ಸುಕ್ರೋಸ್ ೪೦೦-೬೦೦ ಬಾರಿ ಅಧಿಕ ಸಿಹಿ ರುಚಿಯುಳ್ಳದ್ದು ಎಂದು ತಿಳಿದುಬಂದಿದೆ. ಸಾಕರಿನ್ ನೀರಿನಲ್ಲಿ ಬಹಳ ಸ್ವಲ್ಪ ಕರಗಿದರೂ ಅದರಲ್ಲಿ ಸೋಡಿಯಂ (Sodium) ಎಂಬ ಲೋಹ ಸೇರಿದ್ದರೆ (ಇದನ್ನು Sodium Salt of Saccharin ಎನ್ನುತ್ತಾರೆ). ನೀರಿನಲ್ಲಿ ಸುಲಭವಾಗಿ ಕರಗುತ್ತದಲ್ಲದೆ ಸಾಕರಿನಷ್ಟೇ ಸಿಹಿ ರುಚಿ ಕೊಡುತ್ತದೆ. ಮಧುರಮೂತ್ರ ರೋಗದಲ್ಲಿ (Diabetes) ರೋಗಿಯು ಶರ್ಕರಪದಾರ್ಥ ವನ್ನಾಗಲೀ ಸಕ್ಕರೆಯನ್ನಾಗಲೀ ಉಪಯೋಗಿಸಬಾರದು. ಅಂತಹ ವೇಳೆಯಲ್ಲಿ ಆಹಾರವು ರುಚಿಯಾಗಿರಲು ಸಾಕರಿನನ್ನು ಉಪಯೋಗಿಬಹುದು. ಇದರಿಂದ ದೇಹಕ್ಕೆ ಕೆಡಕೇನೂ ಆಗದೆ ರುಚಿಯಾದ ಆಹಾರವನ್ನು ಸೇವಿಸಿದೆನೆಂಬ ಸಮಾಧಾನವು ಇರುತ್ತದೆ.

## ಡಲ್‌ಸಿನ್ (Dulcin)

೧೮೯೨ ರಲ್ಲಿ ಮೊದಲಬಾರಿಗೆ ತಯಾರಿಸಿದ ಈ ರಾಸಾಯನಿಕ ವಸ್ತುವು ಸಕ್ಕರೆಗಿಂತ (ಸುಕ್ರೋಸ್) ೨೦೦ ಬಾರಿ ಸಿಹಿಯಾದುದು. ಸಾಕರಿನ್ ತಿಂದನಂತರ ಉಳಿಯುವ ಲೋಹದ ರುಚಿ ಅಥವ ರಾಸಾಯನಿಕ ರುಚಿ ಡಲ್‌ಸಿನ್ ಉಪಯೋಗಿಸಿ ದಾಗ ಇರುವುದಿಲ್ಲ. ನೀರಿನಲ್ಲಿ ಕರಗುವ ಈ ಸಿಹಿರುಚಿಕೊಡುವ ಅನಪಾಯಕಾರಕ ವಸ್ತುವನ್ನು ಸಾಕರಿನ್ನಿಗೆ ಬದಲಾಗಿ ಉಪಯೋಗಿಸಬಹುದು. "ಪಾರಾ ಈಥಾಕ್ಸಿ ಫಿನೈಲ್ ಯೂರಿಯಾ" (Para Ethoxy Phenyl Urea) ಅಥವಾ ಡಲ್‌ಸಿನ್ ಅಲ್ಲದೆ ಇತರ ಅನೇಕ ರಾಸಾಯನಿಕ ವಸ್ತುಗಳು ಹೆಚ್ಚಿನ ತೀಕ್ಷ್ಣತೆಯಿಂದಿರುವ ಸಿಹಿ ರುಚಿ ಯನ್ನು ಕೊಡುತ್ತವೆ. ಅಂತಹ ವಸ್ತುಗಳಲ್ಲಿ "ಪೆರಿಲಾ ಆಲ್ಡಿಹೈಡ್ ಆಂಟಿ ಆಲ್ ಡಾಕ್ಸೈಮ್" (Perilla Aldehyde Anti Aldoxime) ಎಂಬುದು ಒಂದು. ಪೆರಿಲ್ಲಾ ಎಣ್ಣೆ (Perilla Oil) ಯಿಂದ ದೊರಕುವ ಈ ರಾಸಾಯನಿಕ ವಸ್ತುವು ಸಾಮಾನ್ಯ ಸಕ್ಕರೆಗಿಂತ ೨,೦೦೦ ಬಾರಿ ಹೆಚ್ಚು ಸಿಹಿ ರುಚಿ ಕೊಡುತ್ತದೆಂದು ೧೯೨೦ ರಲ್ಲಿ ಜಪಾನಿನ ವಿಜ್ಞಾನಿಗಳು ತಿಳಿಸಿದರು. ಇದರ ವಾಸನೆಯೂ ಅಷ್ಟೇ ತೀಕ್ಷ್ಣವಾಗಿ

ರುವುದರಿಂದ ಈ ವಸ್ತುವನ್ನು ರುಚಿಗೆ ಬದಲಾಗಿ ಸುಗಂಧತೈಲದಂತೆ ಉಪಯೋಗಿಸಬಹುದು.

ಅನಿಲಿನ್ (Aniline) ಬಣ್ಣ ತಯಾರಿಕೆಯಲ್ಲಿ 'ನೈಟ್ರನಿಲಿನ್' (Nitraniline) ಎಂಬುದು ಮಧ್ಯವರ್ತಿಯಾಗಿ ಉಪಯೋಗಿಸುವ ವಸ್ತು. ಈ ವಸ್ತುವನ್ನು (ನೈಟ್ರನಿಲಿನ್) ಮೂಲವಾಗಿಟ್ಟು ಇತರ ರಾಸಾಯನಿಕ ವಸ್ತುಗಳನ್ನು ತಯಾರಿಸಿದಾಗ ಕೆಲವು ಸಿಹಿ ರುಚಿ ಕೊಡಬಲ್ಲದೆಂದು ಲೀಡನ್ (Leyden) ವಿಶ್ವವಿದ್ಯಾನಿಲಯದಲ್ಲೂ ಹಾಗೂ ಹಾಲೆಂಡ್ ದೇಶದ ಕೈಗಾರಿಕಾ ಸಂಶೋಧನಾಲಯಗಳಲ್ಲೂ ಕಂಡುಹಿಡಿದರು. ಅಂತಹ ವಸ್ತುಗಳಲ್ಲಿ ಒಂದಾದ 'ಪ್ರೊಪಾಕ್ಸಿ ನೈಟ್ರನಿಲಿನ್' (Propoxy Nitraniline) ಎಂಬುದು ನಿತ್ಯಬಳಕೆಯ ಸಕ್ಕರೆಗಿಂತ ೪೧೦೦ ಬಾರಿ ಅಥವಾ ಸಾಕರಿನ್‌ಗಿಂತ ೮-೧೦ ಬಾರಿ ಅಧಿಕ ರುಚಿಯಾದುದು. ಇದುವರೆಗೆ ತಿಳಿದಿರುವ ಸಿಹಿ ರಾಸಾಯನಿಕ ವಸ್ತುಗಳಲ್ಲೆಲ್ಲಾ ಅತ್ಯಧಿಕ ರುಚಿಯುಳ್ಳದ್ದು. ಇದನ್ನು ಸುಲಭವಾಗಿ ತಯಾರಿಸಬಹುದಲ್ಲದೆ ಇದರ ಉಪಯೋಗದಿಂದ ದೇಹಕ್ಕೆ ಕೆಡಕೇನೂ ಉಂಟಾಗುವುದಿಲ್ಲ. ಇದೇನೂ ವಿಷವಸ್ತುವಲ್ಲ. ಹಾಗೆಯೇ ಕಾಯಿಸಿದಾಗ ಅಥವಾ ಬಿಸಿನೀರಿನಲ್ಲಾಗಲೀ, ಆಮ್ಲದೊಡನಾಗಲೀ ಕಾಯಿಸಿದಾಗ ವಿಭಜನೆ ಹೊಂದುವುದಿಲ್ಲ. ಕಿತ್ತಲೆ ಹಣ್ಣಿನ ಬಣ್ಣದಂತಿರುವ ಈ ಹರಳುಗಳು ನೀರಿನಲ್ಲಿ ಹೆಚ್ಚಾಗಿ ಕರಗದಿದ್ದರೂ ಸಾಮಾನ್ಯ ಉಷ್ಣಾಂಶವಿದ್ದಾಗ ಒಂದು ಲೀಟರ್ ನೀರಿನಲ್ಲಿ ೦.೧೩೬ ಗ್ರಾಂ ತೂಕ ಕರಗುತ್ತದೆ. ಹಾಗೆ ದೊರೆತ ದ್ರವಣದ ರುಚಿ ನೇಕಡ ಐವತ್ತು ಭಾಗ ಸಕ್ಕರೆ ಇರುವ ಪಾಕದ ರುಚಿಗೆ ಸಮಾನ. ಅಂದ ಮೇಲೆ ಹಲ್ವ ತಯಾರಿಕೆಯಲ್ಲಿ, ಜಾಮ್ (Jam) ತಯಾರಿಕೆಯಲ್ಲಿ, ಹಣ್ಣಿನ ಪಾನೀಯಗಳ ತಯಾರಿಕೆಯಲ್ಲಿ ಹರಳಿನ ಬಣ್ಣ ಎಲ್ಲಿ ಬರುವುದೋ ಎಂಬ ಭಯವಿಲ್ಲದೆ ಉಪಯೋಗಿಸಬಹುದು. ಅತ್ಯಂತ ಕಡಿಮೆ ಪ್ರಮಾಣದಲ್ಲಿ ಬಳಸಿ ಅತ್ಯಧಿಕ ಸಿಹಿ ರುಚಿ ಪಡೆಯಬಹುದು.

ಸಾವಯವ ರಾಸಾಯನಿಕ ವಸ್ತುಗಳ ರಚನೆ ಮತ್ತು ಸಿಹಿ ರುಚಿ ಇವುಗಳ ಸಂಬಂಧವನ್ನು ಕಂಡುಹಿಡಿಯುವ ಯತ್ನ ಸಾಗಿದೆ. ಸಿಹಿ ರುಚಿ ಕೊಡುವ ಸಾಕರಿನ ವಸ್ತುವನ್ನು ಮಾದರಿಯಾಗಿಟ್ಟುಕೊಂಡು ಅದರ ರಚನೆಯಲ್ಲಿ ಬದಲಾವಣೆ ಮಾಡುತ್ತಾ ಹೊಸ ರಾಸಾಯನಿಕ ವಸ್ತುಗಳನ್ನು ತಯಾರಿಸಿ ಸಿಹಿ ರುಚಿ ಕೊಡಲು ಯಾವ ರೀತಿ ಅಣುಗಳ ಜೋಡಣೆ ಇರಬೇಕು ಎಂಬುದರ ಬಗ್ಗೆ ಸಂಶೋಧನೆ ನಡೆದಿದೆ. ಹಾಗೆ ದೊರೆತ ಅನೇಕ ರಾಸಾಯನಿಕ ವಸ್ತುಗಳಲ್ಲಿ ಕೆಲವು ಸಿಹಿ, ಕೆಲವು ಕಹಿ ಮತ್ತೆ ಕೆಲವು ಸಪ್ಪೆಯಾಗಿ ಕಂಡುಬಂದವು. (ಚಿತ್ರ ೧ ನೋಡಿ.)

ಯೂರಿಯಾ (Urea) ಎಂಬ ರಾಸಾಯನಿಕ ವಸ್ತುವನ್ನು ಮೂಲವಾಗಿಟ್ಟು

ತಯಾರಿಸಿದ ಇತರ ವಸ್ತುಗಳು ರುಚಿಯ ವಿವರವನ್ನು ಚಿತ್ರ ೨ ರಲ್ಲಿ ನೋಡಬಹುದು. ಅಂತೆಯೇ 'ಹೈಡ್ರಾಕ್ಸಿ ನೈಟ್ರನಿಲಿನ್' (Hydroxy Nitraniline) ಎಂಬ ರಾಸಾಯನಿಕ ವಸ್ತುವನ್ನು ಮೂಲವಾಗಿಟ್ಟು ತಯಾರಿಸಿದ ಇತರ ವಸ್ತುಗಳ ರುಚಿಯನ್ನು ಚಿತ್ರ ೩ ರಲ್ಲಿ ಕಾಣಬಹುದು.

ಈ ಪ್ರಯೋಗಗಳಿಂದ ತಿಳಿದುಬರುವ ಅಂಶವೆಂದರೆ ರಾಸಾಯನಿಕ ವಸ್ತುವಿನ ರಚನೆಗೂ, ರುಚಿಗೂ ಸಂಬಂಧವಿಲ್ಲ. ಸಕ್ಕರೆಯ ಸ್ವರೂಪವೇ ಬೇರೆ, ಸಾಕರಿನ್ ರಚನೆಯೇ ಬೇರೆ, ಡಲ್‌ಸಿನ್ ರಾಸಾಯನಿಕ ಸೂತ್ರವೇ ಬೇರೆ. ಇದೇ ಸಾಕ್ಷಿ. ಅಷ್ಟೇ ಅಲ್ಲದೆ ಒಂದು ರಾಸಾಯನಿಕ ವಸ್ತುವಿನ ರಚನೆಯಲ್ಲಿ ಅಲ್ಪಸ್ವಲ್ಪ ಬದಲಾವಣೆ ಮಾಡಿದರೆ ದೊರೆವ ವಸ್ತುಗಳ ರುಚಿಯು ವಿವಿಧ. ಚಿತ್ರ ೧ ಮತ್ತು ೨ ಇವುಗಳನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ರಾಸಾಯನಿಕ ವಸ್ತುವಿನ ರಚನೆ ಮತ್ತು ರುಚಿ ಇವುಗಳ ಬಗ್ಗೆ ಹೆಚ್ಚಿನ ಸಂಶೋಧನೆ ಅಗತ್ಯ; ಹಾಗಾದರೆ ಹೆಚ್ಚು ಬೆಳಕು ಕಂಡೀತು ರುಚಿಯ ಬಗ್ಗೆ.

ಬಿ. ಎ. ಸತ್ಯನಾರಾಯಣರಾವ್.

## ಗ್ರಂಥಋಣ

1. MORRIS B. JACOBS: *Food and Food Products.*
2. *Discovery*, June, 1949.
3. SCHMIDT: *Organic Chemistry.*

---



ಸಾಕರಿನ್ (೪೪೦)



ಪಾ. ಈಥಾಕ್ಸಿ ಸಾಕರಿನ್ (ಸಪ್ಪೆ)

ಪಾ. ನೈಟ್ರೊಸಾಕರಿನ್ (ಕಹಿ)



ಚಿತ್ರ ೧



ಆ. ಟಾಲಿಲ್ ಯೂರಿಯಾ (ಸಪ್ಪೆ)



ಮೆ. ಟಾಲಿಲ್ ಯೂರಿಯಾ (ಕಹಿ)



ಪಾ. ಟಾಲಿಲ್ ಯೂರಿಯಾ (ಸಿಹಿ)



ಡಲ್‌ಸಿನ್ (೨೦೦)

ಚಿತ್ರ ೨



ಹೈಡ್ರಾಕ್ಸಿ ನೈಟ್ರನಿಲಿನ್ (೧೨೦)



ಪ್ರೊಪಾಕ್ಸಿ ನೈಟ್ರನಿಲಿನ್ (೪೧೦೦)

ಚಿತ್ರ ೩. ಅತ್ಯಧಿಕ ಸಿಹಿರುಚಿಯುಳ್ಳ ರಾಸಾಯನಿಕ ವಸ್ತು

ಶೌರ್ಯ ಮುಂತಾದುವು ಆತ್ಮದ ಗುಣಗಳೇ ಹೊರತು, ಆಕೃತಿಯ ಗುಣಗಳಲ್ಲ; ಹಾಗೆಯೇ 'ಮಾಧುರ್ಯ' ಮುಂತಾದುವು ರಸದ ಗುಣಗಳೇ ಹೊರತು ಅಕ್ಷರ ಮುಂತಾದುವುಗಳನ್ನು ಅವಲಂಬಿಸುವವಲ್ಲ. ಆದರೂ ಶೌರ್ಯಕ್ಕೆ ಅನುಗುಣವಾದ ಆಕಾರಮಹತ್ತ್ವವನ್ನು ನೋಡಿದಾಗ '(ದೇಹದ) ಆಕಾರವೇ ಶೂರವಾಗಿದೆ' ಎಂದು

---

ಪದರಚನೆಯೇ ರೀತಿಯಾದುದರಿಂದ ಕಾವ್ಯಕ್ಕೆ ರೀತಿಯೇ ಆತ್ಮವೆಂದಂತಾಗುತ್ತದೆ. ವಾಮನನು 'ಆತ್ಮ'ವೆಂಬ ರೂಪಕವನ್ನು ಅತಿಯಾಗಿ ಹಿಂಪುವುದಕ್ಕೆ ಹೋಗಿಲ್ಲ: 'ಸಾರ'ವೆಂಬ ಸಾಮಾನ್ಯಾರ್ಥದಲ್ಲಿ ಮಾತ್ರ ಉಪಯೋಗಿಸಿದ್ದಾನೆ. ಗುಣಪ್ರಕಟನೆಗೆ ರೀತಿ ಅಗತ್ಯವೆಂದು ಸ್ಥೂಲವಾಗಿ ತಿಳಿಸುವುದರ ಜತೆಗೆ ಹತ್ತು ಶಬ್ದಗುಣಗಳನ್ನೂ ಹತ್ತು ಅರ್ಥಗುಣಗಳನ್ನೂ, ವಿವರಿಸಿದ್ದಾನೆ. ರೀತಿಯ ಮೂರು ಪ್ರಕಾರಗಳನ್ನು (ವೈದರ್ಭೀ, ಗೌಡೀ, ಮತ್ತು ಪಾಂಚಾಲಿ) ವಿವೇಚಿಸಿದ್ದಾನೆ. ಅವನ ಪ್ರಕಾರ ದೀಪ್ತರಸತ್ವವು ಅರ್ಥದ ಅಥವಾ ಪ್ರತಿಪಾದ್ಯ ವಿಷಯದ ಒಂದು ಗುಣ; 'ಕಾಂತಿ'ಯೆಂದು ಅದಕ್ಕೆ ವಾಮನನು ಹೆಸರಿತ್ತಿದ್ದಾನೆ. ಗುಣವಿಲ್ಲದೆ ಕಾವ್ಯಸೌಂದರ್ಯವೇ ಜನಿಸಲಾರದೆಂಬ ವಾಮನನ ಮೂಲಸೂತ್ರದಂತೆ ದೀಪ್ತರಸತ್ವವೆಂಬ ಅರ್ಥಗುಣಕ್ಕೂ ಪ್ರಾಧಾನ್ಯವಿರುವ ವಿಷಯದಲ್ಲಿ ಸಂದೇಹವಿಲ್ಲ. ಆದರೆ ಅವನು ರಸವೊಂದೇ ಕಾವ್ಯದ ಪ್ರತಿಪಾದ್ಯವಿಷಯವೆಂದಾಗಲಿ, ರಸವು ಕೇವಲ ಸಹೃದಯನ ಚಿತ್ತಗತವಾದುದೆಂದಾಗಲಿ ನಂಬುವವನಲ್ಲ. ರಸಕ್ಕೆ ಕಾವ್ಯದಲ್ಲಿ ಅಲಂಕಾರಕ್ಕಿಂತ ಹೆಚ್ಚಿನ ಸ್ಥಾನವನ್ನು ವಾಮನನು ಕೊಡುವುದಕ್ಕೆ ರಸವು ಅಲಂಕಾರಕ್ಕಿಂತ ಅಂತರಂಗಭೂತವಾದುದೆಂಬ ಅವನ ಸಿದ್ಧಾಂತವೇ ವ್ಯಕ್ತವಾಗಿದೆ. ರಸವಿಲ್ಲದ ಕಾವ್ಯವನ್ನು ಅಥವಾ ಕಾಂತಿಗುಣವಿಲ್ಲದ ಕಾವ್ಯವನ್ನು ವಾಮನನು ಗ್ರಾಹ್ಯವೆನ್ನುವನೇ ಎಂಬ ಪ್ರಶ್ನೆಗೆ 'ಇಲ್ಲ'ವೆಂದು ಖಚಿತವಾಗಿ ಹೇಳಬಹುದು. ಏಕೆಂದರೆ ಅವನೊಪ್ಪುವ ಸರ್ವಗುಣಭರಿತ ವೈದರ್ಭೀರೀತಿಯಲ್ಲಷ್ಟೇ ಅಲ್ಲ, ನ್ಯೂನಗುಣಯುತವಾದ ಗೌಡೀರೀತಿಯಲ್ಲಿಯೂ ಕಾಂತಿಗುಣಕ್ಕೆ ಪ್ರವೇಶವುಂಟು. ಪಾಂಚಾಲೀರೀತಿಯಲ್ಲಿ ಇಲ್ಲವಲ್ಲಾ ಎಂದರೆ, ಅದು 'ಪುರಾಣಚ್ಛಾಯೆ'ಯಿಂದ ಕೂಡಿದ ಶಿಥಿಲರಚನೆ, ಗ್ರಾಹ್ಯವೇನೂ ಅಲ್ಲ ಎಂದು ವಾಮನನೇ ತಿಳಿಸಿದ್ದಾನೆ. ವಾಮನನ ಅಭಿಪ್ರಾಯದಲ್ಲಿ ಪುರಾಣಕಥೆಗಳ ಕಾವ್ಯಗುಣ ಅಲ್ಪ. ವಾಮನನು ರೀತಿಗಳನ್ನು ನಿರ್ದೇಶಿಸಲು ಗುಣಗಳನ್ನೇ ಆಶ್ರಯಿಸಿದರೂ ಗುಣವಿಶಿಷ್ಟವಾದ **ಪದರಚನೆ** ಅಥವಾ ರೀತಿ (=*Style*)ಗೆ, ಅದರಲ್ಲೂ ಸರ್ವಗುಣಸಂಪನ್ನವಾದ ವೈದರ್ಭೀರೀತಿಗೆ, ಪರಮಪ್ರಾಶಸ್ತ್ಯವನ್ನು ಕೊಡುವುದು ಸ್ಪಷ್ಟವಾಗಿದೆ. ಓಜಸ್ಸು, ಪ್ರಸಾದ ಮುಂತಾದ ಗುಣಗಳು ಪದಬಂಧದಲ್ಲಿ ಅಥವಾ ಅಕ್ಷರಯೋಜನೆಯಲ್ಲಿ ಪ್ರಕಾಶಿಸುವುದು ಮಾತ್ರವಲ್ಲ; ವಾಕ್ಯವಿನ್ಯಾಸ ಮತ್ತು ವಿಷಯದ ಯೋಜನೆಯಲ್ಲಿಯೂ ಪ್ರಕಟವಾಗುತ್ತವೆ. ಈ ಎಲ್ಲ ಅಂಶಗಳಲ್ಲಿಯೂ ಗುಣಗಳು ಎದ್ದುಕಾಣುತ್ತಿದ್ದಾಗ ಮಾತ್ರ ಉತ್ತಮಕಾವ್ಯ ಇಲ್ಲವೆ ವೈದರ್ಭೀರೀತಿ ಸ್ಪಷ್ಟ.

ಹೀಗೆ ವಾಮನನಿಂದ ಆರಂಭವಾದ ರೀತಿಪ್ರಸ್ಥಾನದಲ್ಲಿ ಗುಣಗಳು ಪ್ರಕಾಶಿಸುವುದು ಶಬ್ದ ಮತ್ತು ಅರ್ಥಗಳ ಮೂಲಕವೇ ಆದರೂ, ಆ ದೃಷ್ಟಿಯಿಂದ ಅವನ್ನು ಶಬ್ದಗುಣ ಮತ್ತು ಅರ್ಥಗುಣವೆಂದರೂ, ಅವುಗಳ ಲಕ್ಷ್ಯವೆಲ್ಲಾ **ರೀತಿ** ಅಥವಾ **ರಚನೆ** ಅಥವಾ **ಸಂಘಟನೆ** ಎಂಬುದನ್ನು ಮರೆಯಬಾರದು. ಉತ್ತಮ ರಚನೆಯಿರುವುದು ಉತ್ತಮಕಾವ್ಯ; ಸಮಗ್ರಗುಣಗಳೂ ಇರುವುದೇ

ಯತ್ನಿಸದೆ ಮೇಲ್ನೋಟದಿಂದ ತೃಪ್ತರಾಗುವ ವಿಮರ್ಶಕರ ಮಾತುಗಳಲ್ಲಿ ಬೇಕಾದ ಹಾಗೆ ಕಾಣಬರುತ್ತದೆ.[3] ವಸ್ತುಸ್ಥಿತಿ ಮಾತ್ರ ಇಷ್ಟೆ:—'ಮಾಧುರ್ಯ' ಮೊದಲಾದುವು ರಸದ ಧರ್ಮಗಳು; ವರ್ಣನಿಯತವಾದ ಧರ್ಮಗಳಲ್ಲ. ಉಚಿತವಾದ ವರ್ಣಗಳು ಮಾತ್ರ ರಸಗಳನ್ನು ಸೂಚಿಸಬಲ್ಲವು. ವರ್ಣಗಳಿಗೆ ರಸವ್ಯಂಜಕತ್ವ ಹೇಗೆ ಉಂಟೆಂಬುದನ್ನು ಮುಂದೆ ಉದಾಹರಣೆಗಳಲ್ಲಿ ವಿಶದಪಡಿಸಲಾಗಿದೆ.

ಉಪಕುರ್ವನ್ತಿ ತಂ ಸಂತಂ ಯೇಽಙ್ಗದ್ವಾರೇಣ ಜಾತುಚಿತ್ ।
ಹಾರಾದಿವದಲಂಕಾರಾಸ್ತೇಽನುಪ್ರಾಸೋಪಮಾದಯಃ ॥

ಅದು (=ರಸವು) ಒಳಗಿದ್ದಾಗ ಮಾತ್ರ, ಅಂಗಾಂಗಗಳ ಮೂಲಕವಾಗಿ ಯಾವವು ಅದನ್ನೇ ಒಮ್ಮೊಮ್ಮೆ ಮತ್ತಷ್ಟು ಕಳೆಯೇರಿಸುವವೋ ಅವೇ 'ಅನುಪ್ರಾಸ'

---

ದ್ದಲ್ಲ' ಎಂಬ ರೂಪಕವನ್ನು ಎಷ್ಟರಮಟ್ಟಿಗೆ ಹಿಂಡುತ್ತಾ ಹೋಗುವನೆಂಬುದು ಸ್ಪಷ್ಟವಾಗುತ್ತದೆ. ಪ್ರಾಚೀನಾಲಂಕಾರಿಕರ ವಿಸ್ತೃತ ವಿವೇಚನೆಗಳೊಂದೂ ಈ ನವೀನ ಪ್ರಸ್ಥಾನವನ್ನು ಪೂರ್ಣವಾಗಿ ಅಂಗೀಕರಿಸುವವರಿಗೆ ಉಪಯುಕ್ತವೆನಿಸುವುದಿಲ್ಲ. (ಹೆಚ್ಚಿನ ವಿವರಗಳಿಗೆ ಇದೇ ಲೇಖಕನ **ಆನಂದವರ್ಧನನ ಕಾವ್ಯಮೀಮಾಂಸೆ ಮತ್ತು ಕನ್ನಡ ಧ್ವನ್ಯಾಲೋಕವನ್ನು** ಓದಿ) ರೀತಿಭೇದವನ್ನೊಪ್ಪದ ಉದ್ಭಟನು **ಪರುಷಾ, ಉಪನಾಗರಿಕಾ, ಮತ್ತು ಗ್ರಾಮ್ಯಾ** ಎಂಬ ಮೂರು 'ವೃತ್ತಿ' ಅಥವಾ ಅನುಪ್ರಾಸಪ್ರಕಾರಗಳನ್ನು ನಿರೂಪಿಸಿದ್ದಾನೆ. ಇವು ಮುಖ್ಯವಾಗಿ ವರ್ಣಸಂಘಟನೆಯ ಧರ್ಮಗಳೇ. ಭಾಮಹನಲ್ಲಿಯೇ ಕಡೆಯ ಎರಡು ಅನುಪ್ರಾಸಭೇದಗಳೂ ಉದಾಹೃತವಾಗಿವೆ. ವಾಮನನ 'ರೀತಿ'ಗಳನ್ನು ರಸೋಚಿತ ವ್ಯವಹಾರವೆಂದಂತೆಯೇ, ಉದ್ಭಟನ 'ವೃತ್ತಿ'ಗಳನ್ನೂ ಧ್ವನಿವಾದಿಗಳು ಸುಲಭವಾಗಿ ರಸೋಚಿತ ವ್ಯವಹಾರಗಳೆಂದು ಸುಲಭವಾಗಿ ಮುಗಿಸುತ್ತಾರೆ. ಪ್ರಾಚೀನರು ಹೇಳುವ ಹತ್ತು ಗುಣಗಳಲ್ಲಿ ಹಲವು ಕೇವಲ ದೋಷಾಭಾವಗಳು; ನವೀನರು ದೋಷಾಭಾವಗಳನ್ನೆಲ್ಲ ಗುಣದ ಅಂತಸ್ತಿಗೆ ಏರಿಸುವುದಿಲ್ಲ.

[3] ವಾಮನಾದಿಗಳ ಅಭಿಪ್ರಾಯವನ್ನು ಇಲ್ಲಿ ಟೀಕಿಸಿದೆ. 'ಸವಿಯು ಸಕ್ಕರೆಯೊಳಗೊ, ಸಕ್ಕರೆಯು ಸವಿಯೊಳಗೊ, ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೋ ?' ಎಂಬಂತಿದೆ ಈ ಚರ್ಚೆ. ಮಾಧುರ್ಯವು ರಚನೆಯ ಗುಣವೆಂದು ವಾಮನಾದಿಗಳು ಹೇಳಿದರೆ, ಶೃಂಗಾರರಸದ ಗುಣವೇ ಅದೆಂದು ಮಮ್ಮಟನ ಅಭಿಪ್ರಾಯ. ಮನುಷ್ಯನ ವ್ಯಕ್ತಿತ್ವದ ಗುಣನಿರ್ಣಯಕ್ಕೆ ಅವನ ಬಾಹ್ಯವ್ಯವಹಾರಗಳೇ ಆಲಂಬನವೆಂದು ಕೆಲವರೆನ್ನಬಹುದು; ಅಂತರಂಗದ ಚಿತ್ತವೃತ್ತಿಯೇ ಆಲಂಬನವೆಂದೂ ಮತ್ತೆ ಕೆಲವರೆನ್ನಬಹುದು. ಅಲಂಕಾರಶಾಸ್ತ್ರದಲ್ಲಿಯೂ ಹೀಗೆಯೇ ಆಗಿದೆ. ಆದರೆ ಚಿತ್ತವೃತ್ತಿಯೇ ಎಲ್ಲಕ್ಕೂ ಮೂಲವೆನ್ನುವುದು ಎಷ್ಟು ನಿಜವೋ ಬಾಹ್ಯವ್ಯವಹಾರಗಳ ಮೂಲಕವಾಗಿ ಮಾತ್ರ ಚಿತ್ತವೃತ್ತಿ ಪ್ರಕಟವಾಗುವುದೆಂಬುದೂ ಅಷ್ಟೇ ನಿಜ. ಗುಣಗಳಿಗೆ ಆಶ್ರಯ ರಸವೋ ಇಲ್ಲವೆ ರಚನೆಯೋ ಎಂಬ ಪಾರಮಾರ್ಥಿಕ ಪ್ರಶ್ನೆಗಿಂತ ವಿಶಿಷ್ಟಗುಣಗಳ ಸ್ವರೂಪಪರಿಜ್ಞಾನ ಕಾವ್ಯವಿಮರ್ಶೆಗೆ ಹೆಚ್ಚು ಪ್ರಯೋಜಕ. ಹೀಗೆ ಪ್ರಾಚೀನರ ಗುಣನಿರೂಪಣೆ ಹೆಚ್ಚು ವ್ಯಾವಹಾರಿಕವಾಗಿದ್ದರೆ ನವೀನರ ಗುಣನಿರೂಪಣೆ ಆಧ್ಯಾತ್ಮಿಕ ಇಲ್ಲವೆ ಹೆಚ್ಚು ತಾತ್ವಿಕವಾಗಿದೆ.

'ಉಪಮಾ' ಮುಂತಾದ ಅಲಂಕಾರಗಳು. ಇವು ಹಾರವೇ ಮುಂತಾದ ಆಭರಣಗಳಿಗೆ ಸಮಾನ.

ಅಂಗಾಂಗಗಳು ಎಂದರೆ 'ವಾಚಕ' ಅಥವಾ ಶಬ್ದಾಂಗ ಮತ್ತು 'ವಾಚ್ಯ' ಅಥವಾ ಅರ್ಥಾಂಗ; ಈ ಎರಡರ ಸೊಬಗಿನ ಮೂಲಕವಾಗಿಯೂ, ಮುಖ್ಯವಾದ ರಸವೊಂದು ಯಾವುದಿದೆಯೋ ಆ ರಸದ ಸೊಬಗನ್ನು ಹೆಚ್ಚಿಸುವ ಸಾಮಗ್ರಿಗಳೇ ಅಲಂಕಾರಗಳು. ಕಂಠ ಮುಂತಾದ ಅಂಗಗಳ ಸೊಬಗನ್ನು ಹೆಚ್ಚಿಸುವ ಮೂಲಕವಾಗಿ ಅಂತರಾತ್ಮವನ್ನೇ ಕಳೆಯೇರಿಸುವ ಹಾರ ಮುಂತಾದ ಆಭರಣಗಳಂತೆಯೇ ಕಾವ್ಯದ ಅಲಂಕಾರಗಳಾದರೂ.[4] ಎಲ್ಲಿ ರಸವಿಲ್ಲವೋ ಅಲ್ಲಿ ಅವು ಬಂದರೆ ಕೇವಲ ಉಕ್ತಿವೈಚಿತ್ರ್ಯ ಮಾತ್ರ ಉಂಟಾಗುತ್ತದೆ. ಕೆಲವೊಮ್ಮೆ, ರಸವಿದ್ದರೂ ಅಲಂಕಾರಗಳು ಅದಕ್ಕೆ ಪೋಷಕವಾಗದೆ ಹೋಗಬಹುದು.[5] ಕ್ರಮವಾಗಿ ಉದಾಹರಣೆಗಳನ್ನು ಕೊಡಲಾಗಿದೆ:—

---

[4] ದೃಷ್ಟಾಂತವನ್ನು ಅತಿಯಾಗಿ ವಿಸ್ತರಿಸುವುದನ್ನಿಲ್ಲಿ ಗಮನಿಸಬೇಕು. 'ಒಡವೆಗಳು ಸೌಂದರ್ಯವನ್ನು ಹೆಚ್ಚಿಸುತ್ತವೆ' ಎಂದು ಎಲ್ಲರೂ ಒಪ್ಪುತ್ತಾರೆ. 'ಯಾವ ಸೌಂದರ್ಯವನ್ನು?' ಎಂದರೆ ಶರೀರದ ಸೌಂದರ್ಯವನ್ನು ಎಂದು ಸಹಜವಾಗಿ ಯಾರಾದರೂ ಹೇಳುವೆವು. 'ಶರೀರದ ಸೌಂದರ್ಯವನ್ನು ಹೆಚ್ಚಿಸುತ್ತವೆಯಾದರೂ, ಶರೀರದ ಮೂಲಕ ಒಳಗಿರುವ ಆತ್ಮದ ಸೌಂದರ್ಯವನ್ನೇ ಹೆಚ್ಚಿಸುತ್ತವೆನ್ನವುದು ಪರಮಾರ್ಥ' ಎಂಬುದು ಮಮ್ಮಟನ ಮತ. ಶರೀರಸೌಂದರ್ಯದಂತೆ ಆತ್ಮಸೌಂದರ್ಯವೂ ಒಂದಿರಬಹುದೆಂದೊಪ್ಪುವವರು ಕೂಡ ಬಾಹ್ಯಾಭರಣಗಳು ಆತ್ಮಸೌಂದರ್ಯವನ್ನು ಹೆಚ್ಚಿಸುವುದರಲ್ಲಿ ಮಾತ್ರ ಪರ್ಯವಸನ್ನವಾಗುವುವೆಂದು ಸಾಮಾನ್ಯವಾಗಿ ಸ್ವೀಕರಿಸಲು ಸಿದ್ಧರಾಗದೆ ಇರಬಹುದು. ಹೀಗಿರುವುದರಿಂದ ಕಾವ್ಯಚರ್ಚೆಯಲ್ಲಿ ಶರೀರ-ಆತ್ಮ ದೃಷ್ಟಾಂತವು ಸಮಸ್ಯೆಯನ್ನು ಬಿಡಿಸುವ ಬದಲು ಮತ್ತಷ್ಟು ಜಟಿಲವಾಗಿ ಮಾಡುವ ಪ್ರಸಕ್ತಿಯಿಲ್ಲದೆ ಇಲ್ಲ.

[5] ಪ್ರಾಚೀನರಿಗೂ ಮಮ್ಮಟಾದಿ ನವೀನರಿಗೂ 'ರಸ'ವೆಂಬುದರ ಕಲ್ಪನೆಯಲ್ಲಿಯೇ ಅರ್ಥಭೇದವಿದೆ. ಒಟ್ಟು ಪ್ರಬಂಧವ್ಯಾಪಿಯಾಗಿ ಬರುವ ನಾಯಕಾದಿಗಳ ಮುಖ್ಯ ಚಿತ್ತವೃತ್ತಿ ಪರಿಪಾಕವೇ ರಸವೆಂದು ಭಾಮಹಾದಿಗಳು ಭಾವಿಸಿದ್ದರೆಂದು ತೋರುತ್ತದೆ. ವಾಮನನು ಸ್ಪಷ್ಟವಾಗಿ ಹೇಳಿರುವಂತೆ ಬಿಡಿಪದ್ಯಗಳಲ್ಲಿ ಕಾಂತಿಯ ಕಿಡಿ ಹೊಳೆದರೂ 'ರಸ'ವೆಂಬ ಪದವಿಗೆ ಅರ್ಹವಾಗುವ ಯೋಗ್ಯತೆ ಬರಲು ಯಥಾಕಥಂಚಿತ್ ರಸಸ್ಪರ್ಶದ ಬದಲು ಸ್ಪಷ್ಟವಾದ ದೀಪ್ತತ್ವವೂ ಅಗತ್ಯವೆಂದವರು ಭಾವಿಸುತ್ತಿದ್ದರು. ಮಹಾಕಾವ್ಯಗಳಲ್ಲಿ ದೀಪ್ತರಸದ ಸ್ಥಾನಗಳು ಮಾತ್ರ ಇರದೆ, ಸಂಗಡವೇ ಪ್ರಕೃತಿ ವರ್ಣನಾದಿಭಾಗಗಳೂ ಹೆಚ್ಚಾಗಿರುವುದನ್ನು ಅವರು ಮನಗಂಡಿದ್ದರು. ಎರಡರಲ್ಲೂ ಸೌಂದರ್ಯವನ್ನವರು ಒಪ್ಪಿ ಕಾವ್ಯಲಕ್ಷಣ ಬರೆದಂತಿದೆ. ಆದರೆ ಆನಂದವರ್ಧನಾದಿ ನವೀನರ ವಿಮರ್ಶೆಯಲ್ಲಿ ಪ್ರಕೃತಿವರ್ಣನೆಗಳಲ್ಲಿ ದೀಪ್ತರಸತ್ವವಿಲ್ಲದಿದ್ದರೂ, ಬರಲಿರುವ ದೀಪ್ತರಸಕ್ಕೆ ಪೋಷಕವಾದ ಉದ್ದೀಪಕತ್ವವುಂಟೆಂಬ ಕಾರಣದಿಂದಲೇ ರಸಮಯತ್ವವುಂಟಾಗುತ್ತದೆ. ಹೀಗೆ ಯಥಾಕಥಂಚಿತ್ ರಸಸ್ಪರ್ಶವೂ ಇಲ್ಲದ ವಾಕ್ಯವೇ ಊಹಾತೀತವಾದ್ದರಿಂದ ನವೀನರ ಸಿದ್ಧಾಂತವು

**೧. ಶಬ್ದಮುಖೇನ ರಸಕ್ಕೆ ಪುಷ್ಟಿಕೊಡುವ ಅಲಂಕಾರ**

ಅಪಸಾರಯ ಘನಸಾರಂ
ಕುರು ಹಾರಂ ದೂರ ಏವ ಕಿಂ ಕಮಲೈಃ।
ಅಲಮಲಮಾಲಿ ಮೃಣಾಲೈ-
ರಿತಿ ವದತಿ ದಿವಾನಿಶಂ ಬಾಲಾ[6] ॥

ಸರಿಸೌ ಘನಕರ್ಪೂರಮ-
ನಿರಿಸೌ ಸಖಿ ದೂರದಲ್ಲೆ ಮುತ್ತಿನ ಸರಮಂ।
ಸರಸಿಜಮಂ ತೆಗೆ ಬಿಸಮಂ
ಪರಿಹರಿಸೆಂದೊಡತಿಯಿಂತು ಪಗಲಿರುಳೊರೆವಳ್ ॥

**೨. ಅರ್ಥಮುಖೇನ ರಸಕ್ಕೆ ಪೋಷಕವಾಗುವ ಅಲಂಕಾರ**

ಮನೋರಾಗಸ್ತೀವ್ರಂ ವಿಷಮಿವ ವಿಸರ್ಪತ್ಯವಿರತಂ
ಪ್ರಮಾಥೀ ನಿರ್ಧೂಮಂ ಜ್ವಲತಿ ವಿಧುತಃ ಪಾವಕ ಇವ।
ಹಿನಸ್ತಿ ಪ್ರತ್ಯಂಗಂ ಜ್ವರ ಇವ ಗರೀಯಾನಿತ ಇತೋ
ನ ಮಾಂ ತ್ರಾತುಂ ತಾತಃ ಪ್ರಭವತಿ ನ ಚಾಂಬಾ ನ ಭವತೀ[7] ॥

ಮನೋರಾಗಂ ತೀವ್ರಂ ವಿಷಮೆನಿಸಿ ನೀಳ್ದತ್ತವಿರತಂ
ಮಹೋಗ್ರಂ ನಿರ್ಧೂಮಂ ಬೆಳೆದುದಕಟಾ ದಳ್ಳುರಿಯೆನಲ್।
ಅಹಾ ಅಂಗಾಂಗಂ ತಾಂ ಜ್ವರದಿನೆನಿಸಲ್ ಬೆಂದುದು ವಲಂ
ಪಿತಂ ಮೇಣ್ ತಾಯೆನ್ನಂ ಪೊರೆಯಲರಿದೌ ನೀನುಮುಮಮಾ ॥

**೩. (ರಸವಿಲ್ಲದೆ) ಕೇವಲ ಶಬ್ದವನ್ನು ಮಿರುಗಿಸುವ ಅಲಂಕಾರ**

ಚಿತ್ತೇ ವಿಹಟ್ಟದಿ ಣ ಟುಟ್ಟದಿ ಸಾ ಗುಣೇಸು
ಸಜ್ಜಾಸು ಲೊಟ್ಟದಿ ವಿಸಟ್ಟದಿ ದಿಮ್ಮುಹೇಸು।

---

ವಾದಿಗಳಿಗೆ ಅಜೇಯವಾಗಿಯೇ ಉಳಿಯುತ್ತದೆ. ಆದರೆ ರಸವಿಲ್ಲದ ಕಾವ್ಯಸ್ಥಳಗಳನ್ನು ನವೀನರು ಬೆರಳುಮಾಡಿ ತೋರಿಸುವಾಗ ಅವರ ಸಿದ್ಧಾಂತದ ಅವ್ಯಾವಹಾರಿಕತೆ ತಾನೇತಾನಾಗಿ ಎದ್ದು ಕಾಣುತ್ತದೆ. ಮಮ್ಮಟನೇ ಆರನೆಯ ಉಲ್ಲಾಸದ ಕಡೆಗೆ ಹೇಳುವ ಮಾತುಗಳನ್ನು ಈ ಸಂದರ್ಭದಲ್ಲಿ ಪುನರಾಲೋಕನೆ ಮಾಡಬಹುದು. ವಿವರಗಳಿಗೆ ಇದೇ ಲೇಖಕನ **ರಸೋಲ್ಲಾಸ** (ಮೈಸೂರು ವಿಶ್ವವಿದ್ಯಾನಿಲಯ ಉಪನ್ಯಾಸಮಾಲೆ) ವನ್ನು ಓದಿ.

[6] ದಾಮೋದರಗುಪ್ತನ **ಕುಟ್ಟನೀಮತ** ೧೦೨.

[7] ಮಾಲತೀಮಾಧವ, ಅಂಕ-II.

ಬೋಲಮ್ಮಿ ವಟ್ಟದಿ ಪವಟ್ಟದಿ ಕವ್ವಬಂಧೇ
ಝಾಣೇ ಣ ಟುಟ್ಟದಿ ಚಿರಂ ತರುಣೀ ತರಟ್ಟೀ[8] ॥

ಚಿತ್ರದೊಳಂ ಚಿತ್ತದೊಳಂ
ವರ್ತಿಸುವಳ್ ಸುಗುಣೆ ಸೆಜ್ಜೆಯೊಳ್ ದೆಸೆದೆಸೆಯೊಳ್ ।
ಇರ್ಪಳ್ ನುಡಿಯೊಳ್ ಕವಿತೆಯೊ
ಳೊಪ್ಪುವಳೇಂ ಜಾರ್ವಳಂತೆ ಮನದಿಂ ಜಾಣಳ್ ॥[9]

**೪. (ರಸವಿಲ್ಲದೆ) ಕೇವಲ ಅರ್ಥವನ್ನು ಮಿರುಗಿಸುವ ಅಲಂಕಾರ**

ಮಿತ್ರೇ ಕ್ವಾಪಿ ಗತೇ ಸರೋರುಹವನೇ ಬದ್ಧಾನನೇ ತಾಮ್ಯತಿ
ಕ್ರಂದತ್ಸು ಭ್ರಮರೇಷು ವೀಕ್ಷ್ಯ ದಯಿತಾಸನ್ನಂ ಪುರಸ್ಸಾರಸಮ್ ।
ಚಕ್ರಾಹ್ವೇನ ವಿಯೋಗಿನಾ ಬಿಸಲತಾ ನಾಸ್ವಾದಿತಾ ನೋಜ್ಝಿತಾ
ಕಂಠೇ ಕೇವಲಮರ್ಗಲೇವ ನಿಹಿತಾ ಜೀವಸ್ಯ ನಿರ್ಗಚ್ಛತಃ ॥

ಸೂರ್ಯಂ ಪೋಗಿರಲತ್ತ, ಪದ್ಮನಿವಹಂ ಬದ್ಧಾಸನಂ ಶೋಕಿಸಲ್,
ಕೂಗಲ್ ಷಟ್ಪದಮಾಲೆ, ಸಾರಸಮಿರಲ್ ಪೆಣ್ಗೂಡಿ ಮುಂಭಾಗದೊಳ್ ।
ಚಕ್ರಾಹ್ವಂ ವಿರಹಾರ್ತಮುಂದು ಬಿಸಮಂ ಮೆಲ್ಲಲ್ ಬಿಡಲ್ಕಾರದಂ-
ತಾಗಳ್ ಪೋಗುವ ಜೀವಕರ್ಗಳಮೆನಲ್ ತಾನಿಟ್ಟುದಾಸ್ಯಾಂತದೊಳ್ ॥[10]

---

[8] ರಾಜಶೇಖರನ ಕರ್ಪೂರಮಂಜರೀ ಸಟ್ಟಕ, II.

[9] ಇಲ್ಲಿ ಪ್ರಕೃತವಾದ ಶೃಂಗಾರಕ್ಕೆ ಶಬ್ದಾಲಂಕಾರದಿಂದ ಪುಷ್ಟಿಯೊದಗಿಲ್ಲ.

[10] ಇಲ್ಲಿಯೂ ಪ್ರಕೃತವಿಪ್ರಲಂಭಕ್ಕೆ ಅಲಂಕಾರವು ಪೋಷಕವಾಗುವುದರ ಬದಲು ಬಾಧಕವೇ ಆಗಿ ಪರಿಣಮಿಸಿದೆ. ವಿರಹವ್ಯಥೆಯನ್ನು ತಾಳದಂತಿರುವಾಗ ಪ್ರಾಣ ಬಿಡುವುದೇ ಲೇಸೆಂಬ ಭಾವನೆ ಸಹಜ; ಗಂಟಲಿಗೆ ಸೇರಿ ಬಂದಿರುವ ಪ್ರಾಣವನ್ನು ಹೋಗದಂತೆ ಹೇಗೋ ಕಷ್ಟದಿಂದಾದರೂ ಅಮುಕಿ, ಅಗುಳಿಯಿಂದ ಒತ್ತಿ ಹಿಡಿಯುವಂತೆ ತಾವರೆದಂಟಿನಿಂದ ಒತ್ತಿ ಹಿಡಿಯುವುದು ಅಷ್ಟು ಅನುಗುಣವಾದ ಉಪಮಾನವೇನೂ ಅಲ್ಲ. ಆದರೆ ಇಲ್ಲಿ ಮಮ್ಮಟನು ಸ್ಪಷ್ಟವಾಗಿರುವ ಉತ್ಪ್ರೇಕ್ಷಾಲಂಕಾರವನ್ನು ಉಪಮಾಲಂಕಾರವೆಂದು ಏಕೆ ನಿರೂಪಿಸುತ್ತಿರುವನೆಂಬುದು ಈ ಲೇಖಕನಿಗೆ ಅರ್ಥವಾಗಿಲ್ಲ. 'ಇವ' ಎಂಬುದು ಉಪಮಾವಾಚಿಯೂ ಹೌದು; ಉತ್ಪ್ರೇಕ್ಷಾವಾಚಿಯೂ ಹೌದು. ಇಲ್ಲಿ ಕವಿಯ ಸಂಭಾವನೆಯೇ ಪ್ರಧಾನವಾಗಿರುವ ಕಾರಣ ಉತ್ಪ್ರೇಕ್ಷೆಯೆಂದೇ ಭಾವಿಸುವುದು ಯುಕ್ತತರ. ಹಾಗೆ ಭಾವಿಸಿದರೆ ಪಕ್ಷಿಗೆ ಆ ಬುದ್ಧಿ ವಸ್ತುತಃ ಇಲ್ಲದ ಪ್ರಯುಕ್ತ, ಅದು ಕೇವಲ ಕವಿಯಿಂದ ಆರೋಪಿತವಾಗಿರುವ ನಿಮಿತ್ತ, ಉಕ್ತ ದೋಷವು ಅಷ್ಟಾಗಿ ಏಳುವುದಿಲ್ಲ.

'ಬಿಸ' ಅಥವಾ ತಾವರೆಯ ದಂಟು ಹೋಗುವ ಜೀವವನ್ನೇನೂ ತಡೆಯುವಂತಹದಲ್ಲವಾದ್ದರಿಂದ ಇಲ್ಲಿ ಉಪಮೆ ಪ್ರಕೃತಕ್ಕೆ ಅನುಗುಣವಾದುದೇ ಅಲ್ಲ. 'ಗುಣ'ಕ್ಕೂ 'ಅಲಂಕಾರ'ಕ್ಕೂ ಇರುವ ವ್ಯತ್ಯಾಸವೇ ಇಲ್ಲಿ. ಆದಕಾರಣ, 'ಕಾವ್ಯದಲ್ಲಿ ಸಮವಾಯಸಂಬಂಧದಿಂದ ಇರತಕ್ಕವು ಶೌರ್ಯಾದಿಗುಣಗಳು: ಸಂಯೋಗಸಂಬಂಧದಿಂದ ಇರತಕ್ಕವು ಹಾರಾದಿ ಅಲಂಕಾರಗಳು' ಎಂದು ಗುಣ-ಅಲಂಕಾರಗಳಿಗೆ ಪರಸ್ಪರ ವ್ಯತ್ಯಾಸವನ್ನು ಒಪ್ಪಬೇಕು.[11] 'ಓಜಸ್ಸು ಮುಂತಾದ ಗುಣಗಳು, ಅನುಪ್ರಾಸವೇ ಮುಂತಾದ ಅಲಂಕಾರಗಳು—ಎರಡೂ **ಸಮವಾಯ ಸಂಬಂಧದಿಂದಲೇ** ಕಾವ್ಯದಲ್ಲಿರುತ್ತವೆ. ಅವೆರಡಕ್ಕೂ ಭೇದವನ್ನೊಪ್ಪುವುದೊಂದು ಹೆಣ್ಣುಕುರಿಗಳ ಹಿಂಡಿನಂತೆ ಹೋಗುವವರೂ ಸಂಪ್ರದಾಯ' ಎನ್ನುವುದು ಸರಿಯಲ್ಲ.[12] 'ಕಾವ್ಯಸೌಂದರ್ಯ, **ಕಾರಕಧರ್ಮಗಳು** ಗುಣಗಳು; ಅದರ **ಪೋಷಕಧರ್ಮಗಳು** ಅಲಂಕಾರಗಳು' ಎಂದು ಹೇಳಿರುವುದೂ ಯುಕ್ತವಲ್ಲ.[13] ಏಕೆಂದರೆ, ಆಗ ಸಮಸ್ತಗುಣಗಳೂ ಸೇರಿದಾಗ ಮಾತ್ರವೇ ಕಾವ್ಯವೆನ್ನಬೇಕೆ? ಒಂದೆರಡೇ ಗುಣಗಳಿದ್ದರೂ ಕಾವ್ಯವೆನ್ನಬಹುದೆ? ಎಂಬ ಪ್ರಶ್ನೆಯೇಳುತ್ತದೆ. 'ಸಮಸ್ತ ಗುಣಗಳೂ ಸೇರಿದಾಗ ಮಾತ್ರ,' ಎಂದರೆ ಸಮಗ್ರಗುಣಗಳಿಲ್ಲದ ಗೌಡೀ ರೀತಿಯನ್ನೂ ಪಾಂಚಾಲೀ

---

[11] ಇದೇ ಮಮ್ಮಟನ ನಿರ್ಣಯ. ಗುಣಗಳು ಕಾವ್ಯದ ಅವಿಯೋಜ್ಯ ಅಂಶಗಳು; ಪ್ರತ್ಯೇಕಿಸಲು ಬಾರವು. ಅಲಂಕಾರಗಳು ಕಾವ್ಯದಲ್ಲಿ ಪ್ರತ್ಯೇಕಿಸಬಹುದಾದ ಅಂಶಗಳು. ತಾತ್ವಿಕವಾಗಿ ನಿರ್ದುಷ್ಟವೆನಿಸುವ ಈ ನಿರ್ಣಯವೂ ಹೇಗೆ ಅವ್ಯಾವಹಾರಿಕವೆಂಬುದರ ನಿರೂಪಣೆಗೆ ಇದೇ ಲೇಖಕನ ಉಕ್ತ ಉಪನ್ಯಾಸವನ್ನು (ರಸೋಲ್ಲಾಸ) ನೋಡಿ.

[12] ಈ ವಾಕ್ಯವು ಉದ್ಭಟನ '**ಭಾಮಹವಿವರಣ**'ದಲ್ಲಿ ಇದ್ದಿರಬೇಕು. ಉದ್ಭಟನ ಈ ಕೃತಿ ಈಗ ಉಪಲಬ್ಧವಿಲ್ಲ. ತರ್ಕದ ಸಂಯೋಗಸಂಬಂಧವು ಅಲಂಕಾರಗಳಿಗೂ ಕಾವ್ಯಕ್ಕೂ ಘಟಿಸುವುದಿಲ್ಲವೆಂಬ ಮಹತ್ವದ ಸಂಗತಿಯನ್ನು ಮನಗಂಡುದಷ್ಟೇ ಅಲ್ಲ, ಕೂರಂಬಿನಂತೆ ಮೊನೆಯಾದ ಮಾತಿನಿಂದ ಆಡಿರುವವನೂ ಆತನೇ. ಗುಣಗಳು ಹೇಗೆ ಕಾವ್ಯಸೌಂದರ್ಯದ ಅವಿಯೋಜ್ಯ ಅಂಶಗಳೋ, ಅಲಂಕಾರಗಳೂ ಅಷ್ಟೇ ಅವಿಯೋಜ್ಯ ಅಂಶಗಳು. ಇವೆರಡರ ಸಂಬಂಧವೂ ಬೇರ್ಪಡಿಸಲಾರದ 'ಸಮವಾಯ' ಅಥವಾ 'ಅ-ವಿನಾಭಾವ'ವೇ. ಒಂದು ಹೆಣ್ಣುಕುರಿ ಹೋದ ಕಡೆಯಲ್ಲಿಯೇ ತಲೆಬಗ್ಗಿಸಿಕೊಂಡು ಇನ್ನೊಂದು ಮತ್ತೊಂದು, ಹೀಗೆ ಹಿಂಡಿನ ಕುರಿಗಳೆಲ್ಲಾ ಹೋಗುವಂತೆ ಗುಣ ಮಾತ್ರ ಅಂತರ್ಭೂತ. ಅಲಂಕಾರ ಬಹಿರ್ಭೂತವೆಂದು ತಿಳಿಯುವುದಾದರೂ ಅಂಧಪರಂಪರೆಯೇ ಎಂದು ಅವನು ಛೀಮಾರಿ ಮಾಡಿದ್ದಾನೆ. ಆದರೆ ಮಮ್ಮಟನು ಮೇಲಿನ ಉದಾಹರಣೆಗಳೇ ಉದ್ಭಟನ ಅಭಿಪ್ರಾಯವನ್ನು ಖಂಡಿಸಲು ಸಾಕೆಂದು ಭಾವಿಸಿದಂತಿದೆ.

[13] ಇದು ವಾಮನನ ಸಿದ್ಧಾಂತದ ಅನುವಾದ. ಇದರ ಖಂಡನೆ ಮುಂದಿನ ವಾಕ್ಯಗಳಲ್ಲಿ ಬಂದಿದೆ.

ರೀತಿಯನ್ನೂ ಕಾವ್ಯದ ಆತ್ಮವೆನ್ನುವುದು ಹೇಗೆ? 'ಹಾಗಲ್ಲ; ಕೆಲವೇ ಗುಣಗಳಿದ್ದರೂ ಕಾವ್ಯವೇ' ಎನ್ನುವುದಾದರೆ—

ಅದ್ರಾವತ್ರ ಪ್ರಜ್ವಲತ್ಯಗ್ನಿರುಚ್ಚೈಃ
ಪ್ರಾಜ್ಯಃ ಪ್ರೋದ್ಯನ್ನುಲಸತ್ಯೇಷ ಧೂಮಃ।

ಮಿಳ್ಳಿಸಿ ನೆಗೆದುದು ಬೆಟ್ಟದೆ
ದಳ್ಳುರಿಯಿದೊ ನೋಡು ಧೂಮಮೆಲ್ಲೆಡೆ ತೋರ್ಕುಂ ॥

ಇದೇ ಮುಂತಾದ ಉದಾಹರಣೆಗಳಲ್ಲಿಯೂ ಕೆಲವೊಂದು ಗುಣವಿರುವ ಕಾರಣ[14] ಕಾವ್ಯತ್ವ ಸಿದ್ಧಿಸಬೇಕಾದೀತು. ವಸ್ತುತಃ—

ಸ್ವರ್ಗಪ್ರಾಪ್ತಿರನೇನೈವ ದೇಹೇನ ವರವರ್ಣಿನಿ।
ಅಸ್ಯಾ ರದಚ್ಛದರಸೋ ನ್ಯಕ್ಕರೋತಿತರಾಂ ಸುಧಾಮ್ ॥

ಇಂದೆನಗೈತಂದುದು ವರ-
ಸುಂದರಿ! ನರದೇಹದಲ್ಲೆ ಸಗ್ಗದ ವಾಸಂ।
ಚೆಂದುಟಿರಸಮಿದು ಚೆಲುವೆಯ
ಕುಂದಿಸಿ ನಿಂದಿಹುದು ಸಗ್ಗದಮೃತದ ಸವಿಯಂ ॥

ಇತ್ಯಾದಿ ಉದಾಹರಣೆಗಳಲ್ಲಿ 'ವಿಶೇಷೋಕ್ತಿ'—'ವ್ಯತಿರೇಕ'ಗಳೆಂಬ ಅಲಂಕಾರ ಗಳಿರುವುದರಿಂದ ಗುಣವಿಲ್ಲದಿದ್ದರೂ ಕಾವ್ಯತ್ವ ಸಿದ್ಧಿಸುವುದು.[15] ಈಗ ಗುಣಗಳ ಭೇದಗಳನ್ನು ಹೇಳಲಾಗುತ್ತದೆ:—

---

[14] ತರ್ಕದ ಉದಾಹರಣೆಗೆ ಸದೃಶವಾದ ಈ ವಾಕ್ಯದಲ್ಲಿಯೂ 'ಓಜಸ್ಸು', 'ಪ್ರಸಾದ' ಗಳೆಂಬ ಬಂಧಗುಣಗಳಿರುವುದರಿಂದ ಕಾವ್ಯತ್ವ ಸಿದ್ಧಿಸಬೇಕಲ್ಲವೆ? ಎಂದು ಮಮ್ಮಟನು ವಾದಿಸುತ್ತಾನೆ.

[15] ವಾಮನನ ಸಿದ್ಧಾಂತ ರೀತ್ಯಾ 'ಒಂದು ಅಂಶ ಕಡಿಮೆಯಾದರೂ ಉಳಿದೆಲ್ಲ ಅಂಶ ಗಳಲ್ಲಿಯೂ ಸಾಮ್ಯ ಸಂಪೂರ್ಣವಾಗಿದೆ'ಯೆನ್ನುವಾಗ ವಿಶೇಷೋಕ್ತಿ ಅಲಂಕಾರ. 'ನರದೇಹ ವೆಂಬ ಒಂದು ಅಂಶವನ್ನು ಬಿಟ್ಟರೆ ಉಳಿದೆಲ್ಲ ಅಂಶಗಳಲ್ಲಿಯೂ ನಾನು ಸ್ವರ್ಗನಿವಾಸಿಯೇ ಆದೆ' ಎಂಬಲ್ಲಿ ವಿಶೇಷೋಕ್ತಿ. ಉಪಮೇಯವಾದ 'ಚೆಂದುಟಿರಸ'ವು ಉಪಮಾನವಾದ ಅಮೃತವನ್ನೂ ಮೀರಿಸಿದೆಯೆನ್ನುವುದರಿಂದ ವ್ಯತಿರೇಕಾಲಂಕಾರ. ಈ ಎರಡು ಅಲಂಕಾರಗಳೂ ಇರುವುದರಿಂದ ಮಮ್ಮಟನು ಪದ್ಯಕ್ಕೆ ಕಾವ್ಯತ್ವವನ್ನು ಕೊಡುತ್ತಾನೆ. 'ಗುಣಗಳಿಲ್ಲಿ ಯಾವವೂ ಇಲ್ಲ; ಅಲಂಕಾರ ದಿಂದಲೇ ಕಾವ್ಯತ್ವ ಬಂದಿದೆ. ಆದ್ದರಿಂದ ಕಾವ್ಯಕ್ಕೆ ಗುಣಗಳು ಅವಿಯೋಜ್ಯಾಂಗಗಳಲ್ಲ' ಎಂದು ವಾಮನನನ್ನು ಟೀಕಿಸುತ್ತಾನೆ. ಆದರೆ ಪ್ರದೀಪಕಾರನು ಎತ್ತಿ ತೋರಿಸುವಂತೆ ಮಮ್ಮಟನ

ಮಾಧುರ್ಯೌಜಃಪ್ರಸಾದಾಖ್ಯಾಃ ತ್ರಯಸ್ತೇ ನ ಪುನರ್ದಶ । ೩ab ।

'ಮಾಧುರ್ಯ,' 'ಓಜಸ್ಸು,' 'ಪ್ರಸಾದ'—ಹೀಗೆ ಅವು ಮೂರೇ ಹೊರತು ಹತ್ತಲ್ಲ.[16]

ಕ್ರಮವಾಗಿ ಇವುಗಳ ಲಕ್ಷಣ:—

## ಮಾಧುರ್ಯ

ಆಹ್ಲಾದಕತ್ವಂ ಮಾಧುರ್ಯಂ ಶೃಂಗಾರೇ ದ್ರುತಿಕಾರಣಮ್ । ೩cd ।

---

ಪ್ರಸ್ಥಾನವೆಂಬ ಗಾಳಿಚೆಂಡನ್ನೂ ಈ ಮಾತೇ ಸೂಜಿಯಂತೆ ಚುಚ್ಚುತ್ತದೆ. 'ಈ ಪದ್ಯದಲ್ಲಿ ಗುಣವಿಲ್ಲ; ಅಲಂಕಾರವಿದೆ; ಅಲಂಕಾರದಿಂದಲೇ ಅದು ಕಾವ್ಯ'ವೆಂದರೆ ಅಲಂಕಾರವು ಕಾವ್ಯದ ಮುಖ್ಯಾಂಶವೆಂದೇ ಆಗಿಬಿಡುವುದಿಲ್ಲವೆ? ಮೊದಲು ಹೇಳಿದ್ದು ಅಲಂಕಾರ ಅಮುಖ್ಯವೆಂದು. ಹೀಗೆ ಪೂರ್ವಾಪರ ವಿರೋಧ ಮಮ್ಮಟನ ಮಾತಿನಲ್ಲಿಯೇ ತೋರುವ ಸಂಭವವಿದೆ. ಅದಕ್ಕೆ ಪ್ರದೀಪಕಾರನ ಪರಿಹಾರ ಹೀಗೆ:—ಸಮಗ್ರಗುಣಗಳೂ ಇದ್ದಾಗ ಮಾತ್ರವೇ ಕಾವ್ಯದ ಶೋಭೆ ಸ್ಪಷ್ಟ. ಇಲ್ಲಿ ನ್ಯೂನಗುಣಗಳು ಮಾತ್ರ ಇವೆ. ನ್ಯೂನಗುಣಗಳಿಂದ ಬರುವ ಕಾವ್ಯಸೌಂದರ್ಯ ಗಮನಾರ್ಹವಲ್ಲವೆಂದು ಗುಣವಿಲ್ಲ ಎನ್ನಲಾಗಿದೆ. ಈ ಸಮಾಧಾನವು ಸ್ವಲ್ಪವೂ ಸ್ವೀಕಾರಯೋಗ್ಯವಾಗಿ ನಮಗೆ ಕಾಣುವುದಿಲ್ಲ. ಈ ಉಲ್ಲಾಸದ ವಿವೇಚನೆಗೆಲ್ಲಾ ಮೂಲಭೂತವಾದ ವಿಷಯದಲ್ಲಿಯೇ ಮಮ್ಮಟನು ಉನ್ಮತ್ತನಂತೆ ಪೂರ್ವಾಪರವಿರುದ್ಧವಾಗಿ ಹೇಳಿಯಾನೆಂದು ನಂಬುವುದೂ ಕಷ್ಟ. ನಮ್ಮ ಪರಿಹಾರ ಹೀಗೆ— 'ನಿನ್ನ ಅಲಂಕಾರಗಳ ಉದಾಹರಣೆಗಳೆಲ್ಲವೂ ಗುಣಪೂರ್ಣವಾಗಿಲ್ಲ. ನಿರ್ಗುಣವಾದ ಎಷ್ಟೋ ಕಾರ್ಯಗಳನ್ನು ಅಲಂಕಾರಗಳಿಗೆ ನೀನೇ ಉದಾಹರಿಸಿರುವೆ. 'ಸ್ವರ್ಗಪ್ರಾಪ್ತಿರನೇನೈವ . . .' ಮುಂತಾದ ಬೇಕಾದಷ್ಟು ನಿರ್ಗುಣ ವಾಕ್ಯಗಳನ್ನೂ ನೀನೇ ಅಲಂಕಾರಗಳಿಗೆ ಲಕ್ಷ್ಯವೆಂದು ತೋರಿಸಿ ಕಾವ್ಯವೆಂದೊಪ್ಪಿರುವುದರಿಂದ 'ಕಾವ್ಯದ ಶೋಭೆಗೆ ಗುಣವೇ ಮೂಲ; ಅದರ ಅತಿಶಯಕ್ಕೆ ಮಾತ್ರ ಅಲಂಕಾರ ಕಾರಣ'ವೆಂಬ ನಿನ್ನ ಸೂತ್ರ ಪ್ರಯೋಗದಿಂದ ದೂಷಿತವಾಗಿದೆ'. ಈ ಟೀಕೆಯನ್ನು ವಾಮನನ ಮೇಲೆ ಮಾಡಲು ಬೇಕಾದಷ್ಟು ಆಧಾರವುಂಟು. ಇದೇ ವಾಕ್ಯವನ್ನಲ್ಲದಿದ್ದರೂ ಇದರಂತಹ 'ಹಸ್ತೀ ಹಿ ಜಂಗಮಂ ದುರ್ಗಂ', 'ನಿದ್ರೇಯಮಕಮಲಾ ಲಕ್ಷ್ಮೀಃ' ಮುಂತಾದ ವಾಕ್ಯಖಂಡಗಳನ್ನು ವಾಮನನು ವಿಶೇಷೋಕ್ತಿಗೆ ಉದಾಹರಣೆಯೆಂದು ಕೊಟ್ಟಿದ್ದಾನೆ. ಅಥವಾ ಚಿತ್ರಕಾವ್ಯವನ್ನು ಕಾವ್ಯವೆಂದೊಪ್ಪುವ ಮಮ್ಮಟನಿಗೆ ನಿರ್ಗುಣವಾದ ರಚನೆಯೂ ಸಾಲಂಕಾರವಾಗಿದ್ದರೆ ಕಾವ್ಯವೆಂಬುದೇ ಸಿದ್ಧಾಂತವೆಂದು ಸಮಾಧಾನಪಟ್ಟುಕೊಳ್ಳಬೇಕು. ವಸ್ತುತಃ ಇಲ್ಲಿ ಕಾವ್ಯಸಾಮಾನ್ಯವನ್ನು ಚರ್ಚಿಸಲಾಗುತ್ತಿದೆಯೇ ಹೊರತು, ಕಾವ್ಯದ ಏಕದೇಶಗಳನ್ನಲ್ಲ. ಅಥವಾ 'ಕಾವ್ಯದಲ್ಲಿ ಗುಣಕೃತವಾದ ಶೋಭೆಯೇ ಇಲ್ಲದಾಗಲೂ, ಅಲಂಕಾರ ಬರಬಹುದಾದ್ದರಿಂದ ಗುಣಕೃತವಾದ ಶೋಭೆಯನ್ನು ಅಲಂಕಾರ ಹೆಚ್ಚಿಸುವುದೆಂಬ ಮಾತೇ ಹಾಸ್ಯಾಸ್ಪದ' ಎಂದು ವಿವರಿಸಬಹುದು. (ನೋಡಿ ವಿದ್ಯಾಧರನ **ಏಕಾವಲೀ**, V, ೧.)

16 ಹಿಂದಿನ ಭರತ, ದಂಡಿ, ವಾಮನ, ಎಲ್ಲರೂ ಕಾವ್ಯಗುಣಗಳು ಹತ್ತೆನ್ನುತ್ತಿದ್ದರು. ಭಾಮಹನೊಬ್ಬನು ಮಾತ್ರ ಮೂರನ್ನೇ ಪರಿಗಣಿಸಿದ್ದನು.

ಶೃಂಗಾರರಸಾಸ್ವಾದದ ಕಾಲದಲ್ಲಿ ಮನಸ್ಸನ್ನು ಕರಗಿಸುವ ಆಹ್ಲಾದಕತ್ವ ಗುಣವೇ 'ಮಾಧುರ್ಯ.'

ಇಲ್ಲಿ ಶೃಂಗಾರರಸವೆಂದರೆ ಸಂಭೋಗಶೃಂಗಾರವೆಂದು ತಾತ್ಪರ್ಯ. 'ದ್ರುತಿ' ಎಂದರೆ ಕರಗಿದಂತಾಗುವಿಕೆ. 'ಶ್ರವ್ಯತ್ವ'ವು ಮಾಧುರ್ಯದ ವೈಶಿಷ್ಟ್ಯವೇನೂ ಅಲ್ಲ; ಏಕೆಂದರೆ ಅದು ಓಜಸ್ಸು ಪ್ರಸಾದಗಳಿಗೂ ಸಾಧಾರಣವಾಗಿರುತ್ತದೆ.[17]

ಕರುಣೇ ವಿಪ್ರಲಂಭೇ ತತ್ ಶಾಂತೇ ಚಾತಿಶಯಾನ್ವಿತಮ್ । ೪*ab* ।

ಅದು (=ಮಾಧುರ್ಯ) ಕರುಣರಸ, ವಿಪ್ರಲಂಭಶೃಂಗಾರ, ಮತ್ತು ಶಾಂತರಸ ಗಳಲ್ಲಿ ವಿಶೇಷವಾಗಿರುತ್ತದೆ.[18]

ಆಗ ಅತಿಯಾಗಿ ಚಿತ್ತ ದ್ರವಿಸುವುದೇ ಅದಕ್ಕೆ ಕಾರಣ.

## ಓಜಸ್ಸು

ದೀಪ್ತ್ಯಾತ್ಮವಿಸ್ತೃತೇರ್ಹೇತುರೋಜೋ ವೀರರಸಸ್ಥಿತಿ । ೪*cd* ।

ಮನಸ್ಸಿನ ದೀಪ್ತಿ ಅಥವಾ ವಿಸ್ತಾರಕ್ಕೆ ಕಾರಣ 'ಓಜಸ್ಸು'; ಅದು ವೀರರಸದಲ್ಲಿ ಹೆಚ್ಚಾಗಿರುವ ಗುಣ.

ಚಿತ್ತವನ್ನು ವಿಸ್ತಾರಗೊಳಿಸಿ ಪ್ರದೀಪ್ತಮಾಡುವ ಗುಣವೇ ಅದು.

ಬೀಭತ್ಸರೌದ್ರರಸಯೋಸ್ತಸ್ಯಾಧಿಕ್ಯಂ ಕ್ರಮೇಣ ಚ । ೫*ab* ।

ಬೀಭತ್ಸ, ರೌದ್ರ, ಈ ರಸಗಳಲ್ಲಿ ಅದು ಅನುಕ್ರಮವಾಗಿ ಹೆಚ್ಚಾಗಿರುತ್ತದೆ. ಎಂದರೆ ಓಜಸ್ಸು ವೀರಕ್ಕಿಂತಲೂ ಬೀಭತ್ಸದಲ್ಲಿ ಹೆಚ್ಚು; ಬೀಭತ್ಸಕ್ಕಿಂತಲೂ ರೌದ್ರ ದಲ್ಲಿ ಹೆಚ್ಚು ಎಂದು ಅಭಿಪ್ರಾಯ.

## ಪ್ರಸಾದ

ಶುಷ್ಕೇಂಧನಾಗ್ನಿವತ್ ಸ್ವಚ್ಛಜಲವತ್ ಸಹಸೈವ ಯಃ । ೫*cd* ।

---

[17] ಭಾಮಹನ ಮಾಧುರ್ಯಗುಣದ ಲಕ್ಷಣದಲ್ಲಿ 'ಶ್ರವ್ಯತ್ವ' ಅಥವಾ ಕಿವಿಗಿಂಪಾಗಿರುವಿಕೆಯ ಉಲ್ಲೇಖ ಬಂದಿದೆ, ಅದನ್ನಿಲ್ಲಿ ಮಮ್ಮಟನು ಖಂಡಿಸುತ್ತಿದ್ದಾನೆ. ಹೋಲಿಸಿ—ಇದೇ ಲೇಖಕನ **ಕನ್ನಡ ಕಾವ್ಯಾಲಂಕಾರ**, ಪು. ೨೨.

[18] ಚಿತ್ತದ್ರುತಿಕಾರಕವಾದ ಮಾಧುರ್ಯವು ಸಂಭೋಗಶೃಂಗಾರಕ್ಕಿಂತ ಕರುಣದಲ್ಲಿ, ಕರುಣ ಕ್ಕಿಂತ ವಿಪ್ರಲಂಭದಲ್ಲಿ, ವಿಪ್ರಲಂಭಕ್ಕಿಂತ ಶಾಂತರಸದಲ್ಲಿ ಹೆಚ್ಚೆಂದು ಪ್ರದೀಪಕಾರನು ವಿವರಿಸು ತ್ತಾನೆ. 'ಶೃಂಗಾರ ಏವ ಮಧುರಃ ಪರಃ ಪ್ರಹ್ಲಾದನೋ ರಸಃ' ಎಂಬ ಧ್ವನಿಕಾರನ ಮಾತು ಈ ವಿವರಣೆಗೆ ಪೋಷಕವಾಗಿಲ್ಲ.

ವ್ಯಾಪ್ನೋತ್ಯನ್ಯತ್ ಪ್ರಸಾದೋಽಸೌ ಸರ್ವತ್ರ ವಿಹಿತಸ್ಥಿತಿಃ । ೭*ab* ।

ಬೆಂಕಿ ಒಣಕಟ್ಟಿಗೆಯನ್ನು ಆವರಿಸುವಂತೆ, ಅಥವಾ ತಿಳಿನೀರಿನಂತೆ ತಟ್ಟನೆ ಮನಸ್ಸನ್ನೆಲ್ಲ ವ್ಯಾಪಿಸುವ ಗುಣವೇ 'ಪ್ರಸಾದ.'[19] ಇದು ಸರ್ವತ್ರ ಇರುತ್ತದೆ.

ಕಾರಿಕೆಯಲ್ಲಿ 'ಅನ್ಯತ್' ಎಂದರೆ 'ಮನಸ್ಸನ್ನು' ಎಂದರ್ಥ. 'ಸರ್ವತ್ರ' ಎಂದರೆ ಸಕಲ ರಸಗಳಲ್ಲಿ ಮತ್ತು ಸಕಲ 'ರಚನೆ'ಗಳಲ್ಲಿ ಎಂದು ತಾತ್ಪರ್ಯ.[20]

ಗುಣವೃತ್ತ್ಯಾ ಪುನಸ್ತೇಷಾಂ ವೃತ್ತಿಶ್ಶಬ್ದಾರ್ಥಯೋರ್ಮತಾ । ೭*cd* ।

'ಶಬ್ದ' ಮತ್ತು 'ಅರ್ಥ'ಗಳಲ್ಲಿ ಅವು ಉಂಟೆನ್ನುವುದನ್ನು ಗೌಣಶಬ್ದ ಪ್ರಯೋಗವೆಂದು ಭಾವಿಸಬೇಕು.

'ಗುಣವೃತ್ತಿ'ಯೆಂದರೆ ಸಾದೃಶ್ಯಮೂಲವಾದ ಲಕ್ಷಣಾವ್ಯಾಪಾರ. ಬಾಹ್ಯವಾದ ಸ್ಥೂಲಕಾಯದಲ್ಲಿ ಶೂರತ್ವವನ್ನು ಆರೋಪಿಸುವಂತೆಯೇ ಮಾಧುರ್ಯಾದಿ ಗುಣಗಳನ್ನು ಶಬ್ದಾರ್ಥಗಳಲ್ಲಿ ಆರೋಪಿಸುವುದಾದರೂ.

ಅವು ಮೂರೇ ಏಕಾಗಬೇಕು, ಹತ್ತೇಕೆ ಅಲ್ಲವೆಂಬುದನ್ನು ಮುಂದಿನ ಕಾರಿಕೆ ಹೇಳುತ್ತದೆ:—

---

[19] ರಸಸ್ವರೂಪವನ್ನು ಚಿತ್ತದ ದ್ರುತಿ, ವಿಸ್ತಾರ, ವ್ಯಾಪಕತೆಗಳ ಮೂಲಕ ನಿರೂಪಿಸಿದ ಮೊದಲನೆಯ ಲಾಕ್ಷಣಿಕನು ಆನಂದವರ್ಧನನೆಂದೇ ತೋರುತ್ತದೆ. ಭರತನ ನಾಟ್ಯಶಾಸ್ತ್ರದಲ್ಲಿಯೂ ಈ ಬಗೆಯ ರಸಪ್ರಕ್ರಿಯೆ ಅಪರಿಚಿತ. ಕಾವ್ಯಕ್ಕೆ ಅನ್ವಯಿಸುವ ಗುಣಗಳಿಗೆ ಹೊಂದಿಕೊಳ್ಳುವಂತೆ ಹೊಸದಾಗಿ ರಸಪ್ರಕ್ರಿಯೆಯನ್ನು ಮಾರ್ಪಡಿಸಿಕೊಂಡಿರುವುದನ್ನಿಲ್ಲಿ ನೋಡಬಹುದು. ಈ ಪ್ರಕ್ರಿಯೆಯಿಂದ ಕಾವ್ಯಾಸ್ವಾದದ ಮನೋವೃತ್ತಿಯಲ್ಲಿ ಮೂರು ವಿಭಿನ್ನ ಪ್ರಕಾರಗಳು ಉಂಟಾಗುತ್ತವೆ. ಕಾವ್ಯವು ಮನಸ್ಸನ್ನು ಕರಗಿಸುವುದು ಇಲ್ಲವೆ ಬೆಳಗಿಸುವುದು ಇಲ್ಲವೆ ವ್ಯಾಪಿಸುವುದು ಸಿದ್ಧಾಂತಶುದ್ಧವೆಂದರೂ ಅನುಭವಸಿದ್ಧ ಹೌದೇ ಎಂದು ಕೇಳಲವಕಾಶವುಂಟು. ಈ ಮೂರಕ್ಕೂ ಮೂರು ಬೇರೆ ಪದಗಳನ್ನು ಪ್ರಯೋಗಿಸಿದರೂ ವಸ್ತುತಃ ಕ್ರಿಯಾಭೇದ ಸ್ಪಷ್ಟವಾಗಿದೆಯೆ ಎನ್ನುವುದು ಮತ್ತೊಂದು ಪ್ರಶ್ನೆ. ಮನಸ್ಸನ್ನು ವ್ಯಾಪಿಸುವುದು ಸಕಲ ರಸಗಳಿಗೂ ಸಾಧಾರಣವಾದ್ದರಿಂದ ಕಾವ್ಯಾಸ್ವಾದದ ಕಾಲದಲ್ಲಿ ಸ್ಫುಟಾಂತರಗಳಿರಬಹುದಾದುದು ಚಿತ್ತದ ದ್ರುತಿ ಮತ್ತು ದೀಪ್ತಿಗಳಿಗೆ ಮಾತ್ರ. ಇವೆರಡನ್ನೂ ಕ್ರಮವಾಗಿ ಅನುಕಂಪೆ (*Pity*) ಮತ್ತು ಉತ್ಸಾಹ (*Energy*)ಗಳೊಡನೆ ಹೋಲಿಸಬಹುದು.

[20] ಆನಂದವರ್ಧನನಂತೆ ಮಮ್ಮಟನೂ ಇಲ್ಲಿ ಪ್ರಸಾದಗುಣವನ್ನು ವಿವರಿಸುವಾಗ ಅದು ಸಕಲ ರಸಗಳಿಗೂ ಸಾಧಾರಣವೆಂದು ಹೇಳಿ ನಿಲ್ಲಿಸದೆ, ಸಕಲ ರಚನೆಗಳಿಗೂ ಸಾಧಾರಣವೆಂದು ನಿರ್ದೇಶಿಸುತ್ತಾನೆ. ಎಲ್ಲ ಬಗೆಯ ರಚನೆಗಳಲ್ಲಿಯೂ ಪ್ರಸಾದವೆಂಬ ಸಾಮಾನ್ಯ ಗುಣವೊಂದುಂಟೆಂಬುದು ಕೇವಲ ನವೀನರ ಸಿದ್ಧಾಂತ. ಈ ಸಿದ್ಧಾಂತವು ಪ್ರಾಚೀನರ ಸಂಘಟನಾತತ್ತ್ವಕ್ಕೆ ವಿರುದ್ಧವಾಗಿದೆ.

ಕೇಚಿದಂತರ್ಭವಂತ್ಯೇಷು ದೋಷತ್ಯಾಗಾತ್ ಪರೇ ಶ್ರಿತಾಃ।
ಅನ್ಯೇ ಭಜಂತಿ ದೋಷತ್ವಂ ಕುತ್ರಚಿನ್ನ ತತೋ ದಶ ॥ ೭ ॥

ಕೆಲವು ಈ ಮೂರರಲ್ಲೇ ಅಂತರ್ಗತವಾಗುತ್ತವೆ; ಇನ್ನು ಕೆಲವು ದೋಷಗಳ ಅಭಾವ ಮಾತ್ರ; ಮತ್ತೆ ಕೆಲವು ದೋಷಗಳೇ. ಆದುದರಿಂದ ಗುಣಗಳ ಸಂಖ್ಯೆ ಹೇಗೂ ಹತ್ತಲ್ಲ.[21]

ಅನೇಕ ಪದಗಳಿದ್ದರೂ ಒಂದೇ ಪದದಂತೆ ತೋರುವಾಗ 'ಗುಣ'ವೆಂದು ನಿರ್ದೇಶಿಸುವ 'ಶ್ಲೇಷ', ಆರೋಹ-ಅವರೋಹ-ಕ್ರಮವುಳ್ಳ ಬಂಧದಲ್ಲಿ ಉಂಟೆನ್ನುವ 'ಸಮಾಧಿ', ಅಕ್ಷರಗಳು ಕುಣಿಯುವಂತೆ ಬರುವ 'ಉದಾರತೆ', ಓಜೋಮಿಶ್ರಿತ ವಾಗಿ ಬಂಧಶೈಥಿಲ್ಯರೂಪವಾಗಿರುವ 'ಪ್ರಸಾದ'—ಎಲ್ಲವೂ ಓಜೋಗುಣದಲ್ಲಿಯೇ ಅಂತರ್ಗತವಾಗುತ್ತವೆ. ಮಾಧುರ್ಯವನ್ನು 'ಬಿಡಿಪದಗಳಿಂದ ತುಂಬಿದ್ದೆ'ನ್ನುವಾಗ ನಮ್ಮ ಲಕ್ಷಣದ ಮಾಧುರ್ಯದಲ್ಲಿ ಅದು ಸೇರುವುದು ಸ್ಪಷ್ಟವೇ ಆಗಿದೆ. ಹಾಗೆಯೇ 'ಅರ್ಥವ್ಯಕ್ತಿ'ಯೆನ್ನುವುದೇನೂ 'ಪ್ರಸಾದ'ಕ್ಕಿಂತ ಬೇರೆಯಾದುದಲ್ಲ. ಹಿಡಿದ 'ರೀತಿ'ಯನ್ನು ಬಿಡದಿರುವುದೇ 'ಸಮತೆ'ಯಾದರೆ ಒಮ್ಮೊಮ್ಮೆ ಆ ಸಮತೆ 'ಗುಣ' ವಾಗುವ ಬದಲು ದೋಷವಾಗಿಬಿಡುತ್ತದೆ. ಉದಾಹರಣೆಗೆ,

ಮಾತಂಗಾಃ ಕಿಮು ವಲ್ಗಿತೈಃ ಕಿಮಫಲೈರಾಡಂಬರೈರ್ಜಂಬುಕಾಃ[22]

. . . . . . . . . . . . . .

ಮುಂತಾದ ಲಕ್ಷ್ಯಗಳಲ್ಲಿ ಸಿಂಹವನ್ನು ವರ್ಣಿಸಲು ಮೊದಲಿನ ಶೈಲಿಯಲ್ಲಿದ್ದ ಕೋಮಲವರ್ಣಗಳನ್ನು ಬಿಟ್ಟಿರುವುದು ಗುಣವಾಗಿ ಪರಿಣಮಿಸಿದೆಯೆನ್ನಬೇಕು. 'ಕಷ್ಟತ್ವ', 'ಗ್ರಾಮ್ಯತ್ವ' ಎರಡನ್ನೂ ದೋಷವೆಂದಮೇಲೆ, ಆ ದೋಷಗಳನ್ನು ಬಿಡುವಷ್ಟರಿಂದಲೇ ಕ್ರಮವಾಗಿ ಪಾರುಷ್ಯವಿಲ್ಲದ 'ಸೌಕುಮಾರ್ಯ'ವೂ ಔಜ್ಜ್ವಲ್ಯ ರೂಪವಾದ 'ಕಾಂತಿ'ಯೂ ಸಿದ್ಧವಾಗುವವು. (ಅವೇನೂ ಆದ್ದರಿಂದ ಹೊಸದಾದ ಗುಣಗಳಲ್ಲ).[23] ಹೀಗೆ ಶಬ್ದಗುಣಗಳು ಹತ್ತೆನ್ನುವುದಕ್ಕೆ ಆಧಾರವಿಲ್ಲ.

---

[21] ಇಲ್ಲಿಂದ ಮುಂದಿನ ವಿವರಣೆಯೆಲ್ಲವೂ ವಾಮನನ ವಿಶಿಷ್ಟಗುಣಗಳ ಖಂಡನೆಯೇ. ಮಿಕ್ಕ ಏಳು ಗುಣಗಳನ್ನು ಕುರಿತು ವಾಮನನು ಬರೆದಿರುವ ಲಕ್ಷಣಗಳನ್ನೇ ಅನುವಾದ ಮಾಡಿ ಅವು ಗುಣಗಳೆಂದು ಏಕೆ ಎನಿಸಲಾರವೆಂಬುದನ್ನು ಮಮ್ಮಟನು ತೋರಿಸುತ್ತಾನೆ.

[22] ಶ್ರುತಿಕಷ್ಟದೋಷವೇ ವಾಚ್ಯಮಹಿಮೆಯಿಂದ ಗುಣವೆನಿಸುವುದಕ್ಕೆ ಉದಾಹರಣೆಯಾಗಿ ಈ ಶ್ಲೋಕ ಆಗಲೇ ಏಳನೆಯ ಉಲ್ಲಾಸದಲ್ಲಿ ಬಂದಿದೆ. ಅನುವಾದವನ್ನು ಅಲ್ಲೇ ನೋಡಬಹುದು.

[23] 'ಅಪದೋಷತೈವ ವಿಗುಣಸ್ಯ ಗುಣಃ' ಎನ್ನುವಂತೆ ದೋಷಾಭಾವವನ್ನೇ ಗುಣದ ಮಟ್ಟಕ್ಕೆ ಏರಿಸುವ ವಾಮನನ ಸಿದ್ಧಾಂತವನ್ನು ಮಮ್ಮಟನು ಒಪ್ಪುವುದಿಲ್ಲ. ವಾಮನಾದಿಗಳ

(ಅರ್ಥಗುಣಗಳು ಹತ್ತೆನ್ನುವ ಮಾತೂ ಹೀಗೆಯೇ.) 'ಒಂದು ಪದದಿಂದ ಹೇಳುವುದಕ್ಕೆ ಪ್ರತಿಯಾಗಿ ದೊಡ್ಡ ವಾಕ್ಯವನ್ನೇ ಪ್ರಯೋಗಿಸುವುದು, ಒಂದು ವಾಕ್ಯದಿಂದ ಹೇಳುವಂತಹುದನ್ನು ಒಂದೇ ಪದದಲ್ಲಿ ಹೇಳುವುದು, ಒಂದು ವಾಕ್ಯದ ಬದಲು ಅನೇಕ ವಾಕ್ಯಪ್ರಯೋಗ (ವ್ಯಾಸ), ಅನೇಕ ವಾಕ್ಯದ ಬದಲು ಒಂದೇ ವಾಕ್ಯಪ್ರಯೋಗ (=ಸಮಾಸ)'—ಇವುಗಳು 'ಅರ್ಥದ ಓಜಸ್ಸನ್ನು ತೋರಿಸುತ್ತವೆ'[24] ಎಂಬುದು ಸರಿಯಲ್ಲ. ಇವು ವೈಚಿತ್ರ್ಯವನ್ನು ತರುವುದು ನಿಜವಾದರೂ, ಇವಕ್ಕೂ ಓಜಸ್ಸೆಂಬ ಗುಣಕ್ಕೂ ಅಭೇದವಿಲ್ಲ. ಇವೊಂದೂ ಇಲ್ಲದೆ ಇದ್ದಾಗಲೂ ಕೂಡ 'ಕಾವ್ಯ'ವೆಂಬ ವ್ಯವಹಾರವುಂಟು. 'ಅಪುಷ್ಟಾರ್ಥ'ವೆಂಬ ದೋಷದ ಪರಿಹಾರದಿಂದಲೇ 'ಸಾಭಿಪ್ರಾಯಾರ್ಥ'ವೆನ್ನುವ ಓಜಸ್ಸೂ, 'ಅಧಿಕಪದ'ವೆಂಬ ದೋಷದ ಪರಿಹಾರ ದಿಂದಲೇ ಅರ್ಥವೈಮಲ್ಯದ ಪ್ರಕಾರವಾದ ಪ್ರಸಾದವೂ, 'ಅನವೀಕೃತ'ವೆಂಬ ದೋಷದ ಪರಿಹಾರದಿಂದಲೇ ಉಕ್ತಿವೈಚಿತ್ರ್ಯವನ್ನುಳ್ಳ ಮಾಧುರ್ಯದ ಪ್ರಕಾರವೂ, 'ಅಪಾರುಷ್ಯ'ದ ಪರಿಹಾರದಿಂದಲೇ ಸೌಕುಮಾರ್ಯವೂ, ಅಮಂಗಲಾದಿ 'ಅಶ್ಲೀಲ' ಮತ್ತು 'ಗ್ರಾಮ್ಯತ್ವ'ಗಳ ಅಭಾವದಿಂದಲೇ ಉದಾರತೆಯೂ ಪ್ರಕಾರಾಂತರವಾಗಿ ನಮ್ಮಿಂದಲೂ ಸ್ವೀಕೃತವಾದಂತೆಯೇ ಆಗುತ್ತದೆ. ಮುಂದೆ ಹೇಳಲಿರುವ 'ಸ್ವಭಾವೋಕ್ತಿ ಅಲಂಕಾರ'ವೂ, (ಹಿಂದೆ ಹೇಳಲಾದ) 'ರಸಧ್ವನಿ' ಮತ್ತು 'ಗುಣೀಭೂತ ವ್ಯಂಗ್ಯ'ಗಳೂ ಸೇರಿ ಸ್ಫುಟಾರ್ಥಸ್ವರೂಪದ 'ಅರ್ಥವ್ಯಕ್ತಿಗುಣ' ದೀಪ್ತರಸರೂಪ ವಾದ 'ಕಾಂತಿಗುಣ'ಗಳೆರಡನ್ನೂ ಗರ್ಭೀಕರಿಸುತ್ತವೆ. ಹಾಗೆಯೇ, ಕ್ರಮ, ಕೌಟಿಲ್ಯ, ಅನುಲ್ಬಣತ್ವಗಳ ಸಮುಚಿತ ಘಟನೆಯೆನಿಸುವ 'ಶ್ಲೇಷ'ವೆಂಬುದು ಅರ್ಥವೈಚಿತ್ರ್ಯದ ಒಂದು ಪರಿಯೇ ಹೊರತು ಒಂದು 'ಗುಣ'ವಲ್ಲ. ವೈಷಮ್ಯವಲ್ಲದುದೇ 'ಸಮತೆ' ಯಾದ್ದರಿಂದ ಅದು ಕೂಡ ಹೊಸದೊಂದು ಗುಣವೇನೂ ಅಲ್ಲ, ಹುಚ್ಚನಲ್ಲದ ಯಾವನು ತಾನೆ ಒಂದು ಪ್ರಕೃತವಾಗಿರುವಾಗ ಇನ್ನೊಂದನ್ನು ಹೇಳಿಯಾನು? ನವೀನವಾದ, ಇಲ್ಲವೆ ಪೂರ್ವದವರ ಪ್ರತಿಬಿಂಬರೂಪವಾದ ಕವಿದರ್ಶನವಾದರೂ ಇಲ್ಲದೆ ಹೋದರೆ ಅದನ್ನು ಕಾವ್ಯವೆಂದು ಯಾರು ಪರಿಗಣಿಸುವರು? ಇದನ್ನು 'ಸಮಾಧಿ'ಯೆಂಬ ಗುಣವೆನ್ನುವ ಕಾರಣವೇನೂ ಇಲ್ಲ.

---

ಗುಣವಿವೇಚನೆಯ ಸಂಗ್ರಾಹ್ಯಭಾಗವೊಂದೂ ಲುಪ್ತವಾಗದಂತೆ ನೋಡಿಕೊಳ್ಳಲು ಮಮ್ಮಟನು ಆ ಗುಣಗಳ ವಿಪರ್ಯಯಗಳನ್ನೆಲ್ಲ ಒಂದೂ ಬಿಡದಂತೆ ದೋಷಪ್ರಕರಣದಲ್ಲಿ ವಿವರಿಸಿಬಿಟ್ಟಿದ್ದಾನೆ. ಹೀಗೆ ಮಾಡಿರುವುದರಿಂದ ಕಾವ್ಯಪ್ರಕಾಶದ ವ್ಯಾವಹಾರಿಕ ಪ್ರಯೋಜನ (*Value for Practical Criticism*) ಸ್ವಲ್ಪವೂ ಕಡಿಮೆಯಾಗಿಲ್ಲ. ಆದರೆ ಈ ಮಾತನ್ನೇ ಧ್ವನ್ಯಾಲೋಕಕ್ಕೆ ಅನ್ವಯಿಸು ವಂತಿಲ್ಲ; ಏಕೆಂದರೆ ಅಲ್ಲಿ ಇಲ್ಲಿರುವಂತೆ ದೋಷಪ್ರಕರಣವೇ ಇಲ್ಲ.

[24] ಇದೂ ವಾಮನನ ಮತವೇ.

ತೇನ ನಾರ್ಥಗುಣಾ ವಾಚ್ಯಾಃ ॥ ೮a. ॥

ಆದ್ದರಿಂದ ಅರ್ಥಗುಣಗಳನ್ನು (ಬೇರೆಯಾಗಿ) ಹೆಸರಿಸಬೇಕಾಗಿಲ್ಲ.

ಕಾರಿಕೆಯಲ್ಲಿ ‘ವಾಚ್ಯ’ ಎಂದರೆ ‘ವಕ್ತವ್ಯ’ವೆಂದರ್ಥವೇ ಹೊರತು ಬೇರೆ ಅಲ್ಲ.

ಪ್ರೋಕ್ತಾಃ ಶಬ್ದಗುಣಾಶ್ಚ ಯೇ ।
ವರ್ಣಾಃ ಸಮಾಸೋ ರಚನಾ ತೇಷಾಂ ವ್ಯಂಜಕತಾಮಿತಾಃ ॥ ೮bcd ॥

ಯಾವವನ್ನು (ಔಪಚಾರಿಕವಾಗಿ) ಶಬ್ದಗುಣಗಳೆನ್ನಲಾಗಿದೆಯೋ ವರ್ಣ, ಸಮಾಸ, ರಚನೆ—ಎಲ್ಲವೂ ಅವಕ್ಕೇ ವ್ಯಂಜಕಗಳೆಂದು ತಿಳಿಯಬೇಕು.[25]

ಯಾವವು ಯಾವಕ್ಕೆಂಬುದನ್ನು ಹೇಳುವ ಕಾರಿಕೆ ಕೆಳಗಿನದು :—

## ಮಾಧುರ್ಯಮಯ ರಚನೆ

ಮೂರ್ಧ್ನಿ ವರ್ಗಾಂತ್ಯಗಾಃ ಸ್ಪರ್ಶಾ ಅಟವರ್ಗಾ ರಣೌ ಲಘೂ ।
ಅವೃತ್ತಿರ್ಮಧ್ಯವೃತ್ತಿರ್ವಾ ಮಾಧುರ್ಯೇ ಘಟನಾ ತಥಾ ॥ ೯ ॥

ಟವರ್ಗವನ್ನು ಬಿಟ್ಟು ಉಳಿದ ವರ್ಗೀಯ ವ್ಯಂಜನಗಳು ತಂತಮ್ಮ ಪಂಚಮಾಕ್ಷರಗಳೊಂದಿಗೆ ಬರುವುದು, ಲಘುವಾದ ರೇಫಣಕಾರಗಳು ಇರುವುದು, ಸಮಾಸವಿಲ್ಲದೆ ಅಥವಾ ಸಮಾಸ ಅಲ್ಪವಾಗಿ ಇರುವುದು—ಇದು ಮಾಧುರ್ಯಗುಣವನ್ನು ಸೂಚಿಸುವ ರಚನೆ.[26]

ಟ-ಠ-ಡ-ಢ ಗಳನ್ನು ಬಿಟ್ಟು ಕಕಾರದಿಂದ ಮಕಾರದ ವರೆಗಿನ ವ್ಯಂಜನಗಳು ತಂತಮ್ಮ ವರ್ಗಪಂಚಮಾಕ್ಷರಗಳಿಂದ ಸೇರಿಕೊಂಡಾಗಲೂ,[27] ಹ್ರಸ್ವಸ್ವರ ಕೂಡಿರುವ ರೇಫಣಕಾರಗಳು ಬಂದಾಗಲೂ,[28] ಸಮಾಸದ ಅಭಾವ ಇಲ್ಲವೆ ಅಲ್ಪತ್ವವಿರುವಾಗಲೂ ಪದರಚನೆಯು ಮಾಧುರ್ಯಗುಣಕ್ಕೆ ಪೋಷಕವಾಗುವುದು. ಉದಾಹರಣೆ :—

---

[25] ಮಾಧುರ್ಯಾದಿ ಗುಣಗಳು ರಸಧರ್ಮಗಳಾದ್ದರಿಂದ ವರ್ಣಾದಿಗಳು ಅವನ್ನು ವ್ಯಂಜನಾವ್ಯಾಪಾರದಿಂದ ಧ್ವನಿಸಬಹುದು, ಅಷ್ಟೆ; ಇದೇ ಧ್ವನಿವಾದಿಗಳ ಸಿದ್ಧಾಂತ. ಗುಣಗಳು ವ್ಯಂಗ್ಯ; ರಚನೆ ವ್ಯಂಜಕ.

[26] ಈ ನಿರೂಪಣೆಯಲ್ಲಿ ಮಮ್ಮಟನು ಉದ್ಭಟನ ಕಾವ್ಯಾಲಂಕಾರ ಸಂಗ್ರಹವನ್ನು ಅನುಸರಿಸಿದ್ದಾನೆ.

[27] ಙ್ಗ, ನ್ತ, ಞ್ಚ, ಮ್ಬ ಮುಂತಾದ ಸಂಯುಕ್ತಾಕ್ಷರಗಳು.

[28] ರ, ರಿ, ರು, ಣ, ಣಿ, ಣು, ಎಂಬ ರೂಪಗಳು ; ರಾ, ಣಾ ಮುಂತಾದ ರೂಪಗಳಲ್ಲ.

ಅನಂಗರಂಗಪ್ರತಿಮಂ ತದಂಗಂ
ಭಂಗೀಭಿರಂಗೀಕೃತಮಾನತಾಂಗ್ಯಾಃ।
ಕುರ್ವಂತಿ ಯೂನಾಂ ಸಹಸಾ ಯಥೈತಾಃ
ಸ್ವಾಂತಾನಿ ಶಾಂತಾಪರಚಿಂತನಾನಿ ॥

ಅಂಗಮನಂಗನ ರಂಗಂ
ಸಂಗಡಿಸಿದ ಬಿಂಕಮಂತೆ ಬಂಧುರಮೆನೆ ತ-।
ನ್ವಂಗಿಯವಳ್ ಯುವಕರ ಹೃ
ದ್ರಂಗದೊಳೋಡಿಸಳೆ ಶಾಂತಿಚಿಂತೆಯನೆಲ್ಲಂ ॥

### ಓಜೋಮಯ ರಚನೆ

ಯೋಗ ಆದ್ಯತೃತೀಯಾಭ್ಯಾಮಂತ್ಯಯೋಃ ರೇಣ ತುಲ್ಯಯೋಃ।
ಟಾದಿಶ್ಶಷೌ ವೃತ್ತಿದೈರ್ಘ್ಯಂ ಗುಂಫ ಉದ್ಧತ ಓಜಸಿ ॥ ೧೦ ॥

ವರ್ಗೀಯಗಳಲ್ಲಿ ಒಂದು ಮೂರನೆಯವು ಕ್ರಮವಾಗಿ ಎರಡು ನಾಲ್ಕನೆಯವು ಗಳೊಂದಿಗೆ, ಅಥವಾ ರೇಫದೊಂದಿಗೆ, ಅಥವಾ ಸಮಾನಾಕ್ಷರದೊಂದಿಗೆ ಸಂಯುಕ್ತ ವಾಗುವುದು, ಟವರ್ಗ ಮತ್ತು ಶ, ಷ, ಗಳು ಹೆಚ್ಚಾಗಿರುವುದು, ಉದ್ದುದ್ದ ಸಮಾಸ ಗಳು ಸೇರುವುದು—ಇಂತಹ ಉದ್ಧತ ರಚನೆ ಓಜೋಮಯವಾದುದು.[29]

ವರ್ಗೀಯವ್ಯಂಜನಗಳಲ್ಲಿ ಒಂದು ಮೂರನೆಯವು ಎರಡು ನಾಲ್ಕನೆಯವು ಗಳೊಂದಿಗೆ ಕ್ರಮವಾಗಿ ಕೂಡುವುದು,[30] ರೇಫದೊಂದಿಗೆ ಕೆಳಗೆ, ಮೇಲೆ, ಅಥವಾ ಎರಡೂ ಕಡೆಗೆ ಕೂಡಿಕೊಳ್ಳುವುದು,[31] ಯಾವುದೇ ವ್ಯಂಜನವು ಸಮಾನ ವ್ಯಂಜನ ದೊಡನೆ ಸಂಯುಕ್ತವಾಗುವುದು,[32] ಣಕಾರವನ್ನು ಬಿಟ್ಟು ಟವರ್ಗದ ಅಕ್ಷರಗಳೂ,[33] ಶಕಾರ ಷಕಾರಗಳೂ, ಉದ್ದುದ್ದ ಸಮಾಸಗಳೂ ಹೇರಳವಾಗಿರುವುದು ವಿಕಟವಾದ ರಚನೆ. ಇದು ಓಜಸ್ಸಿಗೆ ಸೂಚಕವಾಗುತ್ತದೆ. ಉದಾಹರಣೆ:—

ಮೂರ್ಧ್ನಾಮುದ್ವೃತ್ತಕೃತ್ತಾವಿರಲಗಲಗಲದ್ರಕ್ತಸಂಸಕ್ತಧಾರಾ-
ಧೌತೇಶಾಂಘ್ರಿಪ್ರಸಾದೋಪನತ ಜಯಜಗಜ್ಜಾತಮಿಥ್ಯಾಮಹಿಮ್ನಾಮ್ ।

---

[29] ಇಲ್ಲಿ ಉದ್ಭಟನ ಪರುಷಾ ವೃತ್ತಿಯ ಪ್ರತಿಬಿಂಬವನ್ನು ನೋಡಬಹುದು.

[30] ಚ್ಛ, ಟ್ಠ, ತ್ಥ, ಪ್ಫ, ಇತ್ಯಾದಿ ಸಂಯುಕ್ತಾಕ್ಷರಗಳು.

[31] ಕ್ರ, ರ್ಕ, ರ್ಕ್ರ, ಇತ್ಯಾದಿ ಸಂಯುಕ್ತ ವರ್ಣರೂಪಗಳು

[32] ಕ್ಕ, ಚ್ಚ, ದ್ದ, ಇತ್ಯಾದಿ ಸಂಯುಕ್ತಾಕ್ಷರಗಳು.

[33] ಟ, ಠ, ಡ, ಢ.

ಕೈಲಾಸೋಲ್ಲಾಸನೇಚ್ಛಾವ್ಯತಿಕರಪಿಶುನೋತ್ಸರ್ಪಿದರ್ಪೋದ್ಧುರಾಣಾಂ
ದೋಷ್ಣಾಂ ಚೈಷಾಂ ಕಿಮೇತತ್ ಫಲಮಿಹ ನಗರೀರಕ್ಷಣೇ
ಯತ್ಪ್ರಯಾಸಃ ‖ [34]

## ಪ್ರಸಾದಮಯ ರಚನೆ

ಶ್ರುತಿಮಾತ್ರೇಣ ಶಬ್ದಾತ್ತು ಯೇನಾರ್ಥಪ್ರತ್ಯಯೋ ಭವೇತ್ ।
ಸಾಧಾರಣಃ ಸಮಗ್ರಾಣಾಂ ಸ ಪ್ರಸಾದೋ ಗುಣೋ ಮತಃ ‖ ೧೧ ‖

ಶಬ್ದವನ್ನು ಕೇಳುತ್ತಿದ್ದಂತೆಯೇ ಅರ್ಥದ ಪ್ರತೀತಿಯಾಗುವಂತಿರುವ ಸುಲಭ ರಚನೆ ಪ್ರಸಾದಗುಣಕ್ಕೆ ಸೂಚಕ. ಇದು ಎಲ್ಲಕ್ಕೂ ಸಮಾನ.

'ಎಲ್ಲಕ್ಕೂ' ಎಂದರೆ ಎಲ್ಲ ರಸಗಳಿಗೂ ಎಲ್ಲ ರಚನೆಗಳಿಗೂ ಎಂದರ್ಥ. ಉದಾಹರಣೆ :—

ಪರಿಮ್ಲಾನಂ ಪೀನಸ್ತನಜಘನಸಂಗಾದುಭಯತಃ
ತನೋರ್ಮಧ್ಯಸ್ಯಾಂತಃ ಪರಿಮಿಲನಮಪ್ರಾಪ್ಯ ಹರಿತಮ್ ।
ಇದಂ ವ್ಯಸ್ತನ್ಯಾಸಂ ಶ್ಲಥಭುಜಲತಾಕ್ಷೇಪವಲನೈಃ
ಕೃಶಾಂಗ್ಯಾಃ ಸಂತಾಪಂ ವದತಿ ಬಿಸಿನೀಪತ್ರಶಯನಮ್ [35] ‖

ಉರುವಕ್ಷೋಜನಿತಂಬಸಂಗದಿನೆರಳ್ಪಕ್ಕಂಗಳೊಳ್ ಮಾಸಿದಾ
ವರದೇಹಸ್ಥ ಸುಮಧ್ಯಭಾಗಮದು ತಾಂ ಸಂಪರ್ಕಮಂ ಬಿಟ್ಟಿರಲ್ ।
ಹರಿತಂ ತಾನೆಸೆ, ಮತ್ತೆ ತೋಳ ಲತೆಯಂ ಬೀಸಲ್ಕಣಂ ಗೋಜಿದಾ
ಬಿಸಿನೀಪತ್ರದ ಶಯ್ಯೆ ತಾನೆ ತರುಣೀಸಂತಾಪಮಂ ಪೇಳುಗುಂ ‖

## ಕೆಲವು ಅಪವಾದಗಳು[36]

ಯದ್ಯಪಿ ರಚನೆಗಳು ಗುಣಪರತಂತ್ರವೆನ್ನುವುದು ನಿಜ. ಆದರೂ—

ವಕ್ತೃವಾಚ್ಯಪ್ರಬಂಧಾನಾಮೌಚಿತ್ಯೇನ ಕ್ವಚಿತ್ಕ್ವಚಿತ್ ।
ರಚನಾವೃತ್ತಿವರ್ಣಾನಾಮನ್ಯಥಾತ್ವಮಪೀಷ್ಯತೇ ‖ ೧೨ ‖

---

[34] 'ಅವಿಮೃಷ್ಟವಿಧೇಯಾಂಶ'ವೆಂಬ ದೋಷಕ್ಕೆ ಲಕ್ಷ್ಯವೆಂದು ಏಳನೆಯ ಉಲ್ಲಾಸದಲ್ಲಿ ಈ ಪದ್ಯ ಮುಂಚೆಯೇ ಉದಾಹೃತವಾಗಿದೆ. ಅನುವಾದವೂ ಅಲ್ಲಿಯೇ ಬಂದಿದೆ.

[35] ರತ್ನಾವಲೀ ನಾಟಿಕಾ.

[36] ಇದೆಲ್ಲವೂ ಧ್ವನ್ಯಾಲೋಕದಿಂದ ಸಂಗ್ರಹೀತವಾದ ಪ್ರಕ್ರಿಯೆ.

ಹೇಳುವವನು, ವಿಷಯ, ಸಾಹಿತ್ಯದ ಪ್ರಕಾರ, ಇವುಗಳ ಔಚಿತ್ಯವನ್ನನುಲಕ್ಷಿಸಿ ರಚನೆ, ವೃತ್ತಿ, ವರ್ಣಗಳು ಬೇರೆ ರೂಪವಾಗಿಯೂ ಬರುತ್ತವೆ.

ವಿಷಯ, ಸಾಹಿತ್ಯಪ್ರಕಾರಗಳನ್ನು ಗಮನಿಸದೆ, ಕೇವಲ ಹೇಳುವ ಪಾತ್ರದ ಔಚಿತ್ಯದಿಂದ ಬರುವ ರಚನೆಗೆ ಉದಾಹರಣೆ:—

ಮಂಥಾಯಸ್ತಾರ್ಣವಾಂಭಃ ಪ್ಲುತಕುಹರಚಲನ್ಮಂದರಧ್ವಾನಧೀರಃ
ಕೋಣಾಘಾತೇಷು ಗರ್ಜತ್ ಪ್ರಲಯ ಘನ ಘಟಾನ್ಯೋನ್ಯಸಂಘಟ್ಟ-
ಚಂಡಃ ।
ಕೃಷ್ಣಾಕ್ರೋಧಾಗ್ರದೂತಃ ಕುರುಕುಲನಿಧನೋತ್ಪಾತನಿರ್ಘಾತವಾತಃ
ಕೇನಾಸ್ಮತ್‌ಸಿಂಹನಾದಪ್ರತಿರಸಿತಸಖೋ ದುಂದುಭಿಸ್ತಾಡಿತೋಽಸೌ[37] ‖

ಕಡೆಯಲ್ ಕ್ಷುಬ್ಧಂ ಕಡಲ್ನೀರಡಸೆ ಚಲಿಸಿದಾ ಮಂದರಂಬೊಲ್ಗಭೀರಂ
ಕಡುಕೋಣಾಘಾತಮುಣ್ಮಲ್ ಪೊಣಗಿ ಮಸೆವ ಕಲ್ಪಾಬ್ದದಂತುದ್ಧತಂ ಮುಂ-।
ಗಡೆ ಸಾರ್ಪಾಳ್ ದ್ರೌಪದೀಕ್ರೋಧಕೆ ಕುರುಶತಕುತ್ಪಾತಸಂಸೂಚಕಂ ಕೂ-
ರ್ಸಿಡಿಲಸ್ಮತ್‌ಸಿಂಹನಾದಪ್ರತಿರವಮೆನಿಪೀ ಭೇರಿಯಂ ಪೊಯ್ವನಾವೊಂ ‖[38]

ಇಲ್ಲಿ ವಿಷಯವೇನೂ ಕ್ರೋಧಾದಿಗಳಿಗೆ ವ್ಯಂಜಕವಲ್ಲ; ಸಾಹಿತ್ಯರೂಪವೋ ನಾಟಕ. ಉದ್ಧತರಚನೆ ಅಲ್ಲಿಗೆ ಪ್ರತಿಕೂಲವೇ ಸರಿ. ಆದರೆ ಹೇಳುವವನು ಮಾತ್ರ ಭೀಮಸೇನನೆಂಬ ಔಚಿತ್ಯವಿದೆ.

ಕೆಲವೊಮ್ಮೆ ಹೇಳುವ ಪಾತ್ರ, ಸಾಹಿತ್ಯರೂಪ—ಇವೆರಡನ್ನೂ ಕಡೆಗಣಿಸಿ ವಿಷಯದ ಔಚಿತ್ಯವೇ ಪ್ರಬಲತರವಾಗುವುದರಿಂದ ನಿರ್ದಿಷ್ಟ ರಚನೆಯಿರಬಹುದು. ಉದಾಹರಣೆ :—

ಪ್ರೌಢಚ್ಛೇದಾನುರೂಪೋಚ್ಛಲನರಯಭವತ್‌ಸೈಂಹಿಕೇಯೋಪಘಾತ-
ತ್ರಾಸಾಕೃಷ್ಟಾಶ್ವತಿರ್ಯಗ್ವಲಿತರವಿರಥೇನಾರುಣೇನೇಕ್ಷ್ಯಮಾಣಮ್ ।
ಕುರ್ವತ್ ಕಾಕುಸ್ಸ್ಥವೀರ್ಯಸ್ತುತಿಮಿವ ಮರುತಾಂ ಕಂಧರಾರಂಧ್ರ-
ಭಾಜಾಂ
ಭಾಂಕಾರೈರ್ಭೀಮಮೇತನ್ನಿಪತತಿ ವಿಯತಃ ಕುಂಭಕರ್ಣೋತ್ತ-
ಮಾಂಗಮ್[39] ‖

---

[37] ವೇಣೀಸಂಹಾರ ನಾಟಕ, ಅಂಕ-I.

[38] ಭಾಷಾಂತರ ಮೈಸೂರು ಸೀತಾರಾಮಶಾಸ್ತ್ರಿಗಳದು.

[39] ಮಹಾವೀರಚರಿತೆ (?)

ಭರದಿಂ ಮೇಲಕ್ಕೆ ಪಾರುತ್ತತಿಶಯಜವದಿಂ ರಾಹು ಪಾಯ್ವಂತೆ ತೋರಲ್
ಭಯದಿಂದಂ ಸೂರ್ಯಸೂತಂ ರಥಮೆ ಮುರಿವವೋಲ್ ನೆಗ್ಗಿರಲ್ ವಾಜಿಯಂ ಮೇಣ್ ।
ರಘುವೀರಸ್ತೋತ್ರಮಂ ಮೇಣಿವು ಸವನಗಣಂ ಮಾಳ್ಪವೊಲ್ ರಂಧ್ರಪೂರ್ಣಂ
ನಿಲೆ ರೌದ್ರಾರಾವದಿಂದಂ ಕೆಡೆದುದು ನಭದಿಂ ಕುಂಭಕರ್ಣೋತ್ತಮಾಂಗಮ್ ॥

ಮತ್ತೆ ಕೆಲವು ವೇಳೆ ಹೇಳುವ ಪಾತ್ರ, ವಿಷಯ, ಎರಡನ್ನೂ ಮೀರಿ ಸಾಹಿತ್ಯ ರೂಪದ ಔಚಿತ್ಯವೇ ಪ್ರಬಲವಾಗಿಬಿಡುತ್ತದೆ. ಉದಾಹರಣೆಗೆ, ಗದ್ಯದ ಆಖ್ಯಾಯಿಕೆಗಳಲ್ಲಿ ಶೃಂಗಾರರಸದ ಪ್ರತಿಪಾದನೆಗೂ ಕೋಮಲವರ್ಣಗಳು ಪ್ರಯುಕ್ತವಾಗುವುದಿಲ್ಲ; ಗದ್ಯಕಥೆಗಳಲ್ಲಿ ರೌದ್ರರಸದ ಪ್ರಸಂಗದಲ್ಲಿಯೂ ಅತ್ಯಂತ ಉದ್ಧತವಾದ ರಚನೆಯಿರುವುದಿಲ್ಲ. ನಾಟಕಾದಿಗಳಲ್ಲಿ ರೌದ್ರರಸವಿದ್ದರೂ ದೀರ್ಘಸಮಾಸಾದಿಗಳಿರುವುದಿಲ್ಲ. ಹೀಗೆಯೇ ಉಳಿದ ಔಚಿತ್ಯವಿವೇಕವನ್ನೂ ಊಹಿಸಿಕೊಳ್ಳಬಹುದು.[40]

ಇಲ್ಲಿಗೆ ಕಾವ್ಯಪ್ರಕಾಶದಲ್ಲಿ 'ಗುಣಲಂಕಾರಭೇದ-ನಿಯತಗುಣ
ನಿರ್ಣಯ'ವೆಂಬ ಎಂಟನೆಯ ಉಲ್ಲಾಸ ಮುಗಿದುದು.

**ವರಕಾವ್ಯದ ಗುಣನಿರ್ಣಯ-**
**ಮುರುಕಠಿಣಂ ಸಂಭ್ರಮಾನ್ವಿತಂ ಪ್ರವಿಭಿನ್ನಂ ।**
**ಪರಕೃತಿಯೊಳೆನಲ್ ಮಮ್ಮಟ-**
**ನರುಹಿದನಿಂತಸಮರೂಪದಿಂ ಗುಣಗಣಮಂ ॥**

**ಗುಣತತ್ತ್ವದ ನೆಲೆ ರಸ-**
**ಗುಣಮುರ್ಮಂ ಭೇದಮುಂತಲಂಕೃತಿಯಿಂದಂ ।**
**ಗುಣಗಣನೆಯುಮಿಂತರಿಯ-**
**ಲ್ಕೆಣೆಯಿಲ್ಲದ ಬುದ್ಧಿ ಶುದ್ಧಿ ಸಿದ್ಧಿಪುದದರಿಂ ॥**

[40] ಹೆಚ್ಚಿನ ವಿವರಗಳನ್ನು ಅಪೇಕ್ಷಿಸುವವರು ಕನ್ನಡ ಧ್ವನ್ಯಾಲೋಕವನ್ನು ಓದಬಹುದು.

## ಮೈಯೆಲ್ಲವೂ ನಗುವ . . . .

ಲಕ್ಷ ನಕ್ಷತ್ರಗಳ ಮಧುರ ಸ್ವಪ್ನಗಳಿಂದ
ತಿಳಿಯ ಬೆಳುದಿಂಗಳಿನ ಸವಿವಿಹಾರಗಳಿಂದ
ಹಗಲಿನೊಡನೆಯೆ ನೀನು ಎಚ್ಚತ್ತೆಯಾ ಹೇಳು ಹೂಹುಡುಗಿಯೆ ?
ಎಷ್ಟು ಚೆಲುವಾಗಿರುವೆ ಮೈಯೆಲ್ಲವೂ ನಗುವ ನಗೆಬೆಡಗಿಯೆ
ಅರೆನಿದ್ದೆಯೆಚ್ಚರದ ನಿನ್ನ ಬೆಡಗಿನ ಮುಖವು
ಏನೇನನೋ ಇನ್ನು ಕನವರಿಸಿದೆ !
ಏನ ಕಂಡೆಯೆ ನೀನು ಎಲೆ ಕಳ್ಳಿ, ನಗೆ ತುಂಟಿ !
ತಾಯಿ ಹಸುರೆಲೆ ಸೆರಗ ಮರೆಗೆ ಹೂಮುಖವಿಡುವೆ
ತಡೆಯಲಾರದ ನಗೆಯ ಕದ್ದು ಕದ್ದೂ ನಗುವೆ
ಬೆಳ್ದಿಂಗಳಿನ ನಗೆಯ ವೈಯೂರಿಯೆ !
ನಿನ್ನ ಮುಂದಿನ್ನೇಕೆ ರಂಭೆ, ಊರ್ವಶಿ, ಮೇನಕೆ, ತಿಲೋತ್ತಮೆಯರು ?
ಆ ಪಲುಕು ? ನಿನ್ನ ಹೂಮೈಬಳುಕಿಗಿದಿರೇನು ನರ್ತಕಿಯರು ?
ಬೆಳಕ ಕಂಡೆಚ್ಚತ್ತ ಸೌಂದರ್ಯಗಳ ಕಂಡು
ನಿನ್ನ ಚೆಲುವವಕಿಲ್ಲವೆನ್ನುವಂತೆ
ನಿನ್ನ ಚೆಲುವಿಗೆ ನೀನೆ ಮೆಚ್ಚಿ ಮೈಮರೆತಂತೆ
ತಲೆಯ ತೂಗುತ್ತಿರುವೆ
ಮೈಯ ಕುಲುಕುತ್ತಿರುವೆ.
ಅಬ್ಬ ನಗೆಯ ಮಾಯಾವಿ !
ಎಂಥ ವೈಯಾರದಲಿ ಮೈಯ ಮುರಿಯುತ್ತಿರುವೆ !
ಎಷ್ಟು ಜಂಬವೆ ನಿನಗೆ
ಮೈಯೆಲ್ಲವೂ ನಗುವ ಹೂಹುಡುಗಿಯೆ !
ಎಲ್ಲಿ ಕಲಿತೆಯೆ ಇದನು ?
ಏನು ನಗೆಯ ವಿಲಾಸ, ನಗೆ ಬೆಡಗಿಯೆ !

ಜಿ. ಎಸ್. ಸಿದ್ಧಲಿಂಗಯ್ಯ.

# ಪ್ರಾಚೀನ ಭಾರತದಲ್ಲಿ ನಗರನಿರ್ಮಾಣ

ವಾಸಾರ್ಹವಾದ, ನಾನಾಬಗೆಯ ಮನೆಗಳನ್ನು ಕಟ್ಟುವುದೂ, ಸುಲಲಿತವಾಗಿ ಜೀವನವನ್ನು ನಡೆಯಿಸುವುದಕ್ಕೆ ಅನುವಾದ ರೀತಿಯಲ್ಲಿ ಹಳ್ಳಿಗಳನ್ನೂ ಪಟ್ಟಣಗಳನ್ನೂ ನಿರ್ಮಿಸುವುದೂ ಭಾರತದ ಅತಿ ಪ್ರಾಚೀನವಾದ ಉಪಯುಕ್ತ ಕಲೆಯಾಗಿದೆ. ಗೃಹನಿರ್ಮಾಣ ನಗರನಿರ್ಮಾಣಶಾಸ್ತ್ರಗಳು ಪಾಶ್ಚಾತ್ಯರಾಷ್ಟ್ರಗಳ ವಿಜ್ಞಾನದ ಮುನ್ನಡೆಯ ಆಶ್ರಯದಲ್ಲಿ ಈಗ ಮಹತ್ತರ ಸಾಧನೆಗಳನ್ನು ಮಾಡಿವೆಯಾದರೂ ಈ ಕಲೆಗಳು ಶಾಸ್ತ್ರೀಯವಾಗಿ ಭಾರತದಲ್ಲಿ ಬೆಳೆದುಬಂದಿವೆ; ಬೆಳೆಯುತ್ತಲಿವೆ. ಪಶ್ಚಿಮದ ಬೆಳಕನ್ನು ನಿರಾಕಾರಿಸದೆ, ತನ್ನ ಪರಂಪರೆಯನ್ನು ಬಿಡದೆ, 'ವಾಸ್ತುವಿದ್ಯಾ' ಅಥವಾ 'ವಾಸ್ತುಶಾಸ್ತ್ರ' ಮುಂದುವರೆಯುತ್ತಿದೆ ಎನ್ನುವುದು ಅಭಿನಂದನೀಯ.

ವಸತಿನಿರ್ಮಾಣದ ವಿದ್ಯೆಯೇ 'ವಾಸ್ತುವಿದ್ಯಾ.' ಈ ಪದ ಸಂಸ್ಕೃತಸಾಹಿತ್ಯಕ್ಕೆ ತುಂಬ ಹಳೆಯದು. ಭಾರತದ ಶಿಲ್ಪಶಾಸ್ತ್ರದ ಒಂದು ಅತ್ಯುಪಯುಕ್ತ ಜನೋಪಯೋಗಿ ವಿಭಾಗವೇ 'ವಾಸ್ತುವಿದ್ಯಾ.' 'ವಾಸ್ತುವಿದ್ಯಾ' ಪದ 'ವಸ್' ಎಂದರೆ 'ವಾಸಮಾಡು' ಎಂಬ ಧಾತುವಿನಿಂದ ರೂಪಗೊಂಡಿದ್ದು. ಪದದ ಉಗಮದ ಅರ್ಥ ಮಹಿಮೆಯನ್ನು ಇದರಿಂದ ಮನಗಾಣಬಹುದಾಗಿದೆ. ಪ್ರಾಚೀನ ಸಾಹಿತ್ಯದಲ್ಲಿ ಅಲ್ಲಲ್ಲಿ ಕಂಡುಬರುವ 'ಹರ್ಮ್ಯ' (ಕಟ್ಟಡ), 'ಪ್ರಾಸಾದ' 'ಮಂಡಪ,' 'ಸಭಾ,' 'ಶಾಲಾ,' 'ಆರಂಗಪ್ರಪಾ' ಮುಂತಾದ ಬಗೆಬಗೆಯ ಪದಗಳು ನಮ್ಮ ನಾಡಿನ ವಾಸ್ತುಶಾಸ್ತ್ರದ ವೈಶಾಲ್ಯದ ಕಲ್ಪನೆ ತಂದುಕೊಡುವಂತಹವಾಗಿವೆ. ನಗರ ನಿರ್ಮಾಣದ ಆರಂಭ, ಭಾರತೀಯ ಪುರಾಣೇತಿಹಾಸಗಳಲ್ಲಿ ಐಕ್ಯಗೊಂಡಿದ್ದು, ಅದರ ಹುಟ್ಟನ್ನು ಹೀಗೆಯೇ ಎಂದು ನಿರ್ದಿಷ್ಟವಾಗಿ ಹೇಳುವುದು ಸಾಧ್ಯವಿಲ್ಲ. ನಮ್ಮ ದೇಶದ ಮಹಾಕಾವ್ಯಗಳಲ್ಲಿ ನಾವು ಮಯ, ವಿಶ್ವಕರ್ಮ ಮುಂತಾದ ಪ್ರತಿಭಾವಂತರಾದ ವಾಸ್ತುವಿದ್ಯಾನಿಪುಣರ ಕಥೆಗಳನ್ನು ಕಾಣುತ್ತೇವೆ. ಅವುಗಳ ಸತ್ಯಾಸತ್ಯತೆ ಎಷ್ಟೇ ಆಗಿರಲಿ ಅವು ಅಂದಿನ ಜನಜೀವನವನ್ನು ಯಾವುದೋ ಒಂದು ಪ್ರಮಾಣದಲ್ಲಿ, ಅಂತೂ ಖಚಿತವಾಗಿ ಪ್ರತಿಬಿಂಬಿಸುತ್ತವೆಯಾಗಿ ವಾಸ್ತುವಿದ್ಯೆ, ನಗರ ನಿರ್ಮಾಣ ಕಲೆಗಳ ಅಸ್ತಿತ್ವಕ್ಕೆ ಅವು ಚಾರಿತ್ರಕ ಹಿನ್ನಲೆಯನ್ನು ತಂದುಕೊಡುತ್ತವೆ. ವೇದಗಳ ಕಾಲದ ಆರ್ಯರ ಸಂಸ್ಕೃತಿಯನ್ನು ಪರಿಶೀಲಿಸಿ, ಯಜ್ಞ ಯಾಗಾದಿಗಳಿಗೆ

ಅವರು ಪ್ರಶಸ್ತಿ ಕೊಟ್ಟಿದ್ದುದನ್ನೂ, ಅವುಗಳಲ್ಲಿ ಸ್ವಾಸ್ತಿಕ, ಸರ್ವತೋಭದ್ರ—ಮುಂತಾದ ವ್ಯೂಹಸಮುಚ್ಚಯಗಳಿಗೆ ಗಣನೀಯಸ್ಥಾನ ಇರುವುದನ್ನೂ ನೋಡಿದಾಗ ಭಾರತದಲ್ಲಿ ವಾಸ್ತುವಿದ್ಯಾಕೋವಿದನಿಗೆ ಸಮಾಜದಲ್ಲಿ ಗಣ್ಯಸ್ಥಾನ ಇತ್ತು; ಅದು ಬಹಳ ಪ್ರಾಚೀನ ಕಾಲದಿಂದಲೂ ಇತ್ತು ಎಂಬುದು ಸ್ಪಷ್ಟವಾಗುತ್ತದೆ.[1]

ಭಾರತದ ಪ್ರಾಚೀನ ಲಭ್ಯಗ್ರಂಥವಾದ ಋಗ್ವೇದದಲ್ಲೂ ಮಹಾಕಾವ್ಯಗಳಲ್ಲೂ ಭವ್ಯಕಟ್ಟಡಗಳ, ನಗರಗಳ, ಕೋಟೆಕೊತ್ತಲಗಳ, ಅರಮನೆ ಮುಂತಾದವುಗಳ ಹೊಗಳಿಕೆಯು ಅಲ್ಲಲ್ಲಿ ಕಂಡುಬರುತ್ತಿದ್ದು ಇಂಥದೊಂದು ಕಲೆ ಇದ್ದಿತೆನ್ನುವುದಕ್ಕೆ ಶಾಸ್ತ್ರೀಯ ಆಧಾರಗಳಿವೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲೂ, ಹಲವು ಖಗೋಳಶಾಸ್ತ್ರಗ್ರಂಥಗಳಲ್ಲೂ ನಗರನಿರ್ಮಾಣದ ಬಗ್ಗೆ ಸೂಚನೆಗಳಿವೆ. ಪುರ, ಗ್ರಾಮ ಎಂಬ ಪದಗಳು ವೇದಗಳಲ್ಲಿ ಅಲ್ಲಲ್ಲಿ ಕಂಡುಬರುತ್ತವೆ. ವೇದಗಳ ಕಾಲದಲ್ಲಿ ಜನರು ಗ್ರಾಮಗಳಲ್ಲಿ ವಾಸಮಾಡುತ್ತಿದ್ದು, ಗ್ರಾಮ-ಮಹಾಗ್ರಾಮಗಳ ನಿರ್ಮಾಣದ ಕಲೆ ಶಾಸ್ತ್ರೀಯವಾಗಿ ಬೆಳೆದುಬಂದಿತ್ತೆನ್ನುವುದಕ್ಕೆ ಆಧಾರಗಳು ಹೇರಳವಾಗಿ ಇವೆ. ಗ್ರಾಮವನ್ನು ಮೂಲ ಚೌಕಟ್ಟಾಗಿಟ್ಟುಕೊಂಡು ದೊಡ್ಡ ದೊಡ್ಡ, ಸುಭಗವೂ ಸುಂದರವೂ ಆದ ಉದ್ಯಾನವನ ನಗರಗಳನ್ನು ನಿರ್ಮಿಸುತ್ತಿದ್ದ ಭಾರತೀಯ ನಗರ ನಿರ್ಮಾಣಕಲೆಗಿಂತ ಆಧುನಿಕ ನಗರನಿರ್ಮಾಣಕಲೆ ಹೆಚ್ಚು ಮುಂದುವರೆದಿಲ್ಲ. ಈ ಶಾಸ್ತ್ರದ ಮೂಲಭೂತ ತತ್ತ್ವಗಳಲ್ಲಿ ಯಾವ ಹೇಳಿಕೊಳ್ಳುವ ಪ್ರಗತಿಯೂ ಆಗಿಲ್ಲ ಎಂದು ವಿಖ್ಯಾತ ವಿದೇಶೀ ಬರಹಗಾರ ಹೇವಲ್ ಹೇಳುತ್ತಾನೆ.[2]

ಪ್ರಾಚೀನ ಭಾರತದ ನಗರನಿರ್ಮಾಣಕಲೆಯು ಅಸ್ತಿತ್ವ, ಮಹತ್ವದ ಬೆಳವಣಿಗೆ, ಆಧುನಿಕ ಸ್ವರೂಪ ಸಂಯೋಜನ, ಸಮ್ಮಿಳಿತಗಳಿಗೆ ಎಲ್ಲಕ್ಕಿಂತ ಮುಖ್ಯವಾಗಿ, ಅಳಿದಿದ್ದರೂ, ಉಳಿದಿರುವ ಹಲವು 'ವಾಸ್ತುವಿದ್ಯಾ' ಶಾಸ್ತ್ರಗ್ರಂಥಗಳು ಜೀವಂತಸಾಕ್ಷಿಗಳಾಗಿವೆ. ಅಲ್ಲಲ್ಲಿ ಅನೇಕ ಪುರಾಣಗಳಲ್ಲಿ ಬರುವ ಅಂಶಗಳನ್ನು ನಾವು ಉಪೇಕ್ಷಿಸಿದರೂ ಮಯಮತ ಮತ್ತು ಮಾನಸಾರ ವಾಸ್ತುಶಿಲ್ಪ ವಿದ್ಯಾಗ್ರಂಥಗಳು ಸರ್ವಕಾಲಕ್ಕೂ ಇಂಥ ಶಾಸ್ತ್ರದ ಇರುವಿಕೆಯನ್ನು ಆಧುನಿಕ ಜಗತ್ತಿಗೆ ಸಾರಬಲ್ಲವಾಗಿವೆ.

---

[1] The close connection of the geometrical system with the Vedic sacrificial altars and the position of the Master Builder as a high priest are indirect proofs of the great antiquity of Indian Science of Town Planning.

—E. B. HAVELL

[2] The most advanced Science of Europe has not yet improved upon the principles of the planning garden cities of India, based upon the Indian Village plan as a unit.

—E. B. HAVELL

## ನಗರನಿರ್ಮಾಣಕ್ಕೆ ಮೊದಲು

ನಗರನಿರ್ಮಾಣಕ್ಕೆ ಪೂರ್ವಭಾವಿಯಾಗಿ ಪರಿಶೀಲಿಸಬೇಕಾದ ಅಂಶಗಳು ಯಾವುವು, ಮರೆಯದೆ ಅನುಸರಿಸುವ ತತ್ತ್ವಗಳು ಯಾವುವು ಎಂಬುದನ್ನು ಮಾನಸಾರ, ಮಯಮತ ಚರ್ಚಿಸುತ್ತದೆ. ಭೂಪರೀಕ್ಷಾ, ಭೂಮಿಸಂಗ್ರಹ, ದಿಕ್ ಪರಿಚ್ಛೇದ, ಪದವಿನ್ಯಾಸ, ಬಲಿಕರ್ಮವಿಧಾನ, ಗ್ರಾಮವಿನ್ಯಾಸ ಭೂಮಿವಿಧಾನ, ಗೋಪುರವಿಧಾನ, ಮಂಡಪವಿಧಾನ, ರಾಜವೇಶ್ಮವಿಧಾನ ಇವುಗಳನ್ನು ಕುರಿತು ಯೋಜನೆಮಾಡಿ ಸರಿಯಾದ ತೀರ್ಮಾನಕ್ಕೆ ಬಂದರೆ ಮಾತ್ರ ಒಳ್ಳೆಯ ನಗರ ನಿರ್ಮಾಣ ಸಾಧ್ಯ ಎಂದು ಅವರ ಮತ. ಮೊದಲು ನಗರವನ್ನು ನಿರ್ಮಿಸಬೇಕೆಂದಿರುವ ಸ್ಥಳವನ್ನು ಪರೀಕ್ಷಿಸಬೇಕು. ಅದನ್ನು ಆರಿಸಬೇಕು. ನಂತರ ನಗರದ ದಿಕ್ಕುಗಳನ್ನೂ ದ್ವಾರಸ್ಥಾನಗಳನ್ನೂ ನಿರ್ದೇಶಿಸಿಕೊಳ್ಳಬೇಕು. ನಗರದ ವಾಸಸ್ಥಳವನ್ನೂ ಅನೇಕ ಚೌಕಗಳನ್ನಾಗಿ ವಿನ್ಯಾಸ ಮಾಡಿಕೊಳ್ಳಬೇಕು. ದೇವತಾಪೂಜಾದಿಗಳನ್ನು ನಡೆಸಬೇಕು. ಭೂಮಿವಿಧಾನ ಎಂದರೆ ಕಟ್ಟಡಗಳ ರೀತಿ, ಯಾವ ಯಾವ ಭವನ ಎಷ್ಟೆಷ್ಟು ಅಂತಸ್ತು ಇರತಕ್ಕದ್ದು ಎಂದು ವಿಂಗಡಿಸಿಕೊಳ್ಳುವಿಕೆ. ಗೋಪುರ ವಿಧಾನದಲ್ಲಿ ನಗರದ ಮಹಾದ್ವಾರಗಳ ರಚನೆಯ ತಂತ್ರವರ್ಣನೆ, ಸಲಹೆ ಇವೆ. ಮಂಡಪವಿಧಾನದಲ್ಲಿ ನಿರ್ಮಿತವಾಗುವ ನಗರದಲ್ಲಿ ಜನರ ಪೂಜಾವಿಧಿಗನುಕೂಲವಾದ ದೇವಾಲಯ ನಿರ್ಮಾಣ ಎಲ್ಲಿ ಆಗಬೇಕು, ಹೇಗೆ ಆಗಬೇಕು, ರಾಜವೇಶ್ಮವಿಧಾನ ಅರ್ಥಾತ್ ಅರಮನೆಯ ಸ್ಥಳಸಂಯೋಜನೆ ಹೀಗೆ ಇವೆಲ್ಲ ಅಂಶಗಳನ್ನೂ ಮಾನಸಾರ ಮಯಮತ ಚರ್ಚಿಸಿ ಸೂಕ್ತಕಂಡ ಸಲಹೆಗಳನ್ನು ಕೊಟ್ಟಿದೆ. ದ್ವಾರಕಾವತಿಯ ನಿರ್ಮಾಣಕ್ಕೆ ಕೃಷ್ಣನು ಕೊಟ್ಟದ್ದೆಂದು ಹೇಳಲಾದ ಅಪ್ಪಣೆಯ ವಿವರ ದೇವೀ ಪುರಾಣದಲ್ಲಿದೆ.

ನಗರನಿರ್ಮಾಣ, ಸುತ್ತಮುತ್ತಲಿನ ಪ್ರದೇಶಗಳಿಂದ ಸುಲಭ ಸಂಚಾರಕ್ಕೆ ಅನುವಾಗುವಂಥ ಕಡೆ ಆಗಬೇಕು. ಆಪಣ ಅಥವಾ ಮಾರ್ಕೆಟ್ಟು, ವ್ಯಾಪಾರಾದಿಗಳ ಸೌಲಭ್ಯಕ್ಕೆ ಸರಿಯಾಗಿರಬೇಕು. ಕೋಟೆ, ಅರ್ಥಾತ್ ರಕ್ಷಣಾವಿಧಾನಗಳಿಗೆ ನಗರ ಕ್ಷೇತ್ರ ಒಳಪಡುವಂತಿರಬೇಕು. ಸಾಧ್ಯವಾದರೆ ನದಿಯ ದಡವಾಗಿರಬೇಕು. ಇಲ್ಲವೆ ನೀರಿನ ವಸತಿ ಬಹಳ ಚೆನ್ನಾಗಿ ಇರಬೇಕು. ಯಾವುದೊಂದಕ್ಕೆ ತೊಂದರೆ ಆದರೂ ಪಟ್ಟಣದ ಬೆಳವಣಿಗೆಗೆ ಆತಂಕ ಎಂದು ಮಾನಸಾರ ಹೇಳುತ್ತದೆ.

## ನಗರಗಳು ಬೆಳೆಯುವ ಬಗೆ

ವಾಸ್ತುವಿದ್ಯಾಪರಿಣತರು ನಗರಗಳು ಬೆಳೆದು ಅಭಿವೃದ್ಧಿಗೆ ಬರುವುದಕ್ಕೆ ಮೂಲಭೂತ ಕಾರಣಗಳೇನಾದರೂ ಉಂಟೇ ಎಂಬುದನ್ನು ಸ್ವಲ್ಪಮಟ್ಟಿಗೆ ವಿವೇಚನೆ

ಮಾಡಿದ್ದಾರೆ. ಅವನ್ನು ನಮ್ಮ ಆಧುನಿಕ ರೀತಿನೀತಿಗಳಿಗೂ ಹೊಂದಿಸಿಕೊಳ್ಳ ಬಹುದು. ಕೈಗಾರಿಕೋದ್ಯಮಗಳು ಬೆಳೆಯಲು ಅನುಕೂಲವಿರುವ ಸ್ಥಳಗಳಲ್ಲಿ ಊರುಗಳೂ, ಪಟ್ಟಣಗಳೂ ಅಭಿವೃದ್ಧಿಗೆ ಬರುವುದಕ್ಕೆ ವಿಶೇಷಾವಕಾಶವಾಗಬಹುದು. ಮಸ್ಲಿನ್ ತಯಾರಿಕೆಗೆ ಹೆಸರಾದ ಡಾಕಾ, ಸಿಲ್ಕ್ ಬಟ್ಟೆಗಳ ತಯಾರಿಕೆಗೆ ಖ್ಯಾತಿ ಪಡೆದಿದ್ದ ಮುರ್ಷಿದಾಬಾದ್, ವಜ್ರದ ಗಣಿಗೆ ಹೆಸರಾಗಿದ್ದ ಗೋಲ್ಕಂಡ, ಸುಗಂಧ ದ್ರವ್ಯಗಳು, ಅಮೃತಶಿಲೆಗಳಿಗೆ ಹೆಸರಾದ ಆಗ್ರಾ ಇವು ಪಟ್ಟಣಗಳ ಅಭಿವೃದ್ಧಿಗೆ ಮೂಲವಾಗಬಹುದಾದ ಒಂದು ಕಾರಣವನ್ನು ತೋರಿಸುತ್ತವೆ. ವಿದ್ಯಾಲಯದ ಆವಾಸ ವಾಗಿದ್ದು, ಸರಸ್ವತೀ ಪೀಠವಾಗಿ ಬೆಳೆದಿದ್ದ ನಳಂದ, ನಗರಾಭಿವೃದ್ಧಿಯ ಮತ್ತೊಂದು ಕಾರಣವನ್ನು ನಿರ್ದೇಶಿಸುತ್ತದೆ. ಪ್ರಖ್ಯಾತವಾದ ದೇವಾಲಯ, ಅರ್ಚಕರು ಭಕ್ತಾದಿ ಗಳು, ಅನೇಕ ಮಂದಿ ಪರಿಚಾರಕರು, ಅವರುಗಳು ಅಲ್ಲೇ ನೆಲಸುವಿಕೆ, ಈ ಕಾರಣ ಗಳಿಂದ ನಗರಗಳು ಹುಟ್ಟಿಕೊಳ್ಳಬಹುದು. ಕಾಂಚೀವರಂ ಬೆಳೆದು ದೊಡ್ಡದಾದದ್ದು ಹೀಗೆಯೇ. ಯಾವುದಾದರೂ ಒಂದು ರಾಜ್ಯದ ರಾಜಧಾನಿಗಳಾಗುವುದರಿಂದ ಸಣ್ಣ ಪುಟ್ಟ ಸ್ಥಳಗಳು ಬೃಹತ್ ನಗರಗಳಾಗಿ ಬೆಳೆಯಬಹುದು. ದುರ್ದೈವದಿಂದ ಕಾಡು ಮೇಡು ಸೇರಿ ಉದಯಸಿಂಹ, ಚಿತ್ತೂರಿನ ರಾಣ, ಕಟ್ಟಿದ ಉದಯಪುರ—ಹೀಗೆ ಬೆಳೆದು ಒಂದು ನಗರವಾಯಿತು. ಆಧುನಿಕ ಭಾರತವನ್ನೇ ಕುರಿತು ಹೇಳುವುದಾದಲ್ಲಿ ಚಂಡೀಘರ್ ಇಂಥ ಒಂದು ಉತ್ತಮ ಉದಾಹರಣೆ. ಅಕ್ಬರ್ ಇಂಥದೇ ಉದ್ದೇಶ ದಿಂದ ಕಟ್ಟಿದ್ದ ಫತೆಪುರ್ ಸಿಕ್ರಿ ಇಂದು ಹಾಳುಬಿದ್ದ ಊರಾಗಿದೆ. ರಾಜಧಾನಿ ಆಗುವ ನಗರ ಯಾವಾಗಲೂ ದೇಶದ ಮಧ್ಯಭಾಗದಲ್ಲಿ ನಿರ್ಮಾಣವಾಗಬೇಕೆಂದು ಪ್ರಾಚೀನ ವಾಸ್ತುವಿದ್ಯಾಕೋವಿದರು ನಿರ್ದಿಷ್ಟವಾಗಿ ಹೇಳಿದ್ದಾರೆ. "ರಾಜಾ . . . . ಮಧ್ಯಮ ದೇಶಮಾವಸೇತ್" ಎನ್ನುವ ಮತ್ಸ್ಯಪುರಾಣದ ಉಕ್ತಿಯಲ್ಲಿದೇ ಅರ್ಥ ಅಡಕವಾಗಿದೆ. ಇತಿಹಾಸಕಾಲದ ಭಾರತದ ಅರ್ಥಶಾಸ್ತ್ರಜ್ಞನೂ, ಆಡಳಿತಗಾರನೂ ಆದ ಕೌಟಿಲ್ಯ ೮೦೦ ಹಳ್ಳಿಗಳ ಮಧ್ಯೆ 'ಸ್ಥಾನೀಯ' ಕೋಟೆಗ್ರಾಮವನ್ನೂ, ೪೦೦ ಹಳ್ಳಿಗಳ ಕೇಂದ್ರದಲ್ಲಿ 'ದ್ರೋಣಮುಖ' ಕೋಟೆಗ್ರಾಮವನ್ನೂ ೨೦೦ ಹಳ್ಳಿಗಳ ನಡುವೆ 'ಖರ್ವಟಿಕ' ಕೋಟೆಗ್ರಾಮವನ್ನೂ, ೧೦ ಹಳ್ಳಿಗಳ ನಡುವೆ 'ಸಂಗ್ರಹಣ' ಗ್ರಾಮವನ್ನೂ ನಿರ್ಮಿಸಬೇಕೆಂದು ಹೇಳುತ್ತಾನೆ.

ರಾಜಧಾನಿಯಾಗುವ ಸ್ಥಳದ ಬಳಿ ಬೇಕಾದಷ್ಟು ವೃಕ್ಷಸಂಪತ್ತೂ, ಸಸ್ಯ ಸಂಪತ್ತೂ, ಪಶುಸಂಪತ್ತೂ ಪ್ರಾಣಿಸಂಚಯವೂ, ಜಲಸಮೃದ್ಧಿಯೂ, ಆಹಾರ ಸಮೃದ್ಧಿಯೂ ಅರಣ್ಯಸಂಪತ್ತೂ, ಸಂಚಾರಸೌಲಭ್ಯಗಳೂ, ಸಮುದ್ರತೀರದ ರೇವು ಗಳಿಗೆ ಓಡಾಟಸೌಲಭ್ಯವೂ, ಬೆಟ್ಟಗುಡ್ಡಗಳಿಂದ ಬಹುದೂರವಲ್ಲದೆ ಇರುವಿಕೆಯೂ,

ತೀರ ಆವಶ್ಯಕ. ಅಲ್ಲದೆ ಅಂಥ ಪ್ರದೇಶ ಪ್ರಕೃತಿಸೌಂದರ್ಯದಿಂದ ರಮಣೀಯವಾಗಿರಬೇಕು. ನಗರನಿರ್ಮಾಣಕ್ಕೆ ಅದೇ ಒಳ್ಳೆಯ ಸ್ಥಳ ಎಂದು 'ಶುಕ್ರನೀತಿಸಾರ' ಹೇಳುತ್ತದೆ. ಇಲ್ಲಿ ಭಾರತೀಯ ವಾಸ್ತುಶಿಲ್ಪ ವಿಜ್ಞಾನಿಯ ಉಪಯುಕ್ತತೆಯನ್ನೂ, ಕವಿಯ ಮನೋಧರ್ಮವನ್ನೂ ಹೇಗೆ ಸಂಕೀರ್ಣಿಸಿ ನಗರ ನಿರ್ಮಾಣಸ್ಥಳ ನಿರ್ದೇಶಮಾಡುತ್ತಾನೆಂಬುದು ಗಮನಾರ್ಹವಾದ ಸಂಗತಿ.

ಇದೇ ಅಂಶಗಳನ್ನು ಮತ್ಸ್ಯಪುರಾಣ, ಬ್ರಹ್ಮಾಂಡಪುರಾಣ ಮತ್ತು ಅಗ್ನಿಪುರಾಣಗಳೂ ಸಮರ್ಥಿಸುತ್ತವೆಯಲ್ಲದೆ ಆದರ್ಶನಗರದ ವಿಸ್ತೀರ್ಣದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ಕೊಡುತ್ತವೆ. ನಗರವೊಂದರ ವಿಸ್ತೀರ್ಣ ಇಂತಿಷ್ಟೇ ಸರಿ ಎಂಬ ಈ ಪುರಾಣಕಾರರ ಅಭಿಮತ ಆಧುನಿಕ ಸ್ಥಿತಿಗತಿಗಳಿಗೆ ಸರಿಬೀಳದಾದರೂ ಅಂದಿನ ವಾಸ್ತುಶಿಲ್ಪಿ ತನ್ನ ಕಲೆಯ ಹತ್ತು ಮುಖಗಳನ್ನು ಕುರಿತು ವಿಚಾರಮಾಡಿ, ನಿರ್ದಿಷ್ಟವಾದ ತೀರ್ಮಾನಗಳಿಗೆ ಬಂದಿದ್ದನೆಂಬುದರ ಅರಿವು ಇದರಿಂದ ಆಗುತ್ತದೆ. ಇಂಥ ಅರಿವು ಪ್ರಾಚೀನಭಾರತದ ವಾಸ್ತುವಿದ್ಯೆಯ ಬೆಳವಣಿಗೆಯನ್ನು ಕುರಿತು ನಮ್ಮಲ್ಲಿ ಆದರೋತ್ಸಾಹ ಮೂಡಿಸಲು ಸಹಕಾರಿ ಆದೀತು.

ಐತಿಹಾಸಿಕ ಘಟನೆಗಳಿಂದಾಗಿ ಈಗ ಕೋಟೆಗಳನ್ನುಳ್ಳ ನಗರನಿರ್ಮಾಣ ಅಳಿಸಿಹೋದ ಪದ್ಧತಿ ಆಗಿದೆ. ಆದರೆ ಹಿಂದೆ ಭಾರತದಲ್ಲಷ್ಟೇ ಅಲ್ಲದೆ ಗ್ರೀಸ್, ರೋಂ ಚಕ್ರಾಧಿಪತ್ಯಗಳಲ್ಲೂ, ಇತರ ಕಡೆಗಳಲ್ಲೂ ಕೋಟೆಗಳನ್ನುಳ್ಳ ನಗರಗಳ ನಿರ್ಮಾಣ ಇತ್ತೆಂಬುದಕ್ಕೆ ಸಾಕಷ್ಟು ಆಧಾರಗಳಿವೆ. ನಾವು ಕಾವ್ಯಗಳಲ್ಲಿ ಅಯೋಧ್ಯಾ, ಲಂಕಾ, ಮಥುರ, ದ್ವಾರಾವತಿ, ಇಂದ್ರಪ್ರಸ್ಥ ಮುಂತಾದ ಸ್ಥಳಗಳ ವರ್ಣನೆಯನ್ನು ವಿಸ್ತಾರವಾಗಿ ನೋಡಬಹುದು. ಚಿತ್ತೂರು ಕೋಟೆಯನ್ನು ಈಗಲೂ ನೋಡಬಹುದು. ಜಯಪುರ, ಮಥುರಗಳಲ್ಲಿ ಕೋಟೆಯ ಅವಶೇಷಗಳಿವೆ. ಜಯಪುರದ ಕೋಟೆಗೆ ಎಂಟು ದಿಕ್ಕುಗಳಲ್ಲೂ ಮಹಾದ್ವಾರಗಳುಂಟು. ನಗರಗಳ ಕೋಟೆಗಳನ್ನು ಸಾಮಾನ್ಯವಾಗಿ ಚತುರಾಸ್ರ (ಚಚ್ಚೌಕ) ಆಯಾತಸ್ರ (Rectangular) ವೃತ್ತಾ ಹಾಗೂ ಗೋಲವೃತ್ತ (ಗೋಳಾಕಾರ, Circular) ವೃತ್ತಾಯತ (Elliptical) ಮತ್ತು ತ್ರಯಾಸ್ರ (ತ್ರಿಕೋಣಕೃತಿ) ಆಕೃತಿಗಳಲ್ಲಿ ನಿರ್ಮಿಸಲಾಗುತ್ತಿತ್ತು[1]. ಇಂಡೋ ಆರ್ಯನರ ನಾಗರಿಕತೆಯನ್ನೂ, ಅವರು ಕಟ್ಟಿದ ಪಟ್ಟಣಗಳು ಇದ್ದ ಸ್ಥಳವನ್ನೂ ಪರಿಶೀಲಿಸಿದಲ್ಲಿ, ಅವೆಲ್ಲ ನದೀ ತೀರದಲ್ಲೋ ಸಮುದ್ರಕ್ಕೆ ಹತ್ತಿರವಾಗಿಯೊ ರಾಜಘಟಕದ ನಡುವೆಯೊ ಇದ್ದುದು ತಿಳಿಯುತ್ತದೆ.

---

[1] ದೇವೀಪುರಾಣ.

## ನಗರವಿನ್ಯಾಸ—ರಸ್ತೆಗಳ ಯೋಜನೆ

ಪ್ರಾಚೀನ ಭಾರತದಲ್ಲಿ ನಗರನಿರ್ಮಾಣಕಾರರು ನಗರದ ರಸ್ತೆಗಳನ್ನು ಬಹಳ ಉಪಯುಕ್ತ ರೀತಿಯಲ್ಲಿ ಏರ್ಪಡಿಸುತ್ತಿದ್ದರು. ಪುರವೀಧಿಗಳ ವಿನ್ಯಾಸಸಂಚಾರಕ್ಕೂ ಮನೆಗಳು, ಅಂಗಡಿಗಳು ಮುಂತಾದ ಬಗೆಬಗೆಯ ಉಪಯುಕ್ತ ಭವನಗಳ ನಿರ್ಮಾಣ ವ್ಯವಸ್ಥೆಗೂ ಅನುವಾಗುವಂತೆ ಯೋಜಿಸಲಾಗುತ್ತಿತ್ತು. ಎಲ್ಲಾ ಕಡೆಯಲ್ಲೂ ಸ್ವಚ್ಛ ವಾದ ಗಾಳಿ ಬೆಳಕು ಇರಬೇಕೆಂಬ ಆರೋಗ್ಯಪಾಲನಾನಿಯಮವನ್ನು ಪ್ರಾಚೀನ ವಾಸ್ತುವಿದ್ಯಾಪರಿಣತರು ನಗರನಿರ್ಮಾಣದಲ್ಲಿ ಮರೆತಿರಲಿಲ್ಲ. ಅನೇಕಬಾರಿ ರಸ್ತೆಗಳು ಸಮಾನಾಂತರವಾಗಿಯೋ, (Parallel) ಅಥವಾ ಲಂಬಾಕೃತಿಯು (Perpendicular) ಅಥವಾ ಚಚ್ಚೌಕ (Square) ಆಗಿಯೋ ಇರುತ್ತಿದ್ದು ಪರಸ್ಪರ ಸಂಧಿಸುತ್ತಿದ್ದವು. ಪುರವೀಧಿಗಳ ನಿರ್ಮಾಣ ಬಹುಮಟ್ಟಿಗೆ ಸರಳರೇಖೆಗಳ ಹಾಗೂ ಸಮಕೋನಗಳ (Right angles) ಮೇಲೆ ಆಧಾರ ಹೊಂದಿರುತ್ತಿತ್ತು. ಪ್ರಖ್ಯಾತ ಶಾಸ್ತ್ರಕಾರ ಮಯಮತದಲ್ಲಿ ನಗರಗಳ ರಸ್ತೆಗಳ ವಿನ್ಯಾಸವನ್ನು ಎಂಟು ವಿಧವಾಗಿ ಮಾಡಬಹುದೆಂದಿದೆ. ಒಂದೊಂದು ಬಗೆಯ ವಿನ್ಯಾಸ, ವಿಭಜನೆ, ಒಂದೊಂದು ವಾತಾವರಣದಲ್ಲಿರಬಹುದಾದ ನಗರಗಳಿಗೆ ಒಳ್ಳೆಯದಾಗಿರುತ್ತದೆ. ದಂಡಕ, ನಂದ್ಯಾವರ್ತ, ಸರ್ವತೋಭದ್ರ, ಪ್ರಸ್ತಾರ, ಚತುರ್ಮುಖ, ಕಾರ್ಮುಕ, ಪದ್ಮಕ, ಮತ್ತು ಸ್ವಾಸ್ತಿಕ ಇವೇ ಆ ಎಂಟು ರಾಜ್ಯವೀಧಿವಿನ್ಯಾಸಗಳು. ಪ್ರಾಚೀನಭಾರತದಲ್ಲಿ ದೊಡ್ಡ ಬೀದಿಗಳನ್ನು 'ರಾಜಪಥಾ' ಎಂದೂ, ಸಣ್ಣಸಣ್ಣ ಬೀದಿಗಳನ್ನು 'ವಾಮನಪಥಾ' ಎಂದೂ ಕರೆಯುವ ವಾಡಿಕೆ ಇತ್ತು.[1] ನಗರ, ಗ್ರಾಮನಿರ್ಮಾಣದಲ್ಲಿ ಪ್ರತಿ ಹತ್ತು ಮನೆಗೂ ಒಂದರಂತೆ ಭಾವಿಗಳನ್ನು ಏರ್ಪಡಿಸಬೇಕು.[2] ದೇವಾಲಯದಲ್ಲಿ ರಾಜರು, ಜನರ ಅಧಿಕಾರಿಗಳು, ವರ್ತಕರು, ಹೀಗೆ ಎಲ್ಲ ಬಗೆಯ ಜನರೂ ಸೇರಿದ ಸಂದರ್ಭವೊಂದನ್ನು ಕೌಟಿಲ್ಯ ತನ್ನ ಗ್ರಂಥದಲ್ಲಿ ವರ್ಣಿಸಿದ್ದಾನೆ. ಬಹುಶಃ ಅವನು ವಾಸಿಸಿದ್ದ 'ಪಾಟಲೀಪುತ್ರ' ನಗರದ ದೇವಾಲಯವನ್ನು ಕಂಡೇ ಅವನು ಆ ವರ್ಣನೆ ಮಾಡಿರಬೇಕು. ಶುಕ್ರನೀತಿಸಾರದಲ್ಲೂ, ಅಗ್ನಿಪುರಾಣೇತ್ಯಾದಿಗಳಲ್ಲೂ ಈ ಬಗ್ಗೆ ಅನೇಕ ಉಲ್ಲೇಖಗಳಿವೆ. ದ್ವಾರಕಾಪಟ್ಟಣ ಬೆಳೆದಿದೆ, ಆದುದರಿಂದ ಇನ್ನೂ ಬೆಳೆಯುತ್ತಿರುವ ಈ ನಗರಕ್ಕೆ ಸುವ್ಯವಸ್ಥಿತವಾದ ಬಡಾವಣೆಯೊಂದರ (Extention) ನಿರ್ಮಾಣದ ಆವಶ್ಯಕತೆ ಇದೆ ಎಂಬ ಉಲ್ಲೇಖ ವಿಷ್ಣುಪುರಾಣದಲ್ಲಿ ಬರುತ್ತದೆ. ಇವು ಬೆಳೆಯುವ ನಗರಗಳ ಆವಶ್ಯಕತೆಗಳನ್ನು ಪ್ರಾಚೀನಭಾರತದ ನಗರನಿರ್ಮಾಪಕರು ಅರಿತುಕೊಂಡಿದ್ದು

---

[1] Havell, E. B.

[2] ಕೌಟಿಲ್ಯ—ಅರ್ಥಶಾಸ್ತ್ರ.

ದ್ದನ್ನು ಸ್ಪಷ್ಟಪಡಿಸುತ್ತವೆ. ಹಾಗೆಯೇ ಕೋಟೆಕೊತ್ತಲ ಇಲ್ಲದ ಗ್ರಾಮನಿರ್ಮಾಣ, ಗೃಹನಿರ್ಮಾಣ, ವ್ಯವಸಾಯಾಭಿವೃದ್ಧಿಗನುಗುಣವಾದ ಸ್ಥಳ ಚುನಾವಣೆ, ಆರೋಗ್ಯ ನಿಯಮಗಳ ಪಾಲನೆ ಇತ್ಯಾದಿಗಳೂ ಪ್ರಚಲಿತವಿದ್ದಿರಬೇಕೆಂಬುದೂ ಸ್ವಯಂ ಸ್ಪಷ್ಟ ವಾಗುತ್ತದೆ. ಇತಿಹಾಸಕಾಲ ಕುರಿತು ಮಾತನಾಡುವಾಗ ವಿಜಯನಗರದ ಖ್ಯಾತಿಯನ್ನು ವಿದೇಶಿ ಪ್ರವಾಸಿಗಳು ಹೊಗಳಿ ಅದರ ವಿನ್ಯಾಸ, ವಿಸ್ತಾರ, ವೈಭವಗಳನ್ನು ಬಣ್ಣಿಸಿರುವುದನ್ನು ನಾವು ಗಮನಿಸಬಹುದು. ಸುಂದರವಾದ, ಉಪಯುಕ್ತವಾದ ವೀಥಿಗಳ ವಿನ್ಯಾಸಕ್ಕೆ, ಶತಮಾನಗಳ ಹಿಂದೆ ನಿರ್ಮಿತವಾದ ಜಯಪುರ ಸೊಗಸಾದ ಉದಾಹರಣೆ.

ಭಾರತದಲ್ಲಿ ಇಂದು ಪಶ್ಚಿಮದ ಪ್ರಭಾವ ಅಗತ್ಯವಾಗಿ ಬೇಕಾಗಿದೆ. ನಗರ ನಿರ್ಮಾಣ, ವಾಸ್ತುವಿದ್ಯೆಗಳಲ್ಲಿ ಬಹಳ ಪ್ರಗತಿ ಆಗಿದ್ದು ಭಾರತ ವಸ್ತುಸ್ಥಿತಿಗೆ ಹೊಂದಿ ಕೊಳ್ಳುತ್ತಿದೆ. ಆದರೆ ನಮ್ಮಲ್ಲಿ ನಗರನಿರ್ಮಾಣಕೋವಿದರ ಸಂಖ್ಯೆ ಕಡಮೆ ಇದೆ. ಪಟ್ಟಣ ಗಳ ಬೆಳವಣಿಗೆಯಲ್ಲೂ ಬಡಾವಣೆಗಳಲ್ಲೂ ದೂರದೃಷ್ಟಿಯ ಅಭಾವವೂ ವೈಜ್ಞಾನಿಕ ತಿಳಿವು ಉಳ್ಳವರ ಸಲಹೆಯ ಅಭಾವವೂ ಕಂಡುಬರುತ್ತಿದೆ. ಈ ಶಾಸ್ತ್ರದಲ್ಲಿ ಪರಿಣತ ರನ್ನು ತಯಾರುಮಾಡುವ ಶಾಲೆಗಳು ಇಡೀ ಭಾರತಕ್ಕೆ ಕೇವಲ ಒಂದೆರಡು ಮಾತ್ರ ಇವೆ. ನಾವು ನಗರನಿರ್ಮಾಣ ಹಾಗೂ ವಾಸ್ತುಶಿಲ್ಪ ಕಲೆಗಳ ಪರಂಪರೆ ನಮ್ಮ ಪುರಾತನ ಪರಂಪರೆಯ ಒಂದು ಅವಿಚ್ಛಿನ್ನ ಭಾಗವೆಂಬುದನ್ನು ಮರೆಯದೆ, ಪ್ರಗತಿ ಪಥದಲ್ಲಿ ಮುನ್ನಡೆಯುತ್ತಿರುವ ನಮ್ಮ ದೇಶಕ್ಕೆ ಅಗತ್ಯವಾಗಿ ಬೇಕಾದ ಈ ಶಾಸ್ತ್ರಾ ಭ್ಯಾಸಕ್ಕೆ ಪ್ರೋತ್ಸಾಹ ಕೊಡಬೇಕಾಗಿದೆ. ನಗರಗಳ ಶಾಸ್ತ್ರೀಯ ಬೆಳವಣಿಗೆಗೆ ಅಸುವು ಮಾಡಿಕೊಡಬೇಕಾಗಿದೆ. ಹೀಗೆ ಸರಿಯಾದ ರೀತಿಯಲ್ಲಿ ವಾಸ್ತುವಿದ್ಯಾ ಕ್ಷೇತ್ರದಲ್ಲಿ ಪೂರ್ವ, ಪಶ್ಚಿಮಗಳ, ಹಳತು-ಹೊಸತುಗಳ ಸಂಗಮವಾದಾಗ, ಬೆಳೆಯು ತ್ತಿರುವ ನಮ್ಮ ನಗರಗಳ ಹಲವು ಸಮಸ್ಯೆಗಳಿಗೆ ಸುವರ್ಣಮಧ್ಯಮಸೂತ್ರ ಒದಗು ತ್ತದೆ.

ಉಮಾಪತಿ



ಪದ್ಮಕ



ಕಾರ್ಮುಕ

(ಸಮುದ್ರತೀರದಲ್ಲಿ ನಗರನಿರ್ಮಾಣಮಾಡಲು ಇದು ಅನುಕೂಲವಾದದ್ದು)

## ಗ್ರಂಥಋಣ


E. B. Havell: *Ancient and Mediaeval Architecture.*

Haver Field: *Ancient Town Planning.*

Sister Nivedita: *Civic and National Ideas.*

Fergusson: *History of Indian and Eastern Architecture.*

P. K. Acharya: *Story of Manasara.*

Venkatarama Iyer: *Town Planning—Deccan.*

Ramaraj: *Essays on Architecture of Hindus.*

ಶುಕ್ರನೀತಿಸಾರ—ಮತ್ಸ್ಯಪುರಾಣ—ವಾಸ್ತುವಿದ್ಯಾ—ತಿರುವಾಂಕೂರು ಸಂಸ್ಕೃತ ಮಾಲೆ ಪ್ರಕಾಶನ.

Kautilya: *Arthashastra.*

# ಕಾವ್ಯಾವಲೋಕನ

**ಅಭ್ಯುದಯದ ಹಾದಿಯಲ್ಲಿ**—ಸಂಪಾದಕರು: ಶ್ರೀ ಗ. ಸ. ಹಾಲಪ್ಪ, ಎಂ.ಎ., (ಕೊಲಂಬಿಯ); ಪ್ರಕಾಶಕರು: ಹರ್ಡೇಕರ್ ಮಂಜಪ್ಪ ಸ್ಮಾರಕ ಗ್ರಂಥಮಾಲೆ, ಹರಿಹರ; ಕ್ರೌನ್ ಅಷ್ಟದಳ; ಪುಟಗಳು IV + ೧೫೭; ಬೆಲೆ, ಸಾಧಾರಣ ಪ್ರತಿ ರೂ. ೨; ಕ್ಯಾಲಿಕೊ ಪ್ರತಿ ರೂ. ೩-೮-೦.

ಮೇಲ್ಕಂಡ ಗ್ರಂಥಮಾಲೆಯ ಮೊಟ್ಟಮೊದಲನೆಯ ಪ್ರಕಟನೆಯಾದ ಈ ಪುಸ್ತಕದಲ್ಲಿ ದಿವಂಗತ ಹರ್ಡೇಕರ್ ಮಂಜಪ್ಪನವರ ಮತ್ತು ದಿವಂಗತ ರೆ. ರೆ. ಬಸವನಾಳರವರ ಕೆಲವು ಅಮೂಲ್ಯವಾದ ಪ್ರಬಂಧಗಳಿವೆ. ಒಂದಲ್ಲ ಒಂದು ರೀತಿಯಲ್ಲಿ ಮಾನವನ ಅಭ್ಯುದಯವನ್ನು ಕುರಿತು ವಿಚಾರಮಾಡಿರುವ ಈ ತಜ್ಞರ ಪ್ರಬಂಧಗಳನ್ನು ಸಂಪಾದಕರು ಪರಿಷ್ಕರಿಸಿ ಮುದ್ರಿಸಿರುತ್ತಾರೆ. ದಿವಂಗತ ರೆ. ರೆ. ಬಸವನಾಳರವರ 'ಇತಿಹಾಸ' ಎಂಬ ಪ್ರಬಂಧವು ಅತ್ಯಂತ ವಿಚಾರಪೂರ್ಣವಾಗಿದ್ದು, ಸ್ಥೂಲವಾಗಿ ಇತಿಹಾಸದ ಸ್ವರೂಪವನ್ನು ತಿಳಿಸುತ್ತದೆ. ಶ್ರೀ ಬಸವನಾಳರ ರಬಕವಿಯ ಕನ್ನಡ ಸಾಹಿತ್ಯ ಸಮ್ಮೇಳನದ ಭಾಷಣವಂತೂ ಹಲವಾರು ಅಂಶಗಳನ್ನು ಒಳಗೊಂಡು ಕನ್ನಡನುಡಿಯ ಆಗುಹೋಗುಗಳನ್ನು ಸಮಗ್ರವಾಗಿ ಪರಿಶೀಲಿಸುವುದಾಗಿದೆ. ದಿವಂಗತ ಹರ್ಡೇಕರ್ ಮಂಜಪ್ಪನವರ ರಚನೆಗಳೂ ಸಹ ಇದೇ ರೀತಿಯಲ್ಲಿ ಓದುವವರಿಗೆ ರಾಜಕೀಯ ಪ್ರಜ್ಞೆಯನ್ನು ಉಂಟುಮಾಡುವಂತಿವೆ. "ಸ್ವದೇಶಭಕ್ತಿಯ ಮೂಲತತ್ತ್ವಗಳು," "ಭಾರತೀಯರಲ್ಲಿ ದೇಶಭಕ್ತಿಯುಂಟಾಗದಿರಲು ಕಾರಣಗಳು" "ನಮ್ಮ ಇತಿಹಾಸ ಮತ್ತು ಸಂಸ್ಕೃತಿ" ಮತ್ತು "ನೂತನ ಭಾರತ ನಿರ್ಮಾಣ" ಎಂಬ ಒಂದೊಂದು ಪ್ರಬಂಧವೂ ವಿಚಾರಪ್ರಚೋದಕವಾಗಿದೆ. ಸಾಂಸ್ಕೃತಿಕವಾಗಿ, ಆಧ್ಯಾತ್ಮಿಕವಾಗಿ ಭಾರತೀಯರು ಅಖಂಡವಾಗಿ ಬದುಕಿ ಬಾಳಿದಂತೆಯೇ, ದೇಶಭಕ್ತಿಯ ಭಾವನೆಯಿಂದ ಏಕೆ ಪ್ರೇರಿತರಾಗಲಿಲ್ಲವೆಂಬ ಅಂಶವನ್ನು ಕುರಿತು ದಿವಂಗತ ಹರ್ಡೇಕರ್ ಮಂಜಪ್ಪನವರು ವಿಚಾರಮಾಡಿರುವ ಪ್ರತಿಯೊಂದು ಅಂಶವೂ ವಿಚಾರಾರ್ಹವಾದುದು. "ಜನನೀಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ" ಎಂಬ ಉಚ್ಚ ಆದರ್ಶವನ್ನುಳ್ಳ ಭಾರತೀಯರಿಗೆ, "ರಾಜಾ ಪ್ರತ್ಯಕ್ಷ ದೇವತಾ" "ನಾ ವಿಷ್ಣುಃ ಪೃಥ್ವೀಪತಿಃ", ಎಂಬ ರಾಜ ಪೂಜ್ಯ ಭಾವನೆಯುಳ್ಳ ಪ್ರಜಾ ಸಮುದಾಯಕ್ಕೆ ಈ ದಿಶೆಯಲ್ಲಿ ಯಾವ ಅಭಿಪ್ರಾಯವಿದ್ದಿರಬಹುದು ಎಂಬುದನ್ನು ವ್ಯಾಸಂಗಮಾಡಿ ನಿಷ್ಕರ್ಷಿಸಬೇಕಾದ ಸಂಗತಿ. ಆಡಳಿತವೆಲ್ಲವೂ ಸತ್ಯಸಂಧರಾದ

ರಾಜರ ಕೈಯಲ್ಲಿಯೋ, ಸೇವಾಪರಾಯಣರಾದ ಸಚಿವರ ಮೇಲೋ ಇರಬೇಕಾದರೆ ಪ್ರಭುಭಕ್ತಿನಿಷ್ಠರಾದ ಪ್ರಜೆಗಳ ಪಾತ್ರವೇನು ಎಂಬುದು ಆಲೋಚನಾರ್ಹವಾದುದೇ ಸರಿ. ಹೀಗೆ ಈ ಪ್ರಬಂಧಗಳು ವಿಚಾರಮತಿಯನ್ನು ಕೆಣಕದೆ ಇರಲಾರವು.

ಕಡೆಯದಾಗಿ ಸಂಪಾದಕರು "ನವಜಗತ್ತಿನ ರಚನೆ" ಎಂಬ ಪ್ರಬಂಧದಲ್ಲಿ ಇಂದಿನ ಪ್ರಪಂಚದ ಸ್ಥಿತಿಗತಿಗಳನ್ನು ತಿಳಿಸಿ, ವಿಶ್ವಸಂಸ್ಥೆ ಮತ್ತು ಇತರ ಕೆಲವು ಸಂಸ್ಥೆಗಳ ಮೂಲಕ ಹೊಸ ಜಗತ್ತಿನ ಸ್ವರೂಪ ಹೇಗೆ ಮಾರ್ಪಡುತ್ತಿದೆಯೆಂಬ ಅಂಶವನ್ನು ಸಂಗ್ರಹವಾಗಿ ನಿರೂಪಿಸಿರುತ್ತಾರೆ. ಈ ಪುಸ್ತಕಕ್ಕೆ ಮುನ್ನುಡಿ ಬರೆದಿರುವ ನ್ಯಾಯಾಧೀಶರಾದ ಶ್ರೀ ಹೆಚ್. ಹೊಂಬೇಗೌಡ, ಬಿ.ಎ., ಎಲ್ ಎಲ್. ಬಿ. ಅವರು ಹೇಳಿರುವಂತೆ "ರಚನಾತ್ಮಕ ವಿಚಾರಗಳಿಂದ ತುಂಬಿರುವ ಈ ಪುಸ್ತಕ ಪ್ರಕಟಣೆಯ ಕೆಲಸ ಸ್ತುತ್ಯಾರ್ಹವಾದದ್ದು." ಇಂಥ ಗ್ರಂಥಗಳು ಕನ್ನಡದ ಬೆಲೆಯನ್ನು ದ್ವಿಗುಣಗೊಳಿಸುವುದು ನಿಶ್ಚಯ. ಆದ್ದರಿಂದ ಇಂಥ ವಿಚಾರಗಳನ್ನು ಕುರಿತು ಶಾಸ್ತ್ರೀಯವಾದ ವ್ಯಾಸಂಗವನ್ನು ಮಾಡಿರುವ ತಜ್ಞರಿಂದ ಪರಿಪಕ್ವವಾದ ಬರಹಗಳನ್ನು ಹೆಚ್ಚುಹೆಚ್ಚಾಗಿ ಒದಗಿಸಿಕೊಡುವ ಸದವಕಾಶವು ಸಂಪಾದಕರಿಗೆ ಲಭಿಸಿ, ಈ ಗ್ರಂಥಮಾಲೆಯು ಪುರೋಭಿವೃದ್ಧಿಯಾಗಲೆಂದು ಹಾರೈಸುತ್ತೇವೆ.

—ಜಿ.ವ.

# ವಸ್ತುಕೋಶ

## ಧಾರವಾಡದಲ್ಲಿ ನಡೆದ ಮೂವತ್ತೊಂಬತ್ತನೆಯ ಕನ್ನಡ ಸಾಹಿತ್ಯ ಸಮ್ಮೇಲನದ ಅಧ್ಯಕ್ಷಭಾಷಣದಿಂದ ಆಯ್ದ ಮುಖ್ಯಾಂಶಗಳು

ನಾವಿಂದು ಇಲ್ಲಿ ಏಕೀಕೃತ ಅಖಂಡ ಕರ್ಣಾಟಕದ ಸಾಹಿತ್ಯಪರಿಷತ್ತಿನ ಪ್ರಪ್ರಥಮ ವಾರ್ಷಿಕ ಸಮ್ಮೇಲನೋತ್ಸವದಲ್ಲಿ ಭಾಗಿಗಳಾಗಲು ನೆರೆದಿದ್ದೇವೆ. ನಾವು ನಿಜವಾಗಿಯೂ ಭಾಗ್ಯಶಾಲಿಗಳಲ್ಲವೆ? ಧನ್ಯರಲ್ಲವೆ?

ಸಾಂಸ್ಕೃತಿಕವಾಗಿ ದೇಶದ ಮನೋಮಂಡಲದಲ್ಲಿ ಯಾವುದು ಅನೇಕ ಶತಮಾನಗಳಿಂದಲೂ ಅಚ್ಯುತವಾದ ಭಾವಸತ್ಯವಾಗಿದ್ದಿತೊ ಅದು ಈಗ ಭೌಗೋಲಿಕವಾಗಿಯೂ ಸಿದ್ಧವಾಯಿತೆಷ್ಟೊ ಅಷ್ಟೆ. ಅದನ್ನು ಯಾವ ಹೆಸರಿನಿಂದ ಕರೆದರೂ ಅದು ನಮಗೆ ಕರ್ಣಾಟಕವೆ. ಈ ಭಾವವನ್ನೆ ಒಮ್ಮೆ ಕವಿವಾಣಿ ಹೀಗೆಂದು ಘೋಷಿಸಿದೆ:

ಇಂದು ಬಂದು ನಾಳೆ ಸಂದು<br>
    ಹೋಹ ಸಚಿವ ಮಂಡಲ<br>
ರಚಿಸುವೊಂದು ಕೃತಕವಲ್ತೊ<br>
ಸಿರಿಗನ್ನಡ ಸರಸ್ವತಿಯ<br>
    ವಜ್ರ ಕರ್ಣಕುಂಡಲ:<br>
ಅಖಂಡ ಕರ್ಣಾಟಕ:<br>
ಅಲ್ತೊ ನಮ್ಮ ನಾಲ್ಕು ದಿನದ ರಾಜಕೀಯ ನಾಟಕ!<br>
    ನೃಪತುಂಗನೆ ಚಕ್ರವರ್ತಿ,<br>
    ಪಂಪನಲ್ಲಿ ಮುಖ್ಯ ಮಂತ್ರಿ.<br>
    ರನ್ನ ಜನ್ನ ನಾಗವರ್ಮ<br>
        ರಾಘವಾಂಕ ಹರಿಹರ<br>
    ಬಸವೇಶ್ವರ ನಾರಣಪ್ಪ<br>
        ಸರ್ವಜ್ಞ ಷಡಕ್ಷರ:<br>
ಸರಸ್ವತಿಯೆ ರಚಿಸಿದೊಂದು<br>
    ನಿತ್ಯ ಸಚಿವ ಮಂಡಲ<br>
    ತನಗೆ ರುಚಿರ ಕುಂಡಲ!

ನಮ್ಮ ಕರ್ಣಾಟಕ ಬರಿಯ ದೇಶವಿಸ್ತೀರ್ಣಕ್ಕೆ ಮಾತ್ರ ಸಂಬಂಧಪಟ್ಟುದಲ್ಲ; ಕಾಲವಿಸ್ತೀರ್ಣವನ್ನೂ ನಾವು ಪ್ರಮುಖವಾಗಿ ಭಾವಿಸುತ್ತೇವೆ. ಅದನ್ನು ಚದರ ಮೈಲಿಗಳಿಂದ ಅಳೆದರೆ ಸಾಲದು; ಚದರವರ್ಷಗಳಿಂದಲೂ ಗುರುತಿಸಬೇಕು. ವ್ಯಷ್ಟಿರೂಪವಾದ ವ್ಯಕ್ತಿಗೆ ಕೋಶಗಳಿರುವಂತೆ ಸಮಷ್ಟಿರೂಪವಾದ ದೇಶಕ್ಕೂ ಕೋಶಗಳಿವೆ ಎಂದು ಭಾವಿಸುವುದಾದರೆ ಕರ್ಣಾಟಕಕ್ಕೆ ಅನ್ನಮಯರೂಪವಾದ ಭೂಪ್ರದೇಶವಿರುವಂತೆಯೆ ಪ್ರಾಣಮನೋಮಯರೂಪವಾದ ಚಿತ್‌ಪ್ರದೇಶವೂ ಇದೆ. ಚಿನ್ಮಯವೂ ಆಧ್ಯಾತ್ಮಿಕವೂ ಆಗಿರುವ ಆ ಸಂಸ್ಕೃತಿಕೋಶವೆ ಕರ್ಣಾಟಕ ದೇವಿಯ ಸೂಕ್ಷ್ಮಶರೀರ. ನಶ್ವರವೂ ಚಂಚಲವೂ ಕಾಲಸನ್ನಿವೇಶವಶವೂ ಆಗಿರುವ ಭೂವಿಸ್ತೀರ್ಣರೂಪವಾದ ಲೀಲಾಸ್ಥೂಲ ಶರೀರವನ್ನು ಸರ್ವದಾ ಧಾರಣೆ ಮಾಡು ತ್ತಿರುತ್ತದೆ ಆ ನಿತ್ಯ ಭಾವತನು. ಆ ಜ್ಯೋತಿಶ್ಶರೀರಿಯೆ ದೇವಿ. ಆ ದೇವಿಯ ಉಪಾಸನೆಯೆ ಕವಿ ಕಲಾವಿದ ತತ್ತ್ವಜ್ಞ ಸಾಧಕರಾದಿಯಾಗಿ ಸಕಲರ ಗಂತವ್ಯ ಮತ್ತು ಗಮ್ಯ. ಕರ್ಣಾಟಕದ ಕಾವ್ಯ ಕಲೆ ಸಂಸ್ಕೃತಿಗಳನ್ನು ಹೃದಯದಲ್ಲಿ ಪ್ರತಿಷ್ಠಾಪಿಸಿಕೊಂಡ ಕನ್ನಡಿಗನು ಭೌಗೋಲಿಕವಾದ ಎಲ್ಲೆಗಳಿಂದ ಹೆದರಬೇಕಾದ್ದಿಲ್ಲ.

> **ಎಲ್ಲಾದರು ಇರು, ಎಂತಾದರು ಇರು;**
> **ಎಂದೆಂದಿಗೂ ನೀ ಕನ್ನಡವಾಗಿರು;**
> **ಕನ್ನಡ ಗೋವಿನ ಓ ಮುದ್ದಿನ ಕರು,**
> **ಕನ್ನಡತನವೊಂದಿದ್ದರೆ ನೀನಮ್ಮಗೆ ಕಲ್ಪತರು:**
> **ನೀ ಮೆಟ್ಟುವ ನೆಲ—ಅದೆ ಕರ್ಣಾಟಕ;**
> **ನೀನೇರುವ ಮಲೆ—ಸಹ್ಯಾದ್ರಿ.**
> **ನೀ ಮುಟ್ಟುವ ಮರ—ಶ್ರೀಗಂಧದ ಮರ;**
> **ನೀ ಕುಡಿಯುವ ನೀರ್—ಕಾವೇರಿ.**

ಕನ್ನಡ ಕಾವ್ಯಗಳನ್ನೋದುವಾತನು ಅಮೇರಿಕೆಯಲ್ಲಿದ್ದರೂ ಅದು ಕರ್ಣಾಟಕವೆ. 'ಪಂಪನನೋದುವ ನಾಲಗೆ' ಮಿಸಿಸಿಪಿ ಹೊಳೆಯ ನೀರನ್ನು ಈಂಟಿದರೂ ಅದು ಕಾವೇರಿಯೇ. 'ಕುಮಾರವ್ಯಾಸನನಾಲಿಪ ಕಿವಿ' ಆಂಡೀಸ್ ಪರ್ವತವನ್ನೇರುತ್ತಿದ್ದರೂ ಅದು ಸಹ್ಯಾದ್ರಿಯೆ. 'ಕಾವೇರಿಯಿಂದಮಾ ಗೋದಾವರಿವರಮಿರ್ದನಾಡು' ಎಂದು ನೃಪತುಂಗನು ಬಣ್ಣಿಸಿದ ಕರ್ಣಾಟಕದ ನೆಲದ ಎಲ್ಲೆ ಇಂದು ಭೌಗೋಲಿಕವಾಗಿ ವ್ಯತ್ಯಸ್ತವಾಗಿರುವುದಕ್ಕಾಗಿ ನಾವು ಪರಿತಪಿಸುವುದು ಅನಾವಶ್ಯಕ. ಕಾವೇರಿ ಮತ್ತು ಗೋದಾವರಿಗಳು ನಿತ್ಯವೂ ನಿರ್ದಿಗಂತವಾಗಿ ವಿಸ್ತರಿಸುತ್ತಿರುವ ಕರ್ಣಾಟಕದ ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಭೂಮಿಕೆಯ ಗಡಿಗಳಿಗೆ ಸಂಕೇತಮಾತ್ರಗಳಾ

ಗಿರಲಿ. ಅವು ಭಾವೋಪಯೋಗಿಗಳೆ ಹೊರತು ಲೋಕೋಪಯೋಗಿಗಳಾಗುವುದಿಲ್ಲ. ಏಕೆಂದರೆ ಮೈಸೂರಿನ ಎಲ್ಲೆ ರಾಜಕೀಯದಿಂದ ಭೌಗೋಲಿಕವಾಗಿ ನಿರ್ಣಯವಾಗಿದ್ದರೂ ಕರ್ಣಾಟಕದ ಸಾಂಸ್ಕೃತಿಕ ಮೇರೆ ನಮ್ಮೆಲ್ಲರಿಂದ ಮಾನಸಿಕವಾಗಿ ನಿರಂತರವೂ ನಿರ್ಣಯವಾಗುತ್ತಿರುತ್ತದೆ. ಕನ್ನಡಿಗರ ಸಂಸ್ಕೃತಿಗೆ ಪ್ರತಿಮಾರೂಪವಾಗಿರುವ ಕರ್ಣಾಟಕದ ವಿಸ್ತಾರ ನಿರ್ದಿಗಂತವಾದದ್ದು ; ಅದರ ಔನ್ನತ್ಯ ನಿಶ್ಶಿಖರವಾದದ್ದು. ಅಂತಹ ಸಂಸ್ಕೃತಿ ಕರ್ಣಾಟಕದ ಸ್ಥಾಪನೆ, ರಕ್ಷಣೆ, ಪೋಷಣೆ ಮತ್ತು ವಿಸ್ತರಣೆಗಳಿಗಾಗಿಯೆ ಸಹೃದಯ ಸಮಷ್ಟಿರೂಪವಾದ ಸಾಹಿತ್ಯ ಪರಿಷತ್ತು ನಿರಂತರವೂ ತಪಸ್ವಿಯಾಗಿ ದುಡಿಯಬೇಕಾಗಿದೆ. ಏಕೆಂದರೆ ಭೌಗೋಲಿಕವಾಗಿ ಕರ್ಣಾಟಕ ರಾಜ್ಯಸ್ಥಾಪನೆಯಾಯಿತು ಎಂದು ನಾವು ಸಡಿಲಬಾಳಿಗರಾಗಿ ಸುಮ್ಮನಾದರೆ ರಾಜ್ಯಸ್ಥಾಪನೆಯ ಮೂಲೋದ್ದೇಶವೆ ವಿಫಲವಾಗುತ್ತದೆ.

ಮೈಸೂರು ಎಂಬ ರಾಜಕೀಯ ನಾಮಧೇಯದಿಂದ ಸಿದ್ಧವಾಗಿರುವ ಈ ಸಾಂಸ್ಕೃತಿಕ ನಾಮಧೇಯದ ಕರ್ಣಾಟಕದ ಲೌಕಿಕ ಅಭ್ಯುದಯ ಸಾಧನೆ ಪ್ರಧಾನತಃ ರಾಜಕೀಯ ವೈಜ್ಞಾನಿಕ ಆರ್ಥಿಕಾದಿ ಕ್ಷೇತ್ರಗಳಿಗೆ ಸಂಬಂಧಪಟ್ಟದ್ದು. ಅಂತಹ ಲೌಕಿಕಾಭ್ಯುದಯದ ತಳಹದಿಯ ಮೇಲೆಯೆ ನಮ್ಮ ನಿಃಶ್ರೇಯಸದ ಭಗವನ್ಮಂದಿರ ನಿರ್ಮಾಣವಾಗುತ್ತದೆ. ಈ ಮಂದಿರ ನಿರ್ಮಾಣಕಾರ್ಯದಲ್ಲಿ ಲೇಖನಿಯೆ ಆಚಾರ್ಯಶಿಲ್ಪಿ.

ನಮ್ಮ ಭರತವರ್ಷದ ಜನಜೀವನದಲ್ಲಿ ಬೇರೆ ಬೇರೆ ಭಾಷೆಗಳ ಸ್ಥಾನ ಹೇಗೆ ಇರಬೇಕು ಎಂಬುದನ್ನು ಅನೇಕ ವರ್ಷಗಳ ಹಿಂದೆಯೇ ನಮ್ಮ ಸ್ವಾತಂತ್ರ್ಯಶಿಲ್ಪಿ ಪೂಜ್ಯ ಮಹಾತ್ಮಾ ಗಾಂಧಿಜಿಯೆ ಉಳಿದವರಿಗೆ ಸಾಧ್ಯವಾಗದಿರಬಹುದಾದ ನಿಷ್ಪಕ್ಷಪಾತದೃಷ್ಟಿಯಿಂದಲೂ ವಿವಿಧ ಭಾಷಾಪ್ರದೇಶಗಳ ಮತ್ತು ಪೂರ್ಣರಾಷ್ಟ್ರದ ಸರ್ವಹಿತದೃಷ್ಟಿಯಿಂದಲೂ ಸ್ಪಷ್ಟವಾಗಿ ಸಾರಿದ್ದಾರೆ. ಅವರು ಇಡಿಯ ರಾಷ್ಟ್ರದ ವ್ಯವಹಾರಕ್ಕೆ ಹಿಂದಿಯನ್ನೂ ಪ್ರದೇಶಗಳ ವ್ಯಾವಹಾರಿಕ ಸಾಹಿತ್ಯಿಕ ವೈಜ್ಞಾನಿಗೆ ಆಧ್ಯಾತ್ಮಿಕಾದಿ ಸಕಲಕ್ಕೂ ಆಯಾ ದೇಶಭಾಷೆಗಳನ್ನೂ ಆವಶ್ಯಕವಾಗಿ ಕೆಲವರಿಗೆ ಮಾತ್ರ ಬೇಕಾಗಿರುವ ರಾಯಭಾರ ಮೊದಲಾದ ಅಂತರರಾಷ್ಟ್ರೀಯ ವ್ಯವಹಾರ ಮತ್ತು ವೈಜ್ಞಾನಿಕವ್ಯಾಸಂಗಾದಿ ವಿಷಯಗಳಿಗಾಗಿ ಇಂಗ್ಲಿಷನ್ನೂ ನಿರ್ದೇಶಿಸಿದ್ದಾರೆ. ಅದು ಸರ್ವಸಮರ್ಪಕವೂ ಬಹುಜನ ಸಮ್ಮತವೂ ಆಗಿದೆ. ನಾವು ಆ ಮಾರ್ಗದರ್ಶನದಲ್ಲಿಯೆ ಮುಂದುವರಿಯುವುದು ಲೇಸು.

ನಮ್ಮ ವಿದ್ಯಾಭ್ಯಾಸಕ್ರಮದಲ್ಲಿ ಇಂಗ್ಲಿಷಿಗಿರುವ ಕೃತಕಪ್ರಾಮುಖ್ಯವನ್ನಂತೂ ಸ್ವದೇಶೀಯ ವಿದೇಶೀಯರಾದಿಯಾಗಿ ವಿದ್ಯಾಶಾಸ್ತ್ರಜ್ಞರೂ ಮನಃಶಾಸ್ತ್ರಜ್ಞರೂ

ದೇಶಭಕ್ತರೂ ರಾಷ್ಟ್ರನಿರ್ಮಾಣಕರೂ ಪ್ರವೀಣರೂ ಪ್ರಾಧ್ಯಾಪಕರೂ ಎಲ್ಲರೂ ಖಂಡಿಸಿದ್ದಾರೆ, ಖಂಡಿಸುತ್ತಲೂ ಇದ್ದಾರೆ. ಆದರೆ ಆ ಸಂಕೋಲೆಯಿಂದ ನಾವಿನ್ನೂ ಬಿಡುಗಡೆ ಹೊಂದಲು ಸಾಧ್ಯವಾಗಿಲ್ಲ. ಸಂಕೋಲೆಯ ಭಾರವೆ ಅಭ್ಯಾಸವಾಗಿ ನಡೆ ಕಲಿತ ಕೆಲವರಿಗೆ ಅದರಿಂದ ಬಿಡುಗಡೆ ಹೊಂದುವ ಇಷ್ಟವೂ ಇಲ್ಲ. ಅಷ್ಟೇ ಅಲ್ಲ; ಹಾಗೆ ಸಂಕೋಲೆ ಹಾಕಿಕೊಳ್ಳದೆ ಕಲಿತ ನಡೆ ಶಿಷ್ಟಾಚಾರ ಸಮ್ಮತವಾಗುವುದಿಲ್ಲ ಎಂಬ ಹಾಸ್ಯಾಸ್ಪದವಾದ ಅಭಿಪ್ರಾಯವನ್ನುಳ್ಳವರಾಗಿದ್ದಾರೆ. ಹೊರಗಣ ಸಂಕೋಲೆಯಿಂದ ಬಿಡುಗಡೆ ಹೊಂದುವಷ್ಟು ಸುಲಭವಾದುದಲ್ಲ ಅಂತರ್ದಾಸ್ಯವಿಮೋಚನೆ.

ಆದರೂ ಈ ಇಂಗ್ಲಿಷ್ ಚಪ್ಪಡಿಯ ಭಾರಾಪಘಾತದಿಂದ ಜನಸಾಮಾನ್ಯರ ಬಹುಸಂಖ್ಯಾತ ಮಕ್ಕಳನ್ನು ಪಾರುಮಾಡಿ ರಕ್ಷಿಸದಿದ್ದರೆ ನಾವು ವಿದ್ಯಾಭ್ಯಾಸಕ್ಕಾಗಿ ವ್ಯಯಮಾಡುತ್ತಿರುವ ಕೋಟ್ಯಂತರ ರೂಪಾಯಿ ನೀರಿನಲ್ಲಿ ಮಾಡಿದ ಹೋಮವಾಗುತ್ತದೆ. ಸ್ವಾತಂತ್ರ್ಯ ಪೂರ್ವಕಾಲದಲ್ಲಿಯೆ ಗಾಂಧಿಜಿ ಹೀಗೆ ಹೇಳಿದ್ದರು: "ಪರಭಾಷೆಯ ಮೂಲಕದ ಶಿಕ್ಷಣ ನಮ್ಮ ಮಕ್ಕಳ ಬುದ್ಧಿಶಕ್ತಿಯನ್ನು ಬೆಂಡುಮಾಡಿದೆ; ಅವರ ನರಗಳನ್ನು ದುರ್ಬಲಗೊಳಿಸಿದೆ. ಅವರನ್ನು ಬಾಯಿಪಾಠಮಾಡುವ ಗಿಳಿಗಳನ್ನಾಗಿ ಮಾಡಿದೆ; ಪ್ರತಿಭಾನ್ವಿತವಾದ ಸೃಷ್ಟಿಕಾರ್ಯಕ್ಕೆ ಅನರ್ಹರನ್ನಾಗಿ ಮಾಡಿದೆ. . . . ನಾನಿಂದು ಸರ್ವಾಧಿಕಾರಿಯಾಗಿದ್ದರೆ ಈ ಕೂಡಲೆ ಪರಭಾಷೆಯ ಮೂಲಕದ ವಿದ್ಯಾಭ್ಯಾಸವನ್ನು ನಿಲ್ಲಿಸುತ್ತಿದ್ದೆ. ಹೊಸ ಸುಧಾರಣೆಗಳನ್ನು ಜಾರಿಗೆ ತರುವಂತೆ ಅಧ್ಯಾಪಕರಿಗೆ ಆಜ್ಞೆಮಾಡುತ್ತಿದ್ದೆ. ಇಷ್ಟವಿಲ್ಲದವರು ಕೆಲಸ ಕಳೆದುಕೊಳ್ಳುತ್ತಿದ್ದರು. ಪಠ್ಯಪುಸ್ತಕಗಳಿಗಾಗಿ ಕಾಯಬೇಕಾಗಿಲ್ಲ. ಅವು ಅನಂತರ ತಾವಾಗಿಯೆ ಬೆಳಕಿಗೆ ಬರುತ್ತವೆ . . . ಅಂತರರಾಷ್ಟ್ರೀಯ ರಾಜಕೀಯ ಮತ್ತು ವಾಣಿಜ್ಯ ವ್ಯವಹಾರಗಳಿಗೆ ಆಂಗ್ಲಭಾಷೆ ಅತ್ಯಾವಶ್ಯಕ ಎಂದು ನನಗೆ ಗೊತ್ತು. ಆದ್ದರಿಂದ ಅದನ್ನು ಕೆಲವರು ಕಲಿತರೆ ಸಾಕು. ಅದು ಉತ್ತಮ ಆಲೋಚನೆಗಳ ಮತ್ತು ಉತ್ತಮ ಸಾಹಿತ್ಯದ ಅಕ್ಷಯನಿಧಿಯೂ ನಿಜ. ಹೆಚ್ಚು ಭಾಷೆಗಳನ್ನು ಕಲಿಯಲು ಸಾಮರ್ಥ್ಯ ಮತ್ತು ಅವಕಾಶ ಇರುವವರು, ಅದನ್ನು ಕಲಿತು, ಅದರಲ್ಲಿರುವ ಸಾರಸರ್ವಸ್ವವನ್ನು ದೇಶಭಾಷೆಗಳಿಗೆ ಇಳಿಸಲಿ . . . ಪರಭಾಷೆಯ ಮೂಲಕದ ಶಿಕ್ಷಣದಿಂದ ರಾಷ್ಟ್ರಕ್ಕೆ ಆಗುತ್ತಿರುವ ಜ್ಞಾನಹಾನಿ ಮತ್ತು ನೈತಿಕನಷ್ಟ ಅಷ್ಟಿಷ್ಟಲ್ಲ. ಆ ನಷ್ಟವೆಷ್ಟು ಎಂಬುದನ್ನು ಬಹುಶಃ ನಮಗಿಂತ ಮುಂದಿನ ಪೀಳಿಗೆಯವರು ಅರಿಯಬಲ್ಲರು . . . . ನಾವು ಅನೇಕ ಆಂಗ್ಲಭಾಷೆಯ ಗದ್ಯದ ಮತ್ತು ಪದ್ಯದ ಅನೇಕ ಪುಸ್ತಕಗಳನ್ನು ಓದಬೇಕಾಗಿತ್ತು. . . . ಆ ಏಳು ವರ್ಷಗಳ ಕಾಲ ಗುಜರಾತಿಯನ್ನೂ, ಗುಜರಾತಿಯ ಮೂಲಕ ಇತರ ವಿಷಯಗಳನ್ನೂ ಕಲಿತಿದ್ದರೆ ನನ್ನ ನೆರೆಯವರಿಗೂ ಆ ತಿಳಿವನ್ನು

ಸುಲಭವಾಗಿ ಹಂಚಬಹುದಾಗಿತ್ತು; ಗುಜರಾತಿ ಸಾಹಿತ್ಯವನ್ನೂ ಬೆಳೆಸಬಹುದಾಗಿತ್ತು, ಜನತೆಗೆ ಇನ್ನೂ ಹೆಚ್ಚಿನ ಸೇವೆ ಸಲ್ಲುತ್ತಿತ್ತು . . . ಪರಿಸ್ಥಿತಿ ಏನೆ ಇರಲಿ, ಈ ಕೂಡಲೆ ಶಿಕ್ಷಣಮಾಧ್ಯಮ ಬದಲಾವಣೆ ಹೊಂದಬೇಕು. ದೇಶಭಾಷೆಗಳಿಗೆ ಯೋಗ್ಯವಾದ ಸ್ಥಾನ ಲಭಿಸಬೇಕು. ಈ ಮಾರ್ಪಾಡಿನಿಂದ ಅಲ್ಪಸ್ವಲ್ಪ ಗೊಂದಲ ಕಳವಳ ತಲೆದೋರಿ ದರೂ ಅವೆಲ್ಲ ತಾತ್ಕಾಲಿಕವಾದುವು. ಆದರೆ ದಿನದಿನವೂ ಆಗುತ್ತಿರುವ ನಷ್ಟ ಒಟ್ಟು ಗೂಡಿ ಕೊನೆಗೆ ಸರ್ವನಾಶ ಸಂಭವಿಸುವುದಕ್ಕಿಂತ ಸ್ವಲ್ಪಕಾಲ ಗೊಂದಲದ ಪರಿಸ್ಥಿತಿ ಸಂಭವಿಸಿದರೂ ಚಿಂತೆಯಿಲ್ಲ . . . ಈ ಶಿಕ್ಷಣಮಾಧ್ಯಮದ ಪ್ರಶ್ನೆಯನ್ನು ವಿದ್ಯಾ ಪ್ರವೀಣರ ಎಂದರೆ Academicians ಎನ್ನಿಸಿಕೊಳ್ಳುವವರ ತೀರ್ಮಾನಕ್ಕೆ ಬಿಡುವುದು ಸರಿಯಲ್ಲವೆಂದೇ ನನ್ನ ಅಭಿಪ್ರಾಯ. ಹುಡುಗರಿಗೆ ಯಾವ ಭಾಷೆಯ ಮೂಲಕ ಪಾಠ ಹೇಳಿಕೊಡಬೇಕೆಂಬುದನ್ನು ಅವರು ಹೇಗೆ ನಿರ್ಣಯಿಸಿಯಾರು? ಪ್ರತಿಯೊಂದು ಸ್ವತಂತ್ರದೇಶದಲ್ಲಿಯೂ ಈ ಪ್ರಶ್ನೆ ಆದಿಯಲ್ಲಿಯೆ ನಿರ್ಧರವಾಗುತ್ತದೆ. ಹಾಗೆಯೆ ಯಾವ ವಿಷಯವನ್ನು ಕಲಿಸಬೇಕೆಂಬುದನ್ನೂ ಅವರು ನಿರ್ಧರಿಸಲಾರರು. ಆಯಾ ದೇಶದ ಅರಕೆ ಆವಶ್ಯಕತೆಗಳಿಗನುಗುಣವಾಗಿ ಅದನ್ನು ಗೊತ್ತುಪಡಿಸಬೇಕಾಗಿದೆ. ರಾಷ್ಟ್ರದ ಇಚ್ಛೆಯನ್ನು ಸರಿಯಾದ ರೀತಿಯಲ್ಲಿ ಕಾರ್ಯರೂಪಕ್ಕೆ ತಿರುಗಿಸುವುದಷ್ಟೆ ಅವರ ಕರ್ತವ್ಯ. ಈ ದೇಶ ಸ್ವತಂತ್ರವಾದ ಕೂಡಲೆ ಶಿಕ್ಷಣಮಾಧ್ಯಮದ ಪ್ರಶ್ನೆ ಪ್ರಶ್ನೆಯಾಗುಳಿಯುವುದಿಲ್ಲ. . . ."

ಅಯ್ಯೋ ಪಾಪ, ಅವರು ಎಂತಹ ಅತಿ ಆಶಾವಾದಿ! ದೇಶ ಸ್ವತಂತ್ರವಾದ ಕೂಡಲೆ ಈ ಪ್ರಶ್ನೆ ಪ್ರಶ್ನೆಯಾಗುಳಿಯುವುದಿಲ್ಲ ಎಂದರು, ಸುಮಾರು ಇಪ್ಪತ್ತು ವರ್ಷಗಳ ಹಿಂದೆಯೆ! ದೇಶ ಸ್ವತಂತ್ರವಾಗಿ ಹತ್ತು ವರ್ಷ ಕಳೆದುದಾಗಿದೆ. ಅವರ ಭಾಷಾನುಗುಣಪ್ರಾಂತರಚನೆಯ ಬುದ್ಧಿವಾದವನ್ನೆ ತಲೆಕೆಳಗುಮಾಡಲೆಳಸಿ ಚಿತ್ರವಿಚಿತ್ರವಾಗಿ ವಾದಿಸಿದೆವು ನಾವು. ಆದರೂ ಅವರ ಆಶೀರ್ವಾದದಿಂದ ಅವರು ಹೇಳಿದಂತೆಯೆ ಕಡೆಗೂ ಆಗಿ, ರಾಷ್ಟ್ರಕ್ಷೇಮ ಭದ್ರವಾಯಿತು. ಹಾಗೆಯೆ 'ದೇಶ ಭಾಷೆಗೆ ಪ್ರಥಮಸ್ಥಾನ ದೊರೆಯಬೇಕು; ದೇಶಭಾಷೆಯೆ ಶಿಕ್ಷಣಮಾಧ್ಯಮವಾಗ ಬೇಕು' ಎಂದ ಅವರ ಹಿತಬೋಧೆಯನ್ನು ನಮ್ಮಲ್ಲಿ ಕೆಲವರು ಇಂದು ಪ್ರಶ್ನಿಸಿ, ಅಲಕ್ಷಿಸಿ, ಅವರು ಮಹಾತ್ಮರಾದರೂ ವಿದ್ಯಾಭ್ಯಾಸಶಾಸ್ತ್ರಜ್ಞರಲ್ಲದ ಅವರ ಅಭಿಪ್ರಾಯ ಬರಿಯ ಭಾವೋಲ್ಲಾಸವೆ ಹೊರತು ಅನುಸರಣಯೋಗ್ಯವಾಗಲಾರ ದೆಂದು ವಾದಿಸುತ್ತಿದ್ದಾರೆ. ಭಾಷಾಪ್ರಾಂತರಚನೆಯ ವಿಷಯದಲ್ಲಿ ಆದಂತೆಯೆ ಈ ವಿಷಯದಲ್ಲಿಯೂ ಕೊನೆಗೂ ಅವರು ಹಾಕಿರುವ ಗೆರೆಯ ಮೇಲೆಯೆ ನಾವು ನಡೆಯ ಬೇಕಾಗುತ್ತದೆ, ನಡೆದೂ ನಡೆಯುತ್ತೇವೆ ಎನ್ನುವುದರಲ್ಲಿ ನನಗೆ ಸಂದೇಹವಿಲ್ಲ. ಆದರೆ

ಜನತೆ ಬುದ್ಧಿಸೋಮಾರಿಯಾಗಿ ವರ್ತಿಸಿ, ಹತ್ತಿರದಲ್ಲಿರುವ ಮಂಗಳವನ್ನು ದೂರಕ್ಕೆ ತಳ್ಳಬಾರದು. ಕೋಟಿಕೋಟಿ ಭಾರತೀಯ ಮಕ್ಕಳ ಮನಶ್ಶಕ್ತಿಯ ವೃಥಾವ್ಯಯದಿಂದ ರಾಷ್ಟ್ರಕ್ಕೆ ವರ್ಷವರ್ಷವೂ ಒದಗುತ್ತಿರುವ ಅಪಾರ ಧನ ಬುದ್ಧಿ ಧೈರ್ಯ ನಷ್ಟ ಗಳಿಂದಾಗುವ ಚೈತನ್ಯಹಾನಿಯನ್ನು ತಪ್ಪಿಸಬೇಕೆಂದು ಪ್ರಾರ್ಥಿಸುತ್ತೇನೆ.

ವಿದ್ಯಾರ್ಥಿಗಳಾಗುವ ನಮ್ಮ ಮಕ್ಕಳ ಮೇಲೆ ನಮಗೇನಾದರು ಕರುಣೆ ಯಿದ್ದರೆ ಮೊದಲು ಅವರ ಎದೆಯ ಮೇಲೆ ಪರಕೀಯರು ಹೇರಿಟ್ಟು ಹೋಗಿರುವ ಹೆಣಭಾರದ ಹೊರಭಾಷೆಯ ಚಪ್ಪಡಿಯನ್ನು ಕಿತ್ತೊಗೆಯಬೇಕು. ಅವರ ವ್ಯಕ್ತಿತ್ವದ ಸರ್ವಾಂಗೀಣ ಅಭಿವೃದ್ಧಿಗೆ ಬೇಕಾಗಿರುವ ಭಾವತುಷ್ಟಿ ಮತ್ತು ಬುದ್ಧಿಪುಷ್ಟಿ ಗಳೆರಡನ್ನೂ ಕನ್ನಡದ ತಾಯ್ಮೊಲೆಯ ಮೂಲಕವೆ ಅವರು ಹೀರಿಕೊಳ್ಳುವಂತೆ ಅವಕಾಶ ಕಲ್ಪಿಸಬೇಕು. ಅವರ ಬೆಳೆವಣಿಗೆಗೆ ಬೇಕಾಗಿರುವ ಒಂದು ಬಟ್ಟಲು ಹಾಲನ್ನು ಮಣಭಾರದ ಇಂಗ್ಲಿಷ್ ಕಡಾಯಿಯಲ್ಲಿ ಹಾಕಿಕೊಟ್ಟರೆ ಅವರು ಕುಡಿಯು ವುದೆಂತು? ಆ ಕಡಾಯಿ ಚಿನ್ನದ್ದೆ ಆಗಿರಬಹುದು; ಮುತ್ತುರತ್ನದ ಕೆತ್ತನೆಗಳಿಂದ ಶೋಭಿಸಿ ಲೋಕಪ್ರಸಿದ್ಧವೆ ಆಗಿರಬಹುದು; ಜಗತ್ತಿನ ಮಾರುಕಟ್ಟೆಯಲ್ಲಿ ಅದಕ್ಕೆ ಅನರ್ಘ್ಯವಾದ ಬೆಲೆಯೂ ಇರಬಹುದು. ಹಾಗೆಂದು ಪುಷ್ಟಿ ಬೇಕಾಗಿರುವ ನಮ್ಮ ದುರ್ಬಲ ಮಕ್ಕಳನ್ನು ಆ ವ್ಯಾಮೋಹಪೂತನಿಗೆ ಬಲಿಗೊಡುವುದೇನು? ಅನೇಕ ಮಕ್ಕಳು ಆ ಹೊಂಗಡಾಯಿಯ ಮೆಯ್ಯನ್ನೆ ತಬ್ಬಿ, ನೆಕ್ಕಿ, ಚಿನ್ನದ ಬಣ್ಣದ ಕಣ್ಣಿನ ತಳುಕನ್ನೆ ನಾಲಗೆಯ ತುಷ್ಟಿಯನ್ನಾಗಿ ಭ್ರಮಿಸಿ ವಂಚಿತರಾಗುತ್ತಾರೆ. ಅವರಲ್ಲಿ ಸ್ವಲ್ಪ ಹೆಚ್ಚು ಬಲಿಷ್ಠರಾದವರು, ಅಥವಾ ಬದುಕಬೇಕು ಬಾಳಬೇಕು ಎಂಬ ಹೇರಾಸೆಯ ಕೆಚ್ಚಿಗೆ ತುತ್ತಾದವರು, ಹುಟ್ಟಿನಿಂದ ಬಲಿಷ್ಠರಲ್ಲದಿದ್ದರೂ ಆ ಕಡಾಯಿ ಯನ್ನು ಎತ್ತಲಾರದೆ ಎತ್ತಿ ಮೈಮೇಲೆ ಹಾಕಿಕೊಂಡು ಅದರಡಿ ಸಿಕ್ಕಿ ಜಜ್ಜಿಹೋಗು ತ್ತಾರೆ. ಆಗಲೂ ಹಿರಿಯರಾದ ನಮ್ಮಲ್ಲಿ ಕೆಲವರು 'ಸತ್ತರೂ ಚಿಂತೆಯಿಲ್ಲ'; 'ಚಿನ್ನದ ಅಡಿಯಲ್ಲಿ ಸಿಕ್ಕಿ ಸಾಯುವುದು ಪುಣ್ಯವಲ್ಲವೆ?' ಎಂದು ಸಮಾಧಾನ ತಂದುಕೊಳ್ಳು ತ್ತಾರೆ! ಮತ್ತೆ ಕೆಲವು ಮಕ್ಕಳು ತಂದೆತಾಯಿಯರು ಬೆನ್ನಿಗೆ ಕೈಕೊಟ್ಟು ನೂಕುವುದ ರಿಂದಲೊ, ಅವರು ಬೆರಳೆತ್ತಿ ತೋರುವ ದಿಗಂತದಲ್ಲಿ ಹೊಳೆಯುವ ಐ.ಎ.ಎಸ್. ಮೊದಲಾದ ಭವಿಷ್ಯವೈಭವದ ಆಕರ್ಷಣೆಯಿಂದಲೊ, ಅಥವಾ ಶ್ರೀಮಂತರಾಗಿದ್ದರೆ ಒದಗುವ ಪ್ರೈವೇಟ್ ಟ್ಯೂಷನ್ ಆದಿ ಪ್ರಚಂಡ ಪ್ರೋತ್ಸಾಹದಿಂದಲೊ ಪ್ರೇರಿತ ರಾಗಿ ಕಡಾಯಿಯನ್ನೆತ್ತಿ, ಅದರ ತಳದ ಹಾಲನ್ನು ಬಾಯಿಗೆ ಹೊಯ್ದುಕೊಳ್ಳುವ ಸಾಹಸದಲ್ಲಿಯೇ ಇದ್ದ ಶಕ್ತಿಯನ್ನೆಲ್ಲ ಕಳೆದುಕೊಂಡು, ಹಾಲಿನ ಅರ್ಧವನ್ನು ಮೈಮೇಲೆಯೆ ಚೆಲ್ಲಿಕೊಂಡು, ಉಳಿದರ್ಧದಿಂದಲೆ ತಾವು ತೃಪ್ತರಾಗಿ ತಂದೆತಾಯಿ

ಯರ ನಿರಾಧಾರ ತೃಪ್ತಿಗೂ ಕಾರಣರಾಗುತ್ತಾರೆ. ಎಲ್ಲಿಯೋ ಲಕ್ಷಕ್ಕೆ ಒಂದು ಮಗು ಶ್ರೀಕೃಷ್ಣನಂತೆ ಹಾಲಿನೊಡನೆ ಪೂತನಿಯ ಜೀವವನ್ನೆ ಹೀರಿ ಬೆಳೆದು, ಎಲ್ಲರ ಕಣ್ಣಿಗೂ ಬರುವಂತಾದಾಗ, ನಾವು ಶತಮಾನಕಾಲದಲ್ಲಿ ಇಡಿಯ ಭರತಖಂಡದ ವಿಸ್ತಾರದಲ್ಲಿ ಕೋಟಿಕೋಟಿ ಜನಸಂಖ್ಯೆಯಲ್ಲಿ ಅಂತಹ ನಾಲ್ಕಾರು ವಿಭೂತಿಪುರುಷರನ್ನೂ ಪ್ರತಿಭಾಶಾಲಿಗಳನ್ನೂ ತೋರಿ ನಮ್ಮ ಇಂಗ್ಲಿಷ್‌ಮಾಧ್ಯಮದ ಸಾರ್ಥಕತೆಯನ್ನು ಸಿದ್ಧಾಂತ ಪಡಿಸಲು ಪ್ರಯತ್ನಿಸುತ್ತಿದ್ದೇವೆ. ಇದು ಮೋಹಾಂಧವೊ ಅವಿವೇಕವೊ ಅಜ್ಞಾನವೊ ದೇವರೆ ಬಲ್ಲ! ಅಥವಾ 'ಕಮ್ಯೂನಿಸಂ'ಗೆ ಈ ಸಮಸ್ಯೆಯ ಪರಿಹಾರ ಮೀಸಲಾಗಿದೆ ಎಂದು ಕಣಿ ಹೇಳುವವರ ಆಶೆಯ ಮಾತಿನಲ್ಲಿ ಹುರುಳಿದೆಯೊ ಏನೊ ಯಾರಿಗೆ ಗೊತ್ತು!

ಕೇರಳದಲ್ಲಿ ಮಲೆಯಾಳದಂತೆ ಆಂಧ್ರದಲ್ಲಿ ತೆಲುಗಿನಂತೆ ತಮಿಳುನಾಡಿನಲ್ಲಿ ತಮಿಳಿನಂತೆ ಕರ್ಣಾಟಕದಲ್ಲಿ ಕನ್ನಡ ಪ್ರಥಮಭಾಷೆಯಾಗದಿದ್ದರೆ, ಕನ್ನಡವೆ ಶಿಕ್ಷಣ ಮಾಧ್ಯಮವಾಗದಿದ್ದರೆ ಕನ್ನಡಿಗರ ಬಾಳು ಕುಂಠಿತವಾಗುತ್ತದೆ; ಕನ್ನಡಿಗರ ಏಳಿಗೆಗೆ ಧಕ್ಕೆ ಬರುತ್ತದೆ; ಕರ್ಣಾಟಕದ ರಚನೆ ಅರ್ಥವಿಹೀನವಾಗುತ್ತದೆ; ನಮ್ಮ ತಾಯಿಗೆ ನಮ್ಮ ಮನೆಯಲ್ಲಿಯೆ ವರಾಂಡದಲ್ಲಿ ಮಲಗಿಕೊಳ್ಳಲು, ತಾಣವೂ ಅಲ್ಲ, ನಿಲ್ದಾಣ ಕೊಡಬೇಕಾಗುತ್ತದೆ; ನಮ್ಮ ಜನಸಾಮಾನ್ಯರ ಸರ್ವಾಂಗೀಣವಾದ ನ್ಯಾಯಬದ್ಧವಾದ ವಿಕಾಸಕ್ಕೆ ಅಡಚಣೆ ಒದಗುತ್ತದೆ; ನಮ್ಮ ಸಾಹಿತ್ಯವೂ ಸಮೃದ್ಧವಾಗಿ ಪುಷ್ಟವಾಗಿ ಬಹುಮುಖವಾಗಿ ಸರ್ವತೋಮುಖವಾಗಿ ಬದುಕಿನ ಮತ್ತು ವಿದ್ಯೆಯ ಸರ್ವಶಾಖೆಗಳಲ್ಲಿಯೂ ಚೈತನ್ಯಮಯವಾದ ಜನಜೀವನದ ನೆಲದಿಂದ ಹೊಮ್ಮದೆ ಪ್ರದರ್ಶನಕ್ಕಾಗಿ ತೂಗುಹಾಕಿರುವ ಕುಂಡಗಳಲ್ಲಿ ಬೆಳೆಯುವ ಲಘುಮನೋರಂಜನೆಯ ವಸ್ತುವಾಗುತ್ತದೆ. ಅಂತಹ ದುಃಖದ ಅಮಂಗಳದ ದುರಂತದ ಪರಿಸ್ಥಿಗೆ ಕಾರಣವಾಗುವವರೆಲ್ಲರೂ, ವ್ಯಕ್ತಿಗಳಾಗಲಿ ಸಂಸ್ಥೆಗಳಾಗಲಿ, ಚಿರಂತನವಾಗಿ ಶಾಪಗ್ರಸ್ತರಾಗುತ್ತಾರೆ: ಕವಿ ಪ್ರವಾದಿಯೂ ಆಗುತ್ತಾನೆ.

ಆದರೆ ಹಾಗಾಗುವುದಿಲ್ಲ. ನಮ್ಮ ಜನ ಹಾಗೆ ಆಗಗೊಡಲು ಬಿಡುವುದಿಲ್ಲ. ಒಂದು ವೇಳೆ ಕನ್ನಡಿಗರ ದೌರ್ಬಲ್ಯೋಪಮವಾದ ಅತ್ಯೌದಾರ್ಯದಿಂದಲೊ ಅತಿ ದಾಕ್ಷಿಣ್ಯದಿಂದಲೊ ಅವರು ಔದಾಸೀನ್ಯವನ್ನವಲಂಬಿಸಿದರೆ ತೆಲುಗು ತಮಿಳು ಮಲೆಯಾಳಿ ಮರಾಠಿ ಬಂಗಾಳಿ ಮೊದಲಾದ ಭಾರತೀಯ ಭಾಷೆಗಳ ನಮ್ಮ ನೆರೆಯ ಸಹೋದರರು ತಮ್ಮ ತಮ್ಮ ಭಾಷೆಗಳಿಗೆ ತಮ್ಮ ತಮ್ಮ ನಾಡುಗಳಲ್ಲಿ ಸರಿಯಾದ ಸ್ಥಾನಮಾನಗಳನ್ನು ಕಲ್ಪಿಸುವುದರಿಂದಲೆ ನಮ್ಮನ್ನು ಸರಿಯಾದ ದಾರಿಗೆ ಅನಿವಾರ್ಯವಾಗಿಯೆ ತಳ್ಳುವುದರಲ್ಲಿ ಸಂದೇಹವಿಲ್ಲ. ಆದ್ದರಿಂದಲೆ ನಾನು ಸಂಪೂರ್ಣ ಆಶಾವಾದಿಯಾಗಿದ್ದೇನೆ.

ಕನ್ನಡನಾಡಿನಲ್ಲಿ ಕನ್ನಡ ಆಡಳಿತದ ಭಾಷೆಯಾಗುತ್ತದೆ. ಕನ್ನಡನಾಡಿನ ಶಿಕ್ಷಣಕ್ರಮದಲ್ಲಿ ಕನ್ನಡ ಪ್ರಥಮಭಾಷೆಯಾಗುತ್ತದೆ. ವಿದ್ಯಾಭ್ಯಾಸದ ಎಲ್ಲಮಟ್ಟಗಳಲ್ಲಿಯೂ ಕನ್ನಡ ಶಿಕ್ಷಣ ಮಾಧ್ಯಮವಾಗುತ್ತದೆ. ಪ್ರದೇಶ ಪ್ರದೇಶದ ಮತ್ತು ಪ್ರದೇಶ ಕೇಂದ್ರದ ವ್ಯವಹಾರ ಮಾತ್ರಕ್ಕಾಗಿ ಹಿಂದಿ ಉಳಿಯುತ್ತದೆ. ಹೊರ ಪ್ರಪಂಚದೊಡನೆಯೂ ಮತ್ತು ದಿನದಿನವೂ ವಿಸ್ತರಿಸುತ್ತಿರುವ ಜಗತ್ತಿನ ಯಂತ್ರವಿದ್ಯೆ ಜ್ಞಾನವಿಜ್ಞಾನಗಳೊಡನೆಯೂ ಸಂಬಂಧ ಸಂಪರ್ಕಗಳನ್ನಿಟ್ಟುಕೊಳ್ಳುವ ಸಲುವಾಗಿ ಇಂಗ್ಲಿಷ್, ಪ್ರಪಂಚದ ಇತರ ಪ್ರಸಿದ್ಧ ಭಾಷೆಗಳಂತೆಯೆ, ಐಚ್ಛಿಕಭಾಷೆಯಾಗಿ ಮತ್ತು ಕೆಲವರ ಭಾಗಕ್ಕೆ ವಿಶೇಷ ಸಾಹಿತ್ಯಾಧ್ಯಯನವಿಷಯವಾಗಿಯೂ, ಮುಂದುವರಿಯುತ್ತದೆ.

ಕನ್ನಡ ಜನರ ಆಶೋತ್ತರದ ಮತ್ತು ಕರ್ಣಾಟಕಸಂಸ್ಕೃತಿಯ ಪ್ರತಿನಿಧಿಯಾದ ಕನ್ನಡ ಸಾಹಿತ್ಯಪರಿಷತ್ತು ಸದ್ಯಕ್ಕೆ ನಮ್ಮ ಅಭ್ಯುದಯಕ್ಕೆ ಆವಶ್ಯಕವಾದ ಭೌಗೋಲಿಕ ಚೌಕಟ್ಟನ್ನು ಸಾಧಿಸಿದೆ. ನವಮೈಸೂರು ರಾಜ್ಯದ ಆ ಚೌಕಟ್ಟಿನ ಮೇಲೆ ನಮ್ಮ ಸಂಸ್ಕೃತಿಯ ಆದರ್ಶದ 'ಕರ್ಣಾಟಕ'ವನ್ನು ಕಟ್ಟಬೇಕಾಗಿದೆ. ಇದುವರೆಗೆ ಪರಿಷತ್ತಿನ ವಾರ್ಷಿಕ ಸಮ್ಮೇಲನ ಸ್ವಲ್ಪ ಹೆಚ್ಚು ಕಡಮೆ ಉತ್ಸವರೂಪದ ಪ್ರಚ್ಛನ್ನ ರಾಜಕೀಯ ಚಳುವಳಿಯಾಗಿಯೆ ಸಾಗುತ್ತಿತ್ತು. ಇನ್ನು ಮೇಲೆ ಈ ವಾರ್ಷಿಕ ಸಮ್ಮೇಲನ ಉತ್ಸವರೂಪಮಾತ್ರವಾಗಿ ಪರ್ಯವಸಾನಹೊಂದುವುದರಲ್ಲಿ ಔಚಿತ್ಯವಿಲ್ಲ. ಇದು ಸಾಹಿತ್ಯಕ್ಷೇತ್ರದ ಶ್ರಮಜೀವಿಗಳ ಮತ್ತು ಕಲಾಸಾಧಕರ ವಾರ್ಷಿಕ ಸಾಹಸ ಸಿದ್ಧಿಗಳ ಪರೀಕ್ಷೆಯ ನಿಕಷವೇದಿಕೆಯಾಗಿ ಪರಿಣಮಿಸಬೇಕು. ನಮ್ಮ ನೆರೆಯ ಸೋದರ ಭಾಷಾಸಾಹಿತ್ಯಗಳೊಡನೆ ಹೆಚ್ಚು ಹೆಚ್ಚು ಸಂಪರ್ಕ ಬೆಳಸಲು ಪರಸ್ಪರ ಹೃದಯ ಪರಿಚಯದ ಮತ್ತು ಮೈತ್ರಿಸಾಧನೆಯ ರಂಗವಾಗಿ ಪರಿವರ್ತಿತವಾಗಬೇಕು. ಅಖಿಲ ಭಾರತೀಯವಾದ ಯಾವ ಮಹೋದ್ದೇಶದಿಂದ ಸಾಹಿತ್ಯ ಅಕಾಡೆಮಿ ಪ್ರೇರಿತವಾಗಿ ವಿವಿಧ ಕಾರ್ಯಗಳಲ್ಲಿ ಪ್ರವೃತ್ತವಾಗಿದೆಯೊ ಅದರ ಪ್ರಾದೇಶಿಕ ಪ್ರತಿನಿಧಿಯಾಗಬೇಕು. ಕರ್ಣಾಟಕದ ವಿವಿಧ ಸಂಸ್ಥೆಗಳಲ್ಲಿ ವಿವಿಧ ಸಂಘಗಳಲ್ಲಿ ವಿವಿಧ ವ್ಯಕ್ತಿಗಳಲ್ಲಿ ರೂಪುಗೊಳ್ಳುತ್ತಿರುವ ಮತ್ತು ಅಭಿವ್ಯಕ್ತವಾಗುತ್ತಿರುವ ಪುರೋಗಾಮಿಗಳಾದ ಹೃದಯದ ಮತ್ತು ಬುದ್ಧಿಯ ಶಕ್ತಿಗಳನ್ನೆಲ್ಲ ಕ್ರೋಡೀಕರಿಸಿ, ಅವುಗಳನ್ನು ತಾತ್ಕಾಲಿಕತೆಯ, ವಿಫಲತೆಯ, ಅಲ್ಪಮನೋರಂಜನೆಯ, ವಿಕೃತಕಲ್ಪನೆಯ, ಶೀಘ್ರಕೀರ್ತಿಯ, ಅಲ್ಪಪ್ರಯೋಜನದ ವ್ಯರ್ಥಸಾಹಸೋದ್ಯಮದಿಂದ ವಿಮುಖವನ್ನಾಗಿ ಮಾಡಿ, ರಕ್ಷಿಸಿ, ಮಹೋದ್ದೇಶದ ಹಾಗೂ ಚಿರಂತನಪ್ರಯೋಜನದ ಕಡೆಗೆ ತಿರುಗಿಸಿ ಶಿಷ್ಟಸಂಕಲ್ಪನಿಷ್ಠವನ್ನಾಗಿ ಮಾಡಬೇಕು.

ಈ ಮೂವತ್ತು ನಾಲ್ವತ್ತು ವರ್ಷಗಳಲ್ಲಿ ಕನ್ನಡ ಸಾಹಿತ್ಯ ಸಾಧಿಸಿರುವ ಸಂಪತ್ತು, ಪರಿಷತ್ತು ಸಕಾರಣವಾಗಿ ನಿಸ್ಸಂಕೋಚವಾಗಿ ಹೆಮ್ಮೆಪಟ್ಟುಕೊಳ್ಳುವಷ್ಟು ವೈಭವ ಪೂರ್ಣವಾಗಿದೆ, ವೈವಿಧ್ಯಪೂರ್ಣವಾಗಿದೆ, ಶ್ರೀಮಂತವಾಗಿದೆ. ಲೋಕಸಾಹಿತ್ಯದ ವಿಚಾರವಾಗಿ ಹಿಂದೆ ಹೇಳಿದುದಕ್ಕಿಂತಲೂ ನೂರುಮಡಿ ಹೆಚ್ಚಾಗಿ ಹೇಳಬಹುದು ಭಾವಸಾಹಿತ್ಯದ ವಿಚಾರವಾಗಿ. ಉದ್ಧಾರಕ್ಕೆ ಎಲ್ಲೆ ಇದೆಯೆ? ಮಹಚ್ಚೇತನದ ಅಭೀಪ್ಸೆ ನಿಶ್ಶಿಖರವಾದುದಲ್ಲವೆ? "ಉತ್ಸರ್ಪಿಣೀ ಖಲು ಮಹತಾಂ ಪ್ರಾರ್ಥನಾ!" ಉದ್ಧಾರದ ಕೊನೆ ಮುಟ್ಟಿದೆವು ಎಂದುಕೊಳ್ಳುವುದೆ ಪತನಕ್ಕೆ ಮೊದಲ ಹಜ್ಜೆ ಯಾದೀತು! ಆದ್ದರಿಂದ ನಮ್ಮ ಉದ್ಧಾರದ ವಿಷಯದಲ್ಲಿ ಸ್ವಲ್ಪ ಅತೃಪ್ತಿಯಿರ ಬೇಕಾದ್ದು ಪ್ರಗತಿಗೆ ಆವಶ್ಯಕ. ಆದರೆ, ಆ ಅತೃಪ್ತಿ ಆತ್ಮಧಿಕ್ಕಾರದ ಮಟ್ಟಕ್ಕೇರಿ, ಸಾಧಿಸಿರುವ ಕಾರ್ಯದ ಅವಹೇಳನದ ರೂಪಕ್ಕೂ ತಿರುಗಿ, ದೋಷೈಕದೃಷ್ಟಿಯಾಗಿ, ಉತ್ತಮಾಂಶವನ್ನೆಲ್ಲ ಅಸೂಯಾಜನ್ಯವಾದ ನಿಂದಾಗ್ನಿಯಲ್ಲಿ ಹೋಮಮಾಡು ವಂತಾದರೆ ಅಂತಹ ಅತೃಪ್ತಿಯನ್ನು ಮನೋವಿಕಾರಸಂಭೂತವಾದ ಒಂದು ರೋಗ ವನ್ನಾಗಿ ಭಾವಿಸಬೇಕಾಗುತ್ತದೆ. ಅಂತಹ ರೋಗದಿಂದ ವಿಮುಕ್ತರಾಗಿ ಪೂರ್ವ ಗ್ರಹದೂರವಾದ ಅವಿಕಾರಬುದ್ಧಿಯಿಂದಲೂ ಅನೇಕ ಸಾಹಿತ್ಯಾಧ್ಯಯನದಿಂದ ಸಿದ್ಧವಾದ ನಿಷ್ಪಕ್ಷಪಾತ ವಿಮರ್ಶದೃಷ್ಟಿಯಿಂದಲೂ ಸಮೀಕ್ಷಿಸಿದರೆ ಕನ್ನಡ ಸಾಹಿತ್ಯ ಈ ಮೂವತ್ತು ನಾಲ್ವತ್ತು ವರ್ಷಗಳಲ್ಲಿ ಅದ್ಭುತವನ್ನೆ ಸಾಧಿಸಿದೆ ಎಂದು ಹೇಳಬೇಕಾಗುತ್ತದೆ.

ನಮ್ಮ ಸಾಹಿತ್ಯ ಹಿಂದೆ ಸಂಸ್ಕೃತ ಸಾಹಿತ್ಯದ ಛಾಯೆಯಾಗಿ ಬೆಳೆಯಿತು; ಇಂದು ಇಂಗ್ಲಿಷ್ ಸಾಹಿತ್ಯದ ಛಾಯೆಯಾಗಿ ಬೆಳೆಯುತ್ತಿದೆ ಎಂಬರ್ಥದ ಅಸಮಾಧಾನದ ಟೀಕೆ ಕೆಲವು ಕಡೆಗಳಲ್ಲಿ ಕೇಳಬರುತ್ತಿದೆ. ನಾವೂ ಇತರರಾರೂ ಮಾಡದ ಏನಾದರೊಂದು ಹೊಸತನ್ನು ಮಾಡಿ, ಇನ್ನಾರದ್ದೂ ಅಲ್ಲದೆ ನಮ್ಮದೇ ಆಗಿರುವ ಮೂಲಸೃಷ್ಟಿರೂಪದ ಕಾಣಿಕೆಗಳನ್ನು ಪ್ರಪಂಚಕ್ಕೆ ದಾನಮಾಡಿ ಕೀರ್ತಿ ಪಡೆಯಬೇಕೆಂಬುದೆ ಈ ಅಸಮಾಧಾನದ ಮೂಲೋದ್ದೇಶ. ಅಂತಹ ಆಶೆ ಅಂತಹ ಉದ್ದೇಶ ಇರುವುದೇನೂ ತಪ್ಪಲ್ಲ. ಆದರೆ ಈ 'ಒರಿಜಿನಲ್' (ಸ್ವತಂತ್ರಸೃಷ್ಟಿ) ಆಗಬೇಕೆಂಬ ಬುದ್ಧಿ ಅತ್ಯಹಂಕಾರದ ಮಟ್ಟಕ್ಕೇರಿ ಭ್ರಾಂತಿವಿಕಾರವಾಗುವ ಸಂಭವವೂ ಉಂಟು. ನಮ್ಮ ತಂದೆ, ಅವರ ತಂದೆ, ಅವರ ತಂದೆ ಎಲ್ಲರೂ ಹೀಗೆಯೇ ಕಾಲುಹಾಕಿ ನಡೆಯುತ್ತಿದ್ದರೆಂದು ಮರಿಮಗನಾದವನು ಬೇರೆಯ ರೀತಿಯಲ್ಲಿ ಕಾಲು ಹಾಕಲು ತೊಡಗಿದರೆ, ಬಹುಬೇಗನೆ ನಾಲ್ಕಾರು ಜನರ ಗಮನ ಸೆಳೆಯಬಹುದಾದರೂ, ಅಷ್ಟೇ ಬೇಗನೆ ಎಲ್ಲರ ನಗೆಗೂ ಈಡಾಗಬೇಕಾಗುತ್ತದೆ; ಅಲ್ಲದೆ ನಡೆಯುವುದರ ಉದ್ದೇಶಕ್ಕೇ

ಭಂಗತಂದುಕೊಂಡಂತೆಯೂ ಆಗಬಹುದು. ಆದ್ದರಿಂದ 'ಒರಿಜಿನಲ್' ಆಗಬೇಕೆಂಬ ಆತುರದಿಂದ ಲೋಕ ಸಹಜ ಮತ್ತು ನಿಸರ್ಗಸಿದ್ಧವಾದ ಪ್ರಕಾರಗಳನ್ನು ಉಲ್ಲಂಘಿಸುವುದು ಬರಿಯ ವಿಕಾರಸೃಷ್ಟಿಗೆ ಅವಕಾಶವಾಗುತ್ತದೆ. ರೂಪಪರಿವರ್ತನೆಗೆ ಅಂತಃಪ್ರೇರಣೆಯ ವಿಕಾಸಾವಶ್ಯಕತೆಯ ಸಕಾರಣ ಪ್ರಚೋದನೆಯಿಲ್ಲದಿದ್ದರೆ ಅದು ಕ್ಷಣಿಕ ಕುತೂಹಲಕಾರಿಯಾದ ವಿಕಾರರಚನೆಯಾದೀತೆ ಹೊರತು ನೂತನ ಸೃಷ್ಟಿಯಾಗುವುದಿಲ್ಲ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅನುಕರಣ, ಅನುಸರಣ, ಛಾಯೆಗಳ ಜೊತೆ ಜೊತೆಗೆ ಸ್ವತಂತ್ರ ಸೃಷ್ಟಿಯೂ ವಿಪುಲವಾಗಿ ನಡೆದಿದೆ. ಸಾಹಿತ್ಯದ ಕೆಲವು ಪ್ರಕಾರಗಳಲ್ಲಂತೂ ಕನ್ನಡಿಗರು ಮಾತ್ರವಲ್ಲದೆ ಭಾರತೀಯರೂ ಹೆಮ್ಮೆಪಟ್ಟುಕೊಳ್ಳುವಂತಹ ಕೃತಿಗಳೂ ಮೈದೋರಿವೆ. ಅಷ್ಟೇ ಅಲ್ಲ. ಪೂರ್ಣ ಪರಿಣತಸ್ಥಿತಿಗೇರಿರುವ ಪ್ರಪಂಚದ ಯಾವ ಭಾಷೆಯ ಸಾಹಿತ್ಯಕ್ಕಾದರೂ ಕೋಡು ಮೂಡಿಸುವ ಕೃತಿಗಳೂ ಕವನ, ಕಾದಂಬರಿ, ಸಣ್ಣಕಥೆ, ನಾಟಕ, ಕಾವ್ಯ, ಮಹಾಕಾವ್ಯಾದಿಪ್ರಕಾರಗಳಲ್ಲಿ ಹೊರಹೊಮ್ಮಿವೆ. ಕನ್ನಡಿಗರು ವಿನಯಕ್ಕಾಗಿ ಬಗ್ಗಿ ನಡೆಯಬಹುದು; ಆದರೆ ರಿಕ್ತರಂತೆ ಕುಗ್ಗಿ ನಡೆಯಬೇಕಾಗಿಲ್ಲ.

ಎಂತಹ ಉತ್ಕೃಷ್ಟ ನಾಗರಿಕತೆಗೇರಿದ ಯಾವ ದೇಶದ ಎಷ್ಟು ಮುಂಬರಿದ ಸಾಹಿತ್ಯದಲ್ಲಾಗಲಿ ಹುಟ್ಟಿದುದೆಲ್ಲ ಬದುಕುವುದಿಲ್ಲ. ಕೆಲವು ಭಾಗ ಪತ್ರಿಕಾಸಾಹಿತ್ಯದಂತೆ ತನ್ನ ದಿನದ ಕರ್ತ್ಯವ್ಯವನ್ನು ಮಾಡಿ ಮುಗಿಸಿ ಮಡಿಯುತ್ತದೆ. ಅದು ದೈನಂದಿನ ಆಯುಃಪರಿಮಾಣದ್ದು. ಕೆಲವು ಭಾಗ ಯಾವುದಾದರೊಂದು ಸಮಸ್ಯೆಯ ಪರಿಹಾರಕ್ಕಾಗಿಯೊ ಅಥವಾ ಯಾವುದಾದರೊಂದು ಹೊಸನೀತಿಯ ಪ್ರಚಾರಕ್ಕಾಗಿಯೊ ಹುಟ್ಟುತ್ತದೆ. ಆ ಉದ್ದೇಶ ನೆರವೇರಿದೊಡನೆಯೆ ಅದು ಮನಸ್ಸಿನಿಂದ ಮರೆಯಾಗುತ್ತದೆ. ಇನ್ನು ಸ್ವಲ್ಪಭಾಗ ತತ್ಕಾಲ ದೇಶ ಸನ್ನಿವೇಶದ ಪ್ರಭಾವದಿಂದ ಹೊಮ್ಮಿ ಆ ಪರಿಸ್ಥಿತಿ ಸಜೀವವಾಗಿರುವ ತನಕ ಬಾಳಿ, ಕ್ರಮೇಣ ಜನಮನದಿಂದ ವಿಸ್ಮೃತವಾಗಿ, ತರುವಾಯ ಸಾಹಿತ್ಯಚರಿತ್ರೆಯ ವಿಷಯವಾಗಿಯೊ ಅಥವಾ ಪಂಡಿತರ ವಿಶೇಷಾಧ್ಯಯನದ ವಿಷಯವಾಗಿಯೊ ಉಳಿಯುತ್ತದೆ. ಎಲ್ಲಿಯೊ ಅಲ್ಪಸ್ವಲ್ಪ ಭಾಗ ಮಾತ್ರ ನಮ್ಮ ಚಿರಕಾಲಿಕ ಆಶೆ ಆದರ್ಶ ಆಕಾಂಕ್ಷೆ ಪ್ರಯೋಜನಗಳಿಗೆ ಸಂಬಂಧಪಟ್ಟು ನಮ್ಮ ನಿತ್ಯಜೀವನದ ನಿತ್ಯಪುರುಷಾರ್ಥಗಳಿಗೆ ನಿತ್ಯವೂ ನೀರೆರೆಯುವ ಹೊಂಗಿಂಡಿಗಳೊ ಹೊಂಗೊಡಗಳೊ ಆಗಿ ಪರಿಣಮಿಸಿ ನಿತ್ಯಸಾಹಿತ್ಯವಾಗಿರುತ್ತವೆ. ಈ ಎಲ್ಲ ಬಗೆಯ ಸಾಹಿತ್ಯಗಳೂ ಸಮಾನ ಸಾರ್ಥಕವಾದುವೆ. ನಿತ್ಯಸಾಹಿತ್ಯಕ್ಕೆ ಪತ್ರಿಕಾಸಾಹಿತ್ಯದ ಕೆಲಸಮಾಡಲು ಹೇಗೆ ಸಾಧ್ಯವಿಲ್ಲವೊ ಹಾಗೆಯೆ ಪತ್ರಿಕಾ

ಸಾಹಿತ್ಯಕ್ಕೂ ನಿತ್ಯಸಾಹಿತ್ಯದ ಕೆಲಸಮಾಡಲು ಸಾಧ್ಯವಿಲ್ಲ. ಆದರೆ ತಮ್ಮ ತಮ್ಮ ಕೆಲಸವನ್ನು ಸಮರ್ಪಕವಾಗಿ ಮಾಡಿದ ಅವೆರಡೂ ಸಾರ್ಥಕವೆ. ಅದರ ಧರ್ಮ ಬೇರೆ; ಇದರ ಧರ್ಮ ಬೇರೆ. ಆದ್ದರಿಂದ ಅದರ ಕರ್ತವ್ಯಕರ್ಮ ಬೇರೆ; ಇದರ ಕರ್ತವ್ಯ ಕರ್ಮ ಬೇರೆ.

ಆದಕಾರಣ ನಾವು ಸಾಹಿತ್ಯಪ್ರಪಂಚವನ್ನು ಒಂದು ವೇದಿಕೆಯಂತೆ ಭಾವಿಸುವುದಕ್ಕಿಂತಲೂ ಒಂದು ಸೋಪಾನಪಂಕ್ತಿಯಂತೆಯೊ ಅಥವಾ ಒಂದು ಪರ್ವತ ಶ್ರೇಣಿಯಂತೆಯೊ ಭಾವಿಸಿದರೆ ಉತ್ತಮ. ಎಲ್ಲ ತರಹದ ಸಾಹಿತ್ಯವೂ ಸಮಾನ ಪ್ರಯೋಜನಕರವಾದುದೆಂದಾಗಲಿ ಸಮಾನ ಯೋಗ್ಯವಾದುದೆಂದಾಗಲಿ ನಿರೀಕ್ಷಿಸಿ, ಬೆಲೆಕಟ್ಟಿ, ಒಂದನ್ನು ಹೊಗಳಿ ಇನ್ನೊಂದನ್ನು ತೆಗಳುವುದು ಅನಾವಶ್ಯಕ. ಆಯಾ ಶ್ರೇಣಿಗೆ ಸೇರಿದ ಸಾಹಿತ್ಯ ತನ್ನ ಸ್ಥಾನ ತನ್ನಿಂದ ನಿರೀಕ್ಷಿಸುವುದನ್ನು ಮಾಡಿದರೆ ಅದು ಉತ್ತಮ ಸಾಹಿತ್ಯವೆ.

ವಿವಿಧ ಶ್ರೇಣಿಗೆ ಸೇರಿ ವಿವಿಧ ಸ್ಥಾನಗಳಲ್ಲಿ ನಿಂತಿರುವ ವಿವಿಧ ಸಾಹಿತ್ಯ ಕೃತಿಗಳಿಂದ ಯಾವುದಾದರೂ ಒಂದೇ ಪ್ರಯೋಜನವನ್ನು ಬಯಸುವುದೂ ತಪ್ಪು. ಹತ್ತೊಂಬತ್ತನೆಯ ಶತಮಾನದ ಪಾಶ್ಚಾತ್ಯ ವಿಮರ್ಶಕರಿಂದ ಪ್ರಣೀತವಾಗಿ ಭಾರತೀಯ ತರುಣರ ಮತ್ತು ಯುವಕರ ಮನಸ್ಸನ್ನು ಮೋಹಿಸಿದ 'ಕಲೆಗಾಗಿ ಕಲೆ'ಯಂತಹ ಸ್ವಾರಸ್ಯವಾದ ಯೂರೋಪೀಯ ಸಿದ್ಧಾಂತ ಭ್ರಾಂತಿಗಳಿಂದ ಆವಿಷ್ಟರಾಗದೆ ತೆರೆದ ಮನಸ್ಸಿನಿಂದಿರುವುದು ಲೇಸು. ರಸಾನುಭವವೇ ಕಾವ್ಯದ ಪರಮ ಪ್ರಯೋಜನವೆಂದು ಅದನ್ನು "ಸಕಲಪ್ರಯೋಜನಮೌಲಿಭೂತ" ಎಂಬುದಾಗಿ ವರ್ಣಿಸಿದ ನಮ್ಮ ಪ್ರಾಚೀನ ಕಾವ್ಯಮೀಮಾಂಸಕರ ಮತವನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳದೆ, 'ಕಲೆಗಾಗಿ ಕಲೆ'ಯ ಸಿದ್ಧಾಂತಕ್ಕೆ ಕಣ್ಣುಮುಚ್ಚಿಕೊಂಡು ದುಮುಕಿದರೆ ಅನರ್ಥವಾದೀತು. ಕಾವ್ಯಪ್ರಯೋಜನಗಳನ್ನು ಹೇಳುವಾಗ ನಮ್ಮ ಪ್ರಾಚೀನ ಆಲಂಕಾರಿಕರು ಪರಮಪುರುಷಾರ್ಥವಾದ ಮೋಕ್ಷವನ್ನು ಗಂತವ್ಯ ಮತ್ತು ಗಮ್ಯವನ್ನಾಗಿ ಗುರುತಿಸಿದ್ದಾರೆ ಎಂಬದನ್ನು ನೆನಪಿನಲ್ಲಿಡಬೇಕು. ಕಲೆಯನ್ನಾಗಲಿ ಕಾವ್ಯವನ್ನಾಗಲಿ ನಮ್ಮ ಆತ್ಮದ ವಿಕಾಸದ ಮತ್ತು ಆಧ್ಯಾತ್ಮಿಕ ಉದ್ಧಾರದ ಒರೆಗಲ್ಲಿನ ಮೇಲೆ ಉಜ್ಜಿಯೆ ಬೆಲೆ ಕಟ್ಟಬೇಕಾಗುತ್ತದೆ; ಬರಿಯ ಮನೋಲ್ಲಾಸದ ಅಥವಾ ಸುಖಾಸ್ವಾದನೆಯ ದೃಷ್ಟಿಮಾತ್ರದಿಂದಲ್ಲ.

ಸಾಹಿತ್ಯ ಅನೇಕ ವಿಧವಾಗಿರುವಂತೆ ಅದರ ಪ್ರಯೋಜನಗಳೂ ಅನೇಕ ವಿಧವಾಗಿವೆ. ಸಮಾಜಸುಧಾರಣೆ, ನೀತಿಬೋಧೆ, ವಿಚಾರಪ್ರಚೋದನೆ, ಮತವಿಡಂಬನೆ, ಮತಪ್ರಶಂಸೆ, ಸ್ವಮತಶ್ಲಾಘನೆ, ಅನ್ಯಮತಖಂಡನೆ, ಸ್ವಜಾತಿಸಂಕೀರ್ತನೆ,

ಪರಜಾತಿನಿಂದನೆ, ವೈಜ್ಞಾನಿಕ ದೃಷ್ಟಿಪ್ರಚಾರ, ರಾಷ್ಟ್ರೀಯತಾಪ್ರಚಾರ, ಸಮನ್ವಯ ಧರ್ಮೋಪದೇಶ, ಸರ್ವೋದಯ, ಸಮದರ್ಶನ, ಮತ್ತು ಪೂರ್ಣ ದೃಷ್ಟಿಪ್ರದಾನ ಇತ್ಯಾದಿ ಇತ್ಯಾದಿಯಾಗಿ ಶಿಷ್ಟ ಮತ್ತು ದುಷ್ಟೋದ್ದೇಶ ಗಳಿಗನುಸಾರವಾಗಿ ಪ್ರಯೋಜನಗಳೂ ಅನೇಕವಾಗಿವೆ. ಜ್ಞಾನ ಛಂದೋಬದ್ಧವಾಗು ವಂತೆ ಮೂರ್ಖತೆಯೂ ಛಂದೋಬದ್ಧವಾಗಬಲ್ಲುದು. ಮಹತ್ತ್ವ ಛಂದೋಬದ್ಧ ವಾಗುವಂತೆ ಅಲ್ಪತ್ವವೂ ಛಂದೋಬದ್ಧವಾಗಬಲ್ಲುದು. ಸೌಂದರ್ಯ ಛಂದೋಬದ್ಧ ವಾಗುವಂತೆ ವಿಕಾರವೂ ಆಗಬಲ್ಲುದು. ಸೊಗಸಾಗಿ ಛಂದೋಬದ್ಧವಾದ ಮಾತ್ರಕ್ಕೆ ಅದು ಪೂಜ್ಯ, ದಿವ್ಯ, ಗ್ರಾಹ್ಯ, ಶ್ರೇಷ್ಠ ಎಂದು ಸರ್ವಶ್ಲಾಘ್ಯವಾಗಲಾರದು. ಸಮಾಜವನ್ನಾಗಲಿ ದೇಶವನ್ನಾಗಲಿ ವ್ಯಕ್ತಿಯನ್ನಾಗಲಿ ಉತ್ತಮತೆಯ ಕಡೆ ಗೊಯ್ಯುವ ಊರ್ಧ್ವಮುಖಿಯಾದ ಉದ್ಧಾರಶಕ್ತಿ ಎಲ್ಲೆಲ್ಲಿ ಇರುತ್ತದೆಯೊ ಅದೆಲ್ಲವೂ ನಮಗೆ ಗ್ರಾಹ್ಯ, ಸ್ವೀಕಾರಯೋಗ್ಯ. ಅದಕ್ಕೆ ವಿರುದ್ಧವಾಗಿ ಅಧೋಮುಖಿ ಯಾದುದು ಎಷ್ಟೇ ಸ್ವಾರಸ್ಯವಾಗಲಿ ತ್ಯಾಜ್ಯ ಮತ್ತು ಖಂಡನೀಯ. ಅದರ ದಮ ನಕ್ಕೆ ದಾಕ್ಷಿಣ್ಯ ಅಡ್ಡಬರಬಾರದು; ಏಕೆಂದರೆ ಅದರಿಂದ ಮಾನವೀಯತೆಗೆ ಹಾನಿ ಮತ್ತು ಆತ್ಮಶ್ರೀಗೆ ಗ್ಲಾನಿ.

ನಮಗೆ ನಾನಾಪ್ರಯೋಜನದ ಕೆಲಸಗಳಿಗೆ ಬೇಕಾಗುವ ನಾನಾರೀತಿಯ ಸಾಹಿತ್ಯದ ಆವಶ್ಯಕತೆಯಿದೆ. ಅದರಲ್ಲಿ ಸದ್ಯಕ್ಕೆ ಬಹು ಮುಖ್ಯವೆಂದು ತೋರುವ ಮೂರನ್ನು ನಿವೇದಿಸುತ್ತೇನೆ.

ಮೊದಲನೆಯದಾಗಿ: ನಮ್ಮ ರಾಷ್ಟ್ರವನ್ನು ಸೆಕ್ಯೂಲರ್ ಸ್ಟೇಟ್ ಎಂದು ಸಾರಿದ್ದೇವೆ, ಎಂದರೆ ಧರ್ಮಬಾಹಿರ, ಮತವಿದ್ವೇಷಕರ, ನಾಸ್ತಿಕ ಅಥವಾ ಚಾರ್ವಾಕ ಎಂದರ್ಥವಲ್ಲ; ಸಮನ್ವಯರಾಷ್ಟ್ರ ಎಂದರ್ಥ. ಎಲ್ಲ ಮತಗಳೂ ಸತ್ಯದೆಡೆಗೆ ನಮ್ಮನ್ನು ಕೊಂಡೊಯ್ಯುವ ಬೇರೆ ಬೇರೆ ಪಥಗಳು. ಆದ್ದರಿಂದ ಯಾವ ಮತವಾಗಲಿ ಇನ್ನೊಂದು ಮತವನ್ನು ನಿಂದಿಸಲು ಕಾರಣವಿಲ್ಲ. ಎಲ್ಲ ಮತಗಳೂ ದೇವರೆಡೆಗೆ ದಾರಿಗಳೆ ಆಗಿರುವುದರಿಂದ ಮತಾಂತರಗೊಳಿಸುವಂತಹ ಅರ್ಧಬರ್ಬರ ಕ್ರಿಯೆಗಳಿಗೂ ಇಲ್ಲಿ ಅರ್ಥವಿಲ್ಲ; ಆದ್ದರಿಂದ ಸ್ಥಾನವಿಲ್ಲ. ಎಲ್ಲರೂ ತಮ್ಮ ತಮ್ಮ ದಾರಿಗಳನ್ನರಿತು ಭಕ್ತಿಯಿಂದ ಭಗವಂತನೆಡೆಗೆ ಸಾಗುವುದರ ಜೊತೆಗೆ, ಅನ್ಯಮತ ಗಳನ್ನು ಸಹಾನುಭೂತಿಯಿಂದ ಅರಿತು, ಇತರರ ಸಾಮಾಜಿಕ ಜೀವನದೊಂದಿಗೆ ಮೈತ್ರಿಯಿಂದ ಬೆರೆತು, ಭಾಗವಹಿಸಿ, ರಾಷ್ಟ್ರದ ಜನರಲ್ಲಿ ಸಹೋದರಭಾವವನ್ನೂ ಐಕಮತ್ಯದ ಬುದ್ಧಿಯನ್ನೂ ನೆಲೆಗೊಳಿಸಬೇಕು. ಈ ಕೆಲಸದ ಹೊರೆಯ ಮತ್ತು ಹೊಣೆಯ ಮುಕ್ಕಾಲು ಮೂರು ವೀಸ ಪಾಲು ಸಾಹಿತ್ಯದ್ದಾಗಿದೆ. ಆದ್ದರಿಂದ

ಸಾಹಿತಿ ಅಥವಾ ಲೇಖಕನಾಗುವವನು ತನ್ನ ಸ್ವಂತ ಜೀವನದಲ್ಲಿ ಈ ವಿಶಾಲಮನೋ ಧರ್ಮವನ್ನು ಸ್ಥಾಪಿಸಿಕೊಳ್ಳುವುದು ಅಗತ್ಯ. ಏಕೆಂದರೆ ನಮ್ಮ ತೇಗಿನಲ್ಲಿ ಹೊರಬೀಳು ವುದು ನಾವು ತಿಂದುದರ ವಾಸನೆ ತಾನೆ!

ಎರಡನೆಯದಾಗಿ : ನಮ್ಮ ರಾಷ್ಟ್ರವನ್ನು ರಿಪಬ್ಲಿಕ್ ಅಥವಾ ಸರ್ವ ಪ್ರಜಾಧಿ ಪತ್ಯ ಎಂದು ಘೋಷಿಸಿದ್ದೇವೆ. ಅದರ ಗುರಿ ಸರ್ವೋದಯ. ಎಂದರೆ ಎಲ್ಲರ ಏಳಿಗೆ. ಎಲ್ಲರೂ ಸಮ, ಎಲ್ಲರೂ ಸಮಾನ ಎಂಬುದು ತತ್ತ್ವಜ್ಞಾನರೂಪದಲ್ಲಿ ಬಹಳ ಹಿಂದಿ ನಿಂದಲೂ ಋಷಿವಾಣಿಯಾಗಿ ಬಂದಿದೆ. ಸಮತೆ ಮತ್ತು ಸಮದರ್ಶನ ಭಾರತೀಯರ ಧರ್ಮಜೀವನದ ಅಡಿಗಲ್ಲು. ಆದರೆ ನಾನೂ ನೀವೂ ಒಂದೆ ಎಂದು ಆಧ್ಯಾತ್ಮಿಕವಾಗಿ ಒಪ್ಪಿಕೊಳ್ಳುವುದಕ್ಕೂ ನನ್ನ ಜೇಬಿಗೆ ನೀವು ಕೈಹಾಕಿದಾಗ ಒದಗುವ ಪರಿಸ್ಥಿತಿಗೂ ಅಜಗಜಾಂತರ ವ್ಯತ್ಯಾಸವಿದೆ! ಎಲ್ಲರೂ ದೇವರ ಮಕ್ಕಳೆ ಎಂದು ಹೇಳುತ್ತಾ ಆದಷ್ಟು ಲಾಭ ಸಂಪಾದಿಸಿ ಬಂಡವಾಳಗಾರನಾಗಿ, ತನ್ನ ಬಂಡವಾಳದ ರಕ್ಷಣೆಗಾಗಿ 'ಇನ್ನೊಬ್ಬರ ಧನಕ್ಕೆ ಆಸೆಪಡಬಾರದು!' 'ದೇವರು ಕೊಟ್ಟುದರಲ್ಲಿಯೆ ತೃಪ್ತಿಯಿಂದಿರ ಬೇಕು!' 'ಸುಖಕ್ಕೆ ಮೂಲಕಾರಣ ಧನವಲ್ಲ ಮನ!' ಎಂದೆಲ್ಲ ಧರ್ಮೋಪದೇಶ ಮಾಡುವುದಕ್ಕೆ ದತ್ತಿಗಳನ್ನು ಬೇಕಾದರೂ ಬಿಟ್ಟು, ಸಾಮಾನ್ಯಜನಕ್ಕೆ ಧರ್ಮದ ಅಫೀಮು ತಿನ್ನಿಸುವ ಕಾಲ ಹಿಂದಾಯಿತು. ಈಗ ಜನ ಅರ್ಥಶಾಸ್ತ್ರ ರಾಜಕೀಯ ಶಾಸ್ತ್ರ ವಿಜ್ಞಾನಾದಿ ವಿಚಾರಗಳನ್ನು ಸ್ವಪಕ್ಷಸಮರ್ಥನೆಯ ಚುನಾವಣಾಪ್ರಚಾರದ ಭಾಷಣಗಳಿಂದಲಾದರೂ, ಅರಿಯತೊಡಗಿದ್ದಾರೆ. ದೇಶದ ಜಮೀನುದಾರರೂ ಶ್ರೀಮಂತರೂ ಬಂಡವಾಳಗಾರರೂ ದಿನದಿನವೂ ಉಚ್ಚಕಂಠದಿಂದ ಘೋಷಿತವಾಗಿ ಮನೆಯ ಬಾಗಿಲೊಳಗೂ ನುಗ್ಗಿಬರುತ್ತಿರುವ ಈ ಹೊಸ ಹೊಸ ತತ್ತ್ವಗಳ ನ್ಯಾಯಕ್ಕೆ ಹೊಂದಿಕೊಳ್ಳಲಾರದೆ ಅದನ್ನು ಒಂದು ರೀತಿಯ ದರೋಡೆ ಎಂದೆ ಭಾವಿಸುತ್ತಾರೆ. ಅದು ದರೋಡೆಯಲ್ಲ; ಹಿಂದೆ ಧಾರ್ಮಿಕ ಉಪಾಯಗಳಿಂದ ಮಾಡಿದ್ದ ದರೋಡೆಯನ್ನು ಈಗ ಕಾರ್ಮಿಕ ಉಪಾಯಗಳಿಂದ ಹಂಚುವ ವಿಧಾನ ಎಂಬುದನ್ನು ಅವರಿಗೆ ಮನದಟ್ಟು ಮಾಡಿಕೊಡಬೇಕು. ಯಾವುದನ್ನು ಆಧ್ಯಾತ್ಮಿಕವಾಗಿ ಎಲ್ಲರೂ ಒಪ್ಪಿಕೊಳ್ಳುತ್ತಾ ಬಂದಿದ್ದಾರೊ ಅದನ್ನು ಲೌಕಿಕವಾಗಿಯೂ ಸಾಧಿಸುವುದಕ್ಕೆ ಆವಶ್ಯಕವಾದ ಮಾನಸಿಕ ಹಿನ್ನೆಲೆಯನ್ನೂ ಹೃದಯದ ಪರಿವರ್ತನೆಯನ್ನೂ ಉಂಟುಮಾಡಬೇಕು. ಆ ದಿಕ್ಕಿನಲ್ಲಿ ಸಾಹಿತ್ಯ ಮಾಡಬೇಕಾಗಿರುವ ಕೆಲಸ ಅತ್ಯಂತ ಮಹತ್ತಾದುದಾಗಿದೆ.

ಮೂರನೆಯದಾಗಿ : ಮಾನವನ ಬ್ರಾಹ್ಮೀಪ್ರಜ್ಞಾವಿಕಾಸಕ್ಕೆ ಪೂರ್ವಭಿತ್ತಿರೂಪ ವಾಗಿರುವ ಪೂರ್ಣದೃಷ್ಟಿಯ ರಸಸ್ಯಂದಿಯಾದ ಪ್ರತಿಪಾದನೆ. ತತ್ತ್ವದ ಮಟ್ಟದಲ್ಲಿ ಭಾರತೀಯ ಸಂಸ್ಕೃತಿ ಇದನ್ನು ಒಂದಲ್ಲ ಒಂದು ರೀತಿಯಲ್ಲಿ ವೇದೋಪನಿಷತ್ತುಗಳ

ಕಾಲದಿಂದಲೂ ಸಾರುತ್ತಾ ಸಾಧಿಸುತ್ತಾ ಬಂದಿದೆ. ಅದನ್ನು ಆಯಾ ಯುಗದ ಧರ್ಮವಿಕಾಸದ ಸ್ವರೂಪಾನುಗುಣವಾಗಿ ಸಂಪೂರ್ಣವಾಗಿ ಸಾಧಿಸಿ, ಸಿದ್ಧಪುರುಷರಾಗಿ, ವಿಶ್ವಮಾನವರಾಗಿ, ಪೃಥ್ವೀತತ್ತ್ವಕ್ಕೆ ಪರಾಶಕ್ತಿಯ ಆವಾಹನೆ ಮಾಡಿ, ಅಲ್ಪ ಮಾನವ ಭೂಮಮಾನವನಾಗಿ ಪರಿವರ್ತ್ತನೆ ಹೊಂದುವುದಕ್ಕೆ ನೆರವಾಗಿ ಹೋದ ಋಷಿ, ರಸಋಷಿವರೇಣ್ಯರೂ ಅನೇಕರಿದ್ದಾರೆ. ಈ ವಿಶ್ವಮಾನವರಚನೆಯೆ ನಮ್ಮ ಇತರ ಎಲ್ಲ ಉದ್ಧಾರೋದ್ಯಮಗಳ ಮತ್ತು ಸುಖಸಾಧನೆಯ ಸಾಹಸಗಳ ಅಂತರಾತ್ಮದಲ್ಲಿ ಅಡಗಿರುವ ಪ್ರಚ್ಛನ್ನ ಪ್ರೇರಣೆ. ಈ ಪೂರ್ಣದೃಷ್ಟಿ ದೇಶಕಾಲ ಪೂರ್ವಪಶ್ಚಿಮ ಮತಜಾತಿ ವರ್ಣಪಕ್ಷ ಪಂಥ ಸಿದ್ಧಾಂತಾದಿ ಎಲ್ಲ ತೆರನಾದ ಸೀಮೆಗಳನ್ನೂ ಉಲ್ಲಂಘಿಸಿ ಅತೀತವಾಗಿರುತ್ತದೆ; ಅನಿಕೇತನವಾಗಿರುತ್ತದೆ, ನಿತ್ಯವಾಗಿರುತ್ತದೆ. ಈ ಪೂರ್ಣದೃಷ್ಟಿ ಜನಾಂಗ ಜನಾಂಗಗಳ ನಡುವೆ ಗೋಡೆಕಟ್ಟಿಕೊಂಡು ನಿಂತಿರುವ ರಾಷ್ಟ್ರೀಯತೆಯನ್ನು ಉತ್ತರಿಸಿ, ಮಾನವನಿಂದ ಮಾನವನನ್ನು ಪ್ರತ್ಯೇಕಿಸುತ್ತಿರುವ ಕ್ಷುದ್ರಭೇದಗಳನ್ನು ಇಲ್ಲಗೈದು, ಶಾಶ್ವತವೂ ಸರ್ವ ಸಂಪೂರ್ಣತಾಸಿದ್ಧಿಕಾರಕವೂ ಆಗಿರುವ ನಿತ್ಯಶಾಂತಿಯ ಕಡೆಗೆ ಜಗತ್ತನ್ನು ಒಯ್ಯುತ್ತದೆ. ಸಕಲ ಪುರುಷಾರ್ಥಗಳ ಶಿಖರಪುರುಷಾರ್ಥಕ್ಕೆ ಜಗದ್ವೀಚೇತನೆಯನ್ನೇರಿಸುತ್ತಿದೆ. ಸಹೃದಯಯಾತ್ರಿ, ಸಾಹಿತ್ಯ-ಹೈಮಾಚಲ ಪರ್ವತಶ್ರೇಣಿಗಳಲ್ಲಿ ಈ ತುತ್ತತುದಿಯ ಶ್ರೇಣಿಯ ಈ ಕೈಲಾಸ ಪವಿತ್ರ ಕ್ಷೇತ್ರಕ್ಕೆ ಪ್ರವೇಶಿಸಿದಾಗ ಮಾನವತ್ವ ದೇವತ್ವದಲ್ಲಿ ಪದಾರ್ಪಣಮಾಡಿ ಸಾರ್ಥಕ್ಯ ಹೊಂದುತ್ತದೆ.

ಆದರೆ ಸಾಹಿತಿ ಯಾವ ತತ್ತ್ವವನ್ನಾಗಲಿ ಆಲೋಚಿಸಿ ಅದನ್ನೊಂದು ಸಿದ್ಧಾಂತ ರೂಪಕ್ಕೆ ತಂದುಕೊಂಡು, ಆಮೇಲೆ ಅದನ್ನು ಬುದ್ಧಿಪೂರ್ವಕವಾಗಿ, ಪ್ರಯೋಜನವನ್ನು ಮೂರುಹೊತ್ತೂ ಮನಸ್ಸಿನ ಮುಂದೆ ಇಟ್ಟುಕೊಂಡು, ಬರೆಯತೊಡಗಿದರೆ ರಸಾತ್ಮಕವಾದ ಕೃತಿ ಮೂಡಲಾರದು. ಹಾಲುಕೊಡುವ ಹಸು ಹೊಲಗದ್ದೆ ಕಾಡು ಮೇಡುಗಳಲ್ಲಿ ಹುಲ್ಲು ಹಸುರು ಚಿಗುರು ಸೊಪ್ಪು ಹಣ್ಣುಕಾಯಿ ಮೊದಲಾದುವುಗಳನ್ನು ಮೇದು, ತಿಂದು, ಕೊಟ್ಟಿಗೆಗೆ ಬಂದು, ಮಲಗಿ ಮೆಲುಕುಹಾಕಿ, ಹೊತ್ತರೆಯಲ್ಲಿ ತನ್ನ ಕರುವಿಗೆ ಕೆಚ್ಚಲು ಸೊರಸುವಂತೆ ಸಾಹಿತಿಯಾದವನು ತನ್ನ ಬುದ್ಧಿಭಾವಮಯವಾದ ಚಿತ್ಕೋಶವನ್ನು ಅಧ್ಯಯನದಿಂದ, ವಿದ್ವಜ್ಜನ ಸಂಪರ್ಕದಿಂದ, ಲೋಕಾನುಭವದಿಂದ, ಸ್ವಂತ ಚಿಂತನ ಧ್ಯಾನ ಸಾಧನಾದಿಗಳಿಂದ ಸುಪುಷ್ಟವನ್ನಾಗಿ, ಸುವಿಸ್ತೃತವನ್ನಾಗಿ, ಶ್ರೀಮಂತವನ್ನಾಗಿ ಮಾಡಿಕೊಳ್ಳಬೇಕು. ಆ ಅನುಭವವೆಲ್ಲವೂ ಸೇರಿ ಆತನ ಚೇತನೆಯಲ್ಲಿ ಒಂದು ಸಪ್ರಾಣಜ್ಯೋತಿಶ್ಶಕ್ತಿ, ಯಾವ ಗುಣವೂ ಅಲ್ಲದೆ ಎಲ್ಲ ಗುಣಗಳನ್ನೂ ಒಳಗೊಂಡು ಯಾವ ಗುಣವಾಗಿಬೇಕಾದರೂ ಮೈದೋರುವ

ಸಾಮರ್ಥ್ಯವುಳ್ಳ ನಿರ್ಗುಣವಾದ ಒಂದು ಚಿತ್‌ತಪಸ್‌ಶಕ್ತಿ, ಆವಿರ್ಭಾವವಾಗುತ್ತದೆ. ಅದರಿಂದ ಹೊಮ್ಮುತ್ತದೆ ಉತ್ತಮ ಸಾಹಿತ್ಯ, ಉತ್ಕೃಷ್ಟ ರಸಕೃತಿ.

ಗೋವು ಮೇಯುವ ಯಾವುದೆ ಆಹಾರವಾಗಲಿ ರಸಮಾರ್ಗಸಹಜವಾದ ಅದರ ಕೆಚ್ಚಲಿನಿಂದ ಬಂದಾಗಲೆ ಕ್ಷೀರವಾಗುತ್ತದೆ. ಬೇರೆ ದಾರಿಗಳಿಂದ ಬಂದಾಗ ಗೋಮಯವಾಗಬಹುದು, ವಮನವಾಗಬಹುದು, ನೆತ್ತರಾಗಬಹುದು, ಸ್ವೇದವಾಗ ಬಹುದು; ಆದರೆ ಅಮೃತವಾಗಲಾರದು. ಗೋಮಯಾದಿಗಳಿಗೂ ಬೇರೆ ಬೆಲೆ, ಬೇರೆ ಪ್ರಯೋಜನಗಳಿರುತ್ತವೆ. ಆದರೆ ಹಾಲಿನ ಬೆಲೆ ಹಾಗೂ ಅದರ ಪ್ರಯೋಜನವೇ ಬೇರೆ. ಹಾಗೆಯೆ ಸಾಹಿತಿಯ ತಾತ್ತ್ವಿಕ ಸಿದ್ಧಾಂತಗಳು ಏನೆ ಇರಲಿ, ಆತನ ರಾಜಕೀಯ ಸಾಮಾಜಿಕ ಮತೀಯ ಆರ್ಥಿಕಾದಿ ಅಭಿಪ್ರಾಯಗಳೂ ಅಪೇಕ್ಷೆಗಳೂ ಆದರ್ಶಗಳೂ ಆಲೋಚನೆಗಳೂ ಏನೆ ಆಗಿರಲಿ, ಅವೆಲ್ಲವೂ ಗೋವಿನ ಆಪೀನಸದೃಶ ವಾದ ಆತನ ರಸಮಯ ಚಿತ್ಕೋಶದಿಂದ ಹೊಮ್ಮಿ ಬಂದಲ್ಲದೆ ಅಮೃತವಸ್ತುವಾಗಿ ಪರಿಣಮಿಸುವುದಿಲ್ಲ. ಆ ರಸಮಯ ಚಿತ್ಕೋಶದಿಂದಲ್ಲದೆ ಬೇರೆ ದಾರಿಗಳಲ್ಲಿ ಬಂದುದೆಲ್ಲ ಗೋಮಯಾದಿಗಳಂತೆ ಅನ್ಯ ಪ್ರಯೋಜನಕಾರಿಗಳಾದ ಆರ್ಥಿಕ ರಾಜಕೀಯ ಮತೀಯಾದಿ ಭೂಮಿಕೆಗಳಲ್ಲಿ ಸಫಲಕೃತಿಗಳಾಗಬಹುದೆ ವಿನಾ ನಮಗೆ 'ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ' ಎಂಬಂತಹ ಅಮೃತವೀಯಲಾರವು.

ಆದ್ದರಿಂದ ಎಲ್ಲ ವಿಧವಾದ ಲೋಕಾನುಭವಗಳನ್ನೂ ರಸಾನುಭವಕ್ಕೆ ಪರಿವರ್ತಿಸುವ ಚಿದ್ಯಂತ್ರರೂಪಿಯಾಗಿ ಸಾಹಿತ್ಯದ ಸರ್ವಾಧಾರ ಮೂಲದಂತಿರುವ ಸಾಹಿತಿ ಮೊದಲು ತನ್ನನ್ನು ತಾನೇ ರಚಿಸಿಕೊಳ್ಳುವುದು ಅತ್ಯಗತ್ಯ. ಉತ್ತಮ ಸಾಹಿತ್ಯಕೃತಿ ಒಂದು ಆಚಾರ್ಯಚೇತನದ ಜೀವಿತಸಮಸ್ತದ ಸಾರಸರ್ವಸ್ವ ಎಂದು ಮಹಾಕವಿಯೊಬ್ಬನು ವರ್ಣಿಸಿದ್ದಾನೆ. ಆ ಸಾರಸರ್ವಸ್ವ ಜೀವನಗೋಕ್ಷೀರೋಪಮ; ಲೋಕದ ಕಹಿಯೆಲ್ಲವನ್ನೂ ಪರಿಹರಿಸಿ ಅಥವಾ ಪರಿವರ್ತಿಸಿ ನಮ್ಮ ಹೃದಯಕ್ಕೆ ಅಮೃತಪಾನ ಮಾಡಿಸುತ್ತದೆ. ನಮ್ಮನ್ನು ಆಶಿಷ್ಠರನ್ನಾಗಿ ದೃಢಿಷ್ಠರನ್ನಾಗಿ ಬಲಿಷ್ಟರನ್ನಾಗಿ ಮೇಧಾವಿಗಳನ್ನಾಗಿ ಮಾಡುತ್ತದೆ. "ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ' ಎಂಬ ಆನಂದಸ್ಥಿತಿಗೆ ನಮ್ಮನ್ನು ಏರಿಸುತ್ತದೆ.

"ಸಂಸಾರದ ವಿಷವೃಕ್ಷದಿ ಹಣ್ಣೆರಡಿವೆ ಅಮೃತೋಪ:
ಕಾವ್ಯಾಮೃತದಾಸ್ವಾದನ ಮೇಣ್ ಸಜ್ಜನ ಸಲ್ಲಾಪ!"

ಎಂಬರ್ಥದ ಒಂದು ಸಂಸ್ಕೃತ ಸುಭಾಷಿತವೂ ಇದನ್ನೆ ಪ್ರತಿಪಾದಿಸಿದೆ. ಸಂಸಾರವು ವಿಷವೃಕ್ಷದಂತಿದ್ದರೂ ಅದು ಆಸ್ವಾದ್ಯ; ಏಕೆಂದರೆ ಅದರಲ್ಲಿ ಎರಡಾದರೂ ಅಮೃತ ಸದೃಶವಾದ ಹಣ್ಣುಗಳಿವೆ: ಒಂದು ಸಜ್ಜನಸಲ್ಲಾಪ, ಇನ್ನೊಂದು ಕಾವ್ಯಾಮೃತಾ ಸ್ವಾದನ.

ಸಾಹಿತಿಗೆ ಕವಿಗೆ ರಸಋಷಿಗೆ ಅವಶ್ಯವಾಗಿ ಬೇಕಾಗಿರುವ ಈ ಸಿದ್ಧತೆ ವಾಸ್ತವವಾಗಿಯೂ ಒಂದು ದೀರ್ಘ ತಪಸ್ಯೆ. ಅವನ ಬದುಕಿನ ವೃಕ್ಷ ಮುಗಿಲತ್ತ ಆಕಾಶದೆತ್ತರಕ್ಕೆ ಬೆಳೆಯಬೇಕಾದರೆ ಅದರ ತಾಯಿಬೇರು ಆಳವಾಗಿ ಇಳಿದು, ಕವಲುಕವಲಾಗೊಡೆದು, ದಿಕ್ಕುದಿಕ್ಕಿಗೆ ಪ್ರಸರಿಸಿ, ಆಹಾರಸತ್ತ್ವಗಳನ್ನು ಹೀರಿಕೊಳ್ಳಬೇಕಾಗುತ್ತದೆ. ಆ ತಾಯಿಬೇರಿನ ಕವಲುಗಳಲ್ಲಿ ಮುಖ್ಯೋಪಕರಣಗಳಂತಿರುವ ಮೂರನ್ನು ನಾನು ನಮ್ಮ ಪ್ರವರ್ಧಮಾನ ತರುಣರ ಮುಂದಿಡಲು ಬಯಸುತ್ತೇನೆ. ಭಾರತೀಯವಾದ ಪ್ರಾಚೀನವಿದ್ಯಾಸಂಸ್ಕೃತಿಗಳ ಸಾರಗ್ರಾಹಿಯಾಗಿ ಒಂದು ಹೆಗ್ಗವಲು ಇಳಿಯಬೇಕಾಗುತ್ತದೆ; ಭಾರತೇತರವಾದ ಉದ್ದಾಮ ವಿದ್ಯಾಸಂಸ್ಕೃತಿಗಳ ಸಾರಗ್ರಾಹಿಯಾಗಿ ಇನ್ನೊಂದು; ಕರ್ಣಾಟಕದ ಭಾಷೆ ವಿದ್ಯೆ ಕಲೆ ಸಂಸ್ಕೃತಿ ಇತ್ಯಾದಿಗಳ ಸಾರಮಾತ್ರವನ್ನಲ್ಲದೆ ವಿವರಗಳನ್ನೆಲ್ಲ ಕೂಲಂಕಷವಾಗಿ ಅರಿಯುವ ಮತ್ತು ಅಭ್ಯಸಿಸುವ ಸಲುವಾಗಿ ಮತ್ತೊಂದು. ಈ ಮೂರನ್ನೂ ಸಾಧಿಸಲು ಸಹಾಯಕವಾಗಿ ಕನಿಷ್ಟಪಕ್ಷ ಮೂರಾದರೂ ಭಾಷೆಗಳು ಬೇಕಾಗುತ್ತವೆ. ಒಂದು ಅನಿವಾರ್ಯವಾಗಿಯೆ ಕನ್ನಡ; ಇನ್ನೊಂದು ಅವಶ್ಯಕವಾಗಿಯೆ ಸಂಸ್ಕೃತ; ಮತ್ತೊಂದು, ಸದ್ಯದ ಸಮ್ಮ ಪರಿಸ್ಥಿತಿಯಲ್ಲಿ, ಇಂಗ್ಲಿಷ್. ಬಹುಶಃ, ಕೆಲವು ಕಾಲದ ಮೇಲೆ, ವ್ಯಾಪ್ತಿಯಲ್ಲಿ ಶಕ್ತಿಯಲ್ಲಿ ಇಂಗ್ಲಿಷಿಗೆ ಹೆಗಲೆಣೆಯಾಗಿ ಪ್ರಪಂಚಕ್ಕೂ ನಮಗೂ ನಡುವೆ ಕಾಲುವೆಯಾಗಬಲ್ಲ ಹಾಗೂ ಸೇತುವೆಯಾಗಬಲ್ಲ ಇನ್ನಾವುದಾದರೂ ಒಂದು ವಿದೇಶೀಯ ಭಾಷೆ. ಕನ್ನಡದಲ್ಲಿ ಏನಾದರೂ ತೂಕವಾದ ಮತ್ತು ನಾಲ್ಕು ಕಾಲ ಬಾಳುವ ಸತ್ತ್ವವುಳ್ಳ ಸಾಹಿತ್ಯಸೃಷ್ಟಿ ಮಾಡಬೇಕೆಂದು ಬಯಸುವ ಯಾವ ತರುಣನಾಗಲಿ ಮೇಲೆ ಸೂಚಿಸಿದ ದೀಕ್ಷೆಯಿಂದ ದೂರವಾಗಿಯೂ ಕೃತಕೃತ್ಯನಾಗುತ್ತೇನೆ ಎಂದು ಭಾವಿಸಿದರೆ ಅದು ಅಸಾಧ್ಯ.

ಕೊನೆಯದಾಗಿ, ಸಾಹಿತ್ಯಸೃಷ್ಟಿಯ ಉತ್ಕರ್ಷಕ್ಕೂ ಸಹೃದಯ ರಸಾಸ್ವಾದನೆಗೂ ಅತ್ಯಾವಶ್ಯಕವಾಗಿರುವ ಒಂದು ವಿಚಾರದತ್ತ ತಮ್ಮ ಗಮನ ಸೆಳೆಯಲು ಬಯಸುತ್ತೇನೆ. ನಮ್ಮ ಸಾಹಿತ್ಯ ತನ್ನ ಆಧುನಿಕ ಕಾಲಾವಧಿಯಲ್ಲಿ ನಾನಾಮುಖವಾಗಿ ಬೆಳೆದಿದೆ ಎಂಬುದೇನೊ ನಿಜ; ಆದರೆ ಸಾಹಿತ್ಯವಿಮರ್ಶೆಯ ಹಾಗೂ ಕಾವ್ಯಮೀಮಾಂಸೆಯ ಮುಖದಲ್ಲಿ ಮಾತ್ರ ಅದು ಇತರ ಮುಖಗಳಲ್ಲಿ ಮುಂದುವರಿದಂತೆ ಬೆಳೆದಿಲ್ಲ. ಈಗಾಗಲೆ ಸೃಷ್ಟಿಯಾಗಿರುವ ಸಾಹಿತ್ಯದ ಸ್ವರೂಪವನ್ನು ಜನತೆಗೆ ನಿರೂಪಿಸುವುದಕ್ಕೂ ಮುಂದೆ ಸೃಷ್ಟಿಯಾಗಲಿರುವ ಸಾಹಿತ್ಯವನ್ನು ಜನತಾಹೃದಯದ ದೃಷ್ಟಿಯಿಂದ ನಿರೂಪಿಸುವುದಕ್ಕೂ ವಿಮರ್ಶೆ ನೆರವಾಗುತ್ತದೆ. ಸಾಹಿತ್ಯದ ಸ್ವರೂಪ, ಸಾಹಿತ್ಯದ ಉದ್ದೇಶ, ಸಾಹಿತ್ಯದ ಪ್ರಯೋಜನ ಸಾಹಿತ್ಯಪ್ರಕಾರಗಳು, ಸಾಹಿತ್ಯ

ಸತ್ತ್ವದ ವಿವಿಧಾಂಗಗಳು ಮೊದಲಾದ ಮೂಲತತ್ತ್ವಗಳನ್ನು ಕುರಿತ ಜಿಜ್ಞಾಸೆ ಸಾಹಿತಿಯ ದೃಷ್ಟಿರಚನೆಗೆ ಸಹಕಾರಿಯಾಗುತ್ತದೆ. ವಾಚಕನ ಅಥವಾ ಸಹೃದಯನ ದಿಕ್ಕಿನಿಂದಲೂ ಸಾಹಿತ್ಯವಿಮರ್ಶೆ ಆಧುನಿಕ ಸಾಹಿತ್ಯದ ಪರಿಚಯ ಮಾಡಿ ಕೊಡುವುದು ಅಗತ್ಯವಾಗಿದೆ. ಯಾರ ಅಭಿರುಚಿ ಹಳೆಯ ರೀತಿಯ ಸುಪರಿಚಿತ ಸಾಹಿತ್ಯ ಪ್ರಕಾರಗಳಿಂದಲೆ ಇದುವರೆಗೂ ತೃಪ್ತಿಪಡೆಯುತ್ತ ಬಂದಿದೆಯೊ ಅವರಿಗೆ ಹೊಸದು ಮೊದಮೊದಲು ವಿಲಕ್ಷಣವಾಗಿ ಅಗ್ರಾಹ್ಯವಾಗುತ್ತದೆ. ಆದರೆ ಹೊಸದ ರಲ್ಲಿ ಏನಾದರೂ ನಿಜವಾದ ಸತ್ತ್ವಾಂಶ ರಸಾಂಶಗಳು ಇರುವ ಪಕ್ಷಕ್ಕೆ ಅದನ್ನು ತೋರಿಸಿಕೊಟ್ಟು ಅವರ ಅಭಿರುಚಿಯನ್ನು ಅಕೃಪಣವನ್ನಾಗಿ ಮಾಡಬೇಕಾದ ಕರ್ತವ್ಯ ವಿಮರ್ಶೆಯದು.

ಅಷ್ಟೇ ಅಲ್ಲ. ಹಳೆಯದರ ಹಳೆಯ ಪರಿಚಯವನ್ನೂ ಹೊಸತುಮಾಡಿ ಕೊಡುವ ಮತ್ತೊಂದು ಮಹತ್ತರ ಕಾರ್ಯ ಸಾಹಿತ್ಯಮೀಮಾಂಸಕನ ಮುಂದೆ ಗುರುತರವಾಗಿದೆ. ನಮ್ಮ ಕಾವ್ಯಪುರಾಣಗಳನ್ನು ಜನತೆ ಇದುವರೆಗೆ ಒಂದು ಶ್ರದ್ಧೆಯಿಂದ, ಒಂದು ಭಕ್ತಿಯಿಂದ, ಒಂದು ಗೌರವದಿಂದ, ಒಂದು ಪ್ರೀತಿಯಿಂದ ಓದುತ್ತಾ ಆಸ್ವಾದಿಸುತ್ತಾ ಪೂಜಿಸುತ್ತಾ ಬಂದಿದೆ. ಆ ಪವಿತ್ರ ಕಥೆಗಳಲ್ಲಿ ಬರುವ ಕಥಾನಾಯಕಾದಿ ಪಾತ್ರಗಳ ವಿಚಾರದಲ್ಲಿಯೂ ಅವರು ನಡೆದ ನಡೆ, ನುಡಿದ ನುಡಿ, ಮಾಡಿದ ಕೆಲಸ, ಬೋಧಿಸಿದ ಉಪದೇಶ ಇತ್ಯಾದಿಗಳ ವಿಚಾರದಲ್ಲಿಯೂ ಸಂಪ್ರದಾಯಸಿದ್ಧವಾದ ಒಂದು ಸ್ವೀಕಾರಬುದ್ಧಿ ಇದುವರೆಗೂ ನಮ್ಮ ಜನಸಾಮಾನ್ಯ ರಲ್ಲಿ ಅಸ್ಖಲಿತವಾಗಿತ್ತು. ಆದರೆ ಈಗ ವೈಜ್ಞಾನಿಕವಾದ ಒಂದು ವಿಚಾರದೃಷ್ಟಿ ಉದ್ದೀಪನವಾಗುತ್ತಿದೆ. ಎಲ್ಲ ನಂಬುಗೆಗಳನ್ನೂ, ಅವು ಎಷ್ಟೇ ಪ್ರಾಚೀನವಾಗಿರಲಿ, ಎಷ್ಟೇ ಪೂಜ್ಯವಾಗಿರಲಿ, ವಿಚಾರನಖದಿಂದ ಕೆರೆದುನೋಡುವ ಒಂದು ಸ್ವತಂತ್ರ ಮತಿ ಜನಸಾಮಾನ್ಯರಲ್ಲಿಯೂ ತನ್ನ ವಿಜ್ಞಾನ ಹಸ್ತಪ್ರಸಾರ ಮಾಡುತ್ತಿದೆ. ಆ ಕಥೆಗಳನ್ನೂ ಆ ಕಥೆಗಳಲ್ಲಿ ಬರುವ ದೈವೀಪಾತ್ರಗಳನ್ನೂ ಅಲ್ಲಿ ಸಂಭವಿಸುವ ಅದ್ಭುತ ಘಟನೆಗಳನ್ನೂ ನಂಬಲು ಆವಶ್ಯಕವಾದ ಒಂದು ಶಿಶುಸಹಜ ಮುಗ್ಧತೆ ಜನರಿಂದ ಮಾಯವಾಗುತ್ತಿದೆ. ಆ ಮೌಢ್ಯಭಂಗಿಯನ್ನು ನಾವು ಶ್ರದ್ಧೆ ಎಂದು ಕರೆದರೂ ದಿನದಿನವೂ ಬೆಳಗುತ್ತಿರುವ ವೈಜ್ಞಾನಿಕದೃಷ್ಟಿಯ ವಿಚಾರಕಾಂತಿಯ ಮುಂದೆ ಅದಕ್ಕೆ ಉಳಿಗತಿಯಿಲ್ಲವೆಂದೆ ತೋರುತ್ತದೆ. ವಿಜ್ಞಾನಬುದ್ಧಿಯ ಬಿಸಿಲಿನಲ್ಲಿ ಆ ಶ್ರದ್ಧೆ ಬತ್ತಿಹೋದ ಮೇಲೆ ಜನರು ಆ ಕಥೆಗಳನ್ನೂ ಆ ಪಾತ್ರಗಳನ್ನೂ ಆ ಘಟನೆಗಳನ್ನೂ ಕವಿಕಲ್ಪಿತ ವಿದ್ಯೆಗಳೆಂದೂ ಬರಿಯ ಕಲ್ಪನಾವಿಲಾಸದ ಒಂದು ಸೊಗಸಿಗಾಗಿ ಓದತಕ್ಕವೆಂದೂ ಅವುಗಳನ್ನೆಲ್ಲ ಈಸೋಫನ ಕಥೆಗಳನ್ನೆಂತೊ ಅಂತೆ ಬಾಲಕರಿಗಾಗಿ

ಮೀಸಲಿಡುತ್ತಾರೆ. ಹಾಗೇನಾದರೂ ಆದರೆ ಮಾನವಕುಲಕ್ಕೆ ಒಂದು ದೊಡ್ಡ ಅಪಘಾತ ಸಂಭವಿಸಿದಂತಾಗುತ್ತದೆ. ಆದರೆ ನಾವು ಈಗ ಹೋಗುತ್ತಿರುವ ಹಾದಿಯಲ್ಲಿಯೆ ಹೋಗುತ್ತಿದ್ದರೆ ಆ ಅಪಘಾತ ಅನಿವಾರ್ಯ. ಅಂತಹ ಅಪಘಾತದಿಂದ ನಮ್ಮ ಅನರ್ಘ್ಯರಸಭಂಡಾರದ ಕೃತಿಗಳನ್ನು ರಕ್ಷಿಸುವುದೆಂತು? ಅವುಗಳ ರಸಕೋಶದಲ್ಲಿರುವ ದರ್ಶನಜ್ಯೋತಿಯೂ ಶಕ್ತಿಯೂ ಮಾನವ ಹೃದಯಕ್ಕವತರಿಸಿ, ಅಲ್ಲಿ ಸುಪ್ತವಾಗಿರುವ ದೈವೀಪ್ರಜ್ಞೆಯ ಉನ್ಮೀಲನಕ್ಕೂ ಉನ್ಮೇಷನಕ್ಕೂ ಅವಕಾಶವೊದಗುವಂತೆ ಮಾಡುವುದು ಹೇಗೆ? ಭಾಷೆಗೆ ಲೋಕೋಪಯೋಗ ಮತ್ತು ಭಾವೋಪಯೋಗ ಎಂದು ಎರಡು ರೀತಿಯ ಪ್ರಯೋಜನಗಳಿವೆ ಎಂಬ ತತ್ತ್ವವನ್ನು ಪ್ರತಿಪಾದಿಸಿ ಅವುಗಳಲ್ಲಿರಬಹುದಾದ ಮೌಢ್ಯಾಂಶವನ್ನು ತೊರೆದು ಜ್ಞಾನಾಂಶ ರಸಾಂಶ ದರ್ಶನಾಂಶಗಳನ್ನು ರಕ್ಷಿಸುವುದು ಸಾಧ್ಯವೆ? ಸಂಕೇತ, ಪ್ರತೀಕ ಮತ್ತು ಪ್ರತಿಮಾ ಈ ಮೂರಕ್ಕೂ ಇರುವ ವ್ಯತ್ಯಾಸವನ್ನು ಮನಶ್ಶಾಸ್ತ್ರೀಯವಾಗಿ ವಿವರಿಸಿ, ಅವುಗಳಲ್ಲಿರುವ ನಿತ್ಯಾಂಶವನ್ನು ಸಹೃದಯರು ಗ್ರಹಿಸುವಂತೆ ಮಾಡಲು ಸಾಧ್ಯವೆ? ಪ್ರತಿಮಾವಿಧಾನದ ಮತ್ತು ದರ್ಶನಧ್ವನಿಯ ಸಿದ್ಧಾಂತಗಳನ್ನು ಮನೋವಿಜ್ಞಾನದ ಆಧಾರದ ಮೇಲೆ ತತ್ತ್ವಶಾಸ್ತ್ರೀಯವಾಗಿ ಪ್ರತಿಪಾದಿಸಿ ಆ ಮಹಾಕಾವ್ಯಪುರಾಣಗಳ ಕಥಾಪ್ರತಿಮೆಗಳಲ್ಲಿ ಕಾಲ ದೇಶ ಮತಾದಿಬದ್ಧವಾದ ನಶ್ವರಾಂಶವನ್ನು ಮೀರಿ ಸಾರ್ವದೇಶಿಕ ಮತ್ತು ಸಾರ್ವಕಾಲಿಕವಾದ ನಿತ್ಯಸತ್ಯಗಳಿರುವುದನ್ನು ಸಹೃದಯ ಹೃದಯವೇದ್ಯವನ್ನಾಗಿ ಮಾಡಲೋಸುಗ ನವೀನ ದೃಷ್ಟಿಗೂ ನವದರ್ಶನಕ್ಕೂ ಹೊಂದಿಕೊಳ್ಳುವಂತೆ, ಆದರೆ ಮೂಲದ ಆಶಯಕ್ಕೂ ಅಲ್ಲಿಯ ಸೌಂದರ್ಯಕ್ಕೂ ಊನಬರದಂತೆ, ಅವುಗಳನ್ನು ಪೂರ್ಣವಾಗಿಯಾಗಲಿ ಆಂಶಿಕವಾಗಿಯಾಗಲಿ ಪರಿವರ್ತಿಸಬಹುದೆ?

ಇಂತಹ ಅನೇಕ ಪ್ರಶ್ನೆಗಳೂ ಸಮಸ್ಯೆಗಳೂ ನಮ್ಮೆದುರು ನಿಲ್ಲುತ್ತವೆ. ವಿಮರ್ಶೆ ಅವನ್ನೆಲ್ಲ ಎದುರಿಸಬೇಕಾಗುತ್ತದೆ. ಅವಕ್ಕೆಲ್ಲ ಪರಿಹಾರ ಹುಡುಕಬೇಕಾಗುತ್ತದೆ. ಸಾಧ್ಯಾಸಾಧ್ಯತೆಯನ್ನೂ ಔಚಿತ್ಯವಿವೇಕಗಳನ್ನೂ ವಿಚಾರಪೂರ್ವಕವಾಗಿ ಪರಿಶೀಲಿಸಬೇಕಾಗುತ್ತದೆ. ಅಂತಹ ಬಹುಮುಖವಾದ ಮತ್ತು ವ್ಯಾಪಕವಾದ ಕಾರ್ಯನಿರ್ವಹಣೆಯಲ್ಲಿ ವಿಮರ್ಶಕನಿಗೆ ಒಂದು ಗಭೀರವಾದ ಮತ್ತು ವಿಶಾಲವಾದ ಪೂರ್ವಸಿದ್ಧತೆ ಬೇಕಾಗುತ್ತದೆ. ನಾನಾ ಸಾಹಿತ್ಯಗಳ ತಲಸ್ಪರ್ಶಿಯಾದ ಪರಿಚಯದ ಜೊತೆಗೆ ಮನಶ್ಶಾಸ್ತ್ರ, ತತ್ತ್ವಶಾಸ್ತ್ರ ಮತ್ತು ಯೋಗವಿಜ್ಞಾನಗಳೂ ಆತನಿಗೆ ನೆರವಾಗುತ್ತವೆ. ಕುಶಾಗ್ರಬುದ್ಧಿಯ ನಮ್ಮ ಪ್ರಾಚೀನ ಆಲಂಕಾರಿಕರ ಭಾರತೀಯ ಕಾವ್ಯಮೀಮಾಂಸೆಯ ಜೊತೆಗೆ ವಿಪುಲವಾಗಿ ಮತ್ತು ಪ್ರೌಢವಾಗಿ ಬೆಳೆದಿರುವ

ಪಾಶ್ಚಾತ್ಯ ಸಾಹಿತ್ಯವಿಮರ್ಶೆಯ ಮತ್ತು ಕಾವ್ಯಮೀಮಾಂಸೆಯ ಜ್ಞಾನವೂ ಸೇರಿಯಬೇಕಾಗುತ್ತದೆ. ಮುಂದಿನ ನಮ್ಮ ಸಾಹಿತ್ಯಜೀವನದಲ್ಲಿ ಅಧಿಕಾರಿಯಾದ ಅಂತಹ ವಿಮರ್ಶಕೋತ್ತಮನಿಗೆ ಒಂದು ಮಹತ್ತಾದ ಸ್ಥಾನವಿದೆ. ಆ ಸ್ಥಾನ ಎಂತಹ ಮಹೋನ್ನತಕವಿಯ ಸ್ಥಾನಕ್ಕೇನೂ ಕೀಳಾದುದಲ್ಲ.

ಮಹನೀಯರೆ, ಮಹಿಳೆಯರೆ, ಮಿತ್ರರೆ, ಈ ದೀರ್ಘಭಾಷಣಕ್ಕಾಗಿ ತಮ್ಮ ಕ್ಷಮೆ ಬೇಡುತ್ತೇನೆ. ತಮ್ಮ ತಾಳ್ಮೆಯನ್ನು ಇನ್ನೂ ಹೆಚ್ಚು ಶೋಧಿಸುವ ಸಾಹಸಕ್ಕೆ ನಾನು ಕೈಹಾಕುವುದಿಲ್ಲ. ಈ ಸಂದರ್ಭದಲ್ಲಿ ಆವಶ್ಯಕವೆಂದು ನನಗೆ ತೋರಿದ ಕೆಲವು ಮೂಲಸೂತ್ರರೂಪವಾದ ವಿಷಯಗಳನ್ನು ಕುರಿತು ಸಾಧ್ಯವಾದಷ್ಟುಮಟ್ಟಿಗೆ ಸಂಗ್ರಹಗೈದು ಪರಿಶೀಲನೆಗಾಗಿ ತಮ್ಮ ಮುಂದೆ ಇಟ್ಟಿದ್ದೇನೆ.

ಈ ಗೌರವದ ಸ್ಥಾನಕ್ಕೆ ನನ್ನನ್ನು ಆರಿಸಿ ಆಶೀರ್ವದಿಸಿರುವುದಕ್ಕಾಗಿ ವಾಗ್ದೇವಿಯ ಮಕ್ಕಳಾಗಿರುವ ನನ್ನ ಸಹೋದರರೆಲ್ಲರಿಗೂ ನಮಸ್ಕರಿಸುವುದರ ಮೂಲಕ ಆ ತಾಯಿಗೆ ನನ್ನ ಅನಂತಾನಂತ ಸಾಷ್ಟಾಂಗಪ್ರಣಾಮಗಳನ್ನು ನಿವೇದಿಸುತ್ತೇನೆ. ಅಮ್ಮ ನನ್ನಲ್ಲಿ ಪ್ರಚೋದಿಸಿರುವ ಈ 'ಅನಿಕೇತನ' ಪ್ರಾರ್ಥನೆ ನಮ್ಮೆಲ್ಲರ ಅಭೀಪ್ಸೆಯಾಗಿ ಮೇಲೇರಿ ಆಕೆಯ ದಿವ್ಯಚರಣಗಳನ್ನು ಮುಚ್ಚಿ ಪೂಜಿಸುವ ಪುಷ್ಪರಾಶಿಯಾಗಲಿ ಎಂದು ಹಾರೈಸುತ್ತೇನೆ.

ಓ ನನ್ನ ಚೇತನ,
ಆಗು ನೀ ಅನಿಕೇತನ!

ರೂಪ ರೂಪಗಳನು ದಾಟಿ,
ನಾಮ ಕೋಟಿಗಳನು ಮೀಟಿ,
ಎದೆಯ ಬಿರಿಯೆ ಭಾವದೀಟಿ,
ಓ ನನ್ನ ಚೇತನ,
ಆಗು ನೀ ಅನಿಕೇತನ!

ನೂರು ಮತದ ಹೊಟ್ಟ ತೂರಿ,
ಎಲ್ಲ ತತ್ತ್ವದೆಲ್ಲೆ ಮೀರಿ,
ನಿರ್ದಿಗಂತವಾಗಿ ಏರಿ
ಓ ನನ್ನ ಚೇತನ,
ಆಗು ನೀ ಅನಿಕೇತನ!

ಎಲ್ಲಿಯೂ ನಿಲ್ಲದಿರು;
ಮನೆಯನೆಂದೂ ಕಟ್ಟದಿರು;
ಕೊನೆಯನೆಂದೂ ಮುಟ್ಟದಿರು;

ಓ ಅನಂತವಾಗಿರು !
ಓ ನನ್ನ ಚೇತನ,
ಆಗು ನೀ ಅನಿಕೇತನ !

ಅನಂತ ತಾನ್ ಅನಂತವಾಗಿ
ಆಗುತಿಹನೆ ನಿತ್ಯಯೋಗಿ ;
ಅನಂತ ನೀ ಅನಂತವಾಗು :
ಆಗು, ಆಗು, ಆಗು, ಆಗು !
ಓ ನನ್ನ ಚೇತನ,
ಆಗು ನೀ ಅನಿಕೇತನ !

—ಕುವೆಂಪು

# ಸಂಪಾದಕೀಯ

## ವಿಶೇಷ ಘಟಿಕೋತ್ಸವ

ದಿನಾಂಕ ೩೦, ಭಾನುವಾರ, ಜೂನ್ ೧೯೫೭ ರಂದು ಮೈಸೂರು ವಿಶ್ವವಿದ್ಯಾನಿಲಯ ವಿಶೇಷ ಘಟಿಕೋತ್ಸವವನ್ನು ನೆರವೇರಿಸಿ ಡಾಕ್ಟರ್ ಆಫ್ ಲಾಸ್ (Doctor of Laws, *honoris causa*) ಪದವಿಯನ್ನಿೀಯುವುದರ ಮೂಲಕ ವಿಶ್ವವಿದ್ಯಾನಿಲಯದ ಗ್ರಾಂಟ್ಸ್ ಕಮೀಷನ್ನಿನ ಅಧ್ಯಕ್ಷರಾದ ಶ್ರೀ ಸಿ. ಡಿ. ದೇಶಮುಖ್ ಅವರನ್ನು ಗೌರವಿಸಿತು.

ಶ್ರೀ ದೇಶಮುಖ್ ಅವರು ಬೊಂಬಾಯಿ ಹಾಗೂ ಕೇಂಬ್ರಿಡ್ಜ ವಿಶ್ವವಿದ್ಯಾನಿಲಯಗಳಲ್ಲಿ ವ್ಯಾಸಂಗಮಾಡಿ ಪ್ರತಿಭಾವಂತ ವಿದ್ಯಾರ್ಥಿಯೆನಿಸಿಕೊಂಡು ಜ್ಞಾನಾರ್ಜನೆ ಮಾಡಿದವರು. ವಿದ್ಯಾಭ್ಯಾಸ ಮುಗಿಸಿದ ಮೇಲೆ ಭಾರತ ಸರ್ಕಾರದಲ್ಲಿ ಬೇರೆ ಬೇರೆ ಅಧಿಕಾರಸೂತ್ರಗಳನ್ನು ವಹಿಸಿ ದಕ್ಷತೆಯಿಂದಲೂ ನಿಸ್ಪೃಹತೆಯಿಂದಲೂ ಸೇವೆ ಸಲ್ಲಿಸಿ ಖ್ಯಾತರಾದವರು. ಇದರ ಜೊತೆಗೆ ದೇಶದ ಪ್ರಮುಖ ಅರ್ಥಶಾಸ್ತ್ರಜ್ಞರಲ್ಲಿ ಒಬ್ಬರಾಗಿ ನಮ್ಮ ಜನತೆಯ ಆರ್ಥಿಕಸ್ಥಿತಿಯ ಅಭಿವೃದ್ಧಿಗೆ ಸರ್ವತೋಮುಖವಾಗಿ ದುಡಿದವರು.

ಶ್ರೀ ದೇಶಮುಖರು ಇತಿಹಾಸ, ನ್ಯಾಯಶಾಸ್ತ್ರ, ಅರ್ಥಶಾಸ್ತ್ರ, ಸಾಹಿತ್ಯ—ಈ ಮುಂತಾದ ವಿವಿಧ ಶಾಸ್ತ್ರ ಕಲೆ ಮೊದಲಾದುವುಗಳಲ್ಲಿ ಅಪಾರವಾದ ಆಸಕ್ತಿಯನ್ನೂ ಜ್ಞಾನವನ್ನೂ ಪಡೆದವರು, ಜೊತೆಗೆ ಐದಾರು ಭಾಷೆಗಳ ಜ್ಞಾನವುಳ್ಳವರು. ಸಂಸ್ಕೃತದಲ್ಲಿ ಇವರಿಗಿರುವ ಪಾಂಡಿತ್ಯ ವಿಶೇಷವಾದುದು. ಅದಲ್ಲದೆ ಇವರು ಮರಾಠಿ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಉತ್ತಮವಾದ ಕವನಗಳನ್ನು ರಚಿಸಿದ್ದಾರೆ.

ಅರ್ಥಸಚಿವರಾಗಿ ಶ್ರೀ ದೇಶಮುಖರು ಸಲ್ಲಿಸಿದ ಸೇವೆ ಚಿರಸ್ಮರಣೀಯವಾಗಿದೆ. ಈಗ ಯಾವ ಪ್ರತಿಫಲದ ಅಪೇಕ್ಷೆಯೂ ಇಲ್ಲದೆ ವಿಶ್ವವಿದ್ಯಾನಿಲಯದ ಗ್ರಾಂಟ್ಸ್ ಕಮೀಷನ್ನಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿರುವುದು ಅವರ ನಿಸ್ವಾರ್ಥ ಮನೋಧರ್ಮವನ್ನೂ ಆದರ್ಶವನ್ನೂ ತೋರುತ್ತಿದೆ.

ಇಂಥ ಮಹನೀಯರನ್ನು ನಮ್ಮ ವಿಶ್ವವಿದ್ಯಾನಿಲಯ ಗೌರವಿಸಿ ತನ್ನನ್ನು ತಾನು ಗೌರವಿಸಿಕೊಂಡಿದೆ.

ಶ್ರೀಯುತರ ಅಧ್ಯಕ್ಷತೆಯಲ್ಲಿ ಭಾರತೀಯ ವಿದ್ಯಾನಿಲಯಗಳು ಪ್ರಗತಿಪಥದಲ್ಲಿ ಮುಂದುವರೆದು ದೇಶದ ಜ್ಞಾನಪ್ರಸಾರದ ನಿಜವಾದ ಕೇಂದ್ರಗಳಾಗಲೆಂದು ಹಾರೈಸುತ್ತೇವೆ.

## ಕಂಬನಿ

ಇದೇ ಜೂನ್ ತಿಂಗಳ ಕೊನೆಯಲ್ಲಿ ಖ್ಯಾತ ಮನಶ್ಯಾಸ್ತ್ರಜ್ಞರಾದ ಡಾ|| ಎಂ. ವಿ. ಗೋಪಾಲಸ್ವಾಮಿಯವರು ನಿಧನರಾದ ಸಂಗತಿ ತುಂಬಾ ವಿಷಾದ ಜನಕವಾಗಿದೆ. ದಿವಂಗತರು ನಮ್ಮ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮನಶ್ಯಾಸ್ತ್ರ ಶಾಖೆಯಲ್ಲಿ ಬಹುಕಾಲ ಪ್ರಾಧ್ಯಾಪಕರಾಗಿಯೂ, ಹಲವಾರು ವರ್ಷ ಮಹಾರಾಜಾ ಕಾಲೇಜಿನ ಪ್ರಿನ್ಸಿಪಾಲರಾಗಿಯೂ ಸೇವೆ ಸಲ್ಲಿಸಿದ್ದಾರೆ. ಜ್ಞಾನಾರ್ಜನೆಗಾಗಿ ಪಾಶ್ಚಾತ್ಯ ದೇಶದಲ್ಲಿ ವ್ಯಾಸಂಗಮಾಡಿ ಉನ್ನತ ಪದವಿಯನ್ನು ಪಡೆದು ನಮ್ಮ ದೇಶಕ್ಕೆ ಬಂದ ಮೇಲೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಮಹಾರಾಜಾ ಕಾಲೇಜಿನಲ್ಲಿ ಪ್ರಪ್ರಥಮವಾಗಿ ಮನಶ್ಯಾಸ್ತ್ರ ಶಾಖೆಯನ್ನು ಶ್ರೀಯುತರು ಪ್ರಾರಂಭಿಸಿದರು. ಅದು ಬೆಳೆದು ಈಗ ಭಾರತದಲ್ಲಿ ಒಂದು ಮುಖ್ಯ ಸಂಶೋಧನೆಯ ಶಾಖೆಯಾಗಿದೆ.

ಭಾರತದಲ್ಲಿ ಮೊಟ್ಟಮೊದಲು, ಖಾಸಗಿಯಾಗಿ ತಮ್ಮ ಮನೆಯಲ್ಲಿಯೆ ರೇಡಿಯೋ ಯಂತ್ರಗಳನ್ನಿಟ್ಟುಕೊಂಡು ಮೈಸೂರು ನಗರಕ್ಕೆ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವ ವ್ಯವಸ್ಥೆಯನ್ನು ಪ್ರಾರಂಭಮಾಡಿದವರೇ ಶ್ರೀ ಗೋಪಾಲಸ್ವಾಮಿಯವರು. ಇದೇ ರೀತಿಯಲ್ಲಿ ಕಿಂಡರ್‌ಗಾರ್ಟನ್ ಮಾದರಿಯ ಶಿಶುವಿಹಾರಗಳನ್ನು ಸ್ಥಾಪಿಸಿ ಮಕ್ಕಳ ಆಟಪಾಟಗಳ ಬೆಳವಣಿಗೆಗೆ ಮೂಲಪ್ರವರ್ತಕರಾಗಿಯೂ ಇವರು ಕೆಲಸ ಮಾಡಿದ್ದಾರೆ. ಮಹಾರಾಜ ಕಾಲೇಜಿನ ಮನಶ್ಯಾಸ್ತ್ರ ಶಾಖೆ ಹಾಗೂ ಪ್ರಯೋಗಶಾಲೆ, ಆಕಾಶವಾಣಿ ಮತ್ತು ಶಿಶುವಿಹಾರ—ಇವು ಮೂರೂ ಶ್ರೀಯುತರ ಕೀರ್ತಿಯನ್ನು ಚಿರಕಾಲ ಉಳಿಸುವ ಸಂಸ್ಥೆಗಳಾಗಿವೆ.

ವಿಶ್ವವಿದ್ಯಾನಿಲಯದ ಅಧಿಕಾರದಿಂದ ನಿವೃತ್ತರಾದಮೇಲೆ ಡಾ|| ಗೋಪಾಲ ಸ್ವಾಮಿಯವರು "ಆಲ್ ಇಂಡಿಯಾ ಇನ್‌ಸ್ಟಿಟ್ಯೂಟ್ ಆಫ್ ಮೆಂಟಲ್ ಹೆಲ್ತ್" ಎಂಬ ಸಂಸ್ಥೆಯಲ್ಲಿ ಮನಶ್ಯಾಸ್ತ್ರದ ಪ್ರಾಧ್ಯಾಪಕರಾಗಿ ತಮ್ಮ ಅದ್ಭುತ ಜ್ಞಾನವನ್ನು ಅನೇಕ ಸಂಶೋಧಕರಿಗೆ ಒದಗಿಸಿಕೊಟ್ಟರು. ಪ್ರತಿಭೆ ಪಾಂಡಿತ್ಯಗಳೊಡನೆ ಸರಳತೆ, ಗಾಂಭೀರ್ಯಗಳೂ ಅವರಲ್ಲಿ ಮಿಳನಗೊಂಡಿದ್ದುದರಿಂದ ಅವರು ಜನಪ್ರಿಯರಾಗಿದ್ದರು. ಇಂಥ ಮಹನೀಯರ ನಿಧನದಿಂದ ದೇಶಕ್ಕೆ ತುಂಬಲಾರದ ನಷ್ಟ ಸಂಭವಿಸಿದೆ. ಈ ಸಂದರ್ಭದಲ್ಲಿ ಶ್ರೀಯುತರ ಆತ್ಮಕ್ಕೆ ಶಾಂತಿಯನ್ನು ಭಗವಂತನು ಕರುಣಿಸಲೆಂದು ಪ್ರಬುದ್ಧ ಕರ್ಣಾಟಕ ಪ್ರಾರ್ಥಿಸುತ್ತದೆ.

# ಸಾದರ ಸ್ವೀಕಾರ

೧. **ಬಸವನಾಳ ಸ್ಮಾರಕ ಸಂಪುಟ**—ಸಂಪಾದಕರು : ಶ್ರೀ ಎಚ್. ಎಫ್. ಕಟ್ಟೀಮನಿ, ಮತ್ತು ಶ್ರೀ ಎಂ. ಜಿ. ವಿರೂಪಾಕ್ಷನ್ ; ಪ್ರಕಾಶಕರು : ಬಸವನಾಳ ಸ್ಮಾರಕ ಸಮಿತಿ, ಧಾರವಾಡ ; ಪುಟಗಳು ಡೆಮಿ xxii+೭೬೧ ; ಬೆಲೆ, ರೂ. ೧೫-೦-೦.

೨. **ಪಾಣಿನೀಯ ಪ್ರವೇಶಿಕಾ** (ಲಘು ಸಿದ್ಧಾಂತ ಕೌಮುದೀ ಗ್ರಂಥದ ಕನ್ನಡ ವ್ಯಾಖ್ಯಾನ)—ಲೇಖಕರು : ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟ ; ಪ್ರಕಾಶಕರು : ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟ, 'ಶಿವಸ್ವಾಮಿ ಭವನಮ್' ವಾಣೀವಿಲಾಸ ರೋಡ್, ಮೈಸೂರು ; ಪುಟಗಳು ಡೆಮಿ ೬೮೬ ; ಬೆಲೆ, ಕ್ಯಾಲಿಕೋಪ್ರತಿ ರೂ. ೧೨-೦-೦ ; ಸಾದಾಪ್ರತಿ ರೂ. ೯-೦-೦.

೩. *Contemporary Indian Literature* (A symposium)—ಪ್ರಕಾಶಕರು : ಸಾಹಿತ್ಯ ಅಕ್ಯಾಡೆಮಿ, ನ್ಯೂ ಡೆಲ್ಲಿ ; ಪುಟಗಳು ಡೆಮಿ ೨೯೯ ; ಬೆಲೆ, ರೂ. ೨-೮-೦.

೪. **ಶ್ರೀ ಕೃಷ್ಣ ಕಥಾವಿಪಂಚಿ** (ಕೃಷ್ಣದೇವರಾಯಲ ಚರಿತ್ರ)—ಲೇಖಕರು : ಶ್ರೀ ಬಾಡಾಲ ರಾಮಕವಿ ; ಪ್ರಕಾಶಕರು : ಶ್ರೀ ಬಾಡಾಲ ರಾಮಕವಿ, ಎಂ.ಎ., ಆಂಧ್ರೋಪನ್ಯಾಸಕರು, ಯುವರಾಜ ಕಲಾಶಾಲ, ಮೈಸೂರು ; ಪುಟಗಳು ಕ್ರೌ. ಅ. ಪ. ೨೦೪ ; ಬೆಲೆ, ರೂ. ೩-೦-೦.

೫. **ರಸಿಕಪಕ್ಷಿ** (ಕವನಸಂಗ್ರಹ)—ಲೇಖಕರು : ಶ್ರೀ ಬ. ಗಿ. ಯಲ್ಲಟ್ಟಿ ; ಪ್ರಕಾಶಕರು : ಸ್ನೇಹಪ್ರಕಾಶನ, ಶಮನೇವಾಡಿ ; ಪುಟಗಳು ಕ್ರೌ. ಅ. ಪ. ೬೩ ; ಬೆಲೆ, ರೂ. ೧-೦-೦.

೬. **ಶರಣಾಗತಿ ಗದ್ಯ** (ಶ್ರೀಮದ್ರಾಮಾನುಜಾಚಾರ್ಯ ವಿರಚಿತ)—ಅನುವಾದಕರು : ಶ್ರೀ ಸ್ವಾಮಿ ಆದಿ ದೇವಾನಂದ ; ಪ್ರಕಾಶಕರು : ಶ್ರೀ ರಾಮಕೃಷ್ಣಾಶ್ರಮ, ಮಂಗಳೂರು ; ಕ್ರೌ. ಅ. ಪ. ೩೨ ; ಬೆಲೆ, ರೂ. ೦.೫೦.

೭. **ನಾಚಿಕೆ** (ಕಥೆ)—ಲೇಖಕರು : ಶ್ರೀ ರಮಾನಂದ ಅಮೀನ್ ; ಪ್ರಕಾಶಕರು : ಚಂದ್ರಸಾಗರ ಪ್ರಕಾಶನ, ಗವರ್ನಮೆಂಟ್ ನ್ಯೂಬಿಲ್ಡಿಂಗ್, ಜಿ. ಪ್ಲಾಟ್ ೭೦ ನೆ ಡಿ.ಡಿ. ಚಾಳಿನ ಎದುರು, ವರ್ಲಿ, ಮುಂಬಯಿ ; ಪುಟಗಳು ಕ್ರೌ. ಅ. ಪ. ೬೦ ; ಬೆಲೆ, ರೂ. ೦-೮-೦.

೮. **ತುಂತುರು** (ಕಥೆಗಳು)—ಸಂಪಾದಕರು : ಶ್ರೀ ಹೇರೂರ್ ಮೆನನ್ ; ಪ್ರಕಾಶಕರು : ಗೆಳೆಯರ ಬಳಗ, ಇಂಟರಮೀಡಿಯಟ್ ಕಾಲೇಜು, ಶಿವಮೊಗ್ಗ ; ಪುಟಗಳು ಕ್ರೌ. ಅ. ಪ. ೫೬ ; ಬೆಲೆ, ೧೨ ಆಣೆ.

೯. **ಸಮರ ಸೌದಾಮಿನಿ** (ಕಾದಂಬರಿ)—ಲೇಖಕರು : ಶ್ರೀ ವೆಂ. ಮು. ಜೋಶಿ ; ಪ್ರಕಾಶಕರು : ಪ್ರತಿಭಾ ಗ್ರಂಥಮಾಲೆ, ಧಾರವಾಡ ; ಪುಟಗಳು ಕ್ರೌ. ಅ. ಪ. ೧೪೪ ; ಬೆಲೆ, ರೂ. ೧-೨೫.

೧೦. **ಪಂಚಾಗವಿಜ್ಞಾನ**—ಲೇಖಕರು ಮತ್ತು ಪ್ರಕಾಶಕರು : ಶ್ರೀ ಹೆಚ್. ಟಿ. ನಂಜುಂಡಶಾಸ್ತ್ರಿ, ತುಮಕೂರು ; ಪುಟಗಳು ಡೆಮಿ ೮ ; ಬೆಲೆ, ರೂ. ೦-೩-೦.

೧೧. **ಚೈತ್ರಾಲಯ** (ಕವನಸಂಕಲನ)—ಲೇಖಕರು: ಅಂಬಿಕಾತನಯದತ್ತ; ಪ್ರಕಾಶಕರು: ಸಮಾಜ ಪುಸ್ತಕಾಲಯ, ಧಾರವಾಡ; ಪುಟಗಳು ಕ್ರಾ. ಅ. ಪ. ೭೮; ಬೆಲೆ, ರೂ. ೧.೨೫.

೧೨. **ಕನ್ನಡ ಕುಲದೀಪ ಬಸವಣ್ಣನವರ ಜೀವನ**—ಲೇಖಕರು: ಶ್ರೀ ಸಿಂಪಿ ಲಿಂಗಣ್ಣ, ಪ್ರಕಾಶಕರು: ಮಿಂಚಿನಬಳ್ಳಿಯ ಚಾವಡಿ, ಜವಳೀಪೇಟೆ, ಧಾರವಾಡ; ಕ್ರಾ. ಅ. ಪ. ೧೩೬; ಬೆಲೆ, ಉತ್ತಮಪ್ರತಿ ರೂ. ೧-೮-೦; ಸಾದಾಪ್ರತಿ ರೂ. ೧-೦-೦.

೧೩. **ಜಂಬದ ಜಾನಕಿ** (ಅಯ್ದು ನಾಟಕಗಳು)—ಲೇಖಕರು: ಶ್ರೀ ಶಿವರಾಮಕಾರಂತ; ಪ್ರಕಾಶಕರು: ಲಲಿತ ಸಾಹಿತ್ಯಮಾಲೆ, ಧಾರವಾಡ; ಪುಟಗಳು ಕ್ರಾ. ಅ. ಪ. ೧೬೬; ಬೆಲೆ, ಉತ್ತಮಪ್ರತಿ ರೂ. ೨.೭೫; ಸಾಧಾರಣಪ್ರತಿ ರೂ. ೧.೭೫.

೧೪. **ಹಿಂದೀ ಸುಧಾ** (ಪತ್ರಿಕೆ)—ಪ್ರಕಾಶಕರು: ಮೈಸೂರು ಹಿಂದೀ ಪ್ರಚಾರ ಪರಿಷತ್, ಬೆಂಗಳೂರು ೪.

೧೫. **ನಡುಗನ್ನಡ** (ಸಂಶೋಧನಾತ್ಮಕ ಪ್ರಬಂಧ)—ಲೇಖಕರು: ಶ್ರೀ ನರಸಿಂಗರಾವ್ ಮಾನ್ವಿ; ಪ್ರಕಾಶಕರು: ಕರ್ನಾಟಕ ಸಾಹಿತ್ಯಮಂದಿರ, ಹೈದರಾಬಾದು; ಪುಟಗಳು ಡೆಮ್ಮಿ iii+೭೬; ಬೆಲೆ, ರೂ. ೩-೦-೦.

೧೬. **ಅನಾಮಿಕಾ, ಮತ್ತು ಇತರ ಕಥೆಗಳು**—ಲೇಖಕಿ: ಶ್ರೀಮತಿ ಸಿ. ಎನ್. ಜಯಲಕ್ಷ್ಮೀದೇವಿಯವರು; ಪ್ರಕಾಶಕರು: ಮಹಿಳಾ ಸೇವಾ ಸಮಾಜ, ಕೃಷ್ಣರಾಜಪೇಟೆ; ಪುಟಗಳು ೯೪; ಬೆಲೆ, ಸಾದಾಪ್ರತಿ ರೂ. ೧.೨೫; ಕ್ಯಾಲಿಕೋಪ್ರತಿ ರೂ. ೨.೦೦.

೧೭. **Uttara-Ramacharitam**—ಲೇಖಕರು: ಶ್ರೀ ವಿ. ಎಮ್. ಇನಾಂದಾರ್; ಪ್ರಕಾಶಕರು: ಶ್ರೀಮತಿ ನಿರ್ಮಲ ಇನಾಂದಾರ್, ಧಾರವಾಡ; ಪುಟಗಳು ೧೧೧; ಬೆಲೆ, ಸಾಮಾನ್ಯ ಪ್ರತಿ ರೂ. ೨-೦-೦; ಉತ್ತಮಪ್ರತಿ ರೂ. ೨-೮-೦.

೧೮. **ದಿವ್ಯಜ್ಯೋತಿ**—ಲೇಖಕರು: ಶ್ರೀ ಎನ್. ಸೂರಪ್ಪ; ಪ್ರಕಾಶಕರು: ಸಾಹಿತ್ಯ ಸೇವಾ ಸದನ, ಬೆಂಗಳೂರು; ಪುಟಗಳು vi+೧೦೭+೧೪; ಬೆಲೆ, ರೂ. ೧-೮-೦.

೧೯. **ಇನ್ನೊಂದು ಹೆಜ್ಜೆ**—ಕವಿ: ಶ್ರೀ ಎಸ್. ಎಸ್. ಗದಗಕರ; ಪುಟಗಳು ೪೪; ಬೆಲೆ, ೧೪ ಆಣೆ.

೨೦. **ಮೂಢನಂಬಿಕೆಗಳು**—ಲೇಖಕರು: ಶ್ರೀ ಎಲ್. ಆರ್. ಹೆಗ್ಗಡೆ; ಪ್ರಕಾಶಕರು: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ಪುಟಗಳು ೫೪; ಬೆಲೆ, ೪ ಆಣೆ.

೨೧. **ಮಹಾಕವಿ ಕುವೆಂಪು**—ಲೇಖಕರು: ಶ್ರೀ ಶ್ರೀನಿವಾಸರಾವ್ ಕೊರಟಿ; ಪ್ರಕಾಶಕರು: ಗಾಯತ್ರಿ ಪ್ರಕಾಶನ, ಬೆಂಗಳೂರು; ಪುಟಗಳು ೪೮; ಬೆಲೆ, ೫೦ ನಯೆ ಪೈಸೆ.

೨೨. **ರಷ್ಯದ ಜಾನಪದ ಕಥೆಗಳು**—ಕೆ. ಟಿ. ಎಸ್. ಸುಂದರ್; ಪ್ರಕಾಶಕರು: ಪೀಪಲ್ಸ್ ಬುಕ್ ಹೌಸ್, ಮೈಸೂರು; ಪುಟಗಳು ೧೫೬; ಬೆಲೆ, ರೂ. ೧-೮-೦.

೨೩. **ಮದುವಣಗಿತ್ತಿ**—ಮೂಲಲೇಖಕರು: ಶ್ರೀ ಆಂಟನ್ ಚೆಖಾವ್; ಭಾಷಾಂತರಕಾರರು: ಶ್ರೀ 'ನಿರಂಜನ'; ಪ್ರಕಾಶಕರು: ಪೀಪಲ್ಸ್ ಬುಕ್ ಹೌಸ್, ಮೈಸೂರು; ಪುಟಗಳು ೨೧೮; ಬೆಲೆ, ರೂ. ೧-೮-೦.

೨೪. **ದುಬ್ರೋವ್‌ಸ್ಕಿ**—ಮೂಲಲೇಖಕರು: ಶ್ರೀ ಎ. ಎಸ್. ಪುಷ್ಕಿನ್; ಭಾಷಾಂತರಕಾರರು: ಶ್ರೀ ಕೆ. ಎಲ್. ಗೋಪಾಲಕೃಷ್ಣರಾವ್; ಪ್ರಕಾಶಕರು: ಪೀಪಲ್ಸ್ ಬುಕ್ ಹೌಸ್, ಮೈಸೂರು; ಪುಟಗಳು ೧೪೪; ಬೆಲೆ, ರೂ. ೧-೦-೦.

೨೫. **ನೀಲಲೋಚನೆ ಮತ್ತು ಇತರ ಕಥೆಗಳು**—ಮೂಲಲೇಖಕರು: ಶ್ರೀ ಮ್ಯಾಕ್ಸಿಂ ಗಾರ್ಕಿ; ಅನುವಾದಕರು: ಶ್ರೀ ಅ. ನ. ಕೃ.; ಪ್ರಕಾಶಕರು: ಪೀಪಲ್ಸ್ ಬುಕ್ ಹೌಸ್, ಮೈಸೂರು; ಪುಟಗಳು ೨೪೦; ಬೆಲೆ, ರೂ. ೧-೮-೦.

೨೬. **ಮರೆಯಲಾಗದ ಪರಿಮಳ**—ಮೂಲಲೇಖಕರು: ಶ್ರೀ ಇವಾನ್‌ಟರ್ಗಿನಿವ್; ಅನುವಾದಕರು: ತ. ರಾ. ಸು.; ಪ್ರಕಾಶಕರು: ಪೀಪಲ್ಸ್ ಬುಕ್ ಹೌಸ್, ಮೈಸೂರು; ಪುಟಗಳು ೧೩೬; ಬೆಲೆ, ರೂ. ೧-೪-೦.

೨೭. **ಶ್ರೀ ದಕ್ಷಿಣಾಮೂರ್ತಿ ಸ್ತೋತ್ರ ಮತ್ತು ಮಾನಸೋಲ್ಲಾಸ**—ಪ್ರಕಾಶಕರು: ಶ್ರೀ ರಾಮಕೃಷ್ಣಾಶ್ರಮ, ಮಂಗಳೂರು; ಪುಟಗಳು ii + ii + ೧೨೪; ಬೆಲೆ, ರೂ. ೨-೦-೦.

# ಪ್ರಬುದ್ಧ ಕರ್ಣಾಟಕ

## ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಪತ್ರಿಕೆ

'ಪ್ರಬುದ್ಧ ಕರ್ಣಾಟಕ'ವು ಚೈತ್ರ, ಆಷಾಢ, ಆಶ್ವಯುಜ, ಪುಷ್ಯಮಾಸಗಳಲ್ಲಿ ಆಯಾ ತಿಂಗಳ ಹುಣ್ಣಿಮೆಯ ಹೊತ್ತಿಗೆ ವರ್ಷಕ್ಕೆ ನಾಲ್ಕು ಸಲ ಹೊರಡುತ್ತದೆ.

**ವಾರ್ಷಿಕ ಚಂದಾ (ಅಂಚೆವೆಚ್ಚ ಸೇರಿ):**

| | | | | |
|---|---|---|---|---|
| ಸಾಮಾನ್ಯ ಚಂದಾದಾರರಿಗೆ | ರೂ. | ೩ | ೮ | ೦ |
| ವಾಚನಾಲಯ ಮುಂತಾದ ಸಂಸ್ಥೆಗಳಿಗೆ | ರೂ. | ೪ | ೮ | ೦ |
| ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಿಗೆ ಮಾತ್ರ | ರೂ. | ೨ | ೮ | ೦ |

**ಸಂಚಿಕೆಗಳನ್ನು ರಿಜಿಸ್ಟರ್ ಮೂಲಕ ತರಿಸಿಕೊಳ್ಳಬೇಕೆನ್ನುವವರು ಚಂದಾ ಹಣದ ಜೊತೆಗೆ ರೂ. ೨-೦-೦ ಕಳುಹಿಸಬೇಕು.**

ಚಂದಾಹಣವನ್ನೂ ಅದರ ವಿಚಾರವಾಗಿ ಪತ್ರಗಳನ್ನೂ ಕಾರ್ಯದರ್ಶಿ, ಪ್ರಚಾರ ಮತ್ತು ಪ್ರಕಾಶನ ಕಾರ್ಯ, ಯೂನಿವರ್ಸಿಟಿ ಆಫೀಸು, ಮೈಸೂರು, ಎಂಬ ವಿಳಾಸಕ್ಕೆ ಕಳುಹಿಸಬೇಕು. ವಿಶ್ವವಿದ್ಯಾನಿಲಯದ ರಿಜಿಸ್ಟ್ರಾರವರಿಗಾಗಲಿ, ಪ್ರಬುದ್ಧ ಕರ್ಣಾಟಕದ ಸಂಪಾದಕರಿಗಾಗಲಿ ಕಳುಹಿಸಬಾರದು. ಮೈಸೂರು ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಚಂದಾಹಣವನ್ನು ತಮ್ಮ ತಮ್ಮ ಕಾಲೇಜಿನ ಅಕೌಂಟ್ಸ್ ಅಧಿಕಾರಿಗಳಿಗೆ ಮುಂಗಡವಾಗಿ ಸಲ್ಲಿಸಿ, ಪಡೆದ ರಸೀತಿಯನ್ನು ತಮ್ಮ ವಿಳಾಸದೊಂದಿಗೆ ಕಳುಹಿಸಿಕೊಡಬೇಕು. ಕಾಲೇಜುಗಳ ಅಧ್ಯಾಪಕ ವರ್ಗದವರೂ ಇದೇ ರೀತಿ ಮಾಡಬಹುದು. ವಿದ್ಯಾರ್ಥಿಗಳು ತಾವು ವಿದ್ಯಾರ್ಥಿಗಳೆಂಬ ಬಗ್ಗೆ ತಮ್ಮ ಪಾಠಶಾಲೆಯ ಮುಖ್ಯೋಪಾಧ್ಯಾಯರಿಂದ ಒಂದು ಪ್ರಮಾಣಪತ್ರವನ್ನು ಪಡೆದು ಅದನ್ನು ಚಂದಾಹಣದೊಡನೆ ಕಳುಹಿಸಬೇಕು. ಚಂದಾದಾರರು ತಮ್ಮ ಚಂದಾಹಣವನ್ನು (ಸರ್ಕಾರಿ ಖಜಾನೆಯಲ್ಲಿ 'ಯೂನಿವರ್ಸಿಟಿ ಫಂಡ್'ಗೆ ಕಟ್ಟಿ ಖಜಾನೆ ರಸೀತಿಯನ್ನು ತಮ್ಮ ವಿಳಾಸದೊಡನೆ ಪ್ರಬುದ್ಧ ಕರ್ಣಾಟಕದ ಆಫೀಸಿಗೆ ಕಳುಹಿಸಬಹುದು.)

ಪ್ರಬುದ್ಧ ಕರ್ಣಾಟಕದ ೩೨, ೩೩, ೩೪, ೩೫, ೩೬, ೩೭ ನೆಯ ಸಂಪುಟಗಳು ನಮ್ಮಲ್ಲಿ ಸಿಕ್ಕುತ್ತವೆ. ಇವುಗಳ ಪೈಕಿ ೩೨ ನೆಯ ಸಂಪುಟವನ್ನು ಮಾತ್ರ ಒಂದು ರೂಪಾಯಿಯಂತೆ ರಿಯಾಯಿತಿ ದರದಲ್ಲಿ ಪಡೆಯಬಹುದು. ೩೩, ೩೪, ೩೫, ೩೬, ೩೭ ನೆಯ ಸಂಪುಟಗಳನ್ನು ತುಂಬು ಬೆಲೆಗೆ ಮಾರಲಾಗುವುದು. ಅಂಚೆಯ ಮೂಲಕ ತರಿಸಿಕೊಳ್ಳುವವರು ಸಂಪುಟ ಒಂದಕ್ಕೆ ಹದಿಮೂರು ಆಣೆ, ಸಾಮಾನ್ಯ ಸಂಚಿಕೆ ಒಂದಕ್ಕೆ ಏಳು ಆಣೆ, ಎರಡು ಸಂಚಿಕೆಗಳನ್ನು ಒಳಗೊಂಡ ಸಂಚಿಕೆಗೆ ಒಂಬತ್ತು ಆಣೆಯಂತೆ ಅಂಚೆ ವೆಚ್ಚವನ್ನು ಕಳುಹಿಸಬೇಕು.

'ಪ್ರಬುದ್ಧ ಕರ್ಣಾಟಕ'ದಲ್ಲಿ ಪ್ರಕಟನೆಗೆ ಲೇಖನಗಳನ್ನೂ ವಿಮರ್ಶೆಗೆ ಗ್ರಂಥಗಳನ್ನೂ ವಿನಿಮಯಕ್ಕೆ ಪತ್ರಿಕೆಗಳನ್ನೂ ಪ್ರಬುದ್ಧ ಕರ್ಣಾಟಕದ ಸಂಪಾದಕ (ಮಹಾರಾಜರವರ ಕಾಲೇಜು, ಮೈಸೂರು) ರಿಗೆ ಕಳುಹಿಸಬೇಕು.

# ಪ್ರಬುದ್ಧ ಕರ್ಣಾಟಕ

ಹೇವಿಳಂಬಿ ಸಂವತ್ಸರ ೧೫೩ ಆಶ್ವಯುಜ ಸಂಚಿಕೆ

## ಅಧಿದೇವತಾ ಆವಿರ್ಭೂತಿ

ಸುರಹೊನ್ನೆಯ ಮರ ದಿಟಕೂ ಸುರವಾಗಿತ್ತು;
ಹೊನ್ನಾಗಿತ್ತು.
ಶ್ರಾವಣಮಾಸದ ಸಿರಿಹೊತ್ತಾರೆಯ ವಾಯು ಮಂಡಲಕೆ
ಕಂಪಿನ ಹೊಳೆ ಹರಿದಿತ್ತು;
ಮರವೇ ಪರಿಮಳ ಪರಿವೇಷವನಾಂತಿಹ ಹೂವಿನ ಕೊಡೆಯಾಗಿತ್ತು.
ಸಾವಿರ ವರುಷದ ಪಂಪನ ಬಣ್ಣನೆ ಇಂದೂ ಸಾರ್ಥಕವಾಗಿತ್ತು!

ಚಿನ್ನದ ನೇಸರು ಕೋಲ್ಗದಿರಿಂ ಚೆಂಬಿಸಿಲಿನ ರಂಗೋಲಿಯನೆಸೆದಿತ್ತು;
ಗರುಕೆಯ ಹಸುರುಕ್ಕುವ ನೆಲ ಪಚ್ಚೆಯ ವೇದಿಕೆಯಾಗಿತ್ತು.

ಜೇನ್ದುಂಬಿಯ ಮೊರೆ, ಹಕ್ಕಿಯ ಇಂಚರ, ಕೈದೋಂಟದ ಹೂಗಳ ಪರಿವಾರ,
ಕವಿಹೃದಯಕೆ ತಾನಾದುದು ರಸಲೋಕದ ಅಮೃತಾಹಾರ:
ತೆಕ್ಕನೆ ಮೋಕ್ಷಕೆ ತವರಾದುದೊ ತಾನೀ ಸಂಸಾರ!

ಸಾಮಾನ್ಯದ ಸೀಮೆಯಲಿದ್ದಾ ಸುರಹೊನ್ನೆಯ ಮರದಡಿಗೆ
ಸೌಂದರ್ಯಾವೇಶದಿ ನಡೆದೈತರೆ ಕವಿ,
ಅದ್ಭುತವಾಯಿತ್ತು:

ಸಂಯೋಗದಿ ಆವಿರ್ಭವಿಸಿತು, ಅವತರಿಸಿತು ರಸದೈವಂ ಮುಡಿಗೆ ;
ಬಿಚ್ಚಿದ ಸುರುಳಿಯ ಸರ್ಪದ ಹೆಡೆ ತಾಗಿತು ಅಧಿದೇವತೆಯುಡಿಗೆ !

ಸ್ಪಂದಿಸಿತಾಕಾಶ !
ಪುಲಕಿಸಿತವನಿ !
ತರುತನು ರೋಮಾಂಚಿಸಿತು !
ಮೃತ್‌ತನು ತಾಂ ಚಿತ್‌ತನುವಾಯ್ತೀ ಪೃಥಿವಿ !

ಅತಿಶೈತ್ಯಕೆ ಕಡಲಿನ ನೀರ್
ಘನವಾಗುವ ಐಕಿಲ್ಬಂಡೆಯ ತೆರದಿ,
ಭಕ್ತಿಯ ಭರಕೆ
ಆಕಾರಕೆ ಅವತರಿಸುವ ಭಗವಂತನ ತೆರದಿ,
ಕರುವೈತರೆ ಅಕ್ಕರೆಗುಕ್ಕಿ
ಹಾಲ್ ಸೊರಸುವ ಸುರಭಿಯ ತೆರದಿ,
ಸಂಭವಿಸಿತು ರಸಸತ್ವಂ ಆ ಮರದಿ !

ಶರಧಿ ಶರೀರೆ ; ಗಿರಿವನ ವದನೆ ;
ಗಗನಾಂಬರೆ ; ಅಧಿಮಾನಸ ಸದನೆ ;
ನಯನ ಸರೋವರೆ ;
ಭ್ರೂ ಸುಂದರ ಅದ್ರಿ !

ಹಣೆ ಆಕಾಶವ ಕೀಸಿತು. ಪುಲಕಾವೇಶಂ
ವ್ಯೋಮವನಾಚ್ಛಾದಿಸಿತಾತ್ಮದ ಧೂರ್ಜಟಿಕೇಶಂ.
ಕೆದರಿದ ಕೂದಲ ಮೇಘಾಂತರದಲಿ ಸೆರೆಸಿಕ್ಕಿದ ರವಿ ಚಂದ್ರ
ತಾವಾದರು ರುದ್ರಾಭರಣಂಗಳವೊಲು ಸುಂದರ ರುಂದ್ರ !

ರಸದದ್ರಿಗೆ ದುಮುಕಿದ ನಾನಿಲ್ಲಾಗಿ
ತುಂಬಿದೆನೆಲ್ಲವನಂಬರವಪುವಾಗಿ !
ಹಾಲಾದಳು ತಾಯಾಗಿ ;
ಮಧುವಾದಳು ವಧುವಾಗಿ ;
ಬೆಳಕಾದಳು ಗುರುವಾಗಿ :

" ಮಧು ವಾತಾ ಋತಾಯತೇ |
ಮಧು ಕ್ಷರಂತಿ ಸಿಂಧವಃ |
ಮಾಧ್ವೀರ್ನಃ ಸನ್ತ್ವೋಷಧೀಃ |

" ಮಧು ನಕ್ತಮುತೋಷಸೋ |
ಮಧುಮತ್ಪಾರ್ಥಿವಂ ರಜಃ |
ಮಧುದ್ಯೌರಸ್ತು ನಃ ಪಿತಾ ||

" ಮಧುಮಾನ್ನೋ ವನಸ್ಪತಿಃ |
ಮಧುಮಾನಸ್ತು ಸೂರ್ಯಃ |
ಮಾಧ್ವೀರ್ಗಾವೋ ಭವನ್ತು ನಃ || '

ಕುವೆಂಪು

೧೮—೯—೩೩

## ಗಾಥಾಸಪ್ತಶತಿಯಿಂದ

೧

ನಿನ್ನ ಸಲ್ಲಾಪವು ಜನರ ಕಲಕಲರವ—
ದೊಡವರೆದಿದ್ದರು ಬಾಲೆ
ತನ್ನೆರಡು ಕಿವಿಗಳ ಬೊಗಸೆಗೈದೀಂಟುವ—
ಳರಸಂಚೆ ಪಾಲೀಂಟುವೋಲೆ.

೨

ಗಗನ ಲಕ್ಷ್ಮಿಯ ಕೊರಳ ಹವಳದ ಪಚ್ಚೆಯ
ಮಣಿಹಾರ ಹರಿದುರುಳಿದಂತೆ
ಬಾನತ್ತಣಿಂದಿಳೆಗವತರಿಸುತ್ತಿದೆ
ನೋಡಿದೊ ಗಿಳಿವಿಂಡು ಭರದೆ.

೩

ಬಿರುಗಾಳಿಯೆಬ್ಬಿಸೆ ಛಾವಣಿ ಹುಲ್ಲನು
ಮಳೆಯ ನೀರೊಳಗೆಲ್ಲ ಇಳಿಯೆ ;
ಗೋಡೆಯೊಳಂಕಿಸಿದವಧಿಯ ಗುರುತನು
ಕೈಯಿಟ್ಟು ರಕ್ಷಿಪಳಾರ್ಯೆ.

೪

ಬೆವರುತ ನಡುಗುವ ಕೈ ಬೆರಳುಗಳೊಳು
ಜಾರುವ ಲೆಕ್ಕಣಿಕೆಯೊಳು,
ಸ್ವಸ್ತಿಯೊಕ್ಕಣಿಕೆಯೆ ಮುಗಿಯದು ಸಖಿಯಿಂತು ;
ಓಲೆಯ ಬರೆಯುವೆನೆಂತು !

ಎಸ್. ವಿ. ಪರಮೇಶ್ವರಭಟ್ಟ

# ಶ್ರೀ ಕುವೆಂಪು ಸೃಜಿಸಿದ ಮಂಥರೆ

ಶ್ರೀರಾಮನು ಅಯೋಧ್ಯೆಯ ಅರಸಾಗುವ ಬದಲು ಅಡವಿಯಲ್ಲಿ ಅಲೆದಾಡಿದ ಕಥೆಯುನ್ನು ಹೃದಯಂಗಮವಾಗಿ ನಿರೂಪಿಸುವ ಭಾರತದ ಮಹಾಪವಿತ್ರಗೀತೆ ಜಗದ್ಭವ್ಯರಾಮಾಯಣ! ಶ್ರೀರಾಮಚಂದ್ರನು ದಶರಥ ಚಕ್ರವರ್ತಿಯ ಹಿರಿಯ ಮಗನಾಗಿ ಹುಟ್ಟಿ, ಸದ್ಗುಣಗಳ ಗಣಿಯಾಗಿದ್ದೂ, ಕಾಡುಮೇಡುಗಳಲ್ಲಿ ಅಯಣ ಮಾಡಬೇಕಾದ ಪ್ರಸಂಗ ಒದಗಿಬಂದುದು ಏಕೆ? ಹೇಗೆ? ಇದೇ ಭಾರತೀಯ ಸಂಸ್ಕೃತಿಯ ತಿರುಳು. ಶ್ರೀರಾಮನಲ್ಲಿದ್ದ ಸದ್ಗುಣವೇ ಅವನ ರಾಜ್ಯತ್ಯಾಗಕ್ಕೂ, ಬಹುಶಃ ಕಾರಣವಾಯಿತೆನ್ನಬಹುದು. ಆ ಕಾಲದ ಮಟ್ಟಿಗೆ, ಅಯೋಧ್ಯೆಯಲ್ಲಿ ಅರಸಾಗುವುದಕ್ಕಿಂತ ಹೆಚ್ಚಿನ, ಪ್ರಾಮುಖ್ಯವಾದ, ಅಗತ್ಯದ ಕೆಲಸ ರಾಮನಿಗೆ ಕಾಡಿನಲ್ಲೇ ಇತ್ತು ಎಂಬುದೇ ಅದರ ಗುಟ್ಟು. ಲೌಕಿಕದೃಷ್ಟಿಯಿಂದ ಕಥಾಬೆಳವಣಿಗೆಯ ದೃಷ್ಟಿಯಿಂದ, ಇದಕ್ಕೆ ಒಂದು ನಿರ್ದಿಷ್ಟವಾದ ಕಾರಣ ಬೇಕಲ್ಲವೆ? ಈ ಕಾರಣವನ್ನು ಬೆದಕುವಾಗ ಅದರ ಮೂಲದಲ್ಲಿ ಕಾಣುವ ವಕ್ರವ್ಯಕ್ತಿಯೇ ಮಂಥರೆ!

ಈ ಮಂಥರೆಗೂ, ರಾಮನಿಗೂ ಸಂಬಂಧವೇನು? ರಾಮನನ್ನು ಕಾಡಿಗೆ ಓಡಿಸಲು ಈಕೆ ಏಕೆ ಪ್ರಯತ್ನಿಸಿದಳು? ಈ ಮಂಥರೆಯಾದರೂ ಯಾರು? ಈ ವಿಷಯಗಳನ್ನು ತಿಳಿಯಲು ರಾಮಾಯಣ ವಾಚಕರು ಇಷ್ಟಪಡುವುದು ಸಹಜವಲ್ಲವೆ? ದಶರಥಮಹಾರಾಜನ ಮೂರನೆಯ, ಅತಿಮಮತೆಯ, ಮುದ್ದಿನ ಪ್ರೇಮಪುತ್ಥಳಿ ಕೈಕೆ. ಈಕೆಯ ಮೆಚ್ಚಿನ ದಾದಿ, ದಾಸಿ ಮಂಥರೆ. ಒಡತಿಯಲ್ಲಿದ್ದ ವಿಶ್ವಾಸ, ತನ್ನ ತೋಳತೊಟ್ಟಿಲಲ್ಲಿ ಬೆಳೆದು ಬೆಳಗಿದ ಕೈಕೆ ಮತ್ತು ಆಕೆಯ ಮಗ ಭರತ ಇವರಲ್ಲಿ ಆಕೆಗಿದ್ದ ಪ್ರೇಮ, ಪುತ್ರವಾತ್ಸಲ್ಯ, ಇವು ಮಂಥರೆಯ ಈ ಅಕಾರ್ಯಕ್ಕೆ ಒಂದು ಕಡೆಯಿಂದ ಕಾರಣ. ಕೌಸಲ್ಯೆಯಲ್ಲಿ ಮಂಥರೆಗೆ ಮೂಡಿದ ಅಸಹನೆ, ವೈರ ಮತ್ತೊಂದು ಕಾರಣ. ಇದರಲ್ಲಿ ಪ್ರಬಲವಾದುದು ಮೊದಲನೆಯದೇ. ಭರತನಿಗೆ ರಾಜ್ಯ ದೊರೆತರೆ ಮಾತ್ರ ಸಾಲದು. ರಾಮ ಅಯೋಧ್ಯೆಯಲ್ಲೇ ಇದ್ದಾಗ, ಭರತನಿಗೆ ಪಟ್ಟವಾಗುವುದೇ ಕಷ್ಟ. ಒಂದು ವೇಳೆ ಆದರೂ, ಆ ಪಟ್ಟಾಧಿಕಾರ ನಿಷ್ಕಂಟಕವಾಗಿ ಮುಂದುವರಿಯಲಾರದು. ಅಲ್ಲದೆ ಇದ್ದುದು ಎರಡು ವರಗಳು. ಹೀಗೆಲ್ಲಾ ಯೋಚನೆಮಾಡಿ ಮಂಥರೆ; ಒಂದು ವರದಿಂದ ರಾಮ ಕಾಡಿಗೆ ಹೋಗಬೇಕು. ಆಗ ತೆರವಾಗುವ ಸಿಂಹಾಸನವನ್ನು ಭರತ ಏರಬೇಕು ಎಂದು ಯೋಚಿಸಿದಳು.

ಮಂಥರೆಯ ಜೀವನ ಚಿತ್ರ ಪೂರ್ಣವಾಗಿ ದೊರೆಯುವುದು ಶ್ರೀ ಕುವೆಂಪು ರಚಿತ ರಾಮಾಯಣ ದರ್ಶನದಲ್ಲೆ. ವಾಲ್ಮೀಕಿ ವಿರಚಿತ ಆದಿರಾಮಾಯಣದಲ್ಲಿ ಆಕೆಯನ್ನು ನಾವು ಮೊದಲು ನೋಡುವುದು, ಶ್ರೀರಾಮನ ಯೌವ ರಾಜ್ಯಾಭಿಷೇಕದ ಸಿದ್ಧತೆಗಳು ನಡೆಯುತ್ತಿರುವಾಗ, ಅಯೋಧ್ಯಾ ನಗರವೇ ಉತ್ಸಾಹ ಸಂತೋಷ ಸಂಭ್ರಮಗಳಿಂದ ನಲಿಯುತ್ತಿರುವಾಗ, ಕುಬ್ಜೆಯೂ, ಕುರೂಪಿಯೂ, ಪಾಪದರ್ಶಿನಿಯೂ, ಕೈಕೆಯ ಜ್ಞಾತಿದಾಸಿಯೂ (ಮಾತೃಗೃಹದಿಂದ ತನ್ನೊಂದಿಗೆ ಬಂದವಳು), ಯತೋ ಜಾತಳೂ ('ಅವಿಜ್ಞಾತ ಮಾತಾಪಿತೃಕ'—ತಾಯಿತಂದೆಗಳು ಯಾರು ಎಂದು ತಿಳಿಯದವಳು—A Foundling) ಆದ ಮಂಥರೆ; ದಶರಥನ ಅಯೋಧ್ಯೆಯ ಅರಮನೆಯಲ್ಲಿ ಮಹಡಿಯೊಂದರ ಮೆಟ್ಟಲುಗಳನ್ನು ಸಾವಧಾನವಾಗಿ ಮೇಲಮೇಲಕ್ಕೆ ಏರುತ್ತಿರುವಾಗ! ಸುತ್ತಲೂ ಸಂಭ್ರಮವನ್ನು ನೋಡಿದ ಈಕೆ, ಅಲ್ಲೇ ಓಡಾಡುತ್ತಿದ್ದ ಮತ್ತೊಬ್ಬ ದಾಸಿಯನ್ನು ಕೇಳುತ್ತಾಳೆ—ಆ ಸಂಭ್ರಮ ಸಡಗರಗಳಿಗೆ ಕಾರಣವೇನೆಂದು. ಆಕೆ ಹೇಳುತ್ತಾಳೆ: ಅನಘನೂ, ಜಿತಕ್ರೋಧನೂ ಆದ ಶ್ರೀರಾಮನ ಮಂಗಳ ಮಹೋತ್ಸವದ ಸುದ್ದಿಯನ್ನು! ಆ ವರ್ತಮಾನವನ್ನು ಕೇಳಿದ ಕೂಡಲೇ ಮಂಥರೆಯ ಹೃದಯಮಂದಿರದಲ್ಲಿ ಮಾತ್ಸರ್ಯಾಗ್ನಿ ಹತ್ತಿ ಭುಗಿಲೆಂದು ಉರಿಯುತ್ತದೆ. ಅದರ ಪರಿಣಾಮವಾಗಿ ಮಂಥರೆ ಸರಸರನೆ, ಕೈಲಾಸಪರ್ವತದಂತಿದ್ದ ಆ ಪ್ರಾಸಾದದಿಂದ ಕೂಡಲೇ ಕೆಳಗಿಳಿಯುತ್ತಾಳೆ! (ಇದು ಎಷ್ಟು ಅರ್ಥವತ್ತಾಗಿದೆ.) ಇಳಿದವಳೇ ಕೈಕೆಯ ಬಳಿ ಧಾವಿಸಿ

"ಉತ್ತಿಷ್ಠ, ಮೂಢೆ, ಅನಿಷ್ಟೆ, ಸುಭಗಾಕಾರೆ, ಭಯಂ ತ್ವಾಂ ಅಭಿವರ್ತತೆ"! ಹೇ ಮೂಢೆ, ಏಳು, ದುರದೃಷ್ಟವು ಬಂದು ನಿನ್ನನು ಕೊಚ್ಚಿಕೊಂಡು ಹೋಗುತ್ತಿದೆ! ನಿನ್ನ ಸೌಭಾಗ್ಯ ಚಲಿತವಾಗುತ್ತಿದೆ! ಎಂದು ನಾಟಕೀಯವಾಗಿ ನಿಷ್ಕಾರಣವಾಗಿ ಭಯವನ್ನುಂಟುಮಾಡಿ, ಕೈಕೆಯ ಮನಸ್ಸನ್ನು ಕಲಕಿ, ದುಷ್ಟಪ್ರಚೋದನೆಯನ್ನು ಮಾಡಿ, ರಾಮಾಯಣಕ್ಕೆ ಕಾರಣಗಳಾಗುತ್ತಾಳೆ. ಕೈಕೆ ಮಂಥರೆಯಿಂದ ಪ್ರೇರಿತಳಾಗಿ ಕೋಪಾಗಾರವನ್ನು ಸೇರಿ ದಶರಥನನ್ನು ಕಾಡಿ ಬೇಡಿ ಬೆದರಿಸಿ ತನ್ನೆರಡು ವರಗಳನ್ನು ಗಿಟ್ಟಿಸುತ್ತಾಳೆ!

ನಾವು ಅಲ್ಲಿ ಮತ್ತೆ ಮಂಥರೆಯನ್ನು ನೋಡುವುದು, ತನ್ನ ಯೋಜನೆಯಲ್ಲಿ ಸಿಕ್ಕ ಗೆಲವಿನಿಂದ ಮೈಯುಬ್ಬಿ ಸರ್ವಾಲಂಕಾರಭೂಷಿತಳಾಗಿ, ದರ್ಪದಿಂದ ಮೆರೆಯುತ್ತಾ ಬರುತ್ತಿರುವಾಗ! "ರಜ್ಜುಬದ್ಧೇವ ವಾನರೀ." ಈ ಹೊತ್ತಿಗೆ ರಾಮ ಕಾಡಿಗೆ ತೆರಳಿದ್ದಾನೆ. ತಂದೆ ದಶರಥ, ಆ ವ್ಯಥೆಯಿಂದಲೇ ಲೋಕಾಂತರವನ್ನೇ ಸೇರಿಬಿಟ್ಟಿದ್ದಾನೆ! ಭರತ ಶತ್ರುಘ್ನರು ಊರಿಂದ ಬಂದು ಇಲ್ಲಿಯ ವೃತ್ತಾಂತವನ್ನೆಲ್ಲಾ

ತಿಳಿದು ವ್ಯಥಿತರಾಗಿ ಬರುತ್ತಿದ್ದಾರೆ. ಆ ಸಮಯದಲ್ಲಿ ಎದುರಿಗೆ ಬಂದ, ಇಷ್ಟೆಲ್ಲ ವಿನಾಶಕ್ಕೂ ಮೂಲಕಾರಣಳಾದ, ಮಂಥರೆಯನ್ನು ನೋಡಿದಾಗ ಶತ್ರುಘ್ನನಿಗೆ ಕೋಪ ಉಕ್ಕಿಬಂದು, ಆಕೆಯಮೇಲೆರಗಿ ಬಡಿಯುತ್ತಾನೆ. ಇದಾವುದನ್ನೂ ನಿರೀಕ್ಷಿಸದ ಮಂಥರೆ, ಬಿದ್ದ ಏಟಿಗೆ ತತ್ತರಿಸಿ, ಚೀರಿ, ಅಳುತ್ತಾ, ಅಲ್ಲೇ ಬರುತ್ತಿದ್ದ ಭರತನನ್ನು ಕುರಿತು ಮೊರೆಯಿಡುತ್ತಾಳೆ—ತನ್ನ ಕಂದನಂತೆಯೇ ಇದ್ದ ಅವನಾದರೂ ತನ್ನನ್ನು ರಕ್ಷಿಸುವನೆಂಬ ಹಂಬಲದಿಂದ! ಭರತ ಹತ್ತಿರ ಬಂದು, ತನ್ನ ಸಹಾಯವನ್ನು ಅಪೇಕ್ಷಿಸಿದವರು ಯಾರು ಎಂದು ನೋಡಿ ತಿಳಿದು ಅಸಹ್ಯಪಟ್ಟು ಈಕೆಯನ್ನು ನಾವು ಈಗ ಕೊಲ್ಲಬಹುದಾದರೂ ಆ ಕೆಲಸವನ್ನು ನಮ್ಮಣ್ಣ—ರಾಮ—ಒಪ್ಪಲಾರನಾದುದ ರಿಂದ, ಈ ದುಷ್ಟೆಯನ್ನು ಬಿಟ್ಟು ಕಳೆ ಎಂದು ನಿಷ್ಠುರವಾಗಿ ನುಡಿದು ಮುಂದೆ ತೆರಳು ತ್ತಾನೆ. ಅಲ್ಲಿಗೆ ಮಂಥರೆಯ ಪಾತ್ರ ಅಲ್ಲಿ ಮುಗಿಯುತ್ತದೆ. ಈ ಮಂಥರೆಯ ಮೂಲ ರೇಖಾಚಿತ್ರ.

> "ಪಿಂತೆ ವಾಲ್ಮೀಕಿಯುಲಿದ ಕಥೆಯಾದೊಡಂ
> ಕನ್ನಡದಿ ಬೇರೆ ಕಥೆಯೆಂಬಂತೆ, ಬೇರೆ
> ಮೈಯಾಂತಂತೆ, ಮರುವುಟ್ಟುವಡೆದಂತೆ"

ಇರುವ "ಶ್ರೀರಾಮಯಣ ದರ್ಶನ" ಮಹಾಛಂದಸ್ಸಿನ ಮಹಾಕಾವ್ಯದಲ್ಲಿ ಪೂರ್ಣತೆಗೊಂಡಿದೆ. ಆಕೆಯ ಹುಟ್ಟು, ಬೆಳೆವಣಿಗೆ, ಆಶೆ ಅಪೇಕ್ಷೆಗಳು, ಅದರಿಂದ ಮೂಡಿದ ಆಕೆಯ ಚಲನವಲನಗಳು, ಅದರ ಪರಿಣಾಮಾದಿಗಳನ್ನೂ ಆಕೆಯ ಮಂಥರಾ ಜನ್ಮದ ಪಶ್ಚಾತ್ತಾಪದ ಅಗ್ನಿಯಲ್ಲಿ ಬೆಂದ ದಾರುಣ ಅಂತ್ಯವನ್ನೂ, ಜೊತೆಗೆ, ಆಕೆ ಮರುಹುಟ್ಟನ್ನು ಪಡೆದು, ತನ್ನ ಗುರಿ ಸಾಧಿಸಿದ ರೀತಿಯನ್ನೂ ಈ ಕಾವ್ಯ ಸಚಿತ್ರವಾಗಿ ಬಣ್ಣಿಸುತ್ತದೆ.

ಆಕೆಯ ಇಲ್ಲಿನ ಜೀವನ ಚಿತ್ರ ಹೀಗಿದೆ:

> "ಕೈಕೆಯ ತಾತನೊರ್ದಿನಂ
> ಬೇಂಟೆಯಾಯಾಸದಿಂ ಬೈಗುವೊತ್ತಡವಿಯೊಳ್
> ಪರಿವಾರದೊಡನೆ ಬರುತಿರೆ, ಪಳುವೆ ತಾನಳುವಂತೆ
> ಗೋಳಿಟ್ಟುದೊಂದು ಶಿಶುರೋದನಂ."

ಕಂದನ ಆಕ್ರಂದನವನ್ನು ಕೇಳಿ ರಾಜನಿಗೆ ಸಹಜವಾಗಿ ಕರುಣೆ ಉಕ್ಕಿತು. ಹೋಗಿ ನೋಡಿದಾಗ, ಒಂದು 'ದಸ್ಯುಶಿಶು' ಅಲ್ಲಿ ಕಾಣಿಸಿತು. ಆ ಮಗುವಿನ ಪರಿಸ್ಥಿತಿ ಅತಿ ಶೋಚನೀಯವಾಗಿದ್ದಿತು:

> "ಮುಳ್ ಮಣ್ಣು ತರಗೆಲೆಯಿಡಿದ ನೆಲದ ಮೇಲಿರುವ
> ಮುತ್ತಿ, ಹಾ, ವಿಕೃತಿ ವಕ್ರತೆ ರೂಹುಗೊಂಡಂತೆ!"

ಹೆತ್ತವರ ಸುಳಿವಿರದ ಹೆಣ್ಣು ಹಸುಳೆಯನ್ನು ರಾಜ ಕರುಣೆಯಿಂದ ಎತ್ತಿ ಕಟ್ಟಿರುವೆಯನ್ನು ಊದಿ ಓಡಿಸಿ ಮೈ ಒರಸಿ ಸಂತೈಸಿದನು! ಇಂತಿದ್ದ ಕೂಸನ್ನು, ಕರುಣೆ ಮೂಡಿದ ಮಹಾರಾಜ ಅಲ್ಲಿಯೇ ಬಿಡುವುದೆಂತು? ಊರಿಗೆ ಆ ಮಗುವನ್ನು ತಂದ ಸಂತೆ—"ದಾರಿಯ ನಡೆವ ಮಾರಿಯಂ ಮನೆಗೆ ತರುವಂತೆ, ಮುಂದಣ ಮಹಾದುಃಖ ದಾವಾನಳಕೆ ತನ್ನ ಕಿರುಗಜ್ಜದಾ ಒಂದೆ ಕಿಡಿಯ ಮುನ್ನುಡಿಯಿಡುವ ವಿಧಿವಿಲಾಸದಲಿ!"

ಹೀಗೆ ಈ ಕಾಡಮಗುವಿಗೆ ನಾಡಿನ ಅರಮನೆಯಲ್ಲಿ ಬೆಳೆಯುವ ಅವಕಾಶ ಸಿಕ್ಕಿತು. ಆದರೇನು? ಅದು ಬೆಳೆದ ರೀತಿಯೇ ಬೇರೆಯಾಯಿತು!

**"ಬೆಳೆದುದು ಕೂಸು ಕುಳ್ಳಾಗಿ,**
**ಗೂನಾಗಿ, ತೊತ್ತಾಗಿ, ಕರ್ರಗೆ, ಜನರ ಕಣ್ಗೆ**
**ಹೇಸಿನಾಕೃತಿಯಾಗಿ!"**

ಮಗುವನ್ನು ನೋಡಿದವರೆಲ್ಲರೂ, ಆ ವಿರೂಪಕ್ಕೆ ಹೇಸಿದರು. ರಾಜನಂತೆ ಅವರಿಗೆ ಕರುಣೆ ಮೂಡಲಿಲ್ಲ. ತಾಯಿತಂದೆಗಳಿಲ್ಲದ ಪರದೇಶಿಯಾದ ಕುಬ್ಜೆಯನ್ನು ನೋಡಿ ಎಲ್ಲರೂ ಅಸಹ್ಯಪಟ್ಟವರೇ. ಅಷ್ಟೇ ಅಲ್ಲದೆ

**". . . . ಚೀಃ ಎಂದು, ತೊಲಗೆಂದು,**
**ಥೂ ಎಂದು, ಸಾಯೆಂದು, ನಾಯ್ಮರಿಗೆ ಕಡೆಯಾಗಿ**
**ಭಾವಿಸಿದರಾ ನೃಪನ ಕಟ್ಟಾಣೆಯಂ ಮೀರ್ದು**
**ಕಡೆಗಣ್ಚಿ."**

ಹೀಗೆ, ಹುಟ್ಟಿದಂದಿನಿಂದ ಮನುಷ್ಯರ ಒಲುಮೆಯ ಸವಿಯನ್ನು ಕೊಂಚವೂ ಕಾಣದೆ, ಎಲ್ಲರ ಅಸಹ್ಯಕ್ಕೆ ಗುರಿಯಾಗಿ, ಈ ಮಗು 'ಮಿಗದ ತೆರದಿ ಮಿದುಳಿಲ್ಲದೆಯೆ' ಬೆಳೆದ ಮೇಲೆ, ಜನರು ಜರೆದು ಈ ಅಸಹ್ಯದಸ್ಯು ಶಿಶುವಿಗೆ 'ಮೊಗಕೆ ಕೆಸರನಿಡುವಂತೆ' 'ಮಂಥರೆ' ಎಂಬ ಅನ್ವರ್ಥ ನಾಮಕರಣ ಮಾಡಿದರು![1]

ಆದರೂ ಮಂಥರೆ, ಸಿಂದೆಯಲ್ಲೇ ಬೆಳೆದು ಕುಬ್ಜೆಯಾದರೂ ಕುವರಿಯಾದಳು! ಆ ಹೊತ್ತಿಗೆ ಕೈಕೆಯ ಜನನವಾಯಿತು. ಮೊದಲಿನಿಂದಲೂ ಕರುಣೆ ತೋರಿದ, ಕಾಡಿನಿಂದ ತಂದು ಸಾಕಿದ ವಾತ್ಸಲ್ಯದಿಂದ, ರಾಜ ಶಿಶುಕೈಕೆಯನ್ನು ಆಡಿಸುವ ಕೆಲಸಕ್ಕೆ ಉದಾರ ಮನಸ್ಸಿನಿಂದಲೇ ಮಂಥರೆಯನ್ನು ನೇಮಿಸಿದನು.

ಮಂಥರೆಯ ಬದುಕು ಈಗ ಮಧುರವಾಯಿತು. ರೂಪ ವಿಹೀನೆಯಾದ ಮಂಥರೆ ರೂಪಸಿಯಾದ ಆ ಶಿಶು ಸನ್ನಿಧಿಯ ಪ್ರೇಮ ಸೌಂದರ್ಯವನ್ನು ಸವಿಯುವುದರಲ್ಲಿ ತನ್ನ ಬದುಕನ್ನೇ ಸಾರ್ಥಕಪಡಿಸಿಕೊಂಡಳು. ಮಂಥರೆ ಈ ಚೆಲುವಾದ ಮಗುವನ್ನು ಆಡಿಸುವುದರಲ್ಲಿ

---

[1] **'ಮಂಥರೆ' ಎಂಬ ಮಾತಿಗೆ ಅಲಸು, ಅಸಹ್ಯಪಡು ಎಂದು ಅರ್ಥವಾಗುತ್ತದೆ.**

"....ತನಗಿಲ್ಲದಾ ಚೆಲ್ವಿನಲಿ
ಲೋಲಾಡಿದಳ್, ತೇಲ್ವವೋಲ್ ಪಾಲೊಳಿದ್ದಲಿನ
ಚೂರು."

ಮಂಥರೆಯ ತೊಡೆಯಲ್ಲಿ ಮೆರೆದ ಕೈಕೆ ಹೊಳೆದಳಂತೆ :

"ಕಾಳಾಹಿ ಭೋಗದಲಿ ಹೊಳೆವ ಹೆಡೆಮಣಿಯಂತೆ
ತಾರತಮ್ಯದಿ ಮತ್ತಿನಿತು ಚಾರುತರಮಾಗಿ."

ಈಗ ಆಕೆಯ ಸರ್ವಸ್ವವೂ ರಾಜಪುತ್ರಿಯ ಸುಖವಾಯಿತು. ಮಂಥರೆಯ ಬದುಕು ಕೈಕೆಯ ಸುಖವೃದ್ಧಿಗಾಯಿತು. ಈ ಹೊಸ ಏಕಮಾತ್ರ ಸುಖ ಸಂಪಾದನೆಯಲ್ಲಿ ಮಂಥರೆ ತನಗೆ ಜಗತ್ತು ಮಾಡಿದ ಅನ್ಯಾಯ ಅಪಮಾನಗಳನ್ನು ಪೂರ್ಣವಾಗಿ ಮರೆತು, ಏಕೆ ತನ್ನನ್ನೇ ತಾನು ಮರೆತು ಕೈಕೆಯ ಬೆಳವಣಿಗೆಯಲ್ಲಿಯೇ ಸಂಪೂರ್ಣವಾಗಿ ಆಸಕ್ತಳಾದಳು.

ಕೆಲ ಕಾಲದ ಮೇಲೆ ದಶರಥಮಹಾರಾಜನು ಲೋಕಸುಂದರಿಯಾದ ಕೈಕೆಯಲ್ಲಿ ಆಸಕ್ತನಾಗಿ, ಆಕೆಯನ್ನು ಮದುವೆಯಾದಾಗ ಆಕೆಯನ್ನು ತಾಯಿಗಿಂತಲೂ ಹೆಚ್ಚಾಗಿ ಬೆಳೆಸಿದ್ದ ಮಂಥರೆಯೂ, ಕೈಕೆಯೊಂದಿಗೆ ಅಯೋಧ್ಯೆಯ ಅರಮನೆಗೆ ಕಾಲಿಟ್ಟಳು—ಅವಳ ನೆರಳಿನಂತೆ. ಸಾಕೇತ ರಾಜಧಾನಿಯಲ್ಲಿ ನಾವು ನೋಡುವುದು :—

"ಕುಡು ಬಿಲ್ಲು ಬಾಗಿದ ಮೆಯ್ಯ,
ತೊನ್ನ ಬೆಳ್ಗಲೆವಿಡಿದ ಕರ್ರನೆಯ ಕುಬ್ಜತೆಯ,
ಗೂಳಿ ಹಿಣಿಲಿನವೋಲು ಗೂನುವುಬ್ಬಿದ ಬೆನ್ನ,
ಸುಕ್ಕು ನಿರಿನಿರಿಯಾಗಿ ಬತ್ತಿದ ತೊವಲ್‌ಪತ್ತಿ,
ಬಿಗಿದೆಲ್ವುಗೂಡಿನಾ ಶಿಥಿಲ ಕಂಕಾಲತೆಯ,
ಪಲ್ಲುದರಿ ಬೋಡಾದ ಬಚ್ಚು ಬಾಯಿಯ, ಕುಳಿಯ
ಕೆನ್ನೆಗಳ, ದಿಟ್ಟಿಮಾಸಿದ ಕಣ್ಣ ಕೋಟರದ,
ಕರ್ಬುನ ಮೊರಡು ಮೊಗದ, ಕೂದಲುದುರಿದ ಬೋಳು
ಪುರ್ಬಿನ ವಿಕಾರದಾ, ಬೆಳ್ವಕ್ಕಿ ತಿಪ್ಪುಳಿನೆ
ಮಂಡೆಯಂ ಮುತ್ತಿ ಕೆದರಿದ ಬೆಳ್ಪನೆಯ ನವಿರ,
ಅಸ್ಥಿಪಂಜರದಂತೆವೋಲಸ್ಥಿರ ಸ್ಥವಿರೆ"

ಯಾದ ಮಂಥರೆಯನ್ನು ! ಆದರೂ ಕೈಕೆಗೆ ಆಕೆ ಪ್ರೀತ್ಯಾಸ್ಪದಳೇ ಆಗಿದ್ದಳು ! [2]

---

[2] ಜನ್ನಕವಿ ತನ್ನ ಯಶೋಧರ ಚರಿತ್ರೆಯಲ್ಲಿ ಬಣ್ಣಿಸಿರುವ ಬದಗನ ವಿರೂಪ ವೈಭವವೂ, ಅಂತಹವನಲ್ಲಿಯೂ ಪ್ರೇಮ ಮೂಡಿದ ಅಮೃತಮತಿಯ ನೆನಪೂ ಇಲ್ಲಿ ಓದುಗರಿಗೆ ಆಗುತ್ತದೆ.

ಇಂತಹ ವಕ್ರವೂ, ಭಯಂವಹವೂ ಆಗಿದ್ದ ಕುರೂಪಕ್ಕೆ ತವರಾದ ಮಂಥರೆಯನ್ನು ನೋಡಿ ಅಯೋಧ್ಯೆಯ ಜನರೂ, ಅರಮನೆಯವರೂ ನಕ್ಕುದೇನಾಶ್ಚರ್ಯ ? ಹಲವರು ಹಲವು ಬಗೆಯಲ್ಲಿ ನಕ್ಕರು, ಹಾಸ್ಯಮಾಡಿದರು, ಅಣಕಿಸಿದರು. ಈ ವಿಕಾರಿಗೆ ಮನ್ನಣೆ ತಾನೆ ಹೇಗೆ ದೊರೆಯಬೇಕು ಅರಮನೆಯಲ್ಲಿ? ಆದರೆ ಈ ಅನಾದರಣೆ ಹೆಚ್ಚಿದಂತೆಲ್ಲಾ, ಮಂಥರೆಯ ಹೃದಯವೂ ಕಲ್ಲಾಯಿತು. ಕೈಕೆಯ ಮೇಲಿದ್ದ ಅಪಾರ ಮಮತೆ ಮತ್ತೂ ಹೆಚ್ಚಾಗಿ ಬಿಗಿದುಕೊಂಡಿತು. ಮುದಿಗೂನಿ ಮಂಥರೆಗೆ ಸುಖವೆಂಬುದು ಮೊಲದ ಕೋಡಾಯಿತು! ಜನ ಹತ್ತಿರ ಸೇರಿಸಲು ಹಿಂಜರಿದು ಹೇಸಿ, ಶನಿ ಎಂದು ಶಪಿಸಿದರು; ಹೊರಗೆ ನೂಕಿದರು. ಕೌಸಲ್ಯೆ ಸುಮಿತ್ರೆಯರು ಮಂಥರೆ 'ಅನಿಷ್ಟೆ' ಎಂದು ತಿರಸ್ಕರಿಸಿ, ಅವಳೊಡನೆ ಇದ್ದಾಗ ಕೈಕೆಯನ್ನು ಹತ್ತಿರ ಸೇರಿಸದಾದರು. ಕೋಸಲ ನಾಡಿನಲ್ಲಿಯೇ ಈಕೆಯನ್ನು ಮೀರಿದ ತಿರಸ್ಕೃತೆಯರಿಲ್ಲವಾಯಿತು. ಆದರೂ ಆಕೆ ಮಾತ್ರ ಸಂತೃಪ್ತಸುಖಿಯೇ ಆಗಿದ್ದಳಂತೆ.

> "....ಸಹಿಸಿದಳನಿತುಮಂ ಕುಬ್ಜೆ
> ತನ್ನೊಡತಿಯೊಲ್ಮೆಯ ಸೊಗಕೆ ಜೀವವನೆ ಬೇಳ್ದು,
> ಕಮ್ಮಾರನಡಿಗಲ್ಲೆನಲ್ ಬಾಳ್ದು."

ಹೀಗೆ ಎಷ್ಟೋ ಕಾಲ ಕಳೆದಮೇಲೆ, ಮಂಥರೆಗೆ ಮೂರನೆಯ ಕಣ್ಣು ಮೂಡುವಂತೆ ಒಡತಿ ಕೈಕೆ ಭರತನನ್ನು ಹೆತ್ತಳು. ಹಿಂದೆ ತನ್ನನ್ನು ತಂದು ಸಾಕಿದ ರಾಜನ ಅರಮನೆಯಲ್ಲಿ ಕೈಕೆ ಹುಟ್ಟಿ, ಆ ಮಗು ತನ್ನ ತೊಡೆಗೆ ಬಂದಾಗ ಯಾವ ಆನಂದವಾಯಿತೋ, ಅದಕ್ಕಿಂತ ಬಹುಪಾಲು ಹೆಚ್ಚಾಗಿ ಮಂಥರೆಗೆ ಈಗ ಸಂತೋಷವಾಯಿತು—ಒಡತಿಗಾದ ಪುತ್ರೋದಯದಿಂದ!

ಜಿಪುಣನಾದ ಬಡವ ಬಂಗಾರವನ್ನಪ್ಪುವಂತೆ, ಹಗಲಿರುಳೂ ಎಡೆವಿಡದೆ ಭರತನನ್ನು ಸಾಕಿದಳು—ಹಡೆದ ತಾಯಿಯೇ ನಾಣ್ಚುವೋಲಂತೆ! ಮಂಥರೆಯ ಮೋಹಸರಸ್ಸಿನಲ್ಲಿ ತಾವರೆಯಂತೆ ಬೆಳೆದನು ದಶರಥಪುತ್ರ ಭರತಕುಮಾರ. ಹೀಗೆ ಮಂಥರೆಯ ಮೋಹದ ಬಲೆಯಲ್ಲಿ ವಕ್ರರೂಪದ ಕೃಪಾಸರೆಯಲ್ಲಿ ಬೆಳೆದವನಾದರೂ ಭರತ ಆಕೆಯಂತಾಗದಿದ್ದುದು ಆಶ್ಚರ್ಯವೆ!

> "....ಸೌಂದರ್ಯ ಶ್ರೀದೇವತೆಯ
> ಪಟ್ಟದ ಕುಮಾರನೆನೆ, ಕೈಕೆಯ ಸೊಬಗನೆಲ್ಲಮಂ
> ಮಥಿಸಿ ಸಾರವನೆರೆದ ನವನೀತಕಿಂದ್ರಧನುವಿಂ
> ವರ್ಣತೇಜಸ್ಸೊದಗಿದಂತಿರ್ದ ಕೃತಿಯಂತೆವೋಲ್
> ಭರತಂ ಮಹಾತ್ಮನೆಸೆದನು ದಿವ್ಯತೇಜಸ್ವಿ,

ತ್ಯಾಗಬುದ್ಧಿಯಲಿ, ನಿರ್ವೇಗದಲಿ, ತಪದಲ್ಲಿ,
ಸಂಯಮದ ಸೌಂದರ್ಯದಲ್ಲಿ, ನಿರಸೂಯೆಯಲಿ,
ರಸಕಾವ್ಯ ಸತ್ಕಲಾಭ್ಯಾಸದಧ್ಯಾತ್ಮದಲಿ,
ಸೋದರ ಪ್ರೀತಿಯಲಿ, ಬಾಲಋಷಿಯೆಂಬಂತೆ
ಭಾಜನನಾಗಿ ರಾಮಗೌರವಕೆ !''

ಆದರೆ ಮಂಥರೆಯ ಮೋಹಾಂಧಕಾರದ ಹೃದಯಗಹ್ವರಕ್ಕೆ ಈ ಸದ್ಗುಣಗಣದ ಬೆಳಕು ಹೇಗೆ ಮುಟ್ಟಬೇಕು ? ಭರತನ ಹಿತವನ್ನೇ ತನುಮನಧನಗಳಿಂದ ಬಯಸುತ್ತಿದ್ದಳಾದರೂ, ಆತನ ಹಿತ ಏನು ಎಂಬುದನ್ನು ಅರಿಯದೆ ಹೋದಳು ಆ ದಸ್ಸುಸತಿ ಮಂಥರೆ !

"..... ಭರತಾಭ್ಯುದಯ
ಚಂದ್ರೋದಯಕ್ಕುರ್ಬಿದತ್ತವಳ ಹೃಜ್ಜಲಧಿ,
ಪಾಳುಕೊರಕಲ್ ಬಂಡೆಯಿಂ ವಕ್ರಮಾಗಿರ್ಪ
ಮೊರಡು ದಂಡದಂತಿರ್ದವಳ ಮೆಯ್ಯನುಚ್ಛ್ವಸಿತ
ಹರ್ಷೋರ್ಮಿಮಾಲಾ ಸಮೂಹದಿಂದವ್ವಳಿಸಿ
ಮುಚ್ಚಿ.''

ಮಂಥರೆಯ ಲೋಕದಲ್ಲಿ ಈಗ ಯಾರಿಗೂ ಸ್ಥಾನವಿಲ್ಲವಾಯಿತು—ಒಡತಿ ಕೈಕೆ, ಆಕೆಯ ಮೋಹದ ಮಗ ಭರತ, ಇವರಿಬ್ಬರನ್ನುಳಿದು. ಈ ಭೂಮಂಡಲವೇ ಭರತನ ಒಡೆತನಕ್ಕಾಗಿ ಎಂದು ಬಗೆದಳು ವಾತ್ಸಲ್ಯಮೂರ್ತಿಯಾದ ಮಂಥರೆ. ಮಂಥರೆಯ ಈ ಮಹಾಮಮತೆಯ ಸುಳಿಯ ಸೆಳವಿಗೆ ಸಿಕ್ಕಿ, ಸುಂಟರಗಾಳಿಗೆ ಸಿಲುಕಿದ ತರಗೆಲೆ, ತಿರ್ರನೆ ತಿರುಗುವಂತೆ, ತ್ರೇತಾ ಮಹಾಯುಗವೇ ಸಹಾಯ ವಿಹೀನವಾಗಿ, ಸುತ್ತಬೇಕಾಯಿತು !

ಭರತನ ಮೇಲಿನ ಮಂಥರೆಯ ಮಮತೆ ಮತ್ತೂ ಹೆಚ್ಚಾಗುವುದಕ್ಕೂ, ಉಳಿದವರ ಮೇಲೆ—ಅದರಲ್ಲೂ ಕೌಸಲ್ಯೆಯ ಮೇಲೆ, ಆಕೆಗೆ ಒಂದು ವಿಧವಾದ ದ್ವೇಷವೇ ಹುಟ್ಟುವುದಕ್ಕೂ ಕಾರಣವಾಗುವ ಅದೊಂದು ಘಟನೆ, ದಶರಥನ ಅರಮನೆಯಲ್ಲಿ ನಡೆಯಿತು.

ರಾಮನೊಡಗೂಡಿ ಮೂವರು ಅನುಜರೂ ತಮ್ಮ ತಮ್ಮ ತಾಯಿಯರ ಒಲುಮೆಯ ತೊಟ್ಟಿಲಲ್ಲಿ, ಒಂದೇ ಗೊಂಚಲಲ್ಲಿ ಮೂಡಿದ ನಾಲ್ಕು ಮೊಗ್ಗುಗಳು ಅರಳಿ ಬೆಳೆವಂತೆ, ಬೆಳೆಯುತ್ತಿದ್ದರು.

"ಒಂದು ಹುಣ್ಣಿಮೆಯಿರುಳ್, ಅರಮನೆಯ ಉದ್ಯಾನ
ಶಾದ್ವಲ ಶ್ಯಾಮವೇದಿಕೆಯಲ್ಲಿ ರಾಣಿಯರ್

ತಮ್ಮ ಮಕ್ಕಳ್ವೆರಸಿ ವಿಹರಿಸುತ್ತಿರೆ ವಿವಿಧ
ಹರ್ಷ ಭಾಷಿತ ಮೋದದೊಳ್ . . . . .''

ಮಗುವಾಗಿದ್ದ ಶ್ರೀರಾಮ ಆಕಾಶಮಂಡಲದಲ್ಲಿ ಮೆರೆಯುತ್ತಿದ್ದ ಪೂರ್ಣ ಚಂದ್ರಮನನ್ನು ನೋಡಿ, ಆಕರ್ಷಿತನಾಗಿ, ಅದು ತನಗೆ ಬೇಕೆಂದು ಅತ್ತು, ಕೌಸಲ್ಯೆಯನ್ನು ಕಾಡಿದನು. ಗಗನಲೋಕ ವಿಹಾರಿಯಾದ ಚಂದ್ರಮನು, ದಶರಥನ ದಿವ್ಯ ಅರಮನೆಯಾದರೂ, ಅಲ್ಲಿಗೆ ಬರಲಾರನೆಂದು ಹೇಳಿ, ಬಗೆಬಗೆಯ ಬಣ್ಣದ ಸಾಮಾನುಗಳನ್ನಿತ್ತು, ತಾಯಿ ಎಷ್ಟು ಬಗೆಯಾಗಿ ಸಮಾಧಾನ ಮಾಡಿದರೂ, ಅಳುವುದನ್ನು ಬಿಡಲಿಲ್ಲ! ಅತ್ತು ಅತ್ತು ಮಗುವಿನ ಮುದ್ದು ಕಣ್ಣುಗಳು ಕೆಂಪಡರಿದುವು. ಮೊಗದ ಮಂದಹಾಸ ಮಾಯವಾಯಿತು. ಕೌಸಲ್ಯೆಗೂ ಕಿರಿಯ ರಾಣಿಯರಿಗೂ, ಪರಿವಾರ ವರ್ಗದವರಿಗೂ, ದಿಕ್ಕು ತೋಚದಂತಾಯಿತು. ರಾಮ ರವಿವಂಶದವನೆಂಬ ಕರುಬಿನಿಂದ, ಏನೂ ತಿಳಿಯದ ಎಳೆ ಹಸುಳೆಯನ್ನು ಹೀಗೆ ಪೀಡಿಸುತ್ತಿರುವ ಚಂದ್ರನನ್ನೇ ಬೈದಳಂತೆ—ಮಗುವನ್ನು ಸಮಾಧಾನಮಾಡಲು ಆಗದ ತಾಯಿ ಕೌಸಲ್ಯೆ! ದಶರಥ ಮಹಾರಾಜನೇ ಖುದ್ದಾಗಿ, ಸಮಾಧಾನಮಾಡಲು ಬಹು ಕಷ್ಟಪಟ್ಟನು. ಆದರೆ ರಾಮನ ಅಳುವನ್ನು ನಿಲ್ಲಿಸಲು ಯಾರಿಂದಲೂ ಸಾಧ್ಯವಾಗಲಿಲ್ಲ. ದಶರಥ

"ಮರುಗಿದನು ಮಗನಾಸೆ ತನ್ನ ಬಲ್ಮೆಗೆ ಮೀರಿ
ಕೈಗೂಡಲಸದಳಮಲಾ ಎಂದು . . . . .
ತಿರೆಗರಸನಾದರೇನೊಂದು ಕೂಸಿನ ಬಯಕೆ
ಬಡತನವನೊಡರಿಸಿತಲಾ! "ತನ್ನ ಸಿರಿಯಿನಿತು
ಪುಸಿಯಾಯ್ತೆ?"

ಎಂದು ಮಮ್ಮಲ ಮರುಗಿದ ತಂದೆ ಮಗನನ್ನೆತ್ತಿಕೊಂಡು ಜಿಂಕೆಗಳನ್ನು, ಹಾಲುಚೆಲ್ಲಿದಂತಿದ್ದ ಬೆಳುದಿಂಗಳಲ್ಲಿ ಕುಣಿಯುವ ಕಣ್ಣು ಕಣ್ಣಿನ ಗರಿಗಳ ನವಿಲುಗಳನ್ನು, ವಿಧವಿಧವಾದ ರತ್ನಗಳನ್ನು, **ಚಂದ್ರ ಸದೃಶವಾದ** ಅನೇಕ ವಸ್ತುಗಳನ್ನು ತೋರಿಸಿ ಆಡಿಸಿ, ರಾಮನ ಹಠವನ್ನು ನಿಲ್ಲಿಸಲು ಪ್ರಯತ್ನಮಾಡಿ ವಿಫಲನಾದನು! ಮುಂದು ಗಾಣದ ಮಹಾರಾಜ ಮಹಾಮಂತ್ರಿ ಸುಮಂತ್ರನನ್ನು ಕರೆಸಿ ತನ್ನ ಅಳಲನ್ನು ತೋಡಿಕೊಂಡನು. ಮಗುವಿನ ಆಸೆಗೇ ಆಶ್ಚರ್ಯಹೊಂದಿದ ಮಂತ್ರಿ ಮೌನಧಾರಿಯಾದನು!

ಇಂತಹ ಸಮಸ್ಯಾಸಮಯದಲ್ಲಿ, ಯಾರು ಹೇಳಿ ಕಳುಹಿಸದಿದ್ದರೂ, ಸನ್ನಿವೇಶವನ್ನು ಅರಿತು, ಆಲೋಚಿಸಿ, ಅದಕ್ಕೆ ಒಂದು ಯುಕ್ತವಾದ ಪರಿಹಾರವನ್ನು ಕಂಡುಹಿಡಿದುಕೊಂಡು, ಕೊಂಕುಳಲ್ಲಿ ಕಿಶೋರ ಭರತನನ್ನೆತ್ತಿಕೊಂಡು, ಹೊರಗೆ ನೋಡುವ

ವರಿಗೆ ಕೇವಲ ಬೆಪ್ಪು ಮುದುಕಿಯಂತಿದ್ದ ಮಂಥರೆ ನಿಧಾನವಾಗಿಯೇ ನುಗ್ಗಿದಳು ಆ ಪ್ರದೇಶಕ್ಕೆ. ಆಕೆಯನ್ನು ಕಂಡ ಕೂಡಲೇ, ಕೈಕೆಯನ್ನುಳಿದು ಅಲ್ಲಿದ್ದವರೆಲ್ಲರೂ, ಅಮಂಗಳವನ್ನು ಕಂಡಂತೆ, ಮುಖ ಮುರಿದು, ಅಸಹ್ಯಗೊಂಡು, ಮಾತುನಿಲ್ಲಿಸಿ, ಈ ಭೂತವೇಕೆ ನುಗ್ಗಿತು ಇಲ್ಲಿ, ಎಂಬಂತೆ ನೋಡಿದರು! ಈ ವಿರೂಪದ ವೃದ್ಧೆ ಅಲ್ಲಿಗೆ ಬಂದುದೇ ತಡ ಕೈಕೆ ಅವಳಲ್ಲಿಗೆ ಧಾವಿಸಿದಳು. ಮಂಥರೆ ತನ್ನ ಮಡಿಲಿಂದ ಒಂದು ಮುಕುರವನ್ನು ಈಚೆಗೆ ತೆಗೆದು, ಕೈಕೆಯ ಕೈಗಿತ್ತು, ಆಕೆಯ ಕಿವಿಯಲ್ಲಿ ಅದನ್ನು ಉಪಯೋಗಿಸುವ ರೀತಿಯನ್ನು ಪಿಸುಗುಟ್ಟಿದಳು! ಅದನ್ನು ಕೇಳಿದ ಕೈಕೆ ಉತ್ಸಾಹದಿಂದ ನಕ್ಕು ಕನ್ನಡಿಯನ್ನು ಕೊಂಡುಹೋಗಿ ದಶರಥನ ತೋಳಿನಲ್ಲಿದ್ದು ಅಳುತ್ತಲಿದ್ದ ರಾಮನಿಗೆ ತೋರಿದಳು. ಕನ್ನಡಿಯಲ್ಲಿ ಹೊಳೆದ ಆಕಾಶದ ಚಂದ್ರಬಿಂಬವನ್ನು ನೋಡಿದ ರಾಮಚಂದ್ರ, ಅದನ್ನು ಪಡೆದವನಂತೆಯೇ ಹಿಗ್ಗಿ ಕುಣಿದು ಆಡತೊಡಗಿದನು, ದೀರ್ಘ ರೋದನವನ್ನು ನಿಲ್ಲಿಸಿ! ಮುದುಕಿಯ ಉಪಾಯವನ್ನು ಕಂಡು ಎಲ್ಲರಿಗೂ ಆಶ್ಚರ್ಯವಾದರೂ, ಸಂತೋಷಪಟ್ಟರು. ತನ್ನ ಉಪಾಯ ಫಲಿಸಿದ ಅತಿ ಸಂತೋಷ ಹೆಮ್ಮೆಗಳಿಂದ ಮಂಥರೆ ರಾಮನನ್ನು ಮುದ್ದಿಸಲು ಬಯಸಿ ತನ್ನ ತೋಳನ್ನು ಚಾಚಿದಳು. ಆದರೆ ಕೌಸಲ್ಯೆ ಅವಸರದಿಂದ ಓಡಿಬಂದು

"ಮುಟ್ಟದಿರ್ ಮುಟ್ಟದಿರ್! ಕಂದಂಗಮಂಗಳಂ!"

ಎಂದು ಆಕೆಯನ್ನು ತಡೆದು ನಿವಾರಿಸಿದಳು—ರಾಮನನ್ನು ರಕ್ಷಿಸಲು!

ಈ ಒರಟು ಮಾತಿನಿಂದ ಮುದಿ ಮಂಥರೆಯ ಮೈತ್ರಿ ಜರ್ಝರಿತವಾಯಿತು. ಹುಟ್ಟಿದಂದಿನಿಂದ ತಡೆದುಕೊಂಡಿದ್ದ ಅವಮಾನದ ದುಃಖ, ಕಟ್ಟೆಯನ್ನೊಡೆದು ನುಗ್ಗುವ ನೀರಿನ ಪ್ರವಾಹದಂತೆ, ಕಣ್ಣೀರಾಗಿ ಕೋಡಿವರಿಯಿತು! ಕೂಡಲೇ ಆಕೆ ಅತಿ ದುಃಖದಿಂದ ಅಲ್ಲಿ ನಿಲ್ಲದೆ ಭರತನನ್ನು ಇನ್ನೂ ಬಿಗಿಯಾಗಿ ಅಪ್ಪಿ ಹಿಡಿದುಕೊಂಡು ಅಲ್ಲಿಂದ ರಭಸವಾಗಿ ಹೊರಟುಹೋದಳು—ಹೆಡೆಯೆತ್ತಿ,—ತುಳಿದ ಸರ್ಪಿಣಿಯಂತೆ!

ಕೆಲವು ವರ್ಷಗಳೇ ಕಳೆದುಹೋದುವು ಈ ಘಟನೆಯ ತರುವಾಯ. ಶ್ರೀರಾಮನ ಅವನ ಅನುಜರ ವಿವಾಹ ಮಂಗಳ ಮಹೋತ್ಸವವು ವಿಜೃಂಭಣೆಯಿಂದ ಜರುಗಿತು. ಎಲ್ಲರೂ ಕೆಲಕಾಲ ಸುಖದಿಂದಿದ್ದರು.

"....... ಸೀತಾರಾಮರಿರಲಿಂತು
ಸೊಗದ ಪಾಲ್ಜೇನಿನೊಳ್ ತೇಲ್ದು ಬಾಳ್‌ದೋಣಿಯಂ,
ಭೋಂಕನೆಯೆ ಮಂಥರೆಯ ಮಮತೆಯ ಸುಳಿಗೆ ಸಿಲ್ಕಿ
ರಸದೋಡಮುಳ್ದುದಯ್. ಸುಖನೌಕೆ ಮುಳುಗಲಾ
ನೌಕೆಯಂ ಮುಳುಗಿಸಿದ ಸುಳಿಯೆ ಸುಟ್ಟುರೆಯಾಗಿ

ತಿರ್ರನೆ ತಿರುಪಿ ಬಾನ್ಗೆ ಬೀಸಿದುದು ಸುಖಿಗಳಂ
ಜನಕಜಾ ರಘುಜಾತರಂ. ಕಡೆಯದೆಯೆ ಕೇಳ್ ಬೆಣ್ಣೆ
ಹೊಮ್ಮುವುದೆ? ಮೂಡುತಿರ್ದ್ದಪೆ ಮಹಾರತ್ನಗಳ್, ಪೇಳ್,
ಮಥಿಸದಿರೆ ಮಂಥರೆಯ ವಾಸುಕಿಮಹಾಮಮತೆ ತಾಂ
ಕೈಕೆ ಮನ್ದರದಿಂದಮಾ ತ್ರೇತಾ ಸಮುದ್ರಮಂ?"

ಒಮ್ಮೆ ಇದ್ದಕ್ಕಿದ್ದಂತೆ, ಅಯೋಧ್ಯೆಯ ಜನಕ್ಕೆ ಭಯವಿಸ್ಮಯಗಳನ್ನು ಒಟ್ಟಿಗೇ ತಂದ ಮಹಾ ಉಲ್ಕವೊಂದು ಆಕಾಶದಲ್ಲಿ ಕಾಣಿಸಿಕೊಂಡಿತು. ಆ ಧೂಮಕೇತು ಕಾಲಪುರುಷ ಹಿಡಿದ ಪಂಜಿಸಂತಿತ್ತು—ರಕ್ತವನ್ನು ಕಾರುತ್ತಾ! ಕೋಸಲಕ್ಕೆ ಕೇಡು ಬರುವುದೆಂದು ಬಗೆದ ಜನ ನರಳಿದರು. ತನ್ನ ಅಂತ್ಯಕ್ಕೆ ಆ ಗಗನ ಶಕುನವೇ ಬಾನ್ ಬರೆಹವೆಂದು ಬಗೆದ ದಶರಥಮಹಾರಾಜ, ಹಿರಿಯ ಮಗ ರಾಮನಿಗೆ ಪಟ್ಟಗಟ್ಟಿ ತಾನು ವಾನಪ್ರಸ್ಥಕ್ಕೆ ಹೋಗಲು ಹವಣಿಸಿದನು.

ಪಟ್ಟೋತ್ಸವದ ಶೃಂಗಾರ ಸಂಭ್ರಮಗಳಿಗೆ ಪ್ರಾರಂಭವಾಯಿತು. ಶ್ರೀರಾಮನ ಪಟ್ಟಾಭಿಷೇಕವಾಗಬೇಕಾಗಿದ್ದ ದಿನದ ಹಿಂದಿನ ರಾತ್ರಿ ಮಂಥರೆ ಒಂದು ಕನಸು ಕಂಡಳು.

"ಮಥಿಸಿದುದು ದಶಶಿರನ ವಿಧಿ ಮಂಥರೆಯ ಮನದಿ
ತನ್ನ ತಂತ್ರದ ಕೃತಿಯನಾ ಇರುಳ್ ಕನಸಿನಲಿ[3]."

ಮಂಥರೆಯ ಮಮತೆಯನ್ನು ಚುಚ್ಚಿ ಎಬ್ಬಿಸಿ ಕಾರ್ಯೋನ್ಮುಖಕ್ಕೆ ಪ್ರೇರಣೆ ನೀಡುತ್ತದೆ ಈ ಕೆಟ್ಟ ಕನಸು.

"ಮುದುಕಿಯಾದಾ ಕೈಕೆ ಭರತನಂ ಕೈವಿಡಿದು
ಮರುಧರೆಯನಲೆಯುತಿರ್ದಳ್ ವಿಧವೆಯೋಲ್. ಕುಬ್ಜೆ
ಕರೆದೊಡಂ ಕಿವಿಗೊಡದೆ, ಮಗನೊಡನೆ ಕಿರಿರಾಣಿ
ಮುಂದು ಮುಂದೆಯ್ದುತಿರೆ, ಬೈಗುಗಳ್ತಲೆಯಿಳಿದು
ನುಂಗಿದತ್ತಿರ್ವರಂ. ತೊಳತೊಳಲಿ ನೀರಡಿಸಿ

---

[3] ಸಂಸ್ಕೃತ ಕವಿ ಭವಭೂತಿಯ "ಮಹಾವೀರ ಚರಿತೆ"ಯಲ್ಲಿ ಶ್ರೀರಾಮ—ಸೀತಾ ವಿವಾಹದ ತರುವಾಯ, ಅವರು ಇನ್ನೂ ಜನಕನ ಅರಮನೆಯಲ್ಲೇ ಇರುವಾಗ ರಾವಣನ ಕಡೆಯ ಶೂರ್ಪಣಖಿ ಮಂಥರೆಯ ವೇಷದಿಂದ ಬಂದು—"ಅವಿಷ್ಟಾಸ್ಮಿ ಮಂಥರಾ ಶರೀರೇ ಶೂರ್ಪಣಖಾ"—ದಶರಥ ಕೈಕೆಗೆ ಕೊಟ್ಟ ಎರಡುವರಗಳನ್ನು, ಅದರಂತೆ ಆಗಬೇಕಾದ ಕಾರ್ಯವನ್ನು ತಿಳಿಸಿ ಹೋಗುತ್ತಾಳೆ. ಭರತನೂ ಅಲ್ಲಿಯೇ ಇರುತ್ತಾನೆ. ಅದೇ ತಂದೆಯ ಆಜ್ಞೆಯೆಂದು ಭಾವಿಸಿ ರಾಮ ಅಲ್ಲಿಂದಲೇ ತಂದೆಗೆ ಹೇಳಿಕಳುಹಿಸಿ, ತಾನು ಕಾಡಿಗೆ, ಸೀತಾಲಕ್ಷ್ಮಣರ ಸಮೇತನಾಗಿ ಹೊರಟುಹೋಗುತ್ತಾನೆ.

ದೆಸೆದೆಸೆಗೆ ಬಾಯ್ಬಿಟ್ಟು ನಿಡುವೊರಲಿ ಗೂನಿ ತಾಂ
ಕೆಡೆದಳಾ ಮರಳುಗಾವಲಿಯಿಳೆಗೆ, ರಾಮನಂ
ಕರೆಕರೆದು ನಿಡುಸರದೊಳಾಕ್ರಂದಿಸುತೆ ಕೂಗಿ.''

ಈ ದುಃಸ್ವಪ್ನದಿಂದ ಪೀಡಿತಳಾದ ಮಂಥರೆ ನಡುಗುತ್ತಾ ಎದ್ದು ಕುಳಿತಳು—ಒಲೆಗೆ ಬಿದ್ದ ಹುಳುವಿನಂತೆ! ಭಯಗ್ರಹ ಬಡಿಯಿತವಳಿಗೆ. ಈ ಸ್ವಪ್ನ ತನಗೇನು ಕೇಡು ತರುವುದೋ ಎಂದು ಹೆದರಿ ಚಿಂತಿಸುತ್ತಿದ್ದ ಮಂಥರೆಗೆ ಹೊರಗೆ ಮೊಳಗಿದ ಮಂಗಳ ವಾದ್ಯನಿನಾದ ಕೇಳಿಸಿತು. ಆಕೆಯ ಗಮನ ಆ ಕಡೆಗೆ ತಿರುಗಿ, ಆ ಮಟ್ಟಿಗೆ ಮಾತ್ರ ಕನಸನ್ನು ಮರೆತ ಮಂಥರೆ, ಕುತೂಹಲಾವಿಷ್ಟೆಯಾಗಿ ಹೊರಗೆ ಹೊರಟಳು. ರಾಜ ಬೀದಿ ಅಪೂರ್ವವಾಗಿ ಸಿಂಗಾರಗೊಂಡಿತ್ತು. ಬರುತ್ತಿರುವಾಗ ಇಡೀ ನಗರವೇ ಶೃಂಗಾರವಾಗಿರುವುದನ್ನು ಕಂಡು, ಅದಕ್ಕೆ ಕಾರಣವನ್ನರಿಯದೆ ಸೋಜಿಗಗೊಂಡು ಮುಂದೆ ಹೋದಾಗ, ಎಲ್ಲಿ ನೋಡಿದರೂ ಜಲಸೇಚನ, ಹೊಸ ರಂಗೋಲಿ, ಕರ್ಪೂರದ ಸಾರಣೆಯ ಕಂಪು, ಗುಡಿತೋರಣ, ಪೊಂಬಾವುಟ, ಪರಿಜನರ ಅತೀವ ಉತ್ಸಾಹ ವನ್ನು ಕಂಡಳು. ಕಟಿಬದ್ಧ ಸನ್ನದ್ಧಯೋಧರು, ಕುದುರೆ ಆನೆ ತೇರುಗಳು ಸಾಲ್ಗೊಂಡು ನಿಂತಿರುವುದನ್ನು ನೋಡಿದಳು. ಈ ಸಂತಸ ಸಂಭ್ರಮಗಳು ಏಕೆ ಎಂದು ತಿಳಿಯದೆ ಮುಗ್ಧಳಾದ ಮಂಥರೆ ಹಾಗೇ ನಿಧಾನವಾಗಿ, ಎಲ್ಲರ ಎಂದಿನ ಅಸಹ್ಯ ವನ್ನು ಕೀಳ್ನೋಟದ ಅಪಮಾನವನ್ನು ಅಂದೂ ಸಹಿಸಿಕೊಂಡು ಮುಂದೆಮುಂದೆ ಧಾವಿಸಿ ಕಲ್ಯಾಣ ಮಂಟಪದೆಡೆಗೇ ಬಂದು, ಸಂತಸ ಸೂಸುವ ಅರಳು ಕಣ್ಣಿಂದ ಕಿಲಕಿಲನೆ ನಗುತ್ತಿದ್ದ ರಾಮನ ದಾದಿಯನ್ನೇ ಕೇಳಿದಳು—"ಒಸಗೆಯೇನೆಂದು." ಆಕೆಯಿಂದ ತಿಳಿಯಿತು ಮಂಥರೆಗೆ, "ರಾಮ ಪಟ್ಟಾಭಿಷೇಕದ ನನ್ನಿ."! ಈ ಕಹಿ ತನ್ನ ಕಿವಿಗೆ ಬಿದ್ದ ಕೂಡಲೇ ಹೌಹಾರಿ ಹೃದಯ ಒಡೆದುಹೋದವಳಂತೆ ತತ್ತರಿಸಿ, ಒಂದೇ ಏಟಿಗೆ ಜಿಗಿದಳು ಮುದುಕಿ. ಒಡತಿಯರಮನೆಗೆ—ಏದುತ್ತಾ!

ಅಲ್ಲಿ ಬಂದವಳೇ, ಸುಖಾಸೀನೆಯಾಗಿದ್ದ ಕೈಕೆಯನ್ನು ಕಂಡು ಉದ್ವೇಗದಿಂದ—ಸರ್ವನಾಶವಾಗಿಹೋಗಿದೆಯೆಂಬಂತೆ ಚೀರಿದಳು.

''ಓ ಕೈಕೆ,
ಮತಿಗೇಡಿ, ನಿರ್ಭಾಗ್ಯೆ, ಇನ್ನುಮೇನೀ ನಿದ್ದೆ,
ನಿನಗೆ? ಮೇಲೇಳ್ ಏಳ್ : ಕೆಡೆದುಬಿದ್ದಿದೆ ನಿನ್ನ
ಸಿರಿಗುಡಿಯ ಗೋಪುರಂ! ಹೊಂಗನಸು ಹುಡಿಯಾಯ್ತು!
ಬಯಲ ಸೇರ್ದುದು ಬಹುದಿನದ ಬಯಕೆ! ಕೆಟ್ಟೆ ನೀಂ!
ಕೆಟ್ಟೆ ನಾಂ! ಹಾ ಭರತ! ಭರತ! ಹಾ! ಎಲ್ಲಿಹಯ್?''

ಎಂದು ಮುಂತಾಗಿ ಕೂಗುತ್ತಾ ದೊಪ್ಪನೆ ಕೆಡೆದು ಉರುಳಿದಳು ಹೊಸ್ತಿಲಿನಲ್ಲೇ!

ಅನಿರೀಕ್ಷಿತವಾದ ಕೂಗನ್ನು ಕೇಳಿ ಕೈಕೆ ಕನಿಕರದ ನೋಟವನ್ನು ಬೀರಿ, ದಾದಿಯನ್ನು ಪಚರಿಸಿದಳು! ಮಂಥರೆ ರಾಣಿಯನ್ನು ಬಿಗಿದಪ್ಪಿ ಬಿಕ್ಕಿಬಿಕ್ಕಿ ಅಳುವು ದಕ್ಕೇ ಪ್ರಾರಂಭಿಸಿದಳು! ಕೈಕೆ, 'ಹೇಳವ್ವ ಏನಾದುದು'? ಎಂದು ಕೇಳಿದಳು. ಆಗ ಮಂಥರೆ, 'ಭರತ! ಭರತ'! ಎಂದಷ್ಟೇ ಹೇಳಿದಳು. ಒಡನೆ ಮಗನಿಗೇನಾದುದೋ ಎಂದು ಕುದಿದು ರಾಣಿಯೂ ಅಳತೊಡಗಿದಳು! ಬಳಿಕ ಮಂಥರೆ, ಹೀಗೆ ಹೇಳ ತೊಡಗಿದಳು:

"ಬೇಸಗೆಯ ಹೊಳೆಯಾದುದೌ, ಕೈಕೆ, ನಿನ್ನ ಸಿರಿಯುಂ
ನಿನ್ನ ಸೌಂದರ್ಯದಂತೆ. ಬಂಡನೀಂಟಿದ ಬಳಿಕಮಾ
ಬಂಡುಣಿಗೆ ಹೂವಿನ ಗೊಡವೆಯೇಕೆ? ಅಂತೆವೊಲ್
ದಶರಥಗೆ ನೀನಾದೆಯೌ. ಮಗಳೆ ಪೇಳ್ವೆನಿದೊ
ದುರ್ವಾರ್ತೆಯಂ. ಕೇಳ್ವದಟು ನಿನಗಿಹುದೆ? ಅಯ್ಯೊ,
ವಂಚಕರ ಸಂಚಿನಿಂದೆಮ್ಮ ಭರತಂಗೀ ನೆಲಂ
ಪಳುವಾಯ್ತೆ? ನಾವಿರ್ದರಿರ್ದುಮೇಂ? ಪೇಳ್, ಮುಗ್ಧೆ!
ಸನ್ನಿಹಿತಮಾದೀ ವಿಪತ್ತನರಿತುಂ ಬರಿದೆ
ಕುಳಿತಿಹರೆ ಮತಿಯಿರ್ಪ ಮಂದಿ? ನಿನಗರಿಯದೆಯೆ
ಮಸೆದಿಹರು ನಿನ್ನ ಕೊರಳಂ ಕೊಯ್ವ ಕತ್ತಿಯಂ!
ನಿನ್ನ ದುಃಖವೆ ದುಃಖಮೆನಗೆ; ಸುಖಮೆಯೆ ಸುಖಂ;
ಪೆರತಿಹುದೆ ಪೇಳಕ್ಕ? ದಶರಥ ಪ್ರೇಮಮುಂ
ಭಾಗ್ಯಕೆಣೆಯಿಲ್ಲೆಂದು ತಿಳಿದ ನೀನಲ್ಪಮತಿ!
ಕ್ರೌರ್ಯದಲಿ ರಾಕ್ಷಸರ ಮೀರ್ದುದೌ ಕ್ಷತ್ರಿಯ ಕುಲಂ.
ಕ್ಷತ್ರಿಯ ಕುಲವರೇಣ್ಯನಾ ದಶರಥಂ? ಸವಿನುಡಿಯ
ಕಳ್ಳೀಂಟಿ ಮರುಳ್ಗೊಂಡೆಯಮ್ಮ ನೀನಾತಂಗೆ:
ದಿಟದೊಲ್ಮೆ ಕೌಸಲ್ಯೆಗಾಯ್ತು; ಹುಸಿ ನಿನಗಾಯ್ತು.
ಭರತನನುಪಾಯದಿಂ ನಿನ್ನ ತೌರಿಂಗಟ್ಟಿ, ಕೇಳ್,
ಪಟ್ಟಗಟ್ಟುವನಂತೆ ನಾಳೆ ರಾಮುಂಗೆ! . . . ."

ಇಷ್ಟೆಲ್ಲಾ ಬಣ್ಣಗೊಟ್ಟು ಬಣ್ಣಿಸಿದರೂ ಕೈಕೆಯ ಮುಖ ಅರಳಿತಂತೆ. ಸುವಾರ್ತೆ ಯನ್ನು ಕೇಳಿದ ಸಂತೋಷದಿಂದ ತನ್ನ ಕೊರಳ ಸರವನ್ನೇ ತೆಗೆದು ಮಂಥರೆಗೆ ನೀಡಿ

"ನಿನಗಿದೊ ಕೊಡುಗೆ, ಶುಭವಾರ್ತೆಯಂ ತಂದುದಕೆ,
ರಾಮನೇಂ? ಭರತನೇಂ? ಮಕ್ಕಳಿರ್ವರುಮೆನ್ನವರ್!"

ಎಂದಳು. ಮಂಥರೆಯ ದುರಾಲೋಚನೆಯ ಬಿಸಿಯುಸಿರಿಗೆ ಹಿಮದ ನೀರನ್ನೆರಚಿ

ದಂತಾಯಿತು. ಆದರೆ ಆ ತಂಪಿನಿಂದ ತಣ್ಣಗಾಗುವಳೇ ಅವಳು? ಅವಳ ಸಿಟ್ಟು ನೆತ್ತಿಗೇರಿ, ರಾಣಿ ನೀಡಿದ ಮಣಿಹಾರವನ್ನು ನೆಲಕ್ಕೆ ಅಪ್ಪಳಿಸಿ ನುಡಿದಳು

"ಸಾಕು, ನಿಲ್ಲಿಸು. ಮೂರ್ಖೆ ;
ಲೇಸಾಯ್ತು ನಿನ್ನ ಮತಿ! ಬಹುಕಾಲಮರಮನೆಯ
ಸುಖಸೋಮಪಾನಮಂಗೈದು ಪಲ್ಲಟವಾಯ್ತೆ
ಸದ್ಬುದ್ಧಿ? ಪೆತ್ತ ಮಗುವನೆ ತಿಂಬ ರಕ್ಕಸಿಯ
ಪಾಂಗಿನಿಂದಾಡುತಿಹೆ: ನಿನ್ನ ಕಂದಗೆ ನೀನೆ
ಮಿಳ್ತು. ರಾಮಾಭಿಷೇಕಂ ನಿನಗೆ ಪ್ರಿಯವಾರ್ತೆಯೇ?
ವೈರಿ ಬೇರುಂಟೆ ಲೋಕದಿ ಸವತಿಮಗನಿಂ?
ಕೌಸಲ್ಯೆಗೇಂ ಕಿರಿಯೆ ನೀಂ? ಧೀರ ಭರತನೇಂ
ಕೊರತೆ ರಾಮಂಗೆ? ಜನ್ಮಕ್ರಮದಿ ನೋಳ್ಪೊಡಂ?
ಪೇಳ್ವೆನಾಂ, ಕೇಳ್ ಮುಗ್ಧೆ. ಪಡೆವ ಬೇನೆಯೊಳಿರ್ದ್ದೆ.
ನೀನರಿಯೆ! ನಾಲ್ವರೊಳ್ ಭರತನೆಯೆ ದಿಟದಿಂದೆಯುಂ
ಜ್ಯೇಷ್ಠನ್! . . . .
ತೊಳ್ತು ನೀನಪ್ಪೆಯಿನ್ ಮುಂದೆ
ರಾಮನಾಳ್ವಿಕೆಯಲ್ಲಿ, ಕೌಸಲೆಯ ಕಾಲ್ದೆಸೆಯ
ಧೂಳಿಯೋಲ್. . . .
ತನ್ನವೋಲನಿಬರುಂ ಸತ್ಯಮೂರ್ತಿಗಳೆಂದು
ನಂಬಿ ನೀಂ ಕೆಡುವೆ . . . . .
ಗಾಂಪೆ,
ಕೊರಗದಿರ್ ಸಂಚು ಮಿಂಚಿದ ಮೇಲೆ!"

ಎಂದು ಹೇಳಿದುದು ಸಾಲದೆ, ಉರಿಗೆ ನೆಯ್ ಸುರಿದಂತೆ, ಹಿಂದಿನ ರಾತ್ರಿ ತಾನು ಕಂಡ ಕೆಟ್ಟಕನಸನ್ನು ಚೆನ್ನಾಗಿ ವಿವರಿಸಿದಳು!

ಎಲ್ಲವನ್ನು ಕೇಳುತ್ತಾ ಮೌನವಾಗಿದ್ದ ಕೈಕೆಯ ಮನೋಮಂದಿರದಲ್ಲಿ ಮೂಡಿತು ತೌರಿನಲ್ಲಿದ್ದ ತನುಜನ ಮೂರ್ತಿ. "ನೆನೆದು ಮೆಲುಕಾಡಿದಳ್ ಮಂಥರೆಯ ಮಾತೆಲ್ಲಮಂ." ಪರಿಣಾಮವಾಗಿ ಹೃದಯ ಮುರಿದು ದುಃಖ ಒತ್ತರಿಸಿ ಬಂದಿತು. ಕೊರಳು ಗದ್ಗದವಾಗಿ ನುಡಿಯಲಾರದಿದ್ದಾಗ, ಆ ಸಂದರ್ಭವನ್ನೇ ಉಪಯೋಗಿಸಿಕೊಂಡು ಕುಬ್ಜೆ ತನ್ನ ಮಾತನ್ನು ಮುಂದುವರಿಸಿದಳು—

"ಶತ್ರುಘ್ನ ನಿಲ್ಲಿರ್ದೊಡಾತನುಂ ಪಟ್ಟಕ್ಕೆ
ವಿಘ್ನ ವೊಡ್ಡುವನೆಂದು ಭರತನೊಡವೆರಸಟ್ಟಿ
ಕಳೆದರಮ್ಮಾ, ಕೈಕೆ: ಮುಳ್‌ಬಳ್ಳಿ ಪೆರ್ಮರಕೆ

> ಪೆಣೆದದಂ ಕಡಿಯಲಿಡೆಗೊಡದಂತೆ, ಲಕ್ಷ್ಮಣಂ
> ರಕ್ಷೆ ತಾನಲೆ ಕೌಸಲೆಯವಂಗೆ. ಭರತನಂ
> ರಾಮುಂಗೆ ತೊಳ್ತುಗೆಯ್ಸದೆ ಪಳುವಕಾದೊಡಂ
> ಕಳುಹು ; ದಯೆದೋರು. ನಾನವನೊಡನೆ ಪೋದಪೆನ್
> ಶುಶ್ರೂಷೆಗೆಯ್ಯೆ. ಭಿಕ್ಷೆಯಿದೆನಗೆ ನಿನ್ನಿಂದೆ !"

ಹೀಗೆಂದು ನುಡಿದು ನಿರಾಸಕ್ತಳೆಂಬಂತೆ, ಅಲ್ಲಿಂದ ತೆರಳುತ್ತಿದ್ದ ಮಂಥರೆಯನ್ನು ಕೈಕೆ ಎದ್ದುಬಂದು ಬಿಗಿದಪ್ಪಿದಳು—"ಮುಳುಗುವಾತಂ ಪ್ರಾಣ ರಕ್ಷಣೆಗೆ ಮೊಸಳೆಯುಂ ತಬ್ಬುವೋಲಂತೆ"! ತನ್ನ ಮಾತಿನ ಮೋಡಿಗೆ ಸಂಪೂರ್ಣ ವಶವಾದಳೆಂದು ತಿಳಿದ ಮಂಥರೆ ಮುಂದುವರಿಸಿದಳು—ಮುಂದಿನ ವಿಚಾರ ಧಾರೆಯನ್ನು :

> "ಬರಿ ಅಳುವಿನಿಂದೇನಹುದು ?
> ಮೇಲೇಳೇಳು. ಕಾರ್ಯಸಾಹಸಿಯಾಗು ! ವೀರಸತಿ,
> ನೀಂ ಮರೆತೆಯಾದರಿಂದೊ ನೆನೆವೀವೆನಾಂ. ನೆನೆ, ಮಗಳೆ,
> ನೀನಂದು ನನಗೊರೆದ ಗೋಪ್ಯಮಂ, ದಶರಥಂ
> ನಿನ್ನ ಚೆಲ್ವಿಂಗೋತು ಸೊಬಗಿಗಡಿಯಾಳಾಗಿ
> ಮದುವೆಯಾಗುವ ಮೊದಲ್ ನಿನಗಿತ್ತ ಭಾಷೆಯಂ."

ಸಮಸ್ತ ಐಶ್ವರ್ಯವನ್ನು ದುರ್ವ್ಯಸನದಲ್ಲಿ ಕಳೆದುಕೊಂಡು ಕಡು ಬಡವನಾಗಿ ಬಿಕ್ಕೆ ಬೇಡಿ, ಹೊಟ್ಟೆಗೂ ಇಲ್ಲದೆ ಹಸಿವಿನಿಂದ ಬಳಲಿ ನಿದ್ದೆಹೋದವನ ಕನಸಿನಲ್ಲಿ ಯಕ್ಷನೊಬ್ಬನು ಬಂದು ಅವನನ್ನು ಬಾ ಎಂದು ಕರೆದೊಯ್ದು ತಳತಳನೆ ಹೊಳೆವ ಹೊನ್ನಿನ ಹಳದಿ ರಾಶಿಯನ್ನು ತೋರಿದರೆ, ಕಣ್ಣುಬಿಟ್ಟ ಕಡು ದರಿದ್ರ ವಾಸ್ತವವಾಗಿಯೂ ಆ ನಿಧಿ ರಾಶಿಯನ್ನು ನೋಡಿದಾಗ ಉಂಟಾಗುವ, ಎದೆಯೇ ಬಿರಿಯುವಂತಹ ಸಂತೋಷ ಕೈಕೆಗೆ ಆಯಿತಂತೆ, ಮಂಥರೆಯ ಮಾತಿನ ಗತಿಯನ್ನು ಆಲಿಸಿದಾಗ.

ಜಗತ್ತೇ ಮುಟ್ಟಲೂ, ನೋಡಲೂ ಕೂಡ ಹೇಸಿ ಹಿಂಜರಿಯುತ್ತಿದ್ದ ಆ ವಿಕಾರ ರೂಪದ ಮಂಥರೆಯ ವಕ್ರಗಾತ್ರವನ್ನು, ಸೌಂದರ್ಯನಿಧಿಯಾದ ದಶರಥೇಂದ್ರನ ಮೆಚ್ಚಿನ ಮಡದಿ, ತಬ್ಬಿಕೊಂಡಳಂತೆ !

> "ಕಂಗೆಟ್ಟನಗೆ ದಾರಿ ತೋರ್ದೆಯಾ
> ಓ ನನ್ನ ಭಾಗ್ಯದೇವತೆ ; ಮರಳಿ ಹಡೆದೆಯಾ,
> ನೀನೆನ್ನ ತಾಯಿ ! ನೀಂ ತೊರೆಯಲಿನ್ನಾರೆ ಗತಿ
> ಪರದೇಸಿಯೆನಗೆ ? ಕಣ್ಣಿರ್ದುಮಾನಿನ್ನೆಗಂ
> ಕುರುಡಿಯಾಗಿರ್ದೆನಾ . . . . ."

ಎಂದು ಆಕೆಯನ್ನು, ಆಕೆಯ ಮಾತುಗಳನ್ನು ಕೊಂಡಾಡಿದ ಕೈಕೆಯ ಮನಸ್ಸಿಗೆ ಮಂಥರೆಯ ಕುರೂಪು ಕೂಡ ಮೋಹಕವಾಯಿತು.

ಹೇಳುತ್ತಾಳೆ ಕೈಕೆ :

" ನೋಡಿತ್ತನೋಡೆನ್ನನಃ
ಇಂದೆನಿತು ಚಾರುರೂಪಿಣಿಯಾಗಿ ತೋರುತಿಹೆ
ನೀನೆನಗೆ. ಲೋಕದೊಳ್ ಹೊರಮೆಯ್ಯನೀಕ್ಷಿಸುತೆ
ಸೊಬಗನಾರೈವವರ್ ಬರಿಯ ಬೆಪ್ಪುಗಳಲ್ತೆ ?
ನಿಜಮಪ್ಪ ಸೌಂದರ್ಯಮಾತ್ಮಕ್ಕೆ ಸೇರ್ದುದೆನೆ
ನಿನಗಿನೇಂ ಸುಂದರಿಯರೊಳರೆ ? ಗೂನಿರ್ದರೇಂ ?
ಚಂದನದ ಕೊರಡು ಮುರುಟಿರ್ದರೇನೂನಾಯ್ತೆ
ಗಂಧಕ್ಕೆ ? "

ಎಂದು ಮಂಥರೆಯ ಒಳಹೊರ ಮೈಗಳಲ್ಲಿ ಸೌಂದರ್ಯವನ್ನು ಹೊಸದಾಗಿ ಕಂಡುಕೊಂಡ ಕೈಕೆ—ಸರ್ವ ಸೌಂದರ್ಯನಿಧಿ, ಫಣಿವೇಣಿ, ಸುಶ್ರೋಣಿ, ದಶರಥೇಂದ್ರನ ರಾಣಿ !—ಆ ಕುರೂಪತಾ ಮುದ್ರೆಯನ್ನು ಮುದ್ದಾಡಿದಳಂತೆ ![4]

ಮೀನು ಸಿಕ್ಕಿತೆಂದು ಖಂಡಿತವಾದಮೇಲೆ ಗಾಣದ ನೇಣನ್ನು ಕೊಂಚ ಸಡಿಲು ಬಿಡುವಂತೆ ಮಂಥರೆ ಹೇಳುತ್ತಾಳೆ : ನಿಶ್ಚಯಿಸುವ ಮುನ್ನ ಮತ್ತೊಮ್ಮೆ

---

[4] ಜನ್ನ ಕವಿಯ ಯಶೋಧರ ಚರಿತ್ರೆಯಲ್ಲಿ, ಕಂಠಮಾಧುರ್ಯಕ್ಕೆ ಮಾರು ಹೋದ ರಾಣಿ ಅಮೃತಮತಿ, ಕಂಡು ಕೇಳಿ ಅರಿಯದ,

ಮುದುಗರಡಿಯ ಮುದುದೊವಲಂ
ದದ ಕರಿಯಂ ತಾಳಕಾಯ ಮೋಳಿಗೆಯೊಂದಂ |
ದದ ಮುರುಡನಷ್ಟವಂಕಂ
ಮೊದಲೊಣಗಿದ ಕೂನಗೊರಡಿನಂದದ ಕೊಂಕಂ ||

ಕಱಿದೊವಲ, ಕುಱುಗಣ್ಣ, ಕೂನಬೆನ್ನ, ಕಾಲ್ ಮಱೆಯಿಸುವುದು ಟೊಂಕಮುಱಿದ ಕತ್ತೆಯ ಕಾಲಂ—ಹೀಗಿದ್ದ ಬದಗನನ್ನು ಒಲಿಯುವುದಕ್ಕೆ (ಅವಳು) ಹೇಳಿದ ಕಾರಣ :

ಕರಿದಾದೊಡೆ ಕತ್ತುರಿಯಂ
ಮುರುಡಾದೊಡೆ ಮಲಯಜಂಗಳಂ ಕೊಂಕಿದೊಡೇಂ
ಸ್ಮರಚಾಪಮನಿಳಿಕಯ್ವರೆ
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ !
ಒಲವಾದೊಡೆ ರೂಪಿನ ಕೋಟಲೆಯೇವುದೊ
ಇಂದೆನಗೆ ಆತನೆ ಕುಲದೈವಂ ಕಾಮದೇವನಿದ್ರಂ ಚಂದ್ರಂ !

ಚೆನ್ನಾಗಿ ಪರ್ಯಾಲೋಚಿಸು. ದುಡುಕಬೇಡ. ನಾನು ಹೇಳಿದೆನೆಂದು ಈಗ ಕೇಳಿ ಆಮೇಲೆ ನನ್ನನ್ನು ದೂರಬೇಡ. ನಿನ್ನ ಭರತನ ಮೇಲಿನ ಮಮತೆಯಿಂದ ಇಷ್ಟು ಹೇಳಿದೆನೆ ಹೊರತು, ರಾಮನ ಮೇಲಿನ ದ್ವೇಷದಿಂದಲ್ಲ. "ರಾಮಂ ಬಾಳ್ಗೆ"! ಆದರೆ, ರಾಮ ಅಯೋಧ್ಯೆಯಲ್ಲಿಯೇ ಉಳಿದರೆ, ಭರತನಿಗೆ ರಾಜ್ಯ ಸಿಕ್ಕಿದರೂ ದಕ್ಕುವುದಿಲ್ಲ. ಆದ್ದರಿಂದ ರಾಮ ಹದಿನಾಲ್ಕು ವರ್ಷ ಕಾಡಿಗೆ ಹೋಗಬೇಕು. ಆಗ ನಿನ್ನ ಕುಮಾರನಿಗೆ ನೆಲದ ಸಿರಿ ಬರಬೇಕು. ಹೀಗೆ ವರಗಳನ್ನು ಜೋಡಿಸಿಕೊ ಎಂದು ಮತ್ತೆ ಕೈಕೆಯನ್ನು ಚೆನ್ನಾಗಿ ತಯಾರುಮಾಡಿದಳು. ಈಗ ಬೋಧೆ ಚೆನ್ನಾಗಿ ನಾಟಿ, ರಾಣಿ ಕೋಪಾಗಾರವನ್ನು ಹೊಕ್ಕಳು.

ಕೈಕೆ ದಶರಥನ ಪ್ರಾಣಕ್ಕೆ ವಿಷವನ್ನೆರೆಯುವಂತೆ ವರಗಳೆರಡನ್ನು ಕೊಡು ಎಂದು ನಿಷ್ಠುರವಾಗಿ ನುಡಿದಾಗ ಮೊದಲು ದಶರಥ ಅದನ್ನು ನಂಬಲೇ ಇಲ್ಲವಂತೆ,

"ತೆಗೆ ತೆಗೆ, ಪುಸಿಯದಿರ್! ಪುಣ್ಯರೂಪದಿಂ
ಪಾಪಮೇನುದಿಸುವುದೆ? ಹೊಮ್ಮುವುದೆ ಕೈಕೆಯಿಂ
ಮಂಥರೆಯ ವಿಕೃತರೂಪಂ? ಚಿತ್ತವಿಭ್ರಾಂತಿ
ದಿಟಮೆನಗೆ!"

ಎಂದು ಭ್ರಾಂತಿಗೊಂಡ ದಶರಥ. ಆದರೆ ಅಲ್ಲಿ ನಿಜವಾಗಿಯೂ ಮಂಥರೆಯಷ್ಟೇ ಕ್ರೂರ ಕುರೂಪ ವಕ್ರವಚನಗಳು ಕೈಕೆಯ ಬಾಯಿಂದ ಹೊರಬಿದ್ದಿದ್ದುವು—ದಶರಥ ನಂಬಲೂ ಅಸಾಧ್ಯವಾಗುವಂತೆ. ಕೋಮಲತೆಯಿಂದ ಕ್ರೌರ್ಯ ಹುಟ್ಟುವುದೆ? ಹುಟ್ಟ ಬಹುದು ಎಂದು ಕೈಕೆ ತೋರಿಸಿಕೊಟ್ಟಳು. ಹೊರಸೌಂದರ್ಯದಿಂದ ಒಳಸೌಂದರ್ಯ ವನ್ನು ಅರಿಯ ಹೋಗುವುದು ಪೆದ್ದುತನವಲ್ಲವೆ? ಕೈಕೆ ಮಂಥರೆಗೆ ಹಿಂದೆ ಹೇಳಿದ ಮಾತು ಅದೆಷ್ಟು ನಿಜ? ವಕ್ರರೂಪದಲ್ಲಿ ಸೌಂದರ್ಯವನ್ನು ಕಂಡುಕೊಂಡ ಕೈಕೆಯ ಕಾಮಾಲೆಯ ಕಣ್ಣು, ಸೌಂದರ್ಯನಿಧಿಯಾದ ತನ್ನ ಹೊರಚೆಲುವಿನ ಹಿಂದೆ ಎಂತಹ ನಿಷ್ಠುರತೆ, ಕ್ರೌರ್ಯ, ದುರಾಶೆಗಳ ತವರಿದೆ ಎಂಬುದನ್ನು ಕಾಣಲಿಲ್ಲವಲ್ಲವೆ? ಮಣಿಹಾರವೆಂದು ಕಂಠಕ್ಕೆ ಸೂಡಿದ ಮಾಲೆಯೇ ನೀಲನಾಗಿಣಿಯಾಗಿ ಕಚ್ಚಿ ವಿಷವೂಡಿದಂತಾಯಿತು—ದಶರಥ—ಕೈಕೆಯರ ಪ್ರೇಮ ಪ್ರಪಂಚ.

ಹೀಗೆ ಇಲ್ಲಿ ಕೈಕೆಯನ್ನು ಸಿದ್ಧಗೊಳಿಸಿ, ದಶರಥ ಆಕೆಯಲ್ಲಿಗೆ ಬಂದು ಸಿಕ್ಕಿ ನರಳುತ್ತಿರುವಾಗ, ಅಲ್ಲಿ ಮಂಥರೆ ಕೌಸಲ್ಯಾ ಸಮೇತನಾಗಿದ್ದ ಶ್ರೀ ರಾಮನೆಡೆಗೆ ಧಾವಿಸಿ

"ರೋದಿಸುತೆ
ಕಾಲ್ವಿಡಿದಳಾತನಂ. ಕನಿಕರಿಸಿ ಕೈವಿಡಿದು
ತನ್ನ ನೆತ್ತಿದ ಕರುಣೆಗಳ ಬಲ್ಲಹಂ ಪ್ರಶ್ನಿಸಲ್,

ಗದ್ಗದಿಸಿ ತೊದಲಿದಳ್ ಸತ್ಯಮನಸತ್ಯದಿಂ
ಬೇರ್ಪಡಿಸಲಸದಳಂ ತಾನಪ್ಪವೋಲ್."

ಇದನ್ನು ಕೇಳಿ ಬೆಚ್ಚಿದ ಕೌಸಲ್ಯೆಯನ್ನು ಸಮಾಧಾನಮಾಡಿ, ನಿಜ ಸ್ಥಿತಿಯನ್ನು ಖುದ್ದಾಗಿ ತಾನೇ ಅರಿಯಲು ಕಾತರನಾಗಿ ರಾಮ "ದಶರಥನ ದುಃಸ್ಥಿತ ದುರಂತ ಸನ್ನಿಧಿಗೆ" ಧಾವಿಸಿದನು. ಅಲ್ಲಿ ತಂದೆ ಮೂರ್ಛಿತನಾಗಿದ್ದು, ಕಿರಿ ತಾಯಿ ಅಳುತ್ತಾ ಕುಳಿತಿದ್ದಳು! ಆಗಲೂ ರಾಮನಿಗೆ ಕೈಕೆಗೆ ದಶರಥನಿಂದ ಸಲ್ಲಬೇಕಾಗಿರುವ ಆ ಎರಡು ವರಗಳ ವಿಷಯವನ್ನು ನಿರ್ದಾಕ್ಷಿಣ್ಯವಾಗಿ ನುಡಿದವಳು ಮಂಥರೆಯೇ.

ಪಿತೃವಚನ ಪರಿಪಾಲನೆಯೆ ತನಗೆ ಉತ್ತಮವೂ ಪ್ರಥಮವೂ ಆದ ಧರ್ಮವೆಂದು ಹೇಳಿದ ರಾಮ ಕಾಡಿಗೆ ಹೊರಡಲು ಸಿದ್ಧನಾದನು! ಆಗ ಕುಬ್ಜೆ ಸಂಭ್ರಮದಿಂದ ನಾರುಡೆಯನ್ನು ತಂದಿತ್ತು, ರಾಮ ಸೀತೆ ಲಕ್ಷ್ಮಣರು ಅದನ್ನು ಧರಿಸುವ ಸಂಕಟ ಸನ್ನಿವೇಶವನ್ನು ಹತ್ತಿರದಲ್ಲೇ ನಿಂತು ನೋಡಿದಳು!

ನಯನಾಭಿರಾಮನಾದ ರಾಮನನ್ನು ನೋಡಲು ಹಾತೊರೆದ ದಶರಥ, ಕಾಡಿಗೆ ತೆರಳಿದ ಅವನನ್ನು ಕಾಣದೆ ಮರುಗಿ ಮರುಳನೇ ಆದನು. ಯಾರಿಗೂ ಅವನನ್ನು ತಡೆಯುವುದು ಕಷ್ಟವಾಯಿತು. ಎಲ್ಲರೂ ಹೆದರಿ ದೂರನಿಂತಾಗ "ವಿಕೃತಿಗೆತ್ತಣಂ ಬೀಭತ್ಸ ಭೀತಿ?" ಎಂಬಂತೆ ಗೂನಿ ಮಂಥರೆ ರಾಜನಿಗೆ ನೆರವೀಯಲು ಓಡಿದಳು. ಆದರೆ ಕೈಕೆಯ ಕುಬ್ಜೆ ತನ್ನೆಡೆಗೆ ಬರುವುದರಲ್ಲೇ ದಶರಥನಿಗೆ ಮೃತ್ಯು ಬಂದಡರಿತು. ಆ ವಿಕೃತಿಯ ಎದುರಿಗೆ ಮೃತ್ಯುವೂ ಅವನಿಗೆ ಚೆಲುವಾಯಿತು!

ಮಂಥರೆಯ ಜೀವನ ನಾಟಕದಲ್ಲಿ ಒಂದು ದೊಡ್ಡ ಘಟ್ಟ ಇಲ್ಲಿಗೆ ಮುಗಿಯಿತು. ಆಕೆಯ ಹುಟ್ಟಿನ ಗುರಿ ಬಹುಶಃ ಇಲ್ಲಿಗೆ ಸಾಧಿತವಾದಂತಾಯಿತು. ಭರತ—ಕೈಕೆಯರ ಮೇಲಿನ ಮಂಥರೆಯ ಅತೀವ ಮಮತೆ, ಕೌಸಲ್ಯೆ ತೋರಿದ ತಿರಸ್ಕಾರ, ಹುಟ್ಟಿದಂದಿನಿಂದ ಲೋಕ ಆಕೆಯನ್ನು ನಡೆಸಿಕೊಂಡ ರೀತಿ (ಅದಕ್ಕೆ ಆಕೆಯ ಕುರೂಪವೇ ಕಾರಣವಾದರೂ), ಕೈಕೆ—ಆಕೆಯ ತಂದೆ ಆಕೆಯ ಮೇಲೆ ತೋರಿದ ಪ್ರೀತಿ, ರಾಮನ ಸೌಜನ್ಯ, ದಶರಥನ ಮೋಹ—ದೌರ್ಬಲ್ಯ, ಕೈಕೆಯಲ್ಲಿ ಸುಪ್ತವಾಗಿಯಾದರೂ ಅಡಗಿದ್ದ ಸವತಿ ಮತ್ಸರ, ಮಗನ ಮೇಲಿನ ಮೋಹ, ಅಧಿಕಾರ ಐಶ್ವರ್ಯಗಳ ದಾಹ ಹೀಗೆ ಹಲವು ಕಾರಣಗಳು ಒಟ್ಟಿಗೇ ಸೇರಿ, ಮಂಥರೆಯ ಮೂಲಕ ವಿಧಿ ಸಂಚುಹೂಡಿ ನಡೆಸಿತು ಈ ನಾಟಕವನ್ನು!

ಇನ್ನು ಮುಂದಿನದು ಇದರ ಪರಿಣಾಮವಾಗಿ ಮಂಥರೆಗೆ ಒದಗಿದ ಶಿಕ್ಷೆ. ಅದರಿಂದ ಆಕೆಯ ಮನದಲ್ಲಿ ಮೂಡಿದ ಪಶ್ಚಾತ್ತಾಪ ಮತ್ತು ಅದರ ಪರಿಣಾಮವಾಗಿ ಹುಟ್ಟಿದ ಹೊಸ ಗುರಿ ಮತ್ತು ಅದರ ಸಾಧನೆಯ ಮಾರ್ಗದಲ್ಲಿ ಒದಗಿದ

ಆಕೆಯ ದಾರುಣ ಅಂತ್ಯ. ಆ ಒಳಗಿನ ಪಶ್ಚಾತ್ತಾಪದ ಬೆಂಕಿಯೇ, ಹೊರಗೂ ಜ್ವಾಲೆಯಾಗಿ ಬಂದು ಮಂಥರೆಗೆ ಕುಬ್ಜೆಯ ಜನ್ಮದ ಅಂತ್ಯವನ್ನು ತಂದಿತು. ಈ ಮಂಥರೆಯ ಅಂತ್ಯ ಚಿತ್ರ ಶ್ರೀ ರಾಮಾಯಣ ದರ್ಶನದಲ್ಲಿ ಚೆನ್ನಾಗಿ ಚಿತ್ರಿತ ವಾಗಿದೆ—ಕವಿಸಹಜವಾದ ಕರುಣವಾಣಿಯಿಂದ.

ಪಿತೃ ಮರಣ ಸೂಚಕವಾದ ಕೆಟ್ಟ ಕನಸನ್ನು ಕಂಡ ಭರತ ತನ್ನ ಸೋದರ ಮಾವನ ಊರಿನಿಂದ ತಮ್ಮನೊಡಗೂಡಿ, ತಂದೆಗೆ ಏನು ಕೇಡು ಅಡಸಿತೋ ಎಂಬ ದಿಗಿಲು ಧಾವಂತಗಳಿಂದ ಓಡಿಬಂದ ಅಯೋಧ್ಯೆಗೆ. ದಶರಥನನ್ನೂ ಸೀತಾ ಲಕ್ಷ್ಮಣ ರನ್ನೂ ಕಳೆದುಕೊಂಡು ಯಾವ ಮಂಗಳ ಸೂಚನೆಯೂ ಇಲ್ಲದ ಅಯೋಧ್ಯೆಯನ್ನು ಹೊಕ್ಕಾಗ "ಹಾಳು ಹಂಪೆಯ ಹೊಕ್ಕ ಕನ್ನಡಿಗರಂತಾಗಿ" ಸೋದರರು ಕುದಿ ವೆದೆಯಿಂದ ಅರಮನೆಗೆ ಧಾವಿಸಿ, ಒಂದಾದ ಮೇಲೊಂದು ದುಃಖ ವಾರ್ತೆಯನ್ನು ಕೇಳಿ ಮಮ್ಮಲ ಮರುಗಿದರು. ಅದರ ಮೂಲವನ್ನು ಸುಲಭವಾಗಿ ಶೋಧಿಸಿದರು. ಇತ್ತ ಮಂಥರೆ ಭರತ ಬಂದನೆಂಬ ಸುವಾರ್ತೆಯನ್ನು ಕೇಳಿ ಸಂತಸದಿಂದ ಕುಣಿದು ತೇಗಿ, ಹೆಮ್ಮೆಯಿಂದ ಭರತನಿಗೆ ತಾನು ತಂದುಕೊಟ್ಟ ಸಂಪತ್ತನ್ನು ಕಣ್ಣಾರೆ ಕಂಡು ನಲಿಯಲು, ಸಂಭ್ರಮದಿಂದ ಒಡತಿಯ ಅರಮನೆಯ ಕಡೆಗೆ ಆತುರದಿಂದ ಧಾವಿಸುತ್ತಿದ್ದಳು !

ಮಂಥರೆಯ ಕಥೆಯನ್ನು ವಿಸ್ತಾರವಾಗಿಯೇ ಅರಮನೆಯವರಿಂದ ಆಗಲೇ ತಿಳಿದುಕೊಂಡಿದ್ದ ಶತ್ರುಘ್ನ ಕೋಪಾಗ್ನಿಯೇ ರೂಪುವೆತ್ತಂತೆ ಅಲ್ಲೇ ಎದುರಿಗೆ ಬರುತ್ತಿದ್ದ. ಅದು ತಿಳಿಯದೆ ಮಂಥರೆ ಅವನನ್ನೇ ಕೇಳಿದಳು. "ಭರತನೆಲ್ಲಿದನಯ್ಯ ?" ಎಂದು. ಅಡವಿಯ ಅಗ್ನಿಯನ್ನು ತರಗೆಲೆಯ ರಾಶಿ ತಾನೇ ತೊಡೆಯೇರಲು ಆಹ್ವಾನ ವಿತ್ತಂತಾಯಿತು ಈಕೆಯ ಪ್ರಶ್ನೆ. ಮೊದಲೇ ಕೋಪೋದ್ರಿಕ್ತನಾಗಿದ್ದ ಶತ್ರುಘ್ನ ಗೂನಿಯನ್ನು ಎದುರಿಗೇ ಕಂಡಾಗ ಕೋಪ ಮತ್ತೂ ಕೆರಳಿ, ಅಗ್ರಜರು ಮತ್ತು ತಂದೆ ಇವರನ್ನು ನೆನೆದು

"ರಾಮನೆಲ್ಲಿದನೆಲ್ಲಿ
ಲಕ್ಷ್ಮಣಂ ? ಮತ್ತೆ ಪೇಳೆಲ್ಲಿಗಟ್ಟಿದೆ ದೇವಿ
ಸೀತೆಯಂ ? ನೀಚೆ, ಪೇಳೇಕಯ್ಯನಂ ಕೊಂದೆ ?
ಪೇಳ್ ಪೇಳ್, ಏಕೆ ರವಿ ಕುಲದ ಸುಖಮಂ ತಿಂದೆ,"

ಎಂದು ಗದ್ದರಿಸಿ, ಮುದುಕಿಯ ಕೇಶವನ್ನು ಜಗ್ಗಿ ಕಲ್ನೆಲಕೆ ಆಕೆಯನ್ನು ಅಪ್ಪಳಿಸಿ ಕುಕ್ಕಿದನು ! ನೆತ್ತರು ಬರುವಂತೆ ಒದ್ದನು. ಗೂನು ಬಿರಿಯುವಂತೆ ಗುದ್ದಿದನು. ಕೇವಲ ಅನಿರೀಕ್ಷಿತವಾಗಿ ಬಂದೆರಗಿದ ಈ ಕ್ರೂರ ಶಿಕ್ಷೆಗೆ ತತ್ತರಿಸಿದ ಮಂಥರೆ ಬಿದ್ದ ಏಟಿಗೆ, ತಡೆಯಲಾರದೆ ಚೀರಿದಳು. ಅಲ್ಲೇ ಹಿಂದೆ ಬರುತ್ತಿದ್ದ ಭರತನನ್ನು

ನೋಡಿ ರಕ್ಷಿಸೆಂದು ಒದರಿದಳು—ಅವನಿಂದ ಅನುಕಂಪ, ಸಹಾಯ ದೊರೆತೇತೀರು ವುದೆಂಬ ಖಂಡಿತ ಹೃದಯದಿಂದ! ತನ್ನನ್ನು ಅಕ್ಕರೆಯ ತೊಟ್ಟಿಲಲ್ಲಿ ಹುಟ್ಟಿದಂದಿನಿಂದಲೂ ತೂಗಿ ಸಲಹಿದ ದಾದಿಯ ದಾರುಣ ದನಿ ಭರತನ ಎದೆಯನ್ನು ಕೊರೆಯಿತು. ಕರುಣೆಯೇನೋ ಉಕ್ಕಿತು. ಆದರೆ ಹತ್ತಿರ ಬಂದು ಆಕೆಯ ಮೊಗವನ್ನು ಕಂಡೊಡನೆ ಅವನೂ ಕನಲುವಂತಾಯಿತು. ಕರುಣೆ—ಕೋಪಗಳ ದವಡೆಯಲ್ಲಿ ಸಿಕ್ಕಿದ ಭರತ

"ನಿಲ್, ಪೊಯ್ಯದಿರ್, ಸೋದರನೆ.
ಪೆಣ್ಗೊಲೆಗೆ ಪೇಸುವಂ ಪಿರಿಯಣ್ಣನದರಿಂದೆಯುಂ
ಬಿಡು ಕೋಪಮಂ. ನಾಯ್ಗೆ ಬಡಿದರದು ಕಚ್ಚಿದಾ
ಗಾಯ ಗುಣಮಪ್ಪುದೇಂ? ದೊಡ್ಡಮ್ಮನೆಡೆಗೆ ಬಾ!"

ಎಂದು ಹೇಳಿ ಹೊಡೆತವನ್ನೇನೋ ತಪ್ಪಿಸಿದರೂ, ಈ ಕಿಡಿನುಡಿಗಳನ್ನು ಗೂನಿಯ ಮೇಲೆ ಉಗುಳಿ ಹೋದನು.

"ತೊಲಗೆಲೆ ಕುರೂಪಿ, ಓ, ತೊಲಗು ಕಣ್ಬೊಲದಿಂದೆ
ತೊಲಗಾಚೆ, ಪಾಪಿ! ಬಳಿ ಸಾರದಿರ್; ನಿಲ್ಲದಿರ್
ಅಯ್ಯೊ ನಂಬುವೆನೆಂತುಟೀಯೊಲ್ಮೆವುತ್ತಿನೊಳೆ
ಹಗೆಯ ನಂಜಿನ ಹಾವು ಹೆಡೆಯೆತ್ತಿ ಹೊರಹೊಮ್ಮಿ
ಕಚ್ಚಿತೆಂಬುದನಯ್ಯೊ? ನಿನ್ನೊಳಿಂದಿನವರೆಗೆ
ವಿಕೃತಿಯಂ ಕಂಡೆನಿಲ್ಲಿಂದೇಕೆ ಪಲ್ಗಿರಿದು
ನಿಂದವೋಲಿದೆ ಕುರೂಪತೆಯ ಪೈಶಾಚಿಕತೆ
ಕರ್ಕಶಮೆನಲ್? ದಿಟಂ, ಮನಸಿಗಲ್ಲದೆ ವಿಕೃತಿ
ಬಾಹ್ಯಪ್ರಕೃತಿಗುಂಟೆ? . . . .
. . . . ಮಂಥರೆ, ಬಿಸುಟ್ಟೆನಿದೊ
ನಿನ್ನನೆಂದೆಂದಿಗುಂ. ಜಲಮಂ ತಿರಸ್ಕರಿಸಿ
ಪೊರಮಟ್ಟ ತಾವರೆಯೆರ್ದೆಗೆ ರವಿಯೆ ಗುರುವೈರಿ
ತಾನೆಂತುಟಂತೆ, ಕೇಳ್, ರಾಮನಂ ಬಿಸುಟೆರ್ದೆಗೆ
ಭರತನಹಿತಂ."

ಎಂದು ಹಿಂದಿರುಗಿ ನೋಡದೆಯೇ ಶತ್ರುಘ್ನನೊಡನೆ ಕೌಸಲ್ಯೆಯ ಅರಮನೆಗೆ ಓಡಿದನು! ತಾಯಿಗೂ ಮಗನಿಗೂ ಅದೆಷ್ಟು ಅಂತರ?

ಯಾರನ್ನು ನಂಬಿ ಯಾರಿಗೋಸ್ಕರ ಇಷ್ಟೆಲ್ಲ ಮಾಡಿದಳೋ, ಆತನ ತಿರಸ್ಕಾರವನ್ನು ತಡೆಯದಾಯಿತು ಆ ಕುಬ್ಜೆಯ ಆತ್ಮ! ಭರತನ ಆಗ್ರಹದ ಘಾತಕ್ಕೆ ಆಕೆಯ ಹೃದಯ ಹುಡಿಯಾಯಿತು. ಶತ್ರುಘ್ನನ ಬಿರುಸಿನ ಏಟಿಗೂ ಬೀಳದ ಆಕೆಯ

ದೇಹ, ಈಗ ಎಚ್ಚರದಪ್ಪಿ ನೆಲಕ್ಕುರುಳಿತು—ಇದ್ದ ಒಂದೇ ಸಹಾಯವೂ ಇಲ್ಲವೆಂಬ ಅರಿವಾದಾಗ!

"ತನ್ನಾವ ಪುರುಷಾರ್ಥಕಿನ್ನಾವ ಸಂಪದಕೆ
ಮೇಣ್ ಸುಖಕೆ ಆ ಗೂನಿ ಪೇಳ್ದಳುಪದೇಶಮಂ
ಕೈಕೆಗೆ? ಜನಿಸಿದಂದಿನಿಂ ಪೆರರ ಚೆಲ್ವಿನೊಳೆ
ತನ್ನ ಚೆಲ್ವಂ ಕಂಡೊಲಿದು, ಪೆರರ ಸೊಗದೊಳೆಯೆ
ತನ್ನ ಸೊಬಗಂ ಕಂಡುಮುಂಡುಮಿರ್ದ್ದಾ ದಾಸಿ
ನಚ್ಚಿನೊಡತಿಗೆ ಮತ್ತೆ ಮೆಚ್ಚಿನಾಕೆಯ ಶಿಶುಗೆ
ತೊಳ್ತುಗೆಯ್ಮೆಯ ಪೆರ್ಮೆಗೊಳ್ಪನೆಸಗುವೆನೆಂದು
ಕಜ್ಜಮಂ ಕೈಕೊಂಡೊಡೇಂ ಸ್ವಾರ್ಥದೋಷಮಂ
ಕಾಣ್ಬರಾರಾಕೆಯ ಪರಾರ್ಥತೆಯ ಶುದ್ಧಿಯಲಿ?"

ತಾನೊಲಿದವರಿಗೆ ಕಲ್ಯಾಣವನ್ನು ಮಾಡ ಹೊರಟು, ಅವರಿಗೆ ಶುಭವಾದುದು ಯಾವುದೆಂದು ತಿಳಿಯಲು, ಊಹಿಸಲು, ಸಾಧ್ಯವಾಗುವ ಸಾತ್ವಿಕ ಸತ್ವವಿಲ್ಲದ ಈ ವ್ಯಕ್ತಿಗೆ ಬಂದೊದಗಿದ ನಿರಾಶೆ, ಅನಿರೀಕ್ಷಿತ ಉಗ್ರ ಶಿಕ್ಷೆ ಸಹಿಸಲಸಾಧ್ಯವಾದ ಸಿಡಿಲಾಯಿತು. ಈ ದೈಹಿಕ ಮಾನಸಿಕ ಹೊಡೆತಗಳಿಂದ ಮಂಥರೆಯ ಹೃದಯ ಜರ್ಝರಿತವಾಯಿತು. ಆ ಮಥನದಲ್ಲಿ ಕಂಡುಕೊಂಡಳು ತಾನು ಮಾಡಿದ ತಪ್ಪೇನೆಂದು! ಸ್ವಾರ್ಥವಲ್ಲದಿದ್ದರೂ, ಅತಿಸ್ವಾರ್ಥವೇ ಆಯಿತು ಮಂಥರೆ ಮಾಡಿದ ಆ ಕಾರ್ಯ. ಯಾರ 'ಸ್ವಾರ್ಥ'ಕ್ಕಾಗಿ ಅದನ್ನು ಮಾಡಿದಳೋ, ಅವರೇ ಎದುರು ಬಿದ್ದಾಗ, ಅದು ಅರ್ಥವಾಯಿತು. ಕೈಕೆ-ಮಂಥರೆ ಇವರಿಬ್ಬರ ಸ್ಥಿತಿಯೂ ಶೋಚನೀಯವೆಂದು, ಭರತ ಬಂದಮೇಲೆ, ಇಬ್ಬರಿಗೂ ಚೆನ್ನಾಗಿ ಅರಿವಾಯಿತು! ಕೈಕೆ ಹೇಗೂ ಮಹಾರಾಣಿ, ಭರತನ ತಾಯಿ, ತಪ್ಪೆಸಗಿದರೂ, ದೊಡ್ಡವರ ತಪ್ಪು. ಆದರೆ ದಾಸಿ ಮಂಥರೆಯ ಪಾಡೇನು? ಇನ್ನು ಅವಳಿಗೆ ಆ ಅರಮನೆಯ ಒಳಗಾಗಲೀ, ಹೊರಗಾಗಲೀ ಸ್ಥಾನವುಂಟೆ?

ಮೂರ್ಛೆ ತಿಳಿದೆದ್ದ ಮಂಥರೆಯ ಬಗೆಗೊರಳಿಗೆ ನಿರ್ಜನದ ನೀರವದ ಶೂನ್ಯ ತಾರಜ್ಜು ಸರ್ಪವೇ ಉರುಳಾಯಿತು. ನಿಶ್ಶಬ್ದತಾ ಶವದಂತೆ ಮೇಲೆದ್ದಳು ಮಂಥರೆ! ಸುಯ್ದೆದ್ದಳು, ತನ್ನ ನಂಜನ್ನು ತಾನೆ ಹೀರಲೆಳಸುವ ಕಾಳಸರ್ಪಿಣಿಯಂತೆ! ಆಕೆಗೆ ಆಗೊಂದು ದಿವ್ಯಾಲೋಚನೆ ಹೊಳೆಯಿತು.

"ಹಾ, ತನ್ನ ಕೈಕೆಯ ಮಗುಗೆ,
ತನ್ನ ಜೀವಾನಂದ ಸಾಗರ ಸುಧಾಂಶುವಿಗೆ,
ಭರತದೇವಗೆ ನೆಲದ ಸಿರಿಯಕ್ಕೆ, ಸೊಗಮಕ್ಕೆ,

ಮುಡಿಗೆ ನೇಸರ ಬಳಿಯ ಮಕುಟಮಕ್ಕೆಂದಲ್ತೆ
ರಾಮನನಡವಿಗಟ್ಟಿದೆನ್ ? ಮತ್ತೆ ರಾಮನಂ
ಮನೆಗೆ ಕರೆತಂದೆನಾದೊಡೆ ಕಂದ ಭರತಂಗೆ
ಮುದುವಪ್ಪುದಂತೆಯೆ ಕೈಕೆಗುತ್ಸವಂ.
ಮತ್ತೆ ಮರಳುವುದೆನಗೆ ಮೊದಲಿನಂದದೊಳವರ
ಹಿಂದಣೊಲ್ಮೆಯ ಬಂಡಿನೌತಣಂ !''

ಆಗಲೂ ಕೈಕೆ-ಭರತರನ್ನು ಸಂತೋಷಪಡಿಸುವುದೇ ಆಕೆಯ ಗುರಿ! ಅಂತಹುದು ಆಕೆಯ ಮಮತೆಯ ಸುಳಿಯ ಆಳ. ಅವರ ಒಲುಮೆಯ ಜೇನ್ ಸವಿಯೆ ಆಕೆಯ ಜೀವನದ ತಿರುಳು! ಅದಕ್ಕಾಗಿಯೇ ಆಕೆಗೆ ಬದಕು ಅದರ ಸಾರ್ಥಕ್ಯ!

ಯೋಜನೆ ಬಂದೊಡನೆಯೇ ಅದರ ಬೆನ್ನು ಹತ್ತಿ ಬೇಟೆಯಾಡಿಯೇ ತೀರುವ ಸ್ವಭಾವವಲ್ಲವೆ? ಆಕೆಯ ಜೀವಮಾನದಲ್ಲಿ ಬಂದೊದಗಿದ ಹಿರಿಯ ಏಕಮಾತ್ರ ಆಲೋಚನೆಯನ್ನು ಕೊನೆಯುವರೆಗೂ ಕೊಂಡೊಯ್ದು ಅದರಲ್ಲಿ ಗೆಲವನ್ನು ಪಡೆದರೂ ಅದರ ಪರಿಣಾಮ ಮಾತ್ರ, ಆಕೆಗೆ ವಿರೋಧವೇ ಆಯಿತು! ಈಗ ಅದನ್ನೆ ಮತ್ತೆ ತಿರುಗಿಸುವ ಯೋಜನೆ ಬಂದಾಗ ಹಿಂದೆಗೆಯಲ್ಲಿಲ್ಲ ಮಂಥರೆ—ಕಂದ ಭರತನಿಗೆ ಮುದವಾಗುವ ಕಾರ್ಯವಾದುದರಿಂದ! ಅದು ತನಗೆ ಅವಮಾನವೆಂದು ಬಗೆಯಲ್ಲಿಲ್ಲ ಆಕೆಯ ಮುಗ್ಧ ಮನಸ್ಸು—ಹುಟ್ಟಿದಂದಿನಿಂದ ಅಪಮಾನವೇ ಆಹಾರವಾಗಿ ಬೆಳೆದ ಮಂಥರೆಯ ಕಲ್ಲು ಮನಸ್ಸು!

ರಾಮನನ್ನು ಕಾಡಿನಿಂದ ಮತ್ತೆ ನಾಡಿನರಮನೆಗೆ ಕರೆತಂದರೆ ಭರತನಿಗೆ ಆನಂದ ವಾಗುವುದೆಂದು ಹೊಳೆದ ಕೂಡಲೇ ಮಂಥರೆ, ನಾರುಡೆಯನ್ನು ತಾನೇ ತಂದಿತ್ತು, ಹದಿನಾಲ್ಕು ವರುಷ ಪರ್ಯಂತ ಅಡವಿಯ ಆವಾಸಕ್ಕಾಗಿ ಸಂಭ್ರಮದಿಂದ ಯಾವ ರಾಮನನ್ನು ಬೀಳ್ಕೊಟ್ಟಿದ್ದಳೋ, ಅದೇ ರಾಮನನ್ನು ಈಗ ನಾಡಿನ ಗದ್ದುಗೆಗೆ ಆಹ್ವಾನಿಸುವ ಆತುರದಿಂದ ಓಡಿದಳು—"ಪುಣ್ಯಾದನ್ವೇಷಣೆಗೆ ಪೋಪ ಪಾಪದ ತೆರದಿ."

ಆದರೆ ರಾಮನನ್ನು ಅರಸುವುದು ಮಂಥರೆಗೆ ಸಾಧ್ಯವೆ? ಹೃದಯಾಬ್ಜದಲ್ಲಿ ರಘುರಾಮಚಂದ್ರನನ್ನಿರಿಸಿ, ಗೊತ್ತುಗುರಿಯಿಲ್ಲದೆ ಓಡುತ್ತಿರುವ ಮಂಥರೆಯನ್ನು ಲೆಕ್ಕಿಸುವವರಾರು? ಓಡಿ ಓಡಿ ನಾಡನ್ನು ಬಿಟ್ಟು ಕಾಡಿಗೇನೋ ಬಂದಳು ಮುದುಕಿ, ಆದರೆ ರಾಮನಿರುವ ಕಾಡಲ್ಲ. ಆಕೆಯ ಆಗಿನ ಸ್ಥಿತಿಯಾದರೋ

"ಬೆಳಗಿನಿಂದುಣಿಸಿಲ್ಲ;
ನೀರ್ಪನಿಯನೀಂಟಿಲ್ಲ; ಪೆಟ್ಟನಲ್ಲದೆ ಬೇರೆ
ತಿಂದಿಲ್ಲ; ಕಣ್ಣೀರನೊಂದಲ್ಲದಿನ್ನೇನುಮಂ
ಕುಡಿದಿಲ್ಲ, ಬೆನ್ನಿಗಂಟಿದ ಹೊಟ್ಟೆಹಸಿವಿಂದೆ,

> ಗಂಟಲೊಣಗಿದ ನೀರಡಿಕೆಯಿಂದೆ, ರಕ್ತಮಂ
> ಬಸಿವ ಗಾಯದ ಪಸಿಯ ನೋವಿಂದೆ,"

ಬಳಲಿ ಬೆಂಡಾಗಿ ಮೇರೆ ಮೀರಿದ ಉಸಿರಿಂದ ಏದುತ್ತಾ ಪ್ರಜ್ಞೆ ತಪ್ಪಿದಳು. ಆದರೂ ರಾಮನನ್ನು ಕೂಗಿ ಕರೆದಳು "ಭರತನಣ್ಣಯ್ಯ, ಬಾ ಎಂದು." ಕತ್ತಲಲ್ಲಿ, ಹಸಿವೆ ನೀರಡಿಕೆ ನೆತ್ತರುಗುವ ನೋವಿನಲ್ಲಿ ಮುಂದೆ ಕಂಡ ದಾವಾಗ್ನಿಯೇ 'ರಾಮ'ನೆಂದು ಭ್ರಮಿಸಿ, ಭ್ರಾಂತಿಯಿಂದ ಮುಂದೆ ನುಗ್ಗಿದಳು! ಕಾಡನ್ನೆ ನುಂಗಿ ನೊಣೆದು, ನಾಡನ್ನೂ ನೆಕ್ಕುತ್ತಿದ್ದ ಆ 'ಪ್ರಳಯಾಗ್ನಿ'ಗೆ ಮಂಥರೆಯ ಮೂರ್ತಿಯೂ ಸಿಕ್ಕು ಸುಟ್ಟು ಸೀದುಹೋಯಿತು—ಒಂದು ಚಿಟ್ಟೆಯಂತೆ!

ಆದರೂ ಮಂಥರೆಯ ಮನಸ್ಸಿಗೆ ಮಾತ್ರ ಇನ್ನೂ ಸಮಾಧಾನ ದೊರೆಯಲಿಲ್ಲ! ತನ್ನ ತುಂಬು ವಾತ್ಸಲ್ಯಕ್ಕೆ ಭಾಜನನಾದ ಭರತನಿಗೆ ಈ ಜನ್ಮದಲ್ಲಿ ಅವನ ಮನಸ್ಸಿಗೊಪ್ಪುವ, ಅವನಿಗೆ ನಿಜವಾಗಿಯೂ ಕಲ್ಯಾಣವಾಗುವಂತಹ ಕಾರ್ಯ ಅವಳಿಂದ ಸಾಧ್ಯವಾಗಲಿಲ್ಲ. ಬೆಂಕಿಗೆ ಸಿಕ್ಕು, ಕುಬ್ಜೆಯ ಕಾಯ ಕರ್ರನೆ ಕಂದಿ ಕರಗಿಹೋದರೂ, ಒಳಗಿದ್ದ ಆಸೆ ಮಾತ್ರ ಪೂರ್ಣವಾಗದೆ, ಆತ್ಮಕ್ಕೆ ಗತಿಯಿಲ್ಲ. ಮಂಥರೆಯ ಆತ್ಮ ಕೊನೆಗಾದರೂ, ಆ ಕಲ್ಯಾಣವನ್ನು ಮಾಡಿಯೇ ಮುಗಿಸುತ್ತದೆ ಶ್ರೀ ರಾಮಾಯಣ ದರ್ಶನದಲ್ಲಿ!

> "ರೂಕ್ಷತಾ
> ವಿಕೃತಿಯಿಂ ಗುಜ್ಜುಮೆಯ್ಯಿಂ ಕುರೂಪಂಬೆತ್ತ
> ಶ್ರೀಗಂಧಕಾಷ್ಠ ವಕ್ರತೆಗಗ್ನಿ ಲಗ್ನದಿಂ, ಕೇಳ್,
> ರೂಪಶೂನ್ಯತೆಯೊದಗಲೇಂ? ವಿಶ್ವದೇಶಮಂ
> ಪರಿಮಳದ ಪುಣ್ಯ ಪವನಂ ಪಸರಿಪೋಲಂತೆ,
> ತುಂಬದೇನಿರ್ದಪಳೆ, ಪೇಳ್ ಲೋಕಲೋಕಂಗಳೊಳ್
> ದೇವಿ ಮಂಥರೆಯಂತರಾತ್ಮದ ದಯಾಲಕ್ಷ್ಮಿತಾಂ
> ತನ್ನ ಕೀರ್ತಿಯ ಸಯ್ಪಿನಮೃತಮಯ ಸೌಂದರ್ಯಮಂ? [5]"

---

[5] ಕೀಟ್ಸ್ ಕವಿಯಮೇಲೆ ಷೆಲ್ಲಿ ರಚಿಸಿರುವ ಚರಮಗೀತೆಯ ಕೆಲವು ಸಾಲುಗಳು ಇಲ್ಲಿ ನೆನಪಿಗೆ ಬರುತ್ತವೆ:

> He lives, he wakes-'tis Death is dead, not he;
> He is made one with nature : there is heard
> His voice in all her music, from the moon
> Of thunder, to the song of night's sweet bird;
> He is a presence to be felt and known
> In darkness and in light, from herb and stone

ನಂದಿಗ್ರಾಮದಲ್ಲಿ ಹದಿನಾಲ್ಕು ವರ್ಷಗಳ ನಿಡುಗಾಲ ಭರತ ರಾಮಪಾದುಕೆಗಳನ್ನು ಪೂಜಿಸುತ್ತಾ, ರಾಜ್ಯತಪಸ್ಸನ್ನು ಮಾಡಿ, ಕೊನೆಯ ಏಳು ದಿನಗಳಲ್ಲಿ ಕಠಿಣ ವ್ರತ ನಿಷ್ಠನಾಗಿ, ಏಳನೆಯ ದಿನ, ಶ್ರೀರಾಮ ಸಂದರ್ಶನವಾಗದಿದ್ದರೆ, ಅಗ್ನಿ ಪ್ರವೇಶ ಮಾಡುವೆನೆಂಬ ದೃಢ ಪ್ರತಿಜ್ಞೆಯಿಂದ, ರಾಮ ನಿರೀಕ್ಷಣೆಯ ನಿಡುಮುಳ್ಳಿನ ಮೇಲೆ ನಿಂತಿದ್ದಾನೆ! ರಾಮ ವಾರ್ತೆಗಾಗಿ ಹೋಗಿ ಚರರು ವಿಫಲರಾಗಿ ಮರಳಿದ್ದಾರೆ. ಭರತದೇವನಿಗೆ ಅಗ್ನಿಯೇ ಗತಿಯೋ ಎಂಬಂತಿದೆ ಸನ್ನಿವೇಶ. ಅಗ್ನಿಯೂ ಸಿದ್ಧವಾಗಿದೆ. ಅಂತಹ ಉತ್ಕಟ ಸಮಯದಲ್ಲಿ, ಯಜ್ಞಕುಂಡದಿಂದ ಎದ್ದ ಒಂದು ಜ್ವಾಲಾಮೂರ್ತಿ "ನಿನ್ನ ಅಣ್ಣ ಬರುವುದು ಖಂಡಿತ. ಅಗ್ನಿಪ್ರವೇಶ ಉಚಿತವಲ್ಲ" ಎಂಬ ಅಭಯವಚನವನ್ನಾಡಿದಾಗ, ಆಶ್ಚರ್ಯಹೊಂದಿದನಾದರೂ ಭರತನ ವಿಮರ್ಶಬುದ್ಧಿ ಕೇಳಿತು: "ಬೆಂದ ಹೃದಯಕ್ಕೆ ಅಮೃತವನ್ನು ಊಡುತ್ತಿರುವ ದೇವಿ, ನೀನಾರು?" ಆ ಮಮತೆಯ ಮೂರ್ತಿ ಅದಕ್ಕೆ ಉತ್ತರ ಕೊಟ್ಟಿತು! "ಸಂತತವೂ ನಿನ್ನ ಕ್ಷೇಮಚಿಂತನೆಯಲ್ಲಿಯೇ ಇರುವ ಮಂಥರೆಯಲ್ಲವೇ ನಾನು?" ಆಕೆಯ ಮೇಲಿನ ಕೋಪ ಇನ್ನೂ ಆರದ ಭರತ "ಪೂಜ್ಯೆ! ಆ ಹೆಸರನ್ನು ಮಾತ್ರ ಎತ್ತಬೇಡ. ಆ ಕುಬ್ಜೆಯಿಂದಲ್ಲವೇ ಇಷ್ಟೆಲ್ಲ ದುಃಖ, ನಾಶ?" ಎಂದು ನಿಷ್ಠುರವಾಗಿಯೇ ನುಡಿದನು. "ವತ್ಸ, ಮಂಥರೆಯ ಪ್ರೇಮ ಹೃದಯವನ್ನು ನೀನರಿಯೆ. ನಿನ್ನ ಕಲ್ಯಾಣಕ್ಕಾಗಿ, ನಿನ್ನ ಮನಸ್ಸಿನಂತೆ, ರಾಮನನ್ನು ಕರೆದುತರಲು ಹೊರಟ ಆಕೆ ಅಡವಿಯ ಅಗ್ನಿಗೆ ಆಹುತಿಯಾದಳು. ಆಕೆಯ ಬಾಹ್ಯ ಕುರೂಪದಿಂದ, ಅವಳ ಕಾರ್ಯಗಳೆಲ್ಲವೂ ಜನರಿಗೆ ಪಾಪಮಯವಾಗಿಯೇ, ಕಪ್ಪಾಗಿಯೇ ಕಂಡವು! ಆಕೆಯ ಹೃದಯವನ್ನು ಯಾರೂ ಅರಿಯಲಿಲ್ಲ. ನಿನ್ನ ಮಂಥರೆಯ ಅಂತರಾತ್ಮದ ಪುಣ್ಯ ಸೌಂದರ್ಯಲಕ್ಷ್ಮಿಯನ್ನು ಇಲ್ಲಿ ನೋಡು!" ಎಂದು ಹೇಳಿ ಭರತನನ್ನು ಬೆರಗುಗೊಳಿಸಿ, ಆ ಮೂರ್ತಿ ಅಗ್ನಿಯಲ್ಲಿ ಐಕ್ಯವಾಯಿತು! ಮಂಥರೆಯ ಒಂದು ಗುರಿ ಗೊತ್ತುಮುಟ್ಟಿತು.

ಹೀಗೆ ಶ್ರೀ ಕುವೆಂಪು ಚಿತ್ರಿಸಿರುವ ಮಂಥರೆಯ ಪಾತ್ರದಲ್ಲಿ, ಆಕೆಯ ಹುಟ್ಟು, ಬೆಳವಣಿಗೆ, ಮುಪ್ಪು, ಮರಣ, ಪುನರ್ಜನ್ಮಗಳ ಪೂರ್ಣ ಚಿತ್ರದ ವಿವರಣೆ ಇರುವುದನ್ನು ಗಮನಿಸಬಹುದು.

---

Spreading itself where'er that power may move
. . . . . . . . . . . . . . . . .
He is a portion of the loveliness which once he made more lovely: he doth bear
His part while the spirit's plastic stress
Sweeds through the dull dense world, compelling there,
All new successions of the forms they wear . . .

. . . . . ಓ ಮಂಥರೆಯೆ ಮರುಗುವೆನ್ ನಿನಗೆ
ಕವಿ ಸಹಜ ಕರುಣೆಯಿಂ. ಲೋಕಕ್ರೋಧ ಮದಹಸ್ತಿ
ಪದದಲನ ರೋಷದಾವಾಗ್ನಿಗಾಹುತಿಯಾಗಿ
ಬಿಳ್ದ ನಿನ್ನಾ ಭಸ್ಮರಾಶಿಯಂ ತೊಳೆವುದಿದೊ
ಕಣ್ಗಂಗೆ ಕಾವ್ಯಮಹಿಮಾ ಸಿಂಧುತೀರ್ಥಕ್ಕೆ !

ಡಾ|| ಕೆ. ಎಂ. ಕೃಷ್ಣರಾವ್

## ಮಹಾಸ್ವಪ್ನ

ಸದ್ದಿಲ್ಲದ ಸ್ವಪ್ನತಮಸ್ಸಿನಲಿ
ಮಾನವತಾ ಮೂಢತೆಯಲ್ಲಿ
ಅಗಾಧ ಗೂಢತೆಯಲ್ಲಿ :—

ಶಾಂತಿಸಾಗರದೆದೆಯಾಸ್ಫೋಟದವೊಲು
ನಡುಗಿತು ಮಲೆನಾಡು,
ಸಿಡಿಲು ಮಿಂಚು ಗುಡುಗಿನ ತಾಂಡವ ನರ್ತನ-
ಕಿದಿರಾಯಿತು ಕಾಡು.
ಹಾಡಿತು ಬಾನು,
ಕೂಡಿತು ಕಾನು,
ಸ್ವರಸಮ್ಮಿಲನಕೆ ನಡುಗುತೆ ಪ್ರತಿಧ್ವನಿಸಿದೆ ನಾನು.

ದಾರುಣ ಪೃಥುವೀ ಧ್ವಾನ ಸಮುದ್ರದಿ,
ರಾಗವನರಿಯದರಾಗ ಹೃದಯದಿ,
ಬಾನಿನ ಗಾನ ತರಂಗಗಳೇಳಲು,
ತಲೆದೂಗಿತು ಮೊದಲಾಯಿತು,
ಅಂಬರ ಗಮನಾಕಾಂಕ್ಷಿತ ಜೀವನದಿ.

ಮರ ಮರಕೂ ಮೂಡಿತು ಅತಿಮಾನವ ಭಾವ,
ಕಿರಿದ್ಧಾಯಿತು ಅದರೆದುರಿಗೆ ಆಶ್ರಿತ ಜೀವ,
ನಿಶೆಯೊಳಗೂ ನೀಡಿತು ನೆರಳು,
(ಇಹ ಜೀವನದೀ ಮಾಯಾ ಪಥದೊಳಗೂ
ಸೃಷ್ಟಿಯದೊಂದೆಚ್ಚರ ಬೆರಳು,
ಆ ನೆರಳು ನೆರಳು ನೆರಳು).

ಶಾಂತಿಸಾಗರದೆದೆಯಾ ಸ್ಫೋಟದವೊಲು ನಡಗಿತು
ಮಲೆನಾಡು.
ಜ್ವಾಲಾ ಹಾಸವ ಬೀಸಿತು ಮಿಂಚು.

ಕಂಡಿತು ಕಂಡಿತು ಕಂಡಿತು ಬಾನಂಚು,
ಅದರೊಡನೆಯೆ ಗುಡುಗು
“ ಕಾಣ್ಕೆಯ ಹಿಂಗಡೆ ಕಾಣದುದೊಂದಿದೆ
ಆದರನ್ವೇಷಣೆಯಲಿ ತೊಡಗು.”

ಗುಡುಗಿನೊಳಗೂ ಗುರುತಿಸಿ ಗುರುವಚನ
ನಿಟ್ಟಿಸುತಿರೆ ನಯನ,
ಕತ್ತಲನಂತದಿ ಚಿಮ್ಮಿತೆ ಮಿಂಚು
ನಿಶಾ ದಿಶೆಯನೆ ಸೀಳುತ ಹೊಕ್ಕು
ತಿಮಿರ ಜಗತ್ತಿನ ಈ ಪಾತಾಳದಿ ನನ್ನನೆ ಮಿಕ್ಕು
ಮನಕಾಯಿತು ದಿಕ್ಕು !

ಪೂಚಂತೇ

---

# ಕನ್ನಡ ಕಾವ್ಯಪ್ರಕಾಶ

## ಒಂಬತ್ತನೆಯ ಉಲ್ಲಾಸ

ಗುಣಗಳ ವಿವೇಚನೆಯನಂತರ ಅಲಂಕಾರಗಳ ನಿರೂಪಣೆ ಕ್ರಮಪ್ರಾಪ್ತವಾಗುತ್ತದೆ. ಈಗ ಮೊದಲು ಶಬ್ದಾಲಂಕಾರಗಳನ್ನು ವಿವರಿಸಲಾಗಿದೆ.[1]

### ವಕ್ರೋಕ್ತಿ

ಯದುಕ್ತಮನ್ಯಥಾ ವಾಕ್ಯಮನ್ಯಥಾನ್ಯೇನ ಯೋಜ್ಯತೇ ।
ಶ್ಲೇಷೇಣ ಕಾಕ್ವಾ ವಾ ಜ್ಞೇಯಾ ಸಾ ವಕ್ರೋಕ್ತಿಸ್ತಥಾ ದ್ವಿಧಾ ॥ ೧ ॥

ಒಬ್ಬನು ಒಂದರ್ಥದಲ್ಲಿ ಹೇಳಿದ ವಾಕ್ಯವನ್ನೇ ಇನ್ನೊಬ್ಬನು ಇನ್ನೊಂದರ್ಥದಲ್ಲಿ ತಿಳಿಯುವಂತೆ 'ಶ್ಲೇಷೆ' ಇಲ್ಲವೆ 'ಕಾಕು' ಕಾರಣವಾದರೆ, ಆ ಉಕ್ತಿ ವೈಚಿತ್ರ್ಯವನ್ನು **ವಕ್ರೋಕ್ತಿ**ಯೆಂದರಿಯಬೇಕು.[2] ಮೇಲೆ ಹೇಳಿದಂತೆ ಅದರ ಬಗೆಗಳು ಎರಡು.

---

[1] ಅಲಂಕಾರಗಳಲ್ಲಿ ಎರಡು ಬಗೆ—(೧) ಶಬ್ದಾಲಂಕಾರ ಮತ್ತು (೨) ಅರ್ಥಾಲಂಕಾರ. ಯಾವ ಶಬ್ದದಲ್ಲಿ ಅಲಂಕಾರವೈಚಿತ್ರ್ಯವುಂಟೋ ಆ ಶಬ್ದವನ್ನು ಸಮಾನಾರ್ಥಕವಾದ ಶಬ್ದಾಂತರದಿಂದ ಪರಿವರ್ತನ ಮಾಡಿದಾಗ ಅಲಂಕಾರದ ಸೊಬಗೂ ಮಾಯವಾಗುವಂತಿದ್ದರೆ ಮಾತ್ರ ಶಬ್ದಾಲಂಕಾರ; ಹಾಗೆ ಪರಿವರ್ತನ ಮಾಡಿದಾಗಲೂ ಅಲಂಕಾರದ ಸೊಬಗು ಮೊದಲಿನಂತೆಯೇ ಉಳಿಯುವುದಾದರೆ ಅರ್ಥಾಲಂಕಾರವೆಂಬುದು ಮಮ್ಮಟನ ಸಿದ್ಧಾಂತ. ಈ ಒಂಬತ್ತನೆಯ ಉಲ್ಲಾಸದಲ್ಲಿ ಶಬ್ದಾಲಂಕಾರಗಳನ್ನೂ ಮುಂದೆ ಹತ್ತನೆಯ ಉಲ್ಲಾಸದಲ್ಲಿ ಅರ್ಥಾಲಂಕಾರಗಳನ್ನೂ ಕೂಲಂಕಷವಾಗಿ ಪ್ರತಿಪಾದಿಸಲಾಗಿದೆ. ಮಮ್ಮಟನೊಪ್ಪುವ ಮುಖ್ಯ ಶಬ್ದಾಲಂಕಾರಗಳು ಆರೇ—(೧) ವಕ್ರೋಕ್ತಿ, (೨) ಅನುಪ್ರಾಸ, (೩) ಯಮಕ, (೪) ಶ್ಲೇಷ, (೫) ಚಿತ್ರ, (೬) ಪುನರುಕ್ತವದಾಭಾಸ.

[2] ಸಂಸ್ಕೃತ ಅಲಂಕಾರಗಳ ವಿಕಾಸವನ್ನು ಅಭ್ಯಸಿಸುವವರಿಗೆ 'ವಕ್ರೋಕ್ತಿ' ಅಲಂಕಾರದ ಇತಿಹಾಸವು ಬಹಳ ಮಹತ್ತ್ವವುಳ್ಳದ್ದು. ಭಾಮಹ ಮತ್ತು ದಂಡಿಗಳ ಕಾಲದಲ್ಲಿ 'ವಕ್ರೋಕ್ತಿ'ಯು 'ಕಾವ್ಯಸೌಂದರ್ಯರಹಸ್ಯ'ವೆಂಬ ವಿಶಾಲಾರ್ಥದಲ್ಲಿ ಪ್ರಚಾರದಲ್ಲಿತ್ತು. ಎಲ್ಲ ಅರ್ಥಾಲಂಕಾರಗಳ ಸೌಂದರ್ಯಕ್ಕೂ ಲೋಕೋಕ್ತಿಯಲ್ಲಿ ಅಥವಾ ಸ್ವಭಾವೋಕ್ತಿಯಲ್ಲಿ ಕಾಣದ ಅತಿಶಯಾಂಶವೇ ವಕ್ರೋಕ್ತಿಯೆನಿಸುತ್ತಿದ್ದಿತು. (ನೋಡಿ—**ಕನ್ನಡ ಕಾವ್ಯಾಲಂಕಾರ**, ಪು. ೪೪-೫) ಅತಿಶಯೋಕ್ತಿಯೆಂಬ ಅರ್ಥಾಲಂಕಾರದಲ್ಲಿ ವಕ್ರೋಕ್ತಿಯು ಪೂರ್ಣವಾಗಿದ್ದರೂ, ಉಳಿದ ಅಲಂಕಾರಗಳಲ್ಲಿಯೂ ಕೂಡ ಅದು ಪ್ರಭಾವಕಾರಿಯೆಂಬ ಭಾವನೆಯಿದ್ದಿತು. ಹೀಗೆ ಸರ್ವಾಲಂಕಾರಗಳಿಗೂ ಅನ್ವಯಿಸುತ್ತಿದ್ದ ವಿಶಾಲಾರ್ಥವು 'ವಕ್ರೋಕ್ತಿ'ಗಿದ್ದುದರಿಂದಲೇ ಇದನ್ನು ಆಶ್ರಯಿಸಿ ಮುಂದೆ ಕುಂತಕನು **ವಕ್ರೋಕ್ತಿ-ಜೀವಿತ**ವನ್ನು ರಚಿಸಿದನು. ಆದರೆ ಕ್ರಮಕ್ರಮವಾಗಿ ಈ ಅರ್ಥವೈಶಾಲ್ಯ ಕುಗ್ಗುತ್ತ ನಡೆಯಲು ವಾಮನ, ರುದ್ರಟಾದಿಗಳು ಕಾರಣ. ವಾಮನನು 'ಸಾದೃಶ್ಯಾಲ್ಲಕ್ಷಣಾ ವಕ್ರೋಕ್ತಿಃ'

ಎರಡು ಬಗೆಗಳೆಂದರೆ 'ಶ್ಲೇಷ-ವಕ್ರೋಕ್ತಿ' ಮತ್ತು 'ಕಾಕು-ವಕ್ರೋಕ್ತಿ'.

ಬೇರೆ ಬೇರೆ ಪದವಿಭಾಗ ಮಾಡಿಕೊಂಡಾಗ ಬರುವ ಭಂಗಶ್ಲೇಷೆ ವಕ್ರೋಕ್ತಿಗೆ ಕಾರಣವಾಗುವುದಕ್ಕೆ ಉದಾಹರಣೆ:—

ನಾರೀಣಾಮನುಕೂಲಮಾಚರಸಿ ಚೇಜ್ಜಾನಾಸಿ ಕಶ್ಚೇತನೋ
ವಾಮಾನಾಂ ಪ್ರಿಯಮಾದಧಾತಿ ಹಿತಕೃನ್ನೈವಾಬಲಾನಾಂ ಭವಾನ್ ।

ಎಂದು ಸಾದೃಶ್ಯ ಮೂಲವಾದ ಲಕ್ಷಣಾಪ್ರಯೋಗಗಳನ್ನು ಮಾತ್ರ 'ವಕ್ರೋಕ್ತಿ'ಯ ಲಕ್ಷ್ಯವೆಂದು ಅರ್ಥಸಂಕೋಚಮಾಡಿ 'ಕಣ್ಣು ಅರಳಿತು' ಮುಂತಾದ ಉದಾಹರಣೆಗಳನ್ನು ಕೊಟ್ಟನು (ಇಲ್ಲಿ ಪುಷ್ಪಧರ್ಮವನ್ನು ಸಾದೃಶ್ಯ ಪ್ರಕಟನೆಯ ದೃಷ್ಟಿಯಿಂದ ಕಣ್ಣಿಗೆ ಲಕ್ಷಣಾವೃತ್ತಿಯಿಂದ ಆರೋಪಿಸಿದೆ). ಮುಂದಿನ ಲಾಕ್ಷಣಿಕರು ಈ ವಿವರಣೆಯನ್ನೊಪ್ಪಲಿಲ್ಲ. ಮೊಟ್ಟಮೊದಲು ರುದ್ರಟನು ತನ್ನ **ಕಾವ್ಯಾಲಂಕಾರ**ದಲ್ಲಿ ವಕ್ರೋಕ್ತಿಯನ್ನು ಶಬ್ದಾಲಂಕಾರವೆಂದೂ, ಪದಗಳನ್ನು ಬೇರೆ ಬೇರೆ ಅರ್ಥದಲ್ಲಿ ಇಬ್ಬರು ತಿಳಿದುಕೊಂಡು ನಡೆಸುವ ಚಮತ್ಕಾರಕ ಸಂಭಾಷಣೆಯೇ ಇದಕ್ಕೆ ಲಕ್ಷ್ಯವೆಂದೂ ವಕ್ರೋಕ್ತಿ ಅಲಂಕಾರದ ಸ್ವರೂಪವನ್ನು ನಿರೂಪಿಸಿದನು. (II. ೧೪-೧೭) ಇದರಲ್ಲಿಯೇ ಶ್ಲೇಷ-ವಕ್ರೋಕ್ತಿ ಮತ್ತು ಕಾಕು-ವಕ್ರೋಕ್ತಿಗಳೆಂಬ ಭೇದಗಳನ್ನೂ ತೋರಿಸಿದನು. **ಮುದ್ರಾರಾಕ್ಷಸ**ದ ಮಂಗಳ ಶ್ಲೋಕವೇ ('ಧನ್ಯಾ ಕೇಯಂ ಸ್ಥಿತಾ ತೇ ಶಿರಸಿ' 'ಶಶಿಕಲಾ' . . .) ಮುಂತಾದ ಪ್ರಸಿದ್ಧ ಉದಾಹರಣೆಗಳೆಲ್ಲವೂ, ಈ ಸಂಕುಚಿತ ಅರ್ಥದಲ್ಲಿ ವಕ್ರೋಕ್ತಿ ಅಲಂಕಾರದ ಲಕ್ಷ್ಯಗಳು. ಈ ಸಂಕುಚಿತಾರ್ಥವೇ ಮುಂದೆ ಪ್ರಚಾರಕ್ಕೆ ಬಂದು ರತ್ನಾಕರ ಮುಂತಾದವರು 'ವಕ್ರೋಕ್ತಿ ಪಂಚಾಶಿಕಾ' ಮೊದಲಾದ ಕಾವ್ಯಗಳನ್ನು ರಚಿಸಿರುವರು. ಮಮ್ಮಟನೂ ರುದ್ರಟನ ವ್ಯಾಖ್ಯೆಯನ್ನು ಇಲ್ಲಿ ಅಂಗೀಕರಿಸಿದ್ದಾನೆ. ಮಮ್ಮಟನ ಅನಂತರ ರುಯ್ಯಕ, ವಿದ್ಯಾನಾಥ ಅಪ್ಪಯ್ಯದೀಕ್ಷಿತ ಮುಂತಾದ ನವೀನ ಆಲಂಕಾರಿಕರೆಲ್ಲರೂ 'ವಕ್ರೋಕ್ತಿ'ಯೆಂದರೆ ಈ ಸಂಕುಚಿತ ಅರ್ಥದ ಶಬ್ದಾಲಂಕಾರವೆಂದೇ ತಿಳಿಯುತ್ತಾರೆ. ಇಲ್ಲಿ 'ವಕ್ರ' ಎಂದರೆ ಅನುದ್ದಿಷ್ಟಾರ್ಥವನ್ನು ಉಂಟುಮಾಡುವ 'ಉಕ್ತಿ' ಅಥವಾ ಪರಸ್ಪರ ಸಂಭಾಷಣೆ ಅಥವಾ ಸಲ್ಲಾಪವೆಂದು ಅರ್ಥ. ಇಂಗ್ಲಿಷಿನಲ್ಲಿ ಶಬ್ದಶ್ಲೇಷದಿಂದ (Pun) ಬರುವ *wit* ನೊಡನೆ ಇದನ್ನು ಹೋಲಿಸಬಹುದು. ನಾಗವರ್ಮನು ರುದ್ರಟನನ್ನೇ ತನ್ನ **ಕಾವ್ಯಾವಲೋಕನ**ದಲ್ಲಿ ಅನುಸರಿಸಿದ್ದಾನೆ. ಅವನು ಕೊಟ್ಟಿರುವ ಶ್ಲೇಷವಕ್ರೋಕ್ತಿಯ ಎರಡು ಉದಾಹರಣೆಗಳಿವು :—

ಮುತ್ತಯ್ಯ ಚದುರಿದೇನೆನೆ
ಮುತ್ತಲ್ಲದುದುಂಟೆ ವಸ್ತು ಪೇಱತೆನೆ ಸತಿ ನೀ ।
ಮಿತ್ತಿರಿಮೆನೆ ಕರಮೊಳ್ಳಿ
ತ್ತಿತ್ತಾಗಡೆ ನಿಮ್ಮೊಳಿರ್ಪೆವೆನೆ ವೃದ್ಧವಿಟಂ ॥ (೬೦೨)

ಮುನ್ನಿನ ಕಡಮಂ ನೀಂ ಕುಡು
ಮುನ್ನಿಲ್ಲದ ಕಡನನೆಂತು ಪಿಡಿಯೆಂದೀವೆಂ ।
ನಿನ್ನೀ ಪಿಡಿಯನೆ ಕುಡು ಕಡ
ನೆನ್ನಂ ಪಿಡಿಯುಳ್ಳೊಡಾನೆಯೀಯೆನೆ ಕೆನ್ನಂ (೬೦೩)

ಯುಕ್ತ ಕಿಂ ಹಿತಕರ್ತನಂ ನನು ಬಲಾಭಾವಪ್ರಸಿದ್ಧಾತ್ಮನಃ
ಸಾಮರ್ಥ್ಯಂ ಭವತಃ ಪುರಂಧರಮತಚ್ಛೇದಂ ವಿಧಾತುಂ ಕುತಃ ‖

ವಕ್ತೃ—"ನಾರಿಯರಿಗೆ (**ನಾರೀಣಾಂ**) ಅನುಕೂಲವನ್ನು ಮಾಡುವ ಪಕ್ಷದಲ್ಲಿ ನೀನು ಬುದ್ಧಿವಂತನೇ ಸರಿ."

ಶ್ರೋತೃ—"ಯಾವ ಬುದ್ಧಿವಂತನು ತಾನೆ ಶತ್ರುಗಳಿಗೆ (**ನ+ಅರೀಣಾಂ** ಮತ್ತು **ವಾಮಾನಾಂ**) ಪ್ರಿಯವೆಸಗುತ್ತಾನೆ?"

ವಕ್ತೃ—"ಹಾಗಾದರೆ ನೀನು ಸ್ತ್ರೀಯರಿಗೆ (**ವಾಮಾನಾಂ** ಮತ್ತು **ಅಬಲಾನಾಂ**) ಹಿತಕಾರಿಯಲ್ಲವೇನು? (**ಹಿತಕೃತ್**)

ಶ್ರೋತೃ—"ಬಲವಿಲ್ಲದವರ (**ಅಬಲಾನಾಂ** ಮತ್ತು **ಬಲಾಭಾವಪ್ರಸಿದ್ಧಾತ್ಮನಃ**) ಹಿತದ ಧ್ವಂಸವು (**ಹಿತಕೃತ್** ಮತ್ತು **ಹಿತಕರ್ತನಂ**) ಯೋಗ್ಯವೇನು?"

ವಕ್ತೃ—"ಬಲಾಸುರ ಧ್ವಂಸಿಯಾದ (**ಬಲಾಭಾವಪ್ರಸಿದ್ಧಾತ್ಮನಃ**) ದೇವೇಂದ್ರನ ಹಿತವನ್ನು ಧ್ವಂಸಮಾಡುವ ಸಾಮರ್ಥ್ಯ ನಿನಗೆಲ್ಲಿಂದ ಬರಬೇಕು?"

ಪದಭಂಗವಿಲ್ಲದೆಯೇ ಬರುವ ಅಭಂಗಶ್ಲೇಷದಿಂದುಂಟಾಗುವ ವಕ್ರೋಕ್ತಿಗೆ ಉದಾಹರಣೆ:—

ಅಹೋ ಕೇನೇದೃಶೀ ಬುದ್ಧಿ **ದಾ೯ರುಣಾ** ತವ ನಿರ್ಮಿತಾ।
ತ್ರಿಗುಣಾ ಶ್ರೂಯತೇ ಬುದ್ಧಿರ್ನ ತು **ದಾರು**ಮಯೀ ಕ್ವಚಿತ್‖[3]

ಈ ದೊರೆ ದಾರುಣಮತಿಯಂ
ಮೇದಿನಿಯೊಳ್ ನಿರ್ಮಿಸಿರ್ಪನಾವನೊ ನಿನ್ನೊಳ್ |
ಮೂದೆರಮಿರ್ಪುದು ಮತಿಯೆಂ
ದೋದಿರ್ಪೆಂ ದಾರುರೂಪಮಪ್ಪುದನರಿಯೆಂ ||

ಕಾಕುವಕ್ರೋಕ್ತಿಗೆ ಉದಾಹರಣೆ:—

ಗುರುಜನ ಪರತಂತ್ರತಯಾ
ದೂರತರಂ ದೇಶಮುದ್ಯತೋ ಗಂತುಂ।

---

[3] ದಾರುಣಾ = ಎಂದರೆ 'ಕ್ರೂರವಾದ' ಎಂಬರ್ಥವಷ್ಟೇ ಅಲ್ಲದೆ 'ಮರದಿಂದ' ಎಂಬರ್ಥವೂ ಹೊರಡುವುದು.

ಅಲಿಕುಲ ಕೋಕಿಲಲಲಿತೇ
ನೈಷ್ಯತಿ[4]ಸಖಿ ಸುರಭಿಸಮಯೇಽಸೌ ॥

ಗುರುಜನ ಪರತಂತ್ರನೆನಲ್
ಪೊರಮಟ್ಟಂ ದೂರದೇಶಕೆನ್ನೆದೆಯಾಣ್ಮಂ |
ನೆರೆಯಲ್ಕಳಿಪಿಕಕುಲದಿಂ-
ಚರಮೀಗಳ್ ಸುರಭಿಸಮಯದೊಳ್ ಬಾರನಹಾ ‖

ಇಲ್ಲಿ ಹೆಂಗಸರು ಆಡುವಾಗ ಬರುವ ಸ್ವರವ್ಯತ್ಯಾಸದಿಂದ ಅರ್ಥ ಬದಲಾಗುತ್ತದೆ.

## ಅನುಪ್ರಾಸ

ವರ್ಣಸಾಮ್ಯಮನುಪ್ರಾಸಃ . . . ‖ ೨*a* ‖

ವರ್ಣಗಳ ಸಾಮ್ಯವೇ ಅನುಪ್ರಾಸಾಲಂಕಾರ.

ಸ್ವರಗಳು ( = *vowels* ) ಸದೃಶವಲ್ಲದಿದ್ದರೂ ವ್ಯಂಜನಗಳು ಸದೃಶವಾಗಿರುವುದೇ ವರ್ಣಗಳ ಸಾಮ್ಯ. 'ಅನು' ಎಂದರೆ ರಸಾದಿಗಳನ್ನು ಅನುಸರಿಸುವಂತೆ ಇರುವ,[5] 'ಪ್ರ' ಎಂದರೆ ಉತ್ಕೃಷ್ಟವಾದ 'ನ್ಯಾಸ' ಅಥವಾ ವರ್ಣಪ್ರಯೋಗವೇ ಅನುಪ್ರಾಸ.

ಛೇಕವೃತ್ತಿಗತೋ ದ್ವಿಧಾ. . . ‖ ೨*b* ‖

ಅದು 'ಛೇಕಾನುಪ್ರಾಸ' ಮತ್ತು 'ವೃತ್ತ್ಯನುಪ್ರಾಸ' ಎಂದು ಎರಡು ಬಗೆ. 'ಛೇಕ' ಎಂದರೆ ವಿದ್ವಾಂಸರು. 'ವೃತ್ತಿ' ಎಂದರೆ ರಸದೃಷ್ಟಿಯಿಂದ ನಿಯತ ವರ್ಣ

---

[4] ಇಲ್ಲಿ 'ನೈಷ್ಯತಿ=ಬಾರನಹಾ' ಎಂದರೆ 'ಅಯ್ಯೋ ಬಾರನಲ್ಲಾ !' ಎಂಬ ಅರ್ಥದಂತೆ 'ಬಂದೇ ಬರುವನು' ಎಂಬರ್ಥವೂ ಉಚ್ಚರಿತ ಸ್ವರವಿಶೇಷದಿಂದ ಸಾಧ್ಯ. ನಾಗವರ್ಮನು ಕಾಕುವಕ್ರೋಕ್ತಿಗೆ ಕೊಟ್ಟಿರುವ ಉದಾಹರಣೆಯಿದು :—

ದಾರುಣಮಂ ಶರಶಲ್ಯಮ
ನೋರಂತಿರೆ ಪುಣ್ಣೊಳುಡಿದು ಬಿಡದುಳ್ಕುವುದಂ |
ಸೈರಿಸುವರುಮೊಳರೆ ಕೆಲರ್
ಸೈರಿಸುವರುಮೊಳರೆ ಖಳರ ಕಟುಕೋಕ್ತಿಗಳಂ ‖ (೬೦೪)

[5] ಈ ವಾಖ್ಯೆಯು ಮಮ್ಮಟನ ಧ್ವನಿಸಿದ್ಧಾಂತಸಮನ್ವಯಕ್ಕೆ ದ್ಯೋತಕವಾಗಿದೆ. ಪ್ರಾಚೀನ ಲಾಕ್ಷಣಿಕರು ಇದನ್ನು ಸ್ಪಷ್ಟವಾಗಿ ಎಲ್ಲಿಯೂ ಹೇಳಿಲ್ಲ.

ಪ್ರಯೋಗದಲ್ಲಿ ತೋರಿಬರುವ ಕವಿವ್ಯಾಪಾರ. ಹೀಗೆ ಇವುಗಳನ್ನಾಶ್ರಯಿಸಿ [6]ಅನು ಪ್ರಾಸವು 'ಛೇಕಾನುಪ್ರಾಸ' ಮತ್ತು 'ವೃತ್ತ್ಯನುಪ್ರಾಸ'ವೆಂದು ಇಬ್ಬಗೆಯಾಗಿರುತ್ತದೆ.

ಮುಂದೆ ಅವೆರಡರ ಸ್ವರೂಪವನ್ನು ವಿವರಿಸಿದೆ:—

ಸೋಽನೇಕಸ್ಯ ಸಕೃತ್ ಪೂರ್ವಃ . . . ॥ ೨c ॥

ಅನೇಕ ಅಕ್ಷರಗಳು ಒಂದೇ ಬಾರಿ ಆವೃತ್ತವಾದರೆ ಮೊದಲನೆಯ ಬಗೆ.

ಅನೇಕ ಅಕ್ಷರಗಳು ಎಂದರೆ ವ್ಯಂಜನಗಳು ಒಂದೇ ಸಲ ಸಾದೃಶ್ಯವನ್ನು ಪ್ರಕಟಿಸುತ್ತಿದ್ದರೆ **ಛೇಕಾನುಪ್ರಾಸ.** ಉದಾಹರಣೆ:—

ತತೋಽರುಣಪರಿಸ್ಪನ್ದಮನ್ದೀಕೃತವಪುಃ ಶಶೀ ।
ದಧ್ರೇ ಕಾಮಪರಿಕ್ಷಾಮ ಕಾಮಿನೀ ಗಂಡ ಪಾಂಡುತಾಮ್ ॥

ಕಿರಣಾರುಣಗಣಮೇರ
ಲ್ಕಿರುಬಿಂಬಂ ಮಂದ ಮಂದಮೆಸೆಸಲ್ ಚಂದ್ರಂ ॥
ವಿರಹದ ಬಿಸುಪಿಂ ಬಳಲುವ
ತರುಣಿಯ ಮೊಗದೊಳ್ಪಿನಂತೆ ಬೆಳ್ಪಿಂದೆಸೆದಂ ॥

ಏಕಸ್ಯಾಪ್ಯಸಕೃತ್ ಪರಃ . . . ॥ ೨d ॥

ಒಂದೇ ಅಕ್ಷರವಾದರೂ ಅನೇಕ ಸಲ ಬರುವುದು ಎರಡನೆಯದು.

ಒಂದೇ ವ್ಯಂಜನ, ಮತ್ತು 'ಆದರೂ' ಎನ್ನುವುದರಿಂದ ಅನೇಕ ವ್ಯಂಜನಗಳು, ಎರಡು ಅಥವಾ ಎರಡಕ್ಕಿಂತ ಹೆಚ್ಚು ಬಾರಿ ಸಾದೃಶ್ಯವನ್ನು ಪ್ರಕಟಿಸುವುದು **ವೃತ್ತ್ಯನುಪ್ರಾಸ.** ಇದರಲ್ಲಿ—

---

[6] ಭಾಮಹನು ಅನುಪ್ರಾಸವನ್ನು ಶಾಸ್ತ್ರೀಯವಾಗಿ ವಿಭಾಗಿಸದಿದ್ದರೂ 'ವೃತ್ತಿ'ಮೂಲವಾದ ಅನುಪ್ರಾಸ ಮತ್ತು ಲಾಟಾನುಪ್ರಾಸಗಳನ್ನು ವಿವರಿಸಿದ್ದನು (ವಿವರಗಳಿಗೆ—ಕನ್ನಡ ಕಾವ್ಯಾಲಂಕಾರ, ಪು. ೨೩. ಅಡಿಟಿಪ್ಪಣಿ ೪ನ್ನು ನೋಡಿ). ಉದ್ಭಟನು 'ವೃತ್ತಿ'ಗಳಲ್ಲಿ 'ಪರುಷಾ,' 'ಉಪನಾಗರಿಕಾ,' ಗ್ರಾಮ್ಯಾ' ಎಂಬ ಮೂರು ಬಗೆಗಳುಂಟೆಂದು ಮೊದಲು ಸ್ಪಷ್ಟಪಡಿಸಿದನು. ಭಾಮಹನು ಪರುಷಾನುಪ್ರಾಸವನ್ನು ಉದಾಹರಿಸಿರಲಿಲ್ಲ. ಹಾಗೆಯೇ ಭಾಮಹನು ಹೇಳದ 'ಛೇಕಾನುಪ್ರಾಸ'ವನ್ನು ಮೊದಲು ನಿರ್ಣಯಿಸಿದವನೂ ಉದ್ಭಟನೇ. ಮಮ್ಮಟನು ಇಲ್ಲಿ ಉದ್ಭಟನನ್ನೇ ಅಕ್ಷರಶಃ ಅನುಸರಿಸಿದ್ದಾನೆ. ಆದರೆ 'ವೃತ್ತಿ'ಯೆಂದರೆ ರಸಾನುಗುಣವಾದ ಶಬ್ದ ವ್ಯಾಪಾರವೆಂದು ಆನಂದವರ್ಧನನಂತೆ ಪರಿಷ್ಕಾರಮಾಡಿದ್ದಾನೆ, ಕೇವಲ ಶಬ್ದಗುಣಗಳ ಸ್ವರೂಪವೆಂದು ಭಾವಿಸಿಲ್ಲ.

ಮಾಧುರ್ಯವ್ಯಂಜಕೈರ್ವರ್ಣೈರುಪನಾಗರಿಕೋಚ್ಯತೇ ।
ಓಜಃಪ್ರಕಾಶಕೈಸ್ತೈಸ್ತು ಪರುಷಾ . . ‖ ೨*abc* ‖

ಅಕ್ಷರಗಳು ಮಾಧುರ್ಯಗುಣವನ್ನು ಸೂಚಿಸುತ್ತಿದ್ದರೆ ವೃತ್ತಿಯನ್ನು **ಉಪನಾಗರಿಕಾ** ಎನ್ನಲಾಗುತ್ತದೆ. ಅವೇ ಓಜೋಗುಣವನ್ನು ಪ್ರಕಾಶಿಸುತ್ತಿದ್ದರೆ ವೃತ್ತಿಯನ್ನು **ಪರುಷಾ** ಎನ್ನಲಾಗುತ್ತದೆ.[7]

ಇವೆರಡಕ್ಕೂ ಲಕ್ಷ್ಯಗಳನ್ನು ಹಿಂದೆಯೇ ಕೊಡಲಾಗಿದೆ—'ಅನಂಗರಂಗ . . .' ಇತ್ಯಾದಿ ಶ್ಲೋಕವು ಮೊದಲನೆಯದಕ್ಕೂ 'ಮೂರ್ಧ್ನಾಮುದ್ವೃತ್ತ . . .' ಇತ್ಯಾದಿ ಶ್ಲೋಕವು ಎರಡನೆಯದಕ್ಕೂ ಉದಾಹರಣೆ.

ಕೋಮಲಾ ಪರೈಃ ‖ ೨*d* ‖

ಉಳಿದ ಅಕ್ಷರಗಳಿಂದಾಗುವ ವೃತ್ತಿಯೇ **ಕೋಮಲಾ.** ಇದನ್ನೇ ಕೆಲವರು[8] **ಗ್ರಾಮ್ಯಾ** ಎಂದೂ ಕರೆಯುತ್ತಾರೆ. ಉದಾಹರಣೆ :—

ಅಪಸಾರಯ ಘನಸಾರಂ
ಕುರು ಹಾರಂ ದೂರ ಏವ ಕಿಂ ಕಮಲೈಃ ।
ಅಲಮಲಮಾಲಿ ಮೃಣಾಲೈ
ರಿತಿ ವದತಿ ದಿವಾನಿಶಂ ಬಾಲಾ ‖

ಬಿಸುಡೌ ಪಸಿಲೇಪಮನೀ
ದೆಸೆಯಿಂದೆಸೆ ದೂರಕಂತೆ ಹಾರಮನೀಗಳ್ |
ಬಿಸಮಿದು ಬೇಡಂ ಪದುಮದ
ಬೆಸನಂ ಸಾಕೆಂದು ಬಾಲೆ ಪಗಲಿರುಳೆಂಬಳ್ ||

ಕೇಷಾಂಚಿದೇತಾ ವೈದರ್ಭೀಪ್ರಮುಖಾ ರೀತಯೋ ಮತಾಃ ‖ ೪*ab* ‖

---

[7] ರುದ್ರಟನು ವೃತ್ತಿಗಳ ಸಂಖ್ಯೆಯನ್ನು ಐದಕ್ಕೆ ಹೆಚ್ಚಿಸಿರುವುದಲ್ಲದೆ ಇವಕ್ಕೆ ನಾಮಾಂತರಗಳನ್ನೂ ಕೊಟ್ಟಿದ್ದಾನೆ :—

'ಮಧುರಾ ಪ್ರೌಢಾ ಪರುಷಾ ಲಲಿತಾ ಭದ್ರೇತಿ ವೃತ್ತಯಃ ಪಂಚ' (II. 19) ಕನ್ನಡ ಕಾವ್ಯಾವಲೋಕನದಲ್ಲಿ ರುದ್ರಟನ 'ಮಧುರಾ' 'ಲಲಿತಾ' ಎಂಬ ಪದಗಳನ್ನು ಬಳಸಿದರೂ ಉದ್ಭಟನ ಮೂರು ವೃತ್ತಿಗಳನ್ನು ಮಾತ್ರ ಒಪ್ಪಲಾಗಿದೆ.

[8] ಭಾಮಹ ಮತ್ತು ಉದ್ಭಟ.

ಕೆಲವರ ಮತದಲ್ಲಿ ಇವೇ 'ವೈದರ್ಭೀ' ಮುಂತಾದ **ರೀತಿ**ಗಳೆನಿಸುತ್ತವೆ.

ಈ ಮೂರು **ವೃತ್ತಿ**ಗಳೇ ವಾಮನ ಮುಂತಾದವರ ಸಿದ್ಧಾಂತದಲ್ಲಿ **ವೈದರ್ಭೀ, ಗೌಡೀ, ಪಾಂಚಾಲೀ** ಎಂಬ ಹೆಸರಿನ **ರೀತಿ**ಗಳೆನಿಸುತ್ತವೆ.[9]

## ಲಾಟಾನುಪ್ರಾಸ

ಶಾಬ್ದಸ್ತು ಲಾಟಾನುಪ್ರಾಸೋ ಭೇದೇ ತಾತ್ಪರ್ಯಮಾತ್ರತಃ ‖೪cd‖

ಶಬ್ದಗತವಾದ ಸಾಮ್ಯವೇ ಲಾಟಾನುಪ್ರಾಸ. ಶಬ್ದ ಅಭಿನ್ನವಾದರೂ ಅನ್ವಯ ಭಿನ್ನವಾಗುವುದರಿಂದ ಭಿನ್ನತೆಯುಂಟೆನಿಸುತ್ತದೆ.

ಶಬ್ದಗಳು ಸಮಾನವಾಗಿ ಬರುವ ಅನುಪ್ರಾಸವೇ ಲಾಟಾನುಪ್ರಾಸ. ವಸ್ತುತಃ ಸದೃಶವಾದ ಆ ಶಬ್ದಗಳಿಗೆ ಶಬ್ದರೂಪದಂತೆ ಅರ್ಥಭಾಗದಲ್ಲಿಯೂ ಅಭೇದವಿರುವು

---

[9] ಅನುಪ್ರಾಸ ಜಾತಿಗಳನ್ನು ವಿವರಿಸುವಾಗ ಮಾತ್ರ 'ವೃತ್ತಿ'ಯ ಪ್ರಸ್ತಾಪವನ್ನು ಭಾಮಹಾದಿಗಳು ಮಾಡುವರೆಂಬುದನ್ನು ನೋಡಿದೆವು. ವಸ್ತುತಃ ವಾಮನಾದಿಗಳು 'ರೀತಿ'ಯೆನ್ನುವ ಪದರಚನಾವಿಶೇಷಗಳೊಂದೂ ಅನುಪ್ರಾಸಕ್ಕೆ ನೇರವಾಗಿ ಸಂಬಂಧಿಸಿದುವಲ್ಲ, ವೃತ್ತಿಗಳು ಕಾವ್ಯದ ಏಕದೇಶದಲ್ಲಿ ಮಾತ್ರ ಅನ್ವಯಿಸಿದರೆ, ರೀತಿಗಳು ಸಮಗ್ರಕಾವ್ಯಕ್ಕೂ ಅನ್ವಯಿಸಬಲ್ಲವು. ಆದರೆ ಧ್ವನಿಸಿದ್ಧಾಂತಸ್ಥಾಪನೆಗೆ ಹೊರಟ ಆನಂದವರ್ಧನನು ವೃತ್ತಿಯ ವ್ಯಾಖ್ಯೆಯನ್ನು ರಸಾನುಗುಣ ಶಬ್ದವ್ಯಾಪಾರವೆಂದು ಬರೆದು, ನಾಟ್ಯವೃತ್ತಿಗಳಾದ 'ಕೈಶಿಕೀ' ಮುಂತಾದುವು ರಸಾನುಗುಣ ಅರ್ಥ ವ್ಯಾಪಾರವೆಂದು ನಿಷ್ಕರ್ಷಿಸಿ, 'ರೀತಿ'ಗಳೂ ರಸಾನುಗುಣ ಶಬ್ದಾರ್ಥರೂಪವೇ ಆದ ಕಾರಣ ದ್ವಿವಿಧವೃತ್ತಿಗಳಿಂದ ಭಿನ್ನವಲ್ಲವೆಂದು ಧ್ವನ್ಯಾಲೋಕದಲ್ಲಿ ನಿರ್ಣಯಿಸಿದನು (ನೋಡಿ **ಕನ್ನಡ ಧ್ವನ್ಯಾಲೋಕ,** ಮೂರನೆಯ ಉದ್ದ್ಯೋತದ ಅಂತ್ಯಭಾಗ). ಈ ತತ್ತ್ವವನ್ನೇ ಮಮ್ಮಟನೂ ಇಲ್ಲಿ ಪ್ರತಿಧ್ವನಿಸುತ್ತಿದ್ದಾನೆ. ತಾತ್ವಿಕವಾಗಿ ಇದರ ಸಮರ್ಥನೆ ಅಸಾಧ್ಯವಲ್ಲದಿದ್ದರೂ, ಐತಿಹಾಸಿಕ ದೃಷ್ಟಿಯಿಂದ ವಿಮರ್ಶಿಸುವವರಿಗೆ ಈ ವೃತ್ತಿ-ರೀತಿಗಳ ಅಭೇದಾರೋಪವು ಅಸಮಂಜಸವೆಂದು ಕಾಣದಿರದು. 'ವೃತ್ತಿ'ಗಳು ಕೇವಲ ಅನುಪ್ರಾಸಕ್ಕೆ ನಿಯತವಾದುವಲ್ಲ, ಇಡಿಯ ಕಾವ್ಯಕ್ಕೂ ಅನ್ವಯಿಸಬಲ್ಲ ವಿಶಾಲ ತತ್ತ್ವಗಳೆಂದು ಅಂಗೀಕರಿಸಿದಾಗ ಮಾತ್ರ ಈ 'ರೀತಿ'-'ವೃತ್ತಿ'ಗಳ ಆರೋಪಕ್ಕೆ ಉಪಪತ್ತಿಯುಂಟಾಗುತ್ತದೆ. ಉದ್ಭಟನಲ್ಲಿ ಈ ವಿಶಾಲಾರ್ಥವನ್ನು ಕಲ್ಪಿಸಲು ಸಾಧಕವಿದೆಯೆಂಬುದು ನಿಜ. ಆದರೂ ಅವನಲ್ಲಿ 'ವೃತ್ತಿ'ಯ ಕಲ್ಪನೆ ಕೇವಲ ಶಬ್ದಗುಣಾಶ್ರಿತವಾಗಿರದೆ, ರಸಾಶ್ರಿತವಾಗಿಯೇ ಇತ್ತೆನ್ನಲು ವ್ಯಾಖ್ಯಾಕಾರರ ವಚನಗಳು ಮಾತ್ರ ಪ್ರಮಾಣ. ವಾಮನನ 'ರೀತಿ'ಗಳು ಕೂಡ ರಸಾಶ್ರಿತವಾಗಿಯೇ ನಿರೂಪಿತವಾಗಿವೆಯೆಂದು ಪ್ರತಿಜ್ಞೆ ಮಾಡುವಂತಿಲ್ಲ. ಕನ್ನಡದ ಕಾವ್ಯಾವಲೋಕನಕಾರನಾದರೂ ಅನುಪ್ರಾಸವೃತ್ತಿಗಳಿಗಿಂತ ಭಿನ್ನವಾದ ನಾಟ್ಯವೃತ್ತಿಗಳನ್ನೂ ಬೇರೆಬೇರೆ ವಿವರಿಸಿದ್ದಾನೆ. ಆದರೆ ರಸ-ಧ್ವನಿಯ ಹೊಸ ದೃಷ್ಟಿಕೋನದಿಂದ ನೋಡುವಾಗ ಎಂಟನೆಯ ಉಲ್ಲಾಸದಲ್ಲಿ ಮಮ್ಮಟನು ತೋರಿಸಿರುವ ಹೊಸ ಅರ್ಥಗಳನ್ನು ರೀತಿಗಳಿಗೆ ಅನ್ವಯಿಸಿಕೊಳ್ಳಬೇಕೆಂದು ಮಾತ್ರ ಮಮ್ಮಟನ ಆಶ್ರಯವಿರಬಹುದು.

ದಾದರೂ ಅನ್ವಯದಲ್ಲಿ ಮಾತ್ರ ಭೇದವಿರುತ್ತದೆ, ಲಾಟದೇಶದ ಜನರಿಗೆ ಈ ಅಲಂಕಾರ ಪ್ರಿಯವಾದ ಕಾರಣ ಈ ಬಗೆಯ ಅನುಪ್ರಾಸಕ್ಕೆ **ಲಾಟಾನುಪ್ರಾಸವೆಂದು** ಹೆಸರು. ಇದನ್ನೇ ಇತರರು **ಪದಾನುಪ್ರಾಸವೆನ್ನು**ತ್ತಾರೆ.[10]

**ಲಾಟಾನುಪ್ರಾಸದ ಐದು ಬಗೆಗಳು:**

**೧. ಅನೇಕ ಪದಗಳ ಆವೃತ್ತಿ**

ಪದಾನಾಂ ಸಃ . . . ‖೫a‖

ಒಂದಕ್ಕಿಂತ ಹೆಚ್ಚು ಪದಗಳ ಆವೃತ್ತಿಯಿಂದಲೂ ಅದು ಆಗುತ್ತದೆ. 'ಅದು' ಎಂದರೆ ಲಾಟಾನುಪ್ರಾಸವೆಂದರ್ಥ. ಉದಾಹರಣೆ:—

ಯಸ್ಯ ನ ಸವಿಧೇ ದಯಿತಾ
ದವದಹನಸ್ತುಹಿನದೀಧಿತಿ ಸ್ತಸ್ಯ।
ಯಸ್ಯ ಚ ಸವಿಧೇ ದಯಿತಾ
ದವದಹನಸ್ತುಹಿನದೀಧಿತಿ ಸ್ತಸ್ಯ ‖

ಅವಳಿರಲಿನಿಯಳ್ ಕೆಲದೊಳ್
ದವದಹನಂ ತುಹಿನಕಿರಣನಾತಂಗೆಂದುಂ।
ಅವಳಿಲ್ಲದಿರಲ್ ಕೆಲದೊಳ್
ದವದಹನಂ ತುಹಿನಕಿರಣನಾತಂಗೆಂದುಂ ‖

**೨. ಏಕಪದದ ಆವೃತ್ತಿ**

**ಪದಸ್ಯಾಪಿ. . . ‖೫a‖**

ಒಂದೇ ಪದವು ಒಂದೇ ಸಲ ಆವೃತ್ತವಾದರೂ ಅದೇ ಅಲಂಕಾರ. ಅದೇ ಎಂದರೆ ಲಾಟಾನುಪ್ರಾಸವೇ ಎಂದಭಿಪ್ರಾಯ. ಉದಾಹರಣೆ:—

ವದನಂ ವರವರ್ಣಿನ್ಯಾಸ್ತಸ್ಯಾಸ್ಸತ್ಯಂ ಸುಧಾಕರಃ
ಸುಧಾಕರಃ ಕ್ವ ನು ಪುನಃ ಕಲಂಕಪಂಕಲೋ ಭವೇತ್ ‖

ಆ ವರರೂಪೆಯ ವದನಂ
ಭಾವಿಸೆ ವಿಧುವೆಂಬೆನೆಲ್ಲ ಪರಿಯಿಂ ನಿರುತಂ।

---

[10] ಉದ್ಭಟನು ಹೇಳಿರುವುದು ಹೀಗೆ—'. . . ಪದಾನಾಂ ವಾ ಲಾಟಾನುಪ್ರಾಸಃ'

ಆ ವಿಧುವಲ್ಲದೊಡೇತ-
ಕ್ಕೆರ್ೕವಂಬಡುವಂ ಕಲಂಕದೋಷದೆ ನಿಚ್ಚಂ ||

**೩. ಏಕಸಮಾಸಗತ ೪. ಭಿನ್ನಸಮಾಸಗತ ಮತ್ತು ೫. ಸಮಾಸ–ಅಸಮಾಸಗತ ನಾಮಸಾರೂಪ್ಯ**

ವೃತ್ತಾವನ್ಯತ್ರ ತತ್ರ ವಾ ।
ನಾಮ್ನಃ ಸ ವೃತ್ತ್ಯವೃತ್ತ್ಯೋಶ್ಚ. . . ॥ ೫*bc*॥

ಒಂದೇ ಸಮಾಸಪದದಲ್ಲಿ, ಅಥವಾ ಭಿನ್ನ ಸಮಾಸಪದಗಳಲ್ಲಿ, ಅಥವಾ ಸಮಾಸ–ಅಸಮಾಸಗಳಲ್ಲಿ ನಾಮದ ಎಂದರೆ (ವಿಭಕ್ತಿ ಪ್ರತ್ಯಯ ಸೇರದ) ಪ್ರಾತಿಪದಿಕಾಂಶದ—ಪದದ್ದಲ್ಲ—ಸಾರೂಪ್ಯವಿದ್ದರೂ ಅದೇ ಅಲಂಕಾರ. ಉದಾಹರಣೆ :—

ಸಿತ**ಕರ ಕರ**ರುಚಿರ **ವಿಭಾ**
**ವಿಭಾ**ಕರಾಕಾರ **ಧರಣಿಧರ** ಕೀರ್ತಿಃ ।
ಪೌರುಷ **ಕಮಲಾ ಕಮಲಾ**
ಸಾಪಿ ತವೈವಾಸ್ತಿ ನಾನ್ಯಸ್ಯ ॥

ದಿನ**ಕರ**ನಿಭ ಸಿತ**ಕರ ಕರ**-
ಗುಣರುಚಿರಂ **ಧರಣಿಧರ**ಣ ಜಸಮಿದು ನಿನ್ನೈ-|
**ಸಿರಿಯುಂ** ಬೀರದ **ಸಿರಿಯುಂ**
ಪರರೆಲ್ಲರನುಳಿದು ನಿನ್ನೊಳೈಸಲೆ ನೆಲೆಸಲ್ ||

**ತದೇವಂ ಪಂಚಧಾ ಮತಃ** ॥ ೫*d*॥

ಹೀಗೆ ಲಾಟಾನುಪ್ರಾಸವು ಐದು ಬಗೆಯೆಂದು ನಿರ್ಣಯಿಸಲಾಗಿದೆ.

## ಯಮಕ

ಅರ್ಥೇ ಸತ್ಯರ್ಥಭಿನ್ನಾನಾಂ ವರ್ಣಾನಾಂ ಸಾ ಪುನಃ ಶ್ರುತಿಃ ।
ಯಮಕಂ. . . ॥ ೬*ab*॥

ಅರ್ಥವಿರುವುದಾದರೆ ಭಿನ್ನಾರ್ಥಕವಾಗಿರುವಂತಹ ವರ್ಣಸಮೂಹದ ಅದೇ ರೂಪದ ಆವೃತ್ತಿಯೇ ಯಮಕ.

'ಸಮರ-ಸಮರಸೋಽಯಂ' ಇತ್ಯಾದಿ ಲಕ್ಷ್ಯಗಳಲ್ಲಿ **ಸಮರ** ಎಂಬ ವರ್ಣ ಸಮೂಹ ಆವೃತ್ತವಾಗಿ ಬಂದಾಗ ಮೊದಲನೆಯದಕ್ಕೆ ಮಾತ್ರ ಅರ್ಥವಿದೆ. (ಯುದ್ಧ ವೆಂದು) : 'ಸಮರಸ' ಎಂಬುದರ ಆದಿಭಾಗವಾದ 'ಸಮರ' ಎಂಬ ಪದಾಂಶಕ್ಕೆ ಅರ್ಥವಿಲ್ಲ. ಆದಕಾರಣ ಯಮಕ ಲಕ್ಷಣದಲ್ಲಿ 'ಒಂದು ಶಬ್ದವೇ ಎರಡು ಬೇರೆ ಅರ್ಥಗಳನ್ನು ಪಡೆದಾಗ' ಎನ್ನಲು ಬರುವುದಿಲ್ಲ. ಆದ್ದರಿಂದ 'ಅರ್ಥವಿರುವುದಾದರೆ' ಎನ್ನಲಾಗಿದೆ. **ಸರಃ—ರಸಃ** ಮುಂತಾದ ಲಕ್ಷ್ಯಗಳಲ್ಲಿ ಅದೇ ಎರಡು ವರ್ಣಗಳ ಆವೃತ್ತಿಯಿದ್ದರೂ ಅದೇ ರೂಪದ (=ಕ್ರಮದ) ಆವೃತ್ತಿಯಲ್ಲಿ ಪೂರ್ವಕ್ರಮವೇ ಇರಬೇಕೆಂದು ಸೂಚಿಸಲು ಲಕ್ಷಣದಲ್ಲಿ 'ಅದೇ ರೂಪದ' ಎನ್ನಲಾಗಿದೆ.[11]

ಪಾದತದ್ಭಾಗವೃತ್ತಿ ತದ್ಯಾತ್ಯನೇಕತಾಮ್ ॥ ೬*cd* ॥

ಶ್ಲೋಕದ ಭಿನ್ನಪಾದಗಳಲ್ಲಿ ಯಮಕವಿರಬಹುದಾದಂತೆ, ಭಿನ್ನಪಾದಾಂಶ ಗಳಲ್ಲಿಯೂ ಇರಬಹುದಾದ ಕಾರಣ ಅದರ ಭೇದಗಳು ಅನೇಕವಾಗುತ್ತವೆ.

೧ ನೆಯ ಪಾದವೇ ೨ ನೆಯದರಲ್ಲಿ, ಇಲ್ಲವೆ ೩ ನೆಯದರಲ್ಲಿ ಇಲ್ಲವೆ ೪ ನೆಯದರಲ್ಲಿ ಆವೃತ್ತವಾಗಬಹುದು ; ೨ ನೆಯದು ೩ ಇಲ್ಲವೆ ೪ ನೆಯದರಲ್ಲಿ ಆವೃತ್ತವಾಗಬಹುದು ; ೩ ನೆಯದು ೪ ನೆಯದರಲ್ಲಿ ಆವೃತ್ತವಾಗಬಹುದು ; ಮೊದಲನೆಯದೇ ಮಿಕ್ಕ ಮೂರ ರಲ್ಲಿಯೂ ಏಕವಿಧವಾಗಿ ಆವೃತ್ತವಾಗಬಹುದು. ಹೀಗೆ ಇವನ್ನು ಕೂಡಿದರೆ ಏಳು ಭೇದಗಳಾಗುತ್ತವೆ. ಅಲ್ಲದೆ ೧ ನೆಯದು ೨ ರಲ್ಲಿ ಆವೃತ್ತವಾಗಿ ಅಲ್ಲಿಯೇ ೩ ನೆಯದು ೪ ರಲ್ಲಿ ಬರಬಹುದು ; ಅಥವಾ ೧ ನೆಯದು ೪ ರಲ್ಲೂ, ೨ ನೆಯದು ೩ ರಲ್ಲೂ ಆವೃತ್ತ ವಾಗಬಹುದು. ಇವು ಮತ್ತೆರಡು ಭೇದಗಳಾಗುತ್ತವೆ. ಹೀಗೆ ಎಲ್ಲವನ್ನೂ ಕೂಡಿಸಿದರೆ ಪಾದಯಮಕದಲ್ಲಿ ಒಂಬತ್ತು ಬಗೆಗಳು. ಇವಲ್ಲದೆ ಶ್ಲೋಕಾರ್ಧದ ಆವೃತ್ತಿ, ಮತ್ತು ಇಡಿಯ ಶ್ಲೋಕದ ಆವೃತ್ತಿಯೆಂಬ ಇನ್ನೆರಡು ಭೇದಗಳೂ ಗಣನೀಯ.

ಇನ್ನು ಪಾದಾಂಶದಲ್ಲಿ ಎಣಿಸೋಣ. ಪ್ರತಿಪಾದವನ್ನೂ ಎರಡೆರಡು ಅಂಶ ಗಳೆಂದು ಹಿಡಿದರೆ ಮೇಲೆ ನೋಡಿದ ಹತ್ತು ಪ್ರಭೇದಗಳು (ಕಡೆಯದಾದ ಇಡಿಯ ಶ್ಲೋಕದ ಆವೃತ್ತಿ ಇಲ್ಲಿ ಶಕ್ಯವಿಲ್ಲವಾದ್ದರಿಂದ) ದ್ವಿಗುಣವಾಗಿ ಇಪ್ಪತ್ತಾಗುತ್ತವೆ (ಪ್ರಥಮಪಾದದ ಆದಿಭಾಗ ದ್ವಿತೀಯಪಾದದ ಆದಿಭಾಗದಲ್ಲಿ ಆವೃತ್ತವಾಗುವುದು, ಇತ್ಯಾದಿ). ಪ್ರತಿಪಾದವನ್ನೂ ಮೂರು ಅಂಶಗಳೆಂದು ಹಿಡಿದರೆ ಭೇದಸಂಖ್ಯೆ ಮೂವತ್ತಾಗುತ್ತದೆ; ನಾಲ್ಕು ಅಂಶಗಳೆಂದು ಹಿಡಿದರೆ ನಲವತ್ತಾಗುತ್ತದೆ.

---

[11] ಹೀಗೆ ತರ್ಕಶುದ್ಧವಾದ ನಿಷ್ಕೃಷ್ಟ ಯಮಕ-ಲಕ್ಷಣವನ್ನು ಭಾಮಹಾದಿಗಳಾರೂ ಬರೆದಿಲ್ಲ.

ಇದುವರೆಗೂ ಒಂದು ಪಾದದ ಆದಿಭಾಗ ಮತ್ತೊಂದರ ಆದಿಭಾಗದಲ್ಲೇ ಬರುವ, ಅಂತ್ಯಭಾಗ ಅಂತ್ಯಭಾಗದಲ್ಲೇ ಆವೃತ್ತವಾಗುವ ಭೇದಗಳನ್ನು ಮಾತ್ರ ಎಣಿಸಲಾಯಿತು. ಈಗ ಪ್ರಥಮ ಪಾದದ ಅಂತ್ಯಾರ್ಧ ದ್ವಿತೀಯಪಾದದ ಮೊದಲರ್ಧದಲ್ಲಿ ಬರುವುದು ಮುಂತಾದ ಉಳಿದ ಭೇದಗಳನ್ನು ಗಮನಿಸಿದರೆ (ಪಾದದಲ್ಲಿ ಎರಡೇ ಅಂಶಗಳೆಂದಾಗ) ಅಂತಾದಿಕ, ಆದ್ಯಂತಿಕ, ಇವೆರಡರ ಸಮುಚ್ಚಯಗಳೂ, (ಮೂರು ಅಂಶಗಳೆಂದಾಗ) ಮಧ್ಯಾದಿಕ, ಆದಿಮಧ್ಯ, ಮಧ್ಯಾಂತಿಕ, ಇವುಗಳ ಸಮುಚ್ಚಯವೆಂಬ ಭೇದಗಳೂ, ಪಾದಾಂತರಗಳ ಗೋಜಿಗೆ ಹೋಗದೆ ಇದ್ದರೂ ಒಂದೊಂದೇ ಪಾದದಲ್ಲಿ ಸಾಧ್ಯವಿರುವ ಆದಿಮಧ್ಯ ಮುಂತಾದ ಬಗೆಗಳೂ, ನಿಯತಸ್ಥಾನವಿಲ್ಲದೆ ಅನಿಯತವಾಗಿ ಬರಬಹುದಾದ ಆವೃತ್ತಿಭೇದಗಳೂ ಎಲ್ಲವೂ ಸೇರಿದರೆ ಯಮಕದ ಪ್ರಪಂಚವು (ಗಣನಾತೀತವೆನಿಸುವಷ್ಟು) ಅಪಾರವಾಗಿರುವುದು ತಿಳಿಯುತ್ತದೆ.[12] ಇದು ಕಾವ್ಯದ ನಡುವೆ ಬಂದು ಗಡುಚೆನಿಸುವುದರಿಂದ ಇಲ್ಲಿ ಭೇದಗಳೆಲ್ಲವನ್ನೂ ಪ್ರತಿಪಾದಿಸಿಲ್ಲ.[13] ದಿಕ್ಸೂಚನೆಗಾಗಿ ಕೆಲವೇ ಉದಾಹರಣೆಗಳನ್ನು ಕೊಟ್ಟಿದೆ :—

**ಸನ್ನಾರೀ ಭರಣೋಮಾಯ**ಮಾರಾಧ್ಯ ವಿಧುಶೇಖರಮ್ ।
**ಸನ್ನಾರೀ ಭರಣೋಮಾಯ**ಸ್ತತಸ್ತ್ವಂ ಪೃಥಿವೀಂ ಜಯ ॥[14]

---

[12] ಮಮ್ಮಟನ ಈ ಸೂಕ್ಷ್ಮಪ್ರವಿಭಾಗಪ್ರೇಮವು ಅಲಂಕಾರಶಾಸ್ತ್ರದಲ್ಲಿ ಅವತರಿಸಿದ ಹೊಸ ಪರಂಪರೆಯ ಕುರುಹಾಗಿದೆ. ಅಭೇದಗಳು ಅನೇಕವೆಂದಷ್ಟರಿಂದ ತೃಪ್ತಿಯಿಲ್ಲದೆ ಹೇಗೆ ಅನೇಕವೆಂಬುದನ್ನು ಪಟ್ಟಿಮಾಡಿ ಪ್ರತಿಪಾದಿಸಿದ್ದಾನೆ.

[13] ಇಷ್ಟು ಪಟ್ಟಿಮಾಡಿದರೂ, ಎಲ್ಲ ಪ್ರಭೇದಗಳಿಗೂ ಉದಾಹರಣೆಗಳನ್ನು ಕೊಡಲು ಹೊರಡದೆ, ಸರಸಕಾವ್ಯದಲ್ಲಿ ಇವು ಕಬ್ಬಿಣದ ಕಡಲೆಗಳಂತೆ ಆಗುವವೆಂಬ ತೀರ್ಮಾನವನ್ನು ಮುಚ್ಚುಮರೆಯಿಲ್ಲದೆ ತಿಳಿಸಿರುವುದು ಮಮ್ಮಟನ ಕಾವ್ಯಾಭಿರುಚಿ ಶಾಸ್ತ್ರಕಾರ್ಕಶ್ಯದಿಂದ ಕಲುಷಿತವಾಗಿರಲಿಲ್ಲವೆಂಬುದನ್ನು ತೋರಿಸುತ್ತದೆ. ಆದರೆ ಇವನ ಪೂರ್ವದ ಲಾಕ್ಷಣಿಕನಾದ ರುದ್ರಟನು ಮಾತ್ರ 'ಯಮಕ'ದ ಪ್ರಭೇದಗಳನ್ನು ಚೆನ್ನಾಗಿ ಅರಿತುಕೊಂಡು ಕವಿಗಳು ಮಹಾಕಾವ್ಯಗಳಲ್ಲಿ ಧಾರಾಳವಾಗಿ ಬಳಸಬೇಕೆಂದು ಪ್ರೋತ್ಸಾಹಿಸಿದ್ದನು—

'ಇತಿ ಯಮಕಮಶೇಷಂ ಸಮ್ಯಗಾಲೋಚಯದ್ಭಿಃ
ಸುಕವಿಭಿರಭಿಯುಕ್ತೈರ್ವಸ್ತು ಚೌಚಿತ್ಯವದ್ಭಿಃ ।
ಸುವಿಹಿತಪದಭಂಗಂ ಸುಪ್ರಸಿದ್ಧಾಭಿಧಾನಂ
ತದನು ವಿರಚನೀಯಂ ಸರ್ಗಬಂಧೇಷು ಭೂಮ್ನಾ' ॥ (III. 59)

ಕಾವ್ಯಾವಲೋಕನದಲ್ಲಿಯೂ ಯಮಕಪ್ರಪಂಚವು ವಿಸ್ತಾರವಾಗಿ ನಿರೂಪಿತವಾಗಿದೆ.

[14] ಇಲ್ಲಿ ಮೊದಲನೆಯ ಪಾದವೇ ಮೂರನೆಯ ಪಾದದಲ್ಲಿ ಆವೃತ್ತವಾಗಿದೆ. ಇದಕ್ಕೆ 'ಸಂದಂಶ ಯಮಕ'ವೆಂದೂ ಹೆಸರು.

ಪತಿವ್ರತೆಯರಾದ ನಾರಿಯರನ್ನು ಸಲಹುವ (ಸತ್ + ನಾರೀ + ಭರಣ) ಉಮೆಯ ವಲ್ಲಭ (ಉಮಾ + ಅಯಮ್) ನಾದ ಚಂದ್ರಶೇಖರನನ್ನು ಆರಾಧಿಸಿ, ಪೆಟ್ಟು ತಿಂದ ಶತ್ರುಗಜಗಳೋಡುವ ರಣರಂಗನಾಗಿ (ಸನ್ನ + ಅರಿ + ಇಭ + ರಣ) ನೀನು ನಿರ್ವಂಚನೆಯಿಂದ (ಅ + ಮಾಯ) ಭೂಮಿಯನ್ನು ಗೆಲ್ಲು!

ವಿನಾಯಯಮೇನೋ ನಯತಾಸುಖಾದಿನಾ
ವಿನಾ ಯಮೇನೋನಯತಾ ಸುಖಾದಿನಾ ।
ಮಹಾಜನೋದೀಯತ ಮಾನಸಾದರಂ
ಮಹಾಜನೋದೀ ಯತಮಾನಸಾದರಂ ‖[15]

ಈ ಮಹಾಪುರುಷನು (ಅಯಂ ಮಹಾಜನಃ) ಶತ್ರುಗಳ ಮಾನ ಭಂಜಕನೂ (ಮಾನ + ಸಾತ್) ದುರ್ಜನ ದಂಡಕನೂ (ಮಹಾಜ + ನೋದೀ) ಆಗಿದ್ದರೂ ಸಹ ತಮ್ಮ ಜೀವವನ್ನುಳಿಸಿಕೊಳ್ಳಲು ಯತ್ನಿಸುತ್ತಿರುವ ಜನರನ್ನು ಗೋಳಾಡಿಸಿ (ಯತಮಾನ + ಸಾದ + ರ) ಸಮಸ್ತ ಲೋಕದ ಪ್ರಾಣಭಕ್ಷಕನೂ (ಅಸು + ಖಾದಿ) ಸರ್ವವನ್ನೂ ಮೆಟ್ಟಿದವನೂ (ಊನಯತಾ) ಸರ್ವರ ಸುಖವನ್ನೂ ಮುಕ್ಕಿಬಿಡುವವನೂ (ಸುಖಾದಿ) ಸರ್ವರನ್ನೂ ಕೊಂಡೊಯ್ಯುವವನೂ (ನಯತಾ) ಆದ ಯಮನ ಮೂಲಕ (ಯಮೇನ) ಪಾಪಲೇಪವೇ ಇಲ್ಲದೆ (ಏನೋ ವಿನಾ) ಎಷ್ಟು ಬೇಗ (ಅರಂ) ಹತನಾದನು (ಅದೀಯತ)!

ಸತ್ವಾರಂಭರತೋಽವಶ್ಯಮಬಲಂ ವಿತತಾರವಮ್ ।
ಸರ್ವದಾ ರಣಮಾನ್ಯೈಷೀದವಾನಲಸಮಸ್ಥಿತಃ ‖[16]

ಶೀಘ್ರಗಾಮಿಯೂ (ಅಲಸಂ ಅವಾನ್) ರೌದ್ರಾವತಾರನೂ (ಅಸ್ಥಿತಃ) ಪರಾಕ್ರಮೋದ್ಯೋಗದಲ್ಲಿ ನಿತ್ಯನಿರತನೂ (ಸತ್ವಾರಂಭರತಃ) ಶತ್ರುಗಳ ಸಂಹಾರದಿಂದ ಬರುವ ಮಾನವನ್ನಪೇಕ್ಷಿಸುವವನೂ (ಸರ್ವದಾರಣ ಮಾನ್ಯೈಷೀ) ಶತ್ರುವನದಲ್ಲಿ

---

[15] ಇಲ್ಲಿ ಮೊದಲನೆಯ ಪಾದವು ಎರಡನೆಯದರಲ್ಲೂ, ಮೂರನೆಯ ಪಾದವು ನಾಲ್ಕನೆಯದರಲ್ಲೂ ಆವೃತ್ತವಾಗಿದೆ. ಇದಕ್ಕೆ 'ಯುಗ್ಮಕ (= ಜೋಡಿ) ಯಮಕ'ವೆಂದೂ ಹೆಸರು.

[16] ಇದು 'ಮಹಾಯಮಕ' ಇಲ್ಲಿ ಇದೇ ಶ್ಲೋಕವನ್ನು ಪುನರುಚ್ಚರಿಸಿದಾಗ ಬೇರೊಂದು ಇಡಿಯ ಶ್ಲೋಕವಾಗುತ್ತದೆ. ಶಬ್ದಶ್ಲೇಷದಲ್ಲಿ ಪದವನ್ನು ಒಂದೇಸಲ ಉಚ್ಚರಿಸಿದಾಗ ಎರಡು ಅರ್ಥಗಳು ಬರುತ್ತವೆ. ಇಲ್ಲಿ ಎರಡುಸಲ ಪದವಿಭಾಗಭೇದದಿಂದ ಉಚ್ಚರಿಸಿದಾಗ ಮಾತ್ರ ಎರಡರ್ಥಗಳು ಬರುತ್ತವೆ. ಆದ್ದರಿಂದ ಇದು ಶ್ಲೇಷವಲ್ಲ; ಯಮಕ.

ಕಾಳ್ಗಿಚ್ಚಿನಂತಿರುವವನೂ (ದವಾನಲಸಮಸ್ಥಿತಃ) ಆದ ಆ ಮಹಾಪುರುಷನು ತನ್ನ ಬಲದ ಪ್ರಭಾವದಿಂದ (ಭರ-ತಃ) ಸಿಂಹನಾದ ಮಾಡುತ್ತಾ (ವಿತತಾರವಮ್) ಯಾವಾಗಲೂ (ಸರ್ವದಾ) ವಶವರ್ತಿಗಳಾಗಿರದ (ಅವಶ್ಯಂ) ಮತ್ತು ದುರ್ಬಲರಾದ (ಅಬಲಂ) ಮತ್ತು ಜೀವವನ್ನುಳಿಸಿಕೊಳ್ಳಲು ಮರಗಳ ಮರೆಯಲ್ಲಿ ಅಡಗಿದ್ದ (ಅವಲಂಬಿತತಾರವಮ್) ಶತ್ರುಗಳನ್ನು (ಆರಂ) ರಣಭೂಮಿಗೆ ಎಳೆತಂದನು (ರಣಮಾನ್ಸೈಷೀತ್)

ಅನಂತಮಹಿಮವ್ಯಾಪ್ತವಿಶ್ವಾಂ ವೇಧಾ **ನ ವೇದ ಯಾಮ್** ।
ಯಾ ಚ ಮಾತೇವ ಭಜತೇ ಪ್ರಣತೇ **ಮಾನವೇ ದಯಾಮ್** ‖[17]

ಅನಂತವಾದ ಮಹಿಮೆಯಿಂದ ವಿಶ್ವವನ್ನೇ ವ್ಯಾಪಿಸಿರುವ ಯಾವಾಕೆಯನ್ನು (ಅರ್ಥಾತ್ ಪರಮೇಶ್ವರಿಯನ್ನು) ಬ್ರಹ್ಮನೇ ಅರಿಯನೋ ಮತ್ತು ಯಾವಾಕೆಯು ಪ್ರಣತಜನರನ್ನು ತಾಯಂತೆ ದಯೆದುಂಬಿ ಸಲಹುವಳೋ. . .

ಯದಾನತೋಽಯದಾನತೋ ನಯಾತ್ಯಯಂ ನ ಯಾತ್ಯಯಂ ।
ಶಿವೇ ಹಿತಾಂ ಶಿವೇಹಿತಾಂ ಸ್ಮರಾಮಿತಾಂ ಸ್ಮರಾಮಿ ತಾಂ ‖[18]

ಯಾವಾಕೆಯ ಅಭಯದಾನದಿಂದ (ಅಯದಾನತಃ) ಆನತನಾದ ಈ ಭಕ್ತನು (ಅಯಂ, ಯದ್+ಆನತೋ) ಯಾವಾಗಲೂ ಧರ್ಮದೆಲ್ಲೆಯನ್ನು (ನಯಾತ್ಯಯಂ) ಮೀರುವುದಿಲ್ಲವೋ ಆ ಶಿವನ ಮನೋವಲ್ಲಭೆಯಾದ (ಶಿವೇಹಿತಾಂ), ಲೋಕಕಲ್ಯಾಣ ನಿರತಳಾದ (ಶಿವೇ ಹಿತಾಂ), ಮನ್ಮಥನಿಂದಲೂ ಅಳೆಯಲಾರದ ಸೌಂದರ್ಯವನ್ನುಳ್ಳ, (ಸ್ಮರ + ಅಮಿತಾಂ) ದೇವಿಯನ್ನು ನೆನೆಯುವೆನು !

**ಸರಸ್ವತಿ ಪ್ರಸಾದಂ ಮೇ ಸ್ಥಿತಿಂ ಚಿತ್ತಸರಸ್ವತಿ ।**[19]
**ಸರ ಸ್ವತಿ ಕುರು ಕ್ಷೇತ್ರ-ಕುರುಕ್ಷೇತ್ರ-ಸರಸ್ವತಿ ‖**

---

[17] ಈ ಶ್ಲೋಕ ಆನಂದವರ್ಧನನ **ದೇವೀಶತಕ**ದಿಂದ ಆರಿಸಿದುದು. ದ್ವಿತೀಯ ಪಾದಾಂತ್ಯವು ಚತುರ್ಥ ಪಾದಾಂತ್ಯದಲ್ಲಿ ಆವೃತ್ತವಾಗಿರುವುದರಿಂದ ಇದು 'ಸಂದಷ್ಟಕ' ಯಮಕ.

[18] ಈ ಶ್ಲೋಕವೂ ಆನಂದವರ್ಧನನ **ದೇವೀಶತಕ**ದ್ದೇ. ಎಲ್ಲ ಪಾದಾದಿಗಳೂ ಇಲ್ಲಿ ತಂತಮ್ಮ ಪಾದಾಂತ್ಯದಲ್ಲಿ ಆವೃತ್ತವಾಗಿರುವುದರಿಂದ ಇದು 'ಆದ್ಯಂತಿಕ' ಯಮಕ.

[19] ಈ ಪದ್ಯವೂ ಆನಂದವರ್ಧನನ **ದೇವೀಶತಕ**ದಿಂದಲೇ ತೆಗೆದುಕೊಂಡುದು. ಪೂರ್ವಾರ್ಧದಲ್ಲಿ 'ಆದ್ಯಂತಿಕ' ಮತ್ತು ಉತ್ತರಾರ್ಧದಲ್ಲಿ ಆದ್ಯಂತಿಕ ಅಥವಾ ಅಂತಾದಿಕಗಳ 'ಸಮುಚ್ಚಯ' ಇದೆ.

ವಾಗ್ದೇವಿಯೆ, ಭಕ್ತಜನರ ಹೃದಯಕ್ಷೇತ್ರದಲ್ಲಿ ಕುರುಕ್ಷೇತ್ರದಲ್ಲಿ ಹರಿಯುವ ಸರಸ್ವತೀನದಿಯಂತೆ ಹರಿಯುವವಳೆ, ನನ್ನ ಚಿತ್ತಸಮುದ್ರದಲ್ಲಿ (ಮೇ ಚಿತ್ತ+ಸರಸ್+ವತಿ) ನಿನ್ನ ನಿರಂತರ ನಿವಾಸವನ್ನು ಕೃಪೆಮಾಡಿ ಕರುಣಿಸು (ಸ್ವತಿ ಕುರು).

**ಸಸಾರ ಸಾಕಂ ದರ್ಪೇಣ ಕಂದರ್ಪೇಣ ಸಸಾರಸಾ ।**
**ಶರನ್ನವಾನಾ ವಿಭ್ರಾಣಾ ನಾವಿಭ್ರಾಣಾ ಶರನ್ನವಾ ॥** [20]

ಸಾರಸ ಪಕ್ಷಿಗಳಿಂದ ಕೂಡಿದ (ಸಸಾರಸಾ), ರಸ್ತೆಗಳಲ್ಲೆಲ್ಲ ಕೆಸರಿಲ್ಲದ ಕಾರಣ ಹೊಸ ಬಂಡಿಗಳಿಂದ ಶೋಭಿಸುವ (ನವ+ಅನಾ), ಪಕ್ಷಿಗಳ ಇನಿದನಿಯಿಂದ ತುಂಬಿದ (ನ+ಅ+ವಿ+ಭ್ರಾಣಾ), ಕಾಶಕುಸುಮವನ್ನುಳ್ಳ (ಶರಂ ಬಿಭ್ರಾಣಾ) ಹೊಸ ಶರದೃತು (ಶರನ್ನವಾ) ಮನ್ಮಥನೊಡನೆ (ಕಂದರ್ಪೇಣ ಸಾಕಂ) ಗರ್ವದಿಂದ ಸುಳಿಯಿತು (ದರ್ಪೇಣ ಸಸಾರ).

**ಮಧುಪರಾಜಿ-ಪರಾಜಿತ-ಮಾನಿನೀಜನ-ಮನಃಸುಮನಃಸುರಭಿ ಶ್ರಿಯಂ ।**
**ಅಭೃತ ವಾರಿತ-ವಾರಿಜವಿಪ್ಲವಂ ಸ್ಫುಟಿತ-ತಾಮ್ರ-ತತಾಮ್ರವಣಂ ಜಗತ್ ॥** [21]

ಮಾನಿನಿಯರ ಹೃದಯಗಳನ್ನು ದುಂಬಿಗಳ ಝೇಂಕಾರದಿಂದ ಸೋಲಿಸುತ್ತಿದ್ದ ಹೂಗಳ ಮೂಲಕ ಎಲ್ಲೆಲ್ಲೂ ಸುರಭಿತವಾದ, (ಹಿಮವಿಲ್ಲದ ಕಾರಣ) ಪೀಡೆಯಿಲ್ಲದ

---

[20] ಇಲ್ಲಿ ಪೂರ್ವೋತ್ತರಾರ್ಧಗಳೆರಡರಲ್ಲಿಯೂ 'ಆದ್ಯಂತಿಕ' ಮತ್ತು 'ಅಂತಾದಿಕ'ಗಳ **ಸಮುಚ್ಚಯವಿದೆ.**

[21] ಇದು ರತ್ನಾಕರನ ಹರವಿಜಯವೆಂಬ ಮಹಾಕಾವ್ಯದಲ್ಲಿ ಬರುವ ಶ್ಲೋಕ. ಇಲ್ಲಿ ಅನಿಯತಸ್ಥಾನಗಳಲ್ಲಿ ವರ್ಣಾವೃತ್ತಿಯಿದೆ. ರುದ್ರಟನೂ ಕೂಡ ಇಂತಹ ಅನಿಯತಸ್ಥಾನಾವೃತ್ತಿಯಿಂದಾಗುವ ಯಮಕವು ಅಸಂಖ್ಯವೆಂದಿದ್ದಾನೆ—

ಯಮಕಾನಾಂ ಗತಿರೇಷಾ
ದೇಶಾವಯವಾವಪೇಕ್ಷಮಾಣಾನಾಂ ।
ಅನಿಯತದೇಶಾವಯವಂ
ತ್ವಪರಮಸಂಖ್ಯಂ ಸದೈವಾಸ್ತಿ ॥

ಆನಂದವರ್ಧನನಂತೂ ಧ್ವನ್ಯಾತ್ಮವಾದ ಶೃಂಗಾರರಸದಲ್ಲಿ, ಅದರಲ್ಲೂ ವಿಪ್ರಲಂಭಶೃಂಗಾರದಲ್ಲಿ, ಕವಿ ಎಷ್ಟೇ ಯಮಕ ಪ್ರಯೋಗಕುಶಲನಿದ್ದರೂ, ಅದನ್ನು ಬಳಸಲಾಗದೆಂದಿದ್ದಾನೆ:—

ಧ್ವನ್ಯಾತ್ಮಭೂತೇ ಶೃಂಗಾರೇ ಯಮಕಾದಿನಿಬಂಧನಂ ।
ಶಕ್ತಾವಪಿ ಪ್ರಮಾದಿತ್ವಂ ವಿಪ್ರಲಂಭೇ ವಿಶೇಷತಃ ॥

ಕಮಲಗಳಿಂದ ಶೋಭಿತವಾದ, ಕೆಂಪಾದ ದಾಂಗುಡಿಗಳರಳಿದ ಮಾಮರಗಳಿಂದ ತುಂಬಿದ ವಸಂತದಲ್ಲಿ ಜಗತ್ತೇ ಸೊಬಗನ್ನು (ಶ್ರಿಯಂ) ತಾಳಿತು (ಅಭೃತ).

## ಶ್ಲೇಷ

ವಾಚ್ಯಭೇದೇನ ಭಿನ್ನಾ ಯದ್ ಯುಗಪದ್ ಭಾಷಣಸ್ಪೃಶಃ |
ಶ್ಲಿಷ್ಯನ್ತಿ ಶಬ್ದಾಃ ಶ್ಲೇಷೋऽಸಾವಕ್ಷರಾದಿಭಿರಷ್ಟಧಾ ||೭||

ಎಲ್ಲಿ ಅರ್ಥಭೇದದ ದೆಸೆಯಿಂದ ಪರಸ್ಪರ ಭಿನ್ನವಾಗಿರುವ ಶಬ್ದಗಳೇ ಉಚ್ಚಾರ ಸಾರೂಪ್ಯದ ಮೂಲಕ ಏಕರೀತಿಯಾಗಿ (= ಅಭಿನ್ನವಾಗಿ) ತೋರುವವೋ ಅದೇ ಶ್ಲೇಷ. ಅದರಲ್ಲಿ 'ಅಕ್ಷರ' ಶ್ಲೇಷವೇ ಮುಂತಾದ ಎಂಟು ಪ್ರಕಾರಗಳಾಗುತ್ತವೆ.[22]

ಎಲ್ಲೆಲ್ಲಿ ಅರ್ಥಗಳು ಭಿನ್ನವೋ ಅಲ್ಲೆಲ್ಲ ಶಬ್ದಗಳೂ ಭಿನ್ನವೇ ಎಂಬ ಸಿದ್ಧಾಂತದಂತೆ[23] ಕಾವ್ಯಮಾರ್ಗದಲ್ಲಿ (ಉದಾತ್ತಾದಿ) ಸ್ವರಾದಿಗಳಿಂದ ಬರುವ ಭೇದಗಳನ್ನು ಪರಿಗಣಿಸದ ಕಾರಣ—ವಸ್ತುತಃ ವಿಭಿನ್ನವೇ ಆದರೂ ಯಾವ ಶಬ್ದಗಳು ಸಮಾನ ಕಾಲದಲ್ಲಿ ಉಚ್ಚರಿತವಾಗುವುದರಿಂದ ಒಂದರಲ್ಲೊಂದು ಕೂಡಿಹೋಗಿ ತಮ್ಮ ಭಿನ್ನತೆಯನ್ನು ಮರೆಸಿಕೊಳ್ಳುವವೋ ಅವೇ 'ಶ್ಲೇಷ'ಕ್ಕೆ ಲಕ್ಷ್ಯ. ಶ್ಲೇಷವು 'ಅಕ್ಷರ' 'ಪದ,' 'ಲಿಂಗ,' 'ಭಾಷೆ,' 'ಪ್ರಕೃತಿ,' 'ಪ್ರತ್ಯಯ,' 'ವಿಭಕ್ತಿ,' 'ವಚನ,' ಗಳೆಂಬ ಎಂಟು ಬಗೆಗಳನ್ನೊಳಗೊಳ್ಳುತ್ತದೆ. ಕ್ರಮವಾಗಿ ಉದಾಹರಣೆ :—

---

[22] ಮಮ್ಮಟನು ಇಲ್ಲಿ ರುದ್ರಟನ ಶ್ಲೇಷಲಕ್ಷಣವನ್ನೇ ಪ್ರತಿಧ್ವನಿಸುತ್ತಿದ್ದಾನೆ. ಆದರೆ ರುದ್ರಟನು—ಅವನನ್ನು ಅನುಸರಿಸುವ ಕಾವ್ಯಾವಲೋಕಕಾರನೂ—ಹೇಳುವಂತೆ ಶಬ್ದಶ್ಲೇಷವನ್ನು ಅರ್ಥಾಲಂಕಾರದಲ್ಲಿ ಸೇರಿಸದೆ ಶಬ್ದಾಲಂಕಾರವೆನ್ನುವುದೇ ಶಾಸ್ತ್ರೀಯವೆಂದು ಮಮ್ಮಟನು ಸಾಧಿಸಿದ್ದಾನೆ. ರುದ್ರಟನ ಲಕ್ಷಣವನ್ನೂ, ಅವನು ಉಲ್ಲೇಖಿಸುವ ಎಂಟು ಪ್ರಭೇದಗಳನ್ನೂ ಕೆಳಗೆ ಬರೆದಿದೆ.

ವಕ್ತುಂ ಸಮರ್ಥಮರ್ಥಂ ಸುಶ್ಲಿಷ್ಟಾಕ್ಲಿಷ್ಟವಿವಿಧಪದಸಂಧಿ |
ಯುಗಪದನೇಕಂ ವಾಕ್ಯಂ ಯತ್ರ ವಿಧೀಯತೇ ಸ ಶ್ಲೇಷಃ ||
ವರ್ಣ-ಪದ-ಲಿಂಗ-ಭಾಷಾ-ಪ್ರಕೃತಿ-ಪ್ರತ್ಯಯ-ವಿಭಕ್ತಿ-ವಚನಾನಾಂ |
ಅತ್ರಾಯಂ ಮತಿಮದ್ಭಿರ್ವಿಧೀಯಮಾನೋऽಷ್ಟಧಾ ಭವತಿ || (IV i—೧-೨)

[23] ಇದು ಉದ್ಭಟನ ಸಿದ್ಧಾಂತ. ಅದರಂತೆ ಉಭಯಾರ್ಥಗಳಿರುವಾಗಲೆಲ್ಲ ಎರಡು ಬೇರೆ ಶಬ್ದಗಳಿರುವುವೇ ವಿನಾ ಒಂದೇ ಶಬ್ದವೆಂದು ಹೇಳಬರುವುದಿಲ್ಲ. ಮಮ್ಮಟನು ಆದ್ದರಿಂದಲೇ 'ಆಪಾತತಃ ಅಭಿನ್ನವೆಂದು ತೋರುವ' ಎಂದು ಬರೆಯುತ್ತಾನೆ.

## ಅಕ್ಷರ-ಶ್ಲೇಷ

ಅಲಂಕಾರಶ್ಶಂಕಾಕರನರಕಪಾಲಂ ಪರಿಜನೋ
ವಿಶೀರ್ಣಾಂಗೋ ಭೃಂಗೀ ವಸು ಚ ವೃಷ ಏಕೋ ಬಹುವಯಾಃ ?
ಅವಸ್ಥೇಯಂ ಸ್ಥಾಣೋರಪಿ ಭವತಿ ಸರ್ವಾಮರಗುರೋಃ
ವಿಧೌ ವಕ್ರೇ ಮೂರ್ಧ್ನಿ ಸ್ಥಿತವತಿ ವಯಂ ಕೇ ಪುನರಮೀ ‖[24]

ವಕ್ರವಾದ ವಿಧಿ (ಅಥವಾ ವಿಧು=ಚಂದ್ರ) ತಲೆಯ ಮೇಲಿರುವಾಗ, ದೇವಾಧಿದೇವನಾದ ಪರಮೇಶ್ವರನಿಗೂ ಕೂಡ ಭೀಕರ ನರಕಪಾಲವೇ ಅಲಂಕಾರವೂ, ಅಂಗವಿಕಲನಾದ ಭೃಂಗಿಯೇ ಪರಿಚಾರಕನೂ, ಮುದಿಯೆತ್ತೊಂದೇ ಸಕಲೈಶ್ವರ್ಯವೂ ಆಗುವ ಭವಣೆ ಬಂದಿದೆ; ಎಂದಮೇಲೆ ನಮ್ಮಂತಹ ಬಡಪಾಯಿಗಳ ಪಾಡೇನು ?

## ಪದ-ಶ್ಲೇಷ

ಪ್ರಥುಕಾರ್ತಸ್ವರಪಾತ್ರಂ
ಭೂಷಿತನಿಶ್ಶೇಷಪರಿಜನಂ ದೇವ ।
ವಿಲಸತ್ಕರೇಣುಗಹನಂ
ಸಂಪ್ರತಿ ಸಮಮಾವಯೋಃ ಸದನಂ‖[25]

ರಾಜನೆ. ನಮ್ಮಿಬ್ಬರ ಮನೆಯೂ ಒಂದೇ ಸಮ. ನಿನ್ನ ಮನೆಯಲ್ಲಿ ದೊಡ್ಡ ಸುವರ್ಣಪಾತ್ರೆಗಳಿದ್ದರೆ (ಪೃಥು+ ಕಾರ್ತಸ್ವರ+ ಪಾತ್ರ) ನನ್ನ ಮನೆಯಲ್ಲಿ ಹೆಚ್ಚಿನ ಆರ್ತನಾದ ಯಾವಾಗಲೂ ತುಂಬಿದೆ (ಪ್ರಥುಕ+ಆರ್ತಸ್ವರ+ಪಾತ್ರ). ನಿನ್ನ ಮನೆಯಲ್ಲಿ ಸಕಲ ಪರಿಚಾರಕರೂ ಅಲಂಕೃತರಾಗಿದ್ದರೆ (ಭೂಷಿತ+ನಿಶ್ಶೇಷ+ಪರಿಜನ) ನನ್ನ ಮನೆಯಲ್ಲಿ ಮಂದಿಯೆಲ್ಲವೂ ನೆಲದಮೇಲೆಯೇ ಬಿದ್ದಿರುತ್ತಾರೆ (ಭೂ+ಉಷಿತ + ನಿಶ್ಶೇಷ + ಪರಿಜನ). ನಿನ್ನ ಮನೆಯಲ್ಲಿ ಆನೆಯ ಮರಿಗಳು ಆಡಿದರೆ (ವಿಲಸತ್ + ಕರೇಣು + ಗಹನಂ) ನನ್ನ ಮನೆಯಲ್ಲಿ ಬಿಲದಲ್ಲಿ ತುಂಬಿದ ಧೂಳು ಕವಿದಿದೆ.

---

24 'ವಿಧು', 'ವಿಧಿ', ಎಂಬೆರಡು ಶಬ್ದಗಳಿಗೂ ಸಪ್ತಮೀ ಏಕವಚನದಲ್ಲಿ 'ವಿಧೌ' ಎಂಬ ಒಂದೇ ರೂಪ ಬಂದಿದೆ; ಆದ್ದರಿಂದ ವರ್ಣಶ್ಲೇಷ.

25 ಇಲ್ಲಿ ಶ್ಲೇಷ ಸಮಾಸಪದದಲ್ಲಿರುವುದರಿಂದ ಪದಶ್ಲೇಷ.

## ಲಿಂಗ-ಶ್ಲೇಷ

**ಭಕ್ತಿಪ್ರಹ್ವ ವಿಲೋಕನ ಪ್ರಣಯಿನೀ ನೀಲೋತ್ಪಲ ಸ್ಪರ್ಧಿನೀ**
ಧ್ಯಾನಾಲಂಬನತಾಂ ಸಮಾಧಿನಿರತೈರ್ನೀತೇ ಹಿತಪ್ರಾಪ್ತಯೇ ।
**ಲಾವಣ್ಯಸ್ಯ ಮಹಾನಿಧೀ** ರಸಿಕತಾಂ ಲಕ್ಷ್ಮೀದೃಶೋಸ್ತನ್ವತೀ
ಯುಷ್ಮಾಕಂ ಕುರುತಾಂ ಭವಾರ್ತಿಶಮನಂ ನೇತ್ರೇ ತನುರ್ವಾ ಹರೇಃ ॥

ಭಗವಂತನಾದ ವಿಷ್ಣುವಿನ ಆ ಕಣ್ಣುಗಳು ಅಥವಾ ಶರೀರವು ನಿಮ್ಮ ಭವ ತಾಪವನ್ನೆಲ್ಲ ನೀಗಲಿ! ಅವೆಂತಹವೆಂದರೆ—ಕಣ್ಣುಗಳು ಭಕ್ತಿಪ್ರಣತರನ್ನು ದಯಾ ದೃಷ್ಟಿಯಿಂದ ನೋಡುವುದರಲ್ಲೇ ನಿರತವಾದುವು; ಶರೀರವು ಭಕ್ತಿಪ್ರಣತರ ಕಣ್ಣುಗಳಿಗೆ ಏಕಮಾತ್ರ ಧ್ಯಾನಕೇಂದ್ರ (ಭಕ್ತಿಪ್ರಹ್ವವಿಲೋಕನ ಪ್ರಣಯಿನೀ). ಕಣ್ಣುಗಳು ಮತ್ತು ಶರೀರವೆರಡೂ ಕನ್ನೈದಿಲೆಯ ಸೊಬಗನ್ನು ಮೀರಿಸತಕ್ಕವು (ನೀಲೋತ್ಪಲಸ್ಪರ್ಧಿನೀ). ಕಣ್ಣುಗಳು ಪರಮಪದ ಪ್ರಾಪ್ತಿಯ ಆಸಕ್ತಿಯಿಂದ ಸಮಾಧಿ ನಿರತರಾದ ಯೋಗಿಗಳ ಧ್ಯಾನಕ್ಕೆ ಏಕಾಶ್ರಯಗಳಾದಂತೆ ಶರೀರವೂ ಇಷ್ಟಾರ್ಥ ಸಿದ್ಧಿಯನ್ನು ಬಯಸುವ ಯೋಗಿಗಳಿಗೆ ಧ್ಯಾನಲಕ್ಷ್ಯ. ಎರಡೂ ಸೌಂದರ್ಯದ ಮಹಾನಿಧಿಗಳು, ಎರಡೂ ಲಕ್ಷ್ಮಿಯ ಕಣ್ಣುಗಳಿಗೆ ಆನಂದವನ್ನು ತರತಕ್ಕವು.

ಇದೇ ವಚನ-ಶ್ಲೇಷಕ್ಕೂ ಉದಾಹರಣೆಯಾಗುತ್ತದೆ.[26]

## ಭಾಷಾ — ಶ್ಲೇಷ

ಮಹ ದೇಸು ರಸಂ ಧಂಮೇ ತಮವ ಸಮಾಸಂಗಮಾಗಮಾಹರಣೇ ।
ಹರಬಹು ಸರಣಂ ತಂ ಚಿತ್ತಮೋಹಮವಸರಉ ಮೇಸಹಸಾ ॥

ಹೇ ಉಮೆ, ಉತ್ಸವಪ್ರದೆ, ಆಗಮವಿದ್ಯಾಲಾಭದಲ್ಲಿ ನನ್ನ ಮನೋದೃಢವನ್ನು ದೇವತೆಗಳ ಮೂಲಕ ಯಾವಾಗಲೂ ರಕ್ಷಿಸು ಮತ್ತು ಪದೇಪದೇ ಮುಸುಕುತ್ತಿರುವ ಮನಸ್ಸಿನ ಭ್ರಮೆಯನ್ನು ಬೇಗ ತೊಲಗಿಸು. (ಇದು ಸಂಸ್ಕೃತ ಭಾಷೆಯ ಶ್ಲೋಕ ವೆಂದು ತಿಳಿದಾಗ ಬರುವ ಅರ್ಥ)

---

[26] 'ವಿಲೋಕನಪ್ರಣಯಿನೀ', ಮುಂತಾದ ಶಬ್ದಗಳು ನಪುಂಸಕಲಿಂಗರೂಪವಾಗುವಂತೆ ಸ್ತ್ರೀಲಿಂಗರೂಪವನ್ನೂ ಪಡೆದು ಉಭಯಾರ್ಥಕಾರಿಗಳಾಗಿರುವುದರಿಂದ ಲಿಂಗಶ್ಲೇಷ. ಅಲ್ಲದೆ ಒಮ್ಮೆ ಪ್ರಥಮಾದ್ವಿವಚನರೂಪವೂ, ಅದೇ ಇನ್ನೊಮ್ಮೆ ಪ್ರಥಮಾ ಏಕವಚನರೂಪವೂ ಆಗುವುದರಿಂದ ವಚನ-ಶ್ಲೇಷ.

ಇದನ್ನೇ ಪ್ರಾಕೃತಭಾಷೆಯ ಶ್ಲೋಕವೆಂದು ಭಾವಿಸಿ—

ಮಹದೇಸುರಸಂ ಧಮ್ಮೇ ತಮವಸಮಾಸಂ ಗಮಾಗಮಾ ಹರಣೇ।
ಹರಬಹು ಸರಣಂತಂ ಚಿತ್ತಮೋಹಮವಸರ ಉಮೇ ಸಹಸಾ ॥

ಎಂದೋದಿಕೊಂಡಾಗಲೂ ಕೆಳಗಿನಂತೆ ಅರ್ಥವಾಗುತ್ತದೆ :—

ಹೇ ಹರಪತ್ನಿ, ನನಗೆ ಧರ್ಮದಲ್ಲಿ ಪ್ರೀತಿಯನ್ನು ಕರುಣಿಸು. ತಮೋವಶವಾದ ಆಶೆಯನ್ನು ಭವಪಾಶವಾಗದಂತೆ ತೊಲಗಿಸು. ನನಗೆ ನೀನೇ ಶರಣು. ನನ್ನ ಚಿತ್ತ ಮೋಹವು ಬೇಗ ನೀಗಲಿ![27]

## ಪ್ರಕೃತಿ–ಶ್ಲೇಷ

ಅಯಂ ಸರ್ವಾಣಿ ಶಾಸ್ತ್ರಾಣಿ ಹೃದಿ ಜ್ಞೇಷು ಚ **ವಕ್ಷ್ಯತಿ**।
**ಸಾಮರ್ಥ್ಯಕೃದ**ಮಿತ್ರಾಣಾಂ ಮಿತ್ರಾಣಾಂ ಚ ನೃಪಾತ್ಮಜಃ ॥

ಈ ರಾಜಪುತ್ರನು ಶತ್ರುಗಳ ಸಾಮರ್ಥ್ಯ ನಾಶಕನಷ್ಟೇ ಅಲ್ಲ (ಸಾಮರ್ಥ್ಯಕೃತ್) ಸಕಲ ಶಾಸ್ತ್ರಗಳನ್ನೂ ತನ್ನ ಹೃದಯದಲ್ಲಿ ಧರಿಸಿರುವುದಷ್ಟೇ ಅಲ್ಲ (ವಕ್ಷ್ಯತಿ), ವಿದ್ವಾಂಸರಿಗೂ ಅದನ್ನು ತಿಳಿಸಿ ಹೇಳುವನು (ವಕ್ಷ್ಯತಿ[28]).

## ಪ್ರತ್ಯಯಶ್ಲೇಷ

ರಜನಿರಮಣಮೌಲೇಃ ಪಾದಪದ್ಮಾವಲೋಕ-
　ಕ್ಷಣಸಮಯ ಪರಾಪ್ತಾಪೂರ್ವಸಂಪತ್ಸಹಸ್ರಂ।
ಪ್ರಮಥನಿವಹಮಧ್ಯೇ ಜಾತುಚಿತ್ ತ್ವತ್ಪ್ರಸಾದಾ-
　ದಹಮುಚಿತರುಚಿಃ ಸ್ಯಾ**ನ್ನಂದಿತಾ** ಸಾ ತಥಾ ಮೇ ॥

ಹೇ ದೇವಿ, ನಿನ್ನ ದಯೆಯಾದರೆ ನಾನಾದರೂ ಭಗವಾನ್ ಚಂದ್ರಶೇಖರನ ಚರಣಕಮಲಗಳ ಧ್ಯಾನದಿಂದ ಅಪೂರ್ವವಾದ ಅತುಲೈಶ್ವರ್ಯವನ್ನು ಪಡೆದು, ತನ್ಮೂಲಕ ಪ್ರಮಥಗಣಗಳ ನಡುವೆ ಸ್ಥಾನವನ್ನೂ ಪಡೆಯುವೆನು. ಆಗಂತೂ ನನಗೆ

---

[27] ಇಲ್ಲಿ ಒಂದೇ ಶ್ಲೋಕ ಎರಡು ಭಾಷೆಗಳಲ್ಲೂ ಅರ್ಥಕರವಾಗಿರುವುದರಿಂದ ಭಾಷಾ-ಶ್ಲೇಷ.

[28] ಇಲ್ಲಿ √ಕೃಂತ್ ಮತ್ತು √ಕೃ ಈ ಎರಡು ಧಾತುಗಳಿಗೂ "ಕೃತ್" ಎಂಬ ಒಂದೇ ಕ್ವಿಪ್‌ಪ್ರತ್ಯಯಾಂತರೂಪ; √ವಹ್ ಮತ್ತು √ವಚ್ ಈ ಎರಡು ಧಾತುಗಳಿಗೂ "ವಕ್ಷ್ಯತಿ" ಎಂಬ ಒಂದೇ ಲೃಟ್ ರೂಪವಿರುವುದರಿಂದ ಪ್ರಕೃತಿ-ಶ್ಲೇಷ.

ನಿನ್ನನ್ನು ಸಂತೋಷಗೊಳಿಸುವ ಶಕ್ತಿಯಂತೆ ನಂದಿಯೆನಿಸುವಿಕೆಯೂ ಸಿದ್ಧಿಸಿಯೇ ಬಿಡುತ್ತದೆ.[29]

## ವಿಭಕ್ತಿ-ಶ್ಲೇಷ

ಸರ್ವಸ್ವಂ **ಹರ** ಸರ್ವಸ್ಯ ತ್ವಂ **ಭವ**ಚ್ಛೇದತತ್ಪರಃ ।
**ನಯೋ**ಪಕಾರ ಸಾಮ್ಮುಖ್ಯಮಾಯಾಸಿ ತನುವರ್ತನಮ್ ॥

(ಶಿವನನ್ನು ಕುರಿತು ಉಕ್ತಿಯೆಂದು ಅರ್ಥಮಾಡಿದರೆ) ಹೇ ಮಹಾದೇವ (ಹರ), ನೀನೇ ಜಗತ್ತನ್ನೆಲ್ಲ ವ್ಯಾಪಿಸಿದವನು, ನೀನೇ ಎಲ್ಲರ ಭವಬಂಧನವನ್ನೂ ಕಳೆಯುವುದರಲ್ಲಿ ತತ್ಪರನು. ಕೇವಲ ಲೋಕ ಕಲ್ಯಾಣಕ್ಕಾಗಿಯೇ ನಿನ್ನ ಶರೀರವು ಕೆಲಸ ಮಾಡುತ್ತದೆ.

(ಒಬ್ಬ ದಸ್ಯುವಿನ ಮಾತೆಂದು ಅರ್ಥಮಾಡಿದರೆ) ನೀನು ಎಲ್ಲರ ಸರ್ವಸ್ವವನ್ನೂ ಅಪಹರಿಸು. ಯಾವಾಗಲೂ ಮನೆ ಮುರಿಯುತ್ತಿರು. ಉಪಕಾರಬುದ್ಧಿಯನ್ನು ಬಿಡು. ಭಯಂಕರವಾದ ಆಕಾರವನ್ನು ತಳೆ.[30]

## ಅಭಂಗ–ಶ್ಲೇಷ

ಭೇದಾಭಾವಾತ್ ಪ್ರಕೃತ್ಯಾದೇರ್ಭೇದೋಽಪಿ ನವಮೋ ಭವೇತ್ ॥೭*ab*॥

ಪ್ರಕೃತಿಯೇ ಮುಂತಾದುವುಗಳ ಮೂಲಕ ಶಬ್ದಭೇದದ ಸ್ಫೂರ್ತಿ ಬಾರದಿರುವಾಗ ಕೂಡ ಶಬ್ದವು ಭಿನ್ನಾರ್ಥಗಳನ್ನು ಕೊಡುತ್ತಿರುವುದು ಶ್ಲೇಷದ ಒಂಬತ್ತನೆಯ ಬಗೆ.[31]

---

29 'ನಂದಿತಾ' ಎಂದರೆ ನಂದಿ+ತೃಚ್=ಆನಂದದಾಯಕ ಮತ್ತು ನಂದಿ+ತಲ್=ನಂದಿತ್ವ ವೆಂಬೆರಡರ್ಥಗಳೂ ಪ್ರತ್ಯಯಭೇದದಿಂದ ಬರುವುದರಿಂದ ಪ್ರತ್ಯಯ-ಶ್ಲೇಷ.

30 'ಹರ' ಇತ್ಯಾದಿಗಳು ನಾಮಪದಗಳೂ ಆಗಬಹುದು; ಕ್ರಿಯಾಪದಗಳೂ ಆಗಬಹುದು. ಹೀಗೆ ಸುಪ್-ತಿಙ್ ವಿಭಕ್ತಿಗಳ ಶ್ಲೇಷವೇ ವಿಭಕ್ತಿಶ್ಲೇಷ.

31 ರುದ್ರಟ ನಾಗವರ್ಮರು ಮೇಲಿನ ಭಂಗಶ್ಲೇಷವನ್ನು ಮಾತ್ರ ಅಲಂಕಾರವೆಂದಿರುವರೇ ಹೊರತು ಅಭಂಗಶ್ಲೇಷವನ್ನಲ್ಲ. ಮಮ್ಮಟನು ಅದನ್ನೂ ಹೊಸದಾಗಿ ಸೇರಿಸುತ್ತಿದ್ದಾನೆ. ಉದ್ಭಟನು ಹೇಳಿದ ಅರ್ಥಶ್ಲೇಷವು ರುದ್ರಟನ ಅಷ್ಟವಿಧ ಭಂಗಶ್ಲೇಷದಲ್ಲಿ ಸೇರದಿರುವುದೇ ಕಾರಣ. ರುದ್ರಟನ ಶಬ್ದಶ್ಲೇಷವನ್ನು 'ಸಭಂಗಶ್ಲೇಷ'ವೆಂದೂ ಉದ್ಭಟನ ಅರ್ಥಶ್ಲೇಷವನ್ನು 'ಅಭಂಗಶ್ಲೇಷ'ವೆಂದೂ ವಿಭಾಗಿಸಿ ಮಮ್ಮಟನು ಎರಡಕ್ಕೂ ಇಲ್ಲಿ ಒಂದು ರೀತಿಯ ಸಮನ್ವಯ ಮಾಡುತ್ತಿದ್ದಾನೆ.

ಕಾರಿಕೆಯಲ್ಲಿ ' ಭೇದೋऽಪಿ ನವಮಃ ' ಎಂದರೆ ' ನವಮೋऽಪಿ ಭೇದಃ ' ಎಂದು ಅನ್ವಯ. ' ಅಪಿ ' ಶಬ್ದದ ಕ್ರಮ ತಪ್ಪಿದೆ. (ಛಂದಸ್ಸಿನ ಸೌಕರ್ಯದೃಷ್ಟಿಯಿಂದ).

ಉದಾಹರಣೆ :—

ಯೋऽಸಕೃತ್ ಪರಗೋತ್ರಾಣಾಂ ಪಕ್ಷಚ್ಛೇದಕ್ಷಣಕ್ಷಮಃ ।
ಶತಕೋಟಿದತಾಂ ಬಿಭ್ರದ್ ವಿಬುಧೇಂದ್ರಃ ಸ ರಾಜತೇ ॥

(ರಾಜ–ಪರವಾದ ಅರ್ಥ:—) ಅನೇಕ ಬಾರಿ ಶತ್ರುರಾಜವಂಶದವರ ಪಕ್ಷದವರನ್ನು ಕತ್ತರಿಸುವುದರಲ್ಲಿ ಬಹು ಸಮರ್ಥನೂ ಸಹಸ್ರ ಕೋಟಿ ಹೊನ್ನನ್ನು ಕೊಟ್ಟ ದಾನವೀರನೆಂಬ ಖ್ಯಾತಿಪಾತ್ರನೂ ಆದ ಈ ಪ್ರಾಜ್ಞಶಿರೋಮಣಿಯು ವಿರಾಜಿಸುತ್ತಿರುವನು.

(ಇಂದ್ರ–ಪರವಾದ ಅರ್ಥ:—) ಅನೇಕ ಬಾರಿ ದೊಡ್ಡ ದೊಡ್ಡ ಪರ್ವತಗಳ ರೆಕ್ಕೆಗಳನ್ನೆಲ್ಲ ಕಡಿಯುವುದರಲ್ಲಿ ಬಹು ಸಮರ್ಥನೂ, ಸಹಸ್ರಧಾರೆಯ ವಜ್ರಾಯುಧವನ್ನು ಹಿಡಿದವನೂ ಆದ ದೇವೇಂದ್ರನು ವಿರಾಜಿಸುವನು.

ಇಲ್ಲಿ ಪ್ರಕರಣ(=ಸಂದರ್ಭ)ವೇ ಮುಂತಾದ ನಿಯಾಮಕಗಳೇನೂ ಇಲ್ಲದ ಕಾರಣ ಎರಡು ಅರ್ಥಗಳೂ ವಾಚ್ಯಾರ್ಥಗಳೇ.

ಸ್ವರಿತವೇ ಮುಂತಾದ ಸ್ವರಗಳು ಭಿನ್ನವಾಗಿರುವ ಪ್ರಯುಕ್ತ ಅಕ್ಷರಗಳೊಂದೇ ಆಗಿದ್ದರೂ ಉಚ್ಚಾರಣೆಯಲ್ಲಿ ಭೇದಬರುತ್ತಿರುವ ಶಬ್ದಗಳ ಶ್ಲೇಷವು ಶಬ್ದಶ್ಲೇಷವೆಂದೂ, ಹಾಗೆ ಸ್ವರಭೇದವೇನೂ ಇಲ್ಲದಾಗ ಉಚ್ಚಾರಣೆಯಲ್ಲಿ ಯಾವ ಭೇದವೂ ಇಲ್ಲದೆ ಹೋದರೂ ಅಲಂಕಾರಾಂತರಗಳ ಛಾಯೆ ಸೂಚಿತವಾಗುವಂತೆ ಬರುವ ಶಬ್ದಗಳ ಶ್ಲೇಷವು ಅರ್ಥಶ್ಲೇಷವೆಂದೂ ಪ್ರತಿಪಾದಿಸುವ ಇತರ ಲಾಕ್ಷಣಿಕರು ಈ ಶಬ್ದಶ್ಲೇಷ ಮತ್ತು ಅರ್ಥಶ್ಲೇಷಗಳೆರಡನ್ನೂ ' ಅರ್ಥಾಲಂಕಾರಗಳ ' ನಡುವೆಯೇ ಪರಿಗಣಿಸಿದ್ದಾರೆ.[32] ಎಂದಮೇಲೆ ಅದನ್ನು ' ಶಬ್ದಾಲಂಕಾರ 'ವೆಂದು ಇಲ್ಲಿ ವಿವರಿಸಿದುದು ಹೇಗೆಂದು ಕೇಳಬಹುದು.

---

[32] ಇದು ಉದ್ಭಟನ ಸಿದ್ಧಾಂತದ ಅನುವಾದ. ಉದ್ಭಟನ ಮಾತುಗಳಿವು :—

ಏಕಪ್ರಯತ್ನೋಚ್ಚಾರ್ಯಾಣಾಂ ತಚ್ಛಾಯಾಂ ಚೈವ ಬಿಭ್ರತಾಮ್ ।
ಸ್ವರಿತಾದಿಗುಣೈರ್ಭಿನ್ನೈರ್ಬಂಧಃ ಶ್ಲಿಷ್ಟಮಿಹೋಚ್ಯತೇ ॥
ಅಲಂಕಾರಾಂತರಗತಾಂ ಪ್ರತಿಭಾಂ ಜನಯತ್ ಪದೈಃ ।
ದ್ವಿವಿಧೈರರ್ಥಶಬ್ದೋಕ್ತಿವಿಶಿಷ್ಟಂ ತತ್ ಪ್ರತೀಯತಾಂ ॥ (IV. ೯-೧೦)

ಅವನು ಹೇಳುವ ಎರಡು ಲಕ್ಷಣಗಳೇ ಇವು—೧. ಭಿನ್ನಶಬ್ದಗಳ ಉಚ್ಚಾರಣೆ ಏಕಪ್ರಯತ್ನದಿಂದ ಆಗುವುದು ಮತ್ತು ೨. ಉಪಮಾದಿ ಅಲಂಕಾರಾಂತರಗಳ ಸೂಚನೆ ಬರುತ್ತಿರುವುದು. ಈ

ಇದೇ ನಮ್ಮ ಉತ್ತರ:— ಈ ಶಾಸ್ತ್ರದಲ್ಲಿ ‘ದೋಷ’ ‘ಗುಣ’ ‘ಅಲಂಕಾರ’ ಗಳನ್ನು ಶಬ್ದಗತ, ಮತ್ತು ಅರ್ಥಗತವೆಂದು ವಿಭಾಗ ಮಾಡುವುದು ಸರಿಯಷ್ಟೆ. ಆ ವಿಭಾಗಕ್ಕೆಲ್ಲ ಸಹಭಾವ (= ಅನ್ವಯ) ಮತ್ತು ಸಹಾಭಾವ (= ವ್ಯತಿರೇಕ)ಗಳೇ ಮೂಲ. ಉದಾಹರಣೆಗೆ ಕಷ್ಟತ್ವವೆಂಬ ದೋಷ, ಗಾಢತ್ವವೆಂಬ ಗುಣ, ಅನುಪ್ರಾಸ ವೆಂಬ ಅಲಂಕಾರಗಳೂ ಶಬ್ದಗತವೆಂದು ನಿರ್ಣಯಿಸುವುದಕ್ಕೆ ಆ ಶಬ್ದವಿದ್ದಾಗ ಮಾತ್ರ ಅವು ಬರುವುದೂ ಆ ಶಬ್ದವು ಮಾಯವಾದರೆ ಅವೂ ಮಾಯವಾಗುವುದೂ ಮುಖ್ಯ ನಿಯಾಮಕ. ಹಾಗೆಯೇ ವ್ಯರ್ಥತ್ವದೋಷ, ಪ್ರೌಢಿಗುಣ, ಉಪಮಾಲಂಕಾರ ಗಳು ಆ ಅರ್ಥವಿದ್ದಾಗ ಮಾತ್ರ ಮೂಡುತ್ತವೆ; ಆ ಅರ್ಥ ಇಲ್ಲವಾದರೆ ತಾವೂ ಇಲ್ಲವಾಗುತ್ತವೆಯಾದ್ದರಿಂದ ಅವನ್ನು ಅರ್ಥಗತವೆನ್ನುತ್ತೇವೆ. ಈ ಶಾಸ್ತ್ರವ್ಯವಸ್ಥೆ ಯನ್ನು ಒಪ್ಪಲೇಬೇಕು.[33]

ಸ್ವಯಂ ಚ ಪಲ್ಲವಾತಾಮ್ರಭಾಸ್ವತ್ಕಾರವಿರಾಜಿತಾ ।[34]

(ಚೆಂದಳಿರಿನಂತೆ ಕೆಂಪಾದ ದೀಪ್ತಿಮಯ ಕಿರಣಗಳಿಂದ ವಿರಾಜಿಸುವ ಮತ್ತು ಚೆಂದಳಿರಿನಂತೆ ಕೆಂಪಾದ ಸೂರ್ಯನ ಕಿರಣಗಳಿಂದ ವಿರಾಜಿಸುವ) ಎಂಬ ಅಭಂಗ- ಶ್ಲೇಷವೂ

ಪ್ರಭಾತ ಸಂಧ್ಯೇವಾಸ್ವಾಪಫಲಲುಬ್ಧೇಹಿತಪ್ರದಾ ॥[35]

---

ದೃಷ್ಟಿಯಿಂದ ಶ್ಲೇಷವು ಅರ್ಥಾಲಂಕಾರವಾದೀತೇ ಹೊರತು ಸರ್ವಥಾ ಶಬ್ದಾಲಂಕಾರವೆನಿಸ ಲಾರದು. ಉದ್ಭಟನ ಸಿದ್ಧಾಂತದಲ್ಲಿ ಎಲ್ಲ ಅರ್ಥಾಲಂಕಾರಗಳಿಗೂ ಮೋಹಕತ್ವವನ್ನೀಯುವ ಶ್ಲೇಷಕ್ಕೆ ಬಹಳ ಮಹತ್ವ ಬಂದಿದೆ. ಭಾಮಹನ ಮತದಲ್ಲಿ ವಕ್ರೋಕ್ತಿಗಿರುವ ಪ್ರಾಧಾನ್ಯವೇ ಉದ್ಭಟನ ಮತದಲ್ಲಿ ಅರ್ಥಾಲಂಕಾರ ಶ್ಲೇಷಕ್ಕೆ ಒದಗಿದೆ. ಈ ಅತಿಮಹತ್ವವನ್ನು ಕುಗ್ಗಿಸಲು ಮಮ್ಮಟನು ಹೊರಟಿದ್ದಾನೆ. ಮಮ್ಮಟನೇ ಮುಂದೆ ಅರ್ಥಾಲಂಕಾರ ಪ್ರಕರಣದಲ್ಲಿ ಅರ್ಥ ಶ್ಲೇಷವನ್ನು ಕೂಡ ಒಪ್ಪಿದರೂ ಉದ್ಭಟನು ಹೇಳುವ ಇತರಾಲಂಕಾರ ಮೂಲತ್ವವನ್ನು ಶ್ಲೇಷ ಲಕ್ಷಣದಲ್ಲಿ ಎಲ್ಲಿಯೂ ಒಪ್ಪುವುದಿಲ್ಲ. ಇಲ್ಲಿಯೇ ಉದ್ಭಟನ ಲಕ್ಷಣದ ಖಂಡನೆಯನ್ನು ವಿವರ ವಾಗಿ ಮಾಡಿಬಿಡುತ್ತಾನೆ. ಉದ್ಭಟನು ಶ್ಲೇಷದಿಂದ ಇತರಾಲಂಕಾರ ಪ್ರತೀತಿ ಬರುವುದೆನ್ನುವ ಸ್ಥಳಗಳಲ್ಲೆಲ್ಲ ಇತರಾಲಂಕಾರಗಳೇ ಮುಖ್ಯವೆಂದೂ ಅವುಗಳಲ್ಲಿ ಶ್ಲೇಷದ ಸೂಚನೆ ಮಾತ್ರ ಉಂಟೆಂದೂ ವಾದಿಸಿದ್ದಾನೆ. ಎಲ್ಲಕ್ಕಿಂತ ಹೆಚ್ಚಾಗಿ ಅಲಂಕಾರವು ಶಬ್ದಾಲಂಕಾರವೆನಿಸಲು ಶಬ್ದಾಂತರ ಪರಿವೃತ್ತಿಗೆ ಅಸಹವಾಗಿಯೇ ಇರಬೇಕೆಂಬ ಮೂಲತತ್ವವನ್ನು ಸಾರಿ ಅಲಂಕಾರ ಶಾಸ್ತ್ರದಲ್ಲಿ ಹೆಚ್ಚಿನ ತನ್ನ ವಿವೇಚನೆಯನ್ನು ತೋರಿಸಿದ್ದಾನೆ.

[33] ಈ ವಿಭಾಗವನ್ನು ಮೊದಲು ಸ್ಪಷ್ಟಪಡಿಸಿರುವ ಕೀರ್ತಿ ಮಮ್ಮಟನದು.

[34-35] ಈ ಎರಡು ಉದಾಹರಣವಾಕ್ಯಗಳೂ ಉದ್ಭಟನ ಲಕ್ಷಣ ಗ್ರಂಥದಿಂದಲೇ ಎತ್ತಿಕೊಂಡವು.

(ಕಷ್ಟಲಭ್ಯ ಫಲವಾದ ಮೋಕ್ಷವನ್ನು ಬಯಸುವವರ ಕೋರಿಕೆಯನ್ನು ಪೂರೈಸುವ ಮತ್ತು ಜಾಗರಣದ ಫಲವನ್ನು ಬಯಸುವವರ ಕೋರಿಕೆಯನ್ನು ನೆರವೇರಿಸುವ . . . ಪ್ರಭಾತಸಂಧ್ಯೆಯಂತೆ (= ಉಷಃಕಾಲದಂತೆ) ಗೌರಿಯಿರುವಳೆಂದು ಅನ್ವಯ) ಎಂಬ ಸಭಂಗ-ಶ್ಲೇಷವೂ, ಎರಡೂ ಶಬ್ದ ಮಾತ್ರವನ್ನು ಆಶ್ರಯಿಸಿಕೊಂಡು ಬಂದಿವೆ. ಆದುದರಿಂದ ಎರಡನ್ನೂ ಶಬ್ದಶ್ಲೇಷವೆನ್ನುವುದೇ ಸಮಂಜಸ. ಮೊದಲನೆಯದನ್ನು ಅರ್ಥಶ್ಲೇಷವೆನ್ನುವುದು ಸರಿಯಲ್ಲ. ಎಲ್ಲಿ ಆ ಶಬ್ದವನ್ನು ತೆಗೆದು ಬೇರೆ ಶಬ್ದವನ್ನಿಟ್ಟರೂ ಶ್ಲೇಷವುಳಿಯುವುದೋ ಅಂತಹವನ್ನು ಮಾತ್ರ ಅರ್ಥಶ್ಲೇಷವೆಂದು ಎಣಿಸಬೇಕು. ಉದಾಹರಣೆ :—

ಸ್ತೋಕೇನೋನ್ನತಿಮಾಯಾತಿ ಸ್ತೋಕೇನಾಯಾತ್ಯಧೋಗತಿಮ್ ।
ಅಹೋ ಸುಸದೃಶೀ ವೃತ್ತಿಸ್ತುಲಾಕೋಟೇಃ ಖಲಸ್ಯ ಚ ॥

ಇನಿತರಿನುನ್ನತಿವಡೆಗುಂ
ಇನಿತರಿನವನತಿಯುನಂತೆ ತಕ್ಕಡಿ ತುದಿಯೆಂ।
ದೆನೆ ಪೋಲ್ವುದು ತಾಂ ಗಡ ದು
ರ್ಜನರಿರವಂ ಸರ್ವರೀತಿಯಿಂ ಮೇದಿನಿಯೊಳ್ ॥

ಇದು ಉಪಮಾಲಂಕಾರದ ಪರಿಚಯಕ್ಕೆ ಪೋಷಕವಾದ ಶ್ಲೇಷಾಲಂಕಾರವಲ್ಲ; ಶ್ಲೇಷಾಲಂಕಾರದ ಪರಿಚಯಕ್ಕೆ ಸಾಧಕವಾದ ಉಪಮಾಲಂಕಾರ. ಆದ್ದರಿಂದಲೇ—

ಕಮಲಮಿವ ಮುಖಂ ಮನೋಜ್ಞಮೇತತ್ ಕಚತಿತರಾಂ. . .

ಪದುಮದ ತೆರದಿಂ ಮೆರೆವುದು
ಸುದತಿಯ ವದನಂ ಸಮಂತು ಸುಂದರರೂಪಂ।

ಎಂಬಲ್ಲಿ ಗುಣಸಾಮ್ಯ (= ಸೌಂದರ್ಯ ಗುಣದಲ್ಲಿ ಸಾಮ್ಯ) = ಅಥವಾ ಕ್ರಿಯಾಸಾಮ್ಯ (= ಮೆರೆವ ಕ್ರಿಯೆಯ ಸಾಮ್ಯ) ಅಥವಾ ಗುಣಕ್ರಿಯೆಗಳೆರಡರ ಸಾಮ್ಯವಿರುವಷ್ಟರಿಂದಲೇ ಉಪಮಾಲಂಕಾರವೆನಿಸುತ್ತದೆ. ಹಾಗೆಯೇ—

ಸಕಲಕಲಂ ಪುರಮೇತಜ್ಜಾತಂ ಸಂಪ್ರತಿ ಸುಧಾಂಶುಬಿಂಬಮಿವ. . .।

ಪುರಮಾದುದು **ಸಕಲಕಲಂ**
ವರಚಂದ್ರನ ಬಿಂಬದಂತೆ ಪೊಡವಿಯೊಳೀಗಳ್ ॥

ಎಂಬಲ್ಲಿಯೂ ಸ್ಪಷ್ಟವಾಗಿರುವ ಶಬ್ದಮಾತ್ರಸಾಮ್ಯದಿಂದಲೇ ಉಪಮಾಲಂಕಾರವನ್ನು ಅಂಗೀಕರಿಸಬೇಕು. ಆದುದರಿಂದಲೇ ರುದ್ರಟನು ಹೀಗೆಂದಿರುವನು :—

"ಸ್ಫುಟಮರ್ಥಾಲಂಕಾರಾವೇತಾವುಪಮಾಸಮುಚ್ಚಯೌ ಕಿಂತು ।
ಆಶ್ರಿತ್ಯ ಶಬ್ದಮಾತ್ರಂ ಸಾಮಾನ್ಯಮಿಹಾಪಿ ಸಂಭವತಃ ॥"[36]

ಯದ್ಯಪಿ 'ಉಪಮೆ' ಮತ್ತು 'ಸಮುಚ್ಚಯ'ಗಳು ಗುಣ, ಕ್ರಿಯೆಗಳ ಸಾಮ್ಯದಿಂದ ಅರ್ಥಾಲಂಕಾರಗಳೆನಿಸುವುದು ನಿಜವೇ. ಆದರೆ ಇವುಗಳಲ್ಲಿ ಒಮ್ಮೊಮ್ಮೆ ಕೇವಲ ಶಬ್ದಮಾತ್ರ ಸಾಮ್ಯವೂ ಇರುವುದುಂಟು.'

ಅಲ್ಲದೆ 'ಕಮಲಮಿವ ಮುಖಂ...' ಮುಂತಾದುವು ಸಾಧಾರಣ ಧರ್ಮ ಪ್ರಯುಕ್ತವಾಗದಿದ್ದಾಗ ಮಾತ್ರ ಉಪಮೆಗೆ ಲಕ್ಷ್ಯಗಳೆಂದು ಹೇಳುವುದಾದರೂ ಸರಿಯಲ್ಲ. ಏಕೆಂದರೆ, ಅದನ್ನೊಪ್ಪುವುದಾದರೆ 'ಪೂರ್ಣೋಪಮೆ'ಗೆ ಲಕ್ಷ್ಯವೇ ಇಲ್ಲವೆಂದಾಗಿಬಿಡುತ್ತದೆ.[37]

ದೇವ ತ್ವಮೇವ ಪಾತಾಲಮಾಶಾನಾಂ ತ್ವಂ ನಿಬಂಧನಮ್ ।
ತ್ವಂ ಚಾಮರಮರುದ್ಭೂಮಿರೇಕೋ ಲೋಕತ್ರಯಾತ್ಮಕಃ ॥

ವಿಷ್ಣುಪರವಾದ ಅರ್ಥ:—ದೇವ, ನೀನೇ ಪಾತಾಳ, ನೀನೇ ದಿಕ್ಕುಗಳಿಗೆಲ್ಲ ಆಧಾರವಾದ ಭೂಲೋಕ; ನೀನೇ ಅಮರಾದಿಗಳ ನಿವಾಸವಾದ ಸ್ವರ್ಗಲೋಕ. ಒಬ್ಬನೇ ಆದರೂ ಲೋಕತ್ರಯಾತ್ಮಕನಾಗಿರುವೆ!

ರಾಜಪರವಾದ ಅರ್ಥ :—ದೇವ, ನೀನೇ ಏಕಮಾತ್ರ ರಕ್ಷಕ (ಪಾತಾ+ಅಲಂ), ನೀನೇ ಯಾಚಕರ ಆಶೆಗಳೆಲ್ಲವನ್ನೂ ಪೂರ್ಣಗೊಳಿಸುವವನು, ಚಾಮರದ ಗಾಳಿಗೆ ನೀನೇ ಪಾತ್ರ, ಹೀಗೆ ರಕ್ಷಕ, ದಾತಾರ, ಸುಖಿ ಮೂವರೂ ನೀನೇ ಆಗಿರುವೆ.

ಇದೇ ಮುಂತಾದವು ಉಪಮಾಲಂಕಾರದ ಸಂಸ್ಪರ್ಶವಿಲ್ಲದಿದ್ದರೂ ಸ್ವತಂತ್ರವಾಗಿಯೇ ಶ್ಲೇಷಾಲಂಕಾರವೆನಿಸಬಲ್ಲವು. ಆದ್ದರಿಂದ ಆ ಎರಡು ಅಲಂಕಾರಗಳಿಗೂ ಬೇರೆ ಬೇರೆ ಲಕ್ಷ್ಯಗಳಿರುವುದು ಸ್ಪಷ್ಟ. ಒಂದೇ ಸ್ಥಳದಲ್ಲಿ ಎರಡೂ ಕೂಡಿದಾಗ ಅವುಗಳ 'ಸಂಕರ'ವೆಂದೇ ಅಂಗೀಕರಿಸಬಹುದು. ಸಾಧಕ ಬಾಧಕಗಳನ್ನು ಇನ್ನೂ

[36] ಒಂದೇ ಕಡೆ ಶ್ಲೇಷವೂ, ಉಪಮಾದಿ ಅಲಂಕಾರವೂ ಎರಡೂ ಒಟ್ಟಿಗೆ ತೋರುತ್ತಿರುವಾಗ, ಉಪಮಾದಿ ಅರ್ಥಾಲಂಕಾರಕ್ಕೆ ಪ್ರಾಧಾನ್ಯವೇ ಹೊರತು ಶ್ಲೇಷಕ್ಕಲ್ಲವೆಂಬ ತನ್ನ ಸಿದ್ಧಾಂತಕ್ಕೆ ಮಮ್ಮಟನು ರುದ್ರಟನ ಸಮ್ಮತಿಯನ್ನೂ ಆಧಾರವನ್ನೂ ಇಲ್ಲಿ ಕೊಡುತ್ತಿದ್ದಾನೆ.

[37] ಪೂರ್ಣೋಪಮೆಯ ವಿಸ್ತೃತ ವಿವೇಚನೆ ಮುಂದೆ ಹತ್ತನೆಯ ಉಲ್ಲಾಸದಲ್ಲಿ ಬರುತ್ತದೆ.

ಸೂಕ್ಷ್ಮವಾಗಿ ಪರೀಕ್ಷಿಸಿದರೆ ವಸ್ತುತಃ ಅಂತಹ ಕಡೆಗಳಲ್ಲೆಲ್ಲ ಉಪಮಾಲಂಕಾರವೆಂದೇ ನಿರ್ಣಯಿಸಬೇಕಾಗುತ್ತದೆ. ಇಲ್ಲದಿದ್ದರೆ ಪೂರ್ಣೋಪಮೆಯ ವ್ಯಾಪ್ತಿಯನ್ನು ಕುಗ್ಗಿಸಿದಂತಾಗುತ್ತದೆ. ಇದರಂತೆ—

ಆಬಿಂದುಸುಂದರೀ ನಿತ್ಯಂ ಗಲಲ್ಲಾವಣ್ಯಬಿಂದುಕಾ . . .[38]

'ಜಲದಲ್ಲಿ ಮಾರ್ಪೊಳೆವ ಚಂದ್ರನಂತೆ ಚೆಲ್ವಾದ ಪಾರ್ವತಿಯು ಯಾವಾಗಲೂ ಸೌಂದರ್ಯ ಬಿಂದುಗಳನ್ನು ಸ್ರವಿಸುತ್ತಿದ್ದಳು;' ಮತ್ತು 'ನಿತ್ಯವೂ ಸೌಂದರ್ಯ ಬಿಂದುಗಳನ್ನು ಸ್ರವಿಸುತ್ತಿದ್ದರೂ ಸುಂದರಿಯು ಬಿಂದುರಹಿತಳಾಗಿದ್ದಳು' ಎಂಬಲ್ಲಿಯೂ ಅಲಂಕಾರವು ವಿರೋಧಕ್ಕೆ ಸೂಚಕವಾದ ಶ್ಲೇಷವಲ್ಲ; ಶ್ಲೇಷಕ್ಕೆ ಪೋಷಕವಾದ ವಿರೋಧವೇ, ಇಲ್ಲಿ ಅರ್ಥದ್ವಯವನ್ನು ಪ್ರತಿಪಾದಿಸುವ ಶಬ್ದ ಶ್ಲೇಷವೇ ಇಲ್ಲ. ಏಕೆಂದರೆ ಎರಡನೆಯ ಅರ್ಥವು ಸೂಚ್ಯವಾಗಿದೆಯೇ ಹೊರತು ಪ್ರಧಾನವೆಂದು ವಿವಕ್ಷಿತವಾಗಿಲ್ಲ. ವಿರೋಧದ ಆಭಾಸವನ್ನೇ ವಿರೋಧಾಲಂಕಾರವೆನ್ನುವಂತೆ ಶ್ಲೇಷದ ಆಭಾಸವನ್ನು ಶ್ಲೇಷಾಲಂಕಾರವೆನ್ನಲಾಗದು. ಆದ್ದರಿಂದ ಇಂತಹ ಲಕ್ಷ್ಯಗಳಲ್ಲೆಲ್ಲ ಶ್ಲೇಷವನ್ನು ಸೂಚಿಸುವ ಎರಡನೆಯ ಅಲಂಕಾರವನ್ನೇ ಪ್ರಧಾನವೆಂದು ತಿಳಿಯಬೇಕು. ಆದುದರಿಂದಲೇ—

೧. . . ಸದ್ವಂಶಮುಕ್ತಾಮಣಿಃ . . .[39]

ಒಳ್ಳೆಯ ಬಿದಿರಿಗೆ ಸಮಾನವಾದ ಒಳ್ಳೆಯ ವಂಶಕ್ಕೆ ಮುತ್ತಿನಮಣಿ.

೨. ನಾಲ್ಪಃ ಕವಿರಿವ ಸ್ವಲ್ಪಶ್ಲೋಕೋ ದೇವ ಮಹಾನ್ ಭವಾನ್ . . .[40]

ರಾಜನೆ, ನೀನು ದೊಡ್ಡವನು, ಅಲ್ಪಕವಿಯಂತೆ ಕಡಿಮೆ ಪದ್ಯವುಳ್ಳವನಲ್ಲ ಮತ್ತು ಕಡಿಮೆ ಕೀರ್ತಿಯುಳ್ಳವನಲ್ಲ.

೩. ಅನುರಾಗವತೀ ಸಂಧ್ಯಾ ದಿವಸಸ್ತತ್ಪುರಃಸರಃ ।
ಅಹೋ ದೈವಗತಿಶ್ಚಿತ್ರಾ ತಥಾಪಿ ನ ಸಮಾಗಮಃ ॥[41]

ಅನುರಾಗಿಣಿಯಾ ಸಂಧ್ಯೆಯು
ಮೆನೆ ದಿವಸಂ ತತ್ಪುರಸ್ಸರಂ ತಾನೆಂದುಂ ।

---

[38] ಇದೂ ಉದ್ಭಟನಿಂದ ಉಕ್ತವಾಗಿರುವ ಲಕ್ಷ್ಯವೇ. ಉದ್ಭಟನು ಇಲ್ಲಿ ವಿರೋಧಾಲಂಕಾರದ ಪ್ರತೀತಿಯನ್ನು ಕೊಡುವ ಶ್ಲೇಷವೇ ಅಲಂಕಾರವೆಂದಿದ್ದಾನೆ. ಮಮ್ಮಟನು ಅದನ್ನು ಖಂಡಿಸುತ್ತಿದ್ದಾನೆ.

[39] ಇಲ್ಲಿ ಏಕದೇಶವಿವರ್ತಿ ರೂಪಕಾಲಂಕಾರ.

[40] ಇಲ್ಲಿ ವ್ಯತಿರೇಕಾಲಂಕಾರ ಮುಖ್ಯ.

[41] ಇಲ್ಲಿ ಸಮಾಸೋಕ್ತಿ ಅಲಂಕಾರ ಪ್ರಧಾನ.

ಅಕಟಾ ದೈವದ ಗತಿಯದು
ವಿಕಟಂ ಮೇಣ್ ನೆರೆದುದಿಲ್ಲ ಸಂಗಮಲಾಭಂ ||

೪. ಆದಾಯ ಚಾಪಮಚಲಂ
ಕೃತ್ವಾಹೀನಂ ಗುಣಂ ವಿಷಮದೃಷ್ಟಿಃ|
ಯಶ್ಚಿತ್ರಮಚ್ಯುತಶರೋ
ಲಕ್ಷ್ಯಮಭಾಂಕ್ಷೀನ್ನಮಸ್ತಸ್ಮೈ ||[42]

ಶಿವಪರವಾದ ಅರ್ಥ :—ಯಾರು ತ್ರಿನೇತ್ರನೋ, ಯಾರು ಮಂದರ ಪರ್ವತವನ್ನೇ ಬಿಲ್ಲುಮಾಡಿಕೊಂಡು ಸರ್ಪರಾಜನನ್ನೇ ಹೆದೆಯನ್ನಾಗಿ ಕಟ್ಟಿ, ವಿಷ್ಣುವನ್ನು ಬಾಣವಾಗಿ ಹೂಡಿ ತ್ರಿಪುರರೂಪೀ ಲಕ್ಷ್ಯವನ್ನು ಭೇದಿಸಿದನೋ ಆ ಪ್ರಚಂಡ ಬಿಲ್ಗಾರನಿಗೆ ನಮಸ್ಕಾರ!

ರಾಜಪರವಾದ ಅರ್ಥ :—ಯಾರು ಗುರಿಯ ಕಡೆಗೆ ದೃಷ್ಟಿಯೇ ಇಲ್ಲದಿದ್ದರೂ, ಅಳ್ಳಾಡದ ಬಿಲ್ಲನ್ನು ಹಿಡಿದು, ಹೀನವಾದ ಹೆದೆಯನ್ನೇ ಕಟ್ಟಿಕೊಂಡು ಹೆದೆಯನ್ನು ಬಿಟ್ಟು ಬಾಣ ಹೊರಕ್ಕೆ ಹೋಗದಂತೆಯೇ ಲಕ್ಷ್ಯವನ್ನು ಭೇದಿಸಿರುವನೋ ಆ ಬಿಲ್ಗಾರನಿಗೆ ನಮಸ್ಕಾರ! ಎಂಬ ಉದಾಹರಣೆಗಳಲ್ಲಿ ಅನುಕ್ರಮವಾಗಿ ಏಕದೇಶವಿವರ್ತಿರೂಪಕ, ಶ್ಲಿಷ್ಟವ್ಯತಿರೇಕ, ಸಮಾಸೋಕ್ತಿ, ವಿರೋಧಗಳನ್ನು ಮುಖ್ಯ ಅಲಂಕಾರಗಳೆಂದು ನಿರ್ಣಯಿಸುವುದುಚಿತ; ಶ್ಲೇಷಾಲಂಕಾರವೆಂದಲ್ಲ.

ಹೇಳುವುದು ಶಬ್ದ-ಶ್ಲೇಷವೆಂದು; ಉದಾಹರಿಸುವುದು ಅರ್ಥಾಲಂಕಾರಗಳ ಮಧ್ಯೆ—ಇದು ಯಾವ ಕ್ರಮ ?[43] ಚಮತ್ಕಾರವೇ ಅಲಂಕಾರವೆಂದು ಒಪ್ಪಬೇಕಷ್ಟೆ! ಯಾವುದು ಕವಿಯ ಪ್ರತಿಭೆಯ ವ್ಯಾಪಾರಕ್ಕೆ ಗೋಚರವೋ ಅಲ್ಲಿ ಮಾತ್ರ ಚಮತ್ಕಾರವಿದ್ದೀತು. ಆದ್ದರಿಂದ ಅಲಂಕಾರಕ್ಕೆ ಅದೇ ಅಡಿಗಲ್ಲು.[44] (ಪ್ರಕೃತದಲ್ಲಿ ಕವಿಯ ಪ್ರತಿಭಾ ಮೂಲ ಪ್ರಯತ್ನವೆಲ್ಲ ಶಬ್ದವಿಷಯಕವಾದ ಕಾರಣ ಅಲಂಕಾರವನ್ನು ಶಬ್ದಾಲಂಕಾರವೆಂದೇ ಹೇಳಬೇಕು). ಶಬ್ದಗಳಿಗೆ ಇಲ್ಲಿಯೂ ಅರ್ಥದ ಸಹಕಾರಿತ್ವವುಂಟೆಂಬ ಕಾರಣದಿಂದ ಅವು ಅರ್ಥಾಲಂಕಾರಗಳೆನ್ನುವುದಾದರೆ ಅನುಪ್ರಾಸಾದಿ

---

[42] ಇಲ್ಲಿ ವಿರೋಧಾಲಂಕಾರ ಮುಖ್ಯ.

[43] ಇಲ್ಲಿ ಪ್ರಾಚೀನಾಲಂಕಾರಿಕರ ನಿರೂಪಣೆಯಲ್ಲಿರುವ ವಿಸಂಗತಿಯನ್ನು ಮಮ್ಮಟನು ಹಾಸ್ಯಮಾಡುತ್ತಿದ್ದಾನೆ. ಭಾಮಹ, ದಂಡಿ, ವಾಮನ, ಉದ್ಭಟ, ರುದ್ರಟ—ಯಾರೂ ಮಮ್ಮಟನಷ್ಟು ಸೂಕ್ಷ್ಮವಾಗಿ ಶ್ಲೇಷಾಲಂಕಾರವನ್ನು ಶಬ್ದಾಲಂಕಾರವೆ ಅಲ್ಲವೆ ಎಂದು ವಿವೇಚಿಸಲು ಹೋಗಿಲ್ಲ.

[44] ಅಲಂಕಾರಶಾಸ್ತ್ರದ ಮೂಲಭೂತ ಸಿದ್ಧಾಂತಗಳಲ್ಲಿ ಈ ತತ್ತ್ವವು ಬಹಳ ಮಹತ್ತ್ವದ್ದು.

ಗಳಿಗೂ ಅರ್ಥದ ಸಹಕಾರಿತ್ವವುಂಟೇ ಉಂಟಾದ್ದರಿಂದ ಅವುಗಳನ್ನೂ ನೀವು ಅರ್ಥಾಲಂಕಾರಗಳೆಂದೇ ಕರೆಯಬಹುದಲ್ಲವೆ? ಎಲ್ಲ ಸಮಯದಲ್ಲಿಯೂ ಅನುಪ್ರಾಸವು **ಅಲಂಕಾರ**ವೆನಿಸುವುದಿಲ್ಲ. ರಸಾದಿಗಳನ್ನು ಸೂಚಿಸಲು ಯೋಗ್ಯವಾದ ವಾಚ್ಯಾರ್ಥದ ವೈಶಿಷ್ಟ್ಯವಿರುವಾಗ ಮಾತ್ರ **ಅಲಂಕಾರ**ವೆನಿಸುತ್ತದೆಯಲ್ಲವೆ?[45] ಹಾಗೆಯೇ ಶಬ್ದಗುಣಗಳು, ಶಬ್ದದೋಷಗಳು ಕೂಡ ಅರ್ಥಕ್ಕೆ ಸಾಪೇಕ್ಷವಾಗಿದ್ದುಕೊಂಡೇ ಗುಣದೋಷಗಳೆನಿಸುತ್ತವೆ. ಹಾಗೆಯೇ ಅರ್ಥಗುಣ, ಅರ್ಥದೋಷ, ಅರ್ಥಾಲಂಕಾರಗಳೂ ಕೂಡ ಶಬ್ದಗಳಿಗೆ ಸಾಪೇಕ್ಷವಾಗಿದ್ದುಕೊಂಡೇ ಇರುತ್ತವೆಯಾದ ಪ್ರಯುಕ್ತ ಅವನ್ನೂ ಶಬ್ದಗತವೆಂದೇ ಹೇಳಿಬಿಡಬಹುದಲ್ಲ! 'ವಿಧೌ ವಕ್ರೇ ಮೂರ್ಧ್ನಿ . . .' ಎಂಬ ಅಕ್ಷರಶ್ಲೇಷದ ಲಕ್ಷ್ಯವೇ ಮುಂತಾದುವುಗಳಲ್ಲಿಯೂ ಒಂದೇ ಪ್ರಯತ್ನದಿಂದ ಉಚ್ಚಾರಣೆಯಾಗುತ್ತಿರುವಾಗ ಭಿನ್ನಶಬ್ದಗಳಿದ್ದರೂ ಅರ್ಥಶ್ಲೇಷವೆಂದೇ ಏಕೆ ಹೇಳಬಾರದು?

ಇವೇ ಮೊದಲಾದ ಸೂಕ್ಷ್ಮಗಳನ್ನು ವಾಚಕರೇ ವಿಚಾರಮಾಡಬೇಕು.

## ಚಿತ್ರ

ತಚ್ಚಿತ್ರಂ ಯತ್ರ ವರ್ಣಾನಾಂ ಖಡ್ಗಾದ್ಯಾಕೃತಿಹೇತುತಾ ‖ ೮*cd*‖

ಎಲ್ಲಿ ಅಕ್ಷರಗಳು ಕತ್ತಿಯೇ ಮುಂತಾದ ಆಕೃತಿಯನ್ನು ಚಿತ್ರಿಸುವಂತಿರುವವೋ ಅದೇ ಚಿತ್ರ.[46]

---

[45] ಅಲಂಕಾರ್ಯವಿಲ್ಲದೆ ಅಲಂಕಾರವಿರಲೇ ಆರದೆಂಬುದೂ ಅಷ್ಟೇ ಮಹತ್ತ್ವದ ತತ್ತ್ವ. ರಸಾದಿಗಳ ಔಚಿತ್ಯವಿಲ್ಲದ ಸ್ಥಳದಲ್ಲಿ ವಸ್ತುತಃ ಅಲಂಕಾರಗಳಿರಲೇ ಆರವು. ರಸಾದಿಗಳಿಲ್ಲವೆಂದು ಪ್ರತಿಜ್ಞೆಮಾಡಬಹುದಾದಂಥ ಪ್ರಯೋಗಗಳಲ್ಲಿ ಅಲಂಕಾರಗಳೂ ನಿಜವಾಗಿಲ್ಲವೆಂದೇ ಶಪಥಮಾಡಬಹುದು. ರಸಶಬ್ದದ ಉಕ್ತಿ ಹೇಗೆ ರಸವಲ್ಲವೋ ಹಾಗೆಯೇ ಅಲಂಕಾರದ ಬಾಹ್ಯಲಕ್ಷಣವಷ್ಟೆ ಅಲಂಕಾರವಲ್ಲ. ಎಲ್ಲಿ ವಿವಕ್ಷಿತ ರಸಾದಿಗೆ ಪುಷ್ಟಿಯಿದೆಯೋ ಅಲ್ಲಿ ಮಾತ್ರ ಅಲಂಕಾರ ವಿವೇಚನೆ ಪ್ರಸಕ್ತ. ಮುಂದೆ ಹತ್ತನೆಯ ಉಲ್ಲಾಸದಲ್ಲೂ ಮಮ್ಮಟನು ಈ ಅಂಶವನ್ನು ಒತ್ತಿ ಹೇಳುತ್ತಾನೆ. ಸಹೃದಯರು ಅಲಂಕಾರವುಂಟೆನ್ನುವ ಸ್ಥಳಗಳಲ್ಲೆಲ್ಲ ರಸಾದ್ಯೌಚಿತ್ಯವಿದ್ದೇ ತೀರುತ್ತದೆ. ಅಲಂಕಾರ ವಿವೇಚನೆಯೆಂದರೆ ರಸಾದಿದೃಷ್ಟಿಯಿಂದ ನೋಡುವವರಿಗೆ ವ್ಯಂಜಕ ಶಬ್ದಾರ್ಥಗಳ ವಿವೇಚನೆಯೆಂದರ್ಥವೇ ಹೊರತು ವಾಚ್ಯಾರ್ಥ ವಿವೇಚನೆಯೆಂದಷ್ಟೆ ಅರ್ಥವಲ್ಲ. ಇದೇ ನವೀನಾಲಂಕಾರಿಕರ ಮುಖ್ಯ ಕಾವ್ಯತತ್ತ್ವ.

[46] ಹೋಲಿಸಿರಿ— ಏನಾನುಮನೊಂದಂ ಸಂ
ಸ್ಥಾನದಿನನುಕರಿಸುವಂತು ಭಂಗ್ಯಂತರದಿಂ |
ಪೀನಮೊಡಂಬಡೆ ವಿರಚಿಸೆ
ನಾನಾವಿಚ್ಛಿತ್ತಿ ಚಿತ್ರಮನಿಕುಂ ಪೆಸರಿಂ ||

—ಕಾವ್ಯಾವಲೋಕನ, ೫೬೮.

ಅಕ್ಷರಗಳ ಸನ್ನಿವೇಶದ ವೈಶಿಷ್ಟ್ಯದಿಂದಲೇ ಎಲ್ಲಿ ಕತ್ತಿ, ಮದ್ದಲೆ, ಕಮಲ ಮುಂತಾದ ಚಿತ್ರಾಕೃತಿಗಳು ಮೂಡುವಂತಿರುವುವೋ ಅದೇ ಚಿತ್ರಕಾವ್ಯ.

ಇದು ದುಷ್ಕರ ಇಲ್ಲವೆ ಕಷ್ಟಸಾಧ್ಯವೆನಿಸುವ ಕಾವ್ಯ. ಇದರ ದಿಕ್ಪ್ರದರ್ಶನವನ್ನು ಮಾತ್ರ ಕೆಳಗಿನ ಉದಾಹರಣೆಗಳಲ್ಲಿ ಮಾಡಿದೆ:—

### (೧) ಖಡ್ಗಬಂಧ

ಮಾರಾರಿಶಕ್ರರಾಮೇಭಮುಖೈ-
ರಾಸಾರರಂಹಸಾ |
ಸಾರಾರಬ್ಧಸ್ತವಾನಿತ್ಯಂ ತದಾರ್ತಿಹರಣಕ್ಷಮಾ ||
ಮಾತಾ ನತಾನಾಂ ಸಂಘಟ್ಟಃ
ಶ್ರಿಯಾಂ ಬಾಧಿತಸಂಭ್ರಮಾ |
ಮಾನ್ಯಾಥ ಸೀಮಾ ರಾಮಾಣಾಂ
ಶಂ ಮೇ ದಿಶ್ಯಾದುಮಾದಿಮಾ ||



### (೨) ಮುರಜಬಂಧ

ಸರಲಾ ಬಹುಲಾರಂಭ
ತರಲಾಲಿಬಲಾರವಾ |
ವಾರಲಾಬಹುಲಾಮಂದ-
ಕರಲಾಬಹುಲಾಮಲಾ ||



### (೩) ಪದ್ಮಬಂಧ

ಭಾಸತೇ ಪ್ರತಿಭಾಸಾರ
ರಸಾಭಾತಾಹತಾ ವಿಭಾ |
ಭಾವಿತಾತ್ಮಾ ಶುಭಾವಾದೇ
ದೇವಾಭಾ ಬತ ತೇ ಸಭಾ ||



(೪) ಸರ್ವತೋಭದ್ರ

| ರ | ಸಾ | ಸಾ | ರ | ರ | ಸಾ | ಸಾ | ರ |
|---|---|---|---|---|---|---|---|
| ಸಾ | ಯ | ತಾ | ಕ್ಷ | ಕ್ಷ | ತಾ | ಯ | ಸಾ |
| ಸಾ | ತಾ | ವಾ | ತ | ತ | ವಾ | ತಾ | ಸಾ |
| ರ | ಕ್ಷ | ತ | ಸ್ತ್ವ | ಸ್ತ್ವ | ತ | ಕ್ಷ | ರ |

ರಸಾಸಾರ ರಸಾಸಾರ
ಸಾಯತಾಕ್ಷ ಕ್ಷತಾಯಸಾ |
ಸಾತಾವಾತ ತವಾತಾಸಾ
ರಕ್ಷತಸ್ತ್ವಸ್ತ್ವತಕ್ಷರ ||

ಇವಲ್ಲದೆ ಇನ್ನೂ ಅನೇಕ ಚಿತ್ರರೂಪಗಳುಂಟು. ಆದರೆ ಅವನ್ನೆಲ್ಲ ಇಲ್ಲಿ ತೋರಿಸುವುದಿಲ್ಲ.[47] ಏಕೆಂದರೆ ಇವು ಕವಿಯ ಶಕ್ತಿಪ್ರದರ್ಶನವನ್ನು ಮಾತ್ರ ಮಾಡುವವೇ ಹೊರತು ಕಾವ್ಯಸ್ವರೂಪವನ್ನು ತಳೆದಿರುವುದಿಲ್ಲ.[48]

## ಪುನರುಕ್ತವದಾಭಾಸ

ಪುನರುಕ್ತವದಾಭಾಸೋ ವಿಭಿನ್ನಾಕಾರಶಬ್ದಗಾ |
ಏಕಾರ್ಥತೇವ. . . ‖೬*ab*‖

---

[47] ಹೋಲಿಸಿ—

ಶರಶೂಲಚಾಪಚಕ್ರಾ
ಸಿರೂಪವಿಭರಥತುರಂಗ ಪದಗತಪಾಠಂ |
ಮುರಜಂ ಗೋಮೂತ್ರಿಕೆ ಪು
ಷ್ಕರಮರ್ಧಭ್ರಮಣಸರ್ವತೋಭದ್ರಂಗಳ್ ||

—ಅದೇ ೫೬೯.

ಈ ನಿರೂಪಣೆಯಲ್ಲಿಯೂ ಮಮ್ಮಟನು ರುದ್ರಟನಿಗೆ ಋಣಿ.

[48] ರಸಾದಿವಿವಕ್ಷೆ ಸಂಪೂರ್ಣವಾಗಿ ಶೂನ್ಯವಾಗಿದೆಯೆಂದು ಇಂತಹ ಸ್ಥಳಗಳಲ್ಲಿ ಮಾತ್ರ ಪ್ರತಿಜ್ಞೆ ಮಾಡಬಹುದು. ಆದ್ದರಿಂದ ಮಮ್ಮಟನು ಈ ದುಷ್ಕರ ಕಸರತ್ತುಗಳನ್ನು ಮಾತ್ರ 'ಚಿತ್ರಕಾವ್ಯ'ವೆಂದು ಸ್ಪಷ್ಟವಾಗಿ ಉಲ್ಲೇಖಿಸುತ್ತಿದ್ದಾನೆ. ಇವು ಚಿತ್ರರೂಪದಿಂದ ಕಣ್ಣಿಗೆ ರಂಜಕವಾಗಬಹುದೇ ಹೊರತು ಕಾವ್ಯಸೌಂದರ್ಯದಿಂದಲ್ಲವೆಂಬುದನ್ನು ನಿಸ್ಸಂದಿಗ್ಧವಾಗಿ ಹೇಳಿದ್ದಾನೆ. ಈ ಚಿತ್ರಕಾವ್ಯವೆಂಬ ಶಬ್ದವನ್ನು ತದ್ವತ್ತಾಗಿ ಉಪಮಾದಿ ಅರ್ಥಾಲಂಕಾರಗಳಿಗೂ ಆರೋಪಿಸಿಕೊಂಡು ಅವೂ ಅಷ್ಟೇ ನೀರಸವಾಗಿರಬಲ್ಲವೆಂದು ವಿಕಲ್ಪಿಸಲು ಹೊರಡುವುದು ಸರಿಯಲ್ಲ. ಕಾವ್ಯದ ಕಕ್ಷ್ಯೆಯಲ್ಲೇ ಬಾರದ ಶಾಸ್ತ್ರೋಕ್ತಿಗಳಲ್ಲಿ ಅವು ಹಾಗೆ ನೀರಸವಾಗಿರುವುದು ಸಾಧ್ಯವೇ ಹೊರತು ಕಾವ್ಯದ ಕಕ್ಷ್ಯೆಯಲ್ಲಿ ಪ್ರವೇಶ ಅವಕ್ಕೆ ಸಿಕ್ಕಿದಾಗ ಅವುಗಳಲ್ಲಿ ರಸಾದಿ ವ್ಯಂಜಕತ್ವವಿದ್ದೇ ಇರುತ್ತದೆ. ಆದ್ದರಿಂದ ಕಾವ್ಯವಿಮರ್ಶಕರು ರಸಾದಿಗಳ ವಿವರಣೆಯನ್ನು ಮಾಡುವುದರ ಜತೆಗೆ ಕಾವ್ಯಾಲಂಕಾರಗಳ ವಿವೇಚನೆಯನ್ನು ಮಾಡಲೇಬೇಕು. ಮೊದಲನೆಯದು ಮಾತ್ರ ಅಗತ್ಯ, ಎರಡನೆಯದು ಅಪ್ರಸಕ್ತವೆಂಬ ತೀರ್ಮಾನಕ್ಕೆ ಧ್ವನಿಸಿದ್ಧಾಂತದ ಬೆಂಬಲ ದೊರೆಯಲಾರದು. ನಿರ್ದಿಷ್ಟರಸಾದಿಗಳ

ಭಿನ್ನಭಿನ್ನ ಆಕೃತಿಯ ಶಬ್ದಗಳಿಂದ ಒಂದೇ ಅರ್ಥ ಭಾಸವಾಗುವಂತಿರುವುದು **ಪುನರುಕ್ತವದಾಭಾಸ ಅಲಂಕಾರ.**[49]

ಸಾರ್ಥಕ ಇಲ್ಲವೆ ನಿರರ್ಥಕವಾದ ಭಿನ್ನ ಶಬ್ದಗಳು ಒಂದೇ ಅರ್ಥವನ್ನು ಕೊಡುವಂತೆ ಆಪಾತತಃ ತೋರುವುದು ಪುನರುಕ್ತವದ್ ಆಭಾಸ. ಅದರ ಭೇದಗಳಿವು :—[50]

ಶಬ್ದಸ್ಯ . . . ॥ ೬೮ ॥

೧. ಕೇವಲ ಶಬ್ದಗತವಾದುದು:—ಶಬ್ದಗತವಾದ ಈ ಅಲಂಕಾರವು 'ಸಭಂಗ' ರೂಪವಾಗಿರಬಹುದು ಇಲ್ಲವೆ 'ಅಭಂಗ' ರೂಪವಾಗಿರಬಹುದು. ಎರಡಕ್ಕೂ ಕ್ರಮವಾಗಿ ಉದಾಹರಣೆ :—

ಅರಿವಧ **ದೇಹಶರೀರಃ**
ಸಹಸಾ **ರಥಿಸೂತ** ತುರಗಪಾದಾತಃ ।
**ಭಾತಿ ಸದಾನತ್ಯಾಗಃ**
ಸ್ಥಿರತಾಯಾಮವನಿತಲತಿಲಕಃ ॥

ಶತ್ರುಸಂಹಾರದಲ್ಲಿ ದತ್ತಚಿತ್ತರಾದ, ಶರಾನ್ವಿತರಾದ, ಸೈನಿಕರನ್ನು ಪ್ರೇರಿಸುವವನೂ (ಅರಿವಧದಾ + ಈಹಾ + ಶರೀ + ಈರಃ), ಬಲದಿಂದ ಇಲ್ಲವೆ ಬೇಗನೆ (ಸಹಸಾ) ಸಾರಥಿಗಳಿಂದ ಕೂಡಿದ ಕುದುರೆ ಮತ್ತು ಪದಾತಿಗಳುಳ್ಳವನೂ (ರಥಿ + ಸು + ಉತ), ಸ್ಥಿರತೆಯಲ್ಲಿ ಅಚಲ ಸದೃಶನೂ (ಅಗಃ) ಆದ ರಾಜನು ಸದಾ ವಿನಯದಿಂದ (ಸದಾ + ನತ್ಯಾ + ಅಗಃ) ಶೋಭಿಸುವವನು (ಭಾತಿ).

ಚಕಾಸತ್ಯಂ**ಗನಾರಾಮಾಃ ಕೌತುಕಾನಂದ**ಹೇತವಃ ।
ತಸ್ಯ ರಾಜ್ಞಃ **ಸುಮನಸೋ ವಿಬುಧಾಃ** ಪಾರ್ಶ್ವವರ್ತಿನಃ ॥

ರಮಣಿಯರೊಡನೆ ವಿಹರಿಸುವವರೂ (ಅಂಗನಾರಾಮಾಃ), ನಾನಾ ಕ್ರೀಡೆಗಳಿಂದಲೂ ಇಲ್ಲವೆ ವೇಷಗಳಿಂದಲೂ ಆನಂದವನ್ನುಂಟುಮಾಡತಕ್ಕವರೂ, ಸುಪ್ರಸನ್ನಮನಸ್ಕರೂ (ಸುಮನಸಃ) ಆದ ಪರಿಜನರು ಆ ರಾಜನ ಬಳಿಯಲ್ಲಿರುವರು.

---

ಅಭಿವ್ಯಕ್ತಿಗೆ ನಿರ್ದಿಷ್ಟ ಅಲಂಕಾರಗಳೇ ಸಾಕ್ಷಾತ್ ಕಾರಣಗಳಾಗಿರುವುದು ಕಾವ್ಯಸೌಂದರ್ಯದ ವೈಶಿಷ್ಟ್ಯ. ಮೊದಲನೆಯದು ಅನುಭವೈಕವೇದ್ಯ ; ಎರಡನೆಯದು ಪ್ರದರ್ಶನಯೋಗ್ಯ. ಆದ್ದರಿಂದಲೇ ಲಾಕ್ಷಣಿಕರು ಎರಡನೆಯದಕ್ಕೆ ತಮ್ಮ ಹೆಚ್ಚಿನ ಗಮನವನ್ನೀಯುವರು.

[49] ಈ ಅಲಂಕಾರವನ್ನು ಮೊತ್ತಮೊದಲು ಪ್ರತಿಪಾದಿಸಿದವನೆಂದರೆ ಉದ್ಭಟನೇ.

[50] ಈ ಅಲಂಕಾರದ ವಿಭಾಗಗಳನ್ನು ಮೊದಲು ಮಾಡಿದವನು ಮಮ್ಮಟ.

. . . ತಥಾ ಶಬ್ದಾರ್ಥಯೋರಯಮ್ ॥೯d॥

೨. ಶಬ್ದಾರ್ಥಗತವಾದುದು :—(ಶಬ್ದ ಮತ್ತು ಅರ್ಥಗಳೆರಡನ್ನೂ ಆಶ್ರಯಿಸಿ ಬರುವ ಪುನರುಕ್ತವದಾಭಾಸವೇ ಎರಡನೆಯ ಬಗೆ). ಉದಾಹರಣೆ :—

ತನುವಪುರಜಘನ್ಯೋಽಸೌ
ಕರಿಕುಂಜರರುಧಿರರಕ್ತಖರನಖರಃ ।
ತೇಜೋಧಾಮ ಮಹಃ—
ಪೃಥುಮನಸಾಮಿಂದ್ರೋ ಹರಿರ್ಜಿಷ್ಣುಃ ॥

ಈ ವನರಾಜನಾದ ಸಿಂಹನು (ಅಸೌ ಹರಿಃ) ಕೃಶಕಾಯನಾದರೂ (ತನುವಪುಃ) ಅಮಿತ ಬಲಶಾಲಿ (ಅಜಘನ್ಯ). ತಾನು ಕೊಂದ ಅನೇಕ ಗಜರಾಜರ ರುಧಿರದಿಂದ ಕೆಂಪಾದ ತೀಕ್ಷ್ಣ ನಖಗಳುಳ್ಳವನು (ಕರಿ-ಕುಂಜರ-ರುಧಿರ-ರಕ್ತ-ಖರ-ನಖರಃ). ತೇಜಸ್ಸಿಗೆ ಬಾಳ್ಮನೆ (ತೇಜೋಧಾಮ) ಮತ್ತು ಬಲಾಭಿಮಾನವುಳ್ಳ ಪ್ರಾಣಿಗಳಲ್ಲೆಲ್ಲ ಶ್ರೇಷ್ಠ (ಮಹಃ-ಪೃಥು-ಮನಸಾಂ-ಇಂದ್ರಃ) ಮತ್ತು ಸರ್ವರನ್ನೂ ಸೋಲಿಸಬಲ್ಲವನು (ಜಿಷ್ಣುಃ).

ಇಲ್ಲಿ ಕೆಲವೊಂದು ಪದವನ್ನು ತೆಗೆದು ಸಮಾನಾರ್ಥಕ ಪದವನ್ನಿಟ್ಟರೆ ಅಲಂಕಾರವುಳಿಯುವುದಿಲ್ಲವಾದ್ದರಿಂದ ಇದು ಅಲ್ಲಿ ಶಬ್ದಾಶ್ರಯ ; ಮತ್ತೆ ಕೆಲವೊಂದು ಪದವನ್ನು ಬದಲಾಯಿಸಿದರೂ ಅಲಂಕಾರವು ಉಳಿಯುವುದರಿಂದ ಅಲ್ಲಿ ಅರ್ಥನಿಷ್ಠವೂ ಹೌದು. ಹೀಗೆ ಈ ಅಲಂಕಾರವು ಶಬ್ದಾರ್ಥಗಳೆರಡನ್ನೂ ಆಶ್ರಯಿಸಿಕೊಂಡಿದೆ.

ಇಲ್ಲಿಗೆ ಕಾವ್ಯಪ್ರಕಾಶದಲ್ಲಿ 'ಶಬ್ದಾಲಂಕಾರ ನಿರ್ಣಯ'ವೆಂಬ ಒಂಬತ್ತನೆಯ ಉಲ್ಲಾಸ ಮುಗಿದುದು.

ಇಂತೀ ಶಬ್ದಾಲಂಕೃತಿ
ಸಂತತಿಯಂ ವಿವರಿಸಿರ್ಪ ಮಮ್ಮಟಕೃತಿಯಂ ।
ಚಿಂತಿಸದಿರ್ಪಂಗಕ್ಕುಮೆ
ಸಂತಸಮಂ ಹೃದಯಕೀವ ಮಂಜುಳಮಾರ್ಗಂ ॥

ವಿವಿಧಪ್ರಾಸಂ ಯಮಕಂ
ಕವಿನುತಮಾ ಶ್ಲೇಷವಿಸ್ತರಂ ಚಿತ್ರಂ ಮೇಣ್ ।
ಸುವಿಚಾರಿತರಮಣೀಯಂ
ಕವಿಜನದುರುಶಕ್ತಿಮಾಪಕಂ ಮೇದಿನಿಯೊಳ್ ॥

—ಡಾ॥ ಕೆ. ಕೃಷ್ಣಮೂರ್ತಿ

## ಕೆರೆಯ ತೀರದ ಹೂಗಳಿಗೆ

೧

ಕೆರೆಯ ತೀರದ ಕಿರಿಯ ಹೂಗಳೆ,
　ಏನು ನಿಮ್ಮಯ ಸೊಗವಿದು ?
ಮುದವನೊಂದನೆ ತೋರುತಿರುವುದೆ
　ನಿಮಗೆ, ಮರಿಗಳೆ, ಜಗವಿದು ?

೨

ಎಲರು ಬೀಸಲು ಎದ್ದು ಕುಣಿವಿರಿ,
　ಸಂಗಡಿಗರನು ಕರೆವಿರಿ ;
ಮತ್ತೆ ಮರುಚಣ ಬಿದ್ದು ನಗುವಿರಿ,
　ಸಂತಸದಿ ಮೈಮರೆವಿರಿ.

೩

ಮೊನ್ನೆಯಿಂದಲು ಬನ್ನ ಕವಿದಿಹ
　ನನ್ನ ಮನಸಿನ ಕತ್ತಲು
ಕರಗಿಹೋಯಿತು ಕಂಡು ನಿಮ್ಮನು
　ಹಸುರ ಮಧ್ಯದಿ ಸುತ್ತಲು.

೪

ನಿಮ್ಮ ಜೊತೆಯಲಿ ಕುಳಿತು ವ್ಯಥೆಯಲಿ
　ಮುಳುಗಲಾರೆನು ಖಂಡಿತ ;
ಮಕ್ಕಳುಲಿದಿರೆ ಪಕ್ಕದಲ್ಲಿಯೆ
　ಓದಲಹುದೇ ಪಂಡಿತ?

೫

ಸರಳ ಸುಂದರ ಮುಗ್ಧ ಸುಮಗಳೆ,
　ಎಳೆಯ ಬಿಸಿಲಲಿ ಆಡುತ
ಶಾಂತಿವರ್ಷವ ಕರೆಯುತಿರುವಿರಿ
　ಎದೆಗೆ ಹರ್ಷವ ನೀಡುತ.

೬

ನಿತ್ಯವಾಗಲಿ ನೀವು ನನ್ನಲಿ
ಇಂದು ತುಂಬಿಹ ನಲ್ಮೆಯು ;
ಬಾಳಿಗೀಯಲಿ ದಿವ್ಯ ಕಳೆಯನು
ಅದರ ಅನುಪಮ ಬಲ್ಮೆಯು.

—ಎಂ. ರಾಮರಾವ್.

# ಭಾರತದೇಶದ ಜನವೃದ್ಧಿ ಮತ್ತು ಆಹಾರೋತ್ಪತ್ತಿ

ಭಾರತದೇಶದ ಮುಖ್ಯ ಕಸುಬು ಎಂದರೆ ವ್ಯವಸಾಯ. ದೇಶದ ಜನಸಂಖ್ಯೆಯಲ್ಲಿ ಶೇಕಡ 72 ರಷ್ಟು ಕೃಷಿಯನ್ನು ಅವಲಂಬಿಸಿದ್ದಾರೆ. ಶತಮಾನಗಳಿಂದಲೂ ಫಲವತ್ತಾದ ದೇಶವೆಂದು ಹೆಸರುವಾಸಿಯಾಗಿರುವ ನಮ್ಮ ನಾಡಿನಲ್ಲಿ ಇಂದಿನ ಆಹಾರ ಪರಿಸ್ಥಿತಿಯು ಶೋಚನೀಯವಾಗಿದೆ. ಇತ್ತೀಚೆಗೆ ಇಂಡಿಯಾ, ಪಾಕಿಸ್ಥಾನ, ಚೈನ ಮತ್ತು ಆಗ್ನೇಯ ಏಷ್ಯಾದ ದೇಶಗಳ ಜನಸಂಖ್ಯೆಯು ವಿಪರೀತವಾಗಿ ಹೆಚ್ಚುತ್ತಲಿದೆ. ಆದರೆ ಆಹಾರೋತ್ಪತ್ತಿಯು ಅದೇ ಪ್ರಮಾಣದಲ್ಲಿ ಹೆಚ್ಚುತ್ತಲಿಲ್ಲ. ಆದುದರಿಂದ ನಮ್ಮ ನಾಡಿನ ಜನರಿಗೆ ಸಾಕಷ್ಟು ಆಹಾರವನ್ನು ಒದಗಿಸಲು ವಿದೇಶಗಳಿಂದ ದುಬಾರಿ ಖರೀದಿಯಲ್ಲಿ ಆಹಾರಪದಾರ್ಥಗಳನ್ನು ಆಮದು ಮಾಡಬೇಕಾಗಿದೆ. ದೇಶದ ರಾಜತಂತ್ರಿಗಳು ಮತ್ತು ಮೆಚ್ಚಿನ ಪುಢಾರಿಗಳು 'ದೇಶದ ಆಹಾರೋತ್ಪತ್ತಿಯನ್ನು ಹೆಚ್ಚಿಸಿ' ನಮ್ಮ ನಾಡನ್ನು ಸ್ವಾವಲಂಬಿಯನ್ನಾಗಿ ಮಾಡಲು ಅಹೋರಾತ್ರ ದುಡಿಯುತ್ತಿದ್ದಾರೆ. "ಹೆಚ್ಚಿನ ಆಹಾರವನ್ನು ಬೆಳೆಯುವ ಆಂದೋಲನವು ಈಗ ಹಲವಾರು ವರ್ಷಗಳಿಂದ ಜಾರಿಯಲ್ಲಿದ್ದರೂ ಹೆಚ್ಚು ಫಲದಾಯಕವಾಗಿಲ್ಲ. ಅಣೆಕಟ್ಟು, ಜಲಾಶಯ ನಿರ್ಮಾಣ—ಇವೇ ಮೊದಲಾದ ನೀರಾವರಿ ಕಾಮಗಾರಿಗಳಿಂದಲೂ, ಕೃತಕ ಗೊಬ್ಬರ (ಸೀಮೆ ಗೊಬ್ಬರ) ಗಳ ಹೆಚ್ಚಿನ ಉಪಯೋಗಗಳಿಂದಲೂ, ಒಳ್ಳೇ ಛಾಯೆಯ ಬೀಜಗಳನ್ನು ಬಿತ್ತನೆ ಮಾಡುವುದರಿಂದಲೂ, ಯಂತ್ರಕಲೆಯ ಆಧುನಿಕ ಅನ್ವೇಷಣಗಳಿಗೆ ಅನುಗುಣವಾಗಿ ಸಾಗುವಳಿ ಕ್ರಮವನ್ನು ಉತ್ತಮಗೊಳಿಸುವುದರಿಂದಲೂ ಮುಂದಿನ ಜನಾಂಗಕ್ಕೆ ಸಾಕಷ್ಟು ಆಹಾರಸಾಮಗ್ರಿಗಳನ್ನು ಬೆಳೆಸಲು ನಮ್ಮಿಂದ ಸಾಧ್ಯವಾದೀತೆ, ಅಥವಾ ಆಹಾರೋತ್ಪತ್ತಿಯು ಜನವೃದ್ಧಿಗೆ ಹಿಂದುಬಿದ್ದು, ಜನರನ್ನು ಈತಿಬಾಧೆಗಳಿಗೂ, ಕ್ಷಾಮಡಾಮರಗಳಿಗೂ ಯುದ್ಧ ಅರಿಷ್ಟಗಳಿಗೂ ಬಲಿಯಾಗುವಂತೆ ಮಾಡಿ ಜನಸಂಖ್ಯೆಯನ್ನು ಆಹಾರೋತ್ಪತ್ತಿಯ ಮಟ್ಟಕ್ಕೆ ಬಲವಂತದಿಂದ ಇಳಿಸುವ ಪ್ರಕರಣ ಕಣ್ಣಾರೆ ಕಾಣಬೇಕಾದೀತೆ? ಈ ವಿಧವಾದ ದುಷ್ಪರಿಣಾಮವು ಆಗದಂತೆ ಮಾಡುವ ನಿವಾರಣೋಪಾಯಗಳು ಏನಾದರೂ ಉಂಟೆ? ಈ ಪ್ರಶ್ನೆಗಳನ್ನು ತಕ್ಕ ಅಂಕಿ ಅಂಶಗಳ ಸಹಾಯದಿಂದ ಕೂಲಂಕಷವಾಗಿ ವಿಮರ್ಶೆಮಾಡಿ ಖಚಿತವಾದ ನಿರ್ಧಾರಕ್ಕೆ ಬರುವುದು ಅತ್ಯವಶ್ಯಕ.

ಸಾಗುವಳಿ ಮತ್ತು ಬೆಳೆಗೆ ಸಂಬಂಧಪಟ್ಟ ಸರಿಯಾದ ಅಂಕಿ ಅಂಶಗಳು ಸಿಗುವುದು ಬಹಳ ದುರ್ಲಭ. ಈಗೀಗ ಈ ಕೊರತೆಯನ್ನು ದೂರಮಾಡಲು ಪ್ರಯತ್ನಗಳು ನಮ್ಮ ದೇಶದಲ್ಲಿ ನಡೆಯುತ್ತಲಿವೆ. ಈಗ ದೊರೆಯಬಹುದಾದ ಅಂಕಿಗಳನ್ನು ಪರಿಶೀಲಿಸಿದರೆ ತಲಾ ಸಾಗುವಳಿ ಜಮೀನಿನ ಪ್ರಮಾಣವು ಇಳಿತರವಾಗಿದ್ದು, ಈಗೀಗ ಸ್ವಲ್ಪ ಹೆಚ್ಚುವುದರಲ್ಲಿದೆ. ನಮ್ಮ ದೇಶದ ಒಟ್ಟು ಸಾಗುವಳಿ ಜಮೀನಿನ ವಿಸ್ತೀರ್ಣ ೨೫.೫ ಕೋಟಿ ಎಕರೆ; ಜನಸಂಖ್ಯೆ ೩೬ ಕೋಟಿ: ಅಂದರೆ ತಲಾ ಸಾಗುವಳಿ ಜಮೀನಿನ ವಿಸ್ತೀರ್ಣ ೦.೬೭ ಎಕರೆ ಆಗುತ್ತದೆ. (ಸುಮಾರು ೨೭ ಗುಂಟೆ). ಬಿತ್ತನೆಯ ಜಮೀನಿನ ವಿಸ್ತೀರ್ಣವು ಒಂದೇ ಮಟ್ಟದಲ್ಲಿರುವುದು. ಎರಡು ಬೆಳೆ ತೆಗೆಯುವ ಜಮೀನಿನ ವಿಸ್ತೀರ್ಣ ಶೇಕಡ ೨೦ ರಷ್ಟು ಹೆಚ್ಚಿದೆ. ಹಿಂದಿನ ೫೦ ವರ್ಷಗಳಲ್ಲಿ ದೊಡ್ಡ ಜಲಾಶಯಗಳಿಂದ ನೀರಾವರಿಯಾಗುವ ಜಮೀನುಗಳು ಶೇಕಡ ೧೦ ರಷ್ಟು ಅಧಿಕವಾಗಿವೆ. ಆದರೆ ಕೆರೆ ಕುಂಟೆ, ಭಾವಿ ಮುಂತಾದವುಗಳಿಂದ ನೀರಾವರಿಯಾಗುವ ಜಮೀನಿನ ವಿಸ್ತೀರ್ಣವು ಹೆಚ್ಚಿಲ್ಲ. ಹೊಸ ಕೆರೆ ಕಟ್ಟೆಗಳು, ಭಾವಿಗಳು ತೋಡಿಸುತ್ತಿದ್ದಾಗ್ಯೂ, ಹಳೆಯ ಕೆರೆಗಳು ಮರಮತ್ತು ಮಾಡದೆ ನೀರಾವರಿಗೆ ಅನರ್ಹವಾಗುತ್ತಲಿವೆ. ೧೯೫೦-೫೧ ನೇ ಇಸವಿಯಲ್ಲಿ ನಮ್ಮ ದೇಶದಲ್ಲಿ ೫೦೦ ಲಕ್ಷ ಟನ್ನುಗಳು ಉತ್ಪತ್ತಿಯಾದವು. ೧೯೫೦ ನೇ ಜನಗಣತಿಯ ಪ್ರಕಾರ, ನಮ್ಮ ದೇಶದ ಜನಸಂಖ್ಯೆಯು ೩೫.೬ ಕೋಟಿ: ಅಂದರೆ ದಿವಸ ಒಂದಕ್ಕೆ ತಲಾ ೧೩⅔ ಔನ್ಸ್ ಕಾಳು ದೊರೆಯುವುದು. ಹಿಂದಿನ ಮೂರು ದಶಮಾನಗಳಲ್ಲಿ ತಲಾ ಧಾನ್ಯದ ಉತ್ಪತ್ತಿ ದಿವಸ ಒಂದಕ್ಕೆ ೨೩.೩ ಔನ್ಸ್, ೧೯.೪ ಔನ್ಸ್ ಮತ್ತು ೧೫.೫ ಔನ್ಸ್‌ಗಳಾಗಿದ್ದವು. ಜನಸಂಖ್ಯೆಯು ಸಾಲಿಯಾನ ಶೇಕಡ ೧.೩ ರಷ್ಟು ಹೆಚ್ಚುತ್ತಿರುವಾಗ ತಲಾ ಸಾಗುವಳಿ ಜಮೀನು ಮತ್ತು ಉತ್ಪತ್ತಿ ವರ್ಷಂಪ್ರತಿ ಇಳಿಯುತ್ತಲೇ ಇವೆ. ಜನಸಂಖ್ಯೆಯ ಒತ್ತಡವು ಹೆಚ್ಚುತ್ತಲಿದ್ದರೂ ಖರಾಬು ಜಮೀನನ್ನು ಆಬಾದು ಮಾಡಿ ಬೆಳೆ ತೆಗೆಯುವ ಉದ್ಯಮವು ನಡೆಯುತ್ತಿರುವಂತೆ ತೋರುವುದಿಲ್ಲ.

ಸರ್ಕಾರದವರು ಆಹಾರೋತ್ಪತ್ತಿಯನ್ನು ಹೆಚ್ಚಿಸಲು ಸರ್ವಪ್ರಯತ್ನ ನಡೆಸುತ್ತಿದ್ದರೂ, ಆಹಾರೋತ್ಪತ್ತಿ ಏನೂ ಹೆಚ್ಚುತ್ತಿಲ್ಲ. ಅಕ್ಕಿ, ಜೋಳ, ಗೋಧಿ ಮುಂತಾದವು ೪೪೦ ಲಕ್ಷ ಟನ್ನುಗಳಷ್ಟು. ಇತರ ಕಿರುಧಾನ್ಯಗಳು ೬೦ ಲಕ್ಷ ಟನ್ನುಗಳಷ್ಟು: ಅಂದರೆ ವರ್ಷಕ್ಕೆ ಒಟ್ಟು ೫೦೦ ಲಕ್ಷ ಟನ್ನುಗಳಷ್ಟು ಧಾನ್ಯಗಳು ಉತ್ಪತ್ತಿಯಾಗುತ್ತಿವೆ. ಇದು ನಮ್ಮ ಆವಶ್ಯಕತೆಗೆ ಸಾಲದು. ಇನ್ನೂ ಸುಮಾರು ೪೦ ಲಕ್ಷ ಟನ್ನುಗಳಷ್ಟು ಪ್ರತಿವರ್ಷವೂ ಬೇಕಾಗುವುದು. ಜನಸಂಖ್ಯೆಯು ವರ್ಷ ಒಂದಕ್ಕೆ ೪೫ ಲಕ್ಷದಷ್ಟು ಹೆಚ್ಚುತ್ತಿರುವುದರಿಂದ ನಮ್ಮ ಆವಶ್ಯಕತೆಯು ಕಾಲಕ್ರಮೇಣ ಹೆಚ್ಚುತ್ತಲೇ

ಹೋಗುವುದು. ಆದುದರಿಂದ ಇನ್ನೂ ಹೆಚ್ಚು ಹೆಚ್ಚಾಗಿ ವಿದೇಶಗಳಿಂದ ಧಾನ್ಯವನ್ನು ಆಮದು ಮಾಡಬೇಕಾಗುವುದು. ಅಂದರೆ ಬೇಸಾಯವನ್ನೇ ಮುಖ್ಯ ಕಸಬಾಗಿ ಉಳ್ಳ ಫಲವತ್ತಾದ ನಮ್ಮ ಭಾರತದೇಶವು ಇಲ್ಲಿಯ ಜನರಿಗೆ ಬೇಕಾಗುವ ದವಸ ಧಾನ್ಯಗಳನ್ನು ಯಥೇಷ್ಟ ಬೆಳೆಯಲಾರದೆ ಶೇಕಡ ೧೦ ಭಾಗದಷ್ಟು ದೇಶಾಂತರಗಳಿಂದ ತರಿಸಿಕೊಳ್ಳುವ ದುಃಸ್ಥಿತಿ ಒದಗಿದೆ. ಇದರ ಪರಿಣಾಮವಾಗಿ ಭಾರತವಾಸಿಗಳ ಆರ್ಥಿಕ ಜೀವನದ ಮಟ್ಟವು ಮತ್ತಷ್ಟು ಕೆಳಕ್ಕೆ ಕುಸಿಯುತ್ತಿದೆ. ೧೦-೧೨ ಶತಮಾನಗಳ ಹಿಂದೆ ಇಂಡಿಯಾ ದೇಶದ ಪರಿಸ್ಥಿತಿಯನ್ನು, ಈಕ್ಷಿಸಿದರೆ, ಅದು ಒಂದು ಮುಂದುವರಿದ ದೇಶವಾಗಿತ್ತು; ಶೂರವೀರರ ಜನಾಂಗವಾಗಿತ್ತು; ಪ್ರಗತಿಪರ ರಾಷ್ಟ್ರವಾಗಿತ್ತು; ವ್ಯವಸಾಯ ಮತ್ತು ಕೈಗಾರಿಕೆಗಳಲ್ಲಿ ಮುಂದಳದಲ್ಲಿತ್ತು; ಪ್ರಪಂಚದ ಎಲ್ಲ ದೇಶಗಳಿಗಿಂತಲೂ ಹೆಚ್ಚು ಏಳಿಗೆ ಹೊಂದಿದ ದೇಶವಾಗಿ, ವ್ಯಾಪಾರ ಮತ್ತು ಸಂಸ್ಕೃತಿಯ ಕೇಂದ್ರವಾಗಿ ದೇಶವಿದೇಶಗಳ ಸಂಪತ್ತನ್ನು ತನ್ನಲ್ಲಿಗೆ ಆಕರ್ಷಿಸುತ್ತಿತ್ತು. ಆದರೆ ಇಂದು ಇವೆಲ್ಲವೂ ಹಿಂದಿನ ಕಥೆಯಾಗಿವೆ, ಬರಿಯ ಕನಸಾಗಿವೆ. ದೇಶದ ಜನಸಂಖ್ಯೆಯು ಆಹಾರೋತ್ಪತ್ತಿಗಿಂತ ಹೆಚ್ಚು ತ್ವರಿತವಾಗಿ ವಿಷಮ ಪ್ರಮಾಣದಲ್ಲಿ ಹೆಚ್ಚುತ್ತಿರುವುದೇ ಈ ಅವಸಾನಕ್ಕೆ ಮುಖ್ಯ ಕಾರಣವಾಗಿದೆ. ತನ್ನ ಆವಶ್ಯಕತೆಗಿಂತ ಹೆಚ್ಚು ಆಹಾರೋತ್ಪತ್ತಿಮಾಡುವ ದೇಶವೇ ಮುಂದುವರಿದ ದೇಶವೆಂದು ಪರಿಗಣಿಸಲಾಗುವುದು. ಸಮೃದ್ಧವಾದ ಆ ದೇಶದ ಸಂಸ್ಕೃತಿ, ನಾಗರಿಕತೆ ಮತ್ತು ಕೈಗಾರಿಕೆಗಳು ಅಭ್ಯುದಯ ಹೊಂದುವುವು. ಅಂತಹ ದೇಶದವರು ದೀರ್ಘಾಯುಗಳಾಗಿರುವರು. ಹುಟ್ಟು ಸಾವುಗಳ ದರ ಕಡಿಮೆಯಾಗಿರುವುದು. ಆದುದರಿಂದ ಒಂದು ದೇಶದ ಏಳಿಗೆಯನ್ನು ನಿರ್ಧರಿಸಬೇಕಾದರೆ, ಅಲ್ಲಿಯ ಜನಸಂಖ್ಯೆಯನ್ನು ಮತ್ತು ಆಹಾರೋತ್ಪತ್ತಿಯನ್ನು ಪರಿಶೀಲಿಸಬೇಕು. ಇವೆರಡನ್ನೂ ಒಂದು ಕತ್ತರಿಯ ಎರಡು ಅಲಗುಗಳಿಗೆ ಹೋಲಿಸಬಹುದು. ಒಂದೇ ಅಲಗಿನಿಂದ ಕತ್ತರಿಸಲು ಅಸಾಧ್ಯವಾಗಿರುವಂತೆಯೇ, ಜನಸಂಖ್ಯೆ ಅಥವಾ ಆಹಾರೋತ್ಪತ್ತಿ ಇವೆರಡರಲ್ಲಿ ಒಂದನ್ನೇ ಇಟ್ಟುಕೊಂಡು ದೇಶದ ಅಭ್ಯುದಯವನ್ನು ನಿರ್ಧರಿಸುವುದು ಆಗದ ಕೆಲಸ. ಈ ಎರಡು ಅಂಶಗಳಿಗೂ ಗಮನಕೊಟ್ಟು ರಾಜಕೀಯ, ಸಾಮಾಜಿಕ ಮತ್ತು ಅಂತರರಾಷ್ಟ್ರೀಯ ದೃಷ್ಟಿಯಿಂದ ಜನರ ಸಂಖ್ಯಾಬಲವನ್ನು ಆದಷ್ಟು ಕಡಿಮೆ ಮಾಡಿ ಆಹಾರೋತ್ಪತ್ತಿಯನ್ನು ಆದಷ್ಟು ಹೆಚ್ಚಿಸುವುದೇ ಮುಖ್ಯವಾದ ಗುರಿಯಾಗಿರಬೇಕು. ಭಾರತದೇಶಕ್ಕೆ ಅನ್ವಯಿಸುವಂತೆ ಈ ಎರಡು ಅಂಶಗಳನ್ನೂ ಈಗ ಪರ್ಯಾಲೋಚಿಸೋಣ.

## ೨. ಭಾರತದ ಆಹಾರ ಸಾಧನಗಳು

ನಮ್ಮ ದೇಶದಲ್ಲಿನ ಆಹಾರ ಸಾಧನಗಳನ್ನು ಹೆಚ್ಚಿಸಲು ಅನೇಕ ಮಾರ್ಗಗಳಿವೆ. ಅವುಗಳಲ್ಲಿ ಮುಖ್ಯವಾದವುಗಳು ಏನೆಂದರೆ :—

### ೧. ವ್ಯವಸಾಯುದ ಅಭಿವೃದ್ಧಿ

(i) ಹಾಲಿ ಸಾಗುವಳಿ ಮಾಡುವ ಜಮೀನಿನಲ್ಲಿ ವ್ಯವಸಾಯಕ್ರಮವನ್ನು ಉತ್ತಮಗೊಳಿಸಿ ಹೆಚ್ಚಾಗಿ ಬೆಳೆ ತೆಗೆಯಬಹುದು.

(ii) ಬಂಜರು ಜಮೀನನ್ನು ಸಾಗುಮಾಡಿ ಉತ್ಪತ್ತಿಯನ್ನು ಹೆಚ್ಚಿಸಬಹುದು.

(iii) ಹಳೆಯ ಕಾಲದ ರೂಢಿಯ ಕೆಲವು ನಿಷ್ಪ್ರಯೋಜಕ ಕ್ರಮಗಳನ್ನು ತಪ್ಪಿಸಿ ಆಧುನಿಕ ವಿಜ್ಞಾನದ ರೀತಿಯಲ್ಲಿ ವ್ಯವಸಾಯಮಾಡುವ ಕ್ರಮವನ್ನು ಅನುಸರಿಸಿಯೂ, ವರ್ಷಂಪ್ರತಿ ಒಂದೇ ತರಹೆಯ ಬೆಳೆಯನ್ನು ತೆಗೆಯುವುದಕ್ಕೆ ಬದಲಾಗಿ ತಕ್ಕ ಪರ್ಯಾಯದ ಮೇಲೆ ಬೇರೆ ಬೇರೆ ಬೆಳೆಗಳನ್ನು ಬೆಳೆಸುವುದರಿಂದಲೂ ಉತ್ಪತ್ತಿಯನ್ನು ಹೆಚ್ಚಿಸಬಹುದು.

### ೨. ಯಂತ್ರೋಪಕರಣಗಳ ಪ್ರಯೋಗ

(*a*) ಒಳ್ಳೆಯ ರಾಸಾಯನಿಕ ಗೊಬ್ಬರಗಳನ್ನು ಉಪಯೋಗಿಸುವುದರಿಂದಲೂ, (*b*) ಆಧುನಿಕ ಯಂತ್ರ ಮತ್ತು ವ್ಯವಸಾಯದ ಮುಟ್ಟುಗಳ ಉಪಯೋಗದಿಂದಲೂ, (*c*) ಪೈರುಗಳಿಗೆ ತಗಲುವ ರೋಗವನ್ನು, ಕ್ರಿಮಿಕೀಟಗಳನ್ನು ತೊಡೆದುಹಾಕುವ ರಾಸಾಯನಿಕ ಕ್ರಿಮಿನಾಶಕಗಳಿಂದಲೂ, (*d*) ಮನುಷ್ಯನ ಆಹಾರಕ್ಕೆ ಯೋಗ್ಯವಲ್ಲದ ಕೆಲವು ಸಸ್ಯ ಸಾಮಗ್ರಿಗಳನ್ನು ತಕ್ಕ ಪುಟಪಾಕ ಅಥವಾ ರಾಸಾಯನಿಕ ಪ್ರಕ್ರಿಯೆಯಿಂದ ಖಾದ್ಯಪದಾರ್ಥಗಳನ್ನಾಗಿ ಪರಿವರ್ತಿಸುವುದರಿಂದಲೂ ಮತ್ತು (*e*) ವಿಜ್ಞಾನದ ರೀತಿಯಲ್ಲಿ ಆಹಾರಪದಾರ್ಥಗಳು ಹದಗೆಡದೆ ಬಹಳ ಕಾಲ ಇರುವಂತೆ ಮಾಡುವುದರಿಂದಲೂ ಆಹಾರದ ಸರಬರಾಯಿಯನ್ನು ಹೆಚ್ಚಿಸಬಹುದು.

### ೩. ಆರ್ಥಿಕ ಮತ್ತು ಇತರ ರೀತಿಯ ಅಭಿವೃದ್ಧಿ

(*a*) ಹಿಡುವಳಿ ಹಕ್ಕಿನ ಬದಲಾವಣೆಯಿಂದಲೂ,

(*b*) ಪ್ರತಿಯೊಬ್ಬ ಹಿಡುವಳಿದಾರನ ಚದರಿದ ಹಲವಾರು ತಾಕುಗಳನ್ನು ಒಂದುಗೂಡಿಸುವುದರಿಂದಲೂ,

(*c*) ಹುದುವಿನ ಬೇಸಾಯ ಅಥವಾ ಸಹಕಾರದ ಆರಂಭದಿಂದಲೂ,

(*d*) ಮಿಶ್ರಕೃಷಿಯಿಂದಲೂ (ಅಂದರೆ: ವ್ಯವಸಾಯದ ಜೊತೆಗೆ ಹೈನಿನ ಕಸಬನ್ನು ಕೈಗೊಳ್ಳುವುದರಿಂದಲೂ),

(*e*) ಈ ಆಹಾರಸಾಮಗ್ರಿಗಳ ದಾಸ್ತಾನು ಕ್ರಮವನ್ನು ಉತ್ತಮಗೊಳಿಸಿ, ಸಾಗಣೆಯ ವಸತಿಯನ್ನು ಹೆಚ್ಚಿಸುವುದರಿಂದಲೂ,

(*f*) ಆಹಾರ ಪದಾರ್ಥಗಳನ್ನು ಸ್ವಲ್ಪವೂ ಪೋಲಾಗದಂತೆ ನೋಡಿಕೊಳ್ಳುವುದರಿಂದಲೂ, ಮತ್ತು

(*g*) ಮಾಂಸ ಮತ್ತು ಮೀನು, ಬಾತು, ಕೋಳಿ, ಮತ್ತು ಕೃತಕ ಆಹಾರಗಳನ್ನು ಹೆಚ್ಚು ಹೆಚ್ಚಾಗಿ ಹೊಂದಿಸಿಕೊಳ್ಳುವುದರಿಂದಲೂ, ಆಹಾರದ ಸರಬರಾಯಿಯನ್ನು ಹೆಚ್ಚಿಸಿಕೊಳ್ಳಬಹುದು.

ವ್ಯವಸಾಯದ ಕ್ರಮದಲ್ಲಿ ಹಲವಾರು ಅಭಿವೃದ್ಧಿಗಳು ನಡೆದಿವೆ. ಉತ್ತಮ ಛಾಯೆಯ ಬೀಜಗಳ ಉಪಯೋಗದಿಂದ ಬೆಳೆಯ ಉತ್ಪತ್ತಿಯು ಹೆಚ್ಚಿದೆ. ಆದರೂ ಅನಕ್ಷರಸ್ಥರಾದ ಆರಂಬಗಾರರಲ್ಲಿ ಅನೇಕರು ಇದರಿಂದ ಪೂರ್ಣಫಲವನ್ನು ಪಡೆದಿಲ್ಲ. ಹಳೆಯ ಪದ್ಧತಿಗಳನ್ನೇ ಅನುಸರಿಸುತ್ತಿರುವರು. ಬೇರೆ ಬೇರೆ ಬೆಳೆಗಳನ್ನು ಪರ್ಯಾಯದ ಮೇಲೆ ಬಿತ್ತನೆ ಮಾಡಿ ಬೆಳೆಸುವ ಪದ್ಧತಿ ನಮ್ಮ ರೈತರಲ್ಲಿ ಇನ್ನೂ ಹೆಚ್ಚು ರೂಢಿಗೆ ಬಂದಿಲ್ಲ. ಶ್ಯಾನುಭೋಗರ ಪಹಣಿಯ ಅಂಕಿ ಅಂಶಗಳನ್ನು ಪರಿಶೀಲಿಸಿದರೆ ಜನರು ಬಂಜರು ಜಮೀನನ್ನು ಆಬಾದುಮಾಡಿ ವ್ಯವಸಾಯಕ್ಕೆ ಅನುಕೂಲವಾಗುವಂತೆ ಮಾಡಿಕೊಂಡಿಲ್ಲವೆಂದು ಗೊತ್ತಾಗುತ್ತದೆ. ಜನರ ಒತ್ತಡವು ಹೆಚ್ಚಾಗಿದ್ದರೂ ಬಂಜರು ಜಮೀನನ್ನು ಹೆಚ್ಚು ಹೆಚ್ಚಾಗಿ ಸಾಗುಮಾಡದಿರುವುದು ಒಂದು ವಿಚಿತ್ರ ಪ್ರಸಂಗವಾಗಿದೆ. ದೊಡ್ಡ ದೊಡ್ಡ ಬಂಜರು ಪ್ರದೇಶಗಳನ್ನು ಮತ್ತು ಆರಗಾಡುಗಳನ್ನು ತಿದ್ದಿ ಕೃಷಿಗೆ ಯೋಗ್ಯವನ್ನಾಗಿ ಮಾಡಿ ಸಾಗುಮಾಡುವುದು ನಮ್ಮ ದೇಶದ ರೈತರ ವೈಯಕ್ತಿಕ ಶಕ್ತಿಗೆ ಮೀರಿದ್ದು ಎಂದು ಗೊತ್ತಾಗುತ್ತದೆ. ಇದಕ್ಕೆ ಮತ್ತೊಂದು ಕಾರಣವೂ ಇದೆ. ಭಾರತದೇಶದ ಒಟ್ಟು ೭೫ ಕೋಟಿ ಎಕರೆ ಭೂಮಿಯ ಪೈಕಿ, ಸುಮಾರು ೧೭½ ಕೋಟಿ ಎಕರೆ ಕಾಡುಗಳೂ ಮತ್ತು ವ್ಯವಸಾಯಕ್ಕೆ ಯೋಗ್ಯವಲ್ಲದ ಭೂಮಿಯಾಗಿಯೂ ಇರುತ್ತದೆ. ಉಳಿದದ್ದು ೫೭½ ಕೋಟಿ ಎಕರೆ. ಇದರ ಪೈಕಿ ಬೀಳು ಬಿಟ್ಟ ಮತ್ತು ಪಾಳು ಬಿದ್ದ ಜಮೀನನ್ನೂ ಸೇರಿ, ಹಾಲಿ ಸಾಗುವಳಿಯಲ್ಲಿರುವುದು ಒಟ್ಟು ೩೦½ ಕೋಟಿ ಎಕರೆ. ಸಾಗುವಳಿಗೆ ಯೋಗ್ಯವಾದ ಒಟ್ಟು ವಿಸ್ತೀರ್ಣದಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗ ಸಾಗುವಳಿಯಲ್ಲಿದೆ. ನಮ್ಮ ದೇಶದಲ್ಲಿ ಸಾಗುವಳಿ ಭೂಮಿಯ ಮೇರೆಯು ಬಹಳ ಮುಂದುವರಿದಿದೆ. ಪ್ರಾಯಶಃ ಲಾಭಕರವಲ್ಲದ ಕೆಲವು ಜಮೀನುಗಳೂ ಸಹ ಸಾಗುವಳಿಯಾಗುತ್ತಿವೆ. ಇದನ್ನು ಅಮೇರಿಕಾ ದೇಶದ ಪರಿಸ್ಥಿತಿಯೊಡನೆ ಹೋಲಿಸಿದರೆ ಸ್ವಾರಸ್ಯವಾದ ವ್ಯತ್ಯಾಸಗಳು ಕಂಡುಬರುವುವು. ಅಲ್ಲಿಯ ಒಟ್ಟು ಜಮೀನಿನ

ಶೇಕಡ ೨೦ ಕ್ಕಿಂತ ಕಡಮೆಯ ಭಾಗವು ಸಾಗುವಳಿಯಾಗುತ್ತಿದೆ. ಇವು ಆರಿಸಿ ತೆಗೆದ ಉತ್ಕೃಷ್ಟ ಜಮೀನಾಗಿರುವುದು. ಆಹಾರ ಪದಾರ್ಥಗಳ ಧಾರಣೆವಾಸಿಯಲ್ಲಾಗಲಿ, ಜನರ ರುಚಿ, ಶುಚಿ ಮತ್ತು ರೂಢಿಯಲ್ಲಾಗಲಿ, ನೀರಾವರಿ ವಸತಿಯಲ್ಲಾಗಲಿ, ಭಾರಿ ಮಾರ್ಪಾಟುಗಳು ಆದ ಹೊರತು ಭಾರತದಂತಹ ಪುರಾತನ ದೇಶದಲ್ಲಿ ಹೊಸ ಜಮೀನನ್ನು ಸಾಗುವಳಿಗೆ ತರುವುದು ಅಷ್ಟೇನೂ ಲಾಭಕರವಾಗಿರುವುದಿಲ್ಲ. ಈಗ ಇಂತಹ ಜಮೀನನ್ನು ಲಾಭಕರವಾದ ರೀತಿಯಲ್ಲಿ ಸಾಗುವಳಿಗೆ ತರಲು ಒಂದೇ ಮಾರ್ಗವಿದೆ; ಅದು ನೀರಾವರಿ ವಸತಿಯನ್ನು ಹೆಚ್ಚಿಸುವುದು. ತಕ್ಕ ನೀರಿನ ಸರಬರಾಯಿ ಇದ್ದರೆ ಫಸಲನ್ನು ಶೇಕಡ ೧೫ ರಿಂದ ೫೦ ರ ವರೆಗೆ ಹೆಚ್ಚಿಸಬಹುದು. ಫಸಲನ್ನು ಹೆಚ್ಚಿಸುವುದೂ ಅಲ್ಲದೆ ಅನಾವೃಷ್ಟಿಯ ಕಷ್ಟನಷ್ಟಗಳಿಂದಲೂ ರಕ್ಷಣೆ ದೊರೆಯುತ್ತದೆ. ಭಾರತದ ಪಂಚವಾರ್ಷಿಕ ಯೋಜನೆಗಳಲ್ಲಿ ಭಾರಿ ನೀರಾವರಿ ಕಾಮಗಾರಿಗಳಿಗೂ ಮತ್ತು ನೀರಾವರಿ, ವಿದ್ಯುಚ್ಛಕ್ತಿ ಮಿಶ್ರಿತವಾದ ಕಾಮಗಾರಿಗಳಿಗೂ ಪ್ರಾಮುಖ್ಯತೆ ದೊರೆತಿದೆ. ಸುಮಾರು ೪೩೪ ಕೋಟಿ ರೂಪಾಯಿ ಇದಕ್ಕೆ ಮೀಸಲಾಗಿಟ್ಟಿದ್ದಾರೆ. ಈ ಕಾಮಗಾರಿಗಳು ಪೂರ್ತಿಯಾದರೆ ೧೯೫೬ ನೇ ಇಸವಿಯ ವೇಳೆಗೆ ಸುಮಾರು ಎರಡು ಕೋಟಿ ಎಕರೆ ಜಮೀನಿಗೆ ನೀರು ಹಾಯಿಸಬಹುದು ಮತ್ತು ಆದರಿಂದ ಸುಮಾರು ಶೇಕಡ ೧೦ ರಷ್ಟು ಧಾನ್ಯದ ಬೆಳೆಯನ್ನು ಹೆಚ್ಚಿಸಲೂ ಬಹುದು.

ಪರ್ಯಾಯದ ಮೇಲೆ ಪೈರುಗಳನ್ನು ಬೆಳೆಯುವ ಕ್ರಮವನ್ನು ಕೈಗೊಂಡರೆ, ಈಗ ಬೆಳೆಯುವ ಕಡಿಮೆಯಾದ ಫಸಲಿನಿಂದಲೇ ಹೆಚ್ಚು ಪುಷ್ಟಿಕರವಾದ ವಿವಿಧ ಆಹಾರ ಪದಾರ್ಥಗಳನ್ನು ಪಡೆಯಬಹುದು.

ಎರಡನೆಯದಾಗಿ, ಯಂತ್ರೋಪಕರಣ ಮತ್ತು ವಿಜ್ಞಾನದ ಸಹಾಯದಿಂದ ಭೂಮಿಯ ಉತ್ಪತ್ತಿಯನ್ನು ಹೆಚ್ಚಿಸಬಹುದು. ಕೃತಕ ಗೊಬ್ಬರಗಳನ್ನು ಬಳಸಿದರೆ ಪೈರು ಹುಲುಸಾಗಿ ಬೆಳೆದು ಶೇಕಡ ೨೦ ರಷ್ಟು ಹೆಚ್ಚು ಫಸಲು ಕೊಡುವುದು. ಬೆಳೆಯನ್ನು ಹೆಚ್ಚಿಸಲು, ಮೊದಲನೆಯದಾಗಿ ನೀರಾವರಿಯು, ಎರಡನೆಯದಾಗಿ ಗೊಬ್ಬರವು ಬಹಳ ಸಹಾಯಮಾಡುತ್ತದೆ. ಇತ್ತೀಚೆಗೆ ನಮ್ಮ ದೇಶದಲ್ಲಿ ರಾಸಾಯನಿಕ ಗೊಬ್ಬರ ಮತ್ತು ಕೃತಕ ಪೇಟೆ ಗೊಬ್ಬರ (Compost)—ಇವುಗಳ ತಯಾರಿಕೆಯು ಬಹಳ ಮುಂದುವರೆದಿದೆ. ಹೆಚ್ಚು ಆಹಾರವನ್ನು ಬೆಳೆಯುವ ಚಳುವಳಿಯ ಆಶ್ರಯದಲ್ಲಿ ವರ್ಷ ಒಂದಕ್ಕೆ ಸುಮಾರು ಒಂದು ಲಕ್ಷ ಟನ್ ರಾಸಾಯನಿಕ ಗೊಬ್ಬರವನ್ನು ಹಂಚಲಾಗಿದೆ. ಗೊಬ್ಬರದ ಉಪಯೋಗವು ಇನ್ನು ಮುಂದೆ ಮತ್ತಷ್ಟು ಹೆಚ್ಚಿ ಆಹಾರೋತ್ಪತ್ತಿಯನ್ನು ವೃದ್ಧಿಸುವುದರಲ್ಲಿ ಸಂದೇಹವಿಲ್ಲ.

ಹಿಡುವಳಿ ಕ್ರಮದ ಪರಿವರ್ತನೆಯಿಂದಲೂ, ಕಾನೂನಿನ ಬಲದಿಂದಾಗಲಿ, ಸ್ವಯಂ ಪ್ರೇರಣೆಯಿಂದಾಗಲಿ ಹೊಸರೀತಿಯಲ್ಲಿ ವ್ಯವಸಾಯಗಾರರಿಗೆ ಜಮೀನನ್ನು ಹಂಚುವುದರಿಂದಲೂ ಆಹಾರೋತ್ಪತ್ತಿಯನ್ನು ಸ್ವಲ್ಪಭಾಗ ಹೆಚ್ಚಿಸಬಹುದು.

ಇವಲ್ಲದೆ ಆಹಾರ ಸರಬರಾಯಿಯನ್ನು ಹೆಚ್ಚಿಸುವ ಮತ್ತೆ ಕೆಲವು ಮಾರ್ಗಗಳಿವೆ. ವ್ಯವಸಾಯದ ಜತೆಗೆ ಹೈನಿನ ಕಸಬನ್ನು ಕೈಗೊಳ್ಳುವುದೂ ಒಂದು ಮಾರ್ಗ. ಸಾಗುವಳಿಯ ಜತೆಯಲ್ಲಾಗಲಿ ಪ್ರತ್ಯೇಕವಾಗಿಯಾಗಲಿ ಹೈನಿನ ಕಸಬನ್ನು ಲಾಭಕರವಾದ ರೀತಿಯಲ್ಲಿ ಅವಲಂಬಿಸಬಹುದು ಮತ್ತು ಹಾಲಿನ ಉತ್ಪತ್ತಿ ಮತ್ತು ಸರಬರಾಯಿಯನ್ನು ಹೆಚ್ಚಿಸಬಹುದು. ಹಾಲಿನಲ್ಲಿ ಸಸಾರಜನಕ ಪದಾರ್ಥಗಳೂ, ಖನಿಜ ಪದಾರ್ಥಗಳೂ, ಅನ್ನಾಂಗಗಳೂ ಸಮೃದ್ಧಿಯಾಗಿರುವುದರಿಂದ ಇದು ಒಂದು "ರಕ್ಷಣೆಯ ಆಹಾರ". ಆರೋಗ್ಯವುಳ್ಳ ಮನುಷ್ಯನಿಗೆ ಹೆಚ್ಚು ಪ್ರಮಾಣದಲ್ಲಿ ರಕ್ಷಣೆಯ ಆಹಾರವು ಅಗತ್ಯವೆಂತಲೂ ಬರಿಯ ಶಾಖಕೊಡುವ ಆಹಾರವು ಅಪೂರ್ಣವಾಗಿರುವುದೆಂದೂ ತಜ್ಞರು ಅಭಿಪ್ರಾಯಪಡುತ್ತಾರೆ. ನಮ್ಮ ದೇಶದಲ್ಲಿ ಜನರು ಶಾಖಕೊಡುವ ಆಹಾರವನ್ನು ಹೆಚ್ಚು ಉಪಯೋಗಿಸುತ್ತಿರುವರು; ರಕ್ಷಣೆಯ ಆಹಾರವನ್ನು (ಸಸಾರಜನಕಯುಕ್ತ ಆಹಾರವನ್ನು) ಉಪಯೋಗಿಸುತ್ತಲೇ ಇಲ್ಲ. ಜನರು ಬಹುಶಃ ಸಸ್ಯಾಹಾರಿಗಳಾಗಿರುವುದರಿಂದ, ಹಾಲು ಅತ್ಯಾವಶ್ಯಕವಾದ ಆಹಾರಪದಾರ್ಥ. ಆದುದರಿಂದ ಹಾಲಿನ ಉತ್ಪತ್ತಿಯನ್ನು ಹೆಚ್ಚಿಸಿ, ಅಧಿಕ ಪ್ರಮಾಣದಲ್ಲಿ ಜನರಿಗೆ ಸರಬರಾಯಿ ಮಾಡಬೇಕಾದುದು ಅತ್ಯವಶ್ಯಕ.

ಭಾರತದೇಶದ ಜನರು ದಿವಸ ಒಂದಕ್ಕೆ ತಲಾ ೫⅔ ಔನ್ಸ್ ಹಾಲನ್ನು ಉಪಯೋಗಿಸುತ್ತಾರೆಂದು "ಪ್ಲಾನಿಂಗ್ ಕಮಿಷನ್"ನವರಿಂದ ಅಂದಾಜು ಮಾಡಲಾಗಿದೆ. ಅವಿಭಕ್ತ ಭಾರತದಲ್ಲಿ ದಿವಸ ಒಂದಕ್ಕೆ ೬ ಔನ್ಸ್ ಉಪಯೋಗಿಸುತ್ತಿದ್ದರು. ಹಳ್ಳಿಯ ಜನರು ದಿವಸ ಒಂದಕ್ಕೆ ತಲಾ ೨ ಔನ್ಸ್‌ನಂತೆ ಹಾಲನ್ನು ಖರ್ಚುಮಾಡುತ್ತಿರುವರೆಂದೂ "ನ್ಯಾಷನಲ್ ಸಾಂಪಲ್ ಸರ್ವೆ"ಯವರು ಅಂದಾಜು ಮಾಡಿದ್ದಾರೆ. ನಮ್ಮ ದೇಶದವರಿಗೆ ಆಹಾರ ಶಾಸ್ತ್ರಜ್ಞರು ದಿವಸ ಒಂದಕ್ಕೆ ತಲಾ ೧೦ ಔನ್ಸ್ ಹಾಲಿನ ಪ್ರಮಾಣವನ್ನು ನಿಗದಿಮಾಡಿರುವರು. ಮೇಲಿನ ಅಂದಾಜುಗಳಲ್ಲಿ ಅತ್ಯಧಿಕವಾದುದನ್ನು ತೆಗೆದುಕೊಂಡರೂ, ಈ ನಿಯತ ಪ್ರಮಾಣಕ್ಕಿಂತ ಬಹಳ ಕಡಿಮೆಯಾಗಿಯೇ ಇರುವುದು. ಇತರ ದೇಶಗಳಲ್ಲಿ ಉಪಯೋಗಿಸುವ ಹಾಲಿನ ಪ್ರಮಾಣದೊಡನೆ ಹೋಲಿಸಿ ನೋಡಿದರೆ ನಮ್ಮ ದೇಶದ ಮಟ್ಟವು ಎಷ್ಟು ಕೆಳಗಿರುವುದು ಎಂಬುದು ವೇದ್ಯವಾಗುವುದು. ಕೆನಡಾ ದೇಶದಲ್ಲಿ ದಿವಸ ಒಂದಕ್ಕೆ ತಲಾ ೫೭ ಔನ್ಸ್, ನ್ಯೂಜಿಲ್ಯಾಂಡ್ ದೇಶದಲ್ಲಿ ೫೬ ಔನ್ಸ್, ಸ್ವಿಟ್ಸರ್‌ಲ್ಯಾಂಡ್ ದೇಶದಲ್ಲಿ ೪೯ ಔನ್ಸ್, ಬ್ರಿಟಿಷ್ ದ್ವೀಪಗಳಲ್ಲಿ ೪೧ ಔನ್ಸ್ ಖರ್ಚಾಗುತ್ತಿವೆ.

ಇಂಡಿಯಾ ದೇಶದ ಹಸುಗಳು ಮತ್ತು ಎಮ್ಮೆಗಳು ಬಹಳ ಕಡಿಮೆ ಹಾಲನ್ನು ಕೊಡುತ್ತವೆ. ಡಚ್ ದೇಶದ ಹಸುಗಳು ವರ್ಷ ಒಂದಕ್ಕೆ ತಲಾ ೮,೦೦೦ ಪೌಂಡು (೧೬ ಪೌಂಡುಗಳು=೫ ಸೇರುಗಳು) ಹಾಲನ್ನೂ, ಆಸ್ಟ್ರೇಲಿಯಾ ದೇಶದ ಹಸುಗಳು ೭,೦೦೦ ಪೌಂಡು ಹಾಲನ್ನೂ, ಸ್ವೀಡನ್ ದೇಶದ ಹಸುಗಳು ೬,೦೦೦ ಪೌಂಡು ಹಾಲನ್ನೂ, ಅಮೇರಿಕಾದ ಸಂಯುಕ್ತಸಂಸ್ಥಾನದ ಹಸುಗಳು ೫,೦೦೦ ಪೌಂಡು ಹಾಲನ್ನು ಕರೆಯುತ್ತಿರುವಾಗ ನಮ್ಮ ದೇಶದ ಹಸುಗಳು ವರ್ಷ ಒಂದಕ್ಕೆ ತಲಾ ೫೦೦ ಪೌಂಡು ಹಾಲನ್ನು ಕರೆಯುತ್ತವೆ. (ಎಮ್ಮೆಗಳು ೧,೨೫೦ ಪೌಂಡು ಹಾಲನ್ನು ಕರೆಯುತ್ತವೆ). ದನಗಳಿಗೆ ಸಾಕಷ್ಟು ಭೂಸ, ಮೇವುಗಳು ದೊರೆಯದಿರುವುದೇ ಕಾರಣ. ಹಳ್ಳಿಗಳಲ್ಲಿ ಹೈನಿನ ಕಸಬನ್ನು ಆಧುನಿಕ ರೀತಿಯಲ್ಲಿ ಅಭಿವೃದ್ಧಿಗೊಳಿಸಿ, ಹಾಲಿನ ಸರಬರಾಯಿಯನ್ನು ಹೆಚ್ಚಿಸಿ ಧಾನ್ಯದ ಉತ್ಪತ್ತಿಯನ್ನು ಅಧಿಕಮಾಡಿ ರೈತರ ಆರ್ಥಿಕ ಮಟ್ಟವನ್ನು ಏರಿಸಬೇಕೆಂಬುದು ಪಂಚವಾರ್ಷಿಕ ಯೋಜನೆಗಳಲ್ಲಿ ನಮೂದಿಸಿದೆ. ಹಳ್ಳಿಗಳಲ್ಲಿ ದನಕರುಗಳ ತಳಿಯನ್ನು ಉತ್ತಮಗೊಳಿಸಲು ಮತ್ತು ಅವುಗಳ ಸಂಖ್ಯೆಯನ್ನು ಹೆಚ್ಚಿಸಲು ಬೇಕಾಗುವ ಕ್ರಮವನ್ನು ಕೈಗೊಳ್ಳುವುದಲ್ಲದೆ ಪಟ್ಟಣಗಳಲ್ಲಿ ಹಾಲಿನ ಸಮಿತಿ ಅಥವಾ ಕ್ಷೀರಸಮಿತಿ (Milk-boards) ಗಳನ್ನು ಸ್ಥಾಪಿಸಿ ಅವುಗಳ ಮೂಲಕ ದನಕರುಗಳಿಗೆ ವಸತಿಯಾದ ಕೊಟ್ಟಿಗೆಗಳನ್ನೂ, ರೊಪ್ಪಗಳನ್ನೂ ಊರಿಂದಾಚೆ ನಿರ್ಮಿಸಿ, ಹಾಲಿನ ಉತ್ಪತ್ತಿಯನ್ನೂ ದನಕರುಗಳ ಆರೋಗ್ಯವನ್ನೂ ಹೆಚ್ಚಿಸಿ, ಹಾಲಿನ ಸರಬರಾಯಿಯನ್ನು ಸಮರ್ಪಕವಾಗಿ ಅನುಗೊಳಿಸಲು ತಕ್ಕ ಏರ್ಪಾಟು ಮಾಡಬೇಕೆಂದೂ ಪಂಚವಾರ್ಷಿಕ ಯೋಜನೆಗಳಲ್ಲಿ ಸೂಚಿತವಾಗಿದೆ. ಇಂತಹ ಕ್ಷೀರಸಮಿತಿಗಳಿಂದ ಹಾಲಿನ ಸರಬರಾಯಿಯನ್ನು ಎಷ್ಟರಮಟ್ಟಿಗೆ ಹೆಚ್ಚಿಸಬಹುದೆಂಬುದನ್ನು ಬೊಂಬಾಯಿ ಸರ್ಕಾರದವರು ಗೋರೆಗಾಂ ಎಂಬ ಹಳ್ಳಿಯಲ್ಲಿ ಸ್ಥಾಪಿಸಿರುವ (Aarey Milk Colony) ಆರೆ ಹಾಲಿನ ಬಸ್ತಿಯ ಕಾರ್ಯಕಲಾಪಗಳಿಂದ ನಿದರ್ಶನವಾಗಿ ಗೊತ್ತಾಗುತ್ತದೆ. ಈ ಬಸ್ತಿಯಲ್ಲಿರುವ ಪ್ರತಿಯೊಂದು ಎಮ್ಮೆಯೂ ವರ್ಷಕ್ಕೆ ಸುಮಾರು ೫,೦೦೦ ಪೌಂಡು (ಸುಮಾರು ೧,೬೦೦ ಸೇರು) ಹಾಲನ್ನು ಕೊಡುತ್ತದೆ. ಈ ಎಮ್ಮೆಗಳು ಹೆಚ್ಚು ಕಾಲ ಜೀವಂತವಾಗಿರುವುವಲ್ಲದೆ ಕರಾವಿನಲ್ಲಿರುವ ಕಾಲವೂ ಹೆಚ್ಚಾಗಿರುವುದು. ಕರುಗಳ ಸಾವಿನ ಸಂಖ್ಯೆಯೂ ಕಡಿಮೆಯಾಗಿರುವುದು ಮತ್ತು ಈ ಕೊಟ್ಟಿಗೆಗಳ ಗೊಬ್ಬರದಿಂದ ಬಂಜರು ಜಮೀನಿನಲ್ಲಿ ದನಕರುಗಳಿಗೆ ಬೇಕಾಗುವ ಹುಲ್ಲು ಮೇವುಗಳನ್ನು ಬೆಳೆಯಿಸುತ್ತಿರುವರು. ಈ ತೆರನಾಗಿ ಇತರ ನಗರಗಳಲ್ಲೂ, ಪಟ್ಟಣಗಳಲ್ಲೂ ಹೈನಿನ ಉದ್ಯಮವನ್ನು ಅಭಿವೃದ್ಧಿಪಡಿಸಿದರೆ ಹಾಲಿನ ಸರಬರಾಯಿಯನ್ನು ಇತೋಪ್ಯತಿಶಯವಾಗಿ ಹೆಚ್ಚಿಸಬಹುದು; ಭಾರ ಒಯ್ಯಲು

ಅಧಿಕ ಸಂಖ್ಯೆಯಲ್ಲಿ ಎತ್ತುಗಳನ್ನು ಉತ್ಪತ್ತಿ ಮಾಡಬಹುದು ಮತ್ತು ಬೇಕಾದಷ್ಟು ಗೊಬ್ಬರವನ್ನು ಒದಗಿಸಬಹುದು.

ಹಸು ಎಮ್ಮೆಗಳ ಹಾಲಲ್ಲದೆ, ಮೇಕೆ ಹಾಲನ್ನು ಜನರು ಉಪಯೋಗಿಸಬಹುದು. ಗಾಂಧಿಯವರು ಮೇಕೆ ಹಾಲನ್ನೇ ಹೆಚ್ಚಾಗಿ ಸೇವನೆ ಮಾಡುತ್ತಿದ್ದರೆಂಬುದನ್ನು ಇಲ್ಲಿ ಸೂಚಿಸಬಹುದು. ಕತ್ತೆಹಾಲಿನಲ್ಲಿ ಪೋಷಕಸತ್ವಗಳು (ಎದೆಯ ಹಾಲಿನಲ್ಲಿರುವಷ್ಟು) ಇರುತ್ತದೆಂಬುದಾಗಿ ಆಹಾರ ಶಾಸ್ತ್ರಜ್ಞರು ಅಭಿಪ್ರಾಯಪಡುವುದರಿಂದ ಅದನ್ನು ಮಕ್ಕಳಿಗೆ ಕುಡಿಸಬಹುದು. ಕೂಸುಗಳಿಗೆ, ಹುಟ್ಟಿದ ಹತ್ತು ದಿವಸಗಳೊಳಗೆ ಕತ್ತೆಹಾಲನ್ನು ಕುಡಿಸುವುದು ನಮ್ಮ ಹಳ್ಳಿಗಳಲ್ಲಿ ಈಗಲೂ ವಾಡಿಕೆಯಾಗಿದೆ. ಇದೇ ರೀತಿ ಆಡು ಕುರಿಗಳನ್ನು, ಬಾತು, ಕೋಳಿಗಳನ್ನು ಆಧುನಿಕ ರೀತಿಯಲ್ಲಿ ಸಾಕುವುದರಿಂದ ಆಹಾರದ ಸರಬರಾಯಿಯನ್ನು ಹೆಚ್ಚಿಸಬಹುದು.

ಮತ್ತೊಂದು ಬಗೆಯ ಉತ್ತಮ ಆಹಾರವೆಂದರೆ ಮೀನು. ಇದರಲ್ಲಿ ಸಸಾರಜನಕಗಳು ಹೆಚ್ಚಾಗಿರುವುದರಿಂದ ಇದು ಒಂದು ಉತ್ಕೃಷ್ಟವಾದ ರಕ್ಷಣೆಯ ಆಹಾರ. ನದಿ ಹೊಳೆಗಳಲ್ಲೂ, ಕೆರೆ ಕುಂಟೆಗಳಲ್ಲಿಯೂ ಸಿಗುವ ಸಿಹಿನೀರಿನ ಮೀನುಗಳಲ್ಲದೆ ಕಡಲುಮೀನುಗಳನ್ನು ಯಥೇಷ್ಟವಾಗಿ ಹಿಡಿಯಬಹುದು. ಹೆಚ್ಚು ಆಹಾರವನ್ನು ಒದಗಿಸುವ ಈ ಸಾಧನದಿಂದ ನಾವು ಪೂರ್ತಿಯಾಗಿ ಪ್ರಯೋಜನ ಪಡೆದಿರುವಂತೆ ಕಾಣುವುದಿಲ್ಲ. ೧೯೪೮ರಲ್ಲಿ ೧೪೦ ಲಕ್ಷ ಮಣಗಳಷ್ಟು ಮೀನು ಹಿಡಿಯಲಾಗಿತ್ತು. ಇದರಲ್ಲಿ ಶೇಕಡ ೮ರಷ್ಟು ಗೊಬ್ಬರವಾಗಿ ಉಪಯೋಗಿಸಲ್ಪಟ್ಟು ಉಳಿದ ಭಾಗವು ಜನರ ಆಹಾರಕ್ಕೆ ಉಪಯೋಗಿಸಲ್ಪಟ್ಟಿತು. ಸುಮಾರು ೧೦೦ ಲಕ್ಷ ಮಣ, ಅಂದರೆ, ಒಟ್ಟು ಉತ್ಪತ್ತಿಯಲ್ಲಿ ಶೇಕಡ ೭೦ ರಷ್ಟು ಕಡಲುಮೀನು ಹಿಡಿಯಲಾಯಿತು. ಮದ್ರಾಸು ಸಂಸ್ಥಾನದಲ್ಲಿ ೪೮ ಲಕ್ಷ ಮಣವು, ತಿರುವಾಂಕೂರು-ಕೊಚ್ಚಿ ಸಂಸ್ಥಾನದಲ್ಲಿ ೨೭ ಲಕ್ಷ ಮಣವು ಕಡಲುಮೀನು ಹಿಡಿಯಲಾಗಿತ್ತು. ಸಿಹಿನೀರಿನ ಮೀನಿನ ಉತ್ಪತ್ತಿಯು ಪಶ್ಚಿಮ ಬಂಗಾಳದಲ್ಲಿ ೧೨ ಲಕ್ಷ ಮಣವು; ಬೀಹಾರಿನಲ್ಲಿ ೧೦ ಲಕ್ಷ ಮಣವು ಆಗಿತ್ತೆಂಬುದಾಗಿ ಸರ್ಕಾರದ ಅಂಕಿ ಅಂಶಗಳಿಂದ ತಿಳಿದುಬರುತ್ತದೆ. ಮದ್ರಾಸು ಮತ್ತು ತಿರುವಾಂಕೂರು-ಕೊಚ್ಚಿ —ಈ ಎರಡು ಸಂಸ್ಥಾನಗಳೂ ಸೇರಿ ಭಾರತದ ಒಟ್ಟು ಮೀನಿನ ಉತ್ಪತ್ತಿಯಲ್ಲಿ ಅರ್ಧಕ್ಕಿಂತ ಹೆಚ್ಚಾಗಿಯೂ ಕಡಲು ಮೀನಿನ ಉತ್ಪತ್ತಿಯಲ್ಲಿ ⅔ ಭಾಗಕ್ಕಿಂತ ಹೆಚ್ಚಾಗಿಯೂ ಸರಬರಾಯಿ ಮಾಡಿರುವುದು ಗಮನಾರ್ಹವಾಗಿದೆ. ದಕ್ಷಿಣ ಭಾರತದ ಬೆಸ್ತರು ಉತ್ತಮ ಸಮುದ್ರ ಸಂಚಾರಿಗಳೆಂದು ಹಿಂದಿನಿಂದಲೂ ಹೆಸರುವಾಸಿಯಾದವರಲ್ಲವೆ? ಮದ್ರಾಸಿನ ಬೆಸ್ತರು ಕಟ್ಟುಮರಗಳೆಂಬ ಒಂದು ಬಗೆಯ

ತೆಪ್ಪಗಳ ಮೇಲೆ ಸಮುದ್ರದಲ್ಲಿ ಬಲುದೂರ ಹೋಗಿ ಮೀನುಗಳನ್ನು ಹಿಡಿಯುವರು. ಇದರಲ್ಲಿ ಬಹಳ ಅಪಾಯುಗಳಿವೆ. ಈಗಿನ ಯಂತ್ರಯುಗದಲ್ಲಿ ಹಬೆದೋಣಿಗಳನ್ನೂ, ಬಲೆದೋಣಿಗಳನ್ನೂ ಉಪಯೋಗಿಸುವುದರಿಂದ ಈ ಅಪಾಯುಗಳನ್ನು ತಪ್ಪಿಸಿ ಹೆಚ್ಚು ಮೀನನ್ನು ಹಿಡಿಯಬಹುದು. ಭಾರತದೇಶದಲ್ಲಿ ಸಿಹಿನೀರಿನ ಮೀನುಗಳನ್ನು ಸಾಮೂಹಿಕ ವ್ಯವಸಾಯ ಬಡಾವಣೆಯ ಸಂಸ್ಥೆಗಳಿಂದ ಅಭಿವೃದ್ಧಿಗೊಳಿಸಿ, ಮೀನು ಹಿಡಿಯುವ ಹಡಗುಗಳ ಮತ್ತು ಹಬೆದೋಣಿಗಳ ಸಹಾಯದಿಂದ ಕಡಲುಮೀನಿನ ಉತ್ಪತ್ತಿಯನ್ನು ಹೆಚ್ಚಿಸುವಂತೆ ಪ್ಲಾನಿಂಗ್ ಕಮಿಷನ್‌ನವರು ಒಂದು ಯೋಜನೆಯನ್ನು ಸಿದ್ಧಪಡಿಸಿದ್ದಾರೆ. ಮೀನುಗಳನ್ನು ಹದಗೆಡದೆ ಕಾಪಾಡಲು ಶೈತ್ಯೋಗ್ರಾಣಗಳ (Cold Storage) ನ್ನು ನಿರ್ಮಿಸುವುದಲ್ಲದೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಮೀನುಗಳನ್ನು ಒಯ್ಯುವ ಸಾಧನಗಳನ್ನು ಕಲ್ಪಿಸಿಯೂ ಮೀನಿನ ವ್ಯಾಪಾರವನ್ನು ಹೆಚ್ಚಿಸುವ ಸಲಹೆಯನ್ನಿತ್ತಿದ್ದಾರೆ. ಈ ಯೋಜನೆಯಂತೆ ೧೯೫೫-೬ ನೇ ಇಸವಿಯ ತರುವಾಯ ವರ್ಷ ಒಂದಕ್ಕೆ ೧೫ ಲಕ್ಷ ಟನ್ ಮೀನನ್ನು ಹಿಡಿಯಬಹುದೆಂದು ಅಂದಾಜು ಮಾಡಲಾಗಿದೆ.

ನಮ್ಮ ದೇಶದ ಆಹಾರ ಸಾಧನಗಳನ್ನು ಹೆಚ್ಚಿಸಲು ಮುಖ್ಯವಾದ ಮಾರ್ಗಗಳನ್ನು ಮೇಲೆ ಸಂಕ್ಷೇಪವಾಗಿ ವಿವರಿಸಿದ್ದೇವೆ. ಇದಲ್ಲದೆ ಮತ್ತೆ ಕೆಲವು ಮಾರ್ಗಗಳು ಉಂಟು. ಈ ತೆರನಾದ ಎಲ್ಲ ಮಾರ್ಗಗಳನ್ನೂ ನಾವು ಸರಿಯಾದ ರೀತಿಯಲ್ಲಿ ಉಪಯೋಗಪಡಿಸಿಕೊಂಡರೆ ನಮ್ಮ ದೇಶದ ಆಹಾರ ಸರಬರಾಯಿಯನ್ನು ಬಲು ಮಟ್ಟಿಗೆ ಹೆಚ್ಚಿಸಿಕೊಳ್ಳಬಹುದು.

ಕತ್ತರಿಯ ಮೇಲಿನ ಅಲಗಾದ ಆಹಾರೋತ್ಪತ್ತಿಯನ್ನು ಕುರಿತು ಇಷ್ಟರ ವರೆಗೆ ವಿಮರ್ಶಿಸಲಾಯಿತು. ಈಗ ಕೆಳಗಿನ ಅಲಗಾದ ಜನವೃದ್ಧಿಯನ್ನು ಕುರಿತು ಚರ್ಚಿಸೋಣ.

## ೩. ಭಾರತದೇಶದ ಜನವೃದ್ಧಿ

ಜಮ್ಮು ಮತ್ತು ಕಾಶ್ಮೀರ ಸಂಸ್ಥಾನವನ್ನು ಬಿಟ್ಟು ಈಗಿನ ಭಾರತದೇಶದ ಜನಸಂಖ್ಯೆಯು ೧೯೫೧ ನೇ ಇಸವಿಯ ಜನಗಣತಿಯ ಮೇರೆಗೆ ೩೫.೭ ಕೋಟಿ. ಭಾರತದೇಶದಲ್ಲಿ ಅಡಕವಾಗಿರುವ ಅದೇ ಸಂಸ್ಥಾನಗಳ ಒಟ್ಟು ಜನಸಂಖ್ಯೆಯು ೧೯೪೧ ರಲ್ಲಿ ೩೧.೫ ಕೋಟಿಯಾಗಿ ಇದ್ದಿತು. ಹಿಂದಿನ ದಶಮಾನದಲ್ಲಿ ಪ್ರತಿವರ್ಷ ಶೇಕಡ ೧.೩ ರಷ್ಟು ಜನಸಂಖ್ಯೆಯು ಹೆಚ್ಚುತ್ತ ಬಂದಿದೆ. ಇದೇ ಪ್ರಮಾಣದಲ್ಲಿ ಮುಂದೆಯೂ ಹೆಚ್ಚುವುದೆಂದು ಭಾವಿಸಿದರೆ ಪ್ರತಿವರ್ಷವೂ ೪೫ ಲಕ್ಷ ಹೆಚ್ಚಿನ ಜನರಿಗೆ ನಾವು ಆಹಾರವನ್ನು ಒದಗಿಸಬೇಕಾಗುವುದು.

ಸಸಾರಜನಕ (Protein) ಹೆಚ್ಚಾಗಿರುವ ಪದಾರ್ಥಗಳನ್ನು ಬಳಸುವುದರಿಂದ ಪ್ರಜೋತ್ಪಾದನ ಶಕ್ತಿಯು ಕಡಿಮೆಯಾಗುವುದೆಂದು, ಆದಕಾರಣ ಗೋಧಿಯನ್ನು ಬಳಸುವವರ ಪ್ರಜೋತ್ಪಾದನ ಶಕ್ತಿಯು ಕಡಿಮೆಯಾಗಿಯೂ, ಅಕ್ಕಿಯನ್ನು ಬಳಸುವವರ ಪ್ರಜೋತ್ಪಾದನ ಶಕ್ತಿಯು ಹೆಚ್ಚಾಗಿರವುದೆಂದೂ ಡಿಕಾಸ್ಟ್ರೋ (De Castro) ಎಂಬಾತನು ಹೇಳಿದ್ದಾನೆ. ಇಂಡಿಯಾ ದೇಶದ ಪ್ರಜಾವೃದ್ಧಿಯು ಮಿತಿ ಮೀರಿಲ್ಲವೆಂತಲೂ ಇಲ್ಲಿಯ ಜನರ ಶಕ್ತಿ ಮತ್ತು ಚಟುವಟಿಕೆಗಳನ್ನು ಹೆಚ್ಚಿಸಿದರೆ ಆಹಾರದ ಉತ್ಪತ್ತಿಯನ್ನು ಯಥೇಷ್ಟ ಹೆಚ್ಚಿಸಬಹುದೆಂತಲೂ, ಆದುದರಿಂದ ಪ್ರಜಾವೃದ್ಧಿಯನ್ನು ಹಿಡಿತದಲ್ಲಿಡಬೇಕಾಗಿಲ್ಲವೆಂತಲೂ ಈತನು ಅಭಿಪ್ರಾಯಪಟ್ಟಿದ್ದಾನೆ.

ಭಾರತದ ಜನರಲ್ಲಿ ಪ್ರಜೋತ್ಪಾದನ ಶಕ್ತಿಯು ಹೆಚ್ಚಾಗಿದೆ ಮತ್ತು ಹುಟ್ಟು ಸಾವುಗಳ ಸಂಖ್ಯೆ ಹೆಚ್ಚಾಗಿದೆ. ಇಲ್ಲಿಯ ಹುಟ್ಟಿನ ಸಂಖ್ಯೆ ೧,೦೦೦ ಕ್ಕೆ ೩೫ ರ ಮೇರೆಗೂ, ಸಾವಿನ ಸಂಖ್ಯೆ ೧,೦೦೦ ಕ್ಕೆ ೨೪ ರ ಮೇರೆಗೂ ಇರುವುದು. ಅಮೇರಿಕಾದಲ್ಲಿ ಹುಟ್ಟಿನ ಸಂಖ್ಯೆ ೧,೦೦೦ ಕ್ಕೆ ೨೦ ರಂತೆಯೂ, ಸಾವಿನ ಸಂಖ್ಯೆ ೧,೦೦೦ ಕ್ಕೆ ೧೦ ರಂತೆಯೂ ಇರುವುದು. ಭಾರತದೇಶದಲ್ಲಿ ಎಳೆಯಮಕ್ಕಳ ಸಾವೂ ಹೆಚ್ಚು. ಶೇಕಡ ೨೦ ರಷ್ಟು ಮಕ್ಕಳು ಒಂದು ವರ್ಷ ತುಂಬುವುದರೊಳಗಾಗಿ ಮಡಿದುಹೋಗುತ್ತಿರುವರು. ಇತ್ತೀಚೆಗೆ ಆರೋಗ್ಯ ಶಾಖೆಯ ಕಾರ್ಯಕ್ರಮದಿಂದಲೂ ವೈದ್ಯಕೀಯ ವಸತಿಗಳಿಂದಲೂ ಸಾವಿನ ಪ್ರಮಾಣ ಸ್ವಲ್ಪ ಇಳಿದಿದೆ. ಆದರೆ ಪ್ರಜೋತ್ಪಾದನದ ದರವು ಇಳಿದಿಲ್ಲ, ಈ ಪ್ರಮಾಣ ಇಳಿದ ಹೊರತು ಜನಸಂಖ್ಯೆಯ ವಿಪರೀತ ವೃದ್ಧಿಯನ್ನು ತಡೆಗಟ್ಟಲಾಗುವುದಿಲ್ಲ. ಪ್ರಜೋತ್ಪಾದನದ ಪ್ರಮಾಣವನ್ನು ತೋರಿಸುವ ಅಂಕಿ ಅಂಶಗಳು ದೊರೆಯದಿದ್ದರೂ ಇದಕ್ಕಾಗಿಯೇ ನಡೆಸಿದ ಕೆಲವು ತನಿಖೆಗಳಿಂದ ಈ ಪ್ರಮಾಣವು ಇಳಿದಿಲ್ಲವೆಂದು ಗೊತ್ತಾಗಿದೆ. ಯುವಕ ಯುವತಿಯರು ಮದುವೆಯಾಗುವುದನ್ನು ಕೆಲವು ವರ್ಷಗಳು ಮುಂದಕ್ಕೆ ಹಾಕಿದರೆ ಪ್ರಜೋತ್ಪಾದನದ ಸಂಖ್ಯೆಯನ್ನು ಇಳಿಸಬಹುದು. ಹಾಗೆ ತಡಮಾಡಿ ಮದುವೆಯಾಗುವುದೂ ಅಲ್ಲದೆ ಸಂತಾನ ನಿರೋಧಕ್ರಮವನ್ನು ಆಚರಿಸಿದರೆ, ಈ ಸಂಖ್ಯೆಯನ್ನು ಮತ್ತಷ್ಟು ಇಳಿಸಬಹುದು. ಇಂದ್ರಿಯ ನಿಗ್ರಹ ಅಥವಾ ಸಂಯಮದಿಂದಾಗಲಿ, ಗರ್ಭವನ್ನು ತಡೆಯುವ ಔಷದ ಅಥವಾ ಉಪಕರಣಗಳಿಂದಾಗಲಿ, ಇತ್ತೀಚೆಗೆ ಪ್ರಚಾರಕ್ಕೆ ಬಂದಿರುವ "ಭದ್ರಕಾಲ" (Safe period) ದ ಅನುಷ್ಠಾನದಿಂದಾಗಲಿ ಸಂತಾನ ನಿರೋಧವನ್ನು ಸಾಧಿಸಬಹುದು. ಎಲ್ಲಕ್ಕಿಂತ ಉತ್ತಮವಾದ ಮಾರ್ಗವೆಂದರೆ ಸಂಯಮ ಅಥವಾ ಬ್ರಹ್ಮಚರ್ಯ. ನಮ್ಮ ದೇಶದ ಹಿರಿಯರು ಈ ಮಾರ್ಗವನ್ನೇ ಒತ್ತಿ ಹೇಳಿದ್ದಾರೆ. ಗರ್ಭವನ್ನು ತಡೆಯುವ ಔಷಧಿ ಮತ್ತು ಉಪಕರಣಗಳಿಂದ ದೇಹಕ್ಕೆ ಹಾನಿ ಸಂಭವಿಸುವುದೆಂದು ಪಾಶ್ಚಾತ್ಯ ವೈದ್ಯ ಶಾಸ್ತ್ರಜ್ಞರು

ಅಭಿಪ್ರಾಯಪಡುತ್ತಾರೆ. ಮನಶ್ಶಾಸ್ತ್ರದ ರೀತಿಯಾಗಿಯೂ ಇದರಿಂದ ದುಷ್ಪರಿಣಾಮವುಂಟಾಗುತ್ತದೆ. ಭದ್ರಕಾಲದ ವಿಷಯವಾಗಿ ಭಿನ್ನಾಭಿಪ್ರಾಯಗಳಿವೆ. ಈ ಭದ್ರಕಾಲವು ಭದ್ರವೇ ಅಲ್ಲ ಎಂಬುದಾಗಿ ಕೆಲವರ ಹೇಳಿಕೆ. ಇದರ ವಿಷಯವಾಗಿ ಇನ್ನೂ ಸಂಶೋಧನೆಗಳು ನಡೆಯುತ್ತಿವೆ. ಮುಖ್ಯವಾಗಿ ಸಂತಾನ ನಿರೋಧದಿಂದ ತಾಯಂದಿರ ಆರೋಗ್ಯವು ಹದಗೆಡದಿರುವುದು, ಸಂಸಾರಕ್ಕೆ ಹೆಚ್ಚು ಸೌಕರ್ಯವಾಗುವುದು ಮತ್ತು ಮಕ್ಕಳ ಪಾಲನೆ ಪೋಷಣೆಗೂ, ವಿದ್ಯಾಭ್ಯಾಸಕ್ಕೂ ಹಿತವಾಗುವುದು. ಇತರ ಮುಂದುವರೆದ ದೇಶಗಳಲ್ಲಿ ಸಂತಾನ ನಿರೋಧಕ್ರಮವು ಈಗ ಹೆಚ್ಚು ಹೆಚ್ಚಾಗಿ ಅನುಷ್ಠಾನದಲ್ಲಿದೆ. ಅಮೇರಿಕಾದ ಸಂಯುಕ್ತ ಸಂಸ್ಥಾನಗಳಲ್ಲಿ ಮೇಲಿನ ಮತ್ತು ಮಧ್ಯಮ ದರ್ಜೆಯ ಜನರಲ್ಲಿ ಗರ್ಭ ಧರಿಸುವುದು ಅವರ ಹತೋಟಿಯಲ್ಲಿದೆ. ತಾಯಿತನವನ್ನು ಅಪೇಕ್ಷಿಸುವವರಿಗೆ ಮಾತ್ರ ಮಕ್ಕಳು ಹುಟ್ಟುತ್ತವೆ. ಆಸ್ಟ್ರೇಲಿಯಾದಲ್ಲಿ ನಡೆದ ಒಂದು ಸಂಶೋಧನೆಯಿಂದ, ಅಲ್ಲಿಯ ದಂಪತಿಗಳು ತಮ್ಮ ಸಂಸಾರವನ್ನು ಎರಡು ಮಕ್ಕಳಿಗೆ ಮಿತಿಗೊಳಿಸಿದ್ದಾರೆಂದು ತಿಳಿದುಬರುತ್ತದೆ. ಮತ್ತು ಈ ರೀತಿ ಮಿತಿಗೊಳಿಸಲು ತಮ್ಮ ಸ್ವಾರ್ಥವೇ ಮುಖ್ಯ ಕಾರಣವೆಂದು ಅನೇಕ ದಂಪತಿಗಳು ಹೇಳಿದ್ದಾರೆ. ವಿಶ್ವಸಂಸ್ಥೆಯವರೂ, ಭಾರತ ಸರ್ಕಾರದವರೂ ೧೯೫೨ ರಲ್ಲಿ ಮೈಸೂರು ಸಂಸ್ಥಾನದಲ್ಲಿ ಸಮ್ಮಿಳಿತವಾಗಿ ನಡೆಸಿದ ಮಾದರಿ ಪರಿಶೀಲನೆಯಲ್ಲಿ ಭೇಟಿ ಮಾಡಿದ ದಂಪತಿಗಳಲ್ಲಿ ಶೇಕಡ ೭೮ ಜನರು ಗರ್ಭವನ್ನು ತಡೆಯಲು ಅಥವಾ ಮುಂದಕ್ಕೆ ಹಾಕಲು ಬಯಸಿದರು ಮತ್ತು ಹಾಗೆ ಮಾಡಲು ಮಾರ್ಗವನ್ನು ತಿಳಿಯಲೂ ಬಯಸಿದರು. ಇದಕ್ಕೂ ಹಿಂದೆ ಕಲ್ಕತ್ತೆಯಲ್ಲಿ ನಡೆಸಿದ ಮತ್ತೊಂದು ಸಂಶೋಧನೆಯಲ್ಲಿ ಮೇಲಿನ ದರ್ಜೆಗೆ ಸೇರಿದ ಮಹಿಳೆಯರಲ್ಲಿ ಶೇಕಡ ೩೮ ರಷ್ಟು, ಕೆಳಗಿನ ಮಧ್ಯದರ್ಜೆಯ ಮಹಿಳೆಯರ ಪೈಕಿ ಶೇಕಡ ೧೩ ರಷ್ಟು ಒಂದಲ್ಲ ಒಂದು ಸಂತಾನ ನಿರೋಧಕ್ರಮವನ್ನು ಆಚರಿಸುತ್ತಿದ್ದರೆಂದು ವರದಿಯಾಗಿದೆ. ಅಂದರೆ ಭಾರತದ ಮಹಿಳೆಯರೂ ಕೂಡ ಸಂತಾನ ನಿರೋಧಕ್ರಮವನ್ನು ಕೈಗೊಳ್ಳಲು ಬಯಸುತ್ತಾರೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಮಾತ್ರವಲ್ಲ; ಅವರಲ್ಲಿ ಅನೇಕರು ಅದಕ್ಕೆ ತಕ್ಕ ಮಾರ್ಗಗಳನ್ನು ತಿಳಿಯಲು ಕಾತರಿಸುತ್ತಿರುವರು. ಭಾರತ ಸರ್ಕಾರದವರು ಜನವೃದ್ಧಿಯನ್ನು ಹತೋಟಿಯಲ್ಲಿಡುವ ಅವಶ್ಯಕತೆಯನ್ನು ಮನಗಂಡು ಸಂಸಾರ ಪರಿಮಿತಿ ಕಾರ್ಯಕ್ರಮಕ್ಕೆ ೭೫ ಲಕ್ಷ ರೂಪಾಯಿಯನ್ನು ಮೀಸಲಾಗಿಟ್ಟಿರುವರು. ಈ ಸಮಸ್ಯೆಯ ಪರಿಮಾಣವನ್ನು ಗಮನಿಸಿದರೆ ಈ ಮೊಬಲಗು ಬಹಳ ಕಡಿಮೆಯೇ ಆಗುವುದು. ಸಂಸಾರವನ್ನು ಮಿತಿಗೊಳಿಸುವುದೇ ಈಗಿನ ಸಂದರ್ಭದಲ್ಲಿ ಜನವೃದ್ಧಿಯನ್ನು ತಡೆಗಟ್ಟುವ ಕರುಣಾಮಯವಾದ ಮಾರ್ಗವೆಂದು ಹೇಳಬಹುದು.

ಇಂಡಿಯಾ ದೇಶವು ಪ್ರಜಾಸಂಖ್ಯೆಯಲ್ಲಿ ಮಿತಿಮೀರಿರುವುದರಿಂದ, ಸಂತಾನ

ನಿರೋಧಕ್ರಮವನ್ನು ಅನುಸರಿಸಿ ಪ್ರಜಾಸಂಖ್ಯೆಯನ್ನು ಹಿಡಿತದಲ್ಲಿಡುವುದು ಅವಶ್ಯಕ ವೆಂದು ಇತ್ತೀಚಿನ ತಮ್ಮ ವರದಿಯಲ್ಲಿ ಇಂಡಿಯಾ ದೇಶದ ಜನಗಣತಿಯ ಮುಖ್ಯಾಧಿ ಕಾರಿಯವರು ಸಲಹೆಯನ್ನಿತ್ತಿದ್ದಾರೆ. ಸಂಸಾರ ಪರಿಮಿತಿಯೋಜನೆಯ ಮೇರೆಗೆ, ಪ್ರತಿಯೊಂದು ಸಂಸಾರದಲ್ಲೂ ಮೂರು ಮಕ್ಕಳಿಗಿಂತ ಹೆಚ್ಚಾಗಿ ಇರಕೂಡದೆಂದು ಅವರು ಒತ್ತಿ ಹೇಳಿದ್ದಾರೆ. ಈ ಸಂಖ್ಯೆಯನ್ನು ಮೀರಿ ಮಕ್ಕಳಿದ್ದರೆ ಅದು ಅವಿವೇಕದ ಕಾರ್ಯ್ಯುನವೆಂದು ಅವರ ಅಭಿಪ್ರಾಯ. ಇದೇ ಬಹುಜನರ ಮತ.

## 4. ಉಪಸಂಹಾರ

ನಮ್ಮ ಪರಿಶೀಲನೆಯ ಸಾರಾಂಶವನ್ನು ಈ ರೀತಿ ನಿರೂಪಿಸಬಹುದು. ಈಗ ದೇಶದಲ್ಲಾಗುತ್ತಿರುವ ಆಹಾರೋತ್ಪತ್ತಿಯ ಪ್ರಮಾಣವು ದಿವಸ ಒಂದಕ್ಕೆ ತಲಾ ೧೩.೫ ಔನ್ಸ್‌ನಂತೆ ಹಂಚಲೂ ಸಹ ಸಾಲದಾಗಿದೆ. ಜನಸಂಖ್ಯೆಯು ಒಂದೇ ಸಮನೆ ಬೆಳೆಯುತ್ತಲಿದೆ; ಆಹಾರೋತ್ಪತ್ತಿಯ ಬೆಳವಣಿಗೆ ಇಷ್ಟು ತ್ವರಿತವಾಗಿಲ್ಲ. ಇದಕಾರಣ ಮೊದಲೇ ಕಡಿಮೆಯಾಗಿರುವ ಜನರ ಆರ್ಥಿಕ ಜೀವನದ ಮಟ್ಟವು ಮತ್ತಷ್ಟು ಹದಗೆಟ್ಟಿದೆ; ಮತ್ತು ಇನ್ನೂ ಹದಗೆಡುವುದರಲ್ಲಿದೆ. ನೀರಾವರಿ ಯೋಜನೆ ಗಳಿಂದಲೂ, ಬಂಜರು ಜಮೀನುಗಳನ್ನು ಸಾಗುಮಾಡುವುದರಿಂದಲೂ, ಕೃತಕ ಗೊಬ್ಬರಗಳ ಉಪಯೋಗದಿಂದಲೂ ವೈಜ್ಞಾನಿಕ ರೀತಿಯಲ್ಲಿ ಹೈನಿನ ಕಸಬನ್ನು ಕೈಗೊಳ್ಳುವುದರಿಂದಲೂ, ಮೀನು, ಮಾಂಸ ಮುಂತಾದ ಆಹಾರದ ಉಪಸಾಧನ ಗಳನ್ನು ಹೆಚ್ಚುಹೆಚ್ಚಾಗಿ ಉಪಯೋಗಿಸಿಕೊಳ್ಳುವುದರಿಂದಲೂ, ಆಹಾರದ ಸಂಬ ರಾಯಿಯನ್ನು ತಕ್ಕಮಟ್ಟಿಗೆ ಹೆಚ್ಚಿಸಬಹುದು. ಸರ್ಕಾರದ ಆರೋಗ್ಯ ಮತ್ತು ವೈದ್ಯ ಕೀಯ ಯೋಜನೆಗಳಿಂದ ಸಾವಿನ ಪ್ರಮಾಣವು ಇಳಿಮುಖವಾಗಿದೆ. ಆದರೆ ಪ್ರಜೋ ತ್ಪಾದನದ ಪ್ರಮಾಣವು ಇಳಿದಿಲ್ಲ. ಇದು ಇಳಿದ ಹೊರತು ಜನಸಂಖ್ಯೆಯ ಬೆಳವಣಿಗೆಯು ಆಹಾರೋತ್ಪತ್ತಿಯನ್ನು ಕೆಲವು ವರ್ಷಗಳಲ್ಲೇ ಮೀರಿಸಿ ಮತ್ತೆ ವಿಷಮ ಪರಿಸ್ಥಿತಿಯನ್ನು ಉಂಟುಮಾಡಬಹುದು. ಪ್ರಜಾಸಂಖ್ಯೆಯ ಬೆಳವಣಿಗೆ ಯನ್ನು ತಡೆಯಲು ಭಾರತದೇಶಾದ್ಯಂತ ಒಂದು ತೀವ್ರ ಯೋಜನೆ ಬೇಕಾಗುವುದು. ಮತ್ತು ದೇಶದ ಜನರಲ್ಲಿ ಸಂಸಾರವನ್ನು ಪರಿಮಿತಿಗೊಳಿಸುವ ಇಚ್ಛೆ ಮತ್ತು ಶ್ರದ್ಧೆ ಯನ್ನು ಹುಟ್ಟಿಸಿ ಅವರಿಗೆ ತಕ್ಕ ಸಲಹೆಯನ್ನು ಕೊಡಲು ಸೂಕ್ತಕ್ರಮವನ್ನು ಕೈಗೊಳ್ಳ ಬೇಕು. ಮುಂದಿನ ಪರಿಸ್ಥಿತಿಯು ಹದಗೆಟ್ಟು ಚಿಂತಾಜನಕವಾಗುವುದನ್ನು ತಪ್ಪಿಸಬೇಕಾ ದರೆ ಮೇಲೆ ಹೇಳಿದ ರೀತಿಯಲ್ಲಿ ಸರ್ವಪ್ರಯತ್ನ ಮಾಡುವುದು ಅತ್ಯಾವಶ್ಯಕ. ಹಾಗೆ ಮಾಡಿದರೇನೆ ನಮ್ಮ ದೇಶವು ತನ್ನ ಗತವೈಭವವನ್ನು ಮತ್ತೆ ಪಡೆಯಬಹುದು.

—ಎಂ. ವಿ. ಜಂಬುನಾಥನ್

## ನೀನೇನಗೈದಿರುವೆ ಎದೆಯ ಕದ್ದು !

ನನ್ನೆಲ್ಲ ಆಸೆಗಳ ನಿನ್ನೊಳೊಂದಾಗಿಸುತೆ
ನೀನೆನ್ನ ಹೃದಯವನು ಕದ್ದು ನಡೆದೆ :
ನನ್ನೆದೆಯ ಪಾತ್ರೆಯಲಿ ಪ್ರೇಮ ಮಕರಂದವನು.
ತುಂಬಿ, ನಾಚಿಕೆ ತುಳುಕೆ ಬಳಿಸಾರುವೆ !

ನನ್ನ ಕಣ್ಣುಗಳಲ್ಲಿ ಎನಿತೊ ಬಣ್ಣಗಳಿಂದ
ನಿನ್ನ ಚಿತ್ರವ ಬಿಡಿಸಿ ನೀ ಮೆರೆಯುವೆ !
ಹಗಲು ಕಾಣುವ ಬಯಕೆ ಇರುಳು ಸೇರುವ ತನಕ
ಎಡೆವಿಡದೆ ಕಾಡುತಿರಲೊಂದೆ ಆಸೆ.

ಮೈಮನವ ಮರೆಸಿರುವೆ (ಆರೇನ ಬಲ್ಲರಿದ !)
ನೆನೆದು ನಿಂದೊಡೆ ಬಂದು ನುಡಿಯಿಸುವರು.
ಕ್ಷಣದೆ ನಾಚಿಕೆಯುಕ್ಕೆ ಮೊಗಮುಚ್ಚಿ ನಾ ನಗುವೆ
ನೀನೇನಗೈದಿರುವೆ ಎದೆಯ ಕದ್ದು !

—ಚಿರಂಜೀವಿ.

# ವೈರಸ್‌ಗಳು (Viruses)–ಸಸ್ಯರೋಗಗಳು

**ವೈರಸ್:**—ವೈರಸ್‌ಗಳು ಅತಿ ಸೂಕ್ಷ್ಮಾಣುಗಳು. ಸಾಮಾನ್ಯಬಗೆಯ ಬ್ಯಾಕ್ಟೀರಿಯಗಳನ್ನು ಶೋಧಿಸಬಹುದಾದ ಶೋಧಕಗಳಲ್ಲಿ (Berk Feld Filter) ಇವು ಶೋರಿಹೋಗುತ್ತವೆ. ಇವುಗಳಿಗಿರುವ ಸಂತಾನವೃದ್ಧಿ ಮೊದಲಾದ ಶಕ್ತಿಗಳಿಂದ ಈ ಅತಿ ಸೂಕ್ಷ್ಮಾಣುಗಳನ್ನು ಪ್ರಾಣಿಗಳ ಗುಂಪಿಗೆ ಸೇರಿದವೆಂದೂ, ಇನ್ನಿತರ ಲಕ್ಷಣಗಳಿಂದ ರಾಸಾಯನಿಕ ವಸ್ತುವಿಶೇಷಗಳ ಗುಂಪಿಗೆ ಸೇರಿಸಬಹುದಾದ ನಿರ್ಜೀವಿಗಳೆಂದೂ ವಾದಗಳಿವೆ. ಎಂದರೆ ವೈರಸ್‌ಗಳು ಸಜೀವಿಗಳೆ ಅಥವಾ ನಿರ್ಜೀವಿಗಳೆ ಎನ್ನುವುದು ಇನ್ನೂ ತಿಳಿದಿಲ್ಲ. ವೈರಸ್‌ಗಳು ಹೆಚ್ಚಿನ ಮಾಲಿಕ್ಯೂಲರ್ ಭಾರವುಳ್ಳ (Higher Molecular Weight) ಸಾರಜನಕ ವಸ್ತುಗಳು (Protein Bodies) ಜೀವಿಯೊಂದರ ಅಂಗಾಂಶದಲ್ಲಿದ್ದಾಗ ಸಜೀವಿಗಳಂತೆ ವರ್ತಿಸುತ್ತವೆ.

### ವೈರಸ್ ರೋಗಕ್ಕೆ ತುತ್ತಾಗುವ ಜೀವಿಗಳು

ಸಾಮಾನ್ಯವಾಗಿ ಎಲ್ಲಾ ಸಜೀವಿಗಳೂ (ಪ್ರಾಣಿ ಮತ್ತು ಸಸ್ಯವರ್ಗ) ವೈರಸ್ ರೋಗಕ್ಕೆ ತುತ್ತಾಗುತ್ತವೆ. ಎಲ್ಲೋ ಬಹಳ ಸ್ವಲ್ಪಭಾಗ ವೈರಸ್ ಉಪದ್ರವಕ್ಕೆ ತುತ್ತಾಗದಿರಬಹುದು. ಬಹಳ ಹಿಂದಿನ ಕಾಲದಿಂದಲೂ ವೈರಸ್ ಉಪದ್ರವಗಳು ಮಾನವನಿಗೆ ಪರಿಚಿತವಾಗಿವೆ. ಇನ್‌ಪ್ಲೂಯಂಜ (Influenza) ಮೈಲಿ (Small-pox), ದಡಾರ (Measles), ಹಳದಿಜ್ವರ (Yellow Fever) ಮೊದಲಾದ ಭಯಂಕರ ರೋಗಗಳು ವೈರಸ್‌ಗಳಿಂದಾಗುತ್ತವೆ. ೧೯೫೬ ರಿಂದ ಶಿವಮೊಗ್ಗಾ ಜಿಲ್ಲೆಯ ಮಲೆನಾಡು ಪ್ರಾಂತದಲ್ಲಿ ಮನುಷ್ಯರಿಗೂ ಮತ್ತು ವಾನರರಿಗೂ ಒಂದು ಬಗೆಯ ವೈರಸ್ ರೋಗ ತಗಲುತ್ತಿದೆ. ಇದರ ವಿಷಯದಲ್ಲಿ ಸಂಶೋಧನೆಗಳು ನಡೆಯುತ್ತಿವೆ.

ವೈರಸ್ ರೋಗಗಳು ಸಸ್ಯಪ್ರಪಂಚದಲ್ಲೂ ಬಹಳ ಕಾಲದಿಂದ ಇದ್ದಿರಲೇಬೇಕು. ಆದರೆ ಕ್ರಿ.ಶ. ೧೯೦೦ ರಿಂದ ವಿಜ್ಞಾನಿಗಳ ಗಮನ ಇತ್ತ ಹರಿದು ಸಂಶೋಧನೆಗಳು ನಡೆದು ೨೦೦ ಬಗೆಯ ಸಸ್ಯರೋಗಜನಕ ವೈರಸ್‌ಗಳು ಕಂಡುಹಿಡಿಯಲ್ಪಟ್ಟಿವೆ. ಇವುಗಳಲ್ಲಿ ಕೆಲವು ವೈರಸ್‌ಗಳು ಪೈರು ಪಚ್ಚೆಗಳಿಗೆ ಮಾರಕ ರೋಗಗಳನ್ನುಂಟುಮಾಡುತ್ತವೆ.

ಮನುಷ್ಯರು, ಸಸ್ಯಗಳೆ ಅಲ್ಲದೆ ಇತರ ಜಾನುವಾರುಗಳು, ಕಾಡುಪ್ರಾಣಿಗಳು,

ಕ್ರಿಮಿಕೀಟಗಳು ಮತ್ತು ಏಕಾಣುಜೀವಿಗಳಾದ ಬ್ಯಾಕ್ಟೀರಿಯಾಗಳೂ ಸಹ ವೈರಸ್ ರೋಗಕ್ಕೆ ತುತ್ತಾಗುತ್ತವೆ.

## ವೈರಸ್ ರೋಗದ ಉಗಮ

ಸಾಮಾನ್ಯವಾಗಿ ರೋಗಜನಕ ಅಂಶಗಳು—ಅದರಲ್ಲೂ ವೈರಸ್‌ಗಳು ಪ್ರಪಂಚದ ನಾನಾಭಾಗಗಳಲ್ಲಿ ಪ್ರಾದೇಶಿಕವಾಗಿ ತಮ್ಮ ಜನ್ಮಸ್ಥಾನವನ್ನು ಪಡೆದಿರುತ್ತವೆ. (Originated in local areas all over the world.) ಪ್ರಪಂಚದ ಯಾವುದೇ ಒಂದು ಪ್ರದೇಶ ಅಥವಾ ಸ್ಥಳವನ್ನು ತಮ್ಮ ಮೂಲವನ್ನಾಗಿ ಉಳ್ಳ ಆಯಾ ಪ್ರದೇಶದ ಅಥವಾ ಸ್ಥಳದ ವೈರಸ್‌ಗಳು ತಮ್ಮ ತೌರೂರ ಸಸ್ಯಗಳೊಂದಿಗೆ ಬಹಳ ಕಾಲದಿಂದ ಹೊಂದಿಬಂದಿರಬಹುದಾದ ಸಂಪರ್ಕದಿಂದಲೋ ಏನೋ ಈ ತೌರೂರ ಸಸ್ಯಗಳಿಗೆ ತಮ್ಮ ಸ್ಥಳದ ವೈರಸ್‌ಗಳ ಉಪದ್ರವನ್ನು ತಾಳಿಕೊಳ್ಳುವ ಶಕ್ತಿ ಬಂದಿರುತ್ತದೆ. ಆದ್ದರಿಂದ ಸ್ಥಳದ ಕೆಲವು ಬಗೆ ವೈರಸ್‌ಗಳಿಗೆ ತುತ್ತಾದ ಈ ಸಸ್ಯಗಳು ಅತಿ ಹೆಚ್ಚಿನ ತೊಂದರೆಗಳಿಗೆ ತುತ್ತಾಗಿ ನಾಶಹೊಂದದೆ ಚೇತರಿಸಿಕೊಂಡು ಬಾಳುತ್ತವೆ. ಅನೇಕ ಸಾರಿ ಈ ರೋಗಜನಕ ವೈರಸ್‌ಗಳು ಸಸ್ಯಶರೀರದಲ್ಲಿದ್ದರೂ ರೋಗಲಕ್ಷಣಗಳನ್ನು ತೋರಿಸದೆ ಈ ಸಸ್ಯಗಳು ಬಾಳುತ್ತವೆ. ಇದೇ ರೀತಿ ಪ್ರಾಣಿಗಳಲ್ಲೂ ಕ್ರಿಮಿಕೀಟಗಳಲ್ಲೂ ರೋಗಜನಕ ವೈರಸ್‌ಗಳಿರುತ್ತವೆ.

ಒಂದು ವರ್ಗದ ಸಸ್ಯ, ಕ್ರಿಮಿ, ಕೀಟಗಳಲ್ಲಿ ಈ ರೀತಿ ಬಹಳ ಕಾಲದಿಂದ ಇರಬಹುದಾದ ವೈರಸ್‌ಗಳು ಕಾರಣಾಂತರದಿಂದ ಬೇರೆ ವರ್ಗದ ಸಸ್ಯ, ಪ್ರಾಣಿ, ಕೀಟ, ಕ್ರಿಮಿಗಳಲ್ಲಿ ಸೇರಿದಾಗ ಅವುಗಳಿಗೆ ಎಲ್ಲ ಬಗೆಯಿಂದಲೂ ಅನುಕೂಲ ಸನ್ನಿವೇಶ ಒದಗಿದಾಗ ಆ ಜೀವಿಗಳಲ್ಲಿ ಮಾರಕರೋಗಗಳನ್ನುಂಟುಮಾಡಬಲ್ಲವು. ಒಂದು ಪ್ರದೇಶದಲ್ಲಿ ಎಂದೆಂದೂ ಬೆಳೆಯದೆ ಇದ್ದ ಒಂದು ಪೈರನ್ನು ಆ ಪ್ರದೇಶಕ್ಕೆ ತಂದು ಬೆಳೆಯ ಪ್ರಾರಂಭಿಸಿದ ಅನೇಕ ಸಂದರ್ಭಗಳಲ್ಲಿ ಸ್ಥಳದ ವೈರಸ್‌ಗಳು ಈ ಪೈರನ್ನು ಸೇರಿ ಸರ್ವನಾಶಗೊಳಿಸುತ್ತವೆ. ಈ ಹೊಸಸ್ಥಳದ ವೈರಸ್‌ಗಳ ಸಂಪರ್ಕವನ್ನು ಆ ವರೆಗೂ ಹೊಂದದೆ ಇದ್ದ ಈ ಪೈರು ಹೊಸ ವೈರಸ್ಸಿನ ಉಪದ್ರವವನ್ನು ತಾಳಿಕೊಳ್ಳುವ ಶಕ್ತಿಯನ್ನು ಹೊಂದಿರುವುದಿಲ್ಲ. ಆದ್ದರಿಂದ ಬೇಗ ರೋಗಕ್ಕೆ ತುತ್ತಾಗಿ ನಾಶವಾಗುತ್ತದೆ. ಹೀಗೆ ಒಂದು ಪ್ರದೇಶಕ್ಕೆ ತಂದ ಹೊಸ ಪೈರಿಗೆ ಉಂಟಾದ ವೈರಸ್ ರೋಗ ತನ್ನ ಪ್ರದೇಶದಲ್ಲಿ ಬೆಳೆದ ಈ ಹೊಸ ಪೈರಿಗೆಲ್ಲಾ ಹರಡಿ ನಾಶಮಾಡುತ್ತದೆ. ಅಲ್ಲದೆ ಇತರ ಪ್ರದೇಶಗಳಿಗೂ ಹರಡಬಹುದು. ಉದಾಹರಣೆಗೆ ಹೇಳವುದಾದರೆ ಕ್ರಿ.ಶ. ೧೯೨೯ ರಲ್ಲಿ ಆರ್ಜಂಟೈನಾ (Argentina) ದಲ್ಲಿ ನಡೆದ ಒಂದು ಘಟನೆ

ಚರಿತ್ರಾರ್ಹವಾಗಿದೆ—ಶುಗರ್ ಬೀಟ್ ಕೈಗಾರಿಕೆಯನ್ನು (Sugar Beet) ವೃದ್ಧಿ ಪಡಿಸಲು ಕ್ರಿ.ಶ. ೧೯೨೯ ರಲ್ಲಿ ಆರ್ಜಂಟೈನಾದ ರಿಯೋ ನೆಗ್ರೊ (Rio Negro) ಕಣಿವೆಯಲ್ಲಿ ಈ ಹೊಸ ಪೈರನ್ನು (ಶುಗರ್ ಬೀಟ್) ಬೆಳೆಯಲು ಪ್ರಾರಂಭಿಸಿದರು. ಆದರೆ ಈ ಹೊಸ ಪೈರು ರಿಯೋ ನೆಗ್ರೊ ಕಣಿವೆ ಪ್ರದೇಶದ ಮಣ್ಣಿನಲ್ಲಿ ಜೀವ ತಾಳಿದ್ದೇ ತಡ ಮಾರಕ ವೈರಸ್ ರೋಗ ಬಂದು ತಗಲಿತು. ಈ ರೋಗವನ್ನು "ಹಳದಿ ಬಾಡಲು" (Yellow Wilt) ರೋಗ ಎಂದು ಕರೆದರು. ರೋಗಕ್ಕೆ ತುತ್ತಾದ ಪೈರು ಹಳದಿ ಬಣ್ಣಕ್ಕೆ ತಿರುಗಿ ಬಾಡಿ ಪ್ರಾಣನೀಗಿದವು. ಶುಗರ್ ಬೀಟಿನ ಈ ಹಳದಿ ಬಾಡಲು ರೋಗಜನಕ ವೈರಸ್ ಶುಗರ್ ಬೀಟಿನಲ್ಲಾಗಲಿ, ಇನ್ನಿತರ ಸಸ್ಯಗಳಲ್ಲಾಗಲಿ ಹಿಂದೆಂದೂ ಕಂಡಿರಲಿಲ್ಲ. ಹತ್ತು ವರುಷಗಳ ಸತತ ಪ್ರಯತ್ನ ವಿಫಲವಾಗಿ ಶುಗರ್ ಬೀಟ್ ಬೇಸಾಯವನ್ನು ಕೈ ಬಿಟ್ಟುಬಿಡಬೇಕಾಯಿತು. ಈ ಹಳದಿ ಬಾಡಲು ರೋಗ ಸದ್ಯ ದಕ್ಷಿಣ ಅಮೆರಿಕಾದಲ್ಲೆ ಕಾಣಿಸಿಕೊಳ್ಳುತ್ತಿದ್ದರು ಕೂಡ ಎಂದಾದರೊಮ್ಮೆ ಪ್ರಪಂಚದ ಇತರ ಕಡೆಗಳಲ್ಲಿ ಶುಗರ್ ಬೀಟ್ ಬೆಳೆಯನ್ನು ಕಬಳಿಸಬಹುದೆಂಬ ಭೀತಿ ಇದೆ. ಅನೇಕ ಸಸ್ಯರೋಗಜನಕ ವೈರಸ್‌ಗಳು ತಮ್ಮ ಹುಟ್ಟುಸ್ಥಳದಿಂದ ಪ್ರಪಂಚದ ನಾನಾ ಭಾಗಗಳಿಗೆ ವಿಪುಲವಾಗಿ ಹರಡಿವೆ. ಕಿತ್ತಳೆಯ ಜಾತಿಗೆ ಬರುವ Tristeza Virus ಮಾರಕ ರೋಗ ಹುಟ್ಟಿದ್ದು ದಕ್ಷಿಣ ಆಫ್ರಿಕಾದಲ್ಲಿ ಅಥವಾ ಆಗ್ನೇಯ ಏಷ್ಯಾದಲ್ಲಿ ಎಂದು ಹೇಳಬಹುದು. ಅನೇಕ ಶತಮಾನಗಳ ವರೆಗೆ ಇದರ ವ್ಯಾಪ್ತಿ ಕೇವಲ ಒಂದು ಗೊತ್ತಾದ ಸ್ಥಳವಾಗಿತ್ತು. ಆದರೆ ಕ್ರಿ.ಶ. ೧೯೩೦ ರಿಂದೀಚೆಗೆ ಈ ರೋಗ (ಈ ರೋಗದ ತರಹೆಯ ರೋಗ) ಆಸ್ಟ್ರೇಲಿಯ, ಜಾವ, ಕ್ಯಾಲಿಫೋರ್ನಿಯ ಲೂಸಿಯಾನ, ಆರ್ಜಂಟೈನ, ಉರಗ್ವೆ ಮತ್ತು ಬ್ರೆಜಿಲ್‌ಗಳಿಂದ ವರದಿಯಾಗಿವೆ. ಈ ದೂರದೂರದ ಪ್ರದೇಶಗಳಿಗೆ ಸಾಮಾನ್ಯವಾಗಿ ಕಸಿ ಮತ್ತು ಮುಗುಳು (Bud) ಗಳಿಂದ ಹೋಗಿರಬೇಕು. ಆರ್ಜಂಟೈನಾ ಮತ್ತು ಬ್ರೆಜಿಲ್‌ಗಳಲ್ಲಿ ಕಾಲಿಟ್ಟ ನಂತರ ಈ ವೈರಸ್ ರೋಗ ಅಲ್ಲಿಯ ಒಂದು ಬಗೆಯ ಸೀಡೆಯಿಂದ (Citrus Aphids—Aphis Citri Cidus) ಬಹಳ ಬೇಗ ಹರಡಿತು. ಕೀಟಗಳು ವೈರಸ್ ರೋಗವನ್ನು ಹರಡುವ ಒಳ್ಳೆಯ ಸಾಧನಗಳು.

## ವೈರಸ್ ರೋಗಗಳ ಹಾವಳಿ

ಪೈರುಗಳಿಗೆ ಬರುವ ಕೆಲವು ವೈರಸ್ ರೋಗಗಳು ವಿಪುಲ ನಷ್ಟವನ್ನುಂಟು ಮಾಡುತ್ತವೆ. ಶುಗರ್ ಬೀಟಿನ ಮುರುಟುತಲೆ (Curly Top) ವೈರಸ್ ರೋಗವು ಪಶ್ಚಿಮ ಸಂಯುಕ್ತಸಂಸ್ಥಾನಗಳಲ್ಲಿ ಹರಡಿ ಭಾರಿ ನಷ್ಟವನ್ನುಂಟುಮಾಡಿತು. ಈ

ರೋಗದಿಂದಾಗಿ ಕ್ರಿ.ಶ. ೧೯೧೬ ರಿಂದ ೧೯೩೨ ರ ವರೆಗೆ ಶುಗರ್ ಬೀಟ್ ಕೈಗಾರಿಕೆಯನ್ನೆ ನಿಲ್ಲಿಸಬೇಕಾಯಿತು. ಸುಮಾರು ಕ್ರಿ.ಶ. ೧೯೧೭ ರಲ್ಲಿ ಕಬ್ಬಿನ ಬೆಳೆ ಮತ್ತು ಅದರ ಸಕ್ಕರೆ ಕೈಗಾರಿಗೆ ಕಬ್ಬಿನ ಚುಕ್ಕೆ ರೋಗ (Mosaic disease) ದಿಂದ ಅಮೆರಿಕಾದ ಸಂಯುಕ್ತಸಂಸ್ಥಾನ, ಬ್ರೆಜಿಲ್ ಮತ್ತು ಪ್ರಪಂಚದ ಮತ್ತಿತರ ಭಾಗಗಳಲ್ಲಿ ಭಾರಿ ಧಕ್ಕೆ ಉಂಟಾಯಿತು. ಕ್ರಿ.ಶ. ೧೯೪೦ ರಿಂದ ಪಶ್ಚಿಮ ಆಫ್ರಿಕಾದಲ್ಲಿ ಕೋಕೋ ಪೈರಿನ 'ರಂಬೆ ಊದು' (Swollen shoot) ವೈರಸ್ ರೋಗದಿಂದ ಕೋಕೋ ಕೈಗಾರಿಕೆಗೆ ಭಾರಿ ಪೆಟ್ಟು ಬಿದ್ದಿದೆ. ಕ್ರಿ.ಶ. ೧೯೩೬-೪೬ ರ ಅವಧಿಯಲ್ಲಿ Sao Paulo, ಬ್ರೆಜಿಲ್ ಪ್ರಾಂತದಲ್ಲಿ ೭ ದಶ ಲಕ್ಷ ಕಿತ್ತಳೆ ಗಿಡಗಳು Tristeza ವೈರಸ್ ರೋಗದಿಂದ ನಾಶವಾದವು. ಈ ರೋಗದ ಭೀತಿ ಪ್ರಪಂಚದ ಕಿತ್ತಳೆ ಬೆಳೆಗಾರರಿಗೆಲ್ಲಾ ಇದೆ. ಮೈಸೂರು ಪ್ರಾಂತದಲ್ಲಿ ಶ್ರೀಗಂಧದ (Spik disease) ಸ್ಪೈಕ್ ವೈರಸ್ ರೋಗದಿಂದ ಈ ಪೈರಿಗೆ—ಕೈಗಾರಿಕೆಗೆ ಧಕ್ಕೆ ಇದೆ. ಈ ರೋಗದಿಂದ ೫೦% ಗಂಧದ ಎಣ್ಣೆಯ ಇಳಿವರಿಯು ಕಡಮೆಯಾಗುತ್ತದೆ. ಹೊಗೆಸೊಪ್ಪಿನ ಮಚ್ಚೆ ರೋಗದಿಂದ ಭಾರತದ ಬೆಳೆಗಾರರಿಗೆ ನಷ್ಟವಾಗುತ್ತಿದೆ. ಏಲಕ್ಕಿಯ ಕಟ್ಟೆ ರೋಗ ಈ ಪೈರಿನ ಬೇಸಾಯಗಾರರಿಗೆ ಭೀತಿ ಹುಟ್ಟಿಸಿದೆ.

## ರೋಗಲಕ್ಷಣಗಳು

ವೈರಸ್ ರೋಗಲಕ್ಷಣಗಳು ನಾನಾ ಬಗೆಯಾಗಿರುತ್ತವೆ. ಈ ರೋಗಗಳಿಂದ ಸಸ್ಯಗಳಿಗೆ ಆಗುವ ನಷ್ಟಗಳ ಬಗೆಯು ಬೇರೆಬೇರೆಯಾಗಿರುತ್ತದೆ. ಕೆಲವು ವೈರಸ್‌ಗಳು ಅತಿ ಅಲ್ಪಕಾಲದಲ್ಲೆ ಸಸ್ಯಗಳನ್ನು ಕೊಲ್ಲುತ್ತವೆ. (Tomato curly top spotted wilt). ಸಾಮಾನ್ಯವಾಗಿ ವೈರಸ್ ರೋಗಗಳಿಗೆ ತುತ್ತಾದ ಪೈರುಗಳ ಇಳಿವರಿ ಕಡಮೆಯಾಗುತ್ತದೆ ಮತ್ತು ಕೆಳದರ್ಜೆಯ ಉತ್ಪನ್ನ ಕೈಸೇರುತ್ತದೆ. ವೈರಸ್ ರೋಗಲಕ್ಷಣಗಳನ್ನು ಸ್ಪಷ್ಟವಾದ ಎರಡು ಗುಂಪುಗಳಾಗಿ ವಿಂಗಡಿಸಬಹುದು. (i) ಎಲೆಗಳ ಮೇಲೆ ಮಚ್ಚೆ ಅಥವಾ ಚುಕ್ಕೆಗಳಾಗುವುದು ಒಂದು, (ii) ಪೈರು ಹಳದಿಯಾಗುವುದು, ಎಲೆ ಮುರುಟು, ಕುಳ್ಳಾಗುವುದು, ಮಿತಿಮೀರಿ ಹರೆಯೊಡೆಯುವುದು, ಮತ್ತೊಂದು ಗುಂಪು. ಎರಡನೆ ಗುಂಪಿನಲ್ಲಿ ಚುಕ್ಕೆ ಅಥವಾ ಮಚ್ಚೆಗಳಾಗುವುದಿಲ್ಲ.

ಮೊದಲನೆ ಪಂಗಡಕ್ಕೆ ಸೇರಿದ ರೋಗಲಕ್ಷಣಗಳುಳ್ಳ ವೈರಸ್ ರೋಗಗಳೇ ಹೆಚ್ಚು. ಮುಖ್ಯವಾಗಿ ಕುಂಬಳ ಜಾತಿಯ ಚುಕ್ಕೆ ರೋಗ (Cucumber mosaic), ಟೊಮೆಟೋ ಮಚ್ಚೆ ಬಾಡಲು ರೋಗ (Spotted wilt) ಈ ಗುಂಪಿಗೆ ಸೇರಿದವು. Mosaic ರೋಗದಿಂದ ಎಲೆ, ಹೂ, ಮತ್ತಿತರ ಭಾಗಗಳ ಮೇಲೆ (ಹೆಚ್ಚಾಗಿ ಎಲೆಗಳ

ಮೇಲೆ) ಹಳದಿ ಬಣ್ಣಕ್ಕೆ ತಿರುಗಿದ ಚುಕ್ಕೆಗಳಾಗುತ್ತವೆ. ಈ ಚುಕ್ಕೆಗಳು ದುಂಡಾಗಿ, ಸೂಕ್ಷ್ಮವಾಗಿರಬಹುದು, ಇಲ್ಲವೆ ವಕ್ರವಕ್ರವಾಗಿ ಎದ್ದು ಕಾಣಬಹುದು. ಕೆಲವು ಸಾರಿ ಎಲೆಯು ಎಲ್ಲ ಭಾಗವು ಹಳದಿಯಾಗಬಹುದು. ಹಳದಿ ಬಣ್ಣಕ್ಕೆ ತಿರುಗಿದ ದೊಡ್ಡ ಮಚ್ಚೆಗಳೂ ಆಗುತ್ತವೆ. ವೈರಸ್ ಚುಕ್ಕೆರೋಗಕ್ಕೆ ತುತ್ತಾದ ಕೆಲವು ಸಸ್ಯಗಳ ಎಲೆ, ಹೂಗಳು ನಾನಾ ಬಗೆಯ ರೇಖೆಗಳಿಂದ ಕೂಡಿರುತ್ತವೆ. ಇವುಗಳಲ್ಲಿ ಕೆಲವು ವೃಕ್ಷಲತೆಗಳನ್ನು ಅಲಂಕಾರಕ್ಕಾಗಿ ಉಪಯೋಗಿಸುತ್ತಾರೆ. ಚುಕ್ಕೆರೋಗವನ್ನುಂಟು ಮಾಡುವ ಕೆಲವು ವೈರಸ್‌ಗಳು ವೃತ್ತಾಕಾರದಲ್ಲಿ ಅಥವಾ ವಕ್ರಾಕೃತಿಯಲ್ಲಿ ಎಲೆ, ಕಾಂಡ, ಹಣ್ಣಿನ ಭಾಗಗಳನ್ನು ಕೊಲ್ಲುತ್ತವೆ. ಈ ಸತ್ತಭಾಗದ ಸುತ್ತಲೂ ಹಳದಿ ಆವರಣವಿರುತ್ತದೆ (Necrotic). ಚುಕ್ಕೆರೋಗದ ಕೆಲವು ವೈರಸ್‌ಗಳು ಮೇಲಿನ ಎಲ್ಲ ರೋಗಲಕ್ಷಣಗಳನ್ನೂ ಉಂಟುಮಾಡಬಹುದು.

ಹಳದಿ ಎಲೆ ಮತ್ತು ಮುರುಟು ಎಲೆ ರೋಗಲಕ್ಷಣಗಳ ಗುಂಪಿಗೆ ಸೇರಿದ ವೈರಸ್‌ಗಳು ಸಸ್ಯರಸವಾಹಕ ನಾಳಗಳ (Vascular system) ಸಂಪರ್ಕ ಹೊಂದಿರುತ್ತವೆ ಎಂದು ತೋರುತ್ತದೆ. ಈ ವೈರಸ್‌ಗಳು ಸಸ್ಯರಸವಾಹಕ ನಾಳಗಳ ಸ್ವಾಭಾವಿಕ ಕ್ರಿಯೆಗಳಲ್ಲಿ ಅಡಚಣೆಯನ್ನುಂಟುಮಾಡುತ್ತವೆ. ಹೊಗೆಸೊಪ್ಪಿನ ಮುರುಟು ತಲೆ ರೋಗ, ಮುಂತಾದ ವೈರಸ್ ಉಪದ್ರವಗಳಲ್ಲಿ ಎಲೆಗಳ ನರಗಳ ಬೆಳೆವಣಿಗೆ ಕುಂದಿ ಎಲೆಗಳು ಮುರಿಟಿಕೊಳ್ಳುತ್ತವೆ. ಅನೇಕ ಸಾರಿ ಈ ರೋಗ ತಗಲಿದ ಎಲೆಗಳು ಸ್ವಾಭಾವಿಕ ಹಸುರ ಬಣ್ಣಕ್ಕಿಂತಲೂ ಹೆಚ್ಚು ಹಸುರಾಗಿರುತ್ತವೆ. ಶುಗರ್ ಬೀಟಿನ ಹಳದಿ ಬಾಡಲು ಮೊದಲಾದ ವೈರಸ್ ಉಪದ್ರವಗಳಲ್ಲಿ ಪೈರು ಹಳದಿಬಣ್ಣಕ್ಕೆ ತಿರುಗುತ್ತದೆ. ಈ ಗುಂಪಿನ ವೈರಸ್ ರೋಗಕ್ಕೆ ತುತ್ತಾದ ಕೆಲವು ಸಸ್ಯಗಳ ಎಲೆಗಳು ಸುತ್ತಿಕೊಳ್ಳುತ್ತವೆ. ರಂಬೆಗಳು ಗುಂಪುಗುಂಪಾಗಿ ಬಹಳ ಕಿರಿದಾಗಿ ತಂತಿಯ ಎಳೆಗಳಂತೆ ಬೆಳೆಯುತ್ತವೆ. ಯಾವುದೇ ಸಸ್ಯ ಒಂದು ವೈರಸ್ ರೋಗದಿಂದ ನರಳುತ್ತಿರುವಾಗ ಮತ್ತೊಂದು ಬಗೆಯ ರೋಗಜನಕ ವೈರಸ್ ಆ ಸಸ್ಯವನ್ನು ಸೇರಬಹುದು. ಆಗ ಎರಡು ಬಗೆಯ ವೈರಸ್ ರೋಗಗಳಿಗೂ ಸರಿತೂಗದ ರೋಗಲಕ್ಷಣಗಳು ಕಾಣಿಸಿಕೊಳ್ಳುತ್ತವೆ.

### ವೈರಸ್ ರೋಗಗಳು ಹರಡುವ ಬಗೆ

ವೈರಸ್ ರೋಗಗಳು ಸಾಂಕ್ರಾಮಿಕ ರೋಗಗಳು. ಸಸ್ಯಗಳು ಒಂದಕ್ಕೊಂದು ತಗಲುವುದರಿಂದ ವೈರಸ್ ರೋಗಗಳು ಹರಡುತ್ತವೆ ಕೆಲಸಗಾರರು ರೋಗದ ಗಿಡಗಳನ್ನು ಮುಟ್ಟಿ ರೋಗರಹಿತ ಗಿಡಗಳನ್ನು ಮುಟ್ಟಿದರೆ ಸಾಕು ಹೊಗೆಸೊಪ್ಪಿನ ಚುಕ್ಕೆರೋಗ ಹರಡುತ್ತದೆ. ಈ ರೀತಿಯ ಮಾನವನ ಸ್ಪರ್ಷಮಾತ್ರದಿಂದ ಅತಿ

ಸೂಕ್ಷ್ಮ ಗಾಯಗಳಾಗುತ್ತವೆ. ಕಳೆ ತೆಗೆಯುವುದೇ ಮೊದಲಾದ ಕೆಲಸಗಳನ್ನು ಮಾಡುವಾಗಲಂತೂ ಈ ರೋಗ ವಿಶೇಷವಾಗಿ ಹರಡುತ್ತದೆ. ಡಾಡರ್ (Dodar-Cuscuta Subinclusa) ಎಂಬ ಪರಾವಲಂಬಿ ಸಸ್ಯದಿಂದ ಕುಂಬಳಜಾತಿಯ ಚುಕ್ಕೆ ರೋಗ, ಶುಗರ್‌ಬೀಟ್ ಮುರುಟುತಲೆ ರೋಗಗಳು ಹರಡುತ್ತವೆ. ಹೆಚ್ಚಾಗಿ ವೈರಸ್ ರೋಗಗಳು ಕಸಿಮಾಡುವ ಕ್ರಮಗಳಿಂದ, ರೋಗಪೀಡಿತ ಬೀಜಗಳನ್ನು ಉಪಯೋಗಿಸುವುದರಿಂದ ಮತ್ತು ಕೀಟಗಳಿಂದ ಹರಡುತ್ತವೆ.

ಬೀಜಗಳ ಮೂಲಕ ಹರಡುವುದು ವಿರಳ. ರೋಗಜನಕ ವೈರಸ್ ಬೀಜಗಳನ್ನು ಸೇರದಂತೆ ನೋಡಿಕೊಳ್ಳಲು ಸಸ್ಯಗಳಲ್ಲಿ ಒಂದು ವಿಶೇಷ ವ್ಯವಸ್ಥೆ ಅಥವಾ ಶಕ್ತಿಯಿದೆ. ಕೆಲವೇ ಬಗೆಯ ಸಸ್ಯಗಳ (ಕುಂಬಳಜಾತಿ, ಡಾಡರ್, ತಿಂಗಳ ಹುರುಳಿ ಜಾತಿ, ಲೆಟ್ಯೂಸ್) ವೈರಸ್ ರೋಗಗಳು ಬೀಜಗಳಿಂದ ಹರಡಿದರೂ ರೋಗಪೀಡಿತ ಸಸ್ಯಗಳಿಂದ ಬೀಜಗಳಲ್ಲೆಲ್ಲಾ ರೋಗಜನಕ ವೈರಸ್ ಇರುವುದಿಲ್ಲ. ಬಹಳ ಸ್ವಲ್ಪ ಬೀಜಗಳು ರೋಗಜನಕ ವೈರಸ್ ಹೊಂದಿರುತ್ತವೆ.

## ಸಸ್ಯರೋಗಜನಕ ವೈರಸ್‌ಗಳ ಗುಣವಿಶೇಷಗಳು

ಈ ವೈರಸ್‌ಗಳು ಬಹು ಸೂಕ್ಷ್ಮಕಣಗಳು. ಅತಿ ಚಿಕ್ಕ ವೈರಸ್‌ಗಳು ಚಿಕ್ಕ ಸಾರಜನಕ ಮಾಲಿಕ್ಯೂಲ್‌ಗಳಿಗಿಂತ (Protein molecules) ಚಿಕ್ಕವು. ಅತಿ ದೊಡ್ಡ ವೈರಸ್‌ಗಳು ಅತಿ ದೊಡ್ಡ ಬ್ಯಾಕ್ಟೀರಿಯಾಗಳಿಗಿಂತ ಚಿಕ್ಕವು. ಸಜೀವ ಸಸ್ಯ ಶರೀರದಲ್ಲಿದ್ದಾಗ ವೈರಸ್‌ಗಳು ವೃದ್ಧಿಹೊಂದುತ್ತವೆ. ಅಂದರೆ ಸಜೀವ ಸಸ್ಯ ಜೀವಕೋಶದಿಂದ (Living cell) ಹೊರತೆಗೆದಾಗ ವೃದ್ಧಿಹೊಂದುವುದಿಲ್ಲ. ಸಸ್ಯರಸವನ್ನು ಹಿಂಡಿ ಹೊರತೆಗೆದ ತಕ್ಷಣ ಕೆಲವು ಬಗೆಯ ವೈರಸ್‌ಗಳು ನಿಶ್ಚೇತನಗೊಳ್ಳುತ್ತವೆ (Inactivated). ಇನ್ನು ಕೆಲವು ಬಗೆಯವು ಸಸ್ಯರಸದಲ್ಲಿ ಕೆಲವು ಕಾಲ ಚೇತನ ಉಳ್ಳವಾಗಿರುತ್ತವೆ. ಈ ಪಂಗಡಕ್ಕೆ ಸೇರಿದ ವೈರಸ್‌ಗಳಲ್ಲಿ ಅವುಗಳು ಸಸ್ಯರಸದಲ್ಲಿ ಚೇತನಶಕ್ತಿಯಿಂದಿರುವ ಕಾಲಪರಿಮಿತಿ ಬೇರೆಬೇರೆ ಬಗೆಯ ವೈರಸ್‌ಗಳಿಗೆ ಬೇರೆ ಬೇರೆಯಾಗಿರುತ್ತದೆ. ಕುಂಬಳಜಾತಿಯ ಸಸ್ಯಗಳ ಚುಕ್ಕೆರೋಗದ ವೈರಸ್ ಕೆಲವು ಘಂಟೆಗಳ ಕಾಲ, ಶುಗರ್ ಬೀಟ್ (Sugar beet, Mosaic virus) ಚುಕ್ಕೆ ರೋಗದ ವೈರಸ್ ಒಂದೆರಡು ದಿನ, ಮುರುಟು ತಲೆ (Curly top) ರೋಗದ ವೈರಸ್ ಎರಡರಿಂದ ಐದು ದಿನಗಳ ಕಾಲ ಹೊರತೆಗೆದ ಸಸ್ಯರಸದಲ್ಲಿ ಚೇತನಗೊಂಡಿರುತ್ತವೆ. ಇವುಗಳಲ್ಲೆಲ್ಲಾ ಹೊಗೆಸೊಪ್ಪಿನ ಚುಕ್ಕೆರೋಗದ ವೈರಸ್ ಹೆಚ್ಚುಕಾಲ ಚೇತನ ಹೊಂದಿರುತ್ತದೆ. ಸಾಮಾನ್ಯವಾಗಿ ಇದು ಕೆಲವು ತಿಂಗಳುಗಳ ಕಾಲ ಹೊರ

ತೆಗೆದ ಸಸ್ಯರಸದಲ್ಲಿ ಚೇತನ ಉಳ್ಳದ್ದಾಗಿರುತ್ತದೆ (Active). ರೋಗಪೀಡಿತ ಸಸ್ಯಗಳಿಂದ ಹೊರತೆಗೆದ ಸಸ್ಯರಸದಿಂದ ನಿರೋಗಿ ಸಸ್ಯಗಳಿಗೆ ರೋಗವನ್ನು ಸೋಂಕಿಸಬಹುದಾದ ಗುಂಪಿಗೆ ಸೇರಿದ ಕೆಲವು ವೈರಸ್‌ಗಳನ್ನು ರೋಗಪೀಡಿತ ಸಸ್ಯ ಒಣಗಿದ ಮೇಲೆ ಆ ಒಣಗಿದ ಸಸ್ಯದಿಂದ ಪಡೆಯಲು ಸಾಧ್ಯವಿಲ್ಲ. ಆದರೆ ಈ ಗುಂಪಿಗೆ ಸೇರಿದ ಇನ್ನು ಕೆಲವು ಬಗೆಯ ವೈರಸ್‌ಗಳು ಒಣಗಿದ ಸಸ್ಯದಲ್ಲೂ ಬಹಳ ಕಾಲ ಇರುತ್ತವೆ. ಹೊಗೆಸೊಪ್ಪಿನ ಚುಕ್ಕೆರೋಗದ ವೈರಸ್ (Mosaic virus) ರೋಗಕ್ಕೆ ತುತ್ತಾಗಿದ್ದ ಪೈರು ಒಣಗಿದ ಮೇಲೂ ೫೦ ವರುಷಕ್ಕೂ ಹೆಚ್ಚಿಗೆ ಕಾಲ ಆ ಒಣಗಿದ ಪೈರಿನಲ್ಲಿ ಚೈತನ್ಯ ಪೂರ್ಣವಾಗಿ (Active) ಇರುತ್ತದೆ. ಕೆಲವು ಬಗೆಯ ವೈರಸ್‌ಗಳು ಹೆಚ್ಚಿನ ಉಷ್ಣಾಂಶದಲ್ಲಿ ಚೇತನಹೀನವಾಗುತ್ತವೆ (Inactive). ಆದರೆ ಈ ಪಂಗಡದ ಹೆಚ್ಚು ಬಗೆಯ ವೈರಸ್‌ಗಳನ್ನು ನಿಶ್ಚೇತನಗೊಳಿಸಲು ಬೇಕಾದ ಉಷ್ಣಾಂಶ ಅವು ಪೀಡಿಸಬಹುದಾದ ಸಸ್ಯಗಳು ನಾಶಹೊಂದಲು ಇರಬೇಕಾದ ಉಷ್ಣಾಂಶಕ್ಕಿಂತಲೂ ಅಧಿಕವಾಗಿರುತ್ತದೆ. (ಹೊಗೆಸೊಪ್ಪಿನ ಚುಕ್ಕೆ ರೋಗದ ವೈರಸ್ ಚೇತನರಹಿತವಾಗಲು ೧೯೨°F ಗಿಂತಲೂ ಹೆಚ್ಚಿಗೆ ಉಷ್ಣಾಂಶವಿರಬೇಕು).

ಸಾಮಾನ್ಯವಾಗಿ ಜೀವಾಣುನಾಶಕ (Germicides) ಗಳಿಂದ ವೈರಸ್‌ಗಳು ನಾಶವಾಗುವುದಿಲ್ಲ. ಪ್ರಬಲ ಪಾದರಸದ ಬೈಕ್ಲೋರೈಡ್ (Concentrated Bichloride of Murcury, Carbolic acid, Formaldehyde, Copper, and Alcohol), ಕಾರ್ಬಾಲಿಕ್ ಆಸಿಡ್, ಮೈಲುತುತ್ತ, ಫಾರ್ಮಾಲಿಡಿಹೈಡ್, ಮತ್ತು ಆಲ್ಕೋಹಾಲ್‌ಗಳು ವೈರಸ್‌ಗಳನ್ನು ನಿಶ್ಚೇತನಗೊಳಿಸಲಾರವು. ಆದರೆ ಈ ಜೀವಾಣುನಾಶಕಗಳು ನಾನಾ ಬಗೆಯ ಬ್ಯಾಕ್ಟೀರಿಯಾಗಳನ್ನು ಕೊಲ್ಲುತ್ತವೆ. ಎಲ್ಲ ರೀತಿಯಿಂದಲೂ ಶಕ್ತಿಯುತವಾದುದೆಂದು ತಿಳಿದಿರುವ ಹೊಗೆಸೊಪ್ಪಿನ ಚುಕ್ಕೆರೋಗದ ವೈರಸ್ ಮಾತ್ರ ಆಲ್ಕೋಹಾಲ್‌ನಿಂದ ತನ್ನ ಚೇತನ ಕಳೆದುಕೊಳ್ಳುತ್ತದೆ.

ರಾಸಾಯನಿಕ ವಿಧಾನಗಳಿಂದ ಅಥವಾ ಕೇಂದ್ರಗುರುತ್ವ ಯಂತ್ರಗಳಿಂದ (High speed centrifuges) ವೈರಸ್‌ಗಳನ್ನು ಬೇರ್ಪಡಿಸಿ ಶುದ್ಧವಾದ ವೈರಸ್ಸನ್ನು ಪಡೆಯಬಹುದು. ಈ ರೀತಿ ಪಡೆದ ಶುದ್ಧ ವೈರಸ್‌ಗಳು ಗುಂಪು ಸೇರಿಕೊಂಡು ಹರಳುಗಳಂತಾಗುತ್ತವೆ (Crystals or Crystal like). ಆಗ ವೈರಸ್‌ಗಳ ಈ ಸಮುಚ್ಚಯವನ್ನು ಸಾಮಾನ್ಯದರ್ಜೆಯ ಸೂಕ್ಷ್ಮದರ್ಶಕ ಯಂತ್ರಗಳಿಂದ ನೋಡಬಹುದು. ಕೆಲವು ಬಗೆಯ ವೈರಸ್‌ಗಳ ಈ ಹರಳುಗಳು ಬರಿಯ ಕಣ್ಣಿಗೆ ಕಾಣುವಷ್ಟು ದೊಡ್ಡವಾಗಿರುತ್ತವೆ. ಬೇರೆ ಬೇರೆ ಬಗೆಯ ವೈರಸ್‌ಗಳ ಈ ಹರಳುಗಳು ಬೇರೆ ಬೇರೆ ರೂಪ ಮತ್ತು ಗಾತ್ರಗಳನ್ನು ಹೊಂದಿರುತ್ತವೆ. ಹೊಗೆಸೊಪ್ಪಿನ ಚುಕ್ಕೆರೋಗದ

ವೈರಸ್ ಹರಳುಗಳು ಸೂಜಿಯಾಕಾರದಲ್ಲಿರುತ್ತವೆ. ಹೊಗೆಸೊಪ್ಪಿನ ನೆಕ್ರೊಸಿಸ್ ವೈರಸ್ (Necrosis virus) Lozene ರೂಪದಲ್ಲಿರುತ್ತದೆ. ಟೊಮೆಟೋದ ಬುಷಿ ಸ್ಟಂಟ್ (Bushy stunt) ವೈರಸ್ ದ್ವಾದಶಮುಖ ಘನಾಕೃತಿ (Dodecahedral) ಹೊಂದಿರುತ್ತದೆ.

ಬೇರ್ಪಡಿಸಿ ಶುದ್ಧ ವೈರಸ್ ಹರಳುಗಳನ್ನು ಪಡೆದರೂ ಈ ಹರಳುಗಳನ್ನು ಬೇರ್ಪಡಿಸಿ ಒಂದೇ ವೈರಸ್ ಕಣವನ್ನು ನೋಡಲು ಸಾಧ್ಯವಿಲ್ಲ. ಕಾರಣ ಒಂದೊಂದನ್ನೆ ಬೇರೆ ಯಾಗಿ ಸಾಮಾನ್ಯ ಸೂಕ್ಷ್ಮದರ್ಶಕಗಳಿಂದ ನೋಡಲು ಸಾಧ್ಯವಿಲ್ಲದಷ್ಟು ಸೂಕ್ಷ್ಮ ವಾಗಿವೆ. ವೈರಸ್‌ಗಳನ್ನು ಪ್ರತ್ಯಕ್ಷ ನೋಡಲು ಆಗದಿದ್ದರೂ ಸಹ ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಿಂದ (Electron Microscope) ಇವುಗಳ ಫೋಟೋ ತೆಗೆಯಲು ಸಾಧ್ಯವಾಗಿದೆ. ವೈರಸ್‌ಗಳು ಯಾವ ರೀತಿ ಕಾಣುತ್ತವೆ ಎಂದು ಈ ಛಾಯಾಚಿತ್ರ ಗಳಿಂದ ತಿಳಿಯಬಹುದಷ್ಟೆ. ಹೀಗೆ ಕೆಲವೇ ಸಸ್ಯವೈರಸ್‌ಗಳ (೧೦-೧೫ ಮಾತ್ರವಿರ ಬಹುದು) ಛಾಯಾಚಿತ್ರಗಳನ್ನು ತೆಗೆದಿರುತ್ತಾರೆ. ಈ ಛಾಯಾಚಿತ್ರಗಳಿಂದ ಅವುಗಳ ರೂಪ ಒಂದೇ ಅಲ್ಲದೆ ಅಳತೆಯನ್ನೂ ಸಹ ತಿಳಿಯಬಹುದು. ಕೆಲವು ಬಗೆಯ ವೈರಸ್ ಗಳು ಡೊಂಕಿಲ್ಲದ ನವುರಾದ ಉದ್ದನೆಯ ದಂಡದಂತಿರುತ್ತವೆ. ಇನ್ನು ಕೆಲವು ಬಗೆಯವು ಚಿಕ್ಕ ದಂಡದಂತಿದ್ದರೆ ಮತ್ತೆ ಕೆಲವು ದುಂಡಾಗಿರುತ್ತವೆ. ಹೊಗೆಸೊಪ್ಪಿನ ಚುಕ್ಕೆರೋಗದ ವೈರಸ್‌ಗಳು ಡೊಂಕಿಲ್ಲದ ನವುರಾದ ದಂಡಗಳಂತಿರುತ್ತವೆ. ಇವು ಗಳ ದಪ್ಪ ಸುಮಾರು ಹದಿನೈದು (೧೫) ಮಿಲಿ ಮೈಕ್ರೋನ್‌ಗಳು, ಉದ್ದ ೩೦೦ ಮಿಲಿ ಮೈಕ್ರೋನ್‌ಗಳು ಇಲ್ಲವೆ ಸ್ವಲ್ಪ ಹೆಚ್ಚು [ಒಂದು ಮಿಲಿ ಮೈಕ್ರೋನ್ (Milli Micron) ಒಂದು ಮಿಲಿಮೀಟರಿನ ದಶಲಕ್ಷಭಾಗದಲ್ಲಿ ಒಂದು ಭಾಗ ಅಥವಾ ಒಂದು ಇಂಚಿನ ಇಪ್ಪತ್ತೈದು ದಶಲಕ್ಷ ಭಾಗಗಳಲ್ಲಿ ಒಂದು ಭಾಗಕ್ಕೆ ಸಮ] ಹೊಗೆ ಸೊಪ್ಪಿನ ರಿಂಗ್ ಸ್ಪಾಟ್ (Ring Spot) ವೈರಸ್‌ಗಳು ದುಂಡಾಗಿರುತ್ತವೆ. ಇವುಗಳ ವ್ಯಾಸ ಸುಮಾರು ೧೯ ಮಿಲಿ ಮೈಕ್ರೋನ್‌ಗಳು. ಆಲ್ಫ ಆಲ್ಫ ಚುಕ್ಕೆರೋಗ (Alfa Alfa Mosaic virus) ದ ವೈರಸ್‌ಗಳು ಸಹ ದುಂಡಾಗಿರುತ್ತವೆ. ಇವುಗಳ ವ್ಯಾಸ ಸುಮಾರು ೧೭ ಮಿಲಿ ಮೈಕ್ರೋನ್‌ಗಳು. ಆಲೂಗಡ್ಡೆಯ X ವೈರಸ್‌ಗಳು ದಂಡಾ ಕಾರವುಳ್ಳವು. ಇವುಗಳ ಉದ್ದ, ದಪ್ಪ, ಹೆಚ್ಚುಕಡಮೆ ಇರುತ್ತವೆ. ಈ ವರೆಗೂ ಬೇರ್ಪಡಿಸಿ ಪರೀಕ್ಷಿಸಿರುವ ಸಸ್ಯ ವೈರಸ್‌ಗಳೆಲ್ಲ ರಾಸಾಯನಿಕವಾಗಿ ಒಂದೇ ಆಗಿರುತ್ತವೆ. ಮುಖ್ಯವಾಗಿ ನ್ಯೂಕ್ಲಿಕ್ ಆಸಿಡ್ (Nucleic Acid) ಮತ್ತು ಪ್ರೋಟಿನ್ (Protein) ಇರುತ್ತವೆ.

ವೈರಸ್‌ಗಳಲ್ಲಿ ತಳಿಪ್ರಭೇದಗಳಿವೆ. ಪ್ರತಿಯೊಂದು ತಳಿಯೂ (Strain)

ತನ್ನದೇ ಆದ ರೋಗಲಕ್ಷಣ ರೋಗದ ಬಗೆ, ರೋಗದ ತೀಕ್ಷ್ಣತೆ, ಸಸ್ಯವರ್ಗ, ಮತ್ತು ಇತರ ಗುಣವಿಶೇಷಗಳನ್ನು ಹೊಂದಿರುತ್ತವೆ.

ವೈರಸ್ ರೋಗಕ್ಕೆ ತುತ್ತಾದ ಸಸ್ಯಗಳು ಉಲ್ಬಣಗೊಂಡ ರೋಗದಿಂದ ಚೇತರಿಸಿಕೊಂಡು ಜೀವಿಸಬಲ್ಲವು. ಒಂದು ತಳಿಯ (Strain) ವೈರಸ್‌ಗೆ ತುತ್ತಾದ ಸಸ್ಯವನ್ನು ಅದೇ ಪಂಗಡದ ಬೇರೆ ತಳಿಯ ವೈರಸ್ ಕಬಳಿಸಲಾರದು. ಆದರೆ ಬೇರೆ ಪಂಗಡದ ವೈರಸ್ ಸೇರಿ ಬೇರೆಬೇರೆಯ ರೋಗವನ್ನುಂಟುಮಾಡಬಹುದು. ಕೆಲವು ವೈರಸ್ ರೋಗಗಳಲ್ಲಿ ಸಸ್ಯಗಳು ಒಂದು ತಳಿಯ ವೈರಸ್‌ನ ಉಪದ್ರವದಿಂದ ಚೇತರಿಸಿಕೊಂಡ ಬಳಿಕ ಅದೇ ವೈರಸ್ಸಿನ ಬೇರೆ ತಳಿಗಳ ಉಪದ್ರವವನ್ನು ತಾಳಿಕೊಳ್ಳುತ್ತವೆ. (Turkish Tobacco recovered from Curly Top Virus). ಅಂದರೆ ಈ ಸಸ್ಯಗಳಿಗೆ ರೋಗವನ್ನು ತಾಳಿಕೊಳ್ಳುವ—ಅಥವಾ ನಿರೋಧಿಸುವ ಒಂದು ಶಕ್ತಿ ಬರುತ್ತದೆ. ಈ ಸೂತ್ರವನ್ನು ಉಪಯೋಗಿಸಿಕೊಂಡು ಕೆಲವು ಬಗೆಯ ವೈರಸ್ ರೋಗಗಳ ಭೀತಿ ಇರುವಲ್ಲಿ (Cacoa Swollen shoot, Citrus tristeza virus) ಹೆಚ್ಚು ಅಪಾಯಕಾರಿಯಲ್ಲದ ತಳಿಯ (Strain) ವೈರಸ್ ರೋಗವನ್ನು ಸೋಂಕಿಸಿ ಮಾರಕ ರೋಗಜನಕ ವೈರಸ್‌ನ ಉಪದ್ರವವನ್ನು ತಾಳಿಕೊಳ್ಳುವ ಶಕ್ತಿ ಬರುವಂತೆ ಮಾಡಲು ಸಾಧ್ಯ ; ಮತ್ತು ಈ ಮಿತರೋಗದ ಸೋಂಕು ಅಂಟಿಸುವುದು ಉಪಯುಕ್ತವಾದ ರೋಗನಿವಾರಣೋಪಾಯ.

## ರೋಗ ನಿವಾರಣೋಪಾಯಗಳು

ಯಾವುದೇ ಸಸ್ಯಕ್ಕೆ ವೈರಸ್ ರೋಗ ತಗಲಿದನಂತರ ಏನು ಮಾಡಲೂ ಸಾಧ್ಯವಿಲ್ಲ ಎನ್ನುವುದು ಸುಸ್ಪಷ್ಟ. ಸಾಮಾನ್ಯವಾಗಿ ಇತರ ಸಸ್ಯರೋಗಗಳಿಗೂ ಇದೇ ಸೂತ್ರ—ಅನ್ವಯಿಸುತ್ತದೆ. ಆದುದರಿಂದ ರೋಗವನ್ನು ತಡೆಗಟ್ಟುವ ಮುನ್ನೆಚ್ಚರಿಕೆ ಕ್ರಮಗಳು ಸೂಕ್ತ ನಿವಾರಣೋಪಾಯಗಳು. ರೋಗನಿರೋಧಕ ಶಕ್ತಿಯ ತಳಿ (Resistant varieties)ಗಳನ್ನು ಬೆಳೆಯುವುದು, ಅಪಾಯಕಾರಿಯಲ್ಲದ ತಳಿ (Strain) ರೋಗದ ಸೋಂಕು ಅಂಟಿಸಿ (Innoculation with relatively harmless strain of virus) ರೋಗನಿರೋಧಕ ಶಕ್ತಿಯನ್ನು ಉಂಟುಮಾಡುವುದು, ರೋಗ ಹರಡದಂತೆ ತಡೆಯಲು ರೋಗಪೀಡಿತ ಸಸ್ಯಗಳನ್ನು ಕಿತ್ತು ನಾಶಗೊಳಿಸುವುದು, ರೋಗಜನಕ ವೈರಸ್ ವಾಹಕ ಕೀಟಗಳನ್ನು (Insect Vectors) ಕ್ರಿಮಿನಾಶಕಗಳನ್ನು ಉಪಯೋಗಿಸಿ ಕೊಲ್ಲುವುದು, ವೈರಸ್ ರೋಗಕ್ಕೆ ತುತ್ತಾದ ಸಸಿಗಳನ್ನು ಉಪಯೋಗಿಸದೆ ಇರುವುದು ಇವು ಮುಖ್ಯ ನಿವಾರಣೋಪಾಯಗಳಾಗಿವೆ.

ಡಿ. ಎಸ್. ಎಂ. ಶ್ರೇಷ್ಠಿ

## ಶಿವಕೃಪೆ

ಎಲೆಯಲುಗಾಟವ ನಿಲ್ಲಿಪನಾರು ?
ಹೂವರಳುವುದನು ಒಲ್ಲದನಾರು ?
ತಂಬೆಲರಿನ ಸುಳಿದಾಟಕೆ ನಲಿಯದ
ತನುಲತೆಯುಳ್ಳವನಾರು ?

ಹಸುಳೆಯ ಬಿಸಿಲಿನ ಹೊನ್ನಿಗೆ ಮಿರುಗದ
ಕಲ್‌ಮಣ್ ಕೆಸರುಗಳಿಹವೆಲ್ಲಿ ?
ತಿಂಗಳ್‌ಬೆಳಕಿನ ಮಂಗಳ ದೃಶ್ಯಕೆ
ಸೋಲದ ನೀರಸರಿಹರೆಲ್ಲಿ ?

ಚಿಮ್ಮುವ ಹೊಸಲಿನ ಸೊರೆಹೂವೆದೆಯಲಿ
ಕುಣಿಯುವ ಬಣ್ಣಗಳಮರಿಯರ
ಚೆಲುವಿನ ನರ್ತನಕೊಲಿಯದೆ ಹೃದಯವು ?
ನಲಿಯದೆ ಬಾಲಕ ಭಾವದಲಿ ?

ತಾರಾಮಣಿಗಣಶೋಭಿತ ರಜನಿಯ
ರಮ್ಯತೆಯಲೆ ಆ ಶಿವಶಾಂತಿ
ಜೋಗುಳಗೈಯುತೆ ರಯ್ಯನೆ ತೂಗದೆ
ನರಶಿಶುವನು ಪರವಶತೆಯಲಿ ?

ಮಾಯೆಯೊ ? ಚೆಲುವೋ ? ಶಕ್ತಿಯೊ ? ಒಲವೋ ?
ಹೆಸರೇನಾದರು ಆಗಿರಲಿ ;
ಶಿವಕೃಪೆ ವಿಶ್ವವ ತುಂಬಿದೆ ತುಳುಕಿದೆ
ಚೇತನರೂಪದಿ ತನ್ನೆಡೆಗೆಲ್ಲವ
ಸೆಳೆಯುತೆ ನಾನಾ ರೂಪದಲಿ !

—ಕುಮುದ

# ತಮಿಳು ಸಾಹಿತ್ಯಚರಿತ್ರೆ

ತಮಿಳು ಈಗಿನ ಮದರಾಸು ಆಧಿಪತ್ಯದಲ್ಲಿಯೂ ತಿರುವಾಂಕೂರಿನ ದಕ್ಷಿಣ ಭಾಗದಲ್ಲಿಯೂ ಸಿಂಹಳದ್ವೀಪದ ಉತ್ತರಭಾಗದಲ್ಲಿಯೂ ಒಟ್ಟು ಸುಮಾರು ಮೂರು ಕೋಟಿ ಜನರು ಮಾತನಾಡುವ ಭಾಷೆ. ತಮಿೞ್ ಎಂದರೆ ಇನಿದು ಅಥವಾ ಮಧುರ ಎಂದರ್ಥ. ಇದು ದಕ್ಷಿಣದ ಭಾಷೆಯಾದುದರಿಂದ ಇದಕ್ಕೆ 'ತೆನ್ಮೊೞಿ' ಎಂದು ಹೆಸರು. (ಉತ್ತರ ಭಾಷೆಯಾದ ಸಂಸ್ಕೃತ ವಡಮೊೞಿ.)

**ಸಂಘಸಾಹಿತ್ಯ**—ತಮಿಳು ಭಾಷಾಸಾಹಿತ್ಯ ಕ್ರಿಸ್ತಪೂರ್ವಕ್ಕಿಂತ ಹಿಂದಿನದಿರಬೇಕು. ಪಂಚದ್ರಾವಿಡ ಭಾಷೆಗಳಲ್ಲಿ ಇದೇ ಪರಮಪ್ರಾಚೀನವಾದುದು. ಅಲ್ಲದೆ ಆದಿತಮಿಳಿನಲ್ಲಿ ಇತರ ಎಲ್ಲಾ ದ್ರಾವಿಡ ಭಾಷೆಗಳ ಮೂಲರೂಪವನ್ನೂ ಕಾಣಬಹುದು. ಕ್ರಿಸ್ತಾಬ್ದದ ಹಿಂದಿನ ಕಾಲದಿಂದಲೂ ತಮಿಳುದೇಶದಲ್ಲಿ ಸಂಘಗಳೆಂಬ ವಿದ್ವದ್ಗೋಷ್ಠಿಗಳಿದ್ದುವೆಂದೂ ಅವುಗಳ ಆಶ್ರಯದಲ್ಲಿ ಆದಿಕಾಲದ ತಮಿಳು ಸಾಹಿತ್ಯ ವಿಶೇಷವಾಗಿ ಬೆಳೆಯಿತೆಂದೂ ಪ್ರತೀತಿ. ತಮಿಳು ಸಂಘಗಳು ಮೂರು. ಇವೆಲ್ಲ ಪಾಂಡ್ಯರ ಆಳ್ವಿಕೆಯಲ್ಲಿ ಮಧುರೆಯಲ್ಲಿ ನೆಲಸಿದ್ದುವೆಂದೂ ಒಂದೊಂದು ಸಂಘಕ್ಕೂ ಮಧ್ಯೆ ಹಲವಾರು ವರ್ಷಗಳ ಅವಧಿಯಿತ್ತೆಂದೂ ಒಂದೊಂದು ಸಂಘಕಾಲದಲ್ಲಿಯೂ ಅನೇಕ ಉದ್ದಾಮಕವಿಗಳೂ ಪಂಡಿತರೂ ಇದ್ದರೆಂದೂ ಸಂಪ್ರದಾಯಬದ್ಧವಾದ ನಂಬಿಕೆ. ಪ್ರಾಚೀನ ತಮಿಳು ಕವಿಗಳೆಲ್ಲ ಯಾವುದಾದರೂ ಒಂದು ಸಂಘಕ್ಕೆ ಸೇರಿದವರು. ಆದರೆ ಮೊದಲೆರಡು ಸಂಘಗಳ ವಿವರಗಳು ನಮಗೆ ಹೆಚ್ಚಾಗಿ ತಿಳಿದಿಲ್ಲ. ಅವುಗಳಿಗೆ ಸೇರಿದ ಕೆಲವು ಕವಿಗಳ, ಗ್ರಂಥಗಳ ಹೆಸರು ಮಾತ್ರ ಇತ್ತೀಚೆಗೆ ತಿಳಿದುಬಂದಿವೆ. ಅವುಗಳಿಂದ ಉದ್ಧರಿಸಲ್ಪಟ್ಟ ಕೆಲವು ಬಿಡಿಪದ್ಯಗಳೂ ಪದ್ಯಭಾಗಗಳೂ ಉಕ್ತಿಗಳೂ 'ತೊಲ್‌ಕಾಪ್ಪಿಯ'ದಲ್ಲಿ ಸಿಕ್ಕುವುವು. ಈ ಸಂಘಗಳಿಗೆ ಸಂಬಂಧಪಟ್ಟ 'ಪೇರಹತ್ತಿಯತ್ತಿರಟ್ಟು' ಎಂಬ ಮೂಲಗ್ರಂಥವೊಂದು ಈಚೆಗೆ ಸಿಕ್ಕಿದೆ.

ಮೊದಲೆರಡು ಸಂಘಗಳು ಇತಿಹಾಸಯುಗಕ್ಕಿಂತ ಹಿಂದೆಯೇ ಆಗಿಹೋಗಿರಬೇಕು. ಮೂರನೆಯ ಸಂಘ ಮಾತ್ರ ಚಾರಿತ್ರಿಕ ಯುಗದಲ್ಲಿ ಮಧುರೆಯಲ್ಲಿ ವಿಶೇಷ ಕೆಲಸಮಾಡಿದೆ. ಈ ಸಂಘಗಳ ವಿವರಗಳಿಂದ ಮತ್ತೇನೂ ಸ್ಪಷ್ಟವಾಗಿ ತಿಳಿಯದಿದ್ದರೂ ಇವುಗಳ ಆದಿಕಾಲದಿಂದ ತಮಿಳು ಭಾಷೆಯಲ್ಲಿ ವಿಶೇಷ ಸಾಹಿತ್ಯ ರಚನೆಯಾಗುತ್ತಿತ್ತೆಂದು ಊಹಿಸಬಹುದಾಗಿದೆ.

ಸಂಸ್ಕೃತಕ್ಕೆ ಪಾಣಿನಿ ಹೇಗೋ ತೆಲುಗಿಗೆ ಕಣ್ವರು ಹೇಗೊ ಹಾಗೆಯೇ ತಮಿಳಿಗೆ ಅಗಸ್ತ್ಯರು ಮೂಲಪುರುಷರು. ಇವರು ಮೊದಲೆರಡು ಸಂಘಗಳ ಕಾಲದಲ್ಲಿದ್ದಿರಬೇಕು. ಇವರೇ ವಿಂಧ್ಯಪರ್ವತವನ್ನು ದಾಟಿ ಉತ್ತರದಿಂದ ದಕ್ಷಿಣಕ್ಕೆ ಬಂದು ಅಲ್ಲಿಯ ಆರ್ಯಸಂಸ್ಕೃತಿಯನ್ನು ಇಲ್ಲಿ ಪ್ರಚಾರಮಾಡಿದರೆಂಬುದು ಪುರಾಣೋಕ್ತವಾದ ವಿಷಯ. ಅವರು ಇಲ್ಲಿ ಬಂದಮೇಲೆ 'ಪೇರಹತ್ತಿಯಮ್' ಎಂಬ ಒಂದು ಉತ್ತಮ ಲಕ್ಷಣಗ್ರಂಥವನ್ನು ರಚಿಸಿದರು. ಇದು ಇವರ ಹಿಂದೆ ತಮಿಳು ಸಾಹಿತ್ಯ ವಿಶೇಷವಾಗಿ ಬೆಳೆದಿತ್ತೆಂಬ ವಾದವನ್ನು ಉಪಪೋಷಿಸುತ್ತದೆ. ಇವರಿಗೆ ೧೨ ಜನ ಶಿಷ್ಯರು. ಇವರೊಬ್ಬೊಬ್ಬರೂ ಒಂದೊಂದು ಪಟಲದಂತೆ ೧೨ ಪಟಲಗಳನ್ನು ಬರೆದು 'ಪನ್ನಿರ್ ಪಟಲಮ್' ಎಂಬ ತಮಿಳು ವ್ಯಾಕರಣಗ್ರಂಥವನ್ನು ಪ್ರಕಾಶಪಡಿಸಿದರು. ಇದು ಈಗಲೂ ಪ್ರಚಾರದಲ್ಲಿದೆ. ಆದರೆ ಮೂಲ 'ಪೇರಹತ್ತಿಯಮ್' ಉಪಲಬ್ಧವಿಲ್ಲ.

ಅಗಸ್ತ್ಯರ ಶಿಷ್ಯರಾದ ತೊಲ್‌ಕಾಪ್ಪಿಯರ್ 'ತೊಲ್‌ಕಾಪ್ಪಿಯಮ್' ಎಂಬ ಲಕ್ಷಣಗ್ರಂಥವನ್ನು ರಚಿಸಿದ್ದಾರೆ. ಇವರ ಸಹಪಾಠಿಗಳಾದ ಪನಂಬಾರನಾರ್ ಎನ್ನುವವರು ಈ ಗ್ರಂಥವನ್ನು ಕುರಿತು ಒಂದು ವಿಮರ್ಶೆಯನ್ನು ಪದ್ಯ (ಪಾಯಿರಮ್) ದಲ್ಲಿ ಬರೆದಿದ್ದಾರೆ. ಅದಂಗೊಟ್ಟಾಶರಿಯರ್ ಎಂಬ ಇವರ ಮತ್ತೊಬ್ಬ ಸಹಪಾಠಿಗಳು ತೊಲ್‌ಕಾಪ್ಪಿಯವನ್ನು ವಿಶೇಷವಾಗಿ ಕೊಂಡಾಡಿದ್ದಾರೆ.

'ಪೇರಹತ್ತಿಯ'ದಲ್ಲಿ ತಮಿಳು ಸಾಹಿತ್ಯವನ್ನು ಇಯಲ್ (ಕಾವ್ಯ) ಇಶೈ (ಸಂಗೀತ) ನಾಟಕಮ್ (ನಾಟಕ) ಎಂಬ ಮೂರು ಭಾಗಗಳಾಗಿ ವಿಭಾಗಮಾಡಿದೆ. 'ತೊಲ್‌ಕಾಪ್ಪಿಯ'ದಲ್ಲಿ ಎಟುತ್ತು (ಅಕ್ಷರ) ಶೊಲ್ (ಮಾತು) ಪೊರುಳ್ (ಅರ್ಥ) ಎಂಬ ಮೂರು ಅಧಿಕಾರಗಳಲ್ಲಿ ಇಯಲ್ ತಮಿಟಿಲಕ್ಕಣವು (ಕಾವ್ಯಲಕ್ಷಣಗಳು) ವರ್ಣಿತವಾಗಿವೆ. ಈ ಒಂದೊಂದು ಅಧಿಕಾರಗಳೂ ಒಂಬತ್ತು ಭಾಗಗಳಾಗಿ ವಿಭಾಗವಾಗಿವೆ. ಪೊರಳಧಿಕಾಲದಲ್ಲಿಯೇ ಯಾಪ್ಪು (ಛಂದಸ್ಸು) ಅಣಿ (ಅಲಂಕಾರ) ಗಳೂ ಸೇರಿಕೊಂಡಿವೆ. ಅಲ್ಲದೆ ಮೊದಲೆರಡು ಅಧಿಕಾರಗಳಲ್ಲಿ ಆ ಕಾಲದ ತಮಿಳು ಭಾಷೆಯ ಸ್ವರೂಪವೂ ಮೂರನೆಯದರಲ್ಲಿ ಆ ಕಾಲದ ಜನರ ರಾಜಕೀಯ ಸಾಮಾಜಿಕ ಧಾರ್ಮಿಕ ಸ್ಥಿತಿಯೂ ಸೂಚಿತವಾಗಿವೆ. ಈಗ ಉಪಲಬ್ಧವಾಗಿರುವ ಗ್ರಂಥಗಳಲ್ಲಿ 'ತೊಲ್‌ಕಾಪ್ಪಿಯ'ವೇ ಪರಮ ಪ್ರಾಚೀನವಾದುದು. ಇದಕ್ಕೆ ಇಳಂಪೂರನಾರ್, ನಚ್ಚಿನಾರ್‌ಕ್ಕಿನಿಯಾರ್ ಮತ್ತು ಸೇನಾವರಿಯರ್ ಎಂಬುವರ ವ್ಯಾಖ್ಯಾನಗಳಿವೆ.

ಮೇಲೆಯೇ ತಿಳಿಸಿರುವಂತೆ ಸಂಘಕಾಲದ ಸಾಹಿತ್ಯಗ್ರಂಥಗಳು ವಿಶೇಷವಾಗಿ ದೊರೆತಿಲ್ಲ. ಅವುಗಳನ್ನೂ ಬಾಹ್ಯದೃಷ್ಟಿಯಿಂದ 'ಪೇರಹತ್ತಿಯ'ದಲ್ಲಿ ಭಾಗ

ಮಾಡಿರುವಂತೆಯೇ ಇಯಲ್, ಇಶೈ, ನಾಟಕಮ್ ಎಂದು ಮೂರು ಭಾಗ ಮಾಡ ಬಹುದು. ಇವುಗಳಲ್ಲಿ ಇಶೈ ಭಾಗಕ್ಕೆ ಸೇರಿದ ಗ್ರಂಥಗಳಾವುವೂ ಸಿಕ್ಕಿಲ್ಲ. 'ಇಶೈನುಣಕ್ಕಮ್,' 'ಪೆರುನಾರೈ,' 'ಇಂದ್ರಕಾಳಿಯಮ್' 'ಪಂಜಮರುಬು' 'ಪೆರುಂಗುರುಹು' ಎಂಬ ಸಂಗೀತ ಶಾಸ್ತ್ರಗ್ರಂಥಗಳ ಹೆಸರು ಮಾತ್ರ ಉಳಿದಿದೆ. ಹಾಗೆಯೇ ಮುಱುವಲ್, ಶಯಂದಲ್, ಶೆಯುೞ್ಱಿಯಮ್, ಕುಣನೂಲ್, ಮದಿವಾಣಮ್ ಮುಂತಾದ ನಾಟಕ ಲಕ್ಷಣಗ್ರಂಥಗಳೂ ಹೆಸರಿನಿಂದ ಮಾತ್ರ ಉಳಿದಿವೆ.

ಸಂಘಕಾಲದ ಗ್ರಂಥಗಳನ್ನು ಅವುಗಳಲ್ಲಿ ವರ್ಣಿತವಾಗಿರುವ ಆಂತರಿಕ ವಸ್ತುದೃಷ್ಟಿಯಿಂದ ಅಹಮ್, ಪುರಮ್ ಎಂಬ ಎರಡು ಭಾಗಗಳಾಗಿ ವಿಭಾಗಿಸಬಹುದು. ಅಹಮ್ ಎಂಬುದು ಆಂತರಿಕ ವೈಯಕ್ತಿಕ ಪ್ರೇಮಕ್ಕೆ ಸಂಬಂಧಪಟ್ಟ ಶೃಂಗಾರಗ್ರಂಥಗಳು. ಪುರಮ್ ಎಂಬುದು ಬಾಹ್ಯವಾದ ಧರ್ಮಾರ್ಥಗಳಿಗೆ ಸಂಬಂಧಪಟ್ಟವು. ಇವೆರಡಕ್ಕೂ ಕ್ರಮವಾಗಿ ಸಂಬಂಧಪಟ್ಟ 'ಅಹನಾನೂಱು' 'ಪೂಱನಾನಾಱು' ಎಂಬ ಗ್ರಂಥಗಳು ಸಂಘಸಾಹಿತ್ಯದಲ್ಲಿ ಪ್ರಸಿದ್ಧವಾದುವು. ಪೂಱನಾನೂಱಿನಿಂದ ಆಗಿನ ಕಾಲದ ರಾಜರ, ಮಂತ್ರಿಗಳ, ಕವಿಗಳ ವಿಷಯಗಳು ತಿಳಿದುಬರುತ್ತವೆ.

'ಎಟ್ಟುತ್ತೊಹೈ' (ಎಂಟು ಸಂಕಲನಗಳು) 'ಪತ್ತುಪ್ಪಾಟ್ಟು' (ದಶಗೀತೆಗಳು) 'ಪದಿನೆಣ್‌ಕೀೞ್‌ಕಣಕ್ಕು' (ಹದಿನೆಂಟು ಉಪಕಾವ್ಯಗಳು) ಎಂಬ ಮೂರು ಈಗ ಉಪಲಬ್ಧವಾಗಿರುವ ಸಂಘಸಾಹಿತ್ಯಗ್ರಂಥಗಳು. ಇವುಗಳಲ್ಲಿ 'ಎಟ್ಟುತ್ತೊಹೈ'ಯ ಭಾಗವಾದ 'ನಱ್ಱಿಣೈ' ಶೃಂಗಾರಕ್ಕೆ ಸಂಬಂಧಪಟ್ಟ ಅಯ್ದು ತಿಣೈಗಳನ್ನು ಕುರಿತ ಗ್ರಂಥ. ತಿಣೈಯೆಂದರೆ ಶೃಂಗಾರದ ಅಯ್ದು ಮೆಟ್ಟಲುಗಳಾದ ಇರತ್ತಲ್ (ವಿರಹ) ಊಡಲ್ (ಪ್ರಣಯ ಕಲಹ) ಪಿರಿದಲ್ (ಅಗಲಿಕೆ) ಇರಂಗಲ್ (ಕೀರ್ತನೆ) ಪುಣರ್ದಲ್ (ಸಂಭೋಗ) ಗಳಿಗೆ ಸಂಬಂಧಪಟ್ಟ ಮುಲ್ಲೈ (ಅರಣ್ಯ) ಮರುದಮ್ (ಹೊಲಗದ್ದೆ) ಪಾಲೈ (ಮರುಭೂಮಿ) ನೆಯ್ದಲ್ (ಸಮುದ್ರದ ದಡ) ಕುರಂಜಿ (ಪರ್ವತ)ಗಳಿಗೆ ಸಂಬಂಧಪಟ್ಟ ವರ್ಣನಾ ಭಾಗಗಳು. 'ನಱ್ಱಿಣೈ'ಯಲ್ಲಿ ೧೭೫ ಕವಿಗಳಿಂದ ರಚಿತವಾದ ೪೦೧ ಪದ್ಯಗಳಿವೆ. 'ಎಟ್ಟುತ್ತೊಹೈ'ಯ ಮತ್ತೊಂದು ಭಾಗವಾದ 'ಪರಿಪ್ಪಾಡಲ್' ೭೦ ಪದ್ಯಗಳುಳ್ಳ ಭಿನ್ನಕರ್ತೃಕವಾದ ಸಂಕಲನ. ಇದರಲ್ಲಿ ೧೩ ಕವಿಗಳಿಂದ ರಚಿತವಾದ ೨೪ ಪದ್ಯಗಳು ಮಾತ್ರ ಉಪಲಬ್ಧವಾಗಿವೆ. 'ಕಲಿತ್ತೊಹೈ' ಎಂಬುದು ಮೂರನೆಯದು. ಇದರಲ್ಲಿ ಕಲಿಪ್ಪಾ ಛಂದಸ್ಸಿನ ೧೫೦ ಪದ್ಯಗಳು ಅಯ್ದು ಕವಿಗಳಿಂದ ರಚಿತವಾಗಿವೆ. ಇವು ಮೇಲಿನ ಅಯ್ದು ತಿಣೈಗಳನ್ನು ವರ್ಣಿಸುವುವಲ್ಲದೆ ಕೆಲವು ವಿಚಿತ್ರವಾದ ಉತ್ತಮ ನೀತಿಗಳನ್ನೂ ಕೆಲವು ವೈವಾಹಿಕ ಸಂಪ್ರದಾಯಗಳನ್ನೂ ವರ್ಣಿಸುತ್ತವೆ. 'ಪುಱನಾನೂಱು' ಈ ಸಂಕಲನಗಳಲ್ಲಿ ಪ್ರಧಾನ

ವಾದುದು. ಇದಕ್ಕೆ 'ಪುಱಪ್ಪಾಟ್ಟು' 'ಪುಱಮ್' ಎಂಬ ಇತರ ಹೆಸರೂ ಉಂಟು. ಅಹವಲ್ ಛಂದಸ್ಸಿನ ೪೦೦ ಪದ್ಯಗಳಿವೆ. ಅನೇಕ ರಾಜರ, ರಾಜಕುಮಾರರ, ಮಂತ್ರಿಗಳ, ಕವಿಗಳ, ಅದ್ಭುತಸಾಹಸಗಳನ್ನು ವರ್ಣಿಸುತ್ತವೆ. ಆ ಕಾಲದ ರಾಜಕೀಯ ಸಾಮಾಜಿಕ ಚಿತ್ರಗಳನ್ನು ಒದಗಿಸುವ ಉತ್ತಮ ವೀರರಸಪ್ರಧಾನವಾದ ಗ್ರಂಥ. ಇದಕ್ಕೆ ಸಮವಾಯಿಯಾದ ಗ್ರಂಥ 'ಅಹನಾನಾಱು'. ಹೆಸರೇ ಸೂಚಿಸುವಂತೆ ಶೃಂಗಾರಗ್ರಂಥವಿದು. ಅಯ್ದು ತಿಣೈಗಳ ವರ್ಣನೆಗಳೂ ಇವೆ. ಅಹವಲ್ ಛಂದಸ್ಸಿನದೇ. ಸುಮಾರು ೧೪೫ ಕವಿಗಳ ಕೈವಾಡವಿದೆ. ಪಾಂಡ್ಯ ದೊರೆಯಾದ ಉಗ್ರಪೆರುಮಾಳು ರೈಯ ಆಶ್ರಯದಲ್ಲಿ ಮಧುರೆಯ ಶರ್ಮನೆಂಬುವನು ಈ ಸಂಕಲನವನ್ನು ಸಂಗ್ರಹಿಸಿದ ನೆಂಬುದು ಪ್ರತೀತಿ. ಕುಱುಂತೊಹೈ (ಲಘುಸಂಕಲನ) ಎಂಬುದು ಮತ್ತೊಂದು ಭಾಗ. ಇದೂ ಶೃಂಗಾರಗ್ರಂಥ. ೪೦೨ ಅಹವಲ್‌ಪಾಗಳಿವೆ. ಪಶ್ಚಿಮತೀರದ ಅಧಿಪತಿಯಾಗಿದ್ದ ಪೂರಿಕ್ಕೋ ಎಂಬುವನ ಆಶ್ರಯದಲ್ಲಿ ಸಂಕಲಿತವಾದುದು. 'ಅಯ್‌ಙ್ಗುಱುನಾನೂಱು' ಎಂಬುದು ಬೇರೊಂದು. ಇದು ಶೃಂಗಾರ ವಿಷಯಕವಾದ ಅಯ್ದು ಶತಕಗಳುಳ್ಳ ಗ್ರಂಥ. ಚೇರದೊರೆಯ ಆಶ್ರಯದಲ್ಲಿ ಸಂಕಲಿತವಾದದು. 'ಎಟ್ಟುತ್ತೊಹೈ'ಯ ಕೊನೆಯ ಭಾಗ 'ಪದಿಱ್ಱುಪತ್ತು'. ಚೇರವಂಶದ ಅರಸರ ಚರಿತ್ರೆ ಯನ್ನು ವರ್ಣಿಸುವ ಗ್ರಂಥ. ಹತ್ತು ಪದ್ಯಗಳುಳ್ಳ ಹತ್ತು ಭಾಗಗಳನ್ನುಳ್ಳದ್ದು. ಆದರೆ ಮೊದಲನೆಯ ಮತ್ತು ಕೊನೆಯ ಎರಡುಹತ್ತುಗಳು ಸಿಕ್ಕಿಲ್ಲವಾಗಿ ಈಗ ಎಂಭತ್ತು ಪದ್ಯಗಳಿಂದ ಮಾತ್ರ ಕೂಡಿದೆ. 'ಎಟ್ಟುತ್ತೊಹೈ'ಯಲ್ಲಿ ಒಟ್ಟು ೨,೩೦೦ ಪದ್ಯಗಳಿವೆ. ಸುಮಾರು ೫೩೦ ಕವಿಗಳಿಗೆ ಸೂಚನೆಯಿದೆ.

ಸಂಘಸಾಹಿತ್ಯದ ಎರಡನೆಯ ಸಂಕಲನ 'ಪತ್ತುಪ್ಪಾಟ್ಟು' (ದಶಗೀತೆ). ಇದರ ಭಾಗವಾದ 'ತಿರುಮುರುಹಾಱ್ಱುಪ್ಪಡೈ' ಕಾರ್ತಿಕೇಯನ ವಿವಿಧಾವತಾರಗಳ ಮತ್ತು ಆತನು ನೆಲಸಿರುವ ವಿವಿಧಕ್ಷೇತ್ರಗಳ ವರ್ಣನೆ. ಇದನ್ನು ರಚಿಸಿದವರು ಪ್ರಸಿದ್ಧರಾದ ನಕ್ಕೀರಾರ್. ಇದಕ್ಕೆ ನಚ್ಚಿನಾರ್‌ಕ್ಕಿನಿಯಾರರ ಉತ್ತಮ ವ್ಯಾಖ್ಯಾನವಿದೆ. 'ಪಟ್ಟಿನಪ್ಪಾಲೈ' ಎಂಬ ಮತ್ತೊಂದು ಗೀತೆಯಲ್ಲಿ ರುದ್ರನ್ ಕಣ್ಣನಾರ್ ಅವರು ಚೋಳರ ಪ್ರಸಿದ್ಧ ರೇವುಪಟ್ಟಣವಾದ ಕಾವೇರಿಪಟ್ಟಣದ ವರ್ಣನೆಯನ್ನೂ ಮತ್ತು ಅಲ್ಲಿಂದ ಹೊರದೇಶದೊಡನೆ ನಡೆಯುತ್ತಿದ್ದ ಸಮುದ್ರವ್ಯಾಪಾರ ವಿಷಯವನ್ನು ತಿಳಿಸಿರುತ್ತಾರೆ. 'ಪೆರುಂಬಾಣಾಱ್ಱುಪ್ಪಡೈ'ಯು ಕಂಚಿ ನಗರದ ವೈಭವವನ್ನೂ ಅದರ ಅರಸನಾದ ತೊಂಡೈಮಾನ್ ಇಳಂದಿರಿಯಾನನ ಕೀರ್ತಿಯನ್ನೂ ಅಲ್ಲಿಯ ಜನರ ಆಚಾರ ವ್ಯವಹಾರವನ್ನೂ ರಾಜಕೀಯ ಸ್ವರೂಪವನ್ನೂ ನಿರೂಪಿಸುತ್ತದೆ. ದಕ್ಷಿಣ ದೇಶದ ಆಗಿನ ಕಾಲದ ರಾಜಕೀಯ ಭೂಗೋಳವನ್ನು ಗೊತ್ತುಮಾಡುವುದಕ್ಕೆ ಇದರಲ್ಲಿ

ಉತ್ತಮ ಸಾಧನಗಳು ಸಿಕ್ಕುತ್ತವೆ. ‘ಶಿರುಪ್ಪಾಣಾಟ್ರುಪ್ಪಡೈ’ಯಲ್ಲಿ ಸಮಕಾಲೀನ ರಾದ ಚೇರ, ಚೋಳ ಪಾಂಡ್ಯರಿಗೆ ಸಂಬಂಧಪಟ್ಟ ಶ್ರೇಷ್ಠ ಐತಿಹಾಸಿಕ ವಿಷಯಗಳಿವೆ. ಮಾಂಗುಡಿ ಮರುದನಾರ್ ಅವರು ತಮ್ಮ ‘ಮಧುರೈಕ್ಕಾಂಚಿ’ಯಲ್ಲಿ ಪ್ರಸಿದ್ಧ ಪಾಂಡ್ಯ ದೊರೆಯಾದ ನಡುಂಜಳಿಯನ್ನಿನ ಕೀರ್ತಿಯನ್ನೂ ಮಧುರೆಯ ಹಿರಿಮೆಯನ್ನೂ ಶಾಶ್ವತಗೊಳಿಸಿದ್ದಾರೆ. ನಕ್ಕೀರಾರ್‌ಕೃತ ‘ನೆಡುನಲ್ವಾಡೈ,’ ನಪ್ಪೂರನಾರ್‌ಕೃತ ‘ಮುಲ್ಲೈಪ್ಪಾಟ್ಟು’ ಇವೆರಡೂ ಪಾಂಡ್ಯರಾಜರನ್ನು ಕುರಿತ ಗೀತೆಗಳೇ. ‘ಕುರಂಜಿ ಪ್ಪಾಟ್ಟು’ ಕಪಿಲರಿಂದ ರಚಿತವಾದ ಪ್ರಣಯಗೀತೆ. ‘ಪೊರುನರಾಟ್ರುಪ್ಪಡೈ’ ಕರಿ ಕಾಲ ಚೋಳನ ವೀರ್ಯಸಾಹಸಗಳನ್ನೂ ಚೋಳದೇಶದ ವೈಭವವನ್ನೂ ವರ್ಣಿಸುತ್ತದೆ. ‘ಮಲೈಪಡ್ಯೆಕಡಾಮ್’ ಅಥವಾ ‘ಕೂತ್ತ್ರಾಟ್ರುಪ್ಪಡೈ’ ಎಂಬುದರಲ್ಲಿ ನನ್ನನ್ ಎಂಬ ರಾಜನ ವರ್ಣನೆಯೂ ತಮಿಳು ನಾಡಿನ ಬೇರೆ ಬೇರೆ ಭಾಗದ ನಾಗರಿಕತೆಯ ವರ್ಣ ನೆಯೂ ಇವೆ. ಈ ಹತ್ತೂ ದೀರ್ಘವಾದ ಗೀತೆಗಳು. ಇನ್ನೂರರಿಂದ ಮುನ್ನೂರೈವತ್ತು ಪಾದಗಳನ್ನುಳ್ಳವು. ಮುಲ್ಲೈ, ಕುಱುಂಜಿ, ನೆಡುನಲ್ವಾಡೈ, ಪಟ್ಟಿನಪ್ಪಾಲೈ ಇವು ಶೃಂಗಾರಕಾವ್ಯಗಳು. ಉಳಿದ ಆರು ಆಟ್ರುಪಡ್ಯೆಗಳು. ಅಂದರೆ ಆಶ್ರಯದಾತರ ವಿಷಯಕವಾದ ಸ್ತುತಿಗ್ರಂಥಗಳು. ಆದುದರಿಂದಲೇ ಇವುಗಳಲ್ಲಿ ದೇಶವರ್ಣನೆ, ರಾಜರ ವೈಭವ, ಕವಿಗಳ ಆತ್ಮವಿಷಯ ಹೇರಳವಾಗಿ ಉಕ್ತವಾಗಿವೆ.

‘ಪದಿನೆಣ್ ಕೀಟ್‌ಕಿಣಕ್ಕು’ ಸಂಘಸಾಹಿತ್ಯದ ಮೂರನೆಯ ಸಂಕಲನ. ಇದು ಅರಮ್ ಅಥವಾ ಧರ್ಮವಿಷಯಕವಾದುದು. ಇವುಗಳಲ್ಲಿ ಕೆಲವು ೫೦ ಕ್ಕಿಂತ ಕಡಿಮೆ ಸಂಖ್ಯೆಯ ಪದ್ಯಗಳಿಂದ ಕೂಡಿ ನಿಷ್ಕೃಷ್ಟವಾದ ಛಂದಸ್ಸಿನಲ್ಲಿ ರಚಿತವಾಗಿವೆ. ವೆಣ್ಬಾ ಛಂದಸ್ಸಿನಲ್ಲಿ ರಚಿತವಾದ ‘ತಿರುಕ್ಕುಱಳ್’ ಮತ್ತು ‘ನಾಲಡಿಯಾರ್’ ಎಂಬುವು ಮಾತ್ರ ದೀರ್ಘವಾದ ಗೀತೆಗಳು. ‘ಎಟ್ಟುತ್ತೊಹೈ’ ‘ಪತ್ತುಪಾಟ್ಟು’ ಇವು ಬೃಹದ್ಗೀತೆ ಗಳಾದರೆ ‘ಪದಿನೆಣ್‌ಕೀಟ್‌ಕಿಣಕ್ಕು’ ಲಘುಗೀತೆಗಳು. ಇವುಗಳಲ್ಲಿ ಅನೇಕ ಬಹು ಆಕರ್ಷಕವಾಗಿವೆ. ‘ಕಳವಟಿ ನಾಱ್ಪದು’ ಯುದ್ಧವರ್ಣನೆಯಿಂದ ವೈನವಿರೇರಿಸುತ್ತದೆ. ೪೦ ವೆಣ್ಬಾಪದ್ಯಗಳನ್ನುಳ್ಳದ್ದು. ಕಟುಮಲದಲ್ಲಿ ಚೋಳರಾಜನಾಗಿದ್ದ ಕೋಚ್ಚೆಂ ಗಣ್ಣಾನ್ ಎಂಬುವನು ಕಣ್ಯೆಕ್ಕಾಲಿರುಂಪೊಱ್ಯೆ ಎಂಬ ಚೇರರಾಜನನ್ನು ಸೋಲಿಸಿ ಸೆರೆಯಲ್ಲಿಡಲು ಅವನನ್ನು ಬಿಡಿಸಲು ಪೊಯ್ಗೈಯಾರ್ ಇದನ್ನು ರಚಿಸಿ ಚೋಳ ರಾಜನಿಗೆ ಅರ್ಪಿಸಿದರು. ದೊರೆ ಮೆಚ್ಚಿ ಬಿಡುಗಡೆಗೆ ಅಪ್ಪಣೆಯಿತ್ತನು. ಇದು ತಲುಪುವುದರಲ್ಲಿಯೇ ಚೇರರಾಜನು ಸೆರೆಮನೆಯಲ್ಲಿ ಸತ್ತಿದ್ದನು. ಇದರ ಕರ್ತೃವಾದ ಪೊಯ್ಗೈಯಾರ್ರೇ ಪೊಯ್ಗೈಯಾಟ್ವಾರ್ ಎಂದು ಕೆಲವರ ಅಭಿಪ್ರಾಯ. ಇದರ ಕಾಲ, ಕ್ರಿ.ಶ. ನಾಲ್ಕನೆಯ ಶತಮಾನ. ‘ಐಂದಿಣ್ಯೆ ಐಂಬುದು,’ ‘ತಿಣ್ಯೆಮಾಲೈ

ನೂಜ್ಜ್ಯೆಂಬುದು' 'ಐಂದಿಣೈ ಎಟ್ಟುಪದು' 'ತಿಣೈಮೊಟಿ ಐಂಬದು' ಇವು ಆಯಾ ಸಂಖ್ಯೆಯ ಪದ್ಯಗಳಿಂದ ಕೂಡಿದ ಸಾಂಪ್ರದಾಯಿಕ ಶೃಂಗಾರಕಾವ್ಯಗಳು. ಆಚಾರಕ್ಕೋವೈ ಎಂಬುದು ವಿದ್ಯಾಭ್ಯಾಸದ ಮಹತ್ವವನ್ನೂ ಇತರ ಲೋಕನೀತಿ ಗಳನ್ನೂ ಕುರಿತ ನೀತಿಗ್ರಂಥ. 'ತಿರುಕಡುಹಮ್' (ತ್ರಿಕಟುಕ) 'ಶಿಱುಪಂಚ ಮೂಲಮ್' 'ಏಲಾದಿ' ಇವು ವಿಚಿತ್ರವಾದ ಹೆಸರುಗಳಿಂದ ಕೂಡಿದ ನೀತಿಗ್ರಂಥ ಗಳು. ಇಲ್ಲಿರುವ ಪದ್ಯಗಳಲ್ಲಿ ವೈದ್ಯಶಾಸ್ತ್ರದಲ್ಲಿ ಆಯಾಯ ಮೂಲಿಕೆಗಳು ಹೇಗೆ ಶಾರೀರಕ ರೋಗಗಳನ್ನು ನಿವಾರಣಮಾಡುತ್ತವೆಯೋ ಹಾಗೆಯೇ ಮಾನಸಿಕ ರೋಗಗಳಿಗೆ ಯೋಗ್ಯ ಭೈಷಜವನ್ನೂ ಸೂಚಿಸಿವೆ. 'ಪೞಮೊಟಿ ನಾನೂಱು' ಜೈನ ಕವಿಯಾದ ಮುನ್‌ತುಱೈ ಅಱೈಯಾರ್ ರಚಿಸಿದುದು. ಲೋಕನೀತಿಗೆ ಸಂಬಂಧಪಟ್ಟ ಅನೇಕ ಗಾದೆಗಳನ್ನೂ ನಾಣ್ಣುಡಿಗಳನ್ನೂ ಚಾಟುವಾಕ್ಯಗಳನ್ನೂ ಒಳಗೊಂಡಿದೆ. ಉಕ್ತವಾದ ನೀತಿವಾಕ್ಯಗಳು ಹಳೆಯ ಕಥೆಗಳಿಂದ ಸಿದ್ಧಾಂತಮಾಡಲ್ಪಟ್ಟಿವೆ. 'ತಿರುಕ್ಕುಱಳ್' ಮತ್ತು 'ನಾಲಡಿಯಾರ್' ಆದಮೇಲೆ ಇದಕ್ಕೆ ಮುಂದಿನ ಸ್ಥಾನವು ಕೊಡಲ್ಪಟ್ಟಿದೆ. 'ತಿರುಕ್ಕುಱಳ್' ತಮಿಳುಸಾಹಿತ್ಯದಲ್ಲಿ ಅಮೋಘರತ್ನ. ಇದರ ಕರ್ತೃವಾದ ತಿರುವಳ್ಳುವರ್ ಮೈಲಾಪುರದಲ್ಲಿ ಸಾಮಾನ್ಯಜಾತಿಯಲ್ಲಿ ಹುಟ್ಟಿದವರು. ಇದನ್ನು ಕವಿಯು ತನ್ನ ಸ್ನೇಹಿತನೂ ಸಿಂಹಳದ್ವೀಪದ ದೊರೆಯೂ ಆದ ಏಳಾಳನಿ ಗಾಗಿ ರಚಿಸಿದನು. ತಿರುವಳ್ಳುವರ ವಿಷಯವಾಗಿ ಸಂಘಕಾಲದಲ್ಲಿಯೇ ಸಂಘಕವಿಗ ಳಿಂದಲೇ 'ತಿರುವಳ್ಳುವಮಾಲೈ' ಎಂಬ ಸ್ತುತಿಗ್ರಂಥವು ರಚಿತವಾಗಿ ಅದರ ಮಹತ್ವವನ್ನು ಪ್ರಕಾಶಪಡಿಸಿದೆ. 'ಕುಱಳಿ'ಗೆ 'ಮುಪ್ಪಾಲ್' (ತ್ರಿವರ್ಗ) ಎಂಬ ಹೆಸರೂ ಇದೆ. ಇದರಲ್ಲಿ ಧರ್ಮ, ಅರ್ಥ, ಕಾಮ (ಅರಮ್, ಪೊರಳ್ ಇನ್ಬಮ್) ವಿಷಯಕವಾದ ನೀತಿಗಳು ಉಕ್ತವಾಗಿವೆ. ಕೊನೆಯದಾದ ಮೋಕ್ಷ (ವೀಡು) ವಿಷಯ ನೀತಿಯ ಕಟ್ಟುಪಾಡಿಗೆ ಒಳಪಡದಿರುವುದರಿಂದ ಅದನ್ನು ಧರ್ಮಪ್ರಕರಣದ ಕೊನೆಯ ನಾಲ್ಕು ಅಧ್ಯಾಯಗಳಲ್ಲಿ ಸೂಚಿಸಿದೆ. 'ತಿರುಕ್ಕುಱಳ್' ಹತ್ತು ಕುಱಳು ವೆಣ್ಬಾಗಳಿಂದ ಕೂಡಿದ ೧೩೩ ಪ್ರಕರಣಗಳನ್ನೊಳಗೊಂಡಿದೆ. ಆದುದರಿಂದಲೇ ಅಖಂಡಗ್ರಂಥಕ್ಕೆ ಕುಱಳ್ ಎಂಬ ಹೆಸರು ಬಂದಿದೆ. ಇದರ ಭಾಷೆ ಮತ್ತು ಶೈಲಿಯು ಬಿಗಿಯಾಗಿಯೂ ಆಕರ್ಷಕವಾಗಿಯೂ ಇವೆ. ಇದಕ್ಕೆ ಪ್ರಸಿದ್ಧವಾದ ಹತ್ತು ವ್ಯಾಖ್ಯಾನಗಳಿವೆ. ಅವುಗಳಲ್ಲಿ ಪರಿಮೇಲೞಹರದೇ ಉತ್ತಮವಾದುದು. ನಾಲಡಿಯಾರ್ (ಚೌಪದ) 'ಪದಿನೆಣ್ ಕೀೞ್‌ಕಿಣಕ್ಕು' ಸಂಗ್ರಹದ ಮತ್ತೊಂದು ಶ್ರೇಷ್ಠಗ್ರಂಥ. ಇದರಲ್ಲಿ ನಾನೂರು ಚೌಪದಗಳಿವೆ. ಇದರ ಶೈಲಿಯ ಬಿಗಿಯೂ ಭಾವದ ಆಳವೂ ಜನಜೀವನದ ಪ್ರತ್ಯಕ್ಷ ಚಿತ್ರಗಳೂ ಇದನ್ನು ಕೃತಿರತ್ನವನ್ನಾಗಿ ಮಾಡಿವೆ. ಇದನ್ನು ಸಂಕಲನ

ಮಾಡಿದವರು ಪದ್ಮನಾರ್ ಎಂಬುವರು. ಇದರಲ್ಲಿ ನಾನೂರು ಪದ್ಯಗಳೂ ನಲವತ್ತು ಅಧಿಕಾರಗಳೂ ಇವೆ. ೧೩ ಅಧಿಕಾರಗಳು ಧರ್ಮವನ್ನೂ ೨೬ ಅರ್ಥವನ್ನೂ ೧ ಕಾಮವನ್ನೂ ಕುರಿತವು. ಇದಕ್ಕೆ ಪದ್ಮನಾರ್ರೇ ವಿಸ್ತಾರವಾದ ವ್ಯಾಖ್ಯಾನವನ್ನು ರಚಿಸಿದ್ದಾರೆ. ನಾಲಡಿಯಾರ್ ಪೂರ್ವರೂಪದಲ್ಲಿ ಎಂಟನೆಯ ಶತಮಾನದ ಗ್ರಂಥವಿರಬಹುದು. ಇದರಲ್ಲಿ ಯಾವ ದೇವರ ಅಥವಾ ಮತದ ಸೂಚನೆಯೂ ಇಲ್ಲ. ಇವುಗಳೇ ಅಲ್ಲದೆ 'ನಾನ್ಮಣಿಕ್ಕಡಿಹೈ' (ವಿಳಂಬಿ ನಾಗನಾರ್ ಕೃತ) 'ಕಾರ್ ನಾಱ್ಪದು' (ಮಧುರೈಕ್ಕಣ್ಣನ್ ಕೂತ್ತನಾರ್ ವಿರಚಿತ) 'ಇನಿಯದು ನಾಱ್ಪದು' (ಮಧುರೈ ಪೂದನ್ ಶೇಂದನಾರ್ ರಚಿತ) 'ಇನ್ನಾನಾಱ್ಪದು' (ಕಪಿಲರಿಂದ ಅನುಗ್ರಹೀತವಾದದು) 'ಮಧುಮೊಳಿಕ್ಕಾಂಜಿ' (ಪುರಿಶೈಕ್ಕೂಟವನಾರ್ ಬರೆದುದು) 'ಇನ್ನಿಲೈ' (ಮಧುರೈಪ್ಪೂದನಾರ್ ಸಂಕಲಿತ—ಪೊಯ್‌ಗೈಯಾರ್ ಕೃತವೆಂದು ಪ್ರತೀತಿ) 'ಮತ್ತುಳ್ಳಾಯಿರಮ್' ಎಂಬುವೂ ಇದೇ ಸಂಕಲನಕ್ಕೆ ಸೇರಿದವು. ಇವೆಲ್ಲ ನೀತಿ ಗ್ರಂಥಗಳು.

ಈ ಸಂಘಕವಿಗಳಲ್ಲಿ ನಕ್ಕೀರಾರ್, ಕಪಿಲರ್ ಮತ್ತು ಪರಣಾರ್ ಇವರು ಪ್ರಸಿದ್ಧರು. ಇವರಲ್ಲಿ ಕಪಿಲರನ್ನು ನಕ್ಕಿರಾರ್ ಬಾಯ್ತುಂಬ ಹೊಗಳಿದ್ದಾರೆ. ಕಪಿಲರ ಸಮಕಾಲೀನಳೇ ಇರಬೇಕು ಅವ್ವೈಯಾರ್. ಈಕೆಯ ಸಜೀವನೀತಿಸೂತ್ರಗಳು ಆ ಕಾಲದ ಸಂಕಲನಗಳಾದ 'ನಱ್ಱಿಣೈ' 'ಕುರುಂತೊಹೈ' 'ಪುಱನಾನೂಱು' 'ಅಹನಾನೂಱು' ಮೊದಲಾದುವುಗಳಲ್ಲೆಲ್ಲಾ ಸಿಕ್ಕುವುವು. ಅವು ಇಂದಿಗೂ ತಮಿಳರ ಬಾಯಲ್ಲಿ ತಾಂಡವವಾಡುವುವು. 'ಆತ್ತಿಶೂಡಿ' 'ಕೊನ್ಱೈವೇಂದನ್' 'ಮೂದುರೈ' 'ನಲ್‌ವಳಿ' 'ಜ್ಞಾನಕ್ಕುಱಳ್' 'ಅಶತಿಕ್ಕೋವೈ' 'ಪದನಂದಾದಿ' ಮೊದಲಾದವು ಆಕೆಯ ಗ್ರಂಥಗಳು.

**ಪಂಚಮಹಾಕಾವ್ಯಗಳು**—ಸಂಘ ಕಾಲವಾದಮೇಲೆ ಉತ್ತರದೇಶದಿಂದ ಬೌದ್ಧರೂ ಜೈನರೂ ದಕ್ಷಿಣಕ್ಕೆ ಬಂದು ಕಂಚಿ, ಮಧುರೆ ಆನೆಮಲೆಗಳಲ್ಲಿ ನೆಲಸಿ ಸಂಸ್ಕೃತದ ಮಾದರಿಯಲ್ಲಿ ತಮಿಳಿನ ಅಯ್ದು ಮಹಾಕಾವ್ಯಗಳನ್ನು (ಐಮ್ಬೆರುಮ್ ಕಾಪ್ಪಿಯಮ್) ರಚಿಸಿದರು. 'ಶಿಲಪ್ಪಧಿಕಾರಮ್' 'ಮಣಿಮೇಖಲೈ' 'ಚಿಂತಾಮಣಿ' 'ಕುಂಡಲಕೇಶಿ' 'ವಳೆಯಾಪತಿ' ಇವೇ ತಮಿಳಿನ ಪಂಚಮಹಾಕಾವ್ಯಗಳು.

ತಿರುವಾಂಕೂರಿನ ದೊರೆಯಾದ ಶೇರನ್ ಶೆಂಗುಟ್ಟುವನ್ ತಮ್ಮನಾದ ಇಳಂಗೊ ಅಡಿಗಳ್ ಎಂಬ ಮಹಾಕವಿ ಶಿಲಪ್ಪಧಿಕಾರವನ್ನು ರಚಿಸಿದವನು. ಸಿಂಹಳದೇಶದ ದೊರೆಯಾದ ಇಮ್ಮಡಿ ಗಜಬಾಹುವಿನ ಸಮಕಾಲೀನ. ಕ್ರಿ.ಶ. ೨ ನೆಯ ಶತಮಾನದವನು. ಕಾಲಂದಿಗೆಯೇ ನೆಪವಾಗಿ ಉಳ್ಳ ಮುತ್ತಮಿಳ್ (ಇಯಲ್, ಇಶೈ, ನಾಟಕ) ಗ್ರಂಥ.

ಒಂದೊಂದು ಭಾಗದಲ್ಲಿಯೂ ಮುಚ್ಚುವೈ (ಮೂರುರಸ—ಶೃಂಗಾರ, ವೀರ, ಕರುಣ) ಗಳೇ ಪ್ರಧಾನವಾಗಿವೆ. ವಿಧಿವಿಲಾಸ, ಪತಿವ್ರತಾಮಾಹಾತ್ಮ್ಯ, ಕರ್ಮಕ್ಕೆ ತಕ್ಕ ಫಲ— ಇವುಗಳನ್ನು ಪ್ರತಿಪಾದಿಸುವ ಗ್ರಂಥ. ಗ್ರಂಥಕರ್ತನು ಜೈನನೆಂದೂ ಶೈವನೆಂದೂ ಭಿನ್ನಾಭಿಪ್ರಾಯಗಳಿವೆ. ಜೈನನೇ ಇರಬಹುದು. ಈ ಮಹಾಕಾವ್ಯದ ಕಥೆಯು ಬಹು ಕರುಣಾಜನಕವಾಗಿದೆ. ಕೋವಲನ್ ಮತ್ತು ಕನ್ನಿಕೆಯರ ವಿಷಯಕವಾದ ದುರಂತ ಕಥೆ ಇದು. ಕೋವಲನ್ ಒಬ್ಬ ಧನಿಕನಾದ ವರ್ತಕ. ವೇಶ್ಯೆಯಾದ ಮಾಧವಿ ಯಲ್ಲಿ ಅನುರಕ್ತನಾಗಿ ತನ್ನ ಸರ್ವಸ್ವವನ್ನೂ ಅವಳಿಗೆ ತೆತ್ತು ರಿಕ್ತನಾಗುವನು. ಆದರೂ ಅವನ ಧರ್ಮಪತ್ನಿಯಾದ ಕನ್ನಿಕೆಯು ಪತಿಯಲ್ಲಿ ವಿಶೇಷ ಭಕ್ತಿಯುಳ್ಳವ ಳಾಗಿ ಅವನನ್ನು ಮನ್ನಿಸಿ ಕೊನೆಗೆ ಅವನ ಜೀವನಾರ್ಥವಾಗಿ ತನ್ನ ಕಾಲಂದಿಗೆಯನ್ನು ಕೊಡುವಳು. ಕೋವಲನ್ ಕನ್ನಿಕೆಯರು ಅದನ್ನು ಮಾರುವುದಕ್ಕಾಗಿ ತಮ್ಮೂರಾದ ಕಾವೇರಿ ಪಟ್ಟಣದಿಂದ ಮಧುರೆಗೆ ಬರುವರು. ಕೋವಲನು ಅಂದಿಗೆಯನ್ನು ಅಂಗಡಿ ಬೀದಿಯಲ್ಲಿ ಮಾರುತ್ತಿದ್ದಾಗ ಅಕ್ಕಸಾಲೆಯೊಬ್ಬನು ಮಹಾರಾಣಿಯು ಕಳೆದು ಕೊಂಡಿದ್ದ ಅಂದುಗೆಯೇ ಅದೆಂದು ಸುಳ್ಳು ಹೇಳಿದ್ದರ ಮೇಲೆ ನಿರಪರಾಧಿಯಾದ ಕೋವಲನು ಮಹಾರಾಣಿಯಿಂದ ಕಳ್ಳನೆಂದು ಆಪಾದಿತನಾಗಿ ಕೊಲ್ಲಲ್ಪಡುವನು. ಪತಿವ್ರತಾಶಿರೋಮಣಿಯಾದ ಕನ್ನಿಕೆ ಪತಿವಧೆಯನ್ನು ಕೇಳಿ ನಡೆದ ಅನ್ಯಾಯ ಕ್ಕಾಗಿ ದುಃಖಿಸಿ ಸಂಬಂಧಪಟ್ಟವರನ್ನು ಶಪಿಸುವಳು. ಪಾಂಡ್ಯ ರಾಜರಾಣಿಯರು ನಾಶವಾಗುವರು. ಮಧುರಾಪಟ್ಟಣವು ಭಸ್ಮವಾಗುವುದು. ಕನ್ನಿಕೆಯು ಪತಿಯ ಶರೀರದೊಡನೆ ಸಹಗಮನಮಾಡುವಳು. ಸ್ವರ್ಗದಲ್ಲಿ ಪತಿಪತ್ನಿಯರಿಗೆ ಪುನಸ್ಸ ಮಾಗಮವಾಗುವುದು. ಪಾಂಡ್ಯದೊರೆಯಾದ ಶೇರನ್‌ಶೆಂಗೊಟ್ಟವನು ಪ್ರಾಯಶ್ಚಿತ್ತ ರೂಪವಾಗಿ ಕನ್ನಿಕೆಗೆ ದೇವಾಲಯವನ್ನು ಕಟ್ಟಿಸಿ ಅವಳನ್ನು ದೇವತೆಯಂತೆ ವಿಗ್ರಹ ರೂಪದಲ್ಲಿ ಆರಾಧಿಸಲು ಏರ್ಪಡಿಸುವನು. ಈ ಕಾವ್ಯದಲ್ಲಿ ಮಹಾಕಾವ್ಯದ ಗಂಭೀರ ಗತಿಯೂ ಹೃದಯಾಕರ್ಷಕವಾದ ಸ್ಪಷ್ಟಪಾತ್ರಚಿತ್ರಣವೂ ಭಾವನಾಡಿಗಳನ್ನು ಕುಣಿಸುವ ರಸಪ್ರವಾಹವೂ ಎದ್ದು ಕಾಣುವುವು.

ಕಾಲದೃಷ್ಟಿಯಿಂದ ಪ್ರಾಚೀನವಾದುದೆಂದು ಪರಿಗಣಿತವಾಗಿದ್ದರೂ 'ಶಿಲಪ್ಪಧಿ ಕಾರ'ದ ಮುಂದಿನ ಕಥೆ 'ಮಣಿಮೇಖಲೆ.' ಇದರಲ್ಲಿ ಕೋವಲನ ಪ್ರೇಯಸಿಯಾದ (ವೇಶ್ಯೆ) ಮಾಧವಿ ಮತ್ತು ಅವಳ ಮಗಳಾದ ಮಣಿಮೇಖಲೆಯ ವಿಷಯಕ ವಾದ ಕಥೆ ಉಕ್ತವಾಗಿದೆ. ಮಾಧವಿಯು ಬೌದ್ಧಸಂನ್ಯಾಸಿನಿಯಾದ ತನ್ನ ಮಗಳು ಮಣಿಮೇಖಲೆಯೊಡನೆ ಮಠವನ್ನು ಪ್ರವೇಶಿಸುವುದು ಇದರ ಪ್ರಧಾನ ಕಥಾವಸ್ತು. ಮಣಿಮೇಖಲೆಯು ಯೌವನಾತಿಶಯದಿಂದ ಬಹು ಸ್ಫುರದ್ರೂಪಿಯಾಗಿ ಬೆಳೆದು

ಅನೇಕರ ಮೋಹಕ್ಕೆ ಒಳಗಾಗುವಳು. ಆದರೆ ಅವರನ್ನೆಲ್ಲ ತಪ್ಪಿಸಿಕೊಳ್ಳಲು ಅವಳು ಸ್ಥಳದಿಂದ ಸ್ಥಳಕ್ಕೆ ಅಲೆದು ಕೊನೆಗೆ ಸಂನ್ಯಾಸಿನಿಯಾಗುವಳು. ವಿವಿಧ ಸಮಯಾಚಾರ್ಯ ರಿಂದ ಭಿನ್ನಭಿನ್ನ ತತ್ತ್ವಗಳನ್ನು ತಿಳಿಯುವಳು. ಅವಳ ಜ್ಞಾನವೈರಾಗ್ಯಗಳು ಸರ್ವ ರಿಂದಲೂ ಸ್ತೋತ್ರಮಾಡಲ್ಪಡುವುವು. ಈ ಗ್ರಂಥವನ್ನು ರಚಿಸಿದವರು ಶೀತ್ತಲೈ ಚ್ಚಾತ್ತಿನಾರ್. ತಿರುವಳ್ಳುವರ ಸಮಕಾಲೀನರು. ಬೌದ್ಧರೆಂದು ಕಾಣುತ್ತದೆ. ಇದು ಬಹಳ ಹಿಂದಿನ ಕಾವ್ಯ.

ಮಣಿಮೇಖಲೆಯಲ್ಲಿ ಉತ್ತಮ ಸನ್ನಿವೇಶಗಳೂ ಮಾನವೀಯ ಭಾವನೆಗಳೂ ಇದ್ದರೂ 'ಶಿಲಪ್ಪಧಿಕಾರ'ದಲ್ಲಿರುವ ಹೃದಯಗ್ರಾಹಿಯಾದ ಭಾವಗಳ ಆಳವಿಲ್ಲ. 'ಶಿಲಪ್ಪಧಿಕಾರ'ದಲ್ಲಿ ಉತ್ತಮ, ಧಾರ್ಮಿಕ, ನೈತಿಕ ವಿಷಯಗಳ ಪ್ರತಿಪಾದನೆಯಿದೆ. ಸಂಗೀತ ವಿಷಯಕವಾದ ಶಾಸ್ತ್ರೀಯ ವಿವರಣೆಯಿದೆ. ಆದರೂ ಪ್ರಧಾನವಾಗಿ ಕಥನ ಕಾವ್ಯ. 'ಮಣಿಮೇಖಲೆ'ಯಲ್ಲಾದರೋ ಕಥೆಯ ನೆಪದಲ್ಲಿ ಬೌದ್ಧತತ್ತ್ವಗಳ ಪ್ರಚಾರ ಪ್ರಧಾನವಾಗಿದೆ, ಆದರೂ ಪ್ರಾಸಂಗಿಕವಾಗಿ ಬರುವ ಸಮುದ್ರಯಾನವರ್ಣನೆ; ಹಡಗು ಒಡೆಯುವಿಕೆ, ಜಾವಾ ದೊರೆಯಾದ ಭೂಮಿಚಂದ್ರನ ಪ್ರವೇಶ ಮೊದಲಾದುವು ಆಕರ್ಷಕವಾಗಿಯೂ ಉದ್ಬೋಧಕವಾಗಿಯೂ ಇವೆ.

ಜೈನಸಂನ್ಯಾಸಿಯಾದ ತಿರುತ್ತಕ್ಕದೇವರ್ ರಚಿಸಿದ ಲೌಕಿಕ ಕಾವ್ಯ 'ಜೀವಕ ಚಿಂತಾಮಣಿ.' ಇದರಲ್ಲಿ ಎಂಟು ಮದುವೆಗಳು ವರ್ಣಿತವಾಗಿವೆ. ಆದುದರಿಂದಲೇ ಇದಕ್ಕೆ 'ಮಣನೂಲ್' ಎಂಬ ಹೆಸರೂ ಉಂಟು. ೧೩ ಅಧ್ಯಾಯಗಳನ್ನುಳ್ಳದ್ದು. ಸಂಸ್ಕೃತ ವೃತ್ತಗಳನ್ನು ಮೊದಲು ಉಪಯೋಗಿಸಿಕೊಂಡಿರುವ ತಮಿಳುಗ್ರಂಥ. ಶೃಂಗಾರಪ್ರಧಾನವಾದುದು. ನಾಯಕನು ಶೈವಪದ್ಧತಿಯಂತೆ ದೀಕ್ಷೆಯನ್ನು ವಹಿಸಿ ಮುಮುಕ್ಷುವಾಗುವನು.

ಪಂಚಮಹಾಕಾವ್ಯಗಳಲ್ಲಿ 'ಕುಂಡಲಕೇಶಿ' ಮತ್ತು 'ವಳಯಾಪತಿ' ಉಪಲಬ್ಧವಲ್ಲ. ಇವು ಜೈನಗ್ರಂಥಗಳು.

ಪೆರುಂಕಾವ್ಯಗಳಂತೆಯೇ ತಮಿಳಿನಲ್ಲಿ ಅಯ್ದು ಕಿರುಕಾವ್ಯಗಳೂ (ಐಂಜಿರು ಕಾಪ್ಪಿಯಮ್) ಇವೆ. 'ನೀಲಕೇಶಿ' 'ಶೂಳಾಮಣಿ' (ಚೂಡಾಮಣಿ) 'ಯಶೋಧರಕಾವ್ಯಂ' 'ಉದಯಣನ್‌ಕಥೈ' 'ನಾಗಕುಮಾರಕಾವ್ಯಂ' ಎಂಬುವು ಅವು. ನೀಲಕೇಶಿಯು ಅದೇ ಹೆಸರಿನ ನಾಯಕಿಯ ವಿಷಯಕವಾದ ಹತ್ತು ಸರ್ಗಗಳುಳ್ಳ ಕಾವ್ಯ. 'ಶೂಳಾಮಣಿ' ತೋಲಾಮೊಟಿತ್ತೇವರ್ ಎಂಬ ಜೈನಕವಿ ಕೃತವಾದುದು. ಮಹಾಪುರಾಣದ ಆಧಾರದ ಮೇಲೆ ರಚಿತವಾದ ೧೨ ಸರ್ಗಗಳ ಕಾವ್ಯ. ೨,೧೩೧ ವೆಣ್ಬಾಪದ್ಯಗಳಿವೆ. ಸಂಸ್ಕೃತ 'ಯಶೋಧರಕಾವ್ಯ'ದ ಆಧಾರದ ಮೇಲೆ ರಚಿತ

ವಾದುದು 'ಯಶೋಧರಕಾವ್ಯಂ'. ವತ್ಸರಾಜನಾದ ಉದಯನನ ಚರಿತ್ರೆ, 'ಉದಯಣನ್ ಕತೈ.' ೩೬೭ ಪದ್ಯಗಳೂ ೬ ಪ್ರಕರಣಗಳೂ ಇವೆ. 'ನಾಗಕುಮಾರ ಕಾವ್ಯ' ಉಪಲಬ್ಧವಾಗಿಲ್ಲ.

**ಶೈವಸಮಯಾಚಾರ್ಯರು**:—ಆರನೆಯ ಶತಮಾನದ ಅಂತ್ಯದ ವೇಳೆಗೆ ಪಾಂಡ್ಯ ರಾಜ್ಯವು ಪ್ರಬಲವಾಗಿ ಅಲ್ಲಿಂದ ಮೂರು ಶತಮಾನಗಳ ಕಾಲ ತನ್ನ ವಿಜಯಪತಾಕೆ ಯನ್ನು ದೇಶದಲ್ಲೆಲ್ಲಾ ಹಾರಿಸಿತು. ಈ ಕಾಲದಲ್ಲಿ ಶೈವವೈಷ್ಣವ ಭಕ್ತರು ಪ್ರತಿಷ್ಠಿತ ರಾಗಿ ತಮ್ಮ ಭಕ್ತಿಪಂಥವನ್ನು ಸ್ಥಾಪಿಸಿ ಬಳಕೆಯಲ್ಲಿದ್ದ ಬೌದ್ಧ ಜೈನ ಪ್ರಭಾವವನ್ನು ಮೂಲೆಗೊತ್ತಿದರು. ಶೈವಭಕ್ತರಿಗೆ ನಾಯನಾರ್ ಎಂದೂ ವೈಷ್ಣವಭಕ್ತರಿಗೆ ಆಳ್ವಾರ್ರೆಂದೂ ಶೈವಗೀತೆಗಳಿಗೆ 'ತೇವಾರ'ವೆಂದೂ ಆಳ್ವಾರ್ರುಗಳ ಕೃತಿಗಳಿಗೆ 'ದಿವ್ಯಪ್ರಬಂಧ'ಗಳೆಂದೂ ಹೆಸರು. ತೇವಾರವೂ ಪ್ರಬಂಧಗಳೂ ಉಚ್ಚಮಟ್ಟದ ಭಕ್ತಿ ಗೀತೆಗಳು. ಇವುಗಳ ಕರ್ತೃಗಳಾದ ಶೈವವೈಷ್ಣವ ಭಕ್ತರು ಭಕ್ತಿಪ್ರೇರಿತರಾಗಿ ಅನು ಭಾವಿಗಳಾಗಿ ಈಶ್ವರ ಸಾಕ್ಷಾತ್ಕಾರ ಮಾಡಿಕೊಂಡು ಅದರ ಫಲವಾದ ಜ್ಞಾನಾ ಮೃತವನ್ನು ಸಾರ್ವತ್ರಿಕವಾಗಿ ಹಂಚುವುದಕ್ಕಾಗಿ ದೇಶದಲ್ಲೆಲ್ಲಾ ಸಂಚಾರಮಾಡಿ ಜನಗಳ ಅಜ್ಞಾನವನ್ನು ಹೊಡೆದೋಡಿಸಿ ಅವರನ್ನು ಪರಮಭಾಗವತರನ್ನಾಗಿ ಮಾಡಿ ಸೌಖ್ಯದಿಂದ ಬಾಳುವಂತೆ ಮಾಡಿದರು. ಇವರ ಪ್ರಭಾವದಿಂದ ಹಿಂದೂಧರ್ಮದ ಭಕ್ತಿಪಂಥವು ದಕ್ಷಿಣ ಭಾರತದಲ್ಲೆಲ್ಲಾ ಹರಡಿತು. ಈ ಭಕ್ತಶಿರೋಮಣಿಗಳ ಪ್ರಭಾವವನ್ನರಿತು ಆಗಿನ ಆಳರಸರೂ ಅವರ ಅನುಯಾಯಿಗಳಾಗಿ ಅವರ ಪಂಥ ಗಳನ್ನು ಮುಂದುವರಿಸಿದರು. ಪಲ್ಲವ ಮಹೇಂದ್ರವರ್ಮನು ಮೊದಲು ಜೈನನಾಗಿದ್ದು ಶೈವಭಕ್ತರಾದ ಅಪ್ಪಾರ್ ಅವರ ಪ್ರೇರಣೆಯಿಂದ ಶೈವನಾಗಿ ತನ್ನ ರಾಜ್ಯದಲ್ಲೆಲ್ಲಾ ಅದ್ಭುತವಾದ ಶಿವಾಲಯಗಳನ್ನು ಕಟ್ಟಿಸಿ ಶೈವವಿಗ್ರಹಗಳನ್ನು ಪ್ರತಿಷ್ಠಿಸಿದುದು ಇದಕ್ಕೆ ಪ್ರತ್ಯಕ್ಷ ಸಾಕ್ಷಿ.

ಶೈವ ನಾಯನಾರ್ರುಗಳೂ ವೈಷ್ಣವ ಆಳ್ವಾರ್ರುಗಳೂ ಸರಳಭಕ್ತರು. ದಾರ್ಶನಿಕ ರಲ್ಲ. ಭಗವಂತನು ಶಿವರೂಪದಲ್ಲಾಗಲಿ ವಿಷ್ಣುರೂಪದಲ್ಲಾಗಲಿ ಅವರಿಗೆ ಪೂಜ್ಯ, ವಂದನೀಯ, ಪ್ರೀತಿಪಾತ್ರ. ಅವನು ಭಕ್ತಿಗೆ ಒಲಿಯುವಂತೆ ತರ್ಕಕ್ಕೆ ಒಲಿಯುವುದಿಲ್ಲ. ಅವನ ಸಾನ್ನಿಧ್ಯವಿಲ್ಲದೆ ಒಂದು ಕ್ಷಣವೂ ಬದುಕಲಾರೆನೆಂಬ ಅಜ್ಞಾನಿಗಾದರೂ ಅವನು ಒಲಿದೇ ಒಲಿಯುತ್ತಾನೆ. ಇವರಿಗೆ ಜೀವಾತ್ಮ ಪರಮಾತ್ಮಗಳು ಜೊತೆಯಲ್ಲಿರುವುದು ಸಾಧ್ಯವೆಂಬುದು ಅನುಭವಸಿದ್ಧವಾಯಿತು. ಭಗವತ್ಕರುಣಾಪ್ರವಾಹವು ಎಲ್ಲರ ಮೇಲೆಯೂ ಹರಿಯಲು ಸಾಧ್ಯವೆಂಬುದಾಗಿ ಇವರು ಜನರಿಗೆ ತಿಳಿಸಿಕೊಟ್ಟರು. ಇರುವ ಗಾನಶೀಲರಾಗಲಿ ಇಲ್ಲದಿರಲಿ ಭಗವದ್ಭಕ್ತಿಯಿಂದ ಉದ್ರಿಕ್ತರಾಗಿ ತಮ್ಮ

ಭಕ್ತಿಮತ್ತತೆಯನ್ನು ಸಾರಿ ಅನೇಕ ಜನಗಳ ಮನಸ್ಸನ್ನು ಪರಿವರ್ತಿಸಿದರು. ಅನೇಕರು ಉತ್ತಮಗಾಯಕರಾದುದರಿಂದ ಶಾಶ್ವತವಾದ ಭಕ್ತಿರಸಪ್ರಧಾನವಾದ ಸಾಹಿತ್ಯವನ್ನು ರಚಿಸಿ ಸಹಾಯಮಾಡಿದರು.

ನಂಬಿ ಆಂಡಾಳ್ ನಂಬಿ ಮತ್ತು ನಾಥಮುನಿ ಈ ಇಬ್ಬರು ಈ ಎರಡು ಜಾತಿಯ ಭಕ್ತಿಗೀತೆಗಳನ್ನೂ ಸಂಗ್ರಹಿಸಿ ಮುಂದಿನ ಕಾಲದವರಿಗೆ ಒದಗಿಸಿಕೊಟ್ಟಿದ್ದಾರೆ. ನಂಬಿಯವರು ಶಿವಗೀತೆಗಳನ್ನು ಒಟ್ಟುಗೂಡಿಸಿ ೧೧ 'ತಿರುಮುರೈ'ಗಳನ್ನಾಗಿ ಭಾಗಿಸಿದ್ದಾರೆ. ಮೊದಲನೆಯ ಏಳಕ್ಕೆ 'ತೇವಾರಮ್' ಎಂದು ಹೆಸರು. (ತೇ=ದೇವರ, ಆರಂ=ಹಾರ); ಇದರಲ್ಲಿ ಸಂಬಂಧರ್, ಅಪ್ಪರ್, ಸುಂದರರ್, ಇವರ ಗೀತೆಗಳಿವೆ. ಎಂಟನೆಯ 'ತಿರುವಾಚಕಮ್' ಮಾಣಿಕ್ಯವಾಚಕರ ಕೃತಿಗಳು. ಒಂಬತ್ತನೆಯ 'ತಿರುಇಶೈಪ್ಪಾ' ಹಲವಾರು ಜನದ ಸಂಗ್ರಹ. ಹತ್ತನೆಯದು ತಿರುಮಾಲಾರರ ಕೃತಿಗಳು. ಹನ್ನೊಂದನೆಯದು 'ತಿರುಮುರೈ'. ಇವುಗಳಲ್ಲಿ ಸಕ್ಕೀರಾರಿಂದ ನಂಬಿ ಆಂಡಾಳ್ ನಂಬಿಯವರೆಗಿನ ಎಲ್ಲ ಭಕ್ತರ ಗೀತೆಗಳೂ ಸಂಗ್ರಹೀತವಾಗಿವೆ. ಹಾಗೆಯೇ ನಾಥಮುನಿಗಳು ವೈಷ್ಣವ ಆಳ್ವಾರ್ರುಗಳ ಎಲ್ಲ ಕೃತಿಗಳನ್ನೂ 'ನಾಲಾಯಿರ ದಿವ್ಯಪ್ರಬಂಧಂ' ಎಂಬ ಹೆಸರಿನಲ್ಲಿ ಶೇಖರಿಸಿದ್ದಾರೆ. ಇವು ೧೨ ಆಳ್ವಾರುಗಳಿಂದ ಅನುಗ್ರಹೀತವಾದವು. ಇವರಲ್ಲಿ ಆಂಡಾಳ್ ಎಂಬ ಭಕ್ತೆಯೂ ಇದ್ದಾಳೆ. ನಾಲಾಯಿರ ಪ್ರಬಂಧದಲ್ಲಿ ತಿರುಮಂಗೈ ನಮ್ಮಾಳ್ವಾರ್ ಪೆರಿಯಾಳ್ವಾರ್, ತಿರುಮಳಿಶೈ, ಆಂಡಾಳ್ ಇವರ ಕೃತಿಗಳೇ ಬಹುಭಾಗ.

'ತಿರುಮುರೈ'ಯ ಕರ್ತೃವಾದ ತಿರುಮೂಲರು ದಾಕ್ಷಿಣಾತ್ಯ ಶೈವಸಿದ್ಧಾಂತದ ಪ್ರಸ್ಥಾನಕರೆಂದು ಹೇಳಬಹುದು. ಇವರ 'ತಿರುಮಂತ್ರ'ವು ಬಹು ಗಹನವಾದ ಸಿದ್ಧಾಂತ ಗ್ರಂಥ. ಇದರಲ್ಲಿ ಅವರು ಸ್ವಾನುಭವದಿಂದ 'ಪತಿಪಶುಪಾಶ' ಸಿದ್ಧಾಂತವನ್ನು ನಿರೂಪಿಸಿದ್ದಾರೆ. ಇವರಿಗೆ ಜೀವಾತ್ಮ ಪರಮಾತ್ಮಗಳೆರಡೂ ಸತ್ಯ. ಇವರ ದೃಷ್ಟಿಯಲ್ಲಿ ಪ್ರೇಮವೇ—ಭಕ್ತಿಯೇ—ಶಿವ. ಶಿವನೇ ಪ್ರೇಮ. ಪ್ರೇಮವೇ ಕೊನೆಯಲ್ಲಿ ಶಾಶ್ವತವಾದ ಶಿವನ ರೂಪವನ್ನು ತಾಳುವುದು. ಇದಕ್ಕೆ ಚರ್ಯೆ, ಕ್ರಿಯೆ, ಯೋಗ, ಜ್ಞಾನಗಳು ಸಾಧನ. ಕೊನೆಯ ಮೆಟ್ಟಲಿನಲ್ಲಿ ಭಕ್ತನಿಗೆ ಭಗವಂತನ ಕೃಪಾವೃಷ್ಟಿಯಾಗುವುದು. ಇದಕ್ಕೆ ಶಕ್ತಿನಿಪಾತವೆಂದು ಹೆಸರು. ಇವರ ಪ್ರಕಾರ ಸಿದ್ಧಾಂತಗಳು ಶುದ್ಧ, ಅಶುದ್ಧ, ಮಾರ್ಗ, ಕಡಂಶುದ್ಧ ಎಂದು ನಾಲ್ಕು ಭೇದ. ಶುದ್ಧಸಿದ್ಧಾಂತದಲ್ಲಿ ಸನ್ಮಾರ್ಗ ಪ್ರಾಧಾನ್ಯ. ತಮ್ಮದು ಶುದ್ಧಸಿದ್ಧಾಂತ. ಕಡಂಶುದ್ಧರು ಯಾವ ಬಾಹ್ಯಸಾಧನೆಗಳನ್ನೂ ಅಪೇಕ್ಷಿಸದೆ ಅದ್ವೈತದ ಸದ್ಯೋಮಾರ್ಗಿಗಳಂತೆ ನೇರವಾಗಿ ಶಿವನಲ್ಲಿ ಐಕ್ಯವಾಗುವರು. 'ತಿರುಮಂತ್ರ'ವು ಮೂರು ಸಾವಿರ ಮಂತ್ರಗಳಿಂದ

ಕೂಡಿ ತಮಿಳುಶೈವರಿಂದ ವಿಶೇಷವಾಗಿ ಗೌರವಿಸಲ್ಪಟ್ಟಿದೆ. ಇದರಲ್ಲಿ ವೇದ ಮತ್ತು ಆಗಮಗಳ ಸಮನ್ವಯ ಬಹು ತೃಪ್ತಿಕರವಾಗಿ ನಿರೂಪಿತವಾಗಿದೆ.

ಒಂದು ಶತಮಾನ ಕಳೆದ ಮೇಲೆ ಮಾಣಿಕ್ಯವಾಚಕರೂ ಇತರ ಮೂರು ಸಮಯಾಚಾರ್ಯರುಗಳಾದ ಅಪ್ಪರ್, ಸಂಬಂಧರ್ ಮತ್ತು ಸುಂದರರೂ ಅವತರಿಸಿ ತಮಿಳುನಾಡಿನಲ್ಲಿ ಭಕ್ತಿಕಹಳೆಯನ್ನೂದಿ ಜನರನ್ನು ಹೊಡೆದೆಬ್ಬಿಸಿ ಭಗವಂತನಲ್ಲಿ ಶರಣಾಗತಿ ಧರ್ಮವನ್ನು ಉಪದೇಶಮಾಡಿದರು. ಇವರೆಲ್ಲ ಸುಮಾರು ಏಳನೆಯ ಶತಮಾನದವರು.

ಅಪ್ಪರ್ ಪಲ್ಲವರಾಜನಾದ ಒಂದನೆಯ ಮಹೇಂದ್ರವರ್ಮನ ಕಾಲದವರು. ಇವರು ತಿರುಮುನ್ನೈಪ್ಪಾಡಿನ ತಿರುವಾಮೂರು ಎಂಬ ಸ್ಥಳದಲ್ಲಿ ಹುಟ್ಟಿದವರು. ಬಾಲ್ಯದಲ್ಲಿ ಇವರಿಗೆ ಮರುಣೀಕ್ಕಿಯಾರ್ (ಮರುಳನ್ನು ನೀಗಿದವರು) ಎಂಬ ಹೆಸರಿತ್ತು. ವೆಳ್ಳಾಳ ಜಾತಿಯವರು. ಇವರು ಶೈವರಾಗಿದ್ದು ಜೈನರಾಗಿ ಪುನಃ ತಮ್ಮ ಅಕ್ಕನಾದ ತಿಲಕವತಿಯ ಪ್ರೇರಣೆಯಿಂದ ಶೈವರಾಗಿ ಆ ಧರ್ಮವನ್ನು ಪ್ರಚಾರಮಾಡಿ ರಾಜನಾದ ಮಹೇಂದ್ರವರ್ಮನನ್ನೂ ಶೈವನನ್ನಾಗಿಸಿದರು. ಇವರು ಬಹು ದೀರ್ಘ ಕಾಲ ಬಾಳಿ ಸಂಬಂಧರೊಡನೆಯೂ ಸ್ವತಂತ್ರವಾಗಿಯೂ ಹಲವು ಶೈವಕ್ಷೇತ್ರಗಳಲ್ಲಿ ತೀರ್ಥಯಾತ್ರೆಮಾಡಿ ಬಗೆಬಗೆಯಾಗಿ ತೇವಾರವನ್ನು ಹಾಡಿ ತಿರುಪುಗಲೂರಿನಲ್ಲಿ ಶಿವೈಕ್ಯರಾದರು. ಇವರಿಗೆ ತಿರುನಾವಕ್ಕರಸು, ತಾಂಡಕರಾಜ, ವಾಗೀಶರ್ ಮೊದಲಾದ ಹೆಸರುಂಟು. ತೇವಾರದಲ್ಲಿ ಇವರ ೩೧೩ ಗೀತೆಗಳಿವೆ. ಅವುಗಳ ನಾದ ಮಾಧುರ್ಯ, ವಿಷಯಗೌರವ, ಭಕ್ತಿಭಾವನೆ ಅವರ ತುಂಬುಜೀವನದ ಪ್ರತಿಬಿಂಬವಾಗಿ ಜ್ಞಾನಭಕ್ತಿಗಳಿಂದ ಪರಿಪುಷ್ಟವಾಗಿವೆ. ಅವು ಸಾಮಾನ್ಯ ಜನರನ್ನೇ ಕುರಿತದ್ದು. ಪ್ರಕೃತಿಚಿತ್ರಗಳಿಂದ ಆಹ್ಲಾದಕರವಾಗಿವೆ.

ಪಲ್ಲವರಾಜನಾದ ಇಮ್ಮಡಿ ಮಹೇಂದ್ರವರ್ಮನ ಕಾಲದವರು ತಿರುಜ್ಞಾನ ಸಂಬಂಧರು. ತಿರುಮಂಗೈಯಾಳ್ವಾರ್ ಸಮಕಾಲೀನರು. ತಂದೆ ಶಿವಪಾದಹೃದಯರು. ತಾಯಿ ಭಗವತಿ ಅಮ್ಮೈಯಾರ್. ಶೀರ್ಕಾಟಿ (ಈಗಿನ ಶಯ್ಯಾಳಿ) ಯಲ್ಲಿ ಬ್ರಾಹ್ಮಣ ಕುಲದಲ್ಲಿ ಪರಮಾತ್ಮನ ವರಪ್ರಸಾದದಿಂದ ಹುಟ್ಟಿದವರು. ತಮ್ಮ ಮೂರನೆಯ ವರ್ಷದಲ್ಲಿಯೇ ಒಂದು ಕೊಳದ ಸಮೀಪದಲ್ಲಿ ಶಿವಪಾರ್ವತಿಯರನ್ನು ಕಂಡು ಅವರ ಸ್ತೋತ್ರರೂಪವಾದ ಅನೇಕ ತೇವಾರಗಳನ್ನು ಹಾಡಿದರು. ಅಲ್ಲಿಂದ ಮುಂದೆ ತಂದೆಯ ಕಂಕುಳಿನಲ್ಲಿಯೇ ಶೈವಕ್ಷೇತ್ರಗಳನ್ನೆಲ್ಲಾ ಸಂದರ್ಶಿಸಿ, ಅಪ್ಪರನ್ನು ಸಂಧಿಸಿ ಜೈನಮತವನ್ನು ಖಂಡನಮಾಡಿ ಜಯಶೀಲರಾಗಿ ಶಿವೈಕ್ಯರಾದರು. ಇವರು ಸಾವಿರಕ್ಕಿಂತ ಹೆಚ್ಚಿನ ಗೀತೆಗಳನ್ನು ರಚಿಸಿದ್ದಾರೆಂದು ಪ್ರತೀಯಿದ್ದರೂ ೩೮೪ ಮಾತ್ರ

ಉಪಲಬ್ಧವಾಗಿವೆ. ಇವು ಬೆಡಗುವಿಲಾಸಗಳಿಂದ ಕೂಡಿದ್ದರೂ ಸ್ವಲ್ಪ ಕ್ಲಿಷ್ಟ. ಅಚ್ಚ ತಮಿಳುಶೈಲಿಯಲ್ಲಿವೆ. ಸಂಬಂಧರು ಉಪದೇಶಮಾಡಿದ ಉಪಾಸನಾ ರೀತಿ ಸತ್ಪುತ್ರ ಮಾರ್ಗ. ಸಂಬಂಧರ 'ಪದಿಕ'ಗಳಲ್ಲಿ ಕಂಡುಬರುವ ಪ್ರಧಾನ ವಿಷಯವೆಂದರೆ ಅವರಿಗೆ ಜೈನರಲ್ಲಿದ್ದ ಅಸಹ್ಯತೆ; ಅವರು ಜನರನ್ನು ದುರ್ಮಾರ್ಗಕ್ಕೆ ಎಳೆಯುತ್ತಿದ್ದಾರೆಂಬುದನ್ನು ತಮ್ಮ ಗೀತೆಗಳಲ್ಲಿ ಸ್ಪಷ್ಟವಾಗಿ ವಿವರಿಸಿದ್ದಾರೆ. ಅವರು ನಾಸ್ತಿಕರನ್ನು ಎದುರಿಸಿ ಆಸ್ತಿಕ ಶೈವಪಂಥವನ್ನು ಸ್ಥಾಪಿಸುವುದಕ್ಕಾಗಿಯೇ ಅವತರಿಸಿದುದು. ದಕ್ಷಿಣ ಭಾರತದಲ್ಲಿ ಜೈನಧರ್ಮದ ಅವನತಿಗೆ ಅವರು ಪ್ರಧಾನಕಾರಣವೆಂದು ಊಹಿಸಲ್ಪಟ್ಟಿದೆ. ಇವರು ಇನ್ನೂ ಮೂರು ವರ್ಷವಾಗಿರುವಾಗಲೇ ಮಧುರೆಯ ರಾಣಿಯಾದ ಮಂಗೈಯಕ್ಕರಿಸಿ ಮತ್ತು ಮಂತ್ರಿಯಾದ ಕುಲಚ್ಚರಿಯಾರ್ರ ಪ್ರೇರಣೆಯ ಮೇಲೆ ಅಲ್ಲಿದ್ದ ಜೈನರ ಹಾವಳಿಯನ್ನು ತಪ್ಪಿಸಿ ರಾಜನನ್ನು ಶೈವನನ್ನಾಗಿಸಿದರೆಂಬುದು ಅವರ ಚರಿತ್ರೆಯಿಂದ ತಿಳಿದುಬರುತ್ತದೆ.

ಮಾಣಿಕ್ಯವಾಚಕರ ಜೀವನಕಥೆಯು 'ತಿರುವಿಳೈಯಾಡಲ್' ಮತ್ತು 'ವಾದವೂರಾರ್ ಪುರಾಣ'ಗಳಲ್ಲಿ ಉಕ್ತವಾಗಿದೆ. ಮಧುರೆಯ ಸಮೀಪದಲ್ಲಿರುವ ವಾದವೂರಿನ ಬ್ರಾಹ್ಮಣಕುಲದವರು. ತಮ್ಮ ಮೇಧಾಶಕ್ತಿಯಿಂದ ಪಾಂಡ್ಯದೊರೆಯ ಪ್ರಧಾನಿಯಾಗಿದ್ದು ಅವನ ಪ್ರೀತಿಗೆ ಪಾತ್ರರಾಗಿ ಎಲ್ಲ ವಿಧವಾದ ಭೋಗೋಪಭೋಗಗಳನ್ನೂ ಅನುಭವಿಸಿ ಐಹಿಕದಲ್ಲಿ ಜುಗುಪ್ಸೆಯನ್ನು ತಾಳಿ ಶಿವಮಂತ್ರಾಕ್ಷರೀ ಉಪದೇಶವನ್ನು ತಿರುಪ್ಪೆರುಂತುರೈ ಎಂಬ ಸ್ಥಳದಲ್ಲಿ ಕುದುರೆಗಳನ್ನು ವ್ಯಾಪಾರಮಾಡುತ್ತಿದ್ದಾಗ ಪ್ರತ್ಯಕ್ಷನಾದ ಶಿವನಿಂದ ಪಡೆದು ಶಿವಧ್ಯಾನದಲ್ಲಿ ತೊಡಗಿ ಅನೇಕ ಭಕ್ತಿಗೀತೆಗಳನ್ನು ಹಾಡಿ ಸಂಧಿಸಿದ ಬೌದ್ಧರನ್ನು ಸೋಲಿಸಿ ಕೊನೆಯಲ್ಲಿ ಚಿದಂಬರದಲ್ಲಿ ನೆಲಸಿ ಶಿವೈಕ್ಯರಾದರು.

'ತಿರುವಾಚಕ'ವು ಮಾಣಿಕ್ಯವಾಚಕರ ಗ್ರಂಥ. ಇದನ್ನು ದ್ರಾವಿಡ ಉಪನಿಷತ್ತೆಂದು ಕರೆಯಬಹುದು. ಇದರಲ್ಲಿ ಜೀವನು ಅಜ್ಞಾನಾವಸ್ಥೆಯಿಂದ ದಿವ್ಯಜ್ಞಾನಾವಸ್ಥೆಗೆ ಏರಲು ಮಧ್ಯೆ ಬರುವ ಎಲ್ಲ ಮೆಟ್ಟಿಲುಗಳನ್ನೂ ನೋಡಬಹುದು. ಅಥವಾ ಇದನ್ನು ಮಾಣಿಕ್ಯವಾಚಕರ ಆಧ್ಯಾತ್ಮಚರಿತ್ರೆಯೆಂದೂ ಹೇಳಬಹುದು. ಅವರು ಅನುಭವಿಸಿದ ಪ್ರತಿಯೊಂದು ಭಾವವನ್ನೂ ಕಾಣಬಹುದು. ಅವರ ಹೃದಯಕವಾಟವು ಅಲ್ಲಿ ತೆರೆದಿಟ್ಟಿದೆ. ಇದು ಎಂತಹ ಪಾಷಾಣಹೃದಯವನ್ನಾದರೂ ಕರಗಿಸಿ ಪಾಪವಿಮುಕ್ತವನ್ನಾಗಿ ಮಾಡುವುದೆಂಬುದು ಸತ್ಯ. 'ತಿರುವಾಚಕ'ವು ತಮಿಳು ಶೈವರ ಸಾರಭೂತವಾದ ಶರಣಾಗತಿ ತತ್ತ್ವವನ್ನು ಸರಳವಾಗಿ ವರ್ಣಿಸುತ್ತದೆ.

ಸುಂದರರ್ ಅಥವಾ ಸುಂದರಮೂರ್ತಿಯು ಶೈವಸಮಯಾಚಾರ್ಯರಲ್ಲಿ ನಾಲ್ಕನೆ

ಯವರು. ಅವರ ಅತ್ಯಲ್ಪವಾದ ೧೮ ವರ್ಷ ವಯಸ್ಸಿನಲ್ಲಿ ಅವರು ಜೀವಿಸಿದ ದಿವ್ಯ ಜೀವನ ಆಶ್ಚರ್ಯಕರವಾದುದು. ಇವರು ಸಹಸ್ರಾರು ಗೀತೆಗಳನ್ನು ರಚಿಸಿರುವಂತೆ ಪ್ರತೀತಿ ಇದ್ದರೂ ೧೦೦ ಮಾತ್ರ ಉಪಲಬ್ಧವಾಗಿವೆ. ಇವರ 'ತಿರುತ್ತೊಂಡ ತ್ತೊಗೈ' ಎಂಬ ಗೀತೆಯಲ್ಲಿ ಪ್ರಾಚೀನ ಶೈವಭಕ್ತರನ್ನೆಲ್ಲ ಸ್ತುತಿಸಿದ್ದಾರೆ. ಇದೇ ಮುಂದೆ ಬಂದ 'ಪೆರಿಯ ಪುರಾಣ'ಕ್ಕೆ ಆಕರವಾಗಿರಬೇಕು. ಭಗವದ್ಭಕ್ತಿ ಮತ್ತು ಭಾವ ಸೌಂದರ್ಯಗಳಿಂದ ಕೂಡಿದ ಇವರ ಹಾಡುಗಳು ತಮಿಳುಶೈವರ ಬಾಯ್ನುಡಿಯಾಗಿವೆ.

ಶೈವಸಮಯಾಚಾರ್ಯರುಗಳಾದ ಅಪ್ಪರ್, ಸಬಂಧರ್, ಸುಂದರರ್, ಮಾಣಿಕ್ಯ ವಾಚಕರು ಕ್ರಮವಾಗಿ ಸನ್ಮಾರ್ಗ, ಸತ್ಪುತ್ರಮಾರ್ಗ, ದಾಸ್ಯಮಾರ್ಗ, ಸಖಾಮಾರ್ಗ ಗಳನ್ನು ಉಪದೇಶಿಸಿದರೆಂದು ಪ್ರಸಿದ್ಧಿಯಾಗಿದೆ.

ಆಳ್ವಾರುಗಳು—ವೈಷ್ಣವಭಕ್ತರಿಗೆ ಆಳ್ವಾರ್ರೆಂದು ಹೆಸರು. ಆಳ್ವಾರ್ರೆಂದರೆ ಭಕ್ತಿಯಲ್ಲಿ ಮುಳುಗಿದವರು ಎಂದರ್ಥ. ಇವರು ಹನ್ನೆರಡು ಜನ. ಪೊಯ್ಗೈ, ಪೂದತ್ತಾರ್, ಪೇಯಾಳ್ವಾರ್, ತಿರುಮಟಿಶೈ, ನಮ್ಮಾಳ್ವಾರ್, ಮಧುರಕವಿ, ಕುಲಶೇಖರ, ಪೆರಿಯಾಳ್ವಾರ್, ಆಂಡಾಳ್, ತೊಂಡರ್ ಅಡಿಪ್ಪೊಡಿ, ತಿರುಪ್ಪಾಣಿ, ತಿರುಮಂಗೈ ಎಂಬುವರೇ ಈ ಹನ್ನೆರಡು ಜನ. ಸಂಪ್ರದಾಯ ಗ್ರಂಥಗಳಲ್ಲಿ ಆಳ್ವಾರ್ರುಗಳ ಕಾಲ ಕ್ರಿ. ಪೂ. ೪೨೦೩ ರಿಂದ ೨೭೦೬ ಎಂದು ನಿರೂಪಿತವಾಗಿದೆ. ಇತಿಹಾಸ ಕಾರರು ಅವರ ಕಾಲವನ್ನು ಕ್ರಿ.ಶ. ೫೦೦ರಿಂದ ೮೦೦ ಇರಬಹುದೆಂದು ಊಹಿಸಿದ್ದಾರೆ.

ಆಳ್ವಾರ್ರುಗಳು ತಮಿಳುದೇಶದ ನಾನಾಕಡೆಗಳಲ್ಲಿ ಉದ್ಭವಿಸಿದವರು. ಮೊದಲು ನಾಲ್ಕು ಜನ ಪಲ್ಲವರಾಜ್ಯದವರು. ಕೊನೆಯ ಮೂರುಮಂದಿ ಚೋಳದೇಶದವರು. ಕುಲಶೇಖರರು ಚೇರನಾಡಿನವರು. ಉಳಿದವರು ಪಾಂಡ್ಯಭೂಮಿಜರು. ನಮ್ಮಾಳ್ವಾರ್ ಇವರಲ್ಲಿ ಪ್ರಸಿದ್ಧರು. ಆಂಡಾಳ್ ಭಕ್ತಶಿಖಾಮಣಿಯಾದ ಸ್ತ್ರೀ. ನಾಯನಾರ್ರಂತೆಯೇ ಆಳ್ವಾರ್ರುಗಳು ವಿವಿಧ ಜಾತಿ, ಕುಲ, ಮಟ್ಟದವರು. ಅವರಿಗೆಲ್ಲಾ ಸಮಾನವಾಗಿರುವುದು ವಿಷ್ಣುಭಕ್ತಿ. ನಮ್ಮಾಳ್ವಾರ್ ವೆಳ್ಳಾಳರು. ತಿರುಮಂಗೈ ಕಳ್ಳರ್ ಕುಲದವರು. ಕುಲಶೇಖರರು ರಾಜಋಷಿ. ಪೆರಿಯಾಳ್ವಾರ್ ಬ್ರಾಹ್ಮಣರು. ತಿರುಪ್ಪಾಣಿ ಅಂತ್ಯಜರು.

ನಾಲಾಯಿರ ದಿವ್ಯಪ್ರಬಂಧಗಳೆಂದು ಪ್ರಸಿದ್ಧವಾಗಿರುವ ಇವರ ಗೀತೆಗಳು ನಾಲ್ಕು ಭಾಗಗಳಾಗಿವೆ. ಪೆರಿಯಾಳ್ವಾರ್, ಆಂಡಾಳ್, ಕುಲಶೇಖರ, ತಿರುಮಟಿಶೈ, ತೊಂಡರಡಿಪ್ಪೊಡಿ ಮಧುರಕವಿ ಇವರ ಕೃತಿಗಳನ್ನೊಳಗೊಂಡ ಮೊದಲ ಸಾವಿರಕ್ಕೆ 'ತಿರುಮೊಟಿ' ಎಂದು ಹೆಸರು. ಎರಡನೆಯ ಸಾವಿರಕ್ಕೆ ಪೆರಿಯ ತಿರುಮೊಟಿ ಎಂಬ

ನಾಮಧೇಯವಿದೆ. ಇವು ತಿರುಮಂಗೈ ಕೃತಿಗಳು. ಮೂರನೆಯದು 'ಇಯರ್ಪ್ಪಾ'. ಇದರಲ್ಲಿ ಮೊದಲು ಮೂರು ಆೞ್ವಾರರುಗಳ ಕವನಗಳೂ ತಿರುಮೞಿಶೈ ನಮ್ಮಾೞ್ವಾರ್ ತಿರುಮಂಗೈಯಾೞ್ವಾರ್ ಅವರ ಕೆಲವು ಭಾಗಗಳೂ ಇವೆ. ನಾಲ್ಕನೆಯದೇ ತಿರುವಾಯ್ಮೊೞಿ. ಇದು ಪೂರ್ಣವಾಗಿ ನಮ್ಮಾೞ್ವಾರ್ರ ಅನುಭವಗೀತೆ.

ಮೊದಲು ಮೂರು ಆೞ್ವಾರುಗಳೂ ವೆಣ್ಬಾ ಛಂದಸ್ಸಿನಲ್ಲಿ ೧೦೦ ಪಾಶರಗಳುಳ್ಳ ಒಂದೊಂದು ಅಂದಾದಿ (ಅಂತ್ಯಾದಿ) ಯನ್ನು ರಚಿಸಿದ್ದಾರೆ. ಭಕ್ತನ ಮೃದುಸರಳ ಹೃದಯವನ್ನು ಇಲ್ಲಿ ಕಾಣಬಹುದು. ಸಾಂಪ್ರದಾಯಿಕ ಕತೆಯ ಪ್ರಕಾರ ಈ ಮೂವರೂ ಒಟ್ಟಿಗೆ ಭಗವಂತನನ್ನು ಕಂಡು ಹಾಡಿದರು. ತಿರುಮೞಿಶೈ ವೀರ ವೈಷ್ಣವರು. ಜೈನ. ಬೌದ್ಧ ಶೈವರಿಗೆ ಎಂದೂ ಮಣಿಯದವರು. ಅವರ ವೈಷ್ಣವನಿಷ್ಠೆ ಬಲುಹಿರಿದು.

ನಮ್ಮಾೞ್ವಾರ್ ಮತ್ತು ಮಧುರಕವಿ ಇವರಿಬ್ಬರನ್ನೂ ಜೊತೆಯಲ್ಲಿ ಅಭ್ಯಾಸ ಮಾಡುವುದು ಲೇಸು. ನಮ್ಮಾೞ್ವಾರ್ ಪ್ರಥಮವರ್ಗದ ಅನುಭಾವಿ, ದೈವಮತ್ತರಾದ ಜೀವಿ. ಮಧುರಕವಿಯು ಅವರನ್ನು ಹುಡಕಿಕೊಂಡು ಬಂದು ಅವರ ಭಕ್ತ್ಯತಿಶಯವನ್ನು ಮನಗಂಡು ಅದನ್ನು ಪರಿಪೋಷಿಸಿ ಅವರ ಬಾಯಿಂದ ಬಂದ ಗೀತೆಗಳನ್ನೆಲ್ಲಾ ಸಂಗ್ರಹಿಸಿ ಮುಂದಿನ ತಲೆಮಾರಿಗೆ ಉಳಿಸಿಕೊಟ್ಟಿದ್ದಾರೆ. ನಮ್ಮಾೞ್ವಾರ್ರ ಗೀತೆಗಳ ನಾದ ಮಾಧುರ್ಯ, ಭಾವದ ಆಳ, ಸೌಂದರ್ಯೋಪಾಸನೆ ಅನುಭವೈಕವೇದ್ಯ. ಆೞ್ವಾರ್ರವರು ಪ್ರಕೃತಿ ಚಿತ್ರವನ್ನಾಗಲಿ ಆತ್ಮಾನುಭವವನ್ನಾಗಲಿ ಪರಮಾತ್ಮ ಸಾಕ್ಷಾತ್ಕಾರವನ್ನಾಗಲಿ ಬಹು ಹೃದಯಂಗಮವಾಗಿ ವರ್ಣಿಸಬಲ್ಲರು. ಇವರು 'ತಿರುವಿರುತ್ತಮ್,' 'ತಿರುವಾಶರಿಯಮ್' 'ಪೆರಿಯತಿರುವಂದಾದಿ' 'ತಿರುವಾಯ್‌ಮೊೞಿ' ಎಂಬ ನಾಲ್ಕು ಪ್ರಬಂಧಗಳನ್ನು ರಚಿಸಿದ್ದಾರೆ. ತಿರುವಾಯ್‌ಮೊೞಿಯು ಹತ್ತು ಶತಕಗಳಾಗಿಯೂ ನೂರು ದಶಕಗಳಾಗಿಯೂ ವಿಭಾಗವಾಗಿದೆ. ತಿರುವಾಯ್‌ಮೊೞಿಯಲ್ಲಿ ಆೞ್ವಾರ್ರು ತಮ್ಮನ್ನು ನಾಯಕಿಯನ್ನಾಗಿ ಭಾವಿಸಿಕೊಂಡು ನಾಯಕನಾದ ಪರಮಾತ್ಮನ ಸೇರುವಿಕೆಗಾಗಿ ತವಕಪಡುತ್ತಿರುವಂತೆ ವರ್ಣಿಸುತ್ತಾರೆ. ಈ ಮಧುರಭಾವದ ಪರಾಕಾಷ್ಠತೆಯನ್ನು ಅವರ 'ತಿರುವಿರುತ್ತ' ದಲ್ಲಿ ಕಾಣಬಹುದು. ಅವು ಉತ್ತಮೋತ್ತಮವಾದ ಭಾವಗೀತೆಯೆಂಬುದರಲ್ಲಿ ಸಂದೇಹವಿಲ್ಲ.

ಮಧುರಕವಿ ನಮ್ಮಾೞ್ವಾರ್ರ ಸಾಕ್ಷಾತ್ ಶಿಷ್ಯರು. ಅವರ 'ಕಣ್ಣಿನುಣ್ ಶಿರತ್ತಾಂಬು' ಎಂಬ ಹತ್ತು ಪಾಶರಗಳು ಅವರ ಗುರುವಾದ ನಮ್ಮಾೞ್ವಾರ್ರ ವಿಷಯಕವಾದುವು.

ಪೆರಿಯಾಳ್ವಾರ್ರು (ವಿಷ್ಣುಚಿತ್ತನ್) ಶ್ರೀವಿಲ್ಲಿಪುತ್ತೂರಿನ (ರಾಮನಾಡಿನಲ್ಲಿದೆ) ಬ್ರಾಹ್ಮಣ ಮನೆತನದವರು. ಇವರಿಗೆ ಆಂಡಾಳ್ ಎಂಬ ಕುವರಿಯು ಭೂಮಿಯನ್ನು ಅಗೆಯುತ್ತಿದ್ದಾಗ ಸಿಕ್ಕಿದಳು. ಈಕೆಯನ್ನು ಬಹು ವಿಶ್ವಾಸದಿಂದ ಸಾಕಿ ಶ್ರೀರಂಗ ನಾಥನಿಗೆ ಅರ್ಪಿಸಿದರು. ಇವರ ಕೃತಿಗಳಲ್ಲಿ 'ತಿರುಪ್ಪಲ್ಲಾಂಡು' ಬಹಳ ಬಳಕೆ ಯಲ್ಲಿದೆ. ಇವರು ಸುಮಾರು ೫೦೦ ಪಾಶರಗಳನ್ನು ರಚಿಸಿದ್ದಾರೆ. ಇವುಗಳಲ್ಲೆಲ್ಲಾ ಶಿಶುವಾದ ಕೃಷ್ಣನ ವಿಷಯಕವಾದ ಅಪಾರ ಪ್ರೇಮವು ಕಂಡುಬರುತ್ತದೆ.

ವಿಷ್ಣುಚಿತ್ತರ ಭಕ್ತಕುವರಿಯಾದ ಆಂಡಾಳ್ (ಕೋದೈ) ಜನನಪ್ರಭೃತಿ ದೈವ ಭಕ್ತಿಯಲ್ಲಿ ಮುಳುಗಿ ಅನವರತ ಅವನ ಚಿಂತೆಯಲ್ಲಿಯೇ ತೊಳಲಿ ಕೊನೆಗೆ ಶ್ರೀರಂಗ ನಾಥನಲ್ಲಿ ಐಕ್ಯವಾದಳು. ತಾನು ಗೋಪಿಯರಲ್ಲೊಬ್ಬಳೆಂದು ಭಾವಿಸಿಕೊಂಡು ಕೃಷ್ಣನನ್ನು ಹುಡುಕಿ ಆತನಿಗಾಗಿ ಹಂಬಲಿಸಿ ತನ್ನ ಸರ್ವಸ್ವವನ್ನು ಆತನಿಗರ್ಪಿಸಿ ದ್ದಾಳೆ. 'ನಾಯ್‌ಚ್ಚಿಯಾರ್ ತಿರುಮೊಟಿ' ಮತ್ತು 'ತಿರುಪ್ಪಾವೈ' ಆಕೆಯ ಎರಡು ಭಕ್ತಿಗೀತೆಗಳು. ತಿರುಪ್ಪಾವೈ ಭಕ್ತಿಸುಧೆ, ಗಾನ ಮಧು, ಹೃದಯ ಕೈರವಕ್ಕೆ ತಣ್ಪನ್ನು ಕೊಡುವ ಶಾಂತಿ ವಿಧು.

ಕುಲಶೇಖರರು ತಿರುವಾಂಕೂರಿನ ದೊರೆ. ಸ್ವಲ್ಪ ಸ್ವಲ್ಪವಾಗಿ ಭಗವದ್ಭಕ್ತಿಯಲ್ಲಿ ಲೀನರಾಗುತ್ತ ಕೊನೆಗೆ ರಾಜ್ಯವನ್ನೇ ತೊರೆದು ದೇವಸೇವೆಯಲ್ಲಿ ಮಗ್ನರಾದರು. ಇವರು 'ಪೆರುಮಾಳ್ ತಿರುಮೊಟಿ' ಎಂಬ ೧೮೩ ಪಾಶರಗಳ ಪ್ರಬಂಧವನ್ನು ರಚಿ ಸಿದ್ದಾರೆ. (ಸಂಸ್ಕೃತದಲ್ಲಿ ಇವರು ರಚಿಸಿರುವ 'ಮುಕುಂದಮಾಲೆ' ಬಹು ಸುಂದರ ವಾದ ಸ್ತೋತ್ರ).

ಉಳಿದವರಲ್ಲಿ ತಿರುಪ್ಪಾಣಿ ೧೦ ಪಾಶರಗಳನ್ನೂ ತೊಂಡರಡಿಪ್ಪೊಡಿ ೫೫ ಗೀತೆ ಗಳನ್ನೂ ತಿರುಮಂಗೈ ೧೩೫೧ ಪದ್ಯಗಳನ್ನೂ ರಚಿಸಿದ್ದಾರೆ. ತಿರುಪ್ಪಾಣಿ ಅಂತ್ಯ ಜರಾದರೂ ಶ್ರೀರಂಗನಾಥನ ಆಜ್ಞೆಯ ಮೇರೆ ಬ್ರಾಹ್ಮಣರಾದ ಲೋಕಸಾರ್ಙ್ಗ ಮುನಿಯ ತೋಳಿನ ಮೇಲೆ ದೇವಾಲಯವನ್ನು ಪ್ರವೇಶಿಸಿ ರಂಗನಾಥನಲ್ಲಿ ಐಕ್ಯ ರಾದರು. ತಿರುಪ್ಪಾಣಿಯು ಶ್ರೀರಂಗನಾಥನನ್ನು ಕಂಡಾಗ ತನ್ನ 'ಅಮಲನಾದಿಪಿ ರಾನ್' ಎಂಬ ಹತ್ತು ನುಡಿಗಳನ್ನು ಹಾಡಿದರು.

ವೀರನಾರಾಯಣನೆಂಬ ಹೆಸರುಳ್ಳ ತೊಂಡರಡಿಪ್ಪೊಡಿ ವೇಶ್ಯಾ ಸಂಬಂಧದಿಂದ ಅಧೋಗತಿಗಿಳಿದು ರಂಗನಾಥನ ಕರುಣಾಕಟಾಕ್ಷದಿಂದ ಉದ್ಧಾರವಾಗಿ ಅವನ ವಿಷಯಕವಾದ 'ತಿರುಮಾಲೈ' ಮತ್ತು 'ತಿರುಪ್ಪಳ್ಳಿಯೆೞುಚ್ಚಿ' ಎಂಬ ಎರಡು ಪ್ರಬಂಧಗಳನ್ನು ಹಾಡಿದ್ದಾರೆ. 'ತಿರುಪ್ಪಳ್ಳಿಯೆೞುಚ್ಚಿ' ಮಧುರವಾದ ಸುಪ್ರಭಾತ ಕಾವ್ಯ.

ತಿರುಮಂಗೈಯಾೞ್ವಾರ್ರ ಜೀವನವು ಸಾಹಸಯುತವಾದುದು. ಉತ್ಸಾಹ ಪೂರಿತವಾದುದು. ಅವರ ಕಾವ್ಯದಲ್ಲಿ ನಾದವಿದೆ; ಆಡಂಬರವಿದೆ; ಛಂದಸ್ಸಿನ ಓಟವಿದೆ; ವೈಚಿತ್ರ್ಯಗಳಿವೆ. ಅನುಭಾವಿಯ ದೃಷ್ಟಿಯಿಂದ ಆಳ ಕಡಿಮೆ.

ಆೞ್ವಾರ್ರುಗಳ ಜೀವನ ವಿವರಗಳಲ್ಲಿಯೂ ಅವರ ಕಾಲ ದೃಷ್ಟಿಯಲ್ಲಿಯೂ ವೈಯಕ್ತಿಕ ಕೃತಿಗಳ ಗುಣತಾರತಮ್ಯಗಳಲ್ಲಿಯೂ ಭಿನ್ನಾಭಿಪ್ರಾಯವಿದ್ದರೂ ನಾಲಾಯಿರ ಪ್ರಬಂಧದ ಆಧ್ಯಾತ್ಮಿಕ ಬೆಲೆಯ ವಿಷಯದಲ್ಲಿ ಎಲ್ಲರೂ ಮಣಿಯಬೇಕಾಗಿದೆ.

ತಮಿಳು ಸಾಹಿತ್ಯ ಪ್ರಪಂಚದಲ್ಲಿ ೯-೧೦ ನೆಯ ಶತಮಾನಗಳು ಅಷ್ಟು ತೇಜೋಮಯವಾಗಿಲ್ಲ. ಸಮಯಾಚಾರ್ಯರೂ ಆೞ್ವಾರ್ರುಗಳೂ ಆದಮೇಲೆ ಚೋಳರು ಸುಪ್ರತಿಷ್ಠಿತರಾಗುವವರೆಗೆ ಅಂದರೆ ಕ್ರಿ.ಶ. ೮೦೦ ರಿಂದ ೧೦೦೦ ವರ್ಷದವರೆಗೆ ಸುಮಾರು ಎರಡು ಶತಮಾನಗಳ ಕಾಲ ತಮಿಳಿನಲ್ಲಿ ಉದ್ದಾಮ ಗ್ರಂಥಗಳಾವುವೂ ಹೊರಬಿದ್ದಿರುವಂತೆ ಕಾಣುವುದಿಲ್ಲ. ಇದಕ್ಕೆ ಈ ಕಾಲದಲ್ಲಿ ಸರಿಯಾದ ರಾಜಾಶ್ರಯವಿಲ್ಲದುದು ಕಾರಣವಿರಬಹುದೋ ಏನೊ? ಈ ಶತಮಾನದ ಕವಿಗಳಲ್ಲಿ ಇಡೈಕ್ಕಾಡರ್, ಕಲ್ಲಾಡರ್, ಪೆರುಂದೇವನಾರ್, ದಿವಾಕರರ್ ಮತ್ತು ಪಿಂಗಳರ್, ಇರೈನಾರ್, ಅಯ್ಯನ್ ಆರಿತನಾರ್, ವಾಮನಾಚಾರ್ ಮೊದಲಾದವರನ್ನು ಹೆಸರಿಸಬಹುದು. ಇವರಲ್ಲಿ ಇಡೈಕ್ಕಾಡರ್ ಚಿತ್ರಕವಿತೆಯಲ್ಲಿ ಎತ್ತಿದ ಕೈ. ಪೆರುಂದೇವನಾರ್ ತಮಿಳು ಮಹಾಭಾರತವನ್ನು ರಚಿಸಿದರು. ದಿವಾಕರ ಪಿಂಗಳರು ಒಂದು ನಿಘಂಟನ್ನೂ ಇರೈನಾರ್ ಒಂದು ವ್ಯಾಕರಣವನ್ನೂ ರಚಿಸಿದ್ದಾರೆ.

ಹತ್ತರಿಂದ ಹದಿಮೂರನೆಯ ಶತಮಾನದವರೆಗೆ ಚೋಳ ರಾಜ್ಯವು ಬಹು ಅಭಿವೃದ್ಧಿ ಸ್ಥಿತಿಯಲ್ಲಿತ್ತು. ಇವರ ಆಶ್ರಯದಲ್ಲಿ ಕೆಲವು ಶ್ರೇಷ್ಠಗ್ರಂಥಗಳು ರಚಿತವಾದುವು. ಶೆಕ್ಕೀೞಾರ್ರ 'ಪೆರಿಯ ಪುರಾಣಮ್' ಕಂಬರ 'ರಾಮಾಯಣಮ್' ಈ ಕಾಲದ ಗ್ರಂಥಗಳು. ಶೆಕ್ಕೀೞಾರ್ ಕುಲೋತ್ತುಂಗ ಚೋಳನ ಕಾಲದವರು. ವೆಳ್ಳಾಳ ಕುಲದವರು. ಮದರಾಸಿನ ಸಮೀಪದಲ್ಲಿರುವ ಕುನ್ರತ್ತೂರಿನಲ್ಲಿ ಜನಿಸಿದವರು. ಇವರ ಮೊದಲ ಹೆಸರು ಅರುಣ್ಮೊೞಿತ್ತೇವರ್ ಎಂದು. ಇವರ ಹಿರಿಮೆಯನ್ನು ಕಂಡು ಎರಡನೆಯ ಕುಲೋತ್ತುಂಗ ಚೋಳನು ಇವರನ್ನು ತನ್ನ ಪ್ರಧಾನಿಗಳನ್ನಾಗಿ ಮಾಡಿಕೊಂಡು 'ಉತ್ತಮ ಚೋಳಪಲ್ಲವರ್' ಎಂಬ ಬಿರುದನ್ನು ಕೊಟ್ಟನು. ಜೈನನಾದ ರಾಜನನ್ನು ಶೈವನನ್ನಾಗಿಸಲು ಈ ಗ್ರಂಥವನ್ನು ರಚಿಸಿದರೆಂದು ಪ್ರತೀತಿ. ಚಿದಂಬರದ ನಟರಾಜನ ಅನುಗ್ರಹದಿಂದ ಕವಿಯು ಈ ಗ್ರಂಥವನ್ನು ರಚಿಸಿದನು. ಅರುವತ್ತು ಮೂವರು ಪುರಾತನರ ಚರಿತ್ರೆಯೇ ಇದರ ವಸ್ತು. ೪೨೮೮ ಪದ್ಯಗಳಿವೆ. ಈ ಗ್ರಂಥದ ರಚನೆಯಿಂದ ಕವಿಗೆ 'ತೊಂಡರ್ ಶೀರ್‌ಪರವುವಾರ್' ಎಂಬ ಪ್ರಶಸ್ತಿ

ದೊರೆಯಿತು. ಕವಿ ತನ್ನ ಗ್ರಂಥಕ್ಕೆ 'ತಿರುತ್ತೊಂಡರ್ ಪುರಾಣಮ್' ಎಂದು ಹೆಸರಿಟ್ಟಿದ್ದನು. ಈಚೆಗೆ 'ಪೆರಿಯ ಪುರಾಣಮ್' ಎಂಬುದು ಪ್ರಸಿದ್ಧಿಯಾಯಿತು. ಇದು ತೇವಾರದಂತೆಯೇ ಭಕ್ತಿ ಪ್ರಧಾನವಾಗಿ ರಸಮಯವಾಗಿದೆ.

ಜಯಂಕೊಂಡಾನ್ ವಿರಚಿತವಾದ 'ಕಳಿಂಗತ್ತುಪ್ಪರಣಿ'ಯೂ ಕುಲೋತ್ತುಂಗನ ಕಾಲದ್ದೇ. ಆತನ ಕಳಿಂಗಯಾತ್ರೆಯನ್ನು ವರ್ಣಿಸುತ್ತದೆ. ಇದು ಕ್ರಿಯಾಪೂರ್ಣವಾಗಿರುವುದಲ್ಲದೆ ಭಾವಪೂರ್ಣವಾಗಿಯೂ ಇದೆ. ಜಯಂಕೊಂಡಾನ್ ಜೈನನಾಗಿದ್ದು ಆಮೇಲೆ ಶೈವನಾಗಿರಬೇಕು. ಚೋಳನ ಆಸ್ಥಾನ ಕವಿ. ಈತನ ಕಾಲ ೧೦೭೦-೧೧೧೮. ಈತನಿಗೆ ಕವಿ ಚಕ್ರವರ್ತಿಯೆಂಬ ಬಿರುದಿತ್ತು. ಪರಣಿ ಜಾತಿಯ ಸಾಹಿತ್ಯದಲ್ಲಿ ಇದೇ ಮೊದಲನೆಯದು. ರಸಾಲಂಕಾರಯುಕ್ತವಾದ ಪ್ರೌಢ ಕಾವ್ಯ.

ಕಂಬರ್ ತೇರಳುಂದೂರಿನಲ್ಲಿ ಜನ್ಮವೆತ್ತಿದವರು. ಉವಚ್ಚರ್ ಕುಲದವರು. ತಿರುವಣ್ಣೈನೆಲ್ಲೂರಿನ ಶಡೈಯಪ್ಪಮೊದಲಿಯಾರ್ರ ಆಶ್ರಯದಲ್ಲಿದ್ದವರು. ಕಂಬರ್ ಎಂಬುದು ತಂದೆತಾಯಿಗಳು ಇಟ್ಟ ಹೆಸರೆಂದು ಕೆಲವರೂ ಕಾಂಚೀಪುರದ ಏಕಾಂಬರನಾಥನ ಸಂಕ್ಷಿಪ್ತ ನಾಮಧೇಯವೆಂದು ಕೆಲವರೂ ಅಂಕಿತ ನಾಮವೆಂದೇ ಕೆಲವರು ಹೇಳುತ್ತಾರೆ. ಈತನ ಕಾಲ ೯ನೆಯ ಶತಮಾನದಿಂದ ೧೨ನೆಯ ಶತಮಾನದವರೆಗಿನ ಮಧ್ಯಕಾಲದಲ್ಲಿ ಡೋಲಾಯಮಾನವಾಗಿದೆ. ತಮ್ಮ ಗ್ರಂಥವಾದ 'ಕಂಬ ರಾಮಾಯಣ'ದಲ್ಲಿ ತಮ್ಮ ಆಶ್ರಯದಾತರನ್ನು ಹೊಗಳಿದ್ದಾರೆ. ಕಾಳಿಯ ಶಕ್ತಿಯಿಂದ ಅದ್ಭುತ ಕವಿತಾಶಕ್ತಿಯನ್ನು ಪಡೆದು ಕುಲೋತ್ತುಂಗ ಚೋಳನ ಆಸ್ಥಾನ ಕವಿಯಾಗಿ ಕವಿ ಚಕ್ರವರ್ತಿಯೆಂಬ ಬಿರುದನ್ನು ಪಡೆದರು. ವಾಲ್ಮೀಕಿರಾಮಾಯಣದ ೨೪೦೦೦ ಗ್ರಂಥಗಳನ್ನು ೧೨೦೦೦ ಗ್ರಂಥಗಳಲ್ಲಿ ಸಂಗ್ರಹಿಸಿದ್ದಾರೆ. ವಾಲ್ಮೀಕಿಯನ್ನು ಬಹು ಸ್ವೇಚ್ಛ್ಯಾನುಸಂಧಾನದಿಂದ ಹೊಗಳಿದ್ದಾರೆ. ತಾವು ವೈಷ್ಣವರಾದರೂ ಶೈವ ಕ್ರಮದಲ್ಲಿ ಶಿವನನ್ನು ಸ್ತುತಿಸಿರುವುದು ಇವರ ಹೃದಯ ವೈಶಾಲ್ಯವನ್ನು ಪ್ರಕಟಿಸುತ್ತದೆ. ಇವರು ತಿರುಕ್ಕುಱಳಿನಿಂದ ಅನೇಕ ವಾಕ್ಯಗಳನ್ನೂ ವಾಕ್ಯ ಭಾಗಗಳನ್ನೂ ಉದಹರಿಸಿದ್ದಾರೆ. ಇವರಿಗೆ 'ಕಂಬನಾಟ್ಟಾಟ್ವಾರ್' 'ವೃತ್ತಬಂಧ ಪ್ರವೀಣನ್' 'ಕಲ್ವಿಯಿನ್ ಪೆರಿಯೋರ್' ಎಂಬ ಇತರ ಬಿರುದುಗಳೂ ಉಂಟು. ಕಂಬರು ತಮ್ಮ ಗ್ರಂಥದಲ್ಲಿ ವಾಲ್ಮೀಕಿ ರಾಮಾಯಣಕ್ಕಿಂತ ಅನೇಕ ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾರೆ. ತಮ್ಮ ಕಾಲದ ಅನೇಕ ಸ್ವಜ ಚಿತ್ರಗಳನ್ನು ಕೊಟ್ಟಿದ್ದಾರೆ. ಶಬ್ದಸೌಷ್ಟವ, ಅರ್ಥಗಾಂಭೀರ್ಯ, ನಾದ ಮಾಧುರ್ಯಗಳಿಗೆ ಕಂಬರ ಗ್ರಂಥ ಪ್ರಸಿದ್ಧವಾಗಿದೆ. 'ಶಡಗೋಪರಂದಾದಿ' 'ಏರೆಟುವುದು' 'ತಿರುಕ್ಕೈವಟಕ್ಕುಂ' 'ಶಿಲೈಯೆಟುವುದು' 'ಸರಸ್ವತಿಯಂದಾದಿ' ಎಂಬುದು ಇವರ ಇತರ ಗ್ರಂಥಗಳು.

ಕಂಬರ್ ರಚಿಸದೆ ಬಿಟ್ಟ 'ಉತ್ತರಕಾಂಡ ರಾಮಾಯಣ'ವನ್ನು ಇವರ ಸಮಕಾಲೀನರಾದ ಒಟ್ಟಕ್ಕೂತ್ತರು ರಚಿಸಿದರು. ಇವರು ಮೂರು ಚೋಳ ರಾಜರ ಆಸ್ಥಾನದಲ್ಲಿ ಕವಿಗಳಾಗಿದ್ದರು. ಇವರಿಗೆ ಕಂಬರಲ್ಲಿ ವಿಶೇಷ ಗೌರವ. ಇವರ ಕಾವ್ಯವೂ ಕಂಬರ್ ಕಾವ್ಯಕ್ಕೆ ಸಮಾನವಾದ ಗೌರವವನ್ನು ಪಡೆದಿದೆ. ಇವರ ಸಮಕಾಲೀನರಾದವರೇ ಪುಹುಳೇಂದಿಪ್ಪುಲವರ್. ಚಂದಿರನ್ ಸ್ವರ್ಗಿ ಎಂಬ ದೊರೆಯ ಆಶ್ರಯದಲ್ಲಿದ್ದವರು. ಪೊನ್‌ವಿಳೈಂದಕಳತ್ತೂರ್ ಇವರ ಜನ್ಮಸ್ಥಳ. ಇವರು ವೆಣ್ಬಾ ಹಾಡುವುದರಲ್ಲಿ ಬಹು ಸಮರ್ಥರಾದುದರಿಂದ ಇವರಿಗೆ 'ವೆಣ್ಬಾಪುಲಿ' ಎಂಬ ಬಿರುದಿತ್ತು. ತುಳುವವೆಳ್ಳಾಳ ಕುಲದವರು. ಇವರ 'ನಳವೆಣ್ಬಾ' ೪೦೦ ಪದ್ಯಗಳುಳ್ಳ ಬಹು ಸುಂದರ ಕಾವ್ಯ. ಇದರಲ್ಲಿ ಸ್ವಯಂವರಕಾಂಡಂ, ಕಲಿತೊಡರ್‌ಕಾಂಡಂ, ಕಲಿನೀಂಗುಕಾಂಡಂ ಎಂಬ ಮೂರು ಕಾಂಡಗಳಿವೆ.

ಈಚೆಗೆ 'ಮುತ್ತೊಳ್ಳಾಯಿರಮ್' ಎಂಬ ಗ್ರಂಥವೊಂದು ಸಿಕ್ಕಿದೆ. ಈ ಗ್ರಂಥ ಕರ್ತೃವಿನ ವಿಷಯವಾಗಿ ಏನೂ ತಿಳಿದಿಲ್ಲ. ಇದರ ಹೆಸರಿನಿಂದ ಇದು ಮೂರು ಒಂಬೈನೂರು (ಮೂನ್ರುತೊಳ್ಳಾಯಿರಮ್) ಅಥವಾ ಎರಡು ಸಾವಿರದ ಏಳುನೂರು ಗ್ರಂಥ ಪರಿಮಿತಿಯುಳ್ಳದ್ದು ಎಂದು ಮಾತ್ರ ತಿಳಿಯುತ್ತದೆ. ಈಗ ದೊರೆತಿರುವುದು ೧೦೮ ಪದ್ಯಗಳು ಮಾತ್ರ. ಚೇರ, ಚೋಳ, ಪಾಂಡ್ಯ ಅರಸರ ವಿಷಯಕವಾದುದು. ಶೃಂಗಾರ ಪ್ರಧಾನವೂ ರಸಯುಕ್ತವೂ ಆದ ಪ್ರೌಢ ಗ್ರಂಥ.

ಈ ಕಾಲದಲ್ಲಿ ನಿಘಂಟು ಛಂದಸ್ಸು ಅಲಂಕಾರಗಳಿಗೆ ಸಂಬಂಧಪಟ್ಟ ಅನೇಕ ಗ್ರಂಥಗಳು ರಚಿಸಲ್ಪಟ್ಟವು. ಅಮೃತಸಾಗರನಿಂದ ವಿರಚಿತವಾದ 'ಯಾಪ್ಪರುಂಗಲ ವಿರುತ್ತಿ' ಗುಣಸಾಗರರಿಂದ ರಚಿತವಾದ 'ಯಾಪ್ಪರುಂಗಲಕ್ಕಾರಿಕೈ' ಎಂಬಿರಡೂ ವಿಸ್ತಾರವಾದ ತಮಿಳು ಛಂದೋಗ್ರಂಥಗಳು. ಬುದ್ಧಮಿತ್ರಕೃತ 'ವೀರಶೋಟಿಯಂ' ಸಂಸ್ಕೃತ ಮತ್ತು ದ್ರಾವಿಡ ಮಾರ್ಗಗಳನ್ನು ಸಮನ್ವಯಮಾಡಿ ವಿರಚಿತವಾದ ವ್ಯಾಕರಣ ಮತ್ತು ಅಲಂಕಾರ ವಿಷಯಕವಾದ ಲಕ್ಷಣಗ್ರಂಥ. ಸೂತ್ರಶೈಲಿಯಲ್ಲಿ ರಚಿತವಾಗಿರುವ 'ದಂಡಿಯಲಂಕಾರಮ್' ಒಂದು ಅಲಂಕಾರ ಗ್ರಂಥ. ಗುಣವೀರ ಪಂಡಿತ ವಿರಚಿತ 'ನೇಮಿನಾಥಂ' ಕೂಡ ಒಂದು ಲಘುವ್ಯಾಕರಣ. ಪವನಂದಿ ಮುನಿವರ್ ಕೃತ 'ನನ್ನೂಲ್' ಸರಳವೂ ಸ್ಪಷ್ಟವೂ ಆದ ವ್ಯಾಕರಣ. ಇದರಲ್ಲಿ ಎಟುತ್ತು ಮತ್ತು ಶೊಲ್ ಅಧಿಕಾರಗಳು ಮಾತ್ರ ಇವೆ. ವ್ಯಾಕರಣ ಕ್ಷೇತ್ರದಲ್ಲಿ 'ತೊಲ್‌ಕಾಪ್ಪಿಯ'ವನ್ನು ಬಿಟ್ಟರೆ ಇದಕ್ಕೇ ಅಗ್ರಸ್ಥಾನ. ಇದಕ್ಕೆ ಅನೇಕ ವ್ಯಾಖ್ಯಾನಗಳಿವೆ.

ಈ ಕಾಲದಲ್ಲಿಯೂ ಇದಾದ ಒಂದೆರಡು ಶತಮಾನಗಳಲ್ಲಿಯೂ ಅನೇಕ

ಪ್ರಾಚೀನ ಗ್ರಂಥಗಳಿಗೆ ಉತ್ತಮ ವ್ಯಾಖ್ಯಾನಗಳು ರಚಿತವಾದುವು. ಇಳಂಪೂರ ನಾರ್, ಸೇನಾವರಿಯರ್ ಮತ್ತು ನಚ್ಚಿನಾರ್ಕ್ಕಿನಿಯಾರರು ತೊಲ್‌ಕಾಪ್ಪಿಯದ ಮೇಲೆ ಶ್ರೇಷ್ಠವಾದ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ನಚ್ಚಿನಾರ್ಕ್ಕಿನಿಯಾರರು 'ಪತ್ತುಪ್ಪಾಟ್ಟು' 'ಕಲಿತ್ತೊಹೈ' 'ಜೀವಕ ಚಿಂತಾಮಣಿ'ಗಳ ಮೇಲೂ ವ್ಯಾಖ್ಯಾನ ಗಳನ್ನು ಬರೆದರು. ಪರಿಮೇಲಟಹರ 'ತಿರುಕ್ಕುಱಳ್' ಮತ್ತು 'ಪರಿಪಾಡಲ್' ಮೇಲಿನ ವ್ಯಾಖ್ಯಾನಗಳು ಬಹು ಪ್ರಸಿದ್ಧವಾಗಿವೆ. ಅಡಿಯಾರ್ಕ್ಕುನಲ್ಲಾರ್ ಎಂಬು ವರು ಅಲ್ಲಿಯವರೆಗಿದ್ದ ಎಲ್ಲ ಸಂಗೀತವಿಷಯಕವಾದ (ಇಶೈ) ಗ್ರಂಥಗಳನ್ನೂ ಅಭ್ಯಾಸಮಾಡಿ ವಿಮರ್ಶೆಮಾಡಿದ್ದಾರೆ. ಅನ್ಯಭಾಷಾಶಬ್ದಗಳನ್ನೂ ಉಪಯೋಗ ದಲ್ಲಿಲ್ಲದ ಗಾದೆಗಳನ್ನೂ ಪ್ರಯೋಗಿಸುವುದರಲ್ಲಿ ಅವರಿಗೆ ಬಹಳ ಎಚ್ಚರಿಕೆ. ಅಂದರೆ ಭಾಷಾಶುದ್ಧಿಯ ವಿಷಯದಲ್ಲಿ ಬಹಳ ಗಮನ. ಮೇಕ್ಕಂಡಾರ್ ಎಂಬುವರು ಶೈವಸಿದ್ಧಾಂತಗಳನ್ನೆಲ್ಲಾ ಅಭ್ಯಾಸಮಾಡಿ 'ಶಿವಜ್ಞಾನ ಬೋಧಮ್' ಎಂಬ ಗ್ರಂಥವನ್ನು ರಚಿಸಿದರು. ಇದರ ಪೂರ್ವಾರ್ಧದಲ್ಲಿ ಸಂಸಾರ ಬಂಧನದ ವಿಷಯವೂ ಉತ್ತರಾರ್ಧದಲ್ಲಿ ಮೋಕ್ಷಸ್ವರೂಪವೂ ಉಕ್ತವಾಗಿದೆ. ಸಕಲಾಗಮ ಪಂಡಿತರೆಂಬ ದಾರ್ಶನಿಕರು ಮೇಕ್ಕಂಡಾರರ ಉಪದೇಶಕ್ಕೆ ಮಾರುಹೋಗಿ ಅವರ ಶಿಷ್ಯರಾಗಿ ಅರುಳ್‌ನಂದಿ ಶಿವಾಚಾರ್ಯರೆಂಬ ಹೊಸನಾಮಧೇಯವನ್ನು ಪಡೆದು 'ಶಿವಜ್ಞಾನ ಸಿದ್ಧಿ'ಯೆಂಬ ಮತ್ತೊಂದು ಗ್ರಂಥವನ್ನು ರಚಿಸಿದರು. ಈ ಗ್ರಂಥದಲ್ಲಿ ಅನ್ಯಪಕ್ಷ ಖಂಡನಪೂರ್ವಕ ಸ್ವಪಕ್ಷ ಸಮರ್ಥನವು ಬಹು ದೀರ್ಘವಾಗಿ ವಿವೃತವಾಗಿದೆ. ಅರುಳ್ ನಂದಿಯು ತನ್ನ ಜ್ಞಾನಜ್ಯೋತಿಯನ್ನು ಮರೈಜ್ಞಾನಸಂಬಂಧರಿಗೂ ಅವರು ಉಮಾಪತಿ ಶಿವಾಚಾರ್ಯರಿಗೂ ದಾನಮಾಡಿ ಕೊಟ್ಟರು. ಮರೈಜ್ಞಾನ ಸಂಬಂಧರು 'ಶಿವಸಮಯನೆರಿ' ಎಂಬ ಗ್ರಂಥವನ್ನೂ ಉಮಾಪತಿಯು ಶೈವಸಿದ್ಧಾಂತದ ಮೂಲ ತತ್ವಗಳಿಗೆ ಸಂಬಂಧಪಟ್ಟ 'ಶಿವಪ್ರಕಾಶ'ವೇ ಮೊದಲಾದ ಎಂಟು ಗ್ರಂಥಗಳನ್ನೂ ರಚಿಸಿದರು. ಈ ಸಿದ್ಧಾಂತ ಮಾರ್ಗದಲ್ಲಿ ಮನವಾಚಕಮ್ ಕಡಂದಾನ್ ಎಂಬುವರು 'ಉಣ್ಮೈನೆರಿವಿಳಕ್ಕಮ್' (ಸತ್ಯಮಾರ್ಗಪ್ರಕಾಶ) ಎಂಬ ಗ್ರಂಥವನ್ನು ಪ್ರಶ್ನೋತ್ತರ ಮಾಲೆಗಳ ರೂಪದಲ್ಲಿ ರಚಿಸಿದ್ದಾರೆ. ಇವೇ ಅಲ್ಲದೆ 'ಇಲಕ್ಕಣಕ್ಕೊತ್ತು' 'ಇಲಕ್ಕಣ ವಿಳಕ್ಕಮ್' 'ಸೂರಾವಳಿ' 'ತೊಲ್‌ಕಾಪ್ಪಿಯ ಸೂತ್ರವೃತ್ತಿ' ಎಂಬ ವ್ಯಾಕರಣ ಗ್ರಂಥ ಗಳೂ 'ಪ್ರಭುಲಿಂಗಲೀಲೆ' ಎಂಬ ಧಾರ್ಮಿಕ ಗ್ರಂಥವೂ 'ನೀತಿನೆರಿವಿಳಕ್ಕುಮ್' ಎಂಬ ನೀತಿಗ್ರಂಥವೂ ಈ ಯುಗದ ಪ್ರಸಿದ್ಧ ಗ್ರಂಥಗಳು.

ಸುಮಾರು ಇದೇ ಕಾಲದಲ್ಲಿ ದ್ರಾವಿಡದೇಶದಲ್ಲಿ ಶ್ರೀವೈಷ್ಣವರಲ್ಲಿ ತಮಿಳು ಸಂಸ್ಕೃತ ಮಿಶ್ರವಾದ ಮಣಿಪ್ರವಾಳವೆಂಬ ಶೈಲಿಯಲ್ಲಿ ಆಳ್ವಾರ್ರುಗಳ ದ್ರಾವಿಡ

ನಾಲಾಯಿರ ಪ್ರಬಂಧಗಳ ಮೇಲೆಯೂ ರಹಸ್ಯ ಮಂತ್ರಾರ್ಥಗಳ ವಿಷಯದಲ್ಲಿಯೂ ಅನೇಕ ವ್ಯಾಖ್ಯಾನಗಳು ತಲೆದೋರಿದವು. ಈ ಪ್ರಬಂಧಗಳ ವ್ಯಾಖ್ಯಾನಗಳಿಗೆ ಭಗವದ್ವಿಷಯವೆಂದು ಹೆಸರು. ಇವುಗಳ ಪ್ರಭಾವ ಸಾಮಾನ್ಯ ಜನರ ಮೇಲೆ ಬಹು ವಿಶೇಷವಾಗಿದೆ. ನಮ್ಮಾಳ್ವಾರ್ರವರ ತಿರುವಾಯ್ಮೊಳಿಯೊಂದರಮೇಲೆಯೇ 'ಆಱಾಯಿರಪ್ಪಡಿ' 'ಒಂಬದುನಾಯಿರಪ್ಪಡಿ' 'ಪನ್ನೀಱಾಯಿರಪ್ಪಡಿ' 'ಪದಿನೆಟ್ಟಾಯಿರಪ್ಪಡಿ' 'ಇರುಪತ್ತುನಾಲಾಯಿರಪ್ಪಡಿ' 'ಮುಪ್ಪತ್ತಾಱಾಯಿರಪ್ಪಡಿ' ಎಂಬ ಅನೇಕ ವ್ಯಾಖ್ಯಾನಗಳು ರಚಿತವಾಗಿವೆ. ಇವುಗಳ ಶೈಲಿ ಸರಳವಾಗಿಯೂ ಬೋಧಪ್ರದ ವಾಗಿಯೂ ಇದೆ. ಈ ವ್ಯಾಖ್ಯಾನಗಳಲ್ಲಿರುವ ವಿಷಯ ಪೂರ್ಣತೆ ಬಹು ಆಶ್ಚರ್ಯಕರ ವಾಗಿದೆ. ಪ್ರಾಚೀನ ಪುರಾಣೇತಿಹಾಸಗಳ ಅನೇಕ ಪ್ರಮಾಣ ವಾಕ್ಯಗಳ ಮೂಲಕ ವಿಷಯ ಪ್ರತಿಪಾದನೆ ಬಹು ಆಕರ್ಷಕವಾಗಿದೆ.

ತಾಯಿಮಾನಸ್ ಸ್ವಾಮಿಯವರ ಧಾರ್ಮಿಕ ಮತ್ತು ದಾರ್ಶನಿಕ ಭಾವಗೀತೆ ಗಳೂ ಈ ಕಾಲಕ್ಕೆ ಸೇರಿದವು. ರಾಜಕವಿಯಾದ ಅತಿವೀರರಾಮ ಪಾಂಡ್ಯನು ನೈಷಧ ವನ್ನೂ 'ಕೂರ್ಮ ಪುರಾಣ' ಮತ್ತು 'ಕಾಶೀಖಂಡ'ಗಳ ಪರಿವರ್ತನೆಯನ್ನೂ ರಚಿ ಸಿದುದು ಈ ಕಾಲದಲ್ಲಿಯೇ. ಸುಬ್ರಹ್ಮಣ್ಯಸ್ವಾಮಿಯ ಸ್ತುತಿರೂಪವಾದ 'ತಿರುಪ್ಪು ಹಲ್' ಗೀತೆಗಳ ಕರ್ತೃವಾದ ಅರುಣಗಿರಿನಾಥರ್, ಮಹಾಭಾರತದ ಕರ್ತೃವಾದ ವಿಲ್ಲಿಪುತ್ತೂರಾರ್, ಸ್ಕಾಂದಪುರಾಣದ ಕವಿಯಾದ ಕಚ್ಚಿಯಪ್ಪ ಶಿವಾಚಾರ್ಯರ್ ಅಷ್ಟಪ್ರಬಂಧಕಾರರಾದ ಪಿಳ್ಳೈಪೆರುಮಾಳ್ ಅಯ್ಯಂಗಾರ್ ಮತ್ತು ತಾಯುಮಾನ ವರ್ ಇವರೆಲ್ಲ ಈ ಕಾಲದವರೇ. ವಿಲ್ಲಿಪುತ್ತೂರಾರವರ ಭಾರತ ಬಹಳ ರಸವತ್ತಾದ ಗ್ರಂಥ. ಈಗ ತಮಿಳಿನಲ್ಲಿರುವ ಭಾರತಗಳಲ್ಲೆಲ್ಲಾ ಇದೇ ಶ್ರೇಷ್ಠವಾದುದು. ಇದರ ಶೈಲಿ ಬಹು ಆಕರ್ಷಕವಾಗಿದೆ. ಸಂಸ್ಕೃತ ಮತ್ತು ತಮಿಳು ಶಬ್ದಗಳು ಬಹು ಸಮ ರಸವಾಗಿ ಹೊಂದಿಕೊಂಡಿವೆ. 'ತಿರುವರಂಗತ್ತಂದಾದಿ' 'ತಿರುವರಂಗತ್ತುಮಾಲೈ' 'ತಿರುವರಂಗಕ್ಕಲಂಬಕಮ್' 'ತಿರುವೇಂಕಟಮಾಲೈ' 'ತಿರುವೇಂಕಟತ್ತಂದಾದಿ' 'ಅಟಿಹರಂದಾದಿ' 'ನೂಱ್ಱೆಟ್ಟುತ್ತಿರುಪತಿಯಂದಾದಿ' 'ಶೀರಂಗನಾಯಕರೂಶಲ್' ಇವು ಎಂಟೂ ಅಷ್ಟಪ್ರಬಂಧಗಳು.

ಸುಮಾರು ೧೬ ನೆಯ ಶತಮಾನದಲ್ಲಿ ಪೋರ್ಚುಗೀಸರಿಂದ ಆಧುನಿಕ ತಮಿಳು ಸಾಹಿತ್ಯವು ಪ್ರಾರಂಭವಾಯಿತು. ರಾಬರ್ಟ್ ಡಿ ನೊಬಲಿ ಎಂಬುವನು (೧೬೦೬-೫೬) ದಕ್ಷಿಣ ಭಾರತದಲ್ಲಿ ಬಹುಕಾಲ ಇದ್ದು ತತ್ವಬೋಧಕಸ್ವಾಮಿ ಎಂಬ ಹೆಸರಿನಲ್ಲಿ 'ಆತ್ಮ ನಿರ್ಣಯಮ್' 'ಸತ್ಯವೇದಲಕ್ಷಣಮ್' 'ಏಸುನಾದರ್ ಚರಿತಮ್' ಎಂಬ ಗದ್ಯ ಗ್ರಂಥಗಳನ್ನೂ ತಮಿಳು ಪೋರ್ಚುಗೀಸ್ ನಿಘಂಟೊಂದನ್ನೂ ರಚಿಸಿದನು. ಈತನಿಗಿಂತ

ಹೆಚ್ಚಾಗಿ ಫಾದರ್ ಕಾನ್‌ಸ್ಟೆಂಟಿಯಾಸ್ ಬೆಸ್ಚಿ ಎಂಬುವನು (೧೬೮೦-೪೨) ತಮಿಳಿನಲ್ಲಿ ಉದ್ದಾಮಪಂಡಿತನಾಗಿ ವೀರಮಹಾಮುನಿ ಎಂಬ ಅಭಿಧಾನದಲ್ಲಿ 'ವೇದಿಯಾರ್ ಒಟುಕ್ಕಮ್' 'ವೇದವಿಳಕ್ಕಮ್' 'ಜ್ಞಾನಉಣರ್‌ದಲ್' ಮೊದಲಾದ ನೀತಿವಿಷಯಕವಾದ ಗದ್ಯ ಗ್ರಂಥಗಳನ್ನು ರಚಿಸಿದನು. ಅವನ 'ವಾಮನ ಕತೈ' 'ಪರಮಾರ್ಥ ಗುರು ಕತೈ' ಎಂಬುವು ಸಾಮಾನ್ಯ ಜನರಿಗಾಗಿ ರಚಿತವಾದ ಹಾಸ್ಯಯುಕ್ತವಾದ ಗ್ರಂಥಗಳು. 'ತೊಣ್ಣೂಲ್ ವಿಳಕ್ಕಮ್' 'ಕುಡುಂತಮಿಜ್ ಇಲಕ್ಕಣಂ' ಎಂಬುದು ಪಾಶ್ಚಾತ್ಯಮಾದರಿಯ ತಮಿಳು ವ್ಯಾಕರಣ ಗ್ರಂಥಗಳು. ಬೆಶ್ಚಿಯು ಪ್ರಾಚೀನ ರೀತಿಯಲ್ಲಿಯೇ ಗ್ರಂಥರಚನೆ ಮಾಡಿದ್ದರೂ ಭಾಷೆ, ರೀತಿ ಮತ್ತು ತಂತ್ರಗಳಲ್ಲಿ ಹೊಸ ಪ್ರಯೋಗಗಳನ್ನು ನಡಿಸಿದ್ದಾನೆ. ಈತನ 'ಚದುರ ಕಾರಾದಿ' 'ತಮಿಳು-ಲಾಟಿನ್ ನಿಘಂಟು' 'ತಮಿಳು-ಫ್ರೆಂಚ್ ನಿಘಂಟು' 'ಪೋರ್ಚುಗೀಸ್-ಲಾಟಿನ್-ತಮಿಳು ನಿಘಂಟು' ಬಹು ಉಪಯುಕ್ತವಾದ ಗ್ರಂಥಗಳು. ಸುಮಾರು ಇದೇ ಕಾಲದಲ್ಲಿ ಡೂಪ್ಲೆಯ ಕೈಕೆಳಗೆ ಅಧಿಕಾರಿಯಾಗಿದ್ದ ಆನಂದ ರಂಗಂಪಿಳ್ಳೆಯ ಡೈರಿ ಬಹಳ ಉಪಕಾರಕವಾದ ಗ್ರಂಥ. ೧೭೩೬ ರಿಂದ ೧೭೬೦ ರ ವರೆಗಿನ ಪ್ರತಿನಿತ್ಯದ ವರದಿ. ಶೈಯ್ಯಾಳಿಯ ಅರುಣಾಚಲಂ ಕವಿರಾಯರು 'ರಾಮ ನಾಟಕಮ್' ಎಂಬ ಸಂಗೀತ ರೂಪಕವನ್ನು ೧೭೭೨ ರಲ್ಲಿ ರಚಿಸಿದರು. ಮುಸ್ಲಿಂ ಅನುಭಾವಿಯಾದ ಮಸ್ತಾನ್ ಸಾಹೇಬನ ಗೀತೆಗಳು ಈ ಕಾಲದಲ್ಲಿಯೇ ರಚಿತವಾದುವು. ಇವು ಸರ್ವಧರ್ಮ ಸಮನ್ವಯವನ್ನು ಬೋಧಿಸುತ್ತವೆ.

ಈ ಕಾಲದಲ್ಲಿ ಕೆಲವು ಪುರಾಣಗಳೂ, ಶತಕಗಳೂ ಪ್ರಬಂಧಗಳೂ ರಚಿತವಾದುವು. ಪದಿಕ್ಕಾಶುಪುಲವರ 'ತೊಂಡೈಮಂಡಲಶತಕಂ' ಪಲ್ಲವ ರಾಜ್ಯದ ಐತಿಹಾಸಿಕ ಮತ್ತು ಸಾಂಪ್ರದಾಯಿಕ ಕತೆಯನ್ನನುಸರಿಸಿ ರಚಿತವಾದ ಒಂದು ಮಾದರಿಯ ಐತಿಹಾಸಿಕ ಗ್ರಂಥ. ಕವಿಯು ರಾಮನಾಡಿನ ರಘುನಾಥ ಸೇತುಪತಿಯ ಆಶ್ರಯದಲ್ಲಿದ್ದವನು. ಆತ್ಮನಾಥ ದೇಶಿಕರ 'ಚೋಳಮಂಡಲ ಶತಕ'ವೂ ಮೇಲಿನ ಶತಕದ ಮಾದರಿಯದು. ಉಮರ್ ಪುಲವರ್ ಎಂಬ ಮಹಮ್ಮದೀಯ ಕವಿಯು ಮಹಮ್ಮದನ ಚರಿತ್ರೆಯನ್ನು 'ಶೀರಾ ಶರಾಪ್ಪುರಾಣಮ್' ಎಂಬ ಹೆಸರಿನಿಂದ ರಚಿಸಿದ್ದಾನೆ. ತ್ರಿಕೂಟ ರಾಜಪ್ಪ ಕವಿರಾಯರ್ ಎಂಬುವನು 'ತಿರುಕುಟ್ರಾಲಕ್ಕುರ ಕವಂಜಿ' ಅಥವಾ 'ವೀಧೀನಾಟಕಂ' ಎಂಬ ಜನಪ್ರಿಯವಾದ ಸಂಗೀತ ನಾಟಕವೊಂದನ್ನು ಈ ಕಾಲದಲ್ಲಿ ರಚಿಸಿದ್ದಾನೆ. ಜೀವಾತ್ಮನು ಪರಮಾತ್ಮನನ್ನು ಹುಡುಕಿಕೊಂಡು ಹೋಗುವುದನ್ನು ಪ್ರಣಯಕತೆಯಂತೆ ಇದರಲ್ಲಿ ನಿರೂಪಿಸಿದೆ.

ಇಲ್ಲಿಂದ ಮುಂದಕ್ಕೆ ಭಾರತೀಯ ಸಾಹಿತ್ಯದ ಮೇಲೆ ಪಾಶ್ಚಾತ್ಯರ ಪ್ರಭಾವ

ವಿಶೇಷವಾಗುತ್ತ ಬಂದಿತು. ಮುಂದಿನ ಸಾಹಿತ್ಯ ಕಾರ್ಯಗಳೆಲ್ಲ ಪಾಶ್ಚಾತ್ಯ ಮಾದರಿ ಯಲ್ಲಿಯೇ ನಡೆಯಲು ಪ್ರಾರಂಭವಾದವು. ಹಿಂದಿನಿಂದ ನಡೆದುಬಂದ ಸಾಹಿತ್ಯ ಪ್ರವಾಹವು ಹೊಸ ಜಾಡಿನಲ್ಲಿ ಹರಿಯಲು ಮೊದಲಾಯಿತು. ವಿಜ್ಞಾನವು ಮನುಷ್ಯ ಜೀವನದಲ್ಲಿ ಪ್ರಧಾನ ಸ್ಥಾನವನ್ನಾಕ್ರಮಿಸಿತು. ವೃತ್ತಪತ್ರಿಕೆಗಳೂ ಸಾಮಾನ್ಯ ಜನರ ಜೀವನವನ್ನು ರೂಪಾಂತರಿಸತೊಡಗಿತು. 'ವಿವೇಕವಿಳಕ್ಕಮ್' ಎಂಬ ಮೊದಲನೆಯ ತಮಿಳು ಪತ್ರಿಕೆಯು ೧೮೫೭ ರಲ್ಲಿ ಪ್ರಾರಂಭವಾಯಿತು. 'ಅಮೃತ ವಾಚಿನಿ' ಎಂಬುದು ಸ್ತ್ರೀಯರಿಗಾಗಿಯೇ ಜನ್ಮವೆತ್ತಿತು. 'ಸ್ವದೇಶಮಿತ್ರನ್' ಪತ್ರಿಕೆಯು ೧೮೭೦ ರಲ್ಲಿ ಜಿ. ಸುಬ್ರಹ್ಮಣ್ಯಅಯ್ಯರ್ ಅವರ ನೇತೃತ್ವದಲ್ಲಿ ಉದಯ ವಾಗಿ ಜನರ ರಾಜಕೀಯ, ಸಾಮಾಜಿಕ ಕ್ಷೇತ್ರಗಳ ಕಾರ್ಯಗಳನ್ನು ರೂಪು ಗೊಳಿಸುವುದರಲ್ಲಿ ವಿಶೇಷ ಸಹಾಯಮಾಡಿತು.

ಆಧುನಿಕ ತಮಿಳು ಸಾಹಿತ್ಯವನ್ನು ಆರಂಭದ ಯುಗ, ಭಾರತಿಯುಗ ಮತ್ತು ಗಾಂಧಿಯುಗ ಎಂದು ಮೂರು ವಿಭಾಗ ಮಾಡಬಹುದು. ಈ ಮೂರು ಕಾಲ ಗಳಲ್ಲಿಯೂ ರಾಜಕೀಯ, ವಿಶೇಷ ಪ್ರಭಾವಯುತವಾದ ಶಕ್ತಿಯಾಗಿದೆ. ಆರಂಭಕಾಲ ದಲ್ಲಿ ಮಾತ್ರ ಹಿಂದಿನ ಸಂಪ್ರದಾಯ ಯಥೋಚಿತ ಸ್ಥಾನವನ್ನು ಉಳಿಸಿಕೊಂಡಿದೆ. ಮದ್ರಾಸ್ ವಿಶ್ವವಿದ್ಯಾನಿಲಯವು ಸ್ಥಾಪಿತವಾದಂದಿನಿಂದ ತಿಲಕರು ರಾಜಕೀಯ ಕ್ಷೇತ್ರಕ್ಕೆ ಕಾಲಿಡುವವರೆಗೆ ಅಂದರೆ ೧೯೧೭ ರವರೆಗೆ ಆರಂಭಯುಗ. ಈ ಕಾಲವನ್ನು ಒಂದು ದೃಷ್ಟಿಯಿಂದ ತಾಮಸಯುಗವೆಂದು ಕರೆಯಬಹುದು. ಈ ಕಾಲದಲ್ಲಿ ಹೆಚ್ಚು ಸಾಹಿತ್ಯ ಸೃಷ್ಟಿಯಾಗಲಿಲ್ಲ. ಆದವುಗಳಿಗೆ ಧರ್ಮ ಅಥವಾ ಮತವೇ ಪ್ರೇರಕ. ಈ ಕಾಲದಲ್ಲಿ ಜಾಫ್ನದ ಆರ್ಮುಗನಾವಲಾರರು ರಾಮಾಯಣ, ಭಾರತ, ಪೆರಿಯ ಪುರಾಣ ಗಳನ್ನು ಸರಳ ಗದ್ಯದಲ್ಲಿ ರಚಿಸಿದರು. ಇವರ ಸಮಕಾಲೀನರು ಮಹಾವಿದ್ವಾನ್ ಶ್ರೀ ಮೀನಾಕ್ಷಿ ಸುಂದರಂಪಿಳ್ಳೆಯವರು. ಇವರು ಸರಳವೂ ಸುಂದರವೂ ಆದ ಶೈಲಿಯಲ್ಲಿ ನೂರಾರು ಗ್ರಂಥಗಳನ್ನು ರಚಿಸಿದ್ದಾರೆ. ಮಹಾಮಹೋಪಾಧ್ಯಾಯ ಸ್ವಾಮಿನಾಥಯ್ಯ ರವರು ಇವರ ಶಿಷ್ಯರು. ೧೭ ನೆಯ ಶತಮಾನದ ಈಚಿನ ಕವಿಗಳಲ್ಲಿ ಇವರನ್ನು ಅಗ್ರೇಸರರೆನ್ನಬಹುದು. ಇವರು ಅನೇಕ ಸ್ಥಳ ಪುರಾಣಗಳನ್ನು ರಚಿಸಿ ಕೀರ್ತಿಪಡೆದಿ ದ್ದಾರೆ. ಡಾ|| ಸ್ವಾಮಿನಾಥಯ್ಯರವರು ಇವರ ಸಂಪೂರ್ಣ ಜೀವನಚರಿತ್ರೆಯನ್ನು ೧೯೩೩-೪ ರಲ್ಲಿ ಪ್ರಕಟಪಡಿಸಿದರು. ವೇದನಾಯಕಂಪಿಳ್ಳೆಯವರ 'ಪ್ರತಾಪಮೊದಲಿ ಯಾರ್ರ ಚರಿತ್ರೆ' ಮೊದಲನೆಯ ಆಖ್ಯಾಯಿಕೆ. ರಾಮಲಿಂಗಸ್ವಾಮಿಗಳ 'ಮನು ಮುರೈಕಂಡವಾಚಕಮ್' ಚೋಳಮನುವಿನ ಕತೆ. ಸುಂದರಂಪಿಳ್ಳೆಯವರ 'ಮನೋ ಮಣಿಯಂ' ಷೇಕ್ಸ್‌ಪಿಯರ್ ನಾಟಕಗಳ ಮಾದರಿಯಲ್ಲಿ ರಚಿತವಾದ ಐದು ಅಂಕ

ಗಳ ನಾಟಕ. ಇದು ರಂಗಸ್ಥಳಕ್ಕೆ ಅಷ್ಟು ಚೆನ್ನಾಗಿ ಒಪ್ಪುವುದಿಲ್ಲ. ರಾಜಮಯ್ಯರ್ ವಿರಚಿತ 'ಕಮಲಾಂಬಾಚರಿತಂ' ಬಹು ಜನಪ್ರಿಯವಾಗಿದೆ. ಇದು ಒಂದು ಸಾಂಸಾರಿಕ ಕಟ್ಟುಕತೆ. ಬರುವುದೆಲ್ಲ ನಮ್ಮ ಒಳ್ಳೆಯದಕ್ಕೆ ಎಂದು ತಿಳಿದು ಫಲಾಪೇಕ್ಷೆಯಿಲ್ಲದೆ ದುಡಿಯಬೇಕು ಎಂಬ ನೀತಿಯನ್ನು ಪ್ರದರ್ಶಿಸುವುದು ಇದರ ಉದ್ದೇಶ. ಇಲ್ಲಿರುವ ಪಾತ್ರ ರಚನೆಯು ಬಹು ಆಕರ್ಷಕ.

ಎರಡನೆಯ ಭಾರತಿಯುಗದಲ್ಲಿ ರಾಜಕೀಯವು ಪ್ರಧಾನ ಸ್ಥಾನವನ್ನಾಕ್ರಮಿಸಿತು. 'ವಂದೇ ಮಾತರಂ' ಗೀತೆಯು ಜನರನ್ನು ಹೊಡೆದೆಬ್ಬಿಸಿತು. ದೇಶಭಕ್ತರಾದ ಲಾಲಾಲಜಪತರಾವ್, ಲೋಕಮಾನ್ಯ ತಿಲಕ್ ಮೊದಲಾದವರ ವೀರವಾಣಿಯು ಜನರ ಹೃದಯವನ್ನು ಪ್ರವೇಶಿಸಿ ತರುಣರನ್ನು ತಾಯಿ ಸೇವೆಯಲ್ಲಿ ತೊಡಗುವಂತೆ ಮಾಡಿತು. ಭಾರತಿಯವರ ಬರವಣಿಗೆಯು ಈ ಕಾಲಕ್ಕೆ ಬೇಕಾದ ಶಕ್ತ್ಯುತ್ಸಾಹವನ್ನು ಒದಗಿಸಿತು.

ಸುಬ್ರಹ್ಮಣ್ಯಭಾರತಿಯು ಕವಿಯೂ ಗದ್ಯಲೇಖಕನೂ ಪರಿವರ್ತಕನೂ ಆಗಿದ್ದನು. ಮಾನವನಲ್ಲಿಯಾಗಲಿ ಜನಾಂಗದಲ್ಲಿಯಾಗಲಿ ಭಯವಿರುವವರೆಗೆ ಯಾವ ಕಾರ್ಯಸಾಧನೆಯೂ ಆಗಲಾರದೆಂದು ತಿಳಿದು ಭಾರತಿಯು ಜನರಿಗೆ ಧೈರ್ಯದ, ಉತ್ಸಾಹದ, ದೃಢಪ್ರತಿಜ್ಞೆಯ ಸ್ವರೂಪವನ್ನು ತಿಳಿಸುವುದಕ್ಕಾಗಿ ತನ್ನ 'ದ್ರೌಪದೀ ಶಪಥಮ್' ಎಂಬ ಗಂಡುಕಾವ್ಯವನ್ನು ರಚಿಸಿದುದಲ್ಲದೆ ಗೀತೆಯನ್ನು ತಮಿಳಿಗೆ ಭಾಷಾಂತರಿಸಿದನು. ಮುಂದಿನವರಿಗೆ ಆದರ್ಶವಾಗಿರುವ ಅನೇಕ ಗದ್ಯಗ್ರಂಥಗಳನ್ನು ರಚಿಸಿದನು. ಆತನ ಕೀರ್ತಿ ಮತ್ತಾರಿಗೂ ಬಂದಿಲ್ಲ. ಅಂತಹವರು ಯುಗಪುರುಷರು.

ಕೃಷ್ಣಸ್ವಾಮಿಶರ್ಮರ ಪುಸ್ತಕಗಳು, ಚಿದಂಬರಂಪಿಳ್ಳೆಯವರ ಬರವಣಿಗೆಗಳು, ವಿ. ವಿ. ಎಸ್. ಅಯ್ಯರ್‌ಅವರ 'ಬಾಲಭಾರತಿ', ಕೆ. ಸುಬ್ರಹ್ಮಣ್ಯಪಿಳ್ಳೆಯ 'ಶೈವನಾಯನಾರ್ ಚರಿತಮ್' ಸ್ವಾಮಿನಾಥಯ್ಯರ 'ಆತ್ಮಕತೆ' ಮೊದಲಾದುವು ಈ ಕಾಲದ ಇತರ ಗ್ರಂಥಗಳು.

ಗಾಂಧೀಜಿಯವರು ರಾಜಕೀಯ ಕ್ಷೇತ್ರದಲ್ಲಿ ಕಾಲಿಟ್ಟು ಅಸಹಕಾರ ಚಳುವಳಿಯನ್ನು ಪ್ರಾರಂಭಿಸಿದಮೇಲೆ ತಮಿಳರ ರಕ್ತವು ಬಿಸಿಯಾಗಿ ಹೊಸ ಉತ್ಸಾಹವು ಮೂಡಿ ಸಮಾಜಸುಧಾರಣೆ, ದೇಶಪ್ರೇಮ, ಅಸ್ಪೃಶ್ಯನಿವಾರಣೆ, ದೀನದಳಿತರ ಉದ್ಧಾರ ಮೊದಲಾದ ವಿಷಯಕವಾದ ಅನೇಕ ಗ್ರಂಥಗಳು ರಚನೆಯಾದವು. ಸುಪ್ತವಾಗಿದ್ದ ಅನೇಕ ತರುಣ ಚೇತನಗಳು ಉದ್ಬುದ್ಧವಾಗಿ ಕಟ್ಟೆಯೊಡೆದು ಹರಿಯಲು ಪ್ರಾರಂಭವಾಯಿತು.

ಕವಿ ರಾಮಲಿಂಗಂ, ಯೋಗಿ ಶುದ್ಧಾನಂದಭಾರತಿ, ಟಿ. ಎಸ್. ಚೊಕ್ಕಲಿಂಗಂ, ಆರ್. ಕೃಷ್ಣಮೂರ್ತಿ ಇವರು ಪ್ರಸಕ್ತಕಾಲದ ಪ್ರಸಿದ್ಧ ಕವಿಗಳು. ಇವರಲ್ಲಿ ನಾಮ ಕಲ್ಲಿನ ರಾಮಲಿಂಗಂ ಅವರಿಗೆ ಅಗ್ರಸ್ಥಾನ. ೧೮೮೮ರಲ್ಲಿ ಜನಿಸಿ ೧೯೦೭ರಲ್ಲಿ ಸೆಕೆಂಡರಿ ವಿದ್ಯಾಭ್ಯಾಸವನ್ನು ಮುಗಿಸಿಕೊಂಡು ಕೆಲವುಕಾಲ ಸರ್ಕಾರಿ ಕೆಲಸದಲ್ಲಿದ್ದು, ಅದರಿಂದ ನಿವೃತ್ತರಾಗಿ ಜೀವನವನ್ನೆಲ್ಲಾ ಚಿತ್ರಕಲೆಗೆ ಮುಡಿಪಾಗಿಟ್ಟು ಕವಿಕರ್ಮದಲ್ಲಿಯೂ ತೊಡಗಿದ್ದಾರೆ. ಅವರ ಉತ್ತಮ ಚಿತ್ರಕ್ಕೆ ಬಹುಮಾನವೂ ಭಾರತ ಚಕ್ರೇಶ್ವರನ ಸಹ ಭೋಜನವೂ ದೊರೆತಂತೆಯೇ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದಕ್ಕಾಗಿ ತುರಂಗ ವಾಸವೂ ಪ್ರಾಪ್ತವಾಯಿತು. ಅವರ 'ಚರಕಗೀತೆಗಳು' ತಮಿಳರನ್ನೆಲ್ಲಾ ಗಂಡುಗಲಿ ಗಳನ್ನಾಗಿಸಿತು. ಅವರ ಪದ್ಯಗಳು, ಆತ್ಮಕತೆ, 'ಮಾಧವಕಮಲಮ್' ಎಂಬ ಕತೆ ಸರ್ವಾದರಣೀಯವಾಗಿವೆ. ಅವರ ಬರವಣಿಗೆ ಸರಳವಾದ ಜನಭಾಷೆಯಲ್ಲಿದೆ. ಸಮಕಾಲ ಜೀವನ ಮತ್ತು ಭಾವನೆಗಳು ಅವರ ಕಾವ್ಯಕ್ಕೆ ಜೀವಕಳೆಯನ್ನು ತುಂಬಿವೆ. ರಾಮಲಿಂಗಂ ಹಾಗೆ ಜೀವಂತವಾಗಿರುವಾಗಲೇ ವಿಶೇಷ ಗೌರವವನ್ನು ಪಡೆದ ಮತ್ತೊಬ್ಬ ಕವಿಯಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು.

ಯೋಗಿ ಶುದ್ಧಾನಂದ ಭಾರತಿಯ 'ಭಾರತಶಕ್ತಿ' ಒಂದು ಮಹಾಕಾವ್ಯ. ಹೋಮರ್ ಮತ್ತು ಡಾಂಟೆಯ ಕಾವ್ಯಗಳ ಮಾದರಿಯಲ್ಲಿ ರಚಿತವಾದುದು. ಭಾರತದ ನಾಯಕನಾಯಕಿಯರ ಅದ್ಭುತಶಕ್ತಿ ಇದರಲ್ಲಿ ವರ್ಣಿತವಾಗಿದೆ. ಶೈಲಿ ಸುಂದರ ವಾಗಿದೆ. ಶಬ್ದದಲ್ಲಿ ನಾದಮಾಧುರ್ಯವಿದೆ. ಅಭಿಪ್ರಾಯಗಳು ಭಾವಪೂರ್ಣವಾಗಿವೆ.

ವಿ. ಸ್ವಾಮಿನಾಥಶರ್ಮರು ರಾಜಕೀಯ ವಿಷಯವಾಗಿ ಬಹು ಸರಳವಾಗಿಯೂ ಸಾಮಾನ್ಯ ಜನರಿಗೆ ತಿಳಿಯುವಂತೆಯೂ ಬರೆಯಬಲ್ಲರು. 'ವ. ರ' ಅವರ 'ಸುಬ್ರಹ್ಮಣ್ಯ ಭಾರತಿಯವರ ಜೀವನ ಚರಿತ್ರೆ'ಯು ಅತ್ಯದ್ಭುತವಾದ ಗದ್ಯಕಾವ್ಯ.

ಈಗಿನ ಕಾಲದಲ್ಲಿ ಅನೇಕ ಮಹಿಳೆಯರು ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿದ್ದಾರೆ. ಕಾದಂಬರೀ ಲೇಖಕಿಯರಾದ ಕೊತ್ತನಾಯಕಿ ಅಮ್ಮಾಳ್, ಅಂಬುಜಮ್ಮಾಳ್ ಮತ್ತುಸ್ವರ್ಣಾಂಬಾಳ್, ಸುಬ್ರಹ್ಮಣ್ಯಂ ಜೀವನ ಚರಿತ್ರೆಕಾರಳಾದ ಶ್ರೀಮತಿ ಭಾರತಿ, ಈ ಕಾಲದ ಪ್ರಸಿದ್ಧರಾದ ಲೇಖಕಿಯರು.

ಆಧುನಿಕ ತಮಿಳು ಸಾಹಿತ್ಯವನ್ನು ಪರಿಪುಷ್ಟವನ್ನಾಗಿ ಮಾಡಿರುವುವು ವಿವಿಧ ರೀತಿಯ ಭಾಷಾಂತರಗಳು. ಜೀವನ ಚರಿತ್ರೆ, ನಾಟಕ, ಕಥೆ, ಕಾದಂಬರಿ ಮೊದಲಾದ ಕ್ಷೇತ್ರಗಳಲ್ಲಿ ಭಾಷಾಂತರ ಕಾರ್ಯ ವಿಶೇಷವಾಗಿ ನಡೆದಿದೆ. ಈ ಭಾಷಾಂತರಗಳೆಲ್ಲಾ ವೈಯಕ್ತಿಕ ಲೇಖಕರಿಂದ ನಡೆದುದೇ ವಿನಾ ಯಾವ ವ್ಯವಸ್ಥಿತವಾದ ಸಂಘಗಳಿಂದಲೂ ಆದುದಲ್ಲ. ಆದುದರಿಂದ ಇವುಗಳಿಗೆ ಕಾರಣಕರ್ತೃಗಳಾದವರು ಬಹು ಶ್ರಮದಿಂದಲೂ

ಸಾಹಿತ್ಯ ಪ್ರೇಮದಿಂದಲೂ ದುಡಿದಿದ್ದಾರೆ. ಅಧಿಕಾರಯುತವಾದ ಉತ್ತಮ ವಿಜ್ಞಾನ ಗ್ರಂಥಗಳಾಗಲಿ, ವಿಶ್ವಚರಿತ್ರೆಯಾಗಲಿ ತಮಿಳಿನಲ್ಲಿಲ್ಲದಿದ್ದರೂ ಜನೋಪಯುಕ್ತವಾದ ವಿವಿಧ ಭಾಷೆಗಳ ಅನೇಕ ಗ್ರಂಥಗಳು ತಮಿಳಿಗೆ ಭಾಷಾಂತರವಾಗಿವೆ. ಚತುರ್ವೇದ ಗಳು, ರಾಮಾಯಣ, ಭಾರತ, ಕೊರಾನ್, ಬೈಬಲ್, ಸತ್ಯಾರ್ಥಪ್ರಕಾಶ, ರಾಮಕೃಷ್ಣಾಮೃತ, ಪ್ಲೇಟೊವಿನ 'ರಿಪಬ್ಲಿಕ್', ರೂಸೋವಿನ 'ಸೋಷಿಯಲ್ ಕಾಂಟ್ರಾಕ್ಟ್', ವಿಕ್ಟರ್‌ಹ್ಯೂಗೊ, ಅಲೆಕ್ಸಾಂಡರ್ ಡ್ಯೂಮಾಸ್, ಮೌಪಾಸಂಟ್ ಮೊದಲಾದವರ ಕಾದಂಬರಿಗಳು, 'ಉಮ್ಮರ್ ಖಯ್ಯಾಮ್', ಸಾದಿಯ 'ಗಲಿ ಸ್ತಾನ್', ಬಂಕಿಂಚಂದ್ರಚಟರ್ಜಿ, ಶರಚ್ಚಂದ್ರ, ರಮೇಶಚಂದ್ರದತ್ತ ಮೊದಲಾದ ವರ ಬಂಗಾಳಿ ಕಾದಂಬರಿಗಳು, ರಬೀಂದ್ರನಾಥರ ಕಾದಂಬರಿ, ಸಣ್ಣಕತೆ, ಆತ್ಮ ಚರಿತ್ರೆಗಳು, ಮಹಾತ್ಮ ಗಾಂಧಿಯವರ ಆತ್ಮಕತೆ, ಜವಹರಲಾಲರ ಬರವಣಿಗೆಗಳು ಪ್ರೇಮಚಂದ್ರರ ಹಿಂದೀ ಕತೆಗಳು, ಖಂಡೇಕರ್ ಅವರ ಕೆಲವು ಮರಾಠಿ ಕಾದಂಬರಿ ಗಳು, ತಿಲಕರ ಗೀತಾ ರಹಸ್ಯದ ಕೆಲವು ಭಾಗ, ಮುನ್ಷಿಯವರ ಎರಡು ಗುಜರಾತಿ ಕಾದಂಬರಿಗಳು—ಇವೆಲ್ಲ ತಮಿಳಿಗೆ ಭಾಷಾಂತರವಾಗಿ ತಮಿಳರ ಆದರಕ್ಕೆ ಪಾತ್ರ ವಾಗಿವೆ.

ತಮಿಳು ಸಾಹಿತ್ಯದಲ್ಲಿ 'ಕೂತ್ತುನಾಟಕಮ್' ಎಂಬ ಸಾಹಿತ್ಯ ಪ್ರಭೇದವು ಉಕ್ತವಾಗಿದ್ದರೂ ಪ್ರಾಚೀನ ಕಾಲದಿಂದ ನಾಟಕಗಳಿಲ್ಲ. ಆದರೆ ಇತ್ತೀಚೆಗೆ ತಮಿಳ ರಿಗೆ ನಾಟಕಗಳಲ್ಲಿ ಬಹಳ ಅಭಿರುಚಿ. ಆದುದರಿಂದ ತಮಿಳು ದೇಶದ ಅನೇಕ ನಗರ ಗಳಲ್ಲಿ ನಾಟಕ ಸಂಸ್ಥೆಗಳು ಪ್ರಾರಂಭವಾಗಿವೆ. ಇವುಗಳಲ್ಲೆಲ್ಲಾ 'ಸುಗುಣ ವಿಲಾಸ ಸಭೆ' ಮುಖ್ಯವಾದುದು. ಈ ನಾಟಕ ಸಂಸ್ಥೆಗಳೆಲ್ಲ ತಮಗೆ ಬೇಕಾದ ನಾಟಕ ಗಳನ್ನು ತಾವೇ ಸಿದ್ಧಪಡಿಸಿಕೊಳ್ಳುತ್ತವೆ. ಈ ನಾಟಕಗಳ ವಸ್ತು ವಿಶೇಷವಾಗಿ ಭಾರತದಿಂದ ಆರಿಸಿಕೊಂಡವು. ತಮಿಳು ನಾಟಕಗಳಲ್ಲಿ ಸಂಭಾಷಣೆಗಳಿಗಿಂತ ಸಂಗೀ ತಕ್ಕೆ ಹೆಚ್ಚು ಸ್ಥಾನ. ಪಿ. ಸಂಬಂಧಮೊದಲಿಯಾರ್ರು ನಾಟಕ ಕ್ಷೇತ್ರದಲ್ಲಿ ಕೆಲಸ ಮಾಡಿದವರಲ್ಲಿ ಮೊತ್ತ ಮೊದಲಿಗರು. ಇವರು ಷೇಕ್ಸ್‌ಪಿಯರಿನ ಅನೇಕ ನಾಟಕ ಗಳನ್ನು ಭಾಷಾಂತರ ಮಾಡಿದ್ದಾರೆ. ಅವೆಲ್ಲ ಬಹುಜನಪ್ರಿಯವಾಗಿವೆ. ಇವರು ರಂಗ ಸ್ಥಳಕ್ಕೆ ಒಪ್ಪುವ ಸುಮಾರು ಒಂದು ನೂರು ಸ್ವತಂತ್ರ ನಾಟಕಗಳನ್ನು ರಚಿಸಿದ್ದಾರೆ. 'ಲೀಲಾವತಿ' 'ಸುಲೋಚನ' 'ಕಾದಲರ್‌ಕಣ್ಗಳ್' 'ಹರಿಶ್ಚಂದ್ರ' ಮೊದಲಾದುವು ಪ್ರಸಿದ್ಧವಾದುವು. ಮಾಧವಯ್ಯನ 'ತಿರುಮಲೈಸೇತುಪತಿ' 'ಬ್ಯಾರಿಸ್ಟರ್ ಪಂಚ ನಾಥಮ್' ತಮಿಳರ ಪ್ರತ್ಯೇಕ ಗುಣಗಳನ್ನು ಚಿತ್ರಿಸುತ್ತವೆ. ವಿ. ಕೆ. ಸುಬ್ರಹ್ಮಣ್ಯಂ ಅವರ 'ಕಲಾವತಿ' 'ಮಾನವಿಜಯಂ' 'ರೂಪವತಿ' ಓದುವುದಕ್ಕೆ ಯೋಗ್ಯವಾದ

ನಾಟಕಗಳು. ನಟೇಶಅಯ್ಯರ 'ಗಾನಸುಂದರಿ' ಭಾವಪ್ರಧಾನವಾದರೆ ಪಾರ್ಥಸಾರಥಿಯವರ 'ರಾಮಾನುಜಾಚಾರಿಯರ್' 'ಶಂಕರಾಚಾರಿಯರ್' 'ನಾರದರ್' ಮೊದಲಾದುವು ಭಕ್ತಿಪ್ರಧಾನವಾದವು. ಗೋಪಾಲಕೃಷ್ಣ ಭಾರತಿಯ 'ನಂದನ್ ಚರಿತ್ರಂ' ಸಂಗೀತ ನಾಟಕ. ರಾಮಚಂದ್ರ ಕವಿರಾಯರ 'ಶಾಕುಂತಲನಾಟಕಂ' 'ಭಾರತ ವಿಲಾಸಂ,' ಗೋವಿಂದಸ್ವಾಮಿರಾಯನ 'ಸಾವಿತ್ರೀನಾಟಕಂ,' ವಿಶ್ವನಾಥ ಮೊದಲಿಯಾರ್ರ 'ಡಂಬಾಚಾರಿ ವಿಲಾಸಂ' ರಾಮಸ್ವಾಮಿರಾಜುವಿನ 'ಪ್ರತಾಪ ಚಂದ್ರ ವಿಲಾಸಂ' ಸರಸಲೋಚನಶೆಟ್ಟಿಯ 'ಸರಸಾಂಗಿ' ಸಾಮಿನಾಥವೇಲನ್ ರಚಿತ 'ಮೂಕ್ಕುಧೂಳುಪಲ್ಲು' ಮೊದಲಾದುವು ತಮಿಳು ನಾಟಕದ ವಿವಿಧಮುಖದ ಪ್ರತಿನಿಧಿಗಳು.

ತಮಿಳರಿಗೆ ಕತೆ ಮತ್ತು ಕಾದಂಬರಿಯ ಹುಚ್ಚು ಬಹಳ. ತಮಿಳು ದಿನ, ವಾರ, ಮಾಸಪತ್ರಿಕೆಗಳಲ್ಲಿ ಇವುಗಳಿಗೆ ಮೀಸಲಿಲ್ಲದಿಲ್ಲ. ರಾಜಮಯ್ಯರ 'ಕಮಲಾಂಬಾಳ್' ಆರಣಿ ಕುಪ್ಪಸಾಮಿ ಮೊದಲಿಯಾರ್ರ ಭಾವೋದ್ರೇಕವಾದ ಕಾದಂಬರಿಗಳು ಬಹುಜನ ಪ್ರಿಯವಾಗಿವೆ. ರಂಗರಾಜು ಅವರ 'ಚಂದ್ರಕಾಂತ' 'ಮೋಹನ ಸುಂದರಂ' ಮತ್ತು 'ವಿಜಯರಂಗಂ' ಬಹು ಶಕ್ತಿಯುಕ್ತವಾಗಿಯೂ ಖಚಿತವಾದ ಪಾತ್ರ ಚಿತ್ರಣವುಳ್ಳದ್ದೂ ಆಗಿವೆ. ದೊರೆಸ್ವಾಮಯ್ಯಂಗಾರ್ಯರ 'ಸೌಂದರ್ಯ ಕೋಕಿಲಮ್' 'ಕುಂಭಕೋಣಮ್ ವಕೀಲ್' ಸರ್ವಾದರಣೀಯವಾಗಿವೆ. ಕತೆ ಹೇಳುವುದರಲ್ಲಿ ಒಂದು ನವ್ಯತೆಯನ್ನುಳ್ಳ ಕೋದೈನಾಯಕಿಯವರ ಕಾದಂಬರಿಗಳು ಅನೇಕರ ಮೆಚ್ಚಿಗೆಗೆ ಪಾತ್ರವಾಗಿವೆ. ಎಸ್. ವಿ. ವಿ ತನ್ನ ಬರವಣಿಗೆಯಲ್ಲೆಲ್ಲಾ ಒಂದು ಮೋಹಕ ಶಕ್ತಿಯನ್ನು ತುಂಬುವ ಜಾಣ್ಮೆಯನ್ನುಳ್ಳವರಾಗಿದ್ದಾರೆ. ಆತನ 'ಪುರುನಾಟ್ಟುಪೆಣ್' 'ವಸಂತನ್' ಮತ್ತು 'ಸುಂದರಮ್ಮಾಳ್' ಎಲ್ಲರ ಕೈಯಲ್ಲಿಯೂ ತಾಂಡವವಾಡುತ್ತಿವೆ. ಕಲ್ಕಿಯವರ 'ತ್ಯಾಗ ಭೂಮಿ' ವೆಂಕಟರಮಣಿಯವರ 'ಕಂದನ್' ಪ್ರತ್ಯೇಕ ಸಂದೇಶಗಳಿಂದ ಕೂಡಿವೆ.

ತಮಿಳರಿಗೆ ಕತೆಯೆಂದರೆ ಪಂಚಪ್ರಾಣ. ಮಹಾಭಾರತದ ಕತೆಗಳು ಈಗಲೂ ಬಹು ಆದರದಿಂದ ಓದಲ್ಪಡುತ್ತಿವೆ. ಸುಬ್ರಹ್ಮಣ್ಯ ಭಾರತಿಯ 'ಕುಳ್ಳಸಾಮಿಯರ್' 'ನವತಂತ್ರಕತ್ತೈಗಳ್' ನೀತಿಪ್ರದವಾದವು. ಎಂ. ಎಸ್. ಪಿ. ಅಯ್ಯರ 'ಮಂಗೈಯರ್ಕರಸಿಗಳ್' ವೀರ್ಯವತ್ತಾಗಿದೆ. 'ನಾಡೋಡಿ'ಯ ಕತೆಗಳು ದೈನಂದನ ಜೀವನಕ್ಕೆ ಸಂಬಧಪಟ್ಟವು. ಎ. ಎಸ್. ಪಿ ಅಯ್ಯರ ಕತೆಗಳು ಬಹು ಮನರಂಜಕವಾಗಿವೆ. ಇವಲ್ಲದೆ ತಮಿಳಿನಲ್ಲಿ ಇತ್ತೀಚೆಗೆ ಅನೇಕ ಸಾವಿರಾರು ಸಣ್ಣ ಕತೆಗಳು ರಚಿತವಾಗಿ ವೃತ್ತಪತ್ರಿಕೆಗಳ ಮೂಲಕ ಪ್ರಚಾರವಾಗಿವೆ.

ಆಧುನಿಕ ತಮಿಳು ಸಾಹಿತ್ಯದ ಸರ್ವತೋಮುಖವಾದ ಬೆಳವಣಿಗೆಗೆ ಪತ್ರಿಕೆಗಳಿಂದ ಆಗಿರುವ ಸೇವೆ ಅಪಾರವಾದುದು. ಮತ್ತಾವ ಶಕ್ತಿಯಿಂದಲೂ ಆಗದ ಕಾರ್ಯವನ್ನು ಅವು ಮಾಡಿವೆ. ಜನಗಳ ಕಷ್ಟಸುಖಗಳಲ್ಲಿ ಭಾಗಿಗಳಾಗಿ ಅವರಿಗೆ ತಿಳಿಯದೆಯೇ ಅವರನ್ನು ಪ್ರಗತಿ ಪಥದಲ್ಲಿ ತಂದಿವೆ. ಅವೇ ನಿಜವಾಗಿಯೂ ಸಾಮಾನ್ಯ ಜನರ ಜ್ಞಾನ ಜ್ಯೋತಿಗಳು. ಪತ್ರಿಕೆಗಳಲ್ಲೆಲ್ಲ 'ದಿನಸರಿ' ಪ್ರಮುಖವಾದುದು. ಅದರ ಸಂಪಾದಕರಾದ ಚೊಕ್ಕಲಿಂಗಂ ಪಂಡಿತ ಪಾಮರರಿಗೆ ಪ್ರಿಯರಾಗಿ ಅನೇಕ ಆಧುನಿಕ ಲೇಖಕರ ಸುಪ್ತ ಶಕ್ತಿಯನ್ನು ಪ್ರಚೋದಿಸಿದ್ದಾರೆ. ಸಾಹಿತ್ಯದ ಕಡೆ ಸ್ವಲ್ಪ ಅಭಿಮಾನದಿಂದ ಕೆಲಸ ಮಾಡುವ ದೈನಂದಿನ ಪತ್ರಿಕೆ 'ದಿನಮಣಿ.' ಅಖಂಡ ತಮಿಳು ದೇಶದಲ್ಲಿ ಬಹು ಆಕರ್ಷಕವಾದ ವಾರಪತ್ರಿಕೆ 'ಆನಂದವಿಕಟನ್.' ಇದು ತಿಳಿಹಾಸ್ಯದಿಂದ ಕೂಡಿ ಬಹು ಜನಪ್ರಿಯವಾಗಿದೆ. ಬಹು ಮೇಧಾವಿಗಳಾದ ಕೃಷ್ಣಮೂರ್ತಿಯವರ ನೇತೃತ್ವದಲ್ಲಿ ನಡೆಯುತ್ತಿರುವ 'ಕಲ್ಕಿ' ಸರ್ವಗ್ರಾಹ್ಯವಾದ ಮತ್ತೊಂದು ವಾರಪತ್ರಿಕೆ. ಇವಲ್ಲದೆ ಭಾಷಾಸಾಹಿತ್ಯ ಸೇವೆಯಲ್ಲಿ ಟೊಂಕ ಕಟ್ಟಿ ಕೆಲಸಮಾಡುತ್ತಿರುವ ಅನೇಕ ಪತ್ರಿಕೆಗಳು ತಮಿಳರ ಜೀವನವನ್ನು ಪರಿಪೂರ್ಣವನ್ನಾಗಿ ಮಾಡುತ್ತಿವೆ.

ಪತ್ರಿಕೆಗಳಿಗೆ ಶಕ್ತಿದಾಯಕರಾದ ಒಬ್ಬಿಬ್ಬರು ಸಾಹಿತಿಗಳನ್ನು ಹೆಸರಿಸುವುದು ಅಪ್ರಕೃತವೆನಿಸಲಾರದು. ಟಿ. ಕೆ. ಚಿದಂಬರನಾಥ ಮುದಲಿಯಾರ್ರು ಕಂಬರ ವಿಷಯವಾದ ಉತ್ತಮ ವಿಮರ್ಶೆಗಳನ್ನು ರಚಿಸಿದ್ದಾರೆ. ವಿ. ಶ್ರೀ ಯವರು ಅನೇಕ ಪ್ರಾಚೀನ ಮಹಾಕಾವ್ಯಗಳನ್ನು ಸುಂದರವಾದ ಆಧುನಿಕ ಶೈಲಿಯಲ್ಲಿ ಪರಿಚಯ ಮಾಡಿದ್ದಾರೆ. ವೈಯ್ಯಾಪುರಿಪಿಳ್ಳೆಯವರ ಸಂಘಕಾಲದ ಗ್ರಂಥಗಳ ವ್ಯಾಖ್ಯಾನಗಳು ಉದ್ಬೋಧಕವಾಗಿವೆ. ದೇಶಿಕವಿನಾಯಕಮ್‌ಪಿಳ್ಳೆ ಮತ್ತು 'ಭಾರತೀವಾಸನ್' ಉತ್ತಮ ಕವನಗಳಿಂದಲೂ ಹಾಡುಗಳಿಂದಲೂ ತಮಿಳು ಸಾಹಿತ್ಯವನ್ನು ಸಂಪದ್ಯುಕ್ತವಾಗಿ ಮಾಡಿದ್ದಾರೆ. ಸಿ. ರಾಜಗೋಪಾಲಾಚಾರ್ಯ ಮತ್ತು ರೈಟ್ ಆನರಬಲ್ ವಿ. ಎಸ್. ಶ್ರೀನಿವಾಸಶಾಸ್ತ್ರಿಗಳ ಬರವಣಿಗೆಗಳು ತಮಿಳು ಸಾಹಿತ್ಯಕ್ಕೆ ಗೌರವವನ್ನು ತಂದಿವೆ.

ಈ ಇತಿಹಾಸವನ್ನು ಮುಗಿಸುವುದಕ್ಕೆ ಮೊದಲು ಮದ್ರಾಸ್ ವಿಶ್ವವಿದ್ಯಾನಿಲಯದ ವಿಶೇಷ ಸೇವೆಯನ್ನು ಸೂಚಿಸದಿದ್ದರೆ ಅಪಚಾರವಾದೀತು. ಅಲ್ಲಿಯ ಡಾ|| ವಿ. ಸ್ವಾಮಿನಾಥಯ್ಯರಂತಹವರು ಅದ್ಭುತವಾದ ಭಾಷಾಸೇವೆ ಮಾಡಿದ್ದಾರೆ. ಇವರು ಅನೇಕ ಪ್ರಾಚೀನ ಗ್ರಂಥಗಳನ್ನು ಸಂಶೋಧಿಸಿ ಪ್ರಕಟಪಡಿಸಿದ್ದಾರೆ. ಇವರನ್ನು 'ಪ್ರಾಚೀನ ಗ್ರಂಥ ಸಂಶೋಧಕ ಶಿಖಾಮಣಿ' ಎಂದು ಕರೆಯಬಹುದು. ಮದ್ರಾಸ್ ವಿಶ್ವವಿದ್ಯಾನಿಲಯದಿಂದ ವೈಯ್ಯಾಪುರಿಪಿಳ್ಳೆಯವರ ಸಂಪಾದಕತ್ವದಲ್ಲಿ

## ‘ಕವಳ ತಾಯೀ ಕವಳ’

ಇರುಳುದ್ದಕೂ ಹರಿದು ಬರುತಿದೆ ಕೂಗು :
‘ಕವಳ ತಾಯೀ ಕವಳ’

ಚಿಟುಗುಡುವ ಮಬ್ಬು ಮಳೆ; ಸಿಳ್ಳು ಹಾಕುವ ಗಾಳಿ ;
ಸುಮ್ಮನೆಯೆ ಸದ್ದಿರದೆ ಬಿದ್ದ ಬೀದಿಯ ಬದಿಗೆ
ಏನನೋ ಜಾನಿಸುತ ನಿಂತ ದೀಪದ ಕಂಬ—
ಅದರಡಿಗೆ ಚಲಿಸುತಿವೆ ನೆರಳೆರಡು, ಕೈ ಕೈಹಿಡಿದು
ಬತ್ತಲೆಯ ಬೀದಿಯಲಿ ಒಂದೇ ಸಮನೆ ಕೂಗುತ್ತ :
‘ಕವಳ ತಾಯೀ ಕವಳ.’

ಒಳಗೆ ಮಗು ತೊಟ್ಟಿಲಲಿ ಕನವರಿಸುತಿದೆ :
ಪಾರಿಜಾತದ ತೋಟ ಚಿಟ್ಟೆ ಬಳಗ.
ಚಂದುಮಾಮನ ಚಿಗುರೆ ಬೆನ್ನೇರಿ ಹೋಗೋಣ
ತಾರೆಮಲ್ಲಿಗೆ ದಾರಿ ದೂರ ದೂರ.

ಉದ್ದಕೂ ಮುಚ್ಚಿರುವ ಬಾಗಿಲು ; ಒಳಗೆ ಎಲ್ಲೋ ಬೆಳಕು
ಮಂದ ಮಂದ.
ಚೌಕದಲಿ ತಲೆಯೆತ್ತಿ ನಿಂತಿರುವ ಗೋಪುರದ ಗಡಿಯಾರ
ಹೊಡೆಯುತಿದೆ ಘಂಟೆ ಹನ್ನೊಂದ.
ಹಗಲೆಲ್ಲ ಗಾಡಿಯನೆಳದು ಲಾಯಕ್ಕೆ ಬಂದಿದೆ ಕುದುರೆ,
ಹಾರೈಸುತಿದೆ—‘ಮತ್ತೆ ಬೆಳಗಾಗದಿರಲಿ.’
ಆಗೊಂದು ಈಗೊಂದು ಕುಡಿದ ಕೆಂಗಣ್ತೆರೆದು ಜಾರಿ ಓಡುವ ಕಾರು
ಬೀದಿಯಲ್ಲಿ !

ಬೀದಿ ಬೆಳಕಿನ ಚಾಪೆ ದೂರ ದೂರದವರೆಗೆ ;
ದೀಪ ದೀಪದ ಕೆಳಗೆ ಸಾಗುತಿವೆ ನೆರಳೆರಡು,
ಕೈ ಕೈಹಿಡಿದು—ಎಂದಿನಿಂದಲೊ ಏನೊ—
ಕರುಳಿರಿಯುತಿದೆ ಕೂಗು ಕಿವುಡು ಬಾಗಿಲು ಹೊರಗೆ :
‘ಕವಳ ತಾಯೀ ಕವಳ.’

ಜಿ. ಎಸ್. ಶಿವರುದ್ರಪ್ಪ

# ಸ್ವಭಾಷಾ ಮಾಧ್ಯಮ

## (ಒಂದು ವಿಶ್ಲೇಷಣ)

### ೧. ಸ್ವಭಾಷೆ ಮತ್ತು ಸ್ವಾತಂತ್ರ್ಯ

ನಮ್ಮ ದೇಶವು ರಾಜಕೀಯ ಸ್ವಾತಂತ್ರ್ಯವನ್ನು ಪಡೆದಿರುವುದಾದರೂ, ಈ ದೇಶದಲ್ಲಿ ಆಡಳಿತ, ನ್ಯಾಯಸ್ಥಾನ, ಶಿಕ್ಷಣ ಮತ್ತು ಅಂತರಪ್ರಾಂತೀಯ ವ್ಯವಹಾರಗಳ ಭಾಷಾ ಮಾಧ್ಯಮವು ಮಾತ್ರ ಇನ್ನೂ ಪರಕೀಯವಾಗಿಯೇ ಇದೆ. ನಮ್ಮ ಹಿಂದೂ ದೇಶದ ಭಾಷೆಗಳು ತಮ್ಮ ಸಹಜವಾದ ಹಕ್ಕಿನಿಂದ ಪ್ರತಿಷ್ಠಿತವಾಗಿರಬೇಕಾದ ಸ್ಥಾನಗಳನ್ನು ಅನ್ಯ ಭಾಷೆಯು ಆಕ್ರಮಿಸಿಕೊಂಡಿರುವ ವ್ಯಂಗ್ಯವಾದ, ಶೋಚನೀಯವಾದ, ಈ ಪರಿಸ್ಥಿತಿಯು ನಮ್ಮ ದೇಶದ ಗೌರವ ಮತ್ತು ಪ್ರತಿಷ್ಠೆಗಳಿಗೆ ತಕ್ಕುದಲ್ಲ. ಸ್ವಭಾಷಾ ಮಾಧ್ಯಮದಲ್ಲಿ ಸಹಜವಾದ ಸೌಲಭ್ಯವಿರುವುದೇ ಅಲ್ಲದೆ, ಅದು ನಮ್ಮ ರಾಷ್ಟ್ರೀಯ ಸ್ವಾತಂತ್ರ್ಯದ ಒಂದು ಅಂಗವೂ ಆಗಿದೆ. ಆದ್ದರಿಂದ ಭಾಷಾ ಸ್ವಾತಂತ್ರ್ಯವನ್ನು ಆದಷ್ಟು ಬೇಗ ಪಡೆಯುವುದಕ್ಕೆ ನಾವು ಸರ್ವ ಪ್ರಯತ್ನಗಳನ್ನೂ ನಡೆಸಬೇಕು. ರಾಜತಂತ್ರ ಸ್ವಾತಂತ್ರ್ಯವನ್ನೇ ಸಾಧಿಸಿರುವ ನಮಗೆ ಕೇವಲ ಒಂದು ಭಾಷಾ ಸ್ವಾತಂತ್ರ್ಯದ ಸಾಧನೆಯು ಕಷ್ಟವಾಗಲಾರದು, ಕಷ್ಟವಾಗಕೂಡದು.

ಸ್ವಭಾಷೆಯು ನಮಗೆ ವಂಶಪಾರಂಪರ್ಯವಾಗಿ ಬಂದದ್ದು. ಅದು ನಮ್ಮ ರಕ್ತದಲ್ಲಿ ಲೀನವಾಗಿದೆ. ಅದರ ಉಚ್ಚಾರಣೆ, ರಚನೆ, ಶೈಲಿ, ಎಲ್ಲವೂ ನಮಗೆ ಸರಾಗ, ಸಹಜ. ನಮ್ಮ ಅಂತರಂಗದಲ್ಲಿ ಆಲೋಚನೆಯು ಸುಗಮವಾಗಿ ನಡೆಯುವುದಕ್ಕೂ, ನಡೆಸಿದ ಆಲೋಚನೆಯನ್ನು ನೇರವಾಗಿ ವ್ಯಕ್ತಪಡಿಸುವುದಕ್ಕೂ, ವ್ಯಕ್ತಪಡಿಸಲ್ಪಟ್ಟ ವಿಷಯವನ್ನು ಕ್ಷಿಪ್ರವಾಗಿ ಗ್ರಹಿಸುವುದಕ್ಕೂ, ನಮ್ಮ ಮನಸ್ಸು ಸ್ವಭಾಷೆಯನ್ನೇ ಬಯಸುತ್ತದೆ. ಯೋಚನೆ ಮಾಡುವಾಗ ಅನೇಕ ವೇಳೆ ನಾವು ಗೊಣಗಿಕೊಳ್ಳುವುದು ನಮ್ಮ ಸ್ವಂತ ಭಾಷೆಯಲ್ಲೇ. ಯಾವುದಾದರೊಂದು ವಿಷಯವನ್ನು ಹೇಳೋಣವೆನಿಸಿದಾಗ ಥಟ್ಟನೆ ನಮ್ಮ ಬಾಯಿಗೆ ಬರುವುದು ನಮ್ಮ ಸ್ವಂತ ಬಳಕೆಯ ಭಾಷೆಯೇ. ಇನ್ನೊಬ್ಬರು ಹೇಳಿದ ವಿಷಯವು ನಮ್ಮ ಮನಸ್ಸಿಗೆ ಸುಲಭವಾಗಿ ಬೋಧೆಯಾಗುವುದು ನಮ್ಮ ಸ್ವಂತ ಭಾಷೆಯಲ್ಲಿ ಹೇಳಲ್ಪಟ್ಟಾಗಲೇ. ಮಗು ತನ್ನ ತಾಯಿಯ ಮುಖವನ್ನು ಅಕ್ಕರೆಯಿಂದ ನೋಡುತ್ತದೆ; ಹೊಸಬರು ಬಂದರೆ ದುರುಗುಟ್ಟಿಕೊಂಡು ನೋಡುತ್ತದೆ. ಮನಸ್ಸೂ ಹಾಗೆಯೇ; ತನ್ನ ಬಳಕೆಯ ಭಾಷೆಗೆ ಒಲಿಯುವ ಹಾಗೆ, ಪ್ರಸನ್ನವಾಗುವ

ಹಾಗೆ, ಅದು ಅನ್ಯಭಾಷೆಗೆ ಒಲಿಯುವುದಿಲ್ಲ, ಪ್ರಸನ್ನವಾಗುವುದಿಲ್ಲ. ಮನಸ್ಸಿನ ಪ್ರಸನ್ನತೆಗೂ ಬಳಕೆಯ ವಾತಾವರಣಕ್ಕೂ ನಿಕಟವಾದ ಸಂಬಂಧವುಂಟು. ಸ್ವಭಾಷೆಯು ಮನಸ್ಸಿಗೆ ಹಿತವೆನಿಸುವ ಬಳಕೆಯ ವಾತಾವರಣವನ್ನು ಕಲ್ಪಿಸಿ, ವಿಷಯವನ್ನು ಮನಸ್ಸಿನೊಳಕ್ಕೆ ನೇರವಾಗಿ ಕೊಂಡೊಯ್ಯುವುದರಿಂದ, ಮನಸ್ಸು ವಿಷಯವನ್ನು ಪ್ರಸನ್ನತೆಯಿಂದ ಸ್ವೀಕರಿಸಿ, ಹೆಚ್ಚು ಶ್ರಮವಿಲ್ಲದೆ ಅರ್ಥಮಾಡಿಕೊಳ್ಳುತ್ತದೆ. ಆದರೆ ಅದೇ ವಿಷಯವು ಅನ್ಯಭಾಷೆಯಲ್ಲಿ ಹೇಳಲ್ಪಟ್ಟಾಗ ಮನಸ್ಸಿನ ಪ್ರಸನ್ನತೆಯು ಕಡಮೆಯಾಗುವುದೊಂದೇ ಅಲ್ಲದೆ, ಅದರ ಶ್ರಮವೂ ಹೆಚ್ಚುತ್ತದೆ. ಏಕೆಂದರೆ, ವಿಷಯವು ತನ್ನ ಆಂತರಿಕವಾದ ಕಾಠಿಣ್ಯದ ದೆಸೆಯಿಂದ ಕೊಡುವ ಶ್ರಮದ ಜೊತೆಗೆ, ಅನ್ಯಭಾಷೆಯ ಅನ್ಯತೆಯು ಕೊಡುವ ಶ್ರಮವೂ ಸೇರಿಕೊಳ್ಳುತ್ತದೆ. ಈ ಹೆಚ್ಚಿನ ಶ್ರಮವನ್ನು ಮನಸ್ಸಿನಮೇಲೆ ಹೊರಿಸಲೇಕೆ? ಅನ್ಯಭಾಷೆಯಲ್ಲಿ ಉಚ್ಚಾರಣೆ, ವ್ಯಾಕರಣ ತಂತ್ರ, ಶೈಲಿ, ಎಲ್ಲವೂ ಅನ್ಯವೇ. ಅದನ್ನು ನಾವು ಎಷ್ಟು ಚೆನ್ನಾಗಿ ಕಲಿತಿದ್ದರೂ, ಅದು ನಮ್ಮ ರೂಢಿಯಲ್ಲಿ ಎಷ್ಟು ಕಾಲದಿಂದ ಇದ್ದರೂ, ಅದರ ಅನ್ಯತೆಯು ಮಾತ್ರ ಹೋಗುವುದಿಲ್ಲ. ಅಲ್ಲದೆ ನಮ್ಮ ದೇಶದಲ್ಲಿ ಇಂಗ್ಲಿಷ್ ಭಾಷೆ ಬಾರದವರು ಎಷ್ಟೋ ಜನ ಇದ್ದಾರೆ. ಕಛೇರಿ, ನ್ಯಾಯಸ್ಥಾನ, ವಾಣಿಜ್ಯ ಮುಂತಾದ ವ್ಯವಹಾರಗಳಲ್ಲಿ ಅವರ ಪಾಡೇನು? ಆದ್ದರಿಂದ ನಾವು ಅನ್ಯಭಾಷಾ ಮಾಧ್ಯಮವನ್ನು ಆದಷ್ಟು ಬೇಗ ಕೈಬಿಟ್ಟು, ಸ್ವಭಾಷಾ ಮಾಧ್ಯಮವನ್ನು ರೂಢಿಗೆ ತಂದುಕೊಳ್ಳುವುದಕ್ಕೆ ಅವಶ್ಯಕವಾದ ಎಲ್ಲ ಕಾರ್ಯಗಳನ್ನೂ ಕೂಡಲೇ ಕೈಕೊಂಡು ಭರದಿಂದ ನಿರ್ವಹಿಸುವ ಚಟುವಟಿಕೆಯಲ್ಲಿ ತೊಡಗಬೇಕಾಗಿದೆ.

## ೨. ನಮ್ಮ ಭಾಷೆಗಳ ಅನೇಕತೆ ಮತ್ತು ಅವುಗಳ ಅಖಿಲಭಾರತ ಸಮನ್ವಯ

ಭಾಷಾಸ್ವಾತಂತ್ರ್ಯದ ಸಾಧನೆಯಲ್ಲಿ ಕೆಲವು ತೊಡಕುಗಳಿವೆ. ಅವುಗಳನ್ನು ಬಿಡಿಸುವ ಪ್ರಯತ್ನಗಳು ಪ್ರಾರಂಭವಾಗಿವೆ. ನಾನಾ ಅಭಿಪ್ರಾಯಗಳ ಕ್ರೋಢೀಕರಣ ಮತ್ತು ಪರಿಶೀಲನೆಗಳು ನಡೆಯುತ್ತಿವೆ. ಇಡೀ ಹಿಂದೂಸ್ಥಾನವು ಒಂದು ಆಡಳಿತದಲ್ಲಿದ್ದರೂ, ಇಲ್ಲಿ ಭಾಷೆಗಳ ಅನೇಕತೆ ಇದೆ. ದೇಶದ ಆದ್ಯಂತವೂ 'ಹಿಂದೂ ಭಾಷೆ' ಎಂಬ ಒಂದು ಭಾಷೆಯು ಬಳಕೆಯಲ್ಲಿದ್ದಿದ್ದರೆ, ನಮ್ಮ ಭಾಷಾ ಸಮಸ್ಯೆಯು ಇಷ್ಟು ತೊಡಕಿನದಾಗಿರುತ್ತಿರಲಿಲ್ಲ. ಈಗ ಇರುವ ಪರಿಸ್ಥಿತಿಯಲ್ಲಿ, ಕೇಂದ್ರದ ಆಡಳಿತ ಮತ್ತು ಅಂತರ ಪ್ರಾಂತೀಯ ವ್ಯವಹಾರಗಳಿಗೆ ಒಂದು ಭಾಷೆಯನ್ನು—ಪ್ರಾಯಶಃ ಹಿಂದೀ ಭಾಷೆಯನ್ನು—ನಿಯಮಿಸಿಕೊಂಡು, ಪ್ರಾಂತಗಳಲ್ಲಿ ಒಳಾಡಳಿತ, ನ್ಯಾಯ

ಸ್ಥಾನ, ಮತ್ತು ಶಿಕ್ಷಣಗಳಿಗೆ ಆಯಾ ಪ್ರಾಂತೀಯ ಭಾಷಾ ಮಾಧ್ಯಮವನ್ನು ಇಟ್ಟು ಕೊಳ್ಳುವುದು ಸೂಕ್ತವೆಂದು ತೋರುತ್ತದೆ. ಪ್ರತಿಯೊಂದು ಪ್ರಾಂತದಲ್ಲೂ ಭಾಷಾ ಶಿಕ್ಷಣದಲ್ಲಿ ಆಯಾ ಪ್ರಾಂತದ ಭಾಷೆಯು ಪ್ರಥಮ ಭಾಷೆಯಾಗಿಯೂ ಕೇಂದ್ರ ಸರಕಾರದ ಭಾಷೆಯು ದ್ವಿತೀಯ ಭಾಷೆಯಾಗಿಯೂ ಇದ್ದು, ವಿದ್ಯೆಯ ಇತರ ಭಾಗಗಳಲ್ಲಿ ಶಿಕ್ಷಣವು ಆಯಾ ಪ್ರಾಂತೀಯ ಭಾಷಾಮಾಧ್ಯಮದಲ್ಲಿ ನಡೆಯುವಂತಾಗ ಬೇಕು. ದ್ವಿತೀಯ ಭಾಷೆಯನ್ನು ಸಾಮಾನ್ಯ ವ್ಯವಹಾರದ ಮಟ್ಟಕ್ಕೆ ಕಲಿತರೆ ಸಾಕು, ಆದರೆ ಅಷ್ಟನ್ನು ಕಡ್ಡಾಯವಾಗಿ ಕಲಿಯಬೇಕು. ಇಡೀ ಹಿಂದೂಸ್ಥಾನಕ್ಕೆ ಶಾಸ್ತ್ರೀಯ ವೈಶಿಷ್ಟ್ಯವುಳ್ಳ ಶಬ್ದಗಳ ಒಂದು ಶಬ್ದಕೋಶವಿರಬೇಕು; ಅದು ಹೇಗೆ ಸಾಧ್ಯವೆಂಬುದನ್ನು ಮುಂದೆ ವಿವರಿಸೋಣ. ಒಂದು ಪ್ರಾಂತದಿಂದ ಇನ್ನೊಂದು ಪ್ರಾಂತಕ್ಕೆ ಹೋಗುವ ವಿದ್ಯಾರ್ಥಿಗಳ ಸಲುವಾಗಿ, ಅವಶ್ಯವಾದ ಸ್ಥಳಗಳಲ್ಲಿ ವಿದ್ಯಾ ನಿಲಯಗಳಲ್ಲಿ ಕೇಂದ್ರ ಭಾಷಾಮಾಧ್ಯಮದ ವಿಶೇಷ ತರಗತಿಗಳಿರಬೇಕು. ಆ ವಿಶೇಷ ತರಗತಿಗಳಿಗೆ ಅಭ್ಯಾಗತ ವಿದ್ಯಾರ್ಥಿಗಳೇ ಅಲ್ಲದೆ, ಇಷ್ಟಪಡುವ ಅದೇ ಪ್ರಾಂತದ ವಿದ್ಯಾರ್ಥಿಗಳೂ ಸೇರಬಹುದು. ಪುಸ್ತಕ ಭಂಡಾರಗಳಲ್ಲಿ ನಮ್ಮ ದೇಶದ ಎಲ್ಲಾ ಭಾಷೆಗಳ ಗ್ರಂಥಗಳಿಗೂ ತಕ್ಕಷ್ಟು ಸ್ಥಾನವಿರಬೇಕು. ಸ್ವಭಾಷಾ ಮಾಧ್ಯಮವು ಸುವ್ಯವಸ್ಥಿತವಾಗಿ ರೂಪುಗೊಂಡು ಬಳಕೆಗೆ ಬರುವುದಕ್ಕೆ ಅವಶ್ಯಕವಾದ ಎಲ್ಲಾ ವಿವರಗಳಿಗೂ ಶ್ರದ್ಧೆಯಿಂದ ಗಮನವನ್ನು ಕೊಡಬೇಕು.

## ೩. ನಮ್ಮ ಭಾಷೆಗಳ ಸಿದ್ಧತೆ

ಕೇಂದ್ರ ಭಾಷೆಯ ಆಯ್ಕೆ ಮತ್ತು ವ್ಯಾಪ್ತಿಗಳ ವಿಚಾರದಲ್ಲಿ ಭಿನ್ನಾಭಿಪ್ರಾಯ ಗಳಿಗೆ ಅವಕಾಶವಿದೆ. ಕೊನೆಗೆ ಅವುಗಳ ತೀರ್ಮಾನವು ಯಾವ ರೀತಿ ಆದಾಗ್ಯೂ ನಮ್ಮ ದೇಶದ ಪ್ರತಿಯೊಂದು ಭಾಷೆಯೂ ಸಾಕಾದಷ್ಟು ವೈಜ್ಞಾನಿಕ ಮತ್ತು ಇತರ ಆಧುನಿಕ ಶಬ್ದಸಂಪತ್ತಿಯನ್ನು ಹೊಂದಿ, ಪುಷ್ಟಗೊಂಡು, ಆಧುನಿಕ ಆವಶ್ಯಕತೆ ಗಳ ಮಟ್ಟಕ್ಕೆ ಸಿದ್ಧವಾಗಬೇಕಾದ್ದು ನಿರ್ವಿವಾದವೂ ವಿಹಿತವೂ ಆಗಿದೆ. ಭಾಷೆ ಗಳನ್ನು ಈ ರೀತಿಯಲ್ಲಿ ಸಿದ್ಧಗೊಳಿಸುವ ಕಾರ್ಯವು ನಮ್ಮ ವಿಶ್ವವಿದ್ಯಾನಿಲಯಗಳು ಕೈಕೊಳ್ಳಬೇಕಾದುದು. ನಮ್ಮ ವಿದ್ವಾಂಸರು ಶಾಸ್ತ್ರೀಯ ವೈಶಿಷ್ಟ್ಯವನ್ನುಳ್ಳ ಶಬ್ದ ಗಳನ್ನು ರಚಿಸಿ, ರಾಜತಂತ್ರ, ನ್ಯಾಯ, ವಿಜ್ಞಾನ, ಮುಂತಾಗಿ ವಿದ್ಯೆಯ ಪ್ರತಿ ಯೊಂದು ಭಾಗದಲ್ಲೂ ತತ್ಸಂಬಂಧವಾದ ಒಂದು ಶಬ್ದಕೋಶವನ್ನೂ, ನಾನಾ ಹಂತ ಗಳ ಗ್ರಂಥಗಳನ್ನೂ ನಮ್ಮ ಮಾಧ್ಯಮದಲ್ಲಿ ಬರೆದು ರೂಢಿಗೆ ತರಬೇಕಾಗುತ್ತದೆ. ಈ ಕಾರ್ಯವು ಶ್ರಮಸಾಧ್ಯವಾದುದು. ಈ ಶ್ರಮದ ಪರಾಕಾಷ್ಠತೆ ಇರುವುದು

ವಿಜ್ಞಾನ ಕ್ಷೇತ್ರದಲ್ಲಿ ಎಂದು ಹೇಳಿದರೆ ಪ್ರಾಯಶಃ ತಪ್ಪಾಗಲಾರದು. ವಿಜ್ಞಾನದ ಅನೇಕ ಭಾಗಗಳಿಗೆ ನಮ್ಮೀ ಭರತಖಂಡವು ಜನ್ಮಭೂಮಿಯೆನಿಸಿದ್ದಾಗ್ಯೂ, ಭಾಸ್ಕರಾಚಾರ್ಯರ ಕಾಲದಿಂದ, ಎಂದರೆ ಕ್ರಿ. ಶ. ೧೨ ನೆಯ ಶತಮಾನದಿಂದ, ಈಚೆಗೆ ಸುಮಾರು ಏಳು ಶತಮಾನಗಳ ಕಾಲ ಈ ದೇಶದಲ್ಲಿ ವಿಜ್ಞಾನದ ಅಧ್ಯಯನವಾಗಲಿ, ವ್ಯವಸಾಯವಾಗಲಿ, ಸಂಶೋಧನೆಯಾಗಲಿ, ನಡೆಯಲೇ ಇಲ್ಲವೆಂದು ಹೇಳಿದರೂ ಅತ್ಯುಕ್ತಿಯಾಗಲಾರದು. ಈ ಪರಾಙ್ಮುಖತೆಗೆ ಈ ದೇಶದ ಅಂದಿನ ರಾಜಕೀಯ ಪರಾಧೀನತೆಯೇ ಮುಖ್ಯಕಾರಣವಾಗಿದ್ದಿರಬೇಕು. ಆದರೆ ಆ ಕಾಲದಲ್ಲಿ ಪಾಶ್ಚಿಮಾತ್ಯ ದೇಶಗಳು ವಿಜ್ಞಾನಕ್ಷೇತ್ರದಲ್ಲಿ ಭರದಿಂದ ಮುಂದುವರಿದವು. ಆಲೋಚನೆಯ ಪ್ರಗತಿಯೇ ಶಬ್ದಸಂಪತ್ತಿಯ ವೃದ್ಧಿಗೆ ಕಾರಣ. ಆದ್ದರಿಂದ ಈಗ ಪಾಶ್ಚಿಮಾತ್ಯ ಭಾಷೆಗಳಲ್ಲಿರುವಷ್ಟು ವೈಜ್ಞಾನಿಕ ಶಬ್ದಸಂಪತ್ತಿಯು ನಮ್ಮ ಭಾಷೆಗಳಲ್ಲಿಲ್ಲ. ಆದರೆ ಇದು ವಿಜ್ಞಾನ ಯುಗ. ನಾವು ವಿಜ್ಞಾನಕ್ಕೆ ಹೆಚ್ಚು ಗಮನವನ್ನು ಕೊಡುವುದು ಅವಶ್ಯಕ. ಇತ್ತೀಚೆಗೆ ನಮ್ಮ ದೇಶದಲ್ಲಿ ವಿಶ್ವವಿದ್ಯಾನಿಲಯಗಳೂ, ವಿಜ್ಞಾನ ಸಂಶೋಧನಾಲಯಗಳೂ, ಯಂತ್ರಾಗಾರಗಳೂ ಸ್ಥಾಪಿತವಾಗಿ, ದೇಶವು ವಿಜ್ಞಾನೋನ್ಮುಖವಾಗಿದೆ. ಅಲ್ಲದೆ ರಾಜಕೀಯ ಸ್ವಾತಂತ್ರ್ಯವು ಲಭಿಸಿದಮೇಲೆ ಈ ದೇಶವು ವಿಜ್ಞಾನದ ಪ್ರಗತಿಯಲ್ಲಿ ಇತರ ದೇಶಗಳೊಂದಿಗೆ ಸ್ವತಂತ್ರವಾಗಿ ಸ್ಪರ್ಧಿಸಬೇಕಾದ ಅವಶ್ಯಕತೆಯು ತೀವ್ರವಾಗಿ ಉಂಟಾಗಿದೆ. ಇಂದು ವಿಜ್ಞಾನ ಕ್ಷೇತ್ರದಲ್ಲಿ ಯಾವ ದೇಶವು ಮುಂದುವರಿದಿದೆಯೋ, ರಾಜಕೀಯ ಪ್ರಾಬಲ್ಯದಲ್ಲೂ ಆ ದೇಶದ ಕೈಯೇ ಮೇಲಾಗಿರುವುದು. ವಿಜ್ಞಾನದಲ್ಲಿ ಮುಂದುವರಿದಿರುವ ಪ್ರಬಲ ರಾಷ್ಟ್ರಗಳ ಮಧ್ಯೆ ನಾವು ತಲೆಯೆತ್ತಿಕೊಂಡು ಬಾಳಬೇಕಾದರೆ—ಮಹಾತ್ಮ ಗಾಂಧೀಜಿಯವರು ನಮ್ಮ ಕೈಗೆ ಕೊಟ್ಟುಹೋಗಿರುವ ಸ್ವಾತಂತ್ರ್ಯವೆಂಬ ಈ ಅಮೂಲ್ಯವಾದ ಚಿನ್ನದ ಪ್ರತಿಮೆಯನ್ನು ನಾವು ಸಂರಕ್ಷಿಸಿಕೊಳ್ಳಬೇಕಾದರೆ—ನಮ್ಮ ದೇಶವೂ ವಿಜ್ಞಾನದಲ್ಲಿ ಮುಂದುವರಿಯಬೇಕು. ಈ ವಿಷಯವನ್ನು ಜನತೆಯು ಮನಗಾಣಬೇಕು, ವಿಜ್ಞಾನಕ್ಕೆ ವಿಶೇಷವಾದ ಪ್ರೋತ್ಸಾಹವನ್ನೂ ಪ್ರಾಶಸ್ತ್ಯವನ್ನೂ ಕೊಡಬೇಕು. ನಮ್ಮ ಯುವಕರಿಗೆ ವಿಜ್ಞಾನದ ಅಧ್ಯಯನದಲ್ಲೂ, ಸಂಶೋಧನೆಯಲ್ಲೂ ಶ್ರದ್ಧಾಸಕ್ತಿಗಳು ಹೆಚ್ಚುವಂಥ ಶಿಕ್ಷಣವನ್ನು ಕೊಡಬೇಕು. ಅಂಥ ಶಿಕ್ಷಣಕ್ಕೆ ಸುವ್ಯವಸ್ಥಿತವಾದ ಸ್ವಭಾಷಾಮಾಧ್ಯಮವು ಅತ್ಯಂತ ಸಹಕಾರಿಯಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ಮನಸ್ಸಿನಲ್ಲಿ ಯೋಚನೆಯು ಸರಾಗವಾಗಿ ಹರಿಯುವುದಕ್ಕೂ ಸ್ವಭಾಷೆಯು ಸಹಕಾರಿಯಾಗುವುದರಿಂದ, ಪರಿಣಾಮದಲ್ಲಿ ಸ್ವಭಾಷಾಮಾಧ್ಯಮವು ವೈಜ್ಞಾನಿಕ ಸಂಶೋಧನೆಯನ್ನೂ ತ್ವರೆಗೊಳಿಸುತ್ತದೆ; ಸಂಶೋಧನೆಯು

ಸುಗಮವೂ ವಿಪುಲವೂ ಆಗುವುದಕ್ಕೆ ಕಾರಣವಾಗುತ್ತದೆ. ಆದ್ದರಿಂದ ತಾತ್ಕಾಲಿಕ ವಾದ ಶ್ರಮವನ್ನು ಲೆಕ್ಕಿಸದೆ, ನಾವು ನಮ್ಮ ಭಾಷೆಗಳ ವೈಜ್ಞಾನಿಕ ಶಬ್ದಸಂಪತ್ತಿ ಯನ್ನು ಹೆಚ್ಚಿಸಬೇಕಾಗಿದೆ.

## ೪. ವೈಜ್ಞಾನಿಕ ಶಬ್ದಗಳ ರಚನೆ

ವೈಜ್ಞಾನಿಕ ಪಠ್ಯಪುಸ್ತಕಗಳನ್ನು ಸ್ವಭಾಷಾಮಾಧ್ಯಮದಲ್ಲಿ ಬರೆಯತೊಡಗುವ ನಮ್ಮ ಲೇಖಕರಿಗೆ ಗ್ರಂಥವಸ್ತುವಿಗೇನೂ ಕೊರತೆಯಿಲ್ಲ. ಅವರ ಮುಖ್ಯವಾದ ಶ್ರಮವೆಂದರೆ ವೈಜ್ಞಾನಿಕ ಶಬ್ದಗಳ ಪರಿವರ್ತನೆ ಅಥವಾ ರಚನೆ. ಈ ಕಾರ್ಯಕ್ಕೆ ಸಂಸ್ಕೃತ ಭಾಷೆಯು ಅತ್ಯಂತ ಸಹಕಾರಿಯಾಗಿದೆ. ವಸ್ತುಶಃ, ವೈಜ್ಞಾನಿಕ ಶಬ್ದಗಳ ಬಿಕ್ಕಟ್ಟಿಗೂ ಸಂಸ್ಕೃತ ಭಾಷೆಯ ಬಿಕ್ಕಟ್ಟಿಗೂ ನಿಕಟವಾದ ಸಂಬಂಧವಿರುವಂತೆ ಕಾಣುತ್ತದೆ. ಆಧುನಿಕ ವೈಜ್ಞಾನಿಕ ಶಬ್ದವೊಂದನ್ನು ನಾವು ಹಿಂದೂಸ್ಥಾನದ ಯಾವ ಭಾಷೆಗೆ ಪರಿವರ್ತಿಸತೊಡಗಿದರೂ, ಬಹುಮಟ್ಟಿಗೆ ಅದು ತಾನಾಗಿ ಸಂಸ್ಕೃತಕ್ಕೆ ಇಳಿಯುತ್ತದೆ. ಹಾಗೂ ಸಂಸ್ಕೃತ ಶಬ್ದಗಳು ನಮ್ಮ ದೇಶದ ಎಲ್ಲಾ ಭಾಷೆಗಳಿಗೂ ಹೊಂದಿಕೊಳ್ಳುತ್ತವೆ. ಆದ್ದರಿಂದ ಇಡೀ ಹಿಂದೂಸ್ಥಾನಕ್ಕೆ ವೈಜ್ಞಾನಿಕ ಶಬ್ದಗಳ ಒಂದು ಕೋಶವಿರುವುದು ಸಾಧ್ಯ. ಆದರೆ ಆಧುನಿಕ ವಿಜ್ಞಾನಕ್ಕೆ ಸಾಕಾಗುವಷ್ಟು ಸಂಸ್ಕೃತ ಶಬ್ದಗಳು ನಮ್ಮ ಸಂಸ್ಕೃತ ಗ್ರಂಥಗಳಲ್ಲಿ ನೇರವಾಗಿ, ಸಿದ್ಧವಾದ ರೂಪದಲ್ಲಿ, ದೊರೆಯುವಂತಿಲ್ಲ. ಆದ್ದರಿಂದ ಕೆಲವು ಶಬ್ದಗಳನ್ನು ಹೊಸದಾಗಿ ಅನ್ವೇಷಿಸಿ ಹೊಂದಿಸ ಬೇಕಾಗುತ್ತದೆ, ಕೆಲವು ಶಬ್ದಗಳ ಅರ್ಥವ್ಯಾಪ್ತಿಯನ್ನು ವಿಸ್ತರಿಸಬೇಕಾಗುತ್ತದೆ, ಕೆಲವು ಶಬ್ದಗಳನ್ನು ಸಂಯೋಜಿಸಬೇಕಾಗುತ್ತದೆ, ಮತ್ತೆ ಕೆಲವನ್ನು ಕಲ್ಪಿಸಲೂ ಬೇಕಾಗುತ್ತದೆ. ಕೆಲವು ಶಬ್ದಗಳು ಅಷ್ಟು ಶ್ರಮವನ್ನು ಕೊಡದಿದ್ದರೂ, ಮತ್ತೆ ಕೆಲವು ತುಂಬಾ ದೀರ್ಘಾಲೋಚನೆಗೆ ಇಟ್ಟುಕೊಳ್ಳುತ್ತವೆ. ಏಕೆಂದರೆ, ಶಬ್ದಗಳು ಅರ್ಥವತ್ತಾಗಿರಬೇಕಾದ್ದೇ ಅಲ್ಲದೆ, ರೂಢಿಗೆ ಅನುಕೂಲವಾಗಿಯೂ ಇರಬೇಕು; ಅಥವಾ ಭಾಸ್ಕರಾಚಾರ್ಯರು ಹೇಳಿರುವಂತೆ, 'ಸಂಕ್ಷಿಪ್ತಾಕ್ಷರ ಕೋಮಲಾಮಲ ಪದ'ಗಳಾಗಿಯೂ ಇರಬೇಕು.

ವಿಜ್ಞಾನದ ವೈಶಿಷ್ಟ್ಯವನ್ನುಳ್ಳ ಶಬ್ದಗಳ ರಚನೆಯ ವಿಚಾರದಲ್ಲಿ ಭಿನ್ನಾಭಿಪ್ರಾಯ ಗಳಿವೆ. ಅವುಗಳಲ್ಲಿ ಮುಖ್ಯವಾದುವು ನಾಲ್ಕು:

(i) ಹೊಸ ಶಬ್ದಗಳ ರಚನೆಯ ಶ್ರಮವನ್ನು ನಾವು ಸುಲಭವಾಗಿ ನಿವಾರಿಸ ಬಹುದಾಗಿದೆ. ಹೇಗಾದರೂ ಈಗ ಒಂದೆರಡು ಶತಮಾನಗಳ ಕಾಲ ನಾವು ಇಂಗ್ಲಿಷ್ ಭಾಷೆಯ ಸಂಪರ್ಕವನ್ನು ಹೊಂದಿದ್ದೇವಷ್ಟೆ. ಆದ್ದರಿಂದ ಇಂಗ್ಲಿಷ್ ಭಾಷೆಯಲ್ಲಿರುವ

ವೈಜ್ಞಾನಿಕ ಶಬ್ದಗಳನ್ನು ಹಾಗೆಯೇ, ಯಾವ ಮಾರ್ಪೂ ಇಲ್ಲದೆ, ನಮ್ಮ ಭಾಷೆಗಳಿಗೆ ತಂದುಕೊಳ್ಳೋಣ. ಈ ಸಲಹೆಯು ಅಂತರರಾಷ್ಟ್ರೀಯ ದೃಷ್ಟಿಯಿಂದಲೂ ಅನುಕೂಲವಾದುದು. ಆದರೆ ಆ ಶಬ್ದಗಳನ್ನು ನಮ್ಮ ಲಿಪಿಗಳಲ್ಲಿ ಬರೆಯೋಣ. ಉದಾಹರಣೆಗೆ, Hydrogen = ಹೈಡ್ರೊಜಿನ್, Calculus = ಕ್ಯಾಲ್‌ಕ್ಯುಲಸ್, Function = ಫಂಕ್ಷನ್, Zenith = ಜೆನಿತ್, ಇತ್ಯಾದಿ. ಈ ರೀತಿ ಶಬ್ದಗಳು ಒಂದು ಭಾಷೆಯಿಂದ ಇನ್ನೊಂದು ಭಾಷೆಯನ್ನು ಪ್ರವೇಶಿಸುವುದು ಹೊಸದೇನೂ ಅಲ್ಲ. ಅದರಲ್ಲಿ ಯಾವ ತಪ್ಪೂ ಇಲ್ಲ.

(ii) ಇಂಗ್ಲಿಷ್ ಶಬ್ದಗಳನ್ನು ತಂದುಕೊಳ್ಳೋಣವೆಂಬ ವಾದವನ್ನು ತತ್ತ್ವಶಃ ಒಪ್ಪಬಹುದಾದರೂ, ಅದರಲ್ಲಿ ಲಿಪಿ ಮತ್ತು ಉಚ್ಚಾರಣೆಯ ತೊಂದರೆಗಳಿವೆ. ನಮ್ಮ ವರ್ಣಮಾಲೆಯಲ್ಲಿ f ಮತ್ತು z ಎಂಬ ಅಕ್ಷರಗಳಿಲ್ಲ. ಇಂಗ್ಲಿಷ್ ಶಬ್ದಗಳ ಜೊತೆಗೆ ಈ ಅಕ್ಷರಗಳನ್ನೂ ತಂದುಕೊಂಡು Function = ಪಂಕ್ಷನ್, ಅಥವಾ ಫ಼ಂಕ್ಷನ್, Zenith = ಜೆನಿತ್ ಅಥವಾ ಜ಼ೆನಿತ್ ಎಂದು ಬರೆಯಬೇಕಾಗುತ್ತದೆ. ಮತ್ತೆ, ಇಂಗ್ಲಿಷ್ ಉಚ್ಚಾರಣೆಯು ನಮಗೆ ಕಷ್ಟವಲ್ಲವಾದರೂ ಅನ್ಯವೆನಿಸುತ್ತದೆ. ಉದಾಹರಣೆಗೆ Mathematics ಮುಂತಾದ ಶಬ್ದಗಳಲ್ಲಿರುವ 'ಆ್ಯ' ಎಂಬ ಉಚ್ಚಾರಣೆಯು ನಮ್ಮ ಶಬ್ದಗಳಲ್ಲಿಲ್ಲ. ಹೀಗೆ ಹೊಸ ಅಕ್ಷರಗಳನ್ನೂ ಹೊಸ ಉಚ್ಚಾರಣೆಗಳನ್ನೂ ತಂದುಕೊಳ್ಳುವ ಬದಲು, ನಮ್ಮ ಲಿಪಿ ಮತ್ತು ನಮ್ಮ ಉಚ್ಚಾರಣೆಗಳಿಗೆ ಹೊಂದುವಂತೆ ಇಂಗ್ಲಿಷ್ ಪದಗಳನ್ನೇ ಅಪಭ್ರಂಶಿಸೋಣ. ಉದಾಹರಣೆಗೆ Hydrogen = ಹೈದ್ರಜನ, Calculus = ಕಾಲ್‌ಕುಲಸ್, Function = ಪಂಕ್ಷಣ, Zenith = ಜೆನಿತ, ಇತ್ಯಾದಿ. ಹೀಗೆ, ಹೆಚ್ಚು ಶ್ರಮವನ್ನೂ ಪಡದೆ, ನಮ್ಮ ಲಿಪಿ ಮತ್ತು ಉಚ್ಚಾರಣೆಗಳ ವೈಶಿಷ್ಟ್ಯವನ್ನೂ ಕಾಪಾಡಿಕೊಂಡು, ನಮ್ಮ ಶಬ್ದಸಂಪತ್ತಿಯನ್ನು ಹೆಚ್ಚಿಸಿಕೊಳ್ಳಬಹುದಾಗಿದೆ.

(iii) ನಮಗೆ ಬೇಕಾಗಿರುವ ವೈಜ್ಞಾನಿಕ ಶಬ್ದಗಳ ಸಂಖ್ಯೆ ದೊಡ್ಡದು. ಅಷ್ಟು ಶಬ್ದಗಳನ್ನೂ ಪರಭಾಷೆಯಿಂದ ತಂದುಕೊಳ್ಳುವುದರ ಫಲಿತಾಂಶವು ಕಡೆಗೆ ಅದೂ, ಇದೂ, ಯಾವುದೂ ಅಲ್ಲದ ಒಂದು ವ್ಯಂಗ್ಯವಾದ ಸಂಕೀರ್ಣ ಭಾಷೆಯಾಗುವ ಸಂಭವವಿದೆ. ಒಂದೇ ಭಾಷೆಯ ಪದಗಳನ್ನುಳ್ಳ ವಾಕ್ಯದಲ್ಲಿರುವ ಸರಳತೆಯೂ, ಏಕರೂಪತೆಯೂ, ಎರಡು ಭಾಷೆಯ ಪದಗಳನ್ನುಳ್ಳ ವಾಕ್ಯದಲ್ಲಿರುವುದಿಲ್ಲ. ಅಲ್ಲದೆ ಅನ್ಯಭಾಷಾಶಬ್ದಗಳನ್ನು ತಂದುಕೊಳ್ಳೋಣವೆಂದು ಹೊರಟರೆ, ಶುದ್ಧ ವೈಜ್ಞಾನಿಕ ದೃಷ್ಟಿಯಿಂದ, ಇಂಗ್ಲಿಷ್ ಭಾಷೆಯ ಜೊತೆಗೆ ಜರ್ಮನ್, ರಷ್ಯನ್, ಫ್ರೆಂಚ್ ಮುಂತಾದ ಇತರ ಪ್ರಮುಖ ಭಾಷೆಗಳನ್ನೂ ಗಮನಕ್ಕೆ ತಂದುಕೊಳ್ಳಬೇಕಾಗುತ್ತದೆ. ಒಂದು ವಸ್ತುವಿಗೆ, ಅಥವಾ ಒಂದು ಭವಿತಕ್ಕೆ, ಒಂದು ಭಾಷೆಯಲ್ಲಿರುವ ಹೆಸರಿಗಿಂತ

ಇನ್ನೊಂದು ಭಾಷೆಯಲ್ಲಿರುವ ಹೆಸರು ಹೆಚ್ಚು ಒಪ್ಪತಕ್ಕದ್ದಾಗಿರಬಹುದು, ಹೆಚ್ಚು ಆಕರ್ಷಕವಾಗಿರಬಹುದು. ಅಲ್ಲದೆ ವಿಜ್ಞಾನದ ಒಂದೊಂದು ಭಾಗವು ಒಂದೊಂದು ದೇಶದಲ್ಲಿ ಪ್ರಬಲಿಸಿರಬಹುದು. ಮತ್ತೆ ಅಂತರರಾಷ್ಟ್ರೀಯ ವ್ಯಾಪ್ತಿಯು ಯಾವ ಒಂದು ಭಾಷೆಗೂ ಇಲ್ಲವಾದ್ದರಿಂದ, ಶಬ್ದರಚನಾಕಾರ್ಯದಲ್ಲಿ ಅಂತರರಾಷ್ಟ್ರೀಯ ದೃಷ್ಟಿಯೆಂಬುದೊಂದು ಮಿಥ್ಯೆ. ಕೇವಲ ಒಂದು ನಾಮಕರಣಕ್ಕೋಸ್ಕರ ಇಷ್ಟೆಲ್ಲಾ ರಾದ್ಧಾಂತ ಅವಶ್ಯಕವಲ್ಲ. ಹಾಗೂ ಅನ್ವರ್ಥನಾಮಗಳೇ ಆಗಬೇಕೆಂಬ ಹಠವೂ ಬೇಡ. ಅರ್ಥವನ್ನೆಲ್ಲಾ ಹೆಸರಿನಲ್ಲೇ ಅಡಗಿಸುವುದಕ್ಕೆ ಹೊರಟರೆ, ಹೆಸರು ಲಂಬವೂ ಕರ್ಕಶವೂ ಆದೀತು. ಆದ್ದರಿಂದ ನಮ್ಮ ಲಿಪಿ ಮತ್ತು ನಮ್ಮ ಉಚ್ಚಾರಣೆಗಳಿಗೆ ಅನುಕೂಲವಾಗಿ ಹ್ರಸ್ವವಾಗಿಯೂ, ಇಂಪಾಗಿಯೂ ಇರುವ ಯಾವುದಾದರೊಂದು ಹೆಸರನ್ನಿಟ್ಟು ಆಮೇಲೆ 'ಈ ಹೆಸರಿನ ಮಗು ಇದು' ಎಂದು ತೋರಿಸಿದರಾಯಿತು. ಉದಾಹರಣೆಗೆ, ಇಂಗ್ಲಿಷ್ ಭಾಷೆಯಲ್ಲಿ Giant, Dwarf, Ring ಮುಂತಾದ ಶಬ್ದಗಳಿಗೆ ಸಾಮಾನ್ಯ ಅರ್ಥವೇ ಬೇರೆ, ಶಾಸ್ತ್ರೀಯ ಅರ್ಥವೇ ಬೇರೆ. ಅಲ್ಲದೆ 'ಗುಘೂಲ್' (Gughool) ಎಂಬ ಹೆಸರು ಹೇಗೆ ಹುಟ್ಟಿತು? ಪಾಶ್ಚಿಮಾತ್ಯ ಶಾಸ್ತ್ರಜ್ಞನೊಬ್ಬನು ಒಂದು ಎಂಬ ಸಂಖ್ಯೆಯನ್ನು ಬರೆದು ಅದರ ಮುಂದೆ ನೂರು ಸೊನ್ನೆಗಳನ್ನು ಇಡುವುದರಿಂದ ಆಗುವ ದೊಡ್ಡ ಸಂಖ್ಯೆಗೆ ಒಂದು ಹೆಸರನ್ನಿಡಬೇಕಾಗಿ ಬಂದಾಗ, ತನ್ನ ಮೂರು ವರ್ಷದ ಮಗುವಿನ ಸಲಹೆಯನ್ನು ಕೇಳಿದನಂತೆ. ಅದಕ್ಕೆ ಆ ಮಗು 'ಗುಘೂಲ್' ಎಂದು ಅರ್ಥವಿಲ್ಲದೆ ನುಡಿಯಿತಂತೆ. ಈಗ ಆ ಸಂಖ್ಯೆಗೆ 'ಗುಘೂಲ್'ಎಂಬ ಹೆಸರೇ ರೂಢಿಯಲ್ಲಿದೆ. ಹೀಗೆ, ಹೆಸರಿನಲ್ಲೇನಿದೆ? ಅದೊಂದು ಸಂಕೇತ. ಸಂಕೇತದಿಂದ ವಸ್ತುವಿಗೇನೂ ಅಪೋಹವಿಲ್ಲ ವಷ್ಟೆ? ರೋಜಾ ಹೂವಿಗೆ ಯಾವ ಹೆಸರಿಟ್ಟರೂ ಅದು ಅಷ್ಟೇ ಪರಿಮಳವನ್ನು ಸೂಸುತ್ತದೆಯಲ್ಲವೆ?

(iv) ವಿಷಯವು ನಮ್ಮ ಭಾಷೆಯಲ್ಲಿ ನಮಗೆ ಅರ್ಥವಾಗಬೇಕು. ಅದೀಗ ಸ್ವಭಾಷಾ ಮಾಧ್ಯಮದ ಉದ್ದೇಶ. ಈ ಉದ್ದೇಶವನ್ನು ನಾವು ಸಂಪೂರ್ಣವಾಗಿ ಸಾಧಿಸಬೇಕಾದರೆ, ಶ್ರಮವೆಷ್ಟೇ ಆದಾಗ್ಯೂ, ಶಬ್ದಗಳನ್ನು ಅರ್ಥಕ್ಕೂ ಭಾಷಾ ವೈಶಿಷ್ಟ್ಯಕ್ಕೂ ಅನುಗುಣವಾಗಿಯೇ ರಚಿಸಬೇಕು. ಗೊತ್ತುಗುರಿ ಇಲ್ಲದೆ ಸಿಕ್ಕಿದ ಶಬ್ದಗಳನ್ನೆಲ್ಲ ತುಂಬಿಕೊಳ್ಳುವುದು ಭಾಷೆಗೆ ಒಳ್ಳೆಯದಲ್ಲ. ಅನ್ಯಭಾಷಾ ಶಬ್ದಗಳ ಮಿಶ್ರಣವು ನಮ್ಮ ಮೂಲೋದ್ದೇಶಕ್ಕೆ ವಿರೋಧವಾದದ್ದು; ಗರಿಷ್ಠಪಕ್ಷ, ಅದೊಂದು ಶ್ರಮನಿವಾರಣೋಪಾಯ. ಹೆಸರು ಯಾವುದಾದರೇನು ಎಂಬ ವಾದವೂ ಅಷ್ಟೆ; ಏಕೆಂದರೆ, ಅರ್ಥವಿಲ್ಲದ ಶಬ್ದ ನಿರರ್ಥಕ—ನಿರ್ಗಂಧ ಕುಸುಮದಂತೆ. ಆದ್ದರಿಂದ

Hydrogen=ಜಲಜನಕ; ಅದು ಹೈದ್ರಜನವೂ ಅಲ್ಲ ವಿಲೇಜ್ ಪಂಚಾಯಿತಿಯೂ ಅಲ್ಲ. ಹಾಗೆಯೇ, Mathematics=ಗಣಿತ ಶಾಸ್ತ್ರ; ಅದು ಮತಿಮಥಕವೆಂದಾಗ ಬಾರದು. Calculus=ಸಂಸ್ಕಲನ, ಕಲನವಿನ್ಯಾಸ, ವೃದ್ಧಿಗಣಿತ; ಶಬ್ದದಮೂಲ Calcul=ಎಣಿಕೆಯ ಕಲ್ಲು, ಮಣಿಕಟ್ಟು. Function=ಸಂಘಟಿತ, ಘಟಕ, ಭೋಜ. ಈ ಶಬ್ದವು ಸಂಸ್ಕೃತದ ಭುಜ್ ಎಂಬ ಶಬ್ದದಿಂದ ಹುಟ್ಟಿದ್ದು : ಭುಜ್→ಭೋಜ್ → ಭೋಗ್→ಭುಂಗ್ತ್ರನ—Function ; ಒಂದು ವಿಕಲ್ಪಿಗೆ ಸಂಘಟಿತವಾಗಿರುವ ಇನ್ನೊಂದು ವಿಕಲ್ಪಿ (Variable). Zenith=ಬಾನ್‌ನೆತ್ತಿ, ಖಮಧ್ಯ. ನಮಗೆ ಬೇಕಾಗಿರುವ ಶಬ್ದಗಳು ಈ ರೀತಿಯವು.

ಈ ನಾಲ್ಕು ವಾದಗಳಲ್ಲಿ ಪ್ರತಿಯೊಂದರಲ್ಲೂ ನ್ಯೂನತೆಗಳಿವೆ, ಅತಿರೇಕಗಳಿವೆ, ಸತ್ಯಾಂಶವೂ ಇದೆ. ಆದರೆ ಹೋಲಿಕೆಯಲ್ಲಿ ನಾಲ್ಕನೆಯ ವಾದವು ಹೆಚ್ಚು ಒಪ್ಪ ತಕ್ಕದ್ದಾಗಿದೆ. ಒಂದು ಪದವನ್ನು ಅರ್ಥಕ್ಕೂ ಭಾಷಾವೈಶಿಷ್ಟ್ಯಕ್ಕೂ ಅನುಗುಣ ವಾಗಿ ರಚಿಸುವುದು ಅಸಾಧ್ಯವಾದಾಗ, ಅಥವಾ ಹಾಗೆ ರಚಿಸಲ್ಪಟ್ಟ ಪದವು ರೂಢಿಗೆ ಅನನುಕೂಲವೆನಿಸಿದಾಗ, ಇತರ ವಾದಗಳನ್ನು ಗಮನಿಸಬಹುದಾಗಿದೆ. ಗಣಿತ ಶಾಸ್ತ್ರದ ಮಟ್ಟಿಗೆ ಹೇಳುವುದಾದರೆ, ಅರ್ಥವತ್ತಾದ ಶಬ್ದಗಳ ರಚನೆಯು ಸಾಧ್ಯ; ಅದು ಶ್ರಮಸಾಧ್ಯವೆನಿಸಬಹುದು, ಆದರೆ ಅಸಾಧ್ಯವೆನಿಸಲಾರದು.

ಇಂದು ನಮ್ಮ ದೇಶದಲ್ಲೂ ಪ್ರಪಂಚದ ಇತರ ಅನೇಕ ಕಡೆಗಳಲ್ಲೂ ಬಳಕೆಯಲ್ಲಿ ರುವ 1,2,3, . . . ಎಂಬ ಅಂಕಚಿಹ್ನೆಗಳ ವಿಚಾರವಾಗಿ ಒಂದು ಮಾತು. ಕೆಲವರು ಇವುಗಳನ್ನು ಅರಾಬಿಕ್ ಚಿಹ್ನೆಗಳೆಂದು ಕರೆಯುತ್ತಾರೆ. ಆದರೆ ವಾಸ್ತವವಾಗಿ ಇವು ಹಿಂದೂ ಚಿಹ್ನೆಗಳು. ಮಹಮ್ಮದನು ಮಕ್ಕಾದಿಂದ ಮದೀನಾಕ್ಕೆ ಹೋದ ೧೫೦ ವರ್ಷಗಳ ತರುವಾಯ, ಎಂದರೆ ಕ್ರಿ.ಶ. ೮ ನೆಯ ಶತಮಾನದಲ್ಲಿ, ಬಾಗ್ದಾದ್ ನಗರದಲ್ಲಿ ಕಲೀಫ್-ಅಲ್-ಮನ್ಸೂರ್ ಎಂಬ ದೊರೆಯಿದ್ದನು. ಆತನ ಆಸ್ಥಾನದಲ್ಲಿ ಹಿಂದೂ ಗಣಿತ ಶಾಸ್ತ್ರಕ್ಕೆ ಪ್ರಾಶಸ್ತ್ಯ ದೊರೆತಿತ್ತು. ಕ್ರಿ.ಶ. ೭೭೩ ರಲ್ಲಿ ಕೆಲವರು ಹಿಂದೂ ಶಾಸ್ತ್ರಜ್ಞರು ಹಿಂದೂ ಸಿದ್ಧಾಂತ ಗ್ರಂಥವೊಂದನ್ನು, ಪ್ರಾಯಶಃ ಬ್ರಹ್ಮಗುಪ್ತ ಸಿದ್ಧಾಂತವನ್ನು, ಆತನ ಆಸ್ಥಾನಕ್ಕೆ ತೆಗೆದುಕೊಂಡು ಹೋದರು. ದೊರೆಯು ಆ ಗ್ರಂಥವನ್ನು ಮೆಚ್ಚಿ, ಅದನ್ನು ಅರಾಬಿಕ್ ಭಾಷೆಗೆ ಪರಿವರ್ತನೆ ಮಾಡಿಸಿದನು. ಹಿಂದೂ ಅಂಕಚಿಹ್ನೆಗಳು ಅರಬ್ಬೀ ದೇಶದಲ್ಲಿ ಬಳಕೆಗೆ ಬರುವುದಕ್ಕೆ ಇದೇ ಕಾರಣ. ನಾಲ್ಕು ಶತಮಾನಗಳ ತರುವಾಯ, ಎಂದರೆ ಕ್ರಿ.ಶ. ೧೨ ನೆಯ ಶತಮಾನದ ಅಂತ್ಯ ದಲ್ಲಿ, ಪೈಸಾ ನಗರದ ಲಿಯೊನಾರ್ಡೋ ಎಂಬ ವರ್ತಕನೊಬ್ಬನು ಈ ಚಿಹ್ನೆಗಳನ್ನು ಅರಬ್ಬರಿಂದ ಕಲಿತುಕೊಂಡು ಹೋಗಿ, ತನ್ನ ದೇಶದಲ್ಲಿ ಪ್ರಚಾರಕ್ಕೆ ತಂದನು.

ಕ್ರಮೇಣ ಅವು ಇನ್ನು ಕೆಲವು ಪಶ್ಚಿಮ ದೇಶಗಳಲ್ಲೂ ಬಳಕೆಗೆ ಬಂದುವು. ಅರೇಬಿಯಾದಿಂದ ಯೂರೋಪಿಗೆ ಬಂದ ಈ ಚಿಹ್ನೆಗಳನ್ನು ಯೂರೋಪಿಯನರು ಅರಾಬಿಕ್ ಚಿಹ್ನೆಗಳೆಂದು ಕರೆದರು. ಚರಿತ್ರೆಯು ಈ ವಾಸ್ತವಾಂಶವನ್ನು ಈಗ ಯೂರೋಪಿಯನರೂ ಅರಬ್ಬರೂ ಸಹ ಒಪ್ಪಿಕೊಂಡಿದ್ದಾರೆ. ಇದೀಗ ಹಿಂದೂಸ್ಥಾನದಲ್ಲಿ ಈ ಚಿಹ್ನೆಗಳು ಈಗಿನಂತೆ ಮುಂದೆಯೂ ಬಳಕೆಯಲ್ಲಿದ್ದು ಹಿಂದೂ ಚಿಹ್ನೆಗಳೆಂದು ಕರೆಯಲ್ಪಡುವುದು ನ್ಯಾಯವಾಗಿದೆ. ನಮ್ಮ ಬಳಕೆಯಲ್ಲಿ ಅವುಗಳಿಗೆ ಒಂದು ಪ್ರಮುಖಸ್ಥಾನವಾದರೂ ಇರಬೇಕು.

## ೫. ಸಮಿತಿಗಳ ಆವಶ್ಯಕತೆ

ಶಾಸ್ತ್ರೀಯವಾದ ಪದಗಳ ರಚನೆಯಲ್ಲಿ ಅನೇಕ ವೇಳೆ ಭಿನ್ನಾಭಿಪ್ರಾಯಗಳಿಗೆ ಅವಕಾಶವಿರುವುದರಿಂದ, ವೈಜ್ಞಾನಿಕ ಪದಗಳ ಮತ್ತು ಪುಸ್ತಕಗಳ ರಚನೆಗೆ ಸಮಿತಿಗಳನ್ನು ನಿಯಮಿಸಿಕೊಳ್ಳುವುದು ಸೂಕ್ತವಾಗಿದೆ. ಸಮಿತಿಗಳ ಸಹಾಯವಿಲ್ಲದೆ ಬರೆಯಲ್ಪಡುವ ಗ್ರಂಥಗಳಲ್ಲಿ ಒಂದೇ ಭಾಷೆಯಲ್ಲಿ ಒಬ್ಬ ಲೇಖಕನ ಗ್ರಂಥಕ್ಕೂ ಇನ್ನೊಬ್ಬ ಲೇಖಕನ ಗ್ರಂಥಕ್ಕೂ ಪದಭೇದಗಳುಂಟಾಗಿ, ಹೊಸ ಪದಗಳು ರೂಢಿಗೆ ಬರುವುದೇ ಪ್ರಯಾಸವಾಗುವ ಸಂಭವವಿರುತ್ತದೆ. ಅಂಥ ಪರಿಸ್ಥಿತಿಯನ್ನು ಸ್ವಲ್ಪ ಮುನ್ನೆಚ್ಚರದಿಂದ ನಿವಾರಿಸಬಹುದು. ಶಾಸ್ತ್ರೀಯ ಶಬ್ದರಚನಾ ಕಾರ್ಯವನ್ನು ಎರಡು ರೀತಿ ಯೋಜಿಸಬಹುದು:

(i) ಪ್ರತಿಯೊಂದು ಭಾಷೆಯಲ್ಲೂ ಆಯಾ ವಿಶ್ವವಿದ್ಯಾನಿಲಯ, ಅಥವಾ ವಿಶ್ವವಿದ್ಯಾನಿಲಯಗಳು, ಗಣಿತಶಾಸ್ತ್ರ, ರಸಾಯನಶಾಸ್ತ್ರ, ಸಸ್ಯಶಾಸ್ತ್ರ, ಅರ್ಥಶಾಸ್ತ್ರ ಮುಂತಾಗಿ ವಿಜ್ಞಾನದ ಒಂದೊಂದು ಶಾಖೆಯಲ್ಲೂ ತಜ್ಞರ ಒಂದೊಂದು ಸಮಿತಿಯನ್ನು ರಚಿಸಬೇಕು. ಪ್ರತಿಯೊಂದು ಸಮಿತಿಯೂ ಲೇಖಕರ ಆಯ್ಕೆ, ವಿಷಯದ ಹಂಚಿಕೆ ಮುಂತಾದ ವ್ಯವಸ್ಥೆಗಳನ್ನು ಮಾಡಿಕೊಂಡು ಗ್ರಂಥರಚನೆಯನ್ನೂ ಶಬ್ದಕೋಶದ ರಚನೆಯನ್ನೂ ಜೊತೆಯಲ್ಲಿ ಮುಂದುವರಿಸಬೇಕು. ಈ ಕಾರ್ಯಗಳ ಜೊತೆಯಲ್ಲೇ ಶಿಕ್ಷಣವನ್ನೂ ಸ್ವಭಾಷಾಮಾಧ್ಯಮದಲ್ಲೇ ಪ್ರಾರಂಭಿಸಬೇಕು. ಆಗ ಶಬ್ದಗಳನ್ನೂ ಪ್ರಾಯೋಗಿಕ ದೃಷ್ಟಿಯಿಂದಲೂ ಪರಿಶೀಲಿಸುವುದಕ್ಕೆ ಅವಕಾಶವಾಗುತ್ತದೆ. ಈ ಸಮಿತಿಗಳು ರಚಿಸುವ ಶಬ್ದಕೋಶಗಳ ಸಹಾಯದಿಂದ ಕಾಲಕ್ರಮದಲ್ಲಿ ಒಂದು ಕೇಂದ್ರ ಸಮಿತಿಯು ಅಖಿಲ ಭಾರತ ಇಂಗ್ಲಿಷ್—ಸಂಸ್ಕೃತ ಶಬ್ದಕೋಶವೊಂದನ್ನು ತಯಾರಿಸಬೇಕು. ಅದುವರೆಗೆ ಗ್ರಂಥಗಳಲ್ಲಿ ವೈಜ್ಞಾನಿಕ ಶಬ್ದಗಳ ಮುಂದೆ ಆಯಾ ಇಂಗ್ಲಿಷ್ ಶಬ್ದಗಳನ್ನು ಆವರಣಗಳಲ್ಲಿ ನಮೂದಿಸಬೇಕು.

(ii) ವೈಜ್ಞಾನಿಕ ಶಬ್ದರಚನಾ ಕಾರ್ಯಕ್ಕೆ ಪ್ರಥಮತಃ ಒಂದು ಅಖಿಲ ಭಾರತ ಸಮಿತಿಯನ್ನು ರಚಿಸಬೇಕು. ಈ ಸಮಿತಿಯು ಅವಶ್ಯಕವಾದ ಉಪಸಮಿತಿಗಳ ಸಹಾಯದಿಂದ ಶಾಸ್ತ್ರದ ಒಂದೊಂದು ಭಾಗದಲ್ಲೂ ಶಾಸ್ತ್ರೀಯ ಶಬ್ದಗಳ ಒಂದೊಂದು ಪಟ್ಟಿಯನ್ನು ತಯಾರಿಸಿ, ತಜ್ಞರ ಅಭಿಪ್ರಾಯಗಳನ್ನು ತರಿಸಿಕೊಂಡು, ಅಖಿಲ ಭಾರತ ಇಂಗ್ಲಿಷ್—ಸಂಸ್ಕೃತ ಶಬ್ದಕೋಶವೊಂದನ್ನು ಆದಷ್ಟು ಶೀಘ್ರವಾಗಿ ರಚಿಸಬೇಕು. ಅನಂತರ ಹಿಂದೂಸ್ಥಾನದ ಪ್ರತಿಯೊಂದು ಭಾಷೆಯಲ್ಲೂ ಲೇಖಕರು ಆ ಶಬ್ದಗಳನ್ನೇ ಉಪಯೋಗಿಸಿ ಗ್ರಂಥಗಳನ್ನು ರಚಿಸಬೇಕು, ಮತ್ತು ಶಿಕ್ಷಣವು ಆಯಾ ಪ್ರಾಂತಭಾಷೆಯ ಮಾಧ್ಯಮದಲ್ಲಿ ಪ್ರಾರಂಭವಾಗಬೇಕು.

ಈ ಎರಡು ಕ್ರಮಗಳಲ್ಲಿ ಮೊದಲನೆಯದೇ ಹೆಚ್ಚು ಸೂಕ್ತವೆಂದು ತೋರುತ್ತದೆ. ಹೊಸ ಶಬ್ದಗಳು ಲೇಖಕರ ಮತ್ತು ಅಧ್ಯಾಪಕರ ಶ್ರಮದಿಂದ ಹುಟ್ಟುವುದೇ ಸಾಧು. ಶಬ್ದಕೋಶ ರಚನೆ, ಗ್ರಂಥ ರಚನೆ, ಇವು ಪರಸ್ಪರಾವಲಂಬಿಗಳು. ಪ್ರಕೃತ ಪರಿಸ್ಥಿತಿಯಲ್ಲಿ ಅವುಗಳನ್ನು ಜೊತೆಯಲ್ಲಿ ಮುಂದುವರಿಸುವುದೇ ಒಳ್ಳೆಯದು. ಅಲ್ಲದೆ ಸ್ವಭಾಷಾ ಮಾಧ್ಯಮವನ್ನು ಕ್ಷಿಪ್ರವಾಗಿ ಪ್ರಾರಂಭಿಸಬೇಕಾಗಿದೆ.

ನಮ್ಮ ಭಾಷೆಗಳ ಅಖಿಲ ಭಾರತ ಸಮನ್ವಯಕ್ಕಾಗಿ ಒಂದು ಸಮಿತಿಯು ಅವಶ್ಯಕ. ಈ ಅವಶ್ಯಕತೆಯು ಈಗಾಗಲೇ ಈಡೇರಿದೆ.

## ೬. ಸಹಕಾರ

ನಮ್ಮ ದೇಶದಲ್ಲಿ ಸ್ವಭಾಷಾಭಿಮಾನಕ್ಕೇನೂ ಕೊರತೆಯಿಲ್ಲ; ಪ್ರಾಯಶಃ ಅದು ಕೆಲವು ಕಡೆ ಅವಶ್ಯ ಪ್ರಮಾಣಕ್ಕಿಂತ ಅಧಿಕವಾಗಿಯೇ ಇರುವಂತೆ ಕಾಣುತ್ತದೆ. ನಮ್ಮದೇಶದ ಭಾಷಾಸ್ವಾತಂತ್ರ್ಯಸಾಧನೆಗಾಗಿ ನಾವು ಕಾರ್ಯೋನ್ಮುಖರಾಗಬೇಕು. ಯಾವ ಕಾರ್ಯವನ್ನೇ ಆಗಲಿ ಯೋಜನಾಬದ್ಧವಾಗಿ ನಡೆಸಬೇಕು, ಶ್ರದ್ಧಾಸಕ್ತಿಗಳಿಂದ ನಡೆಸಬೇಕು. ಎಲ್ಲರೂ ಒಟ್ಟಾಗಿ ಸಹಕರಿಸಬೇಕು. ಹಾಗಲ್ಲದೆ ಯಾವ ಯೋಜನೆಯೂ ಫಲಿಸಲಾರದು. ಹೊಸ ಶಬ್ದಗಳನ್ನು ರೂಢಿಗೆ ತಂದುಕೊಳ್ಳುವುದಕ್ಕೆ ಮಾತ್ರವೇ ಅಲ್ಲದೆ, ನಮ್ಮ ಭಾಷೆಗಳ ಅಖಿಲ ಭಾರತ ಸಮನ್ವಯಕ್ಕೂ ಪ್ರಜೆಗಳೆಲ್ಲರ ಸಹಕಾರವು ಅವಶ್ಯಕ. ನಮ್ಮ ಕಾರ್ಯಸಾಧನೆಗೆ ನಾವು ಮಾಡಿಕೊಳ್ಳಬೇಕಾಗಿರುವ ಸಿದ್ಧತೆಗಳು ಶ್ರಮಸಾಧ್ಯವಾದುವು. ಆದರೆ ಆ ಶ್ರಮವು ಕೇವಲ ತಾತ್ಕಾಲಿಕವಾದುದು. ಹೇಗಾದರೂ ಮಾಡಿ ಯಂತ್ರವನ್ನು ಕಂಬಿಗಳ ಮೇಲೆ ಕುಳ್ಳಿರಿಸುವುದೊಂದಾದರೆ, ಆಮೇಲೆ ಅದು ಭುಗ್‌ಭುಗ್ ಎಂದು ಹೊಗೆಯುಗುಳಿಕೊಳ್ಳುತ್ತ ತನ್ನ ಪಾಡಿಗೆ ತಾನು ಹೊರಟುಬಿಡುತ್ತದೆ, ಆಗ ಪಯಣವು ಸುಗಮ

ವಾಗುತ್ತದೆ. ಯಂತ್ರವನ್ನು ಕಂಬಿಗಳ ಮೇಲೆ ಕುಳ್ಳಿರಿಸುವ ಸಾಮರ್ಥ್ಯವುಳ್ಳವರು ಕೆಲವು ಕಾಲ ಶ್ರಮಿಸಬೇಕು, ಇತರರು ಅವರನ್ನು ಪ್ರೋತ್ಸಾಹಿಸಬೇಕು, ತಾಳ್ಮೆಯಿಂದ ಅವರೊಂದಿಗೆ ಸಹಕರಿಸಬೇಕು. 'ಇಷ್ಟೆಲ್ಲಾ ಶ್ರಮಪಟ್ಟು ಕೊನೆಗೆ ಹೇಗಾಗುವುದೋ ಏನೋ, ಈಗ ಇರುವ ಪರಿಸ್ಥಿತಿಯೇ ಇದ್ದುಕೊಂಡು ಹೋಗಲಿ' ಎಂದು ಅನುಮಾನಿಸುವವರು ಅನುಮಾನಿಸುತ್ತ ಕುಳಿತಿರಲಿ. ಅವರಿಗೆ, ಪ್ರಾಯಶಃ, ತಮ್ಮ ಪ್ರಾಂತದ ಭಾಷೆಯು ಕೇಂದ್ರಭಾಷೆಯಾಗುವುದೋ ಇಲ್ಲವೋ ಎಂಬ ಅನುಮಾನ ವಿರಬಹುದು ಅಥವಾ ಸ್ವಭಾಷಾಮಾಧ್ಯಮದ ಫಲಿತಾಂಶದ ವಿಷಯವಾಗಿ ಅವರ ಮನಸ್ಸಿನಲ್ಲಿ ನಿಜವಾಗಿಯೂ ಅನುಮಾನವೇ ಹುಟ್ಟಿರಬಹುದು. ಹೇಗಾದರೂ ಅವರಿಗೆ ಉತ್ತರ ಹೇಳುವುದು ಈಗ ಬೇಡ. ನಾವು ಕಂಡಹಾಗೆ 'ಪರಕೀಯರ ಆಡಳಿತವೇ ಇದ್ದುಕೊಂಡು ಹೋಗಲಿ' ಎಂದು ವಾದಿಸುತ್ತಿದ್ದವರು ವಾದಿಸುತ್ತಲೇ ಇದ್ದಾಗ್ಯೂ, ದೇಶಕ್ಕೆ ಲಭಿಸಬೇಕಾಗಿದ್ದ ರಾಜಕೀಯ ಸ್ವಾತಂತ್ರ್ಯವು ಲಭಿಸದೆ ಹೋಗಲಿಲ್ಲ. ಆಗ ಹಾಗೆ ವಾದಿಸುತ್ತಿದ್ದವರು ಈಗ ತಾವಾಗಿಯೇ ಒಪ್ಪಿಕೊಳ್ಳುತ್ತಾರೆ, ಎಲ್ಲವೂ ಸರಿ ಹೋಯಿತೆಂದು. ಭಾಷಾಸ್ವಾತಂತ್ರ್ಯವೂ ಅಷ್ಟೆ. ಅದು ಬಾರದೆ ಹೋಗುವುದಿಲ್ಲ. ಅದು ಬಂದಾಗ ತಾನಾಗಿ ಎಲ್ಲರಿಗೂ ಮನದಟ್ಟಾಗುತ್ತದೆ ಅದರ ಪ್ರಯೋಜನ. ಜರ್ಮನಿ, ಫ್ರಾನ್ಸ್, ರಷ್ಯಾ, ಇಂಗ್ಲೆಂಡ್, ಅಮೆರಿಕಾ ಮುಂತಾದ ಪ್ರಮುಖ ದೇಶಗಳಲ್ಲಿ ಭಾಷಾ ಮಾಧ್ಯಮವು ಆಯಾ ದೇಶದ ಭಾಷೆಯೇ ಆಗಿದೆ. ನಮ್ಮ ದೇಶದಲ್ಲೂ ಹಾಗೆಯೇ ಆಗಬೇಕು. ಭಾರತೀಯರೆಲ್ಲರೂ ಒಟ್ಟಾಗಿ ಸಹಕರಿಸಿದರೆ ನಮ್ಮ ದೇಶದಲ್ಲೂ ಹಾಗೆಯೇ ಆಗಬಲ್ಲದು, ಆಗುತ್ತದೆ, ಸಾತಿದೂರದಲ್ಲಿಯೇ ಆಗುತ್ತದೆ.

ಬಿ. ಸೀತಾರಾಮಶಾಸ್ತ್ರೀ

## ಸರ್ವಜ್ಞ

ತ್ರಿಪದಿ ರೂಪದಿ ನೀನು ಉದ್ಗ್ರಂಥ ರಚಿಸುತ್ತೆ
ಕನ್ನಡದ ಕಣಜಕ್ಕೆ ಹಿರಿಯ ಕಾಣಿಕೆಯಿತ್ತೆ ;
ಪತಿತರುದ್ಧಾರಕ್ಕೆ ಬದ್ಧಕಂಕಣನಾದೆ.
ಜಾತಿ, ನೀತಿಯು ಒಂದೆ? ದಾನ, ಜ್ಯೋತಿಃಶಾಸ್ತ್ರ
ಕಾಲ-ಜ್ಞಾನಗಳೆಲ್ಲ ನಿನ್ನ ಕಾವ್ಯಕೆ ವಸ್ತು.
ಮಾನವನ ಪ್ರಗತಿಗಾಗಿಯೆ ನೀನು ಉಸುರಿದುದು
ಬರಿ ಗಾಳಿ ಮಾತಲ್ಲ! ಜ್ಞಾನದಾಗರವದು !
ಉಪನಿಷತ್ತಿನ ಸಾರವತ್ತಾದ ನುಡಿಯಂತೆ
ನಿನ್ನ ವಚನಗಳಲ್ಲಿ ಮಾರ್ಮಿಕತೆಗೆಡೆಯೆನಿತು !
ದೇಶೀಯ ಒಳ್ಗಂಪು ನಿನ್ನ ನುಡಿ ಜೀವಾಳ.
ಅರ್ಥ ಭಾವಗಳ ಔಚಿತ್ಯ ವಿವರಿಸುವಲ್ಲಿ
ನಿನ್ನ ಸೇವೆಯು ಕನ್ನಡಕ್ಕೆ ಮಿಗಿಲೇ ಅಲ್ತೆ !
ಎಲ್ಲ ಬಲ್ಲವರಿಲ್ಲ, ಬಲ್ಲವರು ಬಹಳಿಲ್ಲ
ಬಲ್ಲೆವೆನ್ನುವರಲ್ಲಿ ಬಲದ ಕೊರತೆಯು ಎಂದು
ಸಾರಿ ಹೇಳಿದ ನಿನ್ನ ಜ್ಞಾನತೃಷೆಗೆಣೆಯಿಹುದೆ?
ಕೈಲಾಸದಲ್ಲಿದ್ದ ಅಮರ ಲೋಕಕೆಲ್ಲ
ತಿಲಕ ಪ್ರಾಯನು ಎಂದು ಹೆಸರುವೆತ್ತರೂ ನೀನು
ಕನ್ನಡದ ನಾಡ ಮನೆ ಮನೆಗಳೆಲ್ಲವ ಹೊಕ್ಕು
ಜ್ಞಾನದೀವಿಗೆ ಹಚ್ಚಿ ಬೆಳಕು ಹರಿಯಿಸಲಿಲ್ಲೆ ?

ಎನ್. ಎಸ್. ಗದಗಕರ

---

# ಏಕಾಂತತೆ

ಚೈತ್ರದ ಹುಣ್ಣಿಮೆ ರಾತ್ರಿ. ಆ ರಾತ್ರಿ, ಶಿವಪುರದ ಶ್ರೀಮಂತ ರಂಗರಾಯರು, ತಮ್ಮ ಮಗನ ಮದುವೆಯ ಪ್ರಯುಕ್ತ ಏರ್ಪಡಿಸಿದ್ದ ಭೋಜನಕೂಟಕ್ಕೆ ನಾನೂ ನನ್ನ ಮಿತ್ರ . . . ಮೂರ್ತಿಯೂ ಆಹ್ವಾನಿತರಾಗಿದ್ದೆವು. ಮೂರ್ತಿ, ನಗರದ ಕಾಲೇಜೊಂದರಲ್ಲಿ ತತ್ತ್ವಶಾಸ್ತ್ರದ ಅಧ್ಯಾಪಕನಾಗಿದ್ದಾನೆ. ವಯಸ್ಸು ಸುಮಾರು ನಲವತ್ತು ವರ್ಷಗಳು. ನನಗೂ ಅವನಿಗೂ ಅನೇಕ ವರ್ಷಗಳ ಗೆಳೆತನ ಬೆಳೆದುಬಂದಿದೆ.

ಭೋಜನಕ್ಕೆ ಪೂರ್ವಭಾವಿಯಾಗಿ ಏರ್ಪಾಟಾಗಿದ್ದ ಸಂಗೀತ-ನರ್ತನ, ರುಚಿಕರವೂ ಧಾರಾಳವೂ ಆದ ಭೋಜನ, ಅನಂತರದ ತಾಂಬೂಲಚರ್ವಣ, ಮಾತುಕಥೆ—ಎಲ್ಲ ತುಂಬ ಆಹ್ಲಾದಕರವಾಗಿದ್ದುವು. ಆಹ್ವಾನಿತರೆಲ್ಲ ತಮ್ಮತಮ್ಮ ಮನೆಗಳಿಗೆ ಹೊರಡುವ ವೇಳೆಗೆ ರಾತ್ರಿ ಹನ್ನೊಂದು ಗಂಟೆಯಾಗಿತ್ತು. ಈಚೆಗೆ ಬಂದ ಕೂಡಲೆ ಮೂರ್ತಿ ನನ್ನನ್ನು ಕುರಿತು,

"ಅಯ್ಯಾ, ಭಾರಿ ಊಟ; ಹೊಟ್ಟೆ ಭಾರವಾಗಿದೆ; ಬಾ, ಹಾಗೇ "ಮನೋಹರ" ರೋಡಿನಲ್ಲಿ ಸುತ್ತಾಡಿಕೊಂಡು ಮನೆಗೆ ಹೋಗೋಣ "—ಅಂದ.

ನಾನು ಒಪ್ಪಿದೆ. ಇಬ್ಬರೂ ಹೊರಟೆವು. "ಮನೋಹರ" ರೋಡು ಎನ್ನುವುದು, ನಮ್ಮ ನಗರದ ಬಹು ಪ್ರಸಿದ್ಧವಾದ ವಿಹಾರಮಾರ್ಗ. ಸುಮಾರು ಮೂರು ಮೈಲಿ ಉದ್ದವಾದ ಈ ಮಾರ್ಗದ ಒಂದು ತುದಿ, ಲೋಕಪ್ರಸಿದ್ಧವಾದ "ಬನಶಂಕರಿ" ಉದ್ಯಾನವನವನ್ನು ಸೇರುತ್ತದೆ. ವಿಶಾಲವೂ, ವಿದ್ಯುದ್ದೀಪಗಳ ಸಾಲಿನಿಂದ ಅಲಂಕೃತವೂ ಆದ ಈ ಮಾರ್ಗದ ಎರಡು ಪಕ್ಕಗಳಲ್ಲೂ ಪಾದಚಾರಿಗಳಿಗೆ ಪ್ರತ್ಯೇಕವಾದ ಮಾರ್ಗಗಳಿವೆ. ಇವುಗಳ ಉದ್ದಕ್ಕೂ ದಟ್ಟವಾದ ಸಾಲುಮರಗಳೂ, ಅಲ್ಲಲ್ಲಿ ಶಿಲಾಸನಗಳಿಂದ ಕೂಡಿದ ಲತಾಗೃಹಗಳೂ ಇವೆ. ನಾವು ಸ್ವಲ್ಪ ಹೊತ್ತಿನಲ್ಲೇ ಈ ಮಾರ್ಗವನ್ನು ತಲುಪಿ ಪಾದಚಾರಿಗಳ ಮಾರ್ಗದಲ್ಲಿ ನಡೆಯತೊಡಗಿದೆವು. ಆಗ ಅವಿಚ್ಛಿನ್ನವಾಗಿ ದೂರದಿಂದ ಕೇಳಿಬರುತ್ತಿದ್ದ ಜನನಿಬಿಡವಾದ ನಮ್ಮ ನಗರದ ಅಸ್ಪಷ್ಟ ಮರ್ಮರನಾದ ಹೊರತು, ಸುತ್ತಮುತ್ತಲು ಎಲ್ಲ ನೀರವವಾಗಿತ್ತು. ಶುದ್ಧವಾದ ತಂಗಾಳಿ ನಮ್ಮ ಮುಖಗಳ ಮೇಲೆ ಮೆಲ್ಲಮೆಲ್ಲನೆ ಬಹು ಹಿತವಾಗಿ ಬೀಸುತ್ತಿತ್ತು. ದಟ್ಟವಾದ ಬೆಳದಿಂಗಳಲ್ಲಿ, ನಾವು ನಡೆಯುತ್ತಿದ್ದ ಮಾರ್ಗ ಸಾಲುಮರಗಳ ನೆರಳಿನಿಂದ ಕತ್ತಲಾದ ಸುರಂಗಮಾರ್ಗದಂತೆ ಭಾಸವಾಗುತ್ತಿತ್ತು. ಸ್ವಲ್ಪ ಹೊತ್ತು ಮೌನವಾಗಿ ನಡೆದಮೇಲೆ ಮೂರ್ತಿ, ಇದ್ದಕ್ಕಿದ್ದ ಹಾಗೆ ನಿಂತು ನನ್ನ ಕಡೆ ತಿರುಗಿ,

"ಅದೇಕೋ ನಾನು ಕಾಣೆ—ರಾಮಣ್ಣ, ಆದರೆ ಉಳಿದ ಎಲ್ಲ ಎಡೆಗಳಿಗಿಂತ ಇಲ್ಲಿ—ಇಂತಹ ರಾತ್ರಿಯ ವೇಳೆಯಲ್ಲಿ—ನಾನು ಹೆಚ್ಚು ಸರಾಗವಾಗಿ ಉಸಿರಾಡು ತ್ತೇನೆ. ಇಲ್ಲಿ ನನ್ನ ಯೋಚನೆಗಳು ಹಿಗ್ಗಿ ಹಿರಿದಾಗಿ ದೂರದೂರಕ್ಕೆ ವ್ಯಾಪಿಸಿದಂತೆ ಭಾಸ ವಾಗುತ್ತದೆ. ಆಗ ಕೆಲವು ವೇಳೆ, ನನ್ನ ಆತ್ಮದಲ್ಲಿ ಏನೋ ಒಂದು ರೀತಿಯ ಮಿನುಗು ತಲೆದೋರಿ, ವಿಶ್ವದ ವಿಷಯಗಳ ದೈವಿಕರಹಸ್ಯ ಪತ್ತೆಯಾಗುವುದೆಂದು ಒಂದು ಕ್ಷಣ ಕಾಲ ನಂಬಿಕೆಯನ್ನುಂಟುಮಾಡುತ್ತದೆ. ಆದರೆ ರಹಸ್ಯ ಪತ್ತೆಯಾಗುವುದಿಲ್ಲ—ನಂಬಿಕೆ ನಂಬಿಕೆಯಾಗಿಯೇ ಉಳಿದುಬಿಡುತ್ತದೆ. ಕಾರಣ, ಕಿಂಚಿತ್ ಮಾತ್ರ ಓರೆಯಾದ ಕಿಟಕಿಯ ಬಾಗಿಲು ಪೂರ್ತಿ ತೆರೆಯುವುದರ ಬದಲು ಮುಚ್ಚಿ, ನನ್ನ ಸ್ವಪ್ನದರ್ಶನ ಮುಕ್ತಾಯಗೊಳ್ಳುತ್ತದೆ."

—ಎಂದ. ನಾವು ನಡೆಯುತ್ತಿದ್ದಾಗ, ಅಕ್ಕಪಕ್ಕದ ಪೊದೆಗಳ ಮರೆಯಲ್ಲಿ ಛಾಯಾ ರೂಪಗಳು, ಜೊತೆಜೊತೆಯಾಗಿ ನಡೆದುಹೋಗುತ್ತಿದ್ದುದೋ, ಕುಳಿತಿದ್ದುದೋ ಕಾಣಿಸುತಿದ್ದುವು. ಮೂರ್ತಿ ಮಾತುನಿಲ್ಲಿಸಿದ ಮೇಲೆ ನಾವು ಮುಂದುವರಿಯುತ್ತ, ಒಂದು ಲತಾಮಂಟಪವನ್ನು ಸ್ವಲ್ಪ ದೂರದಲ್ಲಿ ಹಾಯ್ದು ಹೋದೆವು. ಆ ಮಂಟಪದ ಕೆಳಗೆ ಕಲ್ಲುಬೆಂಚಿನ ಮೇಲೆ ಇಬ್ಬರು ಕುಳಿತಿದ್ದರು—ಒಂದು ಗಂಡು, ಒಂದು ಹೆಣ್ಣು. ಒಬ್ಬರಿಗೊಬ್ಬರು ಒತ್ತಿಕೊಂಡು ಕೈಕೈಹಿಡಿದು ಕುಳಿತಿದ್ದ ಅವರಿಬ್ಬರೂ, ಗಮನವಿಲ್ಲದ ನೋಟಕ್ಕೆ ಒಂದೇ ಕಪ್ಪುಛಾಯೆಯಾಗಿ ಕಾಣುತ್ತಿದ್ದರು. ಈ ಪ್ರಣಯಿಗಳನ್ನು ದಾಟಿ ಸ್ವಲ್ಪ ದೂರ ಹೋದಮೇಲೆ, ನನ್ನ ಮಿತ್ರ ತಾನೇ ಮಾತನಾಡಿಕೊಳ್ಳುವವನಂತೆ, ಹೇಳಿದ :

"ಹುಮ್ !! —ಬಡಪಾಯಿಗಳು ! ಅವರನ್ನು ಕಂಡರೆ ನನಗೆ ಅಸಹ್ಯವುಂಟಾಗು ವುದಿಲ್ಲ. ಅಸೂಯೆಯೂ ಆಗುವುದಿಲ್ಲ—ಅವುಗಳ ಬದಲು, ನಿಜವಾಗಿಯೂ ಅಪಾರ ಕನಿಕರವಾಗುತ್ತದೆ! . . . ಮಾನವ ಜೀವನದ ರಹಸ್ಯಗಳಲ್ಲೆಲ್ಲಾ ನಾನು ಭೇದಿಸಿ ಪತ್ತೆಮಾಡಿರುವುದು ಒಂದಿದೆ, ರಾಮಣ್ಣ. ಅದು, ಈ ಬಾಳಿನಲ್ಲಿ ನಾವು ಅನುಭವಿಸುವ ದುರ್ಭರ ಚಿತ್ರಹಿಂಸೆಗೆ ಕಾರಣವಾಗಿರುವ ವಿಷಯ—ನಮ್ಮ ನಿರಂತರವಾದ ಅನಂತ ವಾದ ಏಕಾಂತತೆ !—ಅವಿರಳವಾದ, ಅವಿಚ್ಛಿನ್ನವಾದ, ಅಪಾರವಾದ ಏಕಾಂತತೆ !! ಯಾವ ಈ ಏಕಾಂತತೆಯಿಂದ ಪಾರಾಗುವುದಕ್ಕಾಗಿ, ನಮ್ಮ ಸರ್ವಸಾಹಸಗಳೂ, ಕ್ರಿಯೆಗಳೂ, ಹೋರಾಟಗಳೂ, ಅವಿರಾಮವಾಗಿ ನಡೆದಿವೆಯೋ ಆ ಭಯಾನಕವೂ ಸಹನಾತೀತವೂ ಆದ ಒಂಟಿತನ ! . . . ನಮ್ಮ ಹಾಗೆ . . . ಎಲ್ಲ ಜೀವಿಗಳ ಹಾಗೆ, ಬಹಿರಂಗ ವಾತಾವರಣದಲ್ಲಿ ಬೆಂಚಿನ ಮೇಲೆ ಕುಳಿತಿರುವ ಆ ಪ್ರಣಯಿಗಳಿಬ್ಬರೂ ಒಂದು ನಿಮಿಷದ ಮಟ್ಟಿಗೆ, ಅಥವಾ ಅದಕ್ಕೆ ಕಡಿಮೆ ಕಾಲದ ಮಟ್ಟಿಗಾದರೂ, ತಮ್ಮ

ಒಂಟಿತನವನ್ನು ನಿವಾರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. . . . ಹುಸ್! ಅವರ ಪ್ರಯತ್ನಗಳು ಏನೇ ಇರಲಿ, ಎಷ್ಟೇ ಇರಲಿ, ಅವರೆಲ್ಲರೂ ಒಬ್ಬರಿಂದ ಒಬ್ಬರು ದೂರವಾಗಿ ಒಂಟಿಯಾಗಿದ್ದಾರೆ—ಯಾವಾಗಲೂ ಒಂಟಿಯಾಗಿಯೇ ಇರುತ್ತಾರೆ. ನಮ್ಮ ಸ್ಥಿತಿಯೂ ಅದೇ ಆಗಿದೆ, ರಾಮಣ್ಣಾ!

"ಈ ಮಾತಿನ ಸತ್ಯ, ಹೆಚ್ಚುಕಡಿಮೆ ನಮ್ಮಲ್ಲಿ ಎಲ್ಲರಿಗೂ ಸ್ಪಷ್ಟವಾಗಿರುವ ವಿಷಯ. ನನಗೆ ಇದರ ಪೂರ್ಣ ಅರಿವು ಉಂಟಾಗಿದೆ. ನಾವು ಬಾಳುತ್ತಿರುವ ಏಕಾಂತತೆ ಭಯಾನಕವಾದುದಾದರೆ, ಅದನ್ನು ಪತ್ತೆಮಾಡಿದುದರ ಪರಿಣಾಮ ದುರ್ದಮ್ಯ ಮಾನಸಿಕಯಾತನೆ! ಇದನ್ನು ಕೆಲವು ಕಾಲದಿಂದ ನಾನು ಅನುಭವಿಸಿದ್ದೇನೆ. ಈ ಏಕಾಂತತೆಯನ್ನು ನಾಶಮಾಡುವುದು ಅಸಾಧ್ಯ. ಅದಕ್ಕೆ ತಕ್ಕ ಸಾಧನ ಏನೂ ಇಲ್ಲ—ಏನೇನೂ ಇಲ್ಲ! . . . ಕೇಳುತ್ತಾ ಇದ್ದೀಯೇನು? ನಮ್ಮ ಪ್ರಯತ್ನ ಏನೇ ಇರಲಿ, ಸಾಹಸಗಳು ಎಷ್ಟೇ ಇರಲಿ, ನಾವು ಏನೇ ಮಾಡಲಿ, ನಮ್ಮ ಹೃದಯಗಳ ಸಂಕಟದ ಉರಿ, ನಮ್ಮ ತುಟಿಗಳ ಪ್ರಾರ್ಥನೆಯ ತೀವ್ರತೆ, ನಮ್ಮ ಕಣ್ಣುಗಳ ಕಾತರತೆ, ನಮ್ಮ ಆಲಿಂಗನಗಳ ಬಿಸುಗೆ ಏನೇ ಇರಲಿ, ನಮ್ಮಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ, ಅನಿವಾರ್ಯವಾಗಿ ನಿರಂತರವೂ ಒಂಟಿ . . . ನನ್ನ ಮನೆಯಲ್ಲಿನ ಏಕಾಂತತೆ ಈಗ ನನಗೆ ತೀರ ಅಸಹನೀಯವಾಗಿದೆ. ಅದನ್ನು ಪ್ರವೇಶಿಸುವ ಅವಶ್ಯಕತೆಯನ್ನು ತಪ್ಪಿಸಿಕೊಳ್ಳುವುದಕ್ಕಾಗಿ—ಅಲ್ಲ! ಅಲ್ಲ! ಸ್ವಲ್ಪ ಕಾಲವಾದರೂ ಮುಂದಕ್ಕೆ ಹಾಕುವುದಕ್ಕಾಗಿ, ನಿನ್ನನ್ನು ಈ ಸಂಚಾರಕ್ಕೆ ಕರೆದೆ—ನಿಜ. ಆದರೆ, ಇದರಿಂದ ನನಗೆ ಆದ ಒಳಿತು ಏನು? . . . ನಾನು ನಿನ್ನ ಕೂಡ ಮಾತಾಡುತ್ತಿದ್ದೇನೆ; ನೀನು ನನ್ನ ಮಾತುಗಳನ್ನು ಕೇಳುತ್ತಿದ್ದೀಯೆ—ನಿಜ. ಆದರೂ ನಾವಿಬ್ಬರೂ ಏಕಾಂಗಿಗಳು, ರಾಮಣ್ಣಾ! ಅಕ್ಕಪಕ್ಕದಲ್ಲೇ ಇದ್ದು, ಏಕಾಂಗಿಗಳು! ನೀನು ಇದನ್ನು ಅರ್ಥಮಾಡಿಕೊಳ್ಳಬಲ್ಲೆಯಾ?

"'ಅಜ್ಞಾನಿಗಳೇ ಪುಣ್ಯವಂತರು' ಎಂದು ಧರ್ಮಗ್ರಂಥಗಳು ಸಾರುತ್ತವೆ. ಸುಖದ ಭ್ರಮೆಯಲ್ಲಿ ಮುಳುಗಿರುವ ಅವರಿಗೆ ನಮ್ಮ ಒಂಟಿತನದ ಸಂಕಟದ ಅನುಭವ ಇರುವುದಿಲ್ಲ. ಬದುಕಿನ ಅಲೆದಾಟದ ಬಾಳಿನಲ್ಲಿ ಮೊಳಕೈಗಳ—ಭುಜಗಳ—ಆಕಸ್ಮಿಕ ಸ್ಪರ್ಶ ಹೊರತಾಗಿ, ಬೇರೆ ಸಂಪರ್ಕವಿಲ್ಲದೆ, ನೋಡುವ—ಪತ್ತೆಮಾಡುವ—ಅರ್ಥ ಮಾಡಿಕೊಳ್ಳುವ ಕೇವಲ ಆತ್ಮಾಭಿಮಾನದ ಶುಷ್ಕತೃಪ್ತಿ ಹೊರತಾಗಿ, ಬೇರೆ ಆನಂದ ವಿಲ್ಲದೆ ಇರುವ ನನ್ನ ಸ್ಥಿತಿಯಿಂದ ಅವರು ದೂರವಾಗಿರುತ್ತಾರೆ. ಕೊನೆಯೇ ಇಲ್ಲದ ನಮ್ಮ ಏಕಾಂತತೆಯ ಅರಿವಿನಿಂದ ನಿರಂತರವೂ ಅನಿರ್ವಚನೀಯವಾದ ಸಂಕಟಕ್ಕೀಡಾಗಿರುವ ನನ್ನಂತೆ, ಅವರು ನರಳುತ್ತಿಲ್ಲ.

"ನನ್ನ ಮಾತುಗಳನ್ನು ಕೇಳುತ್ತಿರುವ ನೀನು 'ಬಹುಶಃ ಇವನ ಬುದ್ಧಿ ಸ್ವಲ್ಪ ಪಲ್ಲಟವಾಗಿರಬಹುದು'—ಎಂದು ಯೋಚಿಸುತ್ತಿಯೇನೋ—ಅಲ್ಲವೇ? ಕೇಳು, ನನ್ನ ಇರುವಿಕೆಯು—ಅಂದರೆ 'ನಾನು' ಎಂದು ಯಾವುದಕ್ಕೆ ನಾನು ಅನ್ವಯಿಸುತ್ತಿದ್ದೇನೋ ಅದರ ಸಂಪೂರ್ಣ ಏಕಾಂತತೆಯ ಅನುಭವ ಆದಂದಿನಿಂದ, ನಿತ್ಯವೂ—ನಿರಂತರವೂ ನಾನು, ಕರಾಳವಾದ—ಭೀಕರವಾದ—ನಿರಾಳಕಂದರದ ಆಳದಲ್ಲಿ ಮುಳುಗುತ್ತಿರುವಂತೆ ಭಾಸವಾಗುತ್ತಿದೆ. ಈ ಮಹಾಕಂದರದ ಪಕ್ಕಗಳು ನನಗೆ ಗೋಚರವಾಗುತ್ತಿಲ್ಲ; ಇದರ ತಳವನ್ನು ನಾನು ಕಾಣೆ; ಬಹುಶಃ ಇದಕ್ಕೆ ತಳವೇ ಇಲ್ಲವೋ ಏನೋ! ಯಾರು ಬಲ್ಲರು? ಅಧೋಗಾಮಿಯಾದ ಈ ನೀರವ ಕಾಳಪಾತಾಳ ಮಾರ್ಗದಲ್ಲಿ, ನನ್ನ ಕೂಡ—ಅಥವಾ ನನ್ನ ಸುತ್ತ, ಯಾರೂ ಇಲ್ಲದೆ—ನನ್ನಷ್ಟೇ ನಿರುತ್ಸಾಹದಿಂದ ಪ್ರಯಾಣಮಾಡುತ್ತಿರುವ ಇನ್ನೊಬ್ಬ ಜೀವಂತವ್ಯಕ್ತಿಯ ಸಂಗವಿಲ್ಲದೆ, ನಾನೊಬ್ಬನೇ ಇಳಿಯುತ್ತಿದ್ದೇನೆ. ನೀರವತೆ, ಕರಾಳತೆ, ಅಪಾರತೆ—ಅತಲತೆಗಳೇ ಲಕ್ಷಣವಾದ ಈ ಭಯಾನಕ ಕಂದರವೇ 'ಜೀವನ' ಎನ್ನುವುದು. ಕೆಲವು ವೇಳೆ—ಎಲ್ಲೋ ಕೆಲವು ವೇಳೆ—ಹೌದೋ ಅಲ್ಲವೋ ಎಂಬಂತೆ ಅಸ್ಪಷ್ಟ ಶಬ್ದಗಳೂ—ಧ್ವನಿಗಳೂ—ಕೂಗುಗಳೂ ಕೇಳಿಬರುತ್ತವೆ. ಆಗ ನಾನು, ಪುಕ್ಕಲುತನದಿಂದ, ಈ ಅಸ್ತವ್ಯಸ್ತವಾದ ಧ್ವನಿಗಳ ಕಡೆ ಹೆಜ್ಜೆ ಇಡುತ್ತೇನೆ. ಆದರೆ ಯಾರಿಂದ ಈ ಧ್ವನಿಗಳು ಬರುತ್ತಿವೆಯೆಂದು ಸ್ಪಷ್ಟವಾಗಿ ನಾನು ಅರಿಯಲಾರೆ; ನನಗೆ ಯಾರ ಭೇಟಿಯೂ ಆಗುವುದಿಲ್ಲ. ನನ್ನನ್ನು ಸುತ್ತ ಆವರಿಸಿ ಒತ್ತುತ್ತಿರುವ ಈ ಕತ್ತಲಲ್ಲಿ, ಇನ್ನೊಂದು, ಸಹಾನುಭೂತಿಯಿಂದ ಚಾಚಿದ ಕೈ ನನಗೆ ಪತ್ತೆಯಾಗುವುದಿಲ್ಲ. . . . ನಿನಗೆ ಇದೆಲ್ಲ ಅರ್ಥವಾಗುವುದಿಲ್ಲವೇ—ರಾಮಣ್ಣಾ?

"ಕೆಲವು ಮಂದಿ—ಎಲ್ಲೋ ಅಪರೂಪವಾಗಿ ಒಮ್ಮೊಮ್ಮೆ, ಈ ಭಯಾನಕ ಯಾತನೆಯನ್ನು ಪತ್ತೆಮಾಡಿದ್ದಾರೆ. ಡಿ ಮುಸ್ಸೆ(ಟ್) ಹೀಗೆ ಬರೆದಿದ್ದಾನೆ—

> 'ಬರುವರಾರು? ಕರೆವರಾರು? ಇಲ್ಲ ಯಾರು!
> ನಾನೊಬ್ಬನೇ ಇಹೆನು. ಗಂಟೆ ಒಂದು ಹೊಡೆಯುತಿದೆ.
> ಓ! ಒಂಟಿತನವೇ! ಓವೋ! ಸಂಕಟವೇ!'

"ಆದರೆ, ಅವನಲ್ಲಿ ಇದು, ನನಗೆ ಸ್ಪಷ್ಟವಾಗಿರುವ ಸತ್ಯವಾಗಿರದೆ, ಒಂದು ಪ್ರಾಸಂಗಿಕವಾದ ಸಂಶಯ ಮಾತ್ರವಾಗಿದೆ. ಅವನೊಬ್ಬ ಕವಿಯಾಗಿದ್ದ; ತನ್ನ ಜೀವನವನ್ನು ಕನಸುಗಳಿಂದ—ಕಲ್ಪನಾವಿಲಾಸಗಳಿಂದ ತುಂಬಿಕೊಂಡಿದ್ದ. ವಸ್ತುತಃ, ಅವನು ಎಂದಿಗೂ ಒಂಟಿಯಾಗಿರಲಿಲ್ಲ. ಆದರೆ ನಾನು? ನಾನು ಸಹಿಸಲಶಕ್ಯವಾದ ಒಂಟಿತನಕ್ಕೆ ಅಂಟಿಕೊಂಡಿರುವ ನಿರ್ಭಾಗ್ಯ ಏಕಾಂಗಿ!

"ಗಸ್ಟೇವ್ ಫ್ಲಾಬರ್ಟ್, ಈ ಪ್ರಪಂಚದ ಮಹಾಜ್ಯೋತಿಗಳಲ್ಲಿ ಒಬ್ಬನಾಗಿದ್ದ ಕಾರಣದಿಂದಲೇ ಪ್ರಪಂಚದ ಮಹಾನಿರ್ಭಾಗ್ಯರಲ್ಲೂ ಒಬ್ಬನಾಗಿದ್ದ. ಅವನು ಒಮ್ಮೆ ತನ್ನೊಬ್ಬ ನೆರೆಯನಿಗೆ ಈ ನಿರಾಶಾವಾಕ್ಯವನ್ನು ಬರೆದ: 'ಅಯ್ಯೋ, ನಾವೆಲ್ಲ ಒಂದು ಮರುಭೂಮಿಯಲ್ಲಿದ್ದೇವೆ; ಯಾರೂ ಯಾರನ್ನೂ ತಿಳಿದುಕೊಳ್ಳಲಾರರು (ಅರ್ಥ ಮಾಡಿಕೊಳ್ಳಲಾರರು.)'

"ಏನೇ ಯೋಚಿಸಲಿ, ಏನೇ ಹೇಳಲಿ, ಎಷ್ಟೇ ಪ್ರಯತ್ನಿಸಲಿ, ಯಾರೂ ಯಾರನ್ನೂ ತಿಳಿದುಕೊಳ್ಳುವುದಿಲ್ಲ (ಅರ್ಥಮಾಡಿಕೊಳ್ಳುವುದಿಲ್ಲ). ನೋಡು, ಗಗನತಲಕ್ಕೆ ಎರಚಿದ ಬೆಂಕಿಯ ಕಿಡಿಗಳಂತೆ ಕಾಣುತ್ತಿರುವ ಆ ನಕ್ಷತ್ರಗಳಲ್ಲಿ ಏನಾಗುತ್ತಿದೆಯೆಂದು ಈ ಭೂಮಿ ಬಲ್ಲುದೇನು? ಅವುಗಳ ಸಂಖ್ಯೆ ಎಷ್ಟೆಂದು, ದೂರ ಎಷ್ಟೆಂದು ಯಾರು ಬಲ್ಲರು? ಅವುಗಳಲ್ಲಿ ಎಲ್ಲೋ ಕೆಲವು ತಾರೆಗಳ ತೇಜಸ್ಸು ಮಾತ್ರ ನಮಗೆ ಗೋಚರ ವಾಗುತ್ತಿದೆ. ಕಣ್ಣಿಗೆ ಅಗೋಚರವಾಗಿ, ಅನಂತ, ಶೂನ್ಯದಲ್ಲಡಗಿರುವ ಉಳಿದ ಅಸಂಖ್ಯಾತ ಜ್ಯೋತಿರ್ಕಣಗಳನ್ನು ಕುರಿತು ಯೋಚಿಸು; ಶೂನ್ಯದ ಅಗಾಧತೆಯೊಡನೆ ಹೋಲಿಸಿದರೆ, ಬಹುಶಃ ಅವುಗಳ ಪರಸ್ಪರ ಅಂತರ, ನಮ್ಮ ದೇಹದಲ್ಲಿ ಅದರ ಅಣು ಕೋಶಗಳಷ್ಟೇ ಸಮೀಪವಾಗಿದ್ದು, ನಮ್ಮ ದೇಹದಂತೆಯೇ, ಸಮಗ್ರ ಸೃಷ್ಟಿಯೂ ಪೂರ್ಣತೆಯನ್ನು ತಾಳುತ್ತದೆ.

"ಒಳ್ಳೆಯದು—ಹಾಗೆಯೇ, ಒಬ್ಬ ಮನುಷ್ಯನಿಗೆ, ಇನ್ನೊಬ್ಬ ಮನುಷ್ಯನಲ್ಲಿ ಏನು ನಡೆಯುತ್ತಿದೆ—ಎನ್ನುವುದರ ಬಗ್ಗೆ, ಇದಕ್ಕಿಂತ ಹೆಚ್ಚಾಗಿ ತಿಳಿಯುವುದಿಲ್ಲ. ಮನುಷ್ಯರಾದ ನಮ್ಮಲ್ಲಿ ಒಬ್ಬರಿಗೊಬ್ಬರಿಗೆ ಇರುವ ಅಂತರ, ನಕ್ಷತ್ರಗಳ ನಡುವೆ ಇರುವ ಅಂತರಕ್ಕಿಂತ ಹೆಚ್ಚಾಗಿದೆ! ಅಷ್ಟೇ ಅಲ್ಲ, ನಮ್ಮ ಏಕಾಂತತೆಯೂ ಅವುಗಳದ್ದ ಕ್ಕಿಂತ ಹೆಚ್ಚಿನದು. ಏಕೆಂದರೆ ಯೋಚನೆಯ ಆಳವು ಅಳೆಯಲಸಾಧ್ಯವಾದದ್ದು.

"ನಾವು ಯಾರನ್ನು—ಅಂದರೆ, ಯಾರ ಮನಸ್ಸನ್ನು, ಭೇದಿಸಲಾರೆವೋ ಆ ಜೀವಿ ಗಳ ಕೂಡ, ಈ ನಿರಂತರವಾದ ಸಂಪರ್ಕಕ್ಕಿಂತ ಮಿಗಿಲಾಗಿ ದುರ್ಭರವಾದದ್ದು—ಭಯಾನಕವಾದದ್ದು ಏನಾದರೂ ನಿನಗೆ ಗೊತ್ತಿದೆಯೇನು? ನಾವು, ಪರಸ್ಪರ ಸಂಕೋಲೆ ಬಿಗಿದುಕೊಂಡ ಹಾಗೆ, ಒಬ್ಬರಿಗೊಬ್ಬರು ಅಂಟಿಕೊಂಡು—ತೋಳುಗಳನ್ನು ಚಾಚಿ ಚಾಚಿ—ಪ್ರೀತಿಸುತ್ತೇವೆ—ಆಹಾ! ಒಬ್ಬರನ್ನೊಬ್ಬರು ಸೋಕಲಾರದೆ, ನಿರರ್ಥಕ ವಾಗಿ ಪ್ರೀತಿಸುತ್ತೇವೆ! ಮಧುರ ಯಾತನಾಮಯವಾದ ಪೂರ್ಣಮಿಳನದ ತೀವ್ರ ಅಗತ್ಯವು ತೊಡಕನ್ನುಂಟುಮಾಡುತ್ತದೆ. ಏನೇ ಆಗಲಿ, ನಮ್ಮ ಸರ್ವ ಪ್ರಯತ್ನಗಳೂ ಸಾಹಸಗಳೂ, ನಿಷ್ಫಲತೆಯಲ್ಲೇ ಕೊನೆಗಾಣುತ್ತವೆ. ಕಟ್ಟುಗಿಟ್ಟುಗಳನ್ನೆಲ್ಲ ಕಿತ್ತೊಗೆದ ನಮ್ಮ ಎಲ್ಲ ಲೋಲುಪತೆ, ಭೋಗಾತಿಶಯಗಳೂ ಅಪ್ರಯೋಜಕ! ನಮ್ಮ ನಂಬಿಕೆ—

ನೆಚ್ಚುಗಳೆಲ್ಲ ವಿಫಲ ! ನಮ್ಮ ಆಲಿಂಗನ ಸಹಸ್ರಗಳು, ಚುಂಬನಕೋಟಿಗಳು—ಎಲ್ಲ—ಎಲ್ಲ ವ್ಯರ್ಥ ! ನಾವು ಕಾತರೋದ್ವೇಗದಿಂದ, ಪರಸ್ಪರ ಅತಿ ನಿಕಟವಾಗಿ ಬೆಸುಗೆಯಾಗಲು ಅಪೇಕ್ಷಿಸಿ ಪ್ರಯತ್ನಪಟ್ಟಾಗ, ಹತಾತ್ತನೆಯ ಭಾವೋದ್ರೇಕದ ಫಲವಾಗಿ ಆಗುವುದು, ಪರಸ್ಪರ ಘರ್ಷಣೆ ಮಾತ್ರ.

"ಯಾರಾದರೂ ಸ್ನೇಹಿತನಿಗೆ ನನ್ನ ಹೃದಯವನ್ನು ತೆರೆದಾಗ ನನ್ನಲ್ಲಿ ಉಂಟಾಗುವಷ್ಟು ಏಕಾಂತತೆಯ ಅನುಭವ, ಮತ್ತೆ ಯಾವಾಗಲೂ ಆಗುವುದಿಲ್ಲ. ಏಕೆಂದರೆ, ಉಳಿದ ಸಮಯಕ್ಕಿಂತ ಚೆನ್ನಾಗಿ ಆಗ, ಅಪರಿಹಾರ್ಯವಾಗಿ, ಅಡಚಣೆಯ—ಅಥವಾ ತೊಡಕಿನ ರೀತಿ ಅರ್ಥವಾಗುತ್ತದೆ. ಅವನು—ನನ್ನ ಗೆಳೆಯ, ನನ್ನೆದುರಿಗೇ ಇದ್ದಾನೆ; ಅವನ ಸ್ಪಷ್ಟವಾದ ಕಣ್ಣುಗಳು ನನಗೆ ಕಾಣುತ್ತಿವೆ. ಆದರೇನು ? ಅವುಗಳ ಹಿಂಬದಿಯಲ್ಲಡಗಿರುವ ಅವನ ಆತ್ಮ ನನಗೆ ಅಗೋಚರ ! ಎಂದೆಂದಿಗೂ ಅಗೋಚರ !! ನಾನು ಹೇಳುವುದನ್ನೆಲ್ಲ ಕೇಳುತ್ತಿದ್ದಾನೆ. ಸರಿ, ಅವನು ಏನು ಯೋಚನೆಮಾಡುತ್ತಿದ್ದಾನೆ ? ಹೌದು, ಅವನು ಏನು ಯೋಚನೆಮಾಡುತ್ತಾ ಇದ್ದಾನೆ ? ಈ ಪ್ರಶ್ನೆ ಮನಸ್ಸಿನಲ್ಲಿ ಮೂಡಿದಾಗ ಆಗುವ ಚಿತ್ರಹಿಂಸೆ ನಿನಗೆ ಅರ್ಥವಾಗುವುದಿಲ್ಲ . . . ಬಹುಶಃ, ಅವನು ನನ್ನನ್ನು ದ್ವೇಷಿಸುತ್ತಾನೋ ? ತುಚ್ಛೀಕರಿಸುತ್ತಾನೋ ?—ಅಣಕಿಸುತ್ತಾನೋ ? ಅಥವಾ, ನಾನು ಹೇಳಿದುದನ್ನೆಲ್ಲ ಕುರಿತು ಆಲೋಚಿಸುತ್ತಿದ್ದಾನೋ ? ಒರೆಹಚ್ಚಿ ನೋಡುತ್ತಿದ್ದಾನೋ ? ಮೂದಲಿಸುತ್ತಿದ್ದಾನೋ ? ನನ್ನನ್ನು ದೂಷ್ಯನನ್ನಾಗಿ ಭಾವಿಸುತ್ತಾನೋ ? ನಾನೊಬ್ಬ ತೀರ ಕಳಪೆ ಮನುಷ್ಯ ಅಥವಾ ಬುದ್ಧಿಹೀನ ಎಂದು ತೀರ್ಮಾನಿಸುತ್ತಾನೋ ?

"ಇವುಗಳಲ್ಲಿ ಅವನ ಯೋಚನೆ ಯಾವುದೆಂದು ನಾನು ಅರಿತುಕೊಳ್ಳುವ ಬಗೆ ಹೇಗೆ ? ನಾನು ಅವನಲ್ಲಿ ವಿಶ್ವಾಸಿಯಾಗಿರುವಂತೆಯೇ ಅವನೂ ನನ್ನಲ್ಲಿ ವಿಶ್ವಾಸಿ ಎಂದು ನಾನು ತಿಳಿದುಕೊಳ್ಳಲು ಇರುವ ಸಾಧನವಾದರೂ ಏನು ? ಅವನ ಆ ಬುರುಡೆ ಚಿಪ್ಪಿನ ಒಳಗೆ ಏನು ನಡೆಯುತ್ತಿದೆಯೆಂದು ನನಗೆ ಗೊತ್ತಾಗುವುದು ಹೇಗೆ ? ಆಹಾ ! ನಮ್ಮ ಅರಿವಿಗೆ ನಿಲುಕದಂತೆ—ನಮ್ಮ ಹತೋಟಿಗೆ ಒಳಪಡದಂತೆ—ನಮ್ಮ ಆಣತಿಗಳಿಗೆ ಬಾಹ್ಯವಾಗಿ—ನಾವು ಜಯಿಸಲಾಗದಂತೆ, ಒಂದು ಜೀವಿಯಲ್ಲಿ ಗುಪ್ತವಾಗಿ ಸ್ವತಂತ್ರವಾಗಿರುವ ಅಜ್ಞಾತಯೋಚನೆ, ಎಂತಹ ಗಭೀರ ರಹಸ್ಯ !

"ನಾನೇ ? ನನ್ನನ್ನು ನಾನು ಸಂಪೂರ್ಣವಾಗಿ ವಿಸರ್ಜಿಸಲು ಇಷ್ಟಪಟ್ಟಿದ್ದೇನೆ—ಆದರೆ, ಅದು ನಿರರ್ಥಕವಾಗಿದೆ. ನನ್ನ ಆತ್ಮದ ಬಾಗಿಲುಗಳನ್ನೆಲ್ಲ ತೆರೆದುಹಾಕಲು ಪ್ರಯತ್ನಪಟ್ಟಿದ್ದೇನೆ. ಆದರೂ ಆತ್ಮವಿಸರ್ಜನೆಯಲ್ಲಿ ನಾನು ಕೃತಕೃತ್ಯನಾಗಿಲ್ಲ. ನಾನು—ಎನ್ನುವುದು, ಇನ್ನೂ ಅದರ ರಹಸ್ಯಸ್ಥಾನವಾದ ಗಭೀರತೆಯಲ್ಲಿ—ಆ ಮಹಾಂತರಾಳದ

ತಟ್ಟತಳದಲ್ಲಿ—ಅವಿತಿದೆ. ನನ್ನನ್ನು ಹೋಲುವ ಇನ್ನೊಂದು ವ್ಯಕ್ತಿ ಇಲ್ಲದ ಕಾರಣ, ಯಾರೂ ಯಾರನ್ನೂ ಅರ್ಥಮಾಡಿಕೊಳ್ಳಲಾರರಾದ್ದರಿಂದ, ದುರ್ಗಮವಾದ ಆ ಸ್ಥಳವನ್ನು ಯಾರೂ ಪತ್ತೆಮಾಡಲಾರರು—ಪ್ರವೇಶಿಸಲಾರರು.

"ಈ ಕ್ಷಣದಲ್ಲಿ, ನೀನಾದರೂ ನನ್ನನ್ನು ಅರ್ಥಮಾಡಿಕೊಳ್ಳುತ್ತೀಯಾ? ಇಲ್ಲ. ನಾನೊಬ್ಬ ಹುಚ್ಚ—ಎಂದು ನಿನ್ನ ಭಾವನೆ! ನನ್ನನ್ನು ಪರೀಕ್ಷಿಸಿ ನೋಡಿ ನನ್ನಿಂದ ಮುದುರಿಕೊಳ್ಳುತ್ತಿ! 'ಈ ರಾತ್ರಿ ಏನಾಗಿದೆ ಇವನಿಗೆ?'—ಎಂದು ನಿನ್ನನ್ನು ನೀನೇ ಪ್ರಶ್ನಿಸುತ್ತಿ. ಆದರೆ, ಎಂದಾದರೂ ಒಂದು ದಿನ ನೀನು, ನನ್ನ ಈ ಭಯಾನಕವೂ ಸೂಕ್ಷ್ಮವೂ ಆದ ಆಂತರಿಕ ಯಾತನೆಯನ್ನು ಗ್ರಹಿಸುವುದರಲ್ಲಿ, ಅರ್ಥಮಾಡಿಕೊಳ್ಳುವುದರಲ್ಲಿ ಕೃತಕೃತ್ಯನಾದರೆ, ಆಗ ನನ್ನ ಬಳಿಗೆ ಬಂದು 'ನಾನು ನಿನ್ನನ್ನು ಅರ್ಥಮಾಡಿಕೊಂಡಿದ್ದೇನೆ!' ಎಂದಿಷ್ಟು ಮಾತ್ರ ಹೇಳು. ಅದರಿಂದ ನನಗೆ—ಬಹುಶಃ ಒಂದು ಕ್ಷಣದಮಟ್ಟಿಗಾದರೂ—ಸುಖವಾದೀತು.

"ಹೆಂಗಸರು ನನಗೆ ಇನ್ನೂ ಮಿಗಿಲಾಗಿ, ತೀವ್ರವಾದ ರೀತಿಯಲ್ಲಿ, ನನ್ನ ದಾರುಣ ಏಕಾಂತತೆಯ ಅರಿವನ್ನು ಮಾಡಿಕೊಡುತ್ತಾರೆ!—ಆಹಾ! ಅದೆಂತಹ ಶೋಚನೀಯ ಪರಿಸ್ಥಿತಿ! ಅಯ್ಯೋ! ಹೆಂಗಸರಿಂದ ನಾನು ಪಟ್ಟಿರುವ ಸಂಕಟ ಎಷ್ಟು! ಏಕೆಂದರೆ, ಅನೇಕ ವೇಳೆ ಗಂಡಸರಿಗಿಂತ ಹೆಚ್ಚಾಗಿ ಅವರು, ನಾನು ಒಂಟಿಯಲ್ಲ—ಎನ್ನುವ ಭ್ರಾಂತಿಯನ್ನು ನನ್ನಲ್ಲುಂಟುಮಾಡಿದ್ದಾರೆ!

"ಗಂಡಸಾದವನು ಹೆಣ್ಣೊಂದರ ಒಲವಿನ ಸುಳಿಗೆ ಸಿಕ್ಕಾಗ, ಅವನಿಗೆ ತನ್ನ ಚೇತನ ಅರಳಿ ವಿಸ್ತರಿಸಿದಂತೆ ಭಾಸವಾಗುತ್ತದೆ—ಅವನು ಆನಂದೋತ್ಕರ್ಷದಿಂದ ಹಿಗ್ಗಿ ಮೈಮರೆಯುತ್ತಾನೆ. ಇದರ ಕಾರಣ ಗೊತ್ತೇನು ನಿನಗೆ? ಸುಖದ ಸೀಮೋಲ್ಲಂಘನೆಯಾದಂತೆ ಭಾಸವಾಗುವುದು ಏಕೆ ಗೊತ್ತೇನು? ಏಕೆಂದರೆ, ಆಗ—ಆ ಮಧುರತಮ ಕ್ಷಣದಲ್ಲಿ, ಒಲವಿನ ಸುಳಿಗೆ ಸಿಕ್ಕವನಿಗೆ ತಾನು ಇನ್ನುಮುಂದೆ ಏಕಾಂಗಿಯಲ್ಲ—ಎಂಬ ಕಲ್ಪನೆಯುಂಟಾಗುವ ಏಕಮಾತ್ರ ಕಾರಣದಿಂದ. ಆಗ—ಮಾನವಜೀವಿಯ ತ್ಯಜಿತ ಭಾವವಾದ ಪ್ರತ್ಯೇಕತೆ—ನಾಶವಾದಂತೆ ಕಾಣುತ್ತದೆ. ಈ ಕಲ್ಪನೆ ಎಂತಹ ಘೋರವಾದ ತಪ್ಪು!

"ಏಕಾಂಗಿಯಾದ ನಮ್ಮ ಹೃದಯವನ್ನು ಅಗಿದು ಅರೆಯುವ ಒಲವಿನ ಅನಂತವಾದ ಅಗತ್ಯತೆಯಿಂದ, ಮಹಾಮಾಯೆಯ ಪ್ರತೀಕರೂ, ಸ್ವಪ್ನಸದೃಶರೂ ಆದ ಹೆಂಗಸರು, ನಮಗಿಂತ ಮಿಗಿಲಾಗಿ ಸಂಕಟಪಡುತ್ತಾರೆ.

"ತನ್ನ ಬೊಗಸೆಕಣ್ಣುಗಳ ಕುಡಿಮಿಂಚಿನಿಂದಲೇ ನಮ್ಮ ಹೃದಯದಲ್ಲಿ ಒಲವಿನ ಜ್ವಾಲೆಯನ್ನೆಬ್ಬಿಸುವ ಮದಿರಾಕ್ಷಿ!—ನೀಳಕುಂತಳೆ—ಮೋಹನಾಕಾರೆ!—ಇಂತಹ

ಪ್ರಮದೆಯರ ಕಾಮಿನಿಯರ ಸಮ್ಮುಖದಲ್ಲಿ ಕಳೆಯುವ ಗಂಟೆಗಳು ಎಷ್ಟು ಮಧುರತಮ ವಾಗಿರುತ್ತವೆಯೆಂದು ನೀನು ಬಲ್ಲೆ—ಅಥವಾ ಊಹಿಸಿಕೊಳ್ಳಬಲ್ಲೆ! ಆಹಾ! ಆಗ ಅದೆಂತಹ ಸ್ಮೃತಿವಿಕಾರವು ನಮ್ಮನ್ನು ತಪ್ಪುಹಾದಿಯಲ್ಲಿ ಎಳೆದೊಯ್ಯುತ್ತದೆ! ಆಗ ಎಂತಹ ಮಾಯಾನೌಕೆಯಲ್ಲಿ ನಾವು ತೇಲಿಹೋಗಿಬಿಡುತ್ತೇವೆ!! ಅಂತಹ ವೇಳೆ ಯಲ್ಲಿ, ಭಿನ್ನವೂ ಪ್ರತ್ಯೇಕವೂ ಆದ ನಮ್ಮ ಆತ್ಮಗಳು ಕ್ಷಿಪ್ರದಲ್ಲಿಯೇ ಒಂದಾಗಿ ಬೆಸೆದುಕೊಂಡುಬಿಡುತ್ತವೆಯೆಂದು ತೋರುವುದಿಲ್ಲವೇ? .... ಹುಹ್! ಆದರೇನು? ಈ 'ಕ್ಷಿಪ್ರದಲ್ಲಿಯೇ' ಎನ್ನುವ ಮುಹೂರ್ತ ಎಂದಿಗೂ ಬರುವುದೇ ಇಲ್ಲ! ಪುನಃ ಪುನಃ ಪ್ರಯತ್ನಿಸುವುದರಲ್ಲಿ—ಕಾಯುವುದರಲ್ಲಿ—ಭರವಸೆಯಲ್ಲಿ—ಕಪಟವಾದ ಆನಂದ ಕೇಳಿಯಲ್ಲಿ, ವಾರ-ವಾರಗಳು ಉರುಳಿಹೋದನಂತರ ಒಂದು ದಿನ, ಪುನಃ ಎಂದಿ ಗಿಂತಲೂ ಹೆಚ್ಚಾಗಿ—ದಾರುಣವಾಗಿ—ದುರ್ಭರವಾಗಿ, ನೀನು ಏಕಾಂಗಿ ಎಂಬು ದನ್ನು ಕಂಡುಕೊಳ್ಳುತ್ತಿ!

"ಪ್ರತಿಯೊಂದು ಚುಂಬನದ ಅನಂತರ—ಪ್ರತಿಯೊಂದು ಆಲಿಂಗನದ ಅನಂತರ, ಹೃದಯದ ಪ್ರತ್ಯೇಕತೆಯ—ಒಂಟಿತನದ—ಭಾವ ವೃದ್ಧಿಗೊಳ್ಳುತ್ತದೆ. ಆಗ ಉಂಟಾ ಗುವ ಸಂಕಟ ಎಷ್ಟು ಭಯಂಕರ!

'ಮೈಗೆಮೈಯ್ಯ ಮುಸೆದೊಡೇನು?
ತುಟಿಗೆ ತುಟಿಯ ಇಟ್ಟೊಡೇನು?
ತೋಳುಗಳನು ಸುತ್ತಿಸುತ್ತಿ
ತನುಗಳನು ಬಿಗಿದೊಡೇನು?

ಎಲ್ಲ ಶಾಂತಿರಹಿತ ಅರ್ಥಶೂನ್ಯ ಕೇಳಿ—
ಒಡಲುಗಳ ತೆಕ್ಕೆಯಿಂ ಒಳಗಿನಾತ್ಮಗಳ
ಐಕ್ಯತೆಯ ಸಾಧ್ಯತೆಯನು ಸಾಧಿಸೆ
ಸೆಣಿಪ ಬಡ ಒಲವಿನ ವಿಫಲ ಯತ್ನಂಗಳು!'

ಎಂದು ಹೇಳಿಲ್ಲವೇ ನಮ್ಮ ಜಗದೀಶ ಕವಿ?

"ಆಮೇಲೆ? ಆಮೇಲೆ ಗೊತ್ತೇ ಇದೆ!—ಪರಸ್ಪರ ಅಗಲುವಿಕೆ—ಬೀಳ್ಕೊಳ್ಳು ವುದು! ಅಲ್ಲಿಗೆ ಎಲ್ಲ ಮುಗಿದ ಹಾಗೆ! ಯಾರು ಜೀವನದ ಒಂದು ಕ್ಷಣದಲ್ಲಿ ನಮ್ಮ ಸಕಲ ಸರ್ವಸ್ವ ಎಂದು ತೋರಿದ್ದಳೋ, ನಿಕಟವಾಗಿದ್ದರೂ, ನಿಸ್ಸಂದೇಹವಾಗಿ ಸಾಮಾನ್ಯವಾಗಿ, ಯಾರ ಯೋಚನೆಗಳನ್ನು ನಾವು ತಿಳಿದುಕೊಂಡೇ ಇರುವುದಿಲ್ಲವೋ ಅಂತಹವಳನ್ನು, ಮರುಕ್ಷಣದಲ್ಲಿ ಪ್ರಾಯಶಃ ನಾವು ಗುರುತಿಸುವುದೇ ಇಲ್ಲ.

"ಯಾವ ಸುಮಧುರ ಘಳಿಗೆಯಲ್ಲಿ ಜೀವಿಗಳ ಪರಸ್ಪರ ರಹಸ್ಯ ಸಮರಸತೆಯಿಂದ—ಅಭಿಪ್ರಾಯಗಳ—ಆಕಾಂಕ್ಷೆಗಳ ಸಂಪೂರ್ಣ ಮಿಳನದಿಂದ, ನಿನಗೆ ಆಕೆಯ ಆತ್ಮದ ಆಳವನ್ನು ಅಳೆದು ನೋಡುತ್ತಿರುವುದಾಗಿ ಭಾಸವಾಗುವುದೋ ಆ ಘಳಿಗೆಯಲ್ಲೇ ಒಂದು ಮಾತು—ಕೆಲವು ವೇಳೆ ಒಂದೇ ಒಂದು ಮಾತು, ನಿನ್ನ ತಪ್ಪನ್ನು ಬಿಚ್ಚಿ ತೋರಿಸುತ್ತದೆ—ಕಾಳರಾತ್ರಿಯಲ್ಲಿ ಹೊಳೆದ ಸೆಳೆಮಿಂಚಿನಂತೆ ನಿಮ್ಮಿಬ್ಬರ ನಡುವಣ ಗಭೀರ ಕರಾಳಕಂದರವನ್ನು ನಿನಗೆ ತೋರಿಸಿಕೊಡುತ್ತದೆ.

"ಆದರೂ ಪ್ರಪಂಚದಲ್ಲಿ ಪರಮೋತ್ಕೃಷ್ಟವಾದುದೆಂದರೆ, ಒಲಿದ ಹೆಣ್ಣಿನೊಡನೆ, ಮೌನವಾಗಿ ಆಕೆಯ ಮಧುರಸಾನ್ನಿಧ್ಯದ ಏಕಮಾತ್ರ ಇಂದ್ರಿಯಾನುಭವದಲ್ಲಿ, ಸುಖವನ್ನು ಕಾಣುವುದು. ಇದಕ್ಕಿಂತ ಹೆಚ್ಚಾಗಿ ಬಯಸಬಾರದು—ಕೇಳಬಾರದು. ಕಾರಣ, ಪ್ರತ್ಯೇಕವಾದ ಎರಡು ಜೀವಿಗಳ ಪೂರ್ಣಮಿಳನ ಎನ್ನುವುದು ಇನ್ನೂ ಆದದ್ದೇ ಇಲ್ಲ!

"ನನ್ನ ಮಟ್ಟಿಗೆ, ಈಗ ನಾನು ನನ್ನ ಆತ್ಮವನ್ನು ಮುಚ್ಚಿಹಾಕಿದ್ದೇನೆ. ನಾನು ಏನನ್ನು ನಂಬುತ್ತೇನೆ—ನನ್ನ ಯೋಚನೆಗಳೇನು—ನನ್ನ ಪ್ರೀತಿಗೆ ಪಾತ್ರವಾಗಿರುವುದು ಯಾವುದು—ಎನ್ನುವುದನ್ನು ಯಾರಿಗೂ ಹೇಳುತ್ತಿಲ್ಲ. ನಾನು ಈ ಭಯಾನಕವಾದ ಏಕಾಂತ ಭಾವನೆಗೆ ಬಲಿಯಾಗಿರುವುದು ನನಗೆ ತಿಳಿದಿದೆ. ಆದ್ದರಿಂದ, ನನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸದೆ, ವಿಷಯಗಳನ್ನು ಗಮನಿಸುವುದಷ್ಟೋ ಅಷ್ಟು ಮಾಡುತ್ತೇನೆ. ಅಭಿಪ್ರಾಯಗಳಿಂದ, ವ್ಯಾಜ್ಯ-ತಿಕ್ಕಾಟಗಳಿಂದ, ಆಮೋದ ಪ್ರಮೋದಗಳಿಂದ, ಅಥವಾ ನಂಬಿಕೆಗಳಿಂದ, ನನಗೆ ಆಗಬೇಕಾದ್ದೇನು? ಯಾರ ಸಂಗದಲ್ಲಿಯೇ ಆಗಲಿ ಭಾಗವಹಿಸಲು ಅಶಕ್ತನಾಗಿರುವ ಕಾರಣ, ನಾನು ಎಲ್ಲರಿಂದಲೂ ಹಿಮ್ಮೆಟ್ಟಿ ದೂರದಲ್ಲಿದ್ದೇನೆ. ನನ್ನ ಅಗೋಚರವಾದ ವ್ಯಕ್ತಿತ್ವವು ಅಶೋಧಿತವಾಗಿ ಬಾಳುತ್ತಿದೆ. ನಿತ್ಯವೂ, ಆಯಾ ದಿನದಲ್ಲಿ ನಾನು ಎದುರಿಸಬೇಕಾಗಬಹುದಾದ ಪ್ರಶ್ನೆಗಳಿಗೆ ಉತ್ತರವಾಗಿ, ನಾನು ಕೆಲವು ಸಾಮಾನ್ಯ ಮಾತುಗಳನ್ನು ಇಟ್ಟುಕೊಂಡಿದ್ದೇನೆ; ಅಷ್ಟೇ ಅಲ್ಲ, ಮಾತನಾಡುವ ತೊಂದರೆಯನ್ನು ತೆಗೆದುಕೊಳ್ಳಲು ಇಷ್ಟಪಡದಾಗ "ಹೌದು" ಎಂಬರ್ಥದ ಮುಗುಳ್ನಗೆಯನ್ನೂ ಅಭ್ಯಾಸಮಾಡಿದ್ದೇನೆ . . . . . ಈಗ, ನಾನು ಹೇಳಿದ್ದೆಲ್ಲಾ ನಿನಗೆ ಅರ್ಥವಾಯಿತೇ?"

ಈ ಸಮಯದಲ್ಲಿ ನಾವು ವಿಜಯದಶಮಿ ಮಂಟಪಕ್ಕೆ ಒಯ್ಯುತ್ತಿದ್ದ ಸಾಲು ಮರಗಳ ರಸ್ತೆಯನ್ನು ದಾಟಿ, ಅಲ್ಲಿಂದ ಪೂರ್ಣಿಮಾಚೌಕಕ್ಕೆ ವಾಪಸಾಗುತ್ತಿದ್ದೆವು. ನಮ್ಮ ನಡಿಗೆಯ ಉದ್ದಕ್ಕೂ, ನನ್ನ ಮಿತ್ರ ನಿಧಾನವಾಗಿ, ಮೇಲೆ ವಿವರಿಸಿರುವುದೆಲ್ಲವನ್ನೂ, ಜೊತೆಗೆ ನನ್ನ ನೆನಪಿನಿಂದ ಜಾರಿಹೋಗಿರುವ ಇತರ ಎಷ್ಟೋ ವಿಷಯಗಳನ್ನೂ, ಸೇರಿಸಿ ಹೇಳಿದ.

ಪೂರ್ಣಿಮಾಚೌಕಕ್ಕೆ ಬಂದಾಗ ನನ್ನ ಮಿತ್ರ, ಚೌಕದ ಮಧ್ಯದಲ್ಲಿ ನಿಲ್ಲಿಸಲ್ಪಟ್ಟಿದ್ದ ಏಕಶಿಲೆಯ ಉನ್ನತ ಅಶೋಕಸ್ತಂಭದ ಕಡೆ ಕೈತೋರಿಸಿ "ನೋಡು ರಾಮಣ್ಣ, ನಾವೆಲ್ಲ ಆ ಕಲ್ಲಿನ ಕಂಬದಂತಿದ್ದೇವೆ" ಎಂದ.

ಅಲ್ಲಿಂದ ಮುಂದೆ ಒಂದು ಮಾತೂ ಆಡದೆ ಮುಂದೆ ಸಾಗಿ, ಅನಂತರ ಬೇರೆ ಯಾಗಿ, ನಮ್ಮ ನಮ್ಮ ಮನೆಗಳಿಗೆ ನಡೆದೆವು.

ನನ್ನ ಮಿತ್ರ ಹೇಳಿದ್ದುದನ್ನೆಲ್ಲ ಮನಸ್ಸಿನಲ್ಲೇ ತಿರುವಿಹಾಕುತ್ತಾ ನಾನೊಬ್ಬನೇ ನಡೆಯತೊಡಗಿದೆ. ನನ್ನ ಗೆಳೆಯ ಮೂರ್ತಿ ಉನ್ಮತ್ತನಾಗಿದ್ದನೇ ? ಹುಚ್ಚನಾಗಿ ದ್ದನೇ ? ಜ್ಞಾನಿಯಾಗಿದ್ದನೇ ?—ಈ ಪ್ರಶ್ನೆಗಳಿಗೆ ಉತ್ತರ ನನಗೆ ಇನ್ನೂ ಗೊತ್ತಾ ಗಿಲ್ಲ. ಕೆಲವು ವೇಳೆ ನನಗೆ ಅವನು ಹೇಳಿದ್ದೆಲ್ಲಾ ಸರಿ ಎಂದು ತೋರುತ್ತದೆ; ಇನ್ನು ಕೆಲವು ವೇಳೆ, ಅವನ ಬುದ್ಧಿ ವಿಕಾರಹೊಂದಿತ್ತು ಎಂದು ತೋರುತ್ತದೆ.

ಧನಿ—ಗೈ ಡಿ ಮೊಪಸಾಂತ್ ಮಾರ್ದನಿ—ಆನಂದ

---

## ಕೃಷ್ಣರಾಜಸಾಗರದ ಬೃಂದಾವನ

ಹೇಮಾವತಿಯೂ ಲಕ್ಷ್ಮಣತೀರ್ಥವು
ಕೆಳೆಯಲಿ ನೆರೆದಿರೆ ಕಾವೇರಿ
ರಂಗನಾಥನನು ಅರ್ಚಿಸೆ ಹೊರಟಿರೆ
ತೆರೆ ನಿರಿ ಚಿಮ್ಮುತ ಭರವೇರಿ,

ತರಳೆಯ ಕೊರಳಿಂದುರುಳಿದ ಹಾರದ
ಪಚ್ಚೆಮುತ್ತುಗಳ ಸೇಸೆಯೊಲು
ತ್ವರೆಯೊಳು ಶಿಲೆಗಳ ಕೊರೆಯುತ ನಡೆದಿರೆ
ತುಂತುರ ತೂರುವ ನೀರ್ವೊನಲು !

ಧರಣೀಮಾತೆಯ ಜಲಾರ್ದ್ರವಾಗಿಸಿ
ಅತಿವೇಗದೊಳಿದೆ ತುಡಿಯುತಿರೆ,
ಸಸ್ಯೋಲ್ಲಾಸಿನಿ ಶಾದ್ವಲೆ ಪೃಥ್ವಿಯು
ಹೊನ್ನಿನ ತೆನೆಗಳನೆತ್ತುತಿರೆ—

ಗೆಳತಿಯ ಗತಿಯನು ಕಂಡಾ ಸಖಿ ಕಾಳಿಂದಿಯು
ಎಚ್ಚರಿಸಿದಳಿಂತು :
"ಪೂಜೆಗೆಂದು ನಡೆತಂದವಳೀ ತೆರ
ಅಲೆಯಬಹುದೆ ಇಂತು ?

ಸಂಯಮವಿಲ್ಲದ ಬರಿಯ ರಭಸವನು
ಹರಿ ಮೆಚ್ಚುವನೆಂತು ?"
ಕಾಳಿಂದಿಯ ನುಡಿ ಕೇಳಿದ ಕಿರಿಯಳು
ಕೃಷ್ಣರಾಜನಿಗೆ ಕೈಮುಗಿದು

ತುಂಬು ಹಂಬಲೊಳು ಪ್ರಾರ್ಥನೆಗೈದಳು :
"ಕರುಣಿಸು 'ಬಂಧ'ವನೆಂ"ದು.
ಮೈಸೂರಿನ ಪ್ರಭು ಭರವಸೆಯಿತ್ತನು
'ಸಲಿಪನು ವಿಶ್ವೇಶ್ವರ'ನೆಂದು.

ಫಲಿಸಿತು ಈ ವರ ದಶಕವೆರಡರೊಳು
ಸ್ವಚ್ಛಂದಕೆ ದೊರಕಲು ಬಂಧ;
ಎದೆಗಾಯಿತು ಸಾಗರ ಸಮ ಶಾಂತಿ;
ಹೆಜ್ಜೆಗೆ ಗೆಜ್ಜೆಯ ಆನಂದ!

ಪ್ರಾರ್ಥಿಸಿದಳು ಶ್ರೀರಂಗನನೀತೆರ:
"ನೀ ರಾಧೆಯೊಡನೆ ಬಂದು
ನೆಲಸುವೆಯಾದೊಡೆ ಎನ್ನ ಹೃದಯದೊಳು
ಅರಳಿಸುವೆನು ನಾ ಕೋಟಿ ವರ್ಣಗಳ
ಮೋಹದ ಗೀತದ ಬೃಂದಾವನವೊಂದು!"

ಒಪ್ಪಿದನಾ ಪ್ರಭು ರಾಧಾವಲ್ಲಭ;
ನರ್ತಿಸಿದಳು ವಿದ್ಯುಚ್ಚಂಚಲೆ ನೀರೆ:
ಈ ತೆರ ಮೈದೋರಲು ನಿರುಪಮ ಉಪವನ
ನಮಗಾಯಿತು ಸೌಂದರ್ಯದ ಸೂರೆ.*

ಮೂಲ: ಸಿ. ಡಿ. ದೇಶ್‌ಮುಖ್
ಅನುವಾದ: ಜಿ. ಎಸ್. ಶಿವರುದ್ರಪ್ಪ
ಪ್ರಭುಶಂಕರ

---

* ಶ್ರೀಯುತ ಸಿ. ಡಿ. ದೇಶಮುಖ್ ಅವರು ಕೃಷ್ಣರಾಜಸಾಗರದ ಬೃಂದಾವನವನ್ನು ನೋಡಿ ಮರಾಠಿಯಲ್ಲಿ ಕವಿತೆಯೊಂದನ್ನು ರಚಿಸಿದರು. ಅವರೇ ಅದನ್ನು ಇಂಗ್ಲಿಷಿಗೂ ಪರಿವರ್ತಿಸಿದರು. ಆ ಕವಿತೆಯ ಕನ್ನಡ ರೂಪ ಇದು.

# ನೀವೂ ನಾಯಿ ಸಾಕಿದ್ದೀರೇನು?

ಇತರ ದೇಶಗಳ ಜನಗಳಂತೆಯೇ ನಮ್ಮವರೂ ನಾಯಿಗಳಿಂದ ಎಷ್ಟೋ ಪ್ರಯೋಜನವನ್ನು ಪಡೆದಿದ್ದಾರೆ, ಪಡೆಯುತ್ತಿದ್ದಾರೆ. ಆದರೂ ಅದೇಕೋ ನಮ್ಮ ಪೂರ್ವಿಕರ ಮನಸ್ಸಿನಲ್ಲಾಗಲಿ ಆ ಮನಸ್ಸನ್ನು ಪ್ರತಿಬಿಂಬಿಸುವ ಅವರ ಸಾಹಿತ್ಯದಲ್ಲಾಗಲಿ ನಾಯಿಗಳಿಗೆ ಅಷ್ಟೇನೂ ಹಿರಿಯ ಸ್ಥಾನಮಾನಗಳು ಲಭಿಸಿದಂತೆ ಕಾಣುವುದಿಲ್ಲ. ನಮ್ಮ ಜನ ನಾಯಿಗಳ ವಿಷಯದಲ್ಲಿ ಉಪೇಕ್ಷೆಯನ್ನು ಮಾತ್ರವೇ ಅಲ್ಲದೆ ಒಂದು ಬಗೆಯ ತಿರಸ್ಕಾರವನ್ನೂ ಅಸಹ್ಯ ಭಾವನೆಯನ್ನೂ ವ್ಯಕ್ತಪಡಿಸಿದಂತೆ ತೋರುತ್ತದೆ. ಬಹು ಮಂದಿ ಕನ್ನಡಿಗರ ಬಾಯಲ್ಲಿ ಬಳಕೆಯಲ್ಲಿರುವ ನಾಣ್ಣುಡಿಗಳನ್ನು ಸ್ವಲ್ಪ ಪರಿಶೀಲಿಸಿದರೆ ಈ ಅಭಿಪ್ರಾಯ ನಿಜವೆನ್ನಿಸುತ್ತದೆ. ನೀಚ ಸ್ವಭಾವದ ಮನುಷ್ಯನನ್ನು "ನಾಯಿಯ ಬುದ್ಧಿಯುಳ್ಳವನು" ಎನ್ನುತ್ತಾರೆ. ಮೊದಮೊದಲು ಗಲಭೆ ಮಾಡಿ ಅನಂತರ ಹೆದರಿ ಸುಮ್ಮನಾಗುವ ಹಂದೆಯನ್ನು "ನಾಯಿಯ ಹಾಗೆ ಬಾಲ ಮುದುರಿಕೊಂಡ" ಎಂದೂ, ಸದಾ ಕಾದಾಡುವವರನ್ನು "ನಾಯಿಗಳ ಹಾಗೆ ಕಚ್ಚಾಡುತ್ತಾರೆ" ಎಂದೂ, ಉನ್ನತ ಪದವಿಯಲ್ಲಿರುವ ಅಲ್ಪನನ್ನು "ಅಂದಣವನೇರಿದ ಸೊಣಗ" ಎಂದೂ, ಎಷ್ಟು ತಿದ್ದಿದರೂ ಸರಿಹೋಗದವನ ಸ್ವಭಾವವನ್ನು "ನಾಯಿ ಬಾಲದ ಹಾಗೆ ಡೊಂಕು" ಎಂದೂ, ದೊಡ್ಡವರ ವರ್ತನೆಯಲ್ಲಿ ದೋಷಾನ್ವೇಷಣೆಗೈಯುವವನನ್ನು ನಿಂದಿಸುವಾಗ "ನಾಯಿ ಬೊಗಳಿದರೆ ದೇವಲೋಕ ಹಾಳೆ?" ಎಂದೂ ಬಗೆಬಗೆಯಾದ ರೀತಿಯಲ್ಲಿ ನಾಯಿಗಳಿಗೆ ಅಪಮಾನಕರವಾದ ಮಾತುಗಳನ್ನು ಪ್ರಯೋಗಿಸುವುದು ನಮ್ಮಲ್ಲಿ ಸರ್ವಸಾಧಾರಣವಾಗಿದೆ. "ನಾಯಿ ಮೊಲೇಲಿ ನಾಗಳ ಹಾಲಿದ್ದರೂ ದೈವಕ್ಕಿಲ್ಲ, ದೇವರಿಗಿಲ್ಲ," "ನಾಯಿಗೆ ನರೆ ಬಂದರೆ ಅಜ್ಜ ಅನ್ನಿಸಿಕೊಂಡೀತೆ?" "ನಾಯಿ ಹೆಸರು ಸಂಪಿಗೆ," "ನಾಯಿ ಹೊಡಿಯೋಕೆ ಬಣ್ಣಾದ ಕೋಲು ಬೇಕೆ?" "ನಾಯಿಗೆ ಚಲ್ಲು ಕಾಗೆಗೆ ಕಲ್ಲು" ಮೊದಲಾದ ಗಾದೆಗಳೂ ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತವೆ.

ಜನಸಾಮಾನ್ಯರ ಆಡುನುಡಿಯಲ್ಲಿ ನಾಯಿಗಳಿಗೆ ಸಂದಿರುವ ಗೌರವ ಇಷ್ಟರ ಮಟ್ಟಿನದಾಗಿರುವಾಗ ಸುಸಂಸ್ಕೃತರೂ ವಿದ್ಯಾವಂತರೂ ಸೃಷ್ಟಿಸಿದ ಸಾಹಿತ್ಯದಲ್ಲಿ ಅವಕ್ಕೆ ಇನ್ನೆಂತಹ ಹಿರಿಯ ಸ್ಥಾನ ದೊರೆತಿರಬಹುದೆಂದು ನೀವು ಸುಲಭವಾಗಿ ಊಹಿಸಿಕೊಳ್ಳಬಹುದು. ನಮ್ಮ ಹಳೆಯ ಕವಿಗಳಲ್ಲಿ ಯಾರೊಬ್ಬರೂ ನಾಯಿಯನ್ನು ಕುರಿತು

ಕಾವ್ಯರಚನೆ ಮಾಡಿಲ್ಲ, ಪ್ರೀತಿಯ ಮಾತುಗಳನ್ನು ಆಡಿಲ್ಲ. ಆನೆ ಕುದುರೆ ಹುಲಿ ಸಿಂಹ ಗಳಿಗೂ ಹಸುಗಳಿಗೂ ಎಮ್ಮೆಗಳಿಗೂ ಎತ್ತುಗಳಿಗೂ ಕೋಣಗಳಿಗೂ ದತ್ತವಾಗಿರುವ ಆದರಾಭಿಮಾನ ಹಿರಿಮೆಗಳು ನಮ್ಮ ಸಾಹಿತ್ಯದಲ್ಲಿ ನಾಯಿಗಳ ಪಾಲಿಗೆ ಬಂದಿಲ್ಲವೆಂದರೆ ಅತ್ಯುಕ್ತಿಯಾಗದು. ನಮ್ಮ ಪುರಾಣೇತಿಹಾಸಗಳ ನಾಯಕನಾಯಿಕೆಯರೆನಿಬರೋ ವನವಾಸವನ್ನು ಅನುಭವಿಸಿದರಲ್ಲ—ಅವರಲ್ಲಿ ಒಬ್ಬರಾದರೂ ಒಂದು ನಾಯಿಯ ನ್ನಾದರೂ ಸಾಕಿಕೊಂಡಿದ್ದರೆ? ಘೋರಾರಣ್ಯಗಳಲ್ಲಿ ಸಂಚರಿಸುವಾಗ ಕೂಡ ಅವರು ತಮ್ಮ ರಕ್ಷಣೆಗಾಗಿ ನಾಯಿಗಳನ್ನು ಉಪಯೋಗಿಸಿದಂತೆ ಕಾಣುವುದಿಲ್ಲ. ನಮ್ಮ ನಾಟಕಗಳಲ್ಲಿ ಕಥೆ ಕಾದಂಬರಿಗಳಲ್ಲಿ ನಾಯಕನಾಯಿಕೆಯರ ಅನುಚರರಾಗಿ ನವಿಲು ಗಳು, ಜಿಂಕೆಗಳು, ಹಂಸಗಳು ಹೆಮ್ಮೆಯಿಂದ ಮೆರೆಯುತ್ತವೆಯೇ ಹೊರತು ನಾಯಿ ಗಳಿಗೆ ಅಲ್ಲಿ ಸ್ಥಾನವೇ ಇಲ್ಲ. ಶಕುಂತಲೆಯ ಒಡನಾಡಿ ಒಂದು ಜಿಂಕೆ; ಅವಳ ಮಗನ ಸಂಗಾತಿ ಸಿಂಹದ ಮರಿ. ದಮಯಂತಿ ತನ್ನ ಕಾದಲನಿಗೆ ಪ್ರೇಮಸಂದೇಶಗಳನ್ನು ಕಳುಹಿಸಲು ನೇಮಿಸಿಕೊಂಡಿದ್ದ ರಾಯಭಾರಿ ಹಂಸ. ಎಂತಹ ಉತ್ಕಟವಾದ ಸಂತೋಷ ಸಂಭ್ರಮ ಸಂಕಟಗಳೇ ಉಂಟಾಗಲಿ ಈ ನಮ್ಮ ಪುರಾಣ ಕಥೆಗಳ ಮಹಿಳಾ ಮಣಿಗಳಲ್ಲಿ ಒಬ್ಬರಾದರೂ (ನನಗೆ ತಿಳಿದ ಮಟ್ಟಿಗೆ) ನಾಯಿಯೊಂದರೊಡನೆ ಆಪ್ತತೆ ಯನ್ನು ಬೆಳೆಸಿ ಅದಕ್ಕೆ ತನ್ನ ಹೃದಯಾಂತರಾಳದ ನಿಗೂಢ ರಹಸ್ಯಗಳನ್ನು ನಿವೇದಿಸಿ ಕೊಂಡ ನಿದರ್ಶನ ಒಂದೂ ಇಲ್ಲ. ಭೀಕರವಾದ ಹೇರಡವಿಗಳಲ್ಲಿ ದುರ್ಬಲವಾದ ಎಲೆವನೆಗಳನ್ನು ಕಟ್ಟಿಕೊಂಡು ಕಾಲಹಾಕುತ್ತಿದ್ದ ನಮ್ಮ ಋಷಿವರೇಣ್ಯರಾರೂ ತಮ್ಮ ಕಾವಲಿಗೆ ನಾಯಿಗಳನ್ನು ಸಾಕಿಕೊಂಡಿದ್ದಂತೆ ನಮಗೆ ತಿಳಿದುಬಂದಿಲ್ಲ. ಇವರಲ್ಲಿ ಎಷ್ಟೋ ಮಂದಿ ವಾನಪ್ರಸ್ಥರಾದರೂ ಸಂಸಾರಿಗಳು. ಕೆಲವರಂತೂ ರೂಪವತಿಯರೂ ಯುವತಿಯರೂ ಆದ ಹೆಂಡಂದಿರನ್ನೂ ಹೆಣ್ಣು ಮಕ್ಕಳನ್ನೂ ಪಡೆದಿದ್ದವರು. ಇವ ರಾದರೂ ತಮ್ಮ ಆಶ್ರಮಗಳ ರಕ್ಷಣೆಗೆ ನಾಯಿಗಳನ್ನು ಇಟ್ಟುಕೊಂಡಿರದಿದ್ದುದು ಆಶ್ಚರ್ಯದ ಸಂಗತಿಯೇ ಸರಿ. ಕಣ್ವರ ಆಶ್ರಮದ ಹೆಬ್ಬಾಗಿಲಿನಲ್ಲಿ ಒಂದು ಜೊತೆ ಒಳ್ಳೆಯ ನಾಯಿಗಳಿದ್ದಿದ್ದರೆ ದುಷ್ಯಂತ ಅದೆಂತು ತಾನೆ ಅಲ್ಲಿಗೆ ಬಂದು ಶಕುಂತಲೆಯೊಡನೆ ಪ್ರಣಯಚೇಷ್ಟೆಗಳಲ್ಲಿ ತೊಡಗುವುದು ಸಾಧ್ಯವಿರುತ್ತಿತ್ತು? ಒಂದು ವೇಳೆ ಧನುರ್ವಿದ್ಯಾ ಪ್ರವೀಣನೂ ಶೂರನೂ ಯೋಧನೂ ಆದ ದುಷ್ಯಂತ ಆಶ್ರಮಕ್ಕೆ ಬಲಪ್ರಯೋಗದಿಂದ ಅತಿಕ್ರಮಪ್ರವೇಶಗೈದಿದ್ದರೂ ಅನಂತರ ದೂರ್ವಾಸ ತಡೆಯೇ ಇಲ್ಲದೆ ನುಗ್ಗಿ ಏನೂ ಅರಿಯದ ಶಕುಂತಲೆಗೆ ಶಾಪ ಕೊಡುವುದಾದರೂ ತಪ್ಪುತ್ತಿತ್ತೋ? ಕಣ್ವಾಶ್ರಮದಲ್ಲಿ ನಾಯಿಯೊಂದಿದ್ದಿದ್ದರೆ ಶಾಕುಂತಲಾ ನಾಟಕದ ಕಥೆಯೇ ಬೇರೆಯಾಗುತ್ತಿತ್ತು. ಆಗ ಮಹಾಕವಿ ಕಾಳಿದಾಸ ತನ್ನ ಪ್ರತಿಭಾಸಂಪತ್ತನ್ನೆಲ್ಲಾ ವೆಚ್ಚಮಾಡಿ ಬೇರೊಂದು

ತೆರನಾಗಿ ಕಥೆಯನ್ನು ಹೆಣೆಯಬೇಕಾಗುತ್ತಿತ್ತು. ಇದರಿಂದ ಸಂಸ್ಕೃತ ಸಾಹಿತ್ಯದ ಉನ್ನತ ಶಿಖರವೊಂದರ ರೂಪರೇಖೆಗಳೇ ಬದಲಾಯಿಸಿಬಿಡುತ್ತಿದ್ದವು. ಹೀಗೆಯೇ "ಮೃಚ್ಛಕಟಿಕ"ದ ವಸಂತಸೇನೆ ಮನೆ ಬಿಟ್ಟು ಹೊರಟಾಗಲೆಲ್ಲಾ ಜೊತೆಯಲ್ಲಿ ಒಂದು ನಾಯಿಯನ್ನು ಕರೆದೊಯ್ದಿದ್ದರೆ ಶಕಾರ ಅವಳಿಗೆ ಕಿಂಚಿನ್ಮಾತ್ರವೂ ಕೋಟಳೆ ಕೊಡುವ ಹಾಗಿರಲಿಲ್ಲ. ನಾಯಿಗಳ ಪ್ರಭಾವ ಅಥವಾ ಅಭಾವ ಸಾಹಿತ್ಯಕ್ಷೇತ್ರದಲ್ಲಿ ಎಷ್ಟು ಪರಿಣಾಮಕಾರಕವಾಗಬಲ್ಲದು! ಒಂದು ವೇಳೆ ಗೌತಮ ಋಷಿಗಳ ಆಶ್ರಮದಲ್ಲಿ ನಾಯಿಯೊಂದಿದ್ದಿದ್ದರೆ ಇಂದ್ರಾದಿಗಳು ಅಲ್ಲಿಗೆ ಕದ್ದುಬಂದು ಅಹಲ್ಯೆಯ ಶೀಲಭಂಗ ಮಾಡಲೆಳಸುವುದು ಹೇಗೆತಾನೆ ಸಾಧ್ಯವಾಗುತ್ತಿತ್ತು? ಅಂತಹ ಚೆಲುವೆಯಾದ ತರುಣಪತ್ನಿ ಮನೆಯಲ್ಲಿರುವಾಗ ಅವಳ ರಕ್ಷಣೆಗೆ ನಾಯಿಯೊಂದರ ಅಗತ್ಯವಿದ್ದಿತೆಂಬ ಸಾಧಾರಣ ಸತ್ಯ ದಾರ್ಶನಿಕರಾದ ಗೌತಮ ಮಹಾಮುನಿಗಳಿಗೆ ತೋರದಿದ್ದುದು ಸೋಜಿಗವಲ್ಲವೆ? ಶ್ರೀ ಸೀತಾರಾಮಲಕ್ಷ್ಮಣರು ಪಂಚವಟಿಯಲ್ಲಿ ಬೀಡುಬಿಟ್ಟಿದ್ದಾಗ ಅವರ ಜೊತೆಯಲ್ಲಿ ಒಂದು ನಾಯಿಯಿದ್ದಿದ್ದ ಪಕ್ಷಕ್ಕೆ ಎಷ್ಟು ಬಗೆಯಲ್ಲಿ ಅನುಕೂಲ ವಾಗುತ್ತಿತ್ತು! ಮಾಯಾಮೃಗವನ್ನು ಹಿಡಿದು ತರಲು ರಾಮಲಕ್ಷ್ಮಣರು ಹೋಗ ಬೇಕಾದ ಆವಶ್ಯಕತೆಯೇ ಇರುತ್ತಿರಲಿಲ್ಲ; ಛದ್ಮವೇಷಧಾರಿಯಾದ ರಾವಣ ಏಕಾಂಗಿನಿಯಾಗಿದ್ದ ಸೀತೆಯನ್ನು ಎತ್ತಿಕೊಂಡು ಹೋಗುವ ಪ್ರಸಂಗವೇ ಏಳುತ್ತಿರ ಲಿಲ್ಲ; ಹೀಗೆಂದಮೇಲೆ, ರಾಮರಾವಣರ ಯುದ್ಧ ಮೊದಲಾದ ರಾಮಾಯಣದ ಕಥೆಯೇ ನಡೆಯುತ್ತಿರಲಿಲ್ಲ. ಪಂಚವಟಿಯಲ್ಲಿ ಒಂದೆರಡು ನಾಯಿಗಳಿದ್ದಿದ್ದರೆ ರಾಮಾಯಣದಲ್ಲಿ ಜಟಾಯುವಿನ ಪಾತ್ರ ಅನಾವಶ್ಯಕವಾಗುತ್ತಿತ್ತು. ಅವು ಸೀತಾ ಪಹರಣವನ್ನು ತಪ್ಪಿಸುತ್ತಿದ್ದವು; ಇಲ್ಲದಿದ್ದರೆ, ರಾವಣ ಸೀತೆಯನ್ನು ಕೊಂಡೊಯ್ದ ದಿಕ್ಕಿನಲ್ಲೇ ಏಕಪ್ರಕಾರವಾಗಿ ಬೊಗಳುತ್ತಾ ಓಡಿ ಅರಣ್ಯಾದ್ಯಂತ್ಯವೂ ಗುಲ್ಲೆಬ್ಬಿಸಿ ಸಮುದ್ರದಲ್ಲಿ ಈಜಿ ಲಂಕೆಯನ್ನು ಪ್ರವೇಶಿಸಿ ಈಗ ಹನುಮಂತನಿಗೆ ಸಲ್ಲುತ್ತಿರುವ ಗೌರವ ಪ್ರತಿಷ್ಠೆಗಳನ್ನು ತಾವೇ ಪಡೆಯುತ್ತಿದ್ದವು. ಒಂದು ದೇಶದ ಮಹಾ ಕಾವ್ಯಗಳ ಗತಿ-ಗುರಿಗಳನ್ನೇ ಬದಲಾಯಿಸಬಲ್ಲ ಸಾಮರ್ಥ್ಯ ನಾಯಿಗಳಿಗುಂಟು! ದ್ರೌಪದಿ-ಕೀಚಕರ ಸಂದರ್ಶನದ ಸಮಯದಲ್ಲಿ ಅವಳೊಡನೆ ಒಂದು ನಾಯಿಯಿದ್ದಿದ್ದರೆ ಅವರಿಬ್ಬರಿಗೂ ಸಂಬಂಧಿಸಿದ ಕಥೆ ಬೇರೆಯಾಗಬಹುದಾಗಿತ್ತು. ನಳ ದಮಯಂತಿಯನ್ನು ಬಿಟ್ಟು ಕಳ್ಳನಂತೆ ಎದ್ದುಹೋದಾಗ ಅವಳ ಬಳಿ ನಾಯಿಯಿತ್ತೆನ್ನಿ—ಎಷ್ಟು ಸುಲಭವಾಗಿ ಅವಳು ಅದನ್ನು ಕಳುಹಿಸಿ ಅವನು ಹೋದ ಜಾಡನ್ನು (ವಾಸನೆಯನ್ನು ಮೂಸಿ ನೋಡುವ ಮೂಲಕ) ಕಂಡುಹಿಡಿಯಬಹುದಾಗಿತ್ತು! ಆದರೆ ನಮ್ಮ ಪುರಾಣಕರ್ತೃ ಗಳಿಗೆ ನಾಯಿಗಳ ಉಪಯೋಗ ಅರ್ಥವಾಗಲಿಲ್ಲವೋ ಅಥವಾ ಅವುಗಳನ್ನು ಕಂಡರೆ

ತಿರಸ್ಕಾರದಿಂದಲೋ, ಅವರು ಅವಕ್ಕೆ ತಮ್ಮ ಕೃತಿಗಳಲ್ಲಿ ಗೌರವದ ಸ್ಥಾನವನ್ನು ದಯಪಾಲಿಸಿಲ್ಲ. "ನಮ್ಮ ದೇವರುಗಳಲ್ಲಿ ವೃಷಭವಾಹನನಿದ್ದಾನೆ, ಮಹಿಷವಾಹನನಿದ್ದಾನೆ, ಮಯೂರವಾಹನನಿದ್ದಾನೆ, ಶುನಕವಾಹನನು ಮಾತ್ರ ಯಾರೂ ಇಲ್ಲ. ನಾನಾ ಅವತಾರಗಳನ್ನು ಧರಿಸಿದ ವಿಶಾಲಮತಿಯೂ ಉದಾರಿಯೂ ಆದ ವಿಷ್ಣುಮೂರ್ತಿ ಕೂಡ ನರಸಿಂಹಾವತಾರವನ್ನೆತ್ತಿದನೇ ಹೊರತು ಗ್ರಾಮಸಿಂಹಾವತಾರವನ್ನೆತ್ತುವುದಕ್ಕೆ ಅದೇಕೋ ಮನಸ್ಸುಮಾಡಲಿಲ್ಲ" ಎಂದಿದ್ದಾರೆ ಒಬ್ಬರು. ನ್ಯಾಯವಾದ ಮಾತು. ಸಕಲ ಜೀವಿಗಳನ್ನೂ ಸಮಾನತೆಯಿಂದ ಕಂಡ ನಮ್ಮ ಋಷಿಶ್ರೇಷ್ಠರ ಮತ್ತು ಪುರಾಣಕರ್ತೃಗಳ ಕೃಪಾದೃಷ್ಟಿ ನಾಯಿಗಳ ಕಡೆಗೆ ಬೀಳದಿದ್ದುದು ಆಶ್ಚರ್ಯಕರವೇ. ನಮ್ಮ ರಾಜಮಹಾರಾಜರುಗಳಿನ್ನೇನು? ಅಶ್ವಸೇನೆ ಗಜಸೇನೆ ಮೊದಲಾದವುಗಳನ್ನು ಅವರು ಕಟ್ಟಲೆಳಸಿದರು; ಶುನಕಸೇನೆಯನ್ನು ಯಾರೂ ಕಟ್ಟಿದಂತೆ ಕಾಣಲಿಲ್ಲ.

ಆದರೆ ಇದೆಲ್ಲಾ ಪುರಾತನರ ಮಾತಾಯಿತು. ಈಗ ಮನುಷ್ಯವರ್ಗದಲ್ಲಿ ಯಾವ ರೀತಿ ದೀನದಳಿತರ ಉದ್ಧಾರವಾಗಿ ಅವರು ಮೇಲಕ್ಕೇರುತ್ತಿದ್ದಾರೋ ಹಾಗೆಯೇ ನಾಯಿಗಳಿಗೂ ಹಿಂದೆಂದೂ ಇಲ್ಲದ ಉನ್ನತ ಸ್ಥಾನಮಾನಗಳು ಲಭಿಸಲಾರಂಭವಾಗಿದೆ. ನಾಯಿಗಳನ್ನು ತಿರಸ್ಕಾರದಿಂದ ಕಾಣಕೂಡದು, ಅವುಗಳ ವಿಷಯದಲ್ಲಿ ಪ್ರೀತ್ಯಾದರಗಳನ್ನು ಪ್ರದರ್ಶಿಸಬೇಕು ಎನ್ನುವುದು ಹಾಗಿರಲಿ, ನಾಯಿಗಳನ್ನು ಮನೆಗಳಲ್ಲಿ ಸಾಕಿಕೊಳ್ಳಬೇಕು, ಅವುಗಳ ಸಖ್ಯವನ್ನು ಬೆಳಸಿ ಸಹವಾಸಸುಖವನ್ನು ಅನುಭವಿಸಬೇಕು, ಇದು ನಾಗರಿಕತೆಯ ಹಿರಿಯ ಲಕ್ಷಣಗಳಲ್ಲೊಂದು ಎಂಬ ಭಾವನೆ ಈಗ ಮೂಡಿದೆ. "ಫ್ಯಾಷನಬಲ್" ಪ್ರಪಂಚದ ಪ್ರಜೆಗಳಾಗಲು ಅರ್ಹತೆಯನ್ನು ಪಡೆಯಲಪೇಕ್ಷಿಸುವವರು ಕಾರು ರೇಡಿಯೋ ಮೊದಲಾದ ಪದಾರ್ಥಗಳಿಗೂ ಆಳುಕಾಳುಗಳಿಗೂ ಎಷ್ಟು ಪ್ರಾಮುಖ್ಯತೆಯನ್ನು ನೀಡುವರೋ ಅಷ್ಟೇ ಪ್ರಾಮುಖ್ಯತೆಯನ್ನು ನಾಯಿಗಳಿಗೂ ಕೊಡತೊಡಗಿದ್ದಾರೆ. ಹಾಗೆಯೇ ನೋಡಿದರೆ ಆಳುಗಳಿಗಿಂತಲೂ ಹೆಚ್ಚಿನ ಗೌರವ ನಾಯಿಗಳದು ಎಂದು ಸ್ಪಷ್ಟವಾಗುತ್ತದೆ. ತಮ್ಮ ಯಜಮಾನರ ಮನೆಗಳಲ್ಲಿ ಪೋಷಿತವಾಗುವ ನಾಯಿಗಳಿಗಿರುವಷ್ಟು ಮರ್ಯಾದೆ, ಪಾಪ ಆ ಬಡಪಾಯಿ ಸೇವಕರಿಗೆಲ್ಲಿ ಬಂದೀತು? ಪ್ರತ್ಯೇಕವಾದ ವಾಸಗೃಹ, ಹಾಸಿಗೆ ಹೊದ್ದಿಕೆಗಳು, ವಿಶೇಷ ರೀತಿಯ ಊಟೋಪಚಾರದ ವ್ಯವಸ್ಥೆಗಳು, ವಾಹನಸಂಚಾರಗಳು ಮೊದಲಾದ ಸೌಖ್ಯಗಳು ಯಾವ ಮನೆಯ ಆಳುಗಳಿಗೆ ದೊರೆಯುತ್ತವೆ? ಯಜಮಾನರ ಮತ್ತು ಅವರ ಕುಟುಂಬದವರ ಆಪ್ತತೆಯನ್ನು ಗಳಿಸಿ ಅವರ ಸಮೀಪಜೀವಿಗಳಾಗಿರುವ ಅವಕಾಶವನ್ನು ಎಷ್ಟು ಮಂದಿ ಆಳುಗಳು ಪಡೆದಿರುತ್ತಾರೆ? ಮನೆಯಲ್ಲಿ ಎಲ್ಲಿ ಬೇಕಾದರೂ ಓಡಾಡುವ ಸ್ವಾತಂತ್ರ್ಯ ನಾಯಿಗಳಿಗಿರುತ್ತದೆ. ಆಳುಗಳು ಹಾಗೇನಾದರೂ

ಸಿಕ್ಕಿದಾಗ ಸಿಕ್ಕಿದ ಕಡೆ ಅಡ್ಡಾಡಿದರೆ ನಿಂದನೆಗೆ ಮಾತ್ರವೇ ಅಲ್ಲದೆ ದಂಡನೆಗೆ ಕೂಡ ಗುರಿಯಾದಾರು. ನಿಜ—ಇಂದು ನಾಯಿಗಳಿಗಿರುವಷ್ಟು ಹಿರಿಮೆ ಮನುಷ್ಯರಿಗಿಲ್ಲ, "ನರಜನುಮವತ್ಯಧಿಕ"ವೆಂದು ಕೆಚ್ಚೆದೆಯ ಕನ್ನಡ ಕವಿಯೊಬ್ಬನು ದಿಟ್ಟತನದಿಂದ ಮುಕ್ತಕಂಠನಾಗಿ ಹಾಡಿಬಿಟ್ಟಿದ್ದಾನೆ. ಆದರೆ ಈ ಮಾತನ್ನು ಇಷ್ಟೇ ನಿಸ್ಸಂದೇಹ ವಾಗಿ ನಾವೆಲ್ಲರೂ ಹೇಳಲಾಗುವುದಿಲ್ಲ. ಏಕೆಂದರೆ ಕೆಲವರಿಗೆ ಕುಸುಮತಲ್ಪಸದೃಶ ವಾಗಿರುವ ಜೀವನ ಇತರರಿಗೆ ಮುಳ್ಳಿನ ಹಾಸಿಗೆಯಾಗಿರಬಹುದು. ಆದರೆ ನಾಯಿಗಳ ವಿಷಯದಲ್ಲಿ ಮಾತ್ರ ಇಂತಹ ಅನುಮಾನಕ್ಕೆ ಅವಕಾಶವೇ ಇಲ್ಲ. ಪ್ರಾಣಿಗಳಲ್ಲೆಲ್ಲಾ ಅತ್ಯಂತ ಪುಣ್ಯಶಾಲಿಯಾದುದು ನಾಯಿ ಎಂದು ಯಾರ ಎದುರಿಗೆ ಬೇಕಾದರೂ ಎದೆ ತಟ್ಟಿ ಸಾರಲು ಸಾಧ್ಯ. ಎತ್ತು, ಕತ್ತೆ, ಕೋಣ, ಕುದುರೆ ಮೊದಲಾದ ಇತರ ಪ್ರಾಣಿಗಳ ಬಾಳು ಕೀಳಾದುದು, ಶೋಚನೀಯವಾದುದು, ಬಹುವೇಳೆ ತಿರಸ್ಕಾರ ಯೋಗ್ಯವೂ ಆದುದು. ಅವುಗಳೊಡನೆ ಹೋಲಿಸಿದರೆ ನಾಯಿಗಳ ಯೋಗ ರಾಜ ಯೋಗ; ಅವು ಪಡೆದುಕೊಂಡು ಬಂದಿರುವುದು, ಅನುಭವಿಸುವುದು, ರಾಜಭೋಗ ವನ್ನು. ಇದಕ್ಕೊಂದು ಪ್ರಬಲವಾದ ಸಾಕ್ಷಿ ಬೇಕಾದರೆ ಶ್ರೀಮಂತರ ಮನೆಗಳ ಹೆಬ್ಬಾಗಿಲುಗಳ ಮೇಲೆ ಮೆರೆಯುವ ಪ್ರಕಟಣೆಗಳನ್ನು ನೋಡಿ. "ನಾಯಿಗಳಿವೆ. ಎಚ್ಚರಿಕೆ" ಎಂದು ಕೆಲವರೂ "ಬಿವೇರ್ ಆಫ್ ಡಾಗ್ಸ್" ಎಂದು ಇನ್ನು ಕೆಲವರೂ (ಇವರು ಇಂಗ್ಲಿಷರ ರಕ್ತಸಂಬಂಧಿಗಳಲ್ಲದಿದ್ದರೂ ಬಹುಶಃ ಆಗಲಿಲ್ಲವೆಂದು ವಿಷಾದಿ ಸುವವರು) ದೊಡ್ಡ ಅಕ್ಷರಗಳಲ್ಲಿ ಬರೆದಿರುತ್ತಾರೆ. ಇದರ ಅರ್ಥವೇನು? ಆ ಮನೆ ಗಳಲ್ಲಿ ವಾಸಮಾಡುವ ಜೀವಿಗಳಲ್ಲೆಲ್ಲಾ ನಾಯಿಗಳೇ ಅತ್ಯಂತ ಪ್ರಮುಖವಾದುವು, ಭಯ ಭಕ್ತಿ ಗೌರವಗಳನ್ನು ಪ್ರಚೋದಿಸುವಂಥವು, ಎಂದಲ್ಲವೆ? ಯಜಮಾನರು, ಯಜಮಾನಿಯರು, ಅವರ ಸತ್ಸಂತಾನಬಾಹುಳ್ಯ, ಅಡಿಗೆಯವರು, ಆಳುಗಳು, ಆಶ್ರಯಿಗಳು, ಇತರ ಪರಿವಾರ ದೇವತೆಗಳು ಎಷ್ಟು ಜನ ಇರುವುದಿಲ್ಲ. ಆದರೂ ಅವರೊಬ್ಬರ ಇರುವಿಕೆಯ ಸೂಚನೆಯೂ ಬಾಗಿಲ ಮೇಲೆ ಕಾಣುವುದಿಲ್ಲ. ಹಸು ಕರುಗಳು, ಕುದುರೆಗಳು, ಕುರಿಮೇಕೆಗಳು, ಜಿಂಕೆಗಳು, ಇಲಿಗಳು—ಇಂತಹ ಪ್ರಾಣಿ ಗಳೂ ಅಲ್ಲಿ ಇರಬಹುದು. ಅವುಗಳ ಹೆಸರುಗಳನ್ನು ಹೇಳುವವರೇ ಇಲ್ಲ; ಕಂಡು ಹೆದರುವವರಂತೂ ಮೊದಲೇ ಇಲ್ಲ. ನಾಯಿಗಳಿರುವ ವಿಷಯ ಮಾತ್ರ ಬೀದಿಯಲ್ಲಿ ಓಡಾಡುವವರಿಗೆಲ್ಲಾ ಅರಿವಾಗಲೆಂದು ಕಣ್ಣು ಕೋರೈಸುವಂತೆ ಪ್ರಕಟಿತವಾಗುತ್ತದೆ. ಇದು ಸಾಲದೆ ಅವುಗಳ ಹೆಚ್ಚುಗಾರಿಕೆಯನ್ನು ಎತ್ತಿಹಿಡಿಯುವುದಕ್ಕೆ?

ಇಷ್ಟೊಂದು ಪ್ರಾಮುಖ್ಯತೆಯನ್ನು ಪಡೆದಿವೆಯಲ್ಲಾ, ಹೋಗಲಿ—ಅದಕ್ಕೆ ತಕ್ಕಹಾಗೆ ಈ ನವಯುಗದ ನಾಯಿಗಳು ಪ್ರಯೋಜನಕಾರಿಗಳಾಗಿವೆಯೆ ಎಂದರೆ

ಅಷ್ಟೇನೂ ಕಾಣುವುದಿಲ್ಲ. ಜನ ಬೇರೆ ಯಾವ ಪ್ರಾಣಿಯನ್ನು ಸಾಕಿದರೂ ಒಳ್ಳೆಯದೋ ಕೆಟ್ಟದ್ದೋ ಯಾವುದಾದರೂ ಒಂದು ಉದ್ದೇಶ ಇದ್ದೇ ಇರುತ್ತದೆ. ಎತ್ತು ಕುದುರೆ ಕತ್ತೆಗಳು, ಕುರಿಮೇಕೆಗಳು, ಕೋಳಿಗಳು ಮತ್ತು ಇತರ ಅನೇಕ ಪ್ರಾಣಿಗಳು ಬೇರೆಬೇರೆಯ ಆಶಯಗಳ ಪರಿತೃಪ್ತಿಗಾಗಿ ಪೋಷಿತವಾಗುತ್ತವೆ. ಸಿಂಹ ಹುಲಿ ಆನೆ ಕರಡಿಗಳನ್ನು ಸಾಕುವವರು ಕೂಡ ಸ್ವಾರ್ಥಚಿಂತನೆಯಿಂದ ವಿಮುಕ್ತರಲ್ಲ. ಅವನ್ನು ಬೋನಿನಲ್ಲಿಟ್ಟು ಅಥವಾ ಅವಕ್ಕೆ ಆಟಪಾಟಗಳನ್ನು ಕಲಿಸಿ ಇತರರಿಗೆ ತೋರಿಸಿ ಹಣ ಸಂಪಾದಿಸುತ್ತಾರೆ. ಹಿಂದಿನ ಕಾಲದಲ್ಲಿ ಕೆಲವರು ರಾಜರು ಹುಲಿ ಚಿರತೆಗಳನ್ನು ತಮ್ಮ ಶಯ್ಯಾಗೃಹಗಳ ಬಾಗಿಲುಗಳ ಆಚೆ ಕಾವಲಿಗಾಗಿ ಕಟ್ಟಿರುತ್ತಿದ್ದರಂತೆ. ಅವು ಇನ್ನೇನೂ ಮಾಡದಿದ್ದರೂ ಅವುಗಳ ಭಯಂಕರ ದರ್ಶನವೇ ಸಾಕಾಗುತ್ತಿತ್ತು, ಕಳ್ಳರನ್ನೂ ಶತ್ರುಗಳನ್ನೂ ದೂರವಿರಿಸುವುದಕ್ಕೆ. ಹಸುಗಳ ವಿಷಯವನ್ನಂತೂ ಹೇಳಲೇಬೇಕಾದುದಿಲ್ಲ. ಅವುಗಳಿಂದ ನರನಿಗಾಗುವ ಉಪಯೋಗ ವೈವಿಧ್ಯವನ್ನು ನಾವೆಲ್ಲರೂ ಬಲ್ಲೆವು. "ಇಟ್ಟರೇ ಸಗಣಿಯಾದೆ . . . . ನೀನಾರಿಗಾದೆಯೋ ಎಲೆ ಮಾನವಾ ?"ಎಂಬ ಪದ್ಯವನ್ನು ಯಾರುತಾನೆ ಓದಿಲ್ಲ ? ಯಾರು ತಾನೆ ಅದರಲ್ಲಿ ಅಡಕವಾಗಿರುವ ಸತ್ಯಾಂಶವನ್ನು ಒಪ್ಪಿಕೊಂಡಿಲ್ಲ? ನೀವು ಎಷ್ಟೇ ಯೋಚಿಸಿ ನೋಡಿ—ಮನುಷ್ಯ ಇತರ ಯಾವ ಪ್ರಾಣಿಯನ್ನು "ಸಾಕಿ ಸಲಹಿ "ದರೂ ಅದು ಒಂದಲ್ಲ ಒಂದು ರೀತಿ ಸ್ವಪ್ರಯೋಜನಾರ್ಥವಾಗಿಯೇ ಆಗಿರುತ್ತದೆ. ಕಡೆಯ ಪಕ್ಷಕ್ಕೆ ಅದರ ದೇಹದಿಂದ ದೊರೆಯುವ ಮೂಳೆ ಚರ್ಮಗಳ ಮೇಲಾದರೂ ಮಲ ಮೂತ್ರಗಳ ಮೇಲಾದರೂ ಅವನ ಕಣ್ಣಿರುತ್ತದೆ. ಈಗಿನ ಕಾಲದಲ್ಲಿ ಪ್ರತಿಫಲಾಪೇಕ್ಷೆಯಿಲ್ಲದೆ ಉದ್ದೇಶರಹಿತವಾಗಿ ಕೇವಲ ಅಲಂಕಾರಕ್ಕಾಗಿ ಪೋಷಿತವಾಗುವ ಪ್ರಾಣಿಯೆಂದರೆ ನಾಯಿಯೊಂದೇ ! ದೇಹಬಲ, ಬುದ್ಧಿಬಲ, ನೈತಿಕಶಕ್ತಿ, ಪರೋಪಕಾರ ಮಾಡುವ ಸಾಮರ್ಥ್ಯ, ಧೈರ್ಯಸ್ಥೈರ್ಯಗಳು, ಗಾಂಭೀರ್ಯ ಮೊದಲಾದ ಶ್ರೇಷ್ಠತಮವಾದ ಯಾವ ದೃಷ್ಟಿಯಿಂದ ನೋಡಿದರೂ ನಾಯಿಗಳಲ್ಲಿ ಹೆಚ್ಚಳ ಏನೂ ಕಾಣುವುದಿಲ್ಲ. ಅವು ಇತರ ಪ್ರಾಣಿಗಳಂತೆಯೇ ಸಾಧಾರಣವಾದುವು ; ಕೆಲವು ವಿಷಯಗಳಲ್ಲಿ ಅವು ಇತರ ಪ್ರಾಣಿಗಳಿಗಿಂತಲೂ ನಿಸ್ಸಂದೇಹವಾಗಿಯೂ ಕೀಳಾದುವು. ಆದರೂ ಇತರ ಎಲ್ಲಾ ಪ್ರಾಣಿಗಳಿಗಿಂತಲೂ ಹೆಚ್ಚಾಗಿ ಮಾನವನ ಸ್ನೇಹವನ್ನು ಗಳಿಸಿ ಅವನ ಆಪ್ತರೆನ್ನಿಸಿಕೊಂಡು ಪ್ರಶಂಸೆಗೆ ಪಾತ್ರವಾಗಿವೆ ನಾಯಿಗಳು—ಅದರಲ್ಲೂ ಆಧುನಿಕ ಕಾಲದ ನಾಗರಿಕರು ಸಾಕುವ ನಾಯಿಗಳು. ಇದು ಅವುಗಳ ಅದೃಷ್ಟ ವಿಶೇಷವಲ್ಲದೆ ಇನ್ನೇನು ?

"ಇದೇನು ಹೀಗೆ ಹೇಳುತ್ತೀರಿ ? ನಾಯಿಗಳು ಮನೆಮಠಗಳಿಗೆ ದನಕರುಗಳಿಗೆ

ಆಸ್ತಿಪಾಸ್ತಿಗಳಿಗೆ ಕಾವಲಿರುವುದಿಲ್ಲವೆ ?" ಎಂದು ಪ್ರಶ್ನಿಸುವಿರಲ್ಲವೆ ನೀವು ? ನಾನು ಇಲ್ಲಿ ಮಾತಾಡುತ್ತಿರುವುದು ಹಳ್ಳಿಗಾಡಿನ ಕುರುಬರೂ ದನಗಾಹಿಗಳೂ ಬೇಟೆಗಾರರೂ ಉಪಯೋಗಿಸುವ ನಾಯಿಗಳ ವಿಷಯವಾಗಲ್ಲ ; ನಾಗರಿಕತೆಯ ನೆಲೆಬೀಡುಗಳಲ್ಲಿ ಸುಸಂಸ್ಕೃತರಾದ ಶ್ರೀಮಂತ ಮಹನೀಯರು ಮತ್ತು ಮಹಿಳೆಯರ ಭವ್ಯಹರ್ಮ್ಯ ಗಳಲ್ಲಿ ಆಶ್ರಯ ಪಡೆದು ಬದುಕುವ ಸೂಕ್ಷ್ಮಶರೀರಿಗಳಾದ ಶುನಕರತ್ನಗಳನ್ನು ಕುರಿತು. ಈ ಪಟ್ಟಣದ ನಾಯಿಗಳ ಒಡೆಯರು ನಿಜವಾಗಿಯೂ ಅವುಗಳಿಂದ ರಕ್ಷಣೆಯನ್ನು ನಿರೀಕ್ಷಿಸುತ್ತಾರೆಂದು ಆತ್ಮಸಾಕ್ಷಿಯಾಗಿ ಹೇಳಲು ಎಷ್ಟು ವೇಳೆ ಸಾಧ್ಯ ? "ದೇರ್ ಈಸ್ ಎ ಡಾಗ್, ಸರ್, ಅಂಡ್ ಇಟ್ ಓನ್ಲಿ ಬಾರ್ಕ್ಸ್" ಎಂದು ಡಿಕನ್ಸಿನ ಯಾವುದೋ ಕಾದಂಬರಿಯಲ್ಲಿ ಒಂದು ಮಾತು ಬರುತ್ತದೆ. ಎಷ್ಟೋ ನಾಯಿಗಳ ಯೋಗ್ಯತೆ ಇಷ್ಟಲ್ಲದೆ ಇನ್ನೇನು ? (ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆದ ಘೋರ ಹತ್ಯಾಕಾಂಡವೊಂದರ ಸಂದರ್ಭದಲ್ಲಿ ಮನೆಯಲ್ಲಿ ನಾಯಿಯಿದ್ದರೂ ಉಪಯೋಗವಾಗದಿದ್ದುದೂ, ಕೊಲೆಗಾರರು ಆ ನಾಯಿಗೆ ಮಾದಕವಸ್ತುವನ್ನು ತಿನ್ನಿಸಿ ವಿಸ್ಮೃತಿಯುಂಟಾಗುವಂತೆ ಮಾಡಿದ್ದೂ ನಮಗೆಲ್ಲಾ ಗೊತ್ತೇ ಇದೆ. ಆ ಕೊಲೆಗಾರರು ಯಾರೆಂದು ಕಂಡುಹಿಡಿಯಲು ಮದರಾಸಿನಿಂದ ವಿಶೇಷ ಮರ್ಯಾದೆ ಗಳೊಡನೆ ಕರೆತರಲ್ಪಟ್ಟಿದ್ದ ನಾಯಿಗಳು ಎಷ್ಟು ದಕ್ಷತೆಯಿಂದ ಕೆಲಸಮಾಡಿದವೆಂಬು ದನ್ನೂ ನಾವು ಬಲ್ಲೆವು.) ಇಂದು ನಾಯಿಗಳನ್ನಿಟ್ಟುಕೊಳ್ಳುವುದು ಪ್ರಯೋಜನಕ್ಕಾಗಿ ಅಲ್ಲವೇ ಅಲ್ಲ, ಅಲಂಕಾರಕ್ಕಾಗಿ. ಅದೊಂದು ದೊಡ್ಡಸ್ತಿಕೆಯ ಕುರುಹು; ಬಂಗಲೆಗಳಲ್ಲಿ ವಾಸ, ಕಾರುಗಳಲ್ಲಿ ಪ್ರವಾಸ, ವಸ್ತ್ರಭೂಷಣಗಳ ಹವ್ಯಾಸ ಮೊದಲಾದವು ಹೇಗೆ "ಹೈ ಕ್ಲಾಸ್" ಜೀವನದ ಅತ್ಯಗತ್ಯವಾದ ಪರಿಕರಗಳೆಂದು ಪರಿಗಣಿತವಾಗಿವೆಯೋ ನಾಯಿಗಳನ್ನು ಸಾಕುವುದೂ ಅದೇ ತೆರನಾದ ಹಿರಿಮೆಯ ಒಂದು ಚಿಹ್ನೆಯಾಗಿದೆ. ಅಷ್ಟೇಕೆ, ನಾಯಿಗಳಲ್ಲೇ "ಹೈ ಕ್ಲಾಸ್" "ಲೋ ಕ್ಲಾಸ್" ಎಂಬ ತಾರತಮ್ಯಗಳು ಹುಟ್ಟಿಕೊಂಡು ಮಾನವಸಮಾಜದ ಸಲ್ಲಕ್ಷಣಗಳೆಲ್ಲಾ ಶುನಕಪ್ರಪಂಚದಲ್ಲೂ ವಿಜೃಂಭಿಸತೊಡಗಿವೆ. "ಹೈ ಕ್ಲಾಸ್" ನಾಯಿಗಳ "ಬ್ರೀಡ್" ಮೇಲ್ತರಗತಿಯದು ; ಅವುಗಳ ರಕ್ತ ಶುದ್ಧವಾದುದು, ಅಮೂಲ್ಯವಾದುದು ; ಆದುದರಿಂದ ಅವನ್ನು ಶ್ರೀಮಂತರ ಗೃಹಗಳಲ್ಲಿ ಮಾತ್ರ ಕಾಣಬಹುದು. ಇಂಥ ಒಂದು ನಾಯಿಯನ್ನು ಸಾಕು ವುದಕ್ಕೆ ತಿಂಗಳಿಗೆ ನೂರಾರು ರೂಪಾಯಿಗಳು ವೆಚ್ಚವಾಗುವುವಂತೆ. ಬಡವರು ಕನಸಿ ನಲ್ಲಿ ಕೂಡ ಇವುಗಳ ತಂಟೆಗೆ ಹೋಗಲಾರರು. ಐಶ್ವರ್ಯ ತುಂಬಿತುಳುಕುವ ಮನೆಗಳಲ್ಲಿ ಮಾತ್ರ ಅವು ಇರಲಾದೀತು. ಜೂಜಿನ ಕುದುರೆಗಳ ವಂಶಾವಳಿಯನ್ನು ಪರೀಕ್ಷಿಸಿ ಅವಕ್ಕೆ ಬೆಲೆ ಕಟ್ಟುವಂತೆ ಈ "ಜಾತಿಯ" ನಾಯಿಗಳಿಗೂ ಬೆಲೆ ಕಟ್ಟ

ತ್ತಾರೆ. ಒಂದು ನಾಯಿಯ ತಾತನೋ ಮುತ್ತಾತನೋ ಇಂಗ್ಲೆಂಡಿನಿಂದಲೋ ಅಮೆರಿಕಾದಿಂದಲೋ ಬಂದವನು, ಇಂಥ ರಾಜನ ಅರಮನೆಯಲ್ಲಿದ್ದವನು, ಅಲ್ಲಿನ ಅರಸರೊಡನೆ, ಆಸ್ಥಾನಿಕರೊಡನೆ, ಅಂತಃಪುರದ ಅರಗಿಣಿಗಳೊಡನೆ ಓಡಾಡಿ ಅವರ ಪ್ರೀತ್ಯಾದರಗಳನ್ನು ಗಳಿಸಿದ್ದವನು ಎಂದು ತಿಳಿದುಬಂದರೆ ಸಾಕು, ಅದರ ಬೆಲೆ ಗಗನಕ್ಕೇರುತ್ತದೆ; ನಾಮುಂದು ತಾಮುಂದು ಎಂದು ಹಣಗಾರರು ಅದನ್ನು ಕೊಳ್ಳಲು ಮುನ್ನುಗ್ಗುತ್ತಾರೆ. "ಆರಿಸ್ಟಾಕ್ರಟಿಕ್ ಪಿಡಿಗ್ರಿ"ಯುಳ್ಳ ಈ ನಾಯಿಗಳಿಗೆ ಸಲ್ಲುವ ಗೌರವಾದರಗಳು ಎಷ್ಟೋ ಮಂದಿ ಮನುಷ್ಯರಿಗೆ ಸಲ್ಲುವುದಿಲ್ಲ. ಈ ನಾಯಿಗಳ ಮಾಲೀಕರು ಅವುಗಳ ಯೋಗಕ್ಷೇಮವನ್ನು ವಿಚಾರಿಸಿಕೊಳ್ಳುವುದರಲ್ಲಿ ಅದೆಷ್ಟು ಆಸಕ್ತಿಯನ್ನು ತೋರಿಸುತ್ತಾರೆ! ಅವಕ್ಕೆ ಏನಾದರೂ ಹೆಚ್ಚುಕಡಿಮೆಯಾದರೆ ಅವರು ಅದೆಷ್ಟು ಪರಿತಾಪಪಡುತ್ತಾರೆ! ಅವಕ್ಕಾಗಿಯೇ ವಿಶ್ರಾಂತಿಗೃಹಗಳನ್ನು ನಿರ್ಮಿಸಿ ಪ್ರತ್ಯೇಕವಾದ ಹಾಸಿಗೆ ಹೊದ್ದಿಕೆ ತಟ್ಟೆ ಬಟ್ಟಲುಗಳನ್ನು ಅಳವಡಿಸುವದರಿಂದ ಮೊದಲುಗೊಂಡು "ಮೇಟಿಂಗ್ ಸೀಸನ್" ಬಂದಾಗ ಅವಕ್ಕೆ ಅವುಗಳಷ್ಟೇ ಸತ್ಕುಲಪ್ರಸೂತರಾದ ಹೆಣ್ಣುಗಳ ಸಹವಾಸ ಸಂಪರ್ಕಗಳನ್ನು ಒದಗಿಸಿಕೊಡುವವರೆಗೂ ಹೋಗುತ್ತದೆ ಯಜಮಾನರ ಈ ತೀವ್ರವಾದ ಶುನಕಪ್ರೇಮ. "ಇವನಿಗೆ ಬೇಗ ಮದುವೆ ಮಾಡಿಸಬೇಕು; ಇಲ್ಲದಿದ್ದರೆ ಬೀದಿಯ ನಾಯಿಗಳ ಜೊತೆ ಸೇರಿ ಕೆಟ್ಟುಹೋಗುತ್ತಾನೆ" ಎಂದು ನ್ಯಾಯಾಂಗಶಾಖೆಯಲ್ಲಿ ಉನ್ನತಾಧಿಕಾರದಲ್ಲಿದ್ದ ನನ್ನ ಪರಿಚಿತರೊಬ್ಬರು ನಾನೊಮ್ಮೆ ಅವರ ಮನೆಗೆ ಹೋಗಿ ಅವರ ನಾಯಿಯನ್ನು ನೋಡಿ ಮೆಚ್ಚಿಗೆಯನ್ನು ಸೂಚಿಸಿದಾಗ ಹೇಳಿದರು. ಏನು ವಾತ್ಸಲ್ಯ! ಏನು ಅಭಿಮಾನ! ಎಷ್ಟೋ ಜನ ತಂದೆಗಳು ತಮ್ಮ ಮಕ್ಕಳ ವಿವಾಹದ ವಿಷಯದಲ್ಲಿ ಕೂಡ ಇಷ್ಟು ಮುಂದಾಲೋಚನೆಯನ್ನು ಹೊಂದಿರುವುದಿಲ್ಲವಲ್ಲ! ಅಷ್ಟೇಕೆ, ಎಷ್ಟೋ ಮಂದಿ ತಮ್ಮ ಮಕ್ಕಳ ಪೋಷಣೆ ಮತ್ತು ಬೆಳವಣಿಗೆಗಿಂತಲೂ ಹೆಚ್ಚಾಗಿ ತಮ್ಮ ನಾಯಿಗಳ ಪುರೋಭಿವೃದ್ಧಿಗೆ ಗಮನವೀಯುವರೆಂದು ಕಾಣುತ್ತದೆ. ಕೆಲವರು ಹೆಂಗಸರು (ಅದರಲ್ಲೂ ಪಾಶ್ಚಾತ್ಯರು, ಅದರಲ್ಲೂ ಅಮೆರಿಕಾ ದೇಶದವರು ಸ್ವತಃ ಮಕ್ಕಳನ್ನು ಹೊತ್ತು ಹೆತ್ತು ಕಷ್ಟಪಟ್ಟು ತಮ್ಮ ಜೀವಕ್ಕೆ ಅಪಾಯವನ್ನೂ ದೇಹಸೌಂದರ್ಯಕ್ಕೆ ಚ್ಯುತಿಯನ್ನೂ ಉಂಟುಮಾಡಿಕೊಳ್ಳುವುದಕ್ಕಿಂತ ನಾಯಿಮರಿಗಳನ್ನು ಸಾಕುವುದು ಹೆಚ್ಚು ಬುದ್ಧಿವಂತಿಕೆಯೆಂದೂ ಹೆಚ್ಚು ಸುಲಭವಾದ ಕೆಲಸವೆಂದೂ ಭಾವಿಸಿರುತ್ತಾರಂತೆ. ಮುದ್ದಾಡುವುದಕ್ಕೆ ಮಕ್ಕಳನ್ನು ಹೋಲುವ ಒಂದು ಪ್ರಾಣಿ ದೊರೆತಂತಾಯಿತು, ಆದರೆ ಮಕ್ಕಳನ್ನು ಪಡೆಯುವ ಹೊಣೆಗಾರಿಕೆ ಮಾತ್ರ ಇರುವುದಿಲ್ಲ. ಸ್ವಂತ ಮಕ್ಕಳು ಕೆಟ್ಟವರಾದರೆ ಅವರನ್ನು ಬಿಟ್ಟುಬಿಡುವ

ಹಾಗಿಲ್ಲ. ಕೊಂಡುತಂದ ನಾಯಿಗಳು ಒಂದು ವೇಳೆ ಅಡ್ಡದಾರಿ ಹಿಡಿದರೆ ಅವನ್ನು ಮಾರುಕಟ್ಟೆಗೆ ಸಾಗಿಸಿ ಬೇರೆ ನಾಯಿಗಳನ್ನು ತರಬಹುದು. ತಂದೆತಾಯಿಗಳನೇಕರಿಗೆ ತಮ್ಮ ಮಕ್ಕಳ ಸಹವಾಸಕ್ಕಿಂತಲೂ ತಾವು ಸಾಕಿಕೊಂಡಿರುವ ನಾಯಿಗಳ ಸಹವಾಸ ಹೆಚ್ಚು ಸಂತೋಷಕರವಾದುದೆಂದು ತೋರುತ್ತದೆ. ಮನೆಯ ಮಕ್ಕಳನ್ನು ಇತರರೆದುರಿಗೆ ಕರೆತಂದು ತೋರಿಸಲು ಹಿಂದೆಗೆಯುವವರೆನಿಬರೋ ನಾಯಿಗಳನ್ನು ಹೋದಕಡೆಯಲ್ಲೆಲ್ಲಾ ಜೊತೆಯಲ್ಲಿ ಕರೆದೊಯ್ಯುತ್ತಾರೆ. ತಮ್ಮಂತೆಯೇ ಅವಕ್ಕೂ "ವಾಕಿಂಗ್" ಮುಂತಾದ ವಿಹಾರಗಳೂ ಸಾಮಾಜಿಕ ಆಹ್ಲಾದಗಳೂ ಅಗತ್ಯವೆಂದು ಭಾವಿಸುತ್ತಾರೆ. ಸ್ವಂತ ಮಕ್ಕಳನ್ನು ದಿವಸಕ್ಕೊಮ್ಮೆ ಕಣ್ಣುಬಿಟ್ಟು ನೋಡದ ಎಷ್ಟೋ ಮಂದಿ ಸೊಗಸುಗಾರರು ನಾಯಿಕುನ್ನಿಗಳನ್ನು ತೋಳ್ತೆಕ್ಕೆಗಳಲ್ಲಿ ಹಿಡಿದೆತ್ತಿ ಅಪ್ಪಿಕೊಂಡು ಬಗೆಬಗೆಯಾದ ಪ್ರೀತಿಸೂಚಕವಾದ ಮಾತುಗಳನ್ನಾಡಿ ಮುದ್ದಾಡುತ್ತಾರೆ. ಅವುಗಳ ಮೂತಿಗಳಿಗೆ ತಮ್ಮ ಮೂತಿಗಳನ್ನಿಟ್ಟು ಮೈಯುಜ್ಜಿ ಸ್ಪರ್ಶಸುಖವನ್ನನುಭವಿಸಿ ಆನಂದಿಸಿ ಮೈಮರೆಯುತ್ತಾರೆ. ಅವಿವಾಹಿತರಾದ ಪಾಶ್ಚಾತ್ಯ ಮಹಿಳೆಯರನೇಕರು ಈ ತೆರದ ತಮ್ಮ ಅತೃಪ್ತ ದೈಹಿಕ ವಾಂಛೆಗಳನ್ನು ತೀರಿಸಿಕೊಳ್ಳುವುದಕ್ಕಾಗಿಯೇ ನಾಯಿಗಳನ್ನು ಸಾಕಿಕೊಂಡಿರುತ್ತಾರೆಂದು ಮನಶ್ಶಾಸ್ತ್ರಜ್ಞರು ಹೇಳುತ್ತಾರೆ. ಮಕ್ಕಳ ಮತ್ತು ಗಂಡಂದಿರ ಸ್ಥಾನಮಾನಗಳನ್ನೂ ಹಕ್ಕುಬಾಧ್ಯತೆಗಳನ್ನೂ ನಾಯಿಗಳು ಆಕ್ರಮಿಸಿಕೊಂಡಿರುತ್ತವೆಯಂತೆ ಈ "ಸೆಕ್ಸ್‌ಸ್ಟಾರ್ವ್ಡ್" ಹೆಂಗಸರ ಜೀವಿತಗಳಲ್ಲಿ. ಇನ್ನಾವ ಪ್ರಾಣಿಗಳು ಈ ಭಾಗ್ಯವನ್ನು ಪಡೆದಿವೆ?

ಶುಭಾಶುಭಗಳೆರಡರಲ್ಲೂ ನಾಯಿಗಳು ಈ ತೆರದ ವಿಶೇಷವಾದ ಆದರಕ್ಕೆ ಪಾತ್ರವಾಗುತ್ತವೆ. ಹತ್ತಿಪ್ಪತ್ತು ವರ್ಷಗಳ ಕಾಲ ನಿರಂತರವಾಗಿ ಅವಿಶ್ರಾಂತವಾಗಿ ತಮಗೂ ತಮ್ಮ ಮನೆಮಂದಿಗೂ ಅಮೃತಸಮವಾದ ಹಾಲನ್ನು ನೀಡಿದ ಹಸುಕರುಗಳು ಗತಿಸಿದಾಗ ಅಳುಕಿನಿತೂ ಇಲ್ಲದೆ ನಿರ್ದಾಕ್ಷಿಣ್ಯವಾಗಿ ಆಚೆಗೆಸೆಯುವವರು ಕೂಡ ತಮ್ಮ ಪ್ರೀತಿಯ ನಾಯಿಗಳು ಸತ್ತಾಗ ಅನ್ನ ನೀರುಳಿದು ಸಂತಾಪ ಪಡುವುದನ್ನು ನೋಡಿದ್ದೇನೆ. ನಮ್ಮ ಅಧ್ಯಾಪಕರಾಗಿದ್ದ ಪರಂಗಿ ವಿದ್ವಾಂಸರೊಬ್ಬರು ತಮ್ಮ "ಆಲ್ಸೇಷಿಯನ್" ನಾಯಿ ತೀರಿಕೊಂಡಾಗ ಮೂರು ದಿನ ದುರ್ಭರವಾದ ದುಃಖವನ್ನು ಅನುಭವಿಸಿ ಕಾಲೇಜಿಗೆ ಬರದೆ ಇದ್ದುದು ನನಗೆ ನೆನಪಿದೆ. ನಾನೊಮ್ಮೆ ಪೂನಾದಿಂದ ಬೆಂಗಳೂರಿಗೆ ಪ್ರಯಾಣಮಾಡುತ್ತಿದ್ದಾಗ ನಮ್ಮ ಗಾಡಿ ಮೀರಜಿನ ಸಮೀಪದ ಒಂದು ರೈಲ್ವೆ ನಿಲ್ದಾಣಕ್ಕೆ ಬರುವ ಹೊತ್ತಿಗೆ ನಮ್ಮ ಪಕ್ಕದಲ್ಲಿದ್ದ ಐರೋಪ್ಯ ಮಹಿಳೆಯೊಬ್ಬಳ "ಲ್ಯಾಪ್ ಡಾಗ್" ಜಾತಿಯ ನಾಯಿಮರಿ ತನ್ನ ಇಹಲೋಕ ಯಾತ್ರೆಯನ್ನು ಮುಗಿಸಿತು. ಆ ನಿಲ್ದಾಣದಲ್ಲಿ ಗಾಡಿ ನಿಂತಾಗ ಆಕೆಯು ಅಪರಿಮಿತ

ವಾದ ಆರ್ತನಾದವನ್ನು ಕೇಳುವ ಅವಕಾಶ ನನಗೆ ದೊರೆಯಿತು. ತನ್ನ ಹೊಟ್ಟೆಯಲ್ಲಿ ಹುಟ್ಟಿದ ಕೂಸು ಕಡೆಯುಸಿರೆಳೆದರೂ ಅವಳು ಅಷ್ಟು ಹೃದಯವಿದ್ರಾವಕವಾದ ರೀತಿಯಲ್ಲಿ ಪ್ರಲಪಿಸುತ್ತಿದ್ದಳೋ ಇಲ್ಲವೋ ಹೇಳಲಾರೆ. ಅವಳ ರೋದನದ ಸೀಳ್ದನಿ ನಿಲ್ದಾಣದ ಉದ್ದಕ್ಕೂ ಕೇಳಿಬರುತ್ತಿತ್ತು. ಶೋಕೋದ್ರಿಕ್ತಳಾಗಿ ಬಿಡುವಿಲ್ಲದೆ ಬಿಕ್ಕಿಬಿಕ್ಕಿ ಅಳುತ್ತಿದ್ದ ಆ ಪೆಣ್ಮಣಿಯ ನೋಟ ವೇಳಾಪತ್ರಿಕೆಯ ದಾಸರಾಗಿ ಯಂತ್ರಗಳಂತೆ ನಡೆಯುತ್ತಿದ್ದ ಗಾರ್ಡು ಡ್ರೈವರುಗಳ ಮನಗಳನ್ನೂ ಕರಗಿಸಿತು. ತತ್ಫಲವಾಗಿ ಗಾಡಿ ಅಲ್ಲಿಂದ ಹೊರಡಲು ಒಂದು ಗಂಟೆ ತಡವಾಯಿತು. ಆ ಶುನಕಶಿಶುವಿನ ಮೃತದೇಹವನ್ನು ನಿಲ್ದಾಣದ ಹಿಂದಿನ ಬಯಲಿನ ಮೂಲೆಯಲ್ಲಿ ಶಾಸ್ತ್ರೋಕ್ತವಾಗಿ ಸಮಾಧಿಮಾಡುವ ವರೆಗೂ ನಮ್ಮ "ಎಕ್ಸ್‌ಪ್ರೆಸ್" ಗಾಡಿ ಅಲ್ಲೇ ಕಾದು ನಿಲ್ಲಬೇಕಾಯಿತು. ಆ ದೃಶ್ಯವನ್ನು ನೋಡಿದವರೆಲ್ಲಾ "ಅಯ್ಯೋ ಪಾಪ! ಅಯ್ಯೋ ಪಾಪ!" ಎಂದು ಸಹಾನುಭೂತಿಯನ್ನು ವ್ಯಕ್ತಪಡಿಸಿದರು. ಇನ್ನಾವ ಪ್ರಾಣಿ ಸತ್ತಿದ್ದರೂ ಅದಕ್ಕೆ ಇಷ್ಟೊಂದು ಗೌರವ ಸಲ್ಲುತ್ತಿತ್ತೆ? (ರೈಲ್ವೆ ಗಾಡಿಗಳಲ್ಲಿ ನಾಯಿಗಳಿಗೆಂದೇ ಪ್ರತ್ಯೇಕವಾದ ಕಿರುಗೋಣೆಗಳನ್ನು ಬೇರೆ ಮಾಡಿರುತ್ತಾರೆ. ಅವು ಗಾರ್ಡುಗಳ ಪಕ್ಕದಲ್ಲೇ ಅವರ ಕೃಪಾದೃಷ್ಟಿಗೆ ಪದೇಪದೇ ಬೀಳಬಹುದಾದಷ್ಟು ದೂರದಲ್ಲೇ ಇರುತ್ತವೆ. ಇನ್ನಾವ ಪ್ರಾಣಿಗೂ ಇಂತಹ "ರಿಸರ್ವ್ಡ್" ಕಂಪಾರ್ಟ್‌ಮೆಂಟಿನ ಗೌರವ ದತ್ತವಾಗಿಲ್ಲ. ಇತರ ಪ್ರಾಣಿಗಳು ಸಾಮಾನ್ಯವಾದ "ವ್ಯಾಗನ್" ಗಳಲ್ಲಿ "ಟ್ರಕ್ಕು"ಗಳಲ್ಲಿ ಪ್ರಯಾಣ ಬೆಳೆಸಬೇಕು, ಇಲ್ಲದಿದ್ದರೆ ನಡೆದುಕೊಂಡು ಹೋಗಬೇಕು. ರೈಲ್ವೆ ಪ್ರಯಾಣಮಾಡುವಾಗ ಸುಸಜ್ಜಿತವೂ ಸುಖಕರವೂ ಆದ ವಾಹನ ಸೌಕರ್ಯದ ಏರ್ಪಾಟು ಇರುವುದು ನಾಯಿಗಳಿಗೆ ಮಾತ್ರ.)

ಪಾಶ್ಚಾತ್ಯ ನಾಗರಿಕತೆಯ ಪ್ರಭಾವದ ಫಲವಾಗಿ ಸಂಪ್ರದಾಯಬದ್ಧವಾದ ನಮ್ಮ ನಾಡಿನಲ್ಲಿ ನಮ್ಮ ಸಮಾಜದಲ್ಲಿ ಕೂಡ ನಾಯಿಗಳು ಇಷ್ಟೊಂದು ಪ್ರೀತ್ಯಾದರಗಳನ್ನೂ ಪ್ರಾಮುಖ್ಯತೆಯನ್ನೂ ಗಳಿಸಿರುವಾಗ ಪಾಶ್ಚಾತ್ಯ ದೇಶಗಳಲ್ಲೇ ಅವಕ್ಕೆ ಇನ್ನೆಷ್ಟು ಹೆಚ್ಚಿನ ಮಾನ್ಯತೆ ಇರಬೇಕೆಂದು ಪ್ರತ್ಯೇಕವಾಗಿ ಹೇಳಲೇಬೇಕಾದುದಿಲ್ಲ. ಆ ದೇಶಗಳಲ್ಲಿ ನಾಯಿಗಳಿಗೆಂದೇ ನಿಯೋಜಿತವಾದ ವಿಶಿಷ್ಟವಾದ ವಾಸಗೃಹಗಳು, ವಸ್ತ್ರಾಲಂಕಾರಗಳು, ವಾಹನಗಳು, ವ್ಯಾಯಾಮಕ್ರೀಡೆಗಳು, ವೈದ್ಯಶಾಲೆಗಳು, ಆಹಾರಪದಾರ್ಥಗಳು ಇರುತ್ತವೆಯಂತೆ. ನಮ್ಮ ಪೇಟೆಗಳಲ್ಲಿ ಸಂತೆಗಳಲ್ಲಿ ವಾರ ವಾರವೂ ನೂರಾರು ದನಕರುಗಳ ಮತ್ತು ಕುರಿ ಮೇಕೆಗಳ ಮಾರಾಟವಾಗುವ ಹಾಗೆ ಅಲ್ಲಿ ನಾಯಿಗಳ ವ್ಯಾಪಾರ ನಡೆಯುತ್ತದೆಯಂತೆ. ವರ್ತಮಾನಪತ್ರಿಕೆಗಳಲ್ಲಿ ನಾಯಿಗಳಿಗೆ ಸಂಬಂಧಪಟ್ಟ ವಿಷಯಗಳಿಗೇ ಮೀಸಲಾದ ಜಾಹಿರಾತುಗಳಿರುತ್ತವೆಯಂತೆ.

ಇಂಥ ಜಾತಿಯ ಇಂಥ ವಂಶದ ಇಷ್ಟು ವಯಸ್ಸಾದ ಇಂಥ ನಾಯಿ ಮಾರಾಟಕ್ಕಿದೆ, ಇಂಥ ನಾಯಿ ಇಷ್ಟು ಮರಿ ಹಾಕಿದೆ, ಮಕ್ಕಳು ಬಾಣಂತಿ ಆರೋಗ್ಯವಾಗಿದ್ದಾರೆ; ನಾಯಿಗಳಿಗೆ ಕಡು ಪುಷ್ಟಿಕರವಾದ ಇಂಥ ಹೊಸತಿನಿಸು ತಯಾರಿಸಲ್ಪಟ್ಟಿದೆ—ಇವೇ ಮೊದಲಾದ ಸಂಗತಿಗಳು ಅವುಗಳಲ್ಲಿ ಪ್ರಕಟವಾಗುತ್ತವೆಯಂತೆ. (ನಾಯಿಗಳ ವೈವಾಹಿಕ ಆವಶ್ಯಕತೆಗಳನ್ನೂ ದಾಂಪತ್ಯದ ಆದರ್ಶಗಳನ್ನೂ ಪ್ರಪಂಚದ ಗಮನಕ್ಕೆ ತರುವ "ಮ್ಯಾಟ್ರಿಮೋನಿಯಲ್ ಕಾಲಮ್ಮು"ಗಳೂ ಇರುತ್ತವೆಯೋ ಏನೋ ನನಗೆ ಗೊತ್ತಿಲ್ಲ; ನೋಡಿಬಂದಿರುವವರು ಹೇಳಬೇಕು). ಈಚೆಗೆ ಪೊಲೀಸ್, ಸೈನ್ಯ ಮೊದಲಾದ ರಕ್ಷಣಾದಳಗಳಲ್ಲಿ ನಾಯಿಗಳನ್ನು ಕೆಲಸಕ್ಕೆ ನೇಮಿಸಿಕೊಂಡು "ಟ್ರೈನಿಂಗ್" ಕೊಟ್ಟು ನಾನಾ ಉದ್ದೇಶಗಳಿಗಾಗಿ ಉಪಯೋಗಿಸಿಕೊಳ್ಳುತ್ತಿದ್ದಾರಂತೆ. ಆ ದೇಶಗಳಲ್ಲಿ ಆಗಾಗ "ಡಾಗ್ ಷೋ"ಗಳು (ಮನುಷ್ಯರ ಕೂಸುಗಳನ್ನು ಪ್ರದರ್ಶಿಸುವ "ಬೇಬಿ ಷೋ"ಗಳ ಹಾಗೆ) ನಡೆಯುತ್ತಿರುತ್ತವೆಯಂತೆ. ಜನಗಳಿಗೆ ಅಮೂಲ್ಯವಾದ ತಿಳಿವಳಿಕೆಯನ್ನು ಕೊಡಲು ಬಲ್ಲವರು ಬರೆದ ವಿವಿಧಜಾತಿಯ ನಾಯಿಗಳನ್ನು ಬಣ್ಣಿಸುವ ಸುದೀರ್ಘವೂ ಸಚಿತ್ರವೂ ಆದ ಪುಸ್ತಕಗಳೂ ಕೈಪಿಡಿಗಳೂ ಅಲ್ಲಿ ಅಚ್ಚಾಗುತ್ತಿರುತ್ತವೆಯಂತೆ.

ಪಾಶ್ಚಾತ್ಯದೇಶಗಳ ಜನಜೀವನದಲ್ಲಿ ನಾಯಿಗಳಿಗಿರುವ ಘನತೆ ಪ್ರತಿಷ್ಠೆಗಳು ಅವರ ಸಾಹಿತ್ಯದಲ್ಲೂ ಸ್ವಲ್ಪಮಟ್ಟಿಗೆ ಪ್ರತಿಬಿಂಬಿತವಾಗಿವೆ. (ಅಲ್ಲೂ ನಾಯಿಗಳಿಗೆ ಗೌರವದಾಯಕವಲ್ಲದ "ಬಿಚ್," "ಕರ್," "ಕೆಯ್ಟಿಫ್" ಮೊದಲಾದ ಮಾತುಗಳಿಲ್ಲದೆ ಇಲ್ಲ. ಆದರೂ ಒಟ್ಟಿನ ಮೇಲೆ ಶ್ಲಾಘನೆಯ ನುಡಿಗಳೇ ಹೆಚ್ಚು.) ಷೇಕ್ಸ್‌ಪಿಯರ್, ಕೂಪರ್, ಸ್ಕಾಟ್, ವರ್ಡ್ಸ್‌ವರ್ತ್ ಮೊದಲಾದ ಕವಿಗಳನೇಕರು ನಾಯಿಗಳನ್ನು ಕುರಿತು ಪ್ರಶಂಸಾತ್ಮಕವಾದ ಸ್ವಾರಸ್ಯವಾದ ಕಥೆಗಳನ್ನೂ ವರ್ಣನೆಗಳನ್ನೂ ಗದ್ಯಪದ್ಯಗಳೆರಡರಲ್ಲೂ ಬರೆದಿದ್ದಾರೆ. ಪ್ರಬಂಧಕಾರರು (ಉದಾಹರಣೆಗೆ ಗಾರ್ಡಿನರ್ ಮತ್ತು ಲಿಂಡ್) ನಾಯಿಗಳ ಮೇಲೆ ಉತ್ತಮ ಕೃತಿಗಳನ್ನು ರಚಿಸಿದ್ದಾರೆ. ಡಾಕ್ಟರ್ ಜಾನ್ ಬ್ರೌನ್‌ರವರು ನಾಯಿಯೊಂದನ್ನು ಕುರಿತು ಒಂದು ಸೊಗಸಾದ ಕಥೆಯನ್ನೇ ಕಟ್ಟಿದ್ದಾರೆ. ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಪ್ರೇರಿತರಾಗಿ ಕಾವ್ಯರಚನೆ ಮಾಡಿರುವ ನಮ್ಮ ಆಧುನಿಕ ಕನ್ನಡ ಕವಿಗಳೂ ಕೆಲವರು ತಮ್ಮ ಬರಹಗಳಲ್ಲಿ ನಾಯಿಗಳನ್ನು ಪ್ರೀತಿಪೂರ್ವಕವಾಗಿ ಚಿತ್ರಿಸಿದ್ದಾರೆ. ಶ್ರೀ ಮಾಸ್ತಿಯವರ "ಮಾಂಜಿ" ಯನ್ನು ಯಾರು ಮರೆಯಲು ಸಾಧ್ಯ?

ನಾಯಿಗಳ ವಿಷಯವನ್ನು ಕುರಿತು ಮಾತಾಡುವಾಗ ಅವಕ್ಕೆ ಅವುಗಳ ಒಡೆಯರು ಕೊಡುವ ಹೆಸರುಗಳನ್ನು ಸ್ವಲ್ಪ ಗಮನಿಸಬೇಕು. ನಾಯಿಯೊಂದನ್ನು ಕೊಂಡುತಂದರೆ

ಮನೆಯವರ ಮೊಟ್ಟಮೊದಲನೆಯ ಯೋಚನೆಗಳಲ್ಲೊಂದು ಅದಕ್ಕೆ ಯಾವ ನಾಮಧೇಯವನ್ನು ದಯಪಾಲಿಸಬೇಕೆಂಬುದು. ಅದಾವ ಕಾರಣದಿಂದಲೋ ಏನೋ, ಸಾಮಾನ್ಯವಾಗಿ ನಾಯಿಗಳಿಗೆಲ್ಲಾ "ಟಾಮಿ" ಎಂಬ ಹೆಸರು ಪ್ರಿಯವಾಗಿರುವುದೆಂದು ತೋರುತ್ತದೆ. ತಮಗೆ ಪರಿಚಯವಿಲ್ಲದ ಯಾವ ನಾಯಿಗಳನ್ನು ಕರೆಯಬೇಕಾದರೂ ಜನ ಅವನ್ನು "ಟಾಮಿ, ಟಾಮಿ" ಎಂದೇ ಕೂಗುವುದು. ಶುನಕಲೋಕದಲ್ಲಿ "ಟಾಮಿ" ಎಂಬುದು ಮನುಷ್ಯಸಮಾಜದಲ್ಲಿ "ಟಾಮ್, ಡಿಕ್ ಅಂಡ್ ಹ್ಯಾರಿ" ಇದ್ದಂತೆ. ಸ್ವಂತ ನಾಯಿಗಳನ್ನು ಕೆಲವರು "ಟೈಗರ್" ಎಂದು ಸಂಬೋಧಿಸುವುದುಂಟು. ತಮ್ಮ ಮುದ್ದಿನ ಪ್ರಾಣಿ ಹೆಸರಿನಲ್ಲಾದರೂ ಹುಲಿಯಾಗಿರಲಿ ಎಂದಿರಬಹುದು ಇಂಥವರ ಆಶಯ. ಇನ್ನು ಕೆಲವರು ತಮ್ಮ ನಾಯಿಗಳಿಗೆ "ರ್‍ಯಾಸ್ಕಲ್," "ರೌಡಿ," "ಬದ್ಮಾಷ್," "ಜಯಂಟ್" ಮೊದಲಾದ ವಿಚಿತ್ರವಾದ (ಆದರೆ ಅರ್ಥಪೂರ್ಣವಾದ) ಬಿರುದುಗಳನ್ನು ಕೊಟ್ಟಿರುತ್ತಾರೆ. ಸರ್ ವಾಲ್ಟರ್ ಸ್ಕಾಟಿನ ಒಂದು ಕಾದಂಬರಿಯಲ್ಲಿ ಔಷಧವ್ಯಾಪಾರಿಯಾದ ವೈದ್ಯನೊಬ್ಬನ ಬಳಿ ಎರಡು ನಾಯಿಗಳಿವೆ. ಅವನು ಅವುಗಳಲ್ಲಿ ಒಂದಕ್ಕೆ "ಮಾರ್ಟರ್" (ಒರಳು) ಎಂದೂ ಇನ್ನೊಂದಕ್ಕೆ "ಪೆಸಲ್" (ಒನಕೆ ಅಥವಾ ರುಬ್ಬುಗುಂಡು) ಎಂದೂ ಹೆಸರಿಟ್ಟಿರುತ್ತಾನೆ. ಹೀಗೆ ಪ್ರತಿಯೊಬ್ಬ ಶುನಕಸ್ವಾಮಿಯೂ ತಾನು ತನ್ನ ಉದ್ಯೋಗದಲ್ಲಿ ಉಪಯೋಗಿಸುವ ಸಲಕರಣೆಗಳ ಹೆಸರುಗಳನ್ನೇ ನಾಯಿಗಳಿಗೆ ಕೊಟ್ಟರೆ ಒಂದು ರೀತಿ ಸ್ವಾರಸ್ಯವಾಗಿರುತ್ತದೆ. ನನ್ನ ಗುರುಗಳಾಗಿದ್ದ ಆಂಗ್ಲ ಅಧ್ಯಾಪಕರೊಬ್ಬರು ತಾವು ಸಾಕಿಕೊಂಡಿದ್ದ ಎರಡು ನಾಯಿಗಳಲ್ಲಿ ಒಂದಕ್ಕೆ "ಪೊಯಿಟ್ರಿ" ಎಂದೂ ಇನ್ನೊಂದಕ್ಕೆ "ಪ್ರೋಸ್" ಎಂದೂ ನಾಮಕರಣ ಮಾಡಿದ್ದರು. ಹೀಗೆಯೇ ವರ್ತಕರು ತಮ್ಮ ನಾಯಿಗಳಿಗೆ "ಸೇರು," "ಅಚ್ಚೇರು," "ಪಾವು," "ತಕ್ಕಡಿ" ಎಂದೂ, ಕೈಗಾರಿಕೋದ್ಯಮಿಗಳು "ಲೇತ್," "ಬಾಯ್ಲರ್," "ಡೈನಮೋ," "ಪ್ರೊಪೆಲರ್" ಎಂದೂ, ವಾಹನಗಳ ಒಡೆಯರು "ಲಾರಿ," "ಬಸ್," "ಆಟೋರಿಕ್ಷ," "ಟ್ಯಾಕ್ಸಿ" ಎಂದೂ, ಬಡಗಿ ಕಮ್ಮಾರರು "ಸುತ್ತಿಗೆ," "ಉಳಿ," "ಗರಗಸ," "ಅಡಿಗಲ್ಲು," "ಇಕ್ಕಳ" ಎಂದೂ ಬಗೆಬಗೆಯ ಹೆಸರುಗಳನ್ನು ತಮ್ಮ ನಾಯಿಗಳಿಗಿಟ್ಟರೆ ಇನ್ನೇನಿಲ್ಲದಿದ್ದರೂ ತಮಾಷೆಯಾಗಿರುತ್ತದೆ, ಅಲ್ಲವೆ? ಶೃಂಗಾರಕಲಾನಿಪುಣೆಯರಾದ ಹೆಂಗಸರು ತಮ್ಮ ಅಚ್ಚುಮೆಚ್ಚಿನ "ಲ್ಯಾಪ್ ಡಾಗ್"ಗಳಿಗೆ "ಫೇಸ್ ಪೌಡರ್," "ವ್ಯಾನಿಷಿಂಗ್ ಕ್ರೀಮ್," "ಲಿಪ್ ಸ್ಟಿಕ್," "ಕ್ಯೂಟೆಕ್ಸ್," "ವ್ಯಾನಿಟಿ ಬ್ಯಾಗ್" ಮೊದಲಾದ ಮೃದುಮಧುರವಾದ ಹೆಸರುಗಳನ್ನು ನೀಡಬಹುದು. ಬರಹಗಾರರು ತಮ್ಮ ನಾಯಿಗಳಿಗೆ

"ರೀಡ್ ಪೆನ್," "ಸ್ಟೀಲ್ ಪೆನ್," "ಫೌಂಟನ್ ಪೆನ್" ಎಂದು ಹೆಸರಿಡಬೇಕು ಅಷ್ಟೆ. "ಹಲಗೆ ಬಳಪವ ಪಿಡಿಯದ" ಕುಮಾರವ್ಯಾಸನಂತಹ ಕವಿಗಳು ನಾಯಿ ಸಾಕಿದರೆ ಅವುಗಳಿಗೆ ಅತ್ಯಂತ ಉಚಿತವಾದ ಹೆಸರುಗಳು "ಜ್ಞಾಪಕಶಕ್ತಿ," "ಕಂಠಬಲ" ಇತ್ಯಾದಿ ಎನ್ನೋಣವೆ? ಈಚೀಚೆಗೆ ನನ್ನ ಬಂಧುಮಿತ್ರರಲ್ಲಿ ಕೆಲವರು ತಮ್ಮ ನಾಯಿಗಳನ್ನು (ಅವು ಗಂಡುಗಳಾದರೆ) "ಭೀಮ" ಎಂದು ಕರೆಯತೊಡಗಿದ್ದಾರೆ. ಹೀಗೆಯೇ "ಕಂಸ," "ಬಕಾಸುರ," "ರಾವಣ," "ಹಿಡಿಂಬ," "ಶಿಶುಪಾಲ," "ಶೂರ್ಪನಖಿ," "ಪೂತನಿ," "ಚಂಡಿ," "ಮಹಂಕಾಳಿ" ಮುಂತಾದ ಅಚ್ಚ ಭಾರತೀಯ ಹೆಸರುಗಳನ್ನು ಇತರರೂ ಇಟ್ಟರೆ ಚೆನ್ನಾಗಿಯೇ ಇರುತ್ತದೆ. ನಮ್ಮ ಜೀವನದ ಎಷ್ಟೋ ಕ್ಷೇತ್ರಗಳಲ್ಲಿ "ಸ್ವದೇಶೀಕರಣ" ನಡೆಯುತ್ತಿರುವಾಗ ಇದರಲ್ಲೂ ಏಕಾಗಬಾರದು ?

ವಾಚಕಮಹಾಶಯ, ನೀವೂ ನಾಯಿ ಸಾಕಿದ್ದೀರೇನು? ಹಾಗಾದರೆ ನಿಮ್ಮ ನಾಯಿಯ ವಿಷಯವಲ್ಲ ನಾನು ಇಷ್ಟು ಹೊತ್ತೂ ಹರಟುತ್ತಿದ್ದುದು; ನಿಮ್ಮ ಪಕ್ಕದ ಮನೆಯವರ ನಾಯಿಯನ್ನು ಕುರಿತು.

ಎಂ. ರಾಮರಾವ್.

# ಎಂಜಿನಿಯರ್ ಬೀವರ್

ಎಂಜಿನಿಯರ್ ಬೀವರ್—ಮನುಷ್ಯನಲ್ಲ—ಹಲವಾರು ಸಹಸ್ರವರ್ಷಗಳಿಂದಲೂ ಸಣ್ಣ, ದೊಡ್ಡ ಅಣೆಕಟ್ಟುಗಳನ್ನು ಕಟ್ಟಿ ಅದರ ಸಮೀಪದಲ್ಲಿಯೇ ವಾಸಿಸುವ ಗೌರವಾರ್ಹವಾದ ವನ್ಯಜೀವಿ. ಬೀವರ್ ಉತ್ತರ ಅಮೇರಿಕಾ ಮತ್ತು ಕೆನಡಾ ದೇಶಗಳ ಕಾಡಿನಲ್ಲಿ ವಾಸಿಸುವ ಚುರುಕಾದ ಸಸ್ಯಾಹಾರಿ ಸಸ್ತನಿ. ಉದ್ದ ಸುಮಾರು ೧೨ ಅಡಿ. ತೂಕ ೪೦ ರಿಂದ ೬೦ ಪೌಂ. ವರೆಗೆ. ಎಂದೂ ಸವೆಯದ ಚೂಪಾದ ಹಲ್ಲು, ನೀರಿನಲ್ಲಿ ಈಜಾಡಲು ಅನುಕೂಲವಾದ ಜಾಲಪಾದವುಳ್ಳ ಹಿಂಗಾಲು, ಮೊಟಕಾದ ಬಾಲ—ಈ ಪ್ರಾಣಿಗೆ ಇದೆ. ಮರದ ತೊಗಟೆ ಗೆಡ್ಡೆಗೆಣಸುಗಳು ಇದರ ಆಹಾರ. ಸಣ್ಣ, ದೊಡ್ಡ ಮರಗಳನ್ನು ಕಡಿದು ಉರಳಿಸಿ ತನ್ನ ರಕ್ಷಣೆ, ವಾಸಕ್ಕಾಗಿ ಹರಿಯುವ ನೀರಿಗೆ ಅಣೆಕಟ್ಟು ಕಟ್ಟುವುದೇ ಇದರ ಕೆಲಸ. ಮೊದಲು ಎರಡು ಬೀವರ್‌ಗಳು, ಆಹಾರ, ಗೃಹಾನ್ವೇಷಣ ಮಾಡುತ್ತಾ, ಸಣ್ಣ ನದಿಯ ಪಕ್ಕದಲ್ಲಿ, ಅನುಕೂಲವಾದ ಸ್ಥಳದಲ್ಲಿ ನೆಲಸುತ್ತವೆ. ಡೊಗರಿನಂತೆ ಪ್ರಾರಂಭವಾದ ಇವರ ಬೀಡಾರ, ಪರಿವಾರ ಬೆಳೆದಂತೆಲ್ಲಾ ನದಿಯ ಪಾತ್ರದ ಕೆಳಗೆ ಸುರಂಗ, ಹಂತಗಳಾಗಿ ಪರಿವರ್ತಿತವಾಗುತ್ತದೆ. ಇದನ್ನು ಕಟ್ಟುವುದು ಮರದ ತುಂಡುಗಳು ಮತ್ತು ಹುಡಿ ಮಣ್ಣಿನಿಂದ. ಮರದ ತುಂಡುಗಳಲ್ಲಿ ಕೆಲವು ಸಣ್ಣವೂ ಕೆಲವು ೮-೧೦ ಅಡಿಗಳಷ್ಟು ದೊಡ್ಡ ದಿಮ್ಮಿಗಳೂ ಇರುತ್ತವೆ. ಈ ಅಣೆಕಟ್ಟು ಕೆಲವು ಅಡಿಗಳಿಂದ ಹಿಡಿದು ಸಾವಿರ ಅಡಿ ಉದ್ದವೂ ೧೦-೧೨ ಅಡಿಗಳಷ್ಟು ಎತ್ತರವಾಗಿಯೂ ಇರುತ್ತವೆ. ಬೀವರ್ ಪರಿವಾರ ಬೆಳೆದಂತೆಲ್ಲಾ ಆ ಪರಿವಾರದ ಶ್ರಮದ ಫಲವಾಗಿ ಅಣೆಕಟ್ಟೂ ಬೆಳೆಯುತ್ತದೆ. ಈ ಬೀಡಾರದಲ್ಲಿಯೇ ಬೀವರ್ ಚಳಿಗಾಲದ ಹಿಮ ಮತ್ತು ಶೀತದಿಂದ ತನ್ನನ್ನು ರಕ್ಷಿಸಿಕೊಳ್ಳುತ್ತದೆ. ಈ ಅಣೆಕಟ್ಟಿನ ಹಿನ್ನೆಲೆಯಲ್ಲಿ, ಕೆಲವು ಬಾರಿ ಸಾವಿರ ಎಕರೆಯಷ್ಟು ದೊಡ್ಡ ಕೃತಕ ಜಲಾಶಯವೇರ್ಪಡುತ್ತದೆ. ಈ ಜಲಾಶಯದಲ್ಲಿ ಸತತ ವಾಗಿ ಮೆಕ್ಕಲು ಮಣ್ಣು ಶೇಖರವಾಗಿ ಆ ಭಾಗವನ್ನೆಲ್ಲಾ ಒಂದೇ ಮಟ್ಟಕ್ಕೆ ತರುತ್ತದೆ. ಕಾಲಕ್ರಮೇಣ ಈ ಅಣೆಕಟ್ಟು ಶಿಥಿಲವಾಗಿ, ಶೇಖರವಾಗಿದ್ದ ನೀರೆಲ್ಲವೂ ಹೊರಟುಹೋಗಿ ಜಲಾಶಯವು ಒಣಗಿಹೋಗುತ್ತದೆ. ಈ ಬೀವರ್‌ಗಳು ತಮ್ಮ ಸ್ಥಳ ಬಿಟ್ಟು ಬೇರೆ ಬೇರೆ ಕಡೆಗೆ ವಲಸೆಹೋಗುತ್ತವೆ. ಹಿಂದೆ ಜೌಗಾಗಿದ್ದ, ಯಾವ ಕೆಲಸಕ್ಕೂ ಬರದ ಪ್ರದೇಶವನ್ನು, ನಮ್ಮ ಊಹೆಗೆ ಮೀರಿದ ಪರಿಶ್ರಮದಿಂದ, ಈ ಬೀವರ್ ಸುಂದರ ಹುಲ್ಲುಗಾವಲನ್ನಾಗಿ ಮಾಡಿ ಅಲ್ಲಿ ಮನುಷ್ಯ ನೆಲಸುವಂತೆ ಮಾಡುತ್ತದೆ. ಪ್ರಕೃತಿಯ ಆದಿಪರಿಶೋಧಕ—ಬೀವರ್ ಮಾನವನಿಗಿಂತ ಮೊದಲಿನ ಎಂಜಿನಿಯರ್.

—ಚಿ. ಮಹದೇವ ಶಂಕರಪ್ಪ.

# ಬನವಾಸಿ ದೇಶ

"ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ |
ಳ್ಗಾಗರವಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ ||
ನಾಗಿಯುಮೇನೋ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್ |
ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿ ದೇಶದೊಳ್ ||"

(ಪಂಪ)

ಸುಮಾರು ೨೨೦೦ ವರ್ಷಗಳ ಹಿಂದೆ ಮೌರ್ಯ ಅಶೋಕ ಚಕ್ರವರ್ತಿಯ ಕಾಲದಲ್ಲಿ ಬೌದ್ಧಮತಪ್ರಚಾರಕ್ಕೆಂದು ಪಾಟಲೀಪುತ್ರದಿಂದ ಹೊರಟ ಭಿಕ್ಕುಗಳಲ್ಲಿ ಒಬ್ಬನಾದ ರಕ್ಷಿತ ಎಂಬವನು ವನವಾಸಿಗೆ ಬಂದುದಾಗಿ 'ಮಹಾವಂಶ' ತಿಳಿಸುತ್ತದೆ. ಇದೇ 'ಮಹಾವಂಶ'ದಲ್ಲಿ ಸಿಂಹಳದ ದೊರೆ ದುಠಗಾಮನಿ ಕಟ್ಟಿಸಿದ ಮಹಾಸ್ತೂಪದ ಆರಂಭೋತ್ಸವಕ್ಕೆ ವನವಾಸಿ ದೇಶದಿಂದ ಮಹಾಥೇರ ಚಂದಗುತ್ತನು ಎಂಭತ್ತುಸಾವಿರ ಆಚಾರ್ಯರೊಡಗೂಡಿ ಹೋದನೆಂದು ಹೇಳಲಾಗಿದೆ.[1] ಭೂಗೋಳಶಾಸ್ತ್ರಜ್ಞ ಟಾಲಮಿಯು ತಯಾರಿಸಿದ ಭಾರತದೇಶದ ಭೂಪಟದಲ್ಲಿ 'ಬನೌಸಿ'ಎಂಬ ನಗರ ಗುಜರಾತಿನ ಬಾರಿಗಾಜ್ಜ (Broach) ಕ್ಕೆ ಆಗ್ನೇಯ ದಿಗ್ಭಾಗದಲ್ಲಿರುವುದಾಗಿ ತಪ್ಪಾಗಿ ಗುರುತಿಸಲಾಗಿದೆ. ಇಂದು ಹಾಳಾಗಿಹೋಗಿರುವ ಉತ್ತರ ಕನ್ನಡ ಜಿಲ್ಲೆಯ ಶಿರಶಿ ತಾಲ್ಲೂಕಿನ ಬನವಾಸಿಯೇ ಈ ವನವಾಸಿ ಅಥವಾ ಬನೌಸಿ.

ದೈತ್ಯರಾದ ಮಧು ಕೈಟಭರೆಂಬ ಇಬ್ಬರು ಸಹೋದರರು ವನವಾಸದಲ್ಲಿ ನೆಲಸಿದ್ದುದಾಗಿಯೂ ಅವರಲ್ಲಿ ಹಿರಿಯವನಾದ ಮಧು ಮಧುಕೇಶ್ವರ ದೇವಾಲಯವನ್ನು ಕಟ್ಟಿಸಿದನೆಂದೂ, ಮಹಾವಿಷ್ಣುವು ಈ ಇಬ್ಬರನ್ನೂ ವನವಾಸಿಯಲ್ಲಿಯೇ ಕೊಂದುದಾಗಿಯೂ ಸ್ಕಾಂದಪುರಾಣದ 'ವನವಾಸಿ ಮಾಹಾತ್ಮ್ಯ'ದಲ್ಲಿ ಹೇಳಲಾಗಿದೆ. ಪಂಚಪಾಂಡವರು ತಮ್ಮ ಅರಣ್ಯವಾಸವನ್ನು ಈ ಬನವಾಸಿ ದೇಶದಲ್ಲಿ ಕಳೆದರೆಂದು ಈಗಲೂ ಪ್ರತೀತಿ ಇದೆ. ಅವರಲ್ಲೊಬ್ಬನಾದ ಸಹದೇವನು ತನ್ನ ದಿಗ್ವಿಜಯ ಯಾತ್ರೆಯಲ್ಲಿ ಸಂಜಯಂತಿ ನಗರವನ್ನು ಸಹ ಗೆದ್ದುಕೊಂಡು ಬಂದನೆಂದು ಮಹಾಭಾರತದಲ್ಲಿ ಹೇಳಲಾಗಿದೆ.[2] ಇದಲ್ಲದೆ ಆಂಧ್ರ, ಪಾಂಡ್ಯ, ಚೋಳ, ಕೇರಳ ದೇಶಗಳನ್ನೂ ಸಹ ಸಹದೇವನು ಜಯಿಸಿದನೆಂದು ಹೇಳಿದೆಯಾಗಿ ಈ ಸಂಜಯಂತೀ ಎಂಬುದು ಕರ್ಣಾಟಕದಲ್ಲಿ ಖ್ಯಾತಿವೆತ್ತ ಬನವಾಸಿ ದೇಶವಾಗಿರಬಹುದು.

---

[1] '*Mahāvaṁśa*' chapters XII and XXIX, Ed. by L. C. Wijesiṇha.

[2] *Mahābhārata, Digvijayaparva*, Vol. II; Edited by V. S. Sukthankar and S. K. Belvalkar.

ಸಂಜಯಂತಿ, ಅಥವಾ ಜಯಂತಿ (ಜಯಂತೀಪುರ) ಯೇ ಬನವಾಸಿಯ ಮತ್ತೊಂದು ಹೆಸರೆಂಬುದಕ್ಕೆ ನೇರವಾದ ಆಧಾರಗಳಾವುವೂ ಇಲ್ಲವೆಂದು ಡಾ॥ ಫ್ಲೀಟ್‌ರವರು ತಿಳಿಸಿರುವರು.[3] ಆದರೆ ಹಲವು ಶಾಸನಗಳಿಂದ ಈ ವಿಷಯ ಸಮಗೆ ತಿಳಿದುಬರುತ್ತದೆ. ಬನವಾಸಿಯ ಮಧುಕೇಶ್ವರದೇವಾಲಯದ ಪ್ರಾಕಾರದ ಬಲಗೋಡೆಗೆ ಹೊಂದಿಸಿರುವ ನಾಗಪ್ರತಿಮೆಯ ಎಡ, ಬಲ, ಭಾಗಗಳೆರಡರಲ್ಲೂ ಬರೆಯಲ್ಪಟ್ಟಿರುವ ಪ್ರಾಕೃತ ಶಿಲಾಲೇಖದಲ್ಲಿ ಸಂಜಯಂತೀ ನಗರವನ್ನು ನಮೂದಿಸ ಲಾಗಿದೆ. ಅದರಲ್ಲಿ ಆ ನಾಗಪ್ರತಿಮೆಯ ಶಿಲ್ಪಿ ಸಂಜಯಂತಿ ನಗರದ ಆಚಾರ್ಯ್ಯ ಇಂದ್ರಮಯೂರನ ಶಿಷ್ಯನಾದ ನರ್ತ್ತಕನೆಂದು ಹೇಳಲಾಗಿದೆ.[4] ಅದೇ ದೇವಾಲಯದ ಪ್ರಾಂಗಣದಲ್ಲಿರುವ ನರಸಿಂಹದೇವರ ಗುಡಿಯ ಹಿಂಭಾಗದ ಗೋಡೆಗೆ ನಿಲ್ಲಿಸಿರುವ ಕಲ್ಲಿನಮೇಲಿರುವ ಶಾಸನದಿಂದ[5] ಸಹ ಬನವಾಸಿಗೆ ಜಯಂತೀ, ವೈಜಯಂತೀ ಎಂಬ ಪ್ರತಿನಾಮಗಳಿದ್ದುದಾಗಿ ತಿಳಿದುಬರುತ್ತದೆ. ಬನವಾಸಿಗೆ ಕನಕಾಪುರ ಅಥವಾ ಕನಕಾ ವತಿ ಎಂಬ ಮತ್ತೂ ಒಂದು ಹೆಸರಿದ್ದುದಾಗಿ ಈ ಶಾಸನದಿಂದಲೇ ತಿಳಿದುಬರುತ್ತದೆ. ಇಲ್ಲಿಯೇ ವೀರಭದ್ರದೇವರ ಗುಡಿಯಲ್ಲಿನ ಕಂಭದ ಶಾಸನವೊಂದರಲ್ಲೂ[6] ಸಹ 'ಕನಕಾವತಿ' ಎಂಬ ಹೆಸರಿನ ಊರು ನಮೂದಿಸಲ್ಪಟ್ಟಿದೆ. ಇದು ಬನವಾಸಿಗೆ ಸಂಬಂಧಿಸಿದುದೆಂಬುದರ ಬಗ್ಗೆ ನಿರ್ಧಾರವಾಗಿ ಹೇಳಲಾಗದು. ಆದರೆ ಈ ಕನಕಾವತಿ ಎಂಬ ಹೆಸರು ಹೇಗೆ ಬಂದಿತೆಂಬುದಕ್ಕೆ ಹೆಚ್ಚಿನ ವಿವರಣೆಗಳ ಮಾಹಿತಿ ಇನ್ನೂ ದೊರೆತಿಲ್ಲ.

ಶಾತವಾಹನರೆನಿಸಿಕೊಂಡು ಆಂಧ್ರರು ಬಹಳ ಹಿಂದಿನಿಂದಲೂ ಮೈಸೂರು ದೇಶ ದೊಡನೆ ಸಂಪರ್ಕ ಹೊಂದಿದ್ದರು. ಅವರ ಶಾಸನಗಳಲ್ಲಿ ಒಂದು ಶಿವಮೊಗ್ಗ ಜಿಲ್ಲೆಯ ಮಳವಳ್ಳಿಯಲ್ಲಿಯೂ[7] ಮತ್ತೊಂದು ಬನವಾಸಿಯ ಮಧುಕೇಶ್ವರ ದೇವಾಲಯ ದಲ್ಲಿನ ಮೇಲೆ ತಿಳಿಸಲಾದ ನಾಗಪ್ರತಿಮೆಯ ಕಲ್ಲಿನಲ್ಲೂ[8] ದೊರೆತಿದೆ. ವಿಷ್ಣುಕಡ ಚುಟು (ಚೂಟು) ವಂಶದ ಶಾತಕರ್ಣಿಯ ಪುತ್ರಿ ಶಿವಸ್ಕಂದ ನಾಗಶ್ರೀ ಎಂಬಾಕೆ ಆ ನಾಗಪ್ರತಿಮೆಯನ್ನು ಮಾಡಿಸಿ, ಅಲ್ಲಿ ಒಂದು ಹೊಂಡವನ್ನೂ ವಿಹಾರವನ್ನೂ

---

[3] *Bombay Gazetteer*, Vol. I, pt. II, page 278, note 2.

[4] *Indian Antiquary*, Vol. XIV, pp. 331 ff.

[5] *Annual Report of South Indian Epigraphy*—B. K. No. 120 of 1935-36. ಶಾಸನದಲ್ಲಿನ ಪಾಠಭಾಗ "ಜಯಂತ್ತಿ ವಿಜಯಂತಿ ಕನ್‌ಕಾವತ್ತಿಗೆ ಪ್ರತಿನಾಮವಾದ ಬನವಾಸಿ ಪುರದಲಿ" ಎಂದಿದೆ. ಮತ್ತು ನೋಡಿ Ep. Carn. VII, Sa. 105.

[6] *A. R. S. I. E.* B. K. 132 of 1935-36.

[7] *Ind. Ant.* Vol. XXV, p. 28; Ep. carn, Vol. VII, p. 251 f.

[8] *A. R. S. I. E.* B. K. 123 of 1935-36.

ಸ್ಥಾಪಿಸಿದುದಾಗಿ ಬನವಾಸಿಯ ಶಾಸನ ತಿಳಿಸುತ್ತದೆ. ಈ ಶಾಸನದಲ್ಲಿ ಅವರ ಕಾಲದ ಬಗ್ಗೆ ಸ್ಪಷ್ಟವಾದ ಸೂಚನೆ ಇಲ್ಲದಿದ್ದರೂ ಇದು ಸುಮಾರು ಕ್ರಿಸ್ತ ಶಕ ಎರಡನೆಯ ಶತಮಾನಕ್ಕೆ ಸೇರಿದುದೆಂದು ಬರವಣಿಗೆಯ ಆಧಾರದಿಂದ ನಿರ್ಧರಿಸಲಾಗಿದೆ.[9] ಈ ಶಾಸನದಲ್ಲೂ ಮಳವಳ್ಳಿಯ ಶಾಸನದಲ್ಲೂ ಕಾಣಬರುವ ಶಾತಕರ್ಣಿ ಎಂಬವನು ಒಬ್ಬನೇ ಆಗಿದ್ದು ಆಗಿನ ಶಾತವಾಹನರ ದೊರೆ ಅಥವಾ ಅವನ ಅಧಿಕಾರಿಯಾಗಿದ್ದಿರಬಹುದು. ಚಂದ್ರವಳ್ಳಿಯಲ್ಲಿ ದೊರೆತಿರುವ ನಾಣ್ಯಗಳ ಆಧಾರದಿಂದಲೂ ಮೈಸೂರಿನ ಉತ್ತರಭಾಗ ಆಗ ಶಾತವಾಹನರ ಅಧೀನದಲ್ಲಿದ್ದಿರಬಹುದೆಂದು ತಿಳಿದುಬರುತ್ತದೆ. ಮೊರೇಸ್ ಅವರು ಬನವಾಸಿ ಶಾತವಾಹನರ ರಾಜಧಾನಿ ಆಗಿದ್ದಿರಬಹುದೆಂದು ಊಹಿಸಿದ್ದಾರೆ.[10]

ತಾಳಗುಂದ ಶಾಸನದಲ್ಲಿ[11] ಪಲ್ಲವರನ್ನು ಸೋಲಿಸಿ ಕದಂಬ ಮಯೂರಶರ್ಮ್ಮನು ಕುಂತಲದೇಶವನ್ನು ಆಕ್ರಮಿಸಿಕೊಂಡುದಾಗಿ ತಿಳಿದುಬರುತ್ತದೆ. ಶಾತವಾಹನರ ರಾಜ್ಯಕ್ಕೆ ಅವರ ಬಳಿಕ ಇಕ್ಷ್ವಾಕುವಂಶದ ದೊರೆಗಳು ಉತ್ತರಾಧಿಕಾರಿಗಳಾಗಿ ಬಂದವರಾಗಿ, ಬನವಾಸಿದೇಶವನ್ನು ಪಲ್ಲವರು ಇಕ್ಷ್ವಾಕುವಂಶದವರನ್ನು ಹೊಡೆದೋಡಿಸಿ ಆಕ್ರಮಿಸಿಕೊಂಡರೆಂದೂ ಪಲ್ಲವರಿಂದ ಅದು ಕದಂಬರ ಕೈಗೆ ಬಂದಿತೆಂದೂ ನಿರ್ಣಯಿಸಬಹುದು. ಕದಂಬರ ವಂಶದ ಮೂಲದ ಬಗ್ಗೆ ಹಲವಾರು ಕಥೆಗಳು ಹಾನಗಲ್ಲಿನ ಮತ್ತು ಗೋವೆಯ ಕದಂಬರ ಶಾಸನಗಳಲ್ಲಿ ದೊರಕುತ್ತವೆ. ಆದರೆ ಬನವಾಸಿಯ ಕದಂಬರ ದೊರೆಯಾದ ಶಾಂತಿವರ್ಮನ ತಾಳಗುಂದ ಶಾಸನ ಕದಂಬರ ಬಗ್ಗೆ ವಾಸ್ತವಿಕವೆನಿಸುವ ಕಥೆಯೊಂದನ್ನು ಹೇಳುತ್ತದೆ. ಅದರಂತೆ ಕದಂಬರು ಮಾನವ್ಯಗೋತ್ರದ ಬ್ರಾಹ್ಮಣಕುಲಕ್ಕೆ ಸೇರಿದವರು. ಅವರ ಮನೆಯ ಮುಂದಿನ ಕದಂಬ ವೃಕ್ಷವನ್ನು ಬೆಳೆಸಿಕೊಂಡು ಬಂದುದರಿಂದ ಅವರಿಗೆ ಕದಂಬವಂಶದವರೆಂದು ಹೆಸರು ಬಂದಿತು. ಅವರಲ್ಲಿ ಒಬ್ಬನಾದ ಮಯೂರಶರ್ಮ್ಮನು ವೇದಾಧ್ಯಯನಕ್ಕಾಗಿ ತನ್ನ ಗುರುವಾದ ವೀರಶರ್ಮ್ಮನೊಡನೆ ಪಲ್ಲವರ ರಾಜಧಾನಿಯಾದ ಕಾಂಚೀನಗರಕ್ಕೆ ತೆರಳಿದನು. ಅಲ್ಲಿದ್ದಾಗ ಒಂದು ಸಮಯದಲ್ಲಿ ತನಗಾದ ಅವಮರ್ಯಾದೆಯಿಂದಾಗಿ ರೊಚ್ಚಿಗೆದ್ದ ಆ ಬ್ರಾಹ್ಮಣನು ಕುಶದರ್ಭೆಗಳನ್ನು ಹಿಡಿಯುತ್ತಿದ್ದ ತನ್ನ ಕೈ ಕತ್ತಿಯನ್ನು ಹಿಡಿಯುವ ನಿರ್ಧಾರಮಾಡಿ ಆ ವಿದ್ಯೆಯಲ್ಲಿ ನಿಷ್ಣಾತನಾಗಿ ಶ್ರೀ ಪರ್ವ್ವತ

---

[9] ಪಂ|| ಭಗವಾನ್‌ಲಾಲ್ ಇಂದ್ರಜೀಯವರು ಇದು ಕ್ರಿ. ಶ. ಎರಡನೆಯ ಶತಮಾನದ ಶಾಸನವೆಂದು ಅಭಿಪ್ರಾಯಪಟ್ಟಿರುವರಾದರೂ ಡಾ|| ಬ್ಯೂಲರ್‌ರವರು ಈ ಶಾಸನ ಅದಕ್ಕೂ ಹಿಂದಿನದೆಂದು ಹೇಳಿರುವರು. (*Ind. Ant.* Vol. XIV, p. 331f.)

[10] G. M. Moraes: '*Kadamba Kula*' p. 5.

[11] *Ep. Ind.* Vol. VIII, pp 24–36 ff.

ದಲ್ಲಿ ನೆಲಸಿದ್ದು ಆಗಿಂದಾಗ್ಗೆ ಪಲ್ಲವರ ಮೇಲೆ ಧಾಳಿ ಮಾಡತೊಡಗಿದನು. ಅವನನ್ನು ಅಡಗಿಸಲಾಗದ ಪಲ್ಲವರು ಕೊನೆಗೆ 'ಅಮರಸಾಗರ'ದಿಂದ 'ಪ್ರೇಹಾರ' ದೇಶದ ವರೆಗಿನ ಭೂಮಿಗೆ ಅವನನ್ನು ಅಧಿಪತಿಯಾಗಿ ಒಪ್ಪಿಕೊಂಡರು. 'ಪ್ರೇಹಾರ' ಎಂಬುದು ಮಧ್ಯಭಾರತದ ಮಾಳವದೇಶವಾಗಿರಬಹುದೆಂದೂ ಅಮರಸಾಗರ ಪಶ್ಚಿಮದ ಸಮುದ್ರವಾಗಿರಬಹುದೆಂದೂ ವಿದ್ವಾಂಸರು ಅಭಿಪ್ರಾಯಪಟ್ಟಿರುವರು. ಈ ಮಯೂರಶರ್ಮನನ್ನು ದೇವರಾದ ಷಡಾನನನೇ ಅಭಿಷಿಕ್ತನನ್ನಾಗಿ ಮಾಡಿದ ನೆಂದೂ ಈ ಶಾಸನದಲ್ಲಿ ಹೇಳಲಾಗಿದೆ. ಕದಂಬರ ಇತರ ಶಾಸನಗಳಲ್ಲೂ ಸಹ ಅವರನ್ನು 'ಸ್ವಾಮಿ ಮಹಾಸೇನ ಮಾತೃಗಣಾನುಧ್ಯಾತಾಭಿಷಿಕ್ತಾನಾಂ' ಎಂದು ಅನ್ವಯಿಸಿ ಸೂಚಿಸಲಾಗಿದೆ. ಅವರು 'ಪ್ರತಿಕೃತ ಸ್ವಾಧ್ಯಾಯ ಚರ್ಚಾಪರ'ರೆಂದು ಹೇಳಲಾ ಗಿದೆ. ಬ್ರಾಹ್ಮಣರಾಗಿ ಅವರು 'ಸ್ವಾಧ್ಯಾಯ ಚರ್ಚಾಪರ'ರೆಂದೂ, ಅವರು ರಾಜ್ಯ ಭಾರ ಮಾಡತೊಡಗಿದಮೇಲೆ ದುಷ್ಟಶಿಕ್ಷಣ ಶಿಷ್ಟರಕ್ಷಣ ಕರ್ತವ್ಯವೂ ಅವರದಾಯಿ ತೆಂದೂ, ಹೀಗೆ ಮೊದಲು 'ಸ್ವಾಧ್ಯಾಯ ಚರ್ಚಾಪರರಾದ' ಅವರು ಬಳಿಕ 'ಪ್ರತಿಕೃತ ಸ್ವಾಧ್ಯಾಯ ಚರ್ಚಾಪರ'ರಾದರೆಂದೂ ಡಾ|| ಕೀಲ್‌ಹಾರ್ನ್‌ರವರು ವಿವರಿಸಿ ದ್ದಾರೆ.[12]

ಮಯೂರಶರ್ಮನ ಬಳಿಕ ಕ್ರಮವಾಗಿ ಕಂಗವರ್ಮ, ಭಗೀರಥ, ಕಾಕುಸ್ಥವರ್ಮ, ಶಾಂತಿವರ್ಮ, ಮೃಗೇಶವರ್ಮ, ರವಿವರ್ಮ, ಹರಿವರ್ಮ, ಮತ್ತು ಎರಡನೆಯ ಕೃಷ್ಣವರ್ಮ ಇವರುಗಳು ಬನವಾಸಿಯಲ್ಲಿ ರಾಜ್ಯಭಾರಮಾಡಿದರು. ಪಾಲಾಶಿಕಾ, (=ಹಲಸಿಗೆ) ಉಚ್ಚಂಗಿ ಮತ್ತು ತ್ರಿಪರ್ವತ ಈ ಮೂರು ಸ್ಥಳಗಳೂ ಕದಂಬರ ನೆಲೆ ವೀಡಾಗಿದ್ದುವು. ಪಾಲಾಶಿಕಾ ಎಂಬುದು ಈಗಿನ ಬೆಳಗಾಂ ಜಿಲ್ಲೆಯ ಹಲಸಿ ಮತ್ತು ಉಚ್ಚಂಗಿ ಚಿತ್ರದುರ್ಗಜಿಲ್ಲೆಯ ಉಚ್ಚಂಗಿದುರ್ಗ. ತ್ರಿಪರ್ವತ ಕರ್ನೂಲು ಜಿಲ್ಲೆಯ ಶ್ರೀಶೈಲವಾಗಿರಬಹುದು.

ಕಾಕುಸ್ಥವರ್ಮನಿಗೆ ಕೃಷ್ಣವರ್ಮನೆಂಬ ಮತ್ತೊಬ್ಬ ಮಗನಿದ್ದನು. ಇವನು ತನ್ನ ರಾಜಧಾನಿ ತ್ರಿಪರ್ವತದಲ್ಲಿ ಸ್ವತಂತ್ರನಾಗಿ ಆಳುತ್ತಿದ್ದನು. ಇವನ ಬಳಿಕ ಇವನ ಮಗ ವಿಷ್ಣುವರ್ಮ, ಅನಂತರ ಸಿಂಹವರ್ಮ ಮತ್ತು ಎರಡನೆಯ ಕೃಷ್ಣವರ್ಮ ಇವರುಗಳು ತ್ರಿಪರ್ವತದಲ್ಲಿ ರಾಜ್ಯಭಾರಮಾಡಿದರು. ಎರಡನೆ ಕೃಷ್ಣವರ್ಮನ ಕಾಲದಲ್ಲಿ ಬನವಾಸಿಯೂ ಅವನ ಕೈಕೆಳಗೆ ಬಂದಿತು. ಅವನ ಬಳಿಕ ಅಜವರ್ಮ ಭೋಗಿವರ್ಮರು ಬನವಾಸಿಯ ಅಧಿಪರಾಗಿದ್ದರು. ಈ ಕದಂಬರ ಶಾಸನಗಳಲ್ಲಿ ಕಾಲವನ್ನು ಆಗಿನ ಪದ್ಧತಿಯಂತೆ ಆಯಾ ಋತುಗಳಿಂದ ಅಥವಾ ರಾಜರುಗಳ

---

[12] *EP. Ind.* Vol. VI, p. 15, footnote 2.

ಆಳ್ವಿಕೆಯ ವರ್ಷದಿಂದ ಸೂಚಿಸಲಾಗಿದೆ. ಇದರಿಂದಾಗಿ ಕದಂಬರಾಜರುಗಳ ಆಳ್ವಿಕೆಯ ಕಾಲ ನಿಶ್ಚಯವಾಗಿ ಹೇಳಲಾಗದು. ಆದರೆ ಅವರ ಶಾಸನಗಳ ಲಿಪಿಯ ಆಧಾರದ ಮೇಲೆ ಈ ಕದಂಬರು ಕ್ರಿಸ್ತ ಶಕ ಮೂರನೆಯ ಶತಮಾನದಿಂದ ಆರನೆಯ ಶತಮಾನದವರೆಗೂ ರಾಜ್ಯಭಾರಮಾಡಿದರೆಂದು ಊಹಿಸಬಹುದು.

ಐಹೊಳೆ ಶಾಸನದಲ್ಲಿ[13] ಬಾದಾಮಿ ಚಾಲುಕ್ಯರ ಅಧಿಪತಿ ಎರಡನೆಯ ಪುಲಿಕೇಶಿಯು ಬನವಾಸಿಯನ್ನು ತನ್ನ ಸ್ವಾಧೀನಪಡಿಸಿಕೊಂಡನೆಂಬ ಅಂಶ ತಿಳಿದು ಬರುತ್ತದೆ. ಚಾಲುಕ್ಯವಂಶದ ಮೊದಲನೆಯ ಕೀರ್ತಿವರ್ಮ್ಮನು ವೈಜಯಂತಿಯ ಅಧಿಪತಿಯನ್ನು ಸೋಲಿಸಿದನೆಂದು ಮಂಗಳೇಶನ ಮಹಾಕೂಟಸ್ತಂಭದ ಶಾಸನ[14] ತಿಳಿಸುತ್ತದೆ. ಇವನಿಂದ ಸೋಲಿಸಲ್ಪಟ್ಟ ಕದಂಬ ಅಜವರ್ಮ್ಮನ ಬಳಿಕ ಪಟ್ಟಕ್ಕೆ ಬಂದ ಭೋಗಿವರ್ಮ್ಮನು ತನ್ನ ರಾಜ್ಯದ ಪುನರುತ್ಥಾನಕ್ಕಾಗಿ ಯತ್ನಿಸಿ ಪುಲಿಕೇಶಿಯಿಂದ ಮತ್ತೆ ಸೋಲಿಸಲ್ಪಟ್ಟನು. ಇಲ್ಲಿಗೆ ಬನವಾಸಿಯಲ್ಲಿ ಕದಂಬರ ಆಳ್ವಿಕೆ ಕೊನೆಗೊಂಡಿತು. ಮತ್ತೆ ಇವರು ಕ್ರಿ.ಶ. ಹತ್ತನೆಯ ಶತಮಾನದಿಂದ ಬನವಾಸಿ, ಹಾನಗಲ್ಲು ಮತ್ತು ಗೋವೆಯಲ್ಲಿ ರಾಷ್ಟ್ರಕೂಟರ ಮತ್ತು ಕಲ್ಯಾಣಿಯ ಚಾಳುಕ್ಯರ ಮಾಂಡಳಿಕರಾಗಿ ಮೆರೆದರು.

ಚಾಲುಕ್ಯರ ಕಾಲದಲ್ಲಿ ಬಾದಾಮಿಯೂ, ರಾಷ್ಟ್ರಕೂಟರ ಕಾಲದಲ್ಲಿ ಮಾನ್ಯ ಖೇಟವೂ ಆ ಅರಸರ ರಾಜಧಾನಿಗಳಾಗಿದ್ದು ಬನವಾಸಿ ತನ್ನ ಪ್ರಾಮುಖ್ಯತೆಯನ್ನು ಸ್ವಲ್ಪಮಟ್ಟಿಗೆ ಕಳೆದುಕೊಂಡಿತು. ಅರಸರಿಗೆ ಬದಲು ಅವರ ಮಾಂಡಳಿಕರಿಗೆ ಬನವಾಸಿ ನೆಲೆವೀಡಾಯಿತು. ಬನವಾಸಿಯಲ್ಲಿ ದೊರೆತಿರುವ ಸುಮಾರು ಮೂವತ್ತು ಶಾಸನಗಳಲ್ಲಿ ಕಲ್ಯಾಣಿಯ ಚಾಲುಕ್ಯರ ದೊರೆಗಳಾದ ತ್ರೈಳೋಕ್ಯಮಲ್ಲ (ಮೊದಲನೆಯ ಸೋಮೇಶ್ವರ) ಮತ್ತು ಭೂಲೋಕಮಲ್ಲರ (ಮೂರನೆಯ ಸೋಮೇಶ್ವರ) ಶಾಸನಗಳು ಎರಡು ಮಾತ್ರ. ಆದರೂ ಅವರ ಮಾಂಡಳಿಕರುಗಳನೇಕರು ಬನವಾಸಿಯಲ್ಲಿ ಅಧಿಕಾರ ನಡೆಸಿದರು. ಬನವಾಸಿ ಕನ್ನಡರಾಜ್ಯದ ಮುಖ್ಯಭಾಗಗಳಲ್ಲಿ ಒಂದಾಗಿದ್ದಿತು. ಕೊನೆಗೆ ಅದು ವಿಜಯನಗರ ರಾಜ್ಯದಲ್ಲಿ ಒಂದಾಗಿಹೋಯಿತು. ಶಕವರ್ಷ ೧೩೦೯ (೧೩೮೭-೮೮ A.D.) ರಲ್ಲಿ ವೀರ ಹರಿಹರರಾಯನು ಹಸ್ತಿನಾಪುರಿಯಲ್ಲಿ ರಾಜ್ಯಭಾರ ಮಾಡುತ್ತಿದ್ದಾಗ ಬಹುಶಃ ಬನವಾಸಿಯ ಮಧುಕೇಶ್ವರದೇವರಿಗೆ ಕೊಟ್ಟ ದಾನವನ್ನು ಸೂಚಿಸುವ ಶಾಸನವೊಂದು[15] ಬನವಾಸಿ ದೇವಾಲಯದಲ್ಲಿದೆ. ಅದರಲ್ಲಿ ಒಬ್ಬ ಮಾಧವಾಮಾತ್ಯನು ನಮೂದಿಸಲ್ಪಟ್ಟಿದಾನೆ. ಆದರೆ ಶಾಸನ ಬಹಳ ಶಿಥಿಲವಾಗಿದ್ದು

[13] *Ep. Ind*, Vol. VI, p. 5.
[14] *Ep. Ind. Ant*. Vol. XIX, p. 7.
[15] *A.R.S.I.E.*, B.K. 127 of 1935-36.

ವಿವರಗಳು ಕಾಣಬರುವಂತಿಲ್ಲ. ಇದಕ್ಕೂ ಹಿಂದೆ ಶಕವರ್ಷ ೧೨೯೦ ರಲ್ಲಿ (೧೩೬೮-೬೯ A.D.) ವೀರ ಬುಕ್ಕರಾಯನ ಕಾಲದಲ್ಲಿ ಮಾಧವಾಂಕನು 'ಬನವಸೆಯ ಹನ್ನಿರ್ಛಾಸಿರ'ವನ್ನಾಳುತ್ತಿದ್ದನೆಂದು ಅಲ್ಲಿಯ ಎರಡು ಶಾಸನಗಳಲ್ಲಿ[16] ಸೂಚಿತವಾಗಿದೆ. ಹಿಂದಿನ ಶಾಸನದಲ್ಲಿ ಸೂಚಿಸಲ್ಪಟ್ಟ ಮಾಧವಾಮಾತ್ಯನೇ ಈ ಮಾಧವಾಂಕನಾಗಿರ ಬಹುದು.

ವಿಜಯನಗರ ಸಾಮ್ರಾಜ್ಯದ ಪತನಕಾಲದಲ್ಲಿ ಕಾರವಾರ ಜಿಲ್ಲೆಯಲ್ಲಿ ಬಿಳಗಿ ಮತ್ತು ಸ್ವಾದಿ ಅರಸುಮನೆತನಗಳು ಪ್ರವರ್ಧಮಾನವಾಗತೊಡಗಿದುವು. ಇವುಗಳಲ್ಲಿ ಸ್ವಾದಿ ಅರಸು ಮನೆತನದ ಮೂಲಪುರುಷನಾದ ಅರಸಪ್ಪನಾಯಕನು ವಿಜಯನಗರದ ಕೃಷ್ಣದೇವರಾಯನ ಸಂಬಂಧೀಕನೆಂದೂ, ಬಹಳ ಕಾಲ ಮಕ್ಕಳಿಲ್ಲದ ನರಸನಾಯಕನು ತನ್ನ ಸೋದರಿಯ ಮಗನಾದ ಅರಸಪ್ಪನಾಯಕನನ್ನು ತನ್ನ ಉತ್ತರಾಧಿಕಾರಿಯಾಗಿ ಮಾಡಲು ಇಚ್ಛಿಸಿದ್ದನಾದರೂ ಮುಂದೆ ಕೃಷ್ಣದೇವರಾಯನ ಜನನವಾದ ಬಳಿಕ ಹಾಗೆ ಮಾಡಲಾಗದೆ ಅರಸಪ್ಪನಾಯಕನನ್ನು ಸ್ವಾದಿಯ ಗದ್ದುಗೆಯ ಮೇಲೆ ಕುಳ್ಳಿರಿಸಿದನೆಂದೂ ತಿಳಿದುಬರುತ್ತದೆ. ಅರಸಪ್ಪನಾಯಕನ ಶಾಸನಗಳೆರಡು ಬನವಾಸಿಯಲ್ಲಿವೆ. ಅದರಲ್ಲಿ ಒಂದು[17] ಶಕ ೧೪೯೪ ನೆಯ ಪ್ರಜಾಪತಿ ಸಂವತ್ಸರದ ವೈಶಾಖ ಬಹುಳ ಚತುರ್ದಶಿ ಮಂಗಳವಾರ (೨೨-೫-೧೫೭೧ A.D.) ದಂದು ಸದಾಶಿವದೇವ ಮಹಾರಾಯರು ವಿಜಯನಗರದಲ್ಲಿ ಸಿಂಹಾಸನಾರೂಢರಾಗಿದ್ದಾಗ, ಅರಸಪ್ಪನಾಯಕನೂ ಅರಸಾದೇವಿ ಅಮ್ಮನವರೂ ಬನವಾಸಿಯ ನರಸಿಂಹದೇವರಿಗೆ ಭೂಮಿಯನ್ನು ದಾನಮಾಡಿದುದಾಗಿ ತಿಳಿಸುತ್ತದೆ. ಎರಡನೆಯ ಶಾಸನದ[18] ಕಾಲ ಶಕವರ್ಷ ೧೫೨೧ ನೆಯ ವಿಳಂಬಿ ಸಂವತ್ಸರದ ಶ್ರಾವಣ ಶುದ್ಧ ೧೫ ಆದಿವಾರ ಸೋಮೋಪರಾಗ ಪುಣ್ಯಕಾಲ (೬-೮-೧೫೯೮ A.D.). ಆ ದಿನದಂದು ಸೋದೆಯ ಮಹಾಪ್ರಭು ಇಮ್ಮಡಿ ಅರಸಪ್ಪನಾಯಕನು ಬನವಾಸಿಯ ಮಧುಕೇಶ್ವರದೇವರಿಗೆ ಭೂಮಿಯನ್ನು ದತ್ತಿಯಾಗಿ ಕೊಟ್ಟನು.

ಇಂತು ಸುಪ್ರಸಿದ್ಧ ಚಾರಿತ್ರಿಕ ದೇಶವಾದ ಬನವಾಸಿಯನ್ನು ಕನ್ನಡನಾಡಿನ ಪ್ರಾಚೀನ ಶಿಲಾಶಾಸನಗಳಲ್ಲೊಂದಾದ ಐಹೊಳೆಶಾಸನದಲ್ಲಿ ಕವಿ ಈ ರೀತಿ ವರ್ಣಿಸಿದ್ದಾನೆ:

> ವರದಾತುಂಗ ತರಂಗರಂಗ ವಿಲಸದ್ಧಂಸಾವಳೀ ಮೇಖಲಾಮ್ |
> ವನವಾಸೀಮವಿಮೃದ್ನತಃ ಸುರಪುರಪ್ರಸ್ಪರ್ಧಿನೀಂ ಸಂಪದಾ ||

---

[16] *Ibid.* B.K. Nos. 130 and 142 of 1935-36.
[17] *A.R.S.I.E.* B.K. 121 of 1935-36.
[18] *Ibid.* B.K. 124 of 1935-36.

ಮಹತಾ ಯಸ್ಯ ಬಲಾರ್ಣವೇನ ಪರಿತಃ ಸಂಛಾದಿತೋರ್ವ್ವೀತಲಮ್ |
ಸ್ಥಲದುರ್ಗಂ ಜಲದುರ್ಗತಾಮಿವ ಗತಂ ತತ್ತತ್ಕ್ಷಣೇ ಪಶ್ಯತಾಮ್ ||

ಬನವಾಸಿಯ ಸೌಂದರ್ಯ ಹಲವಾರು ಕವಿಗಳಿಗೆ ಸ್ಫೂರ್ತಿಯನ್ನಿತ್ತಿದೆ. ಈ ಲೇಖನದ ಆರಂಭದಲ್ಲಿನ ವರ್ಣನೆ ಆದಿಕವಿ ಪಂಪನದು. ಆ ಕವಿ ಕ್ರಿಸ್ತ ಶಕ ೯೪೧ ರ ಸುಮಾರಿನಲ್ಲಿ ರಚಿಸಿದ ತನ್ನ 'ವಿಕ್ರಮಾರ್ಜುನ ವಿಜಯ'ದಲ್ಲಿ ಮೇಲ್ಕಂಡಂತೆ ಬನವಾಸಿಯನ್ನು ಹೊಗಳಿದ್ದಾನೆ. ಬನವಾಸಿಯ ಬಗ್ಗೆ ಆತನಿಗೆ ಅತೀವಪ್ರೇಮ. ಆತನ ಈ ಕೆಳಗಿನ ಮತ್ತೊಂದು ಪದ್ಯ ನೋಡಿ :

"ತೆಂಕಣಗಾಳಿ ಸೋಂಕಿದೊಡವೊಳ್ನುಡಿಗೇಳ್ದೊಡವಿಂಪನಾಳ್ದ ಗೇ
ಯಂ ಕಿವಿವೊಕ್ಕೊಡಂ ಬಿರಿದಮಲ್ಲಿಗೆಗಂಡೊಡಮಾದ ಕೆಂದಲಂ ||
ಪಂಗೆಡೆಗೊಂಡೊಡಂ ಮಧು ಮಹೋತ್ಸವಮಾದೊಡಮೇನನೆಂಬೆನಾ |
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ವನವಾಸಿ ದೇಶಮಂ ||

ಕರ್ಣಾಟಕದಲ್ಲಿ ಕಾಣಬರುವ ಸಾವಿರಾರು ಶಾಸನಗಳಲ್ಲಿ ಅನೇಕ ಕಡೆ ಬನವಾಸಿ ದೇಶ ಮೆಚ್ಚುಗೆಗೆ ಪಾತ್ರವಾಗಿದೆ. ಈ ಶಾಸನಗಳ ಅಜ್ಞಾತ ಕವಿಗಳನೇಕರಿಗೆ ಬನವಾಸಿ ದೇಶ ತಮ್ಮ ಕವಿತಾಸಾಮರ್ಥ್ಯ ಪ್ರಕಟಿಸಲು ತಕ್ಕ ವಿಷಯವನ್ನೊದಗಿಸಿ ಕೊಟ್ಟಿದೆ. ಹಿಂದೆ ಕಲ್ಯಾಣಪುರ (ಈಗಿನ ಬಿದರೆ ಜಿಲ್ಲೆಯ ಕಲ್ಯಾಣ) ದಲ್ಲಿ ಆಳಿದ ಚಾಲುಕ್ಯರ ವಂಶದ ದೊರೆ ವಿಕ್ರಮಾದಿತ್ಯನ ಕಾಲದಲ್ಲಿ, ಕ್ರಿಸ್ತ ಶಕ ೧೧೭೧ ರಲ್ಲಿ ಗೋವಿಂದರಾಜ ದಂಡಾಧೀಶನೆಂಬುವವನು ಬನವಾಸಿ ದೇಶದ ಅಧಿಕಾರಿಯಾಗಿದ್ದನು. ಆಗ ಕಾಗಿನೆಲ್ಲಿ ಎಂಬ ಊರಿನಲ್ಲಿ ಮಾಡಲ್ಪಟ್ಟ ದಾನದ ಬಗ್ಗೆ ಅದೇ ಊರಿನಲ್ಲಿದ್ದ ಶಾಸನದಲ್ಲಿ[19] ಹೇಳಲಾಗಿದೆ. ಅದರಲ್ಲಿನ ಬನವಾಸಿ ದೇಶದ ವರ್ಣನೆ ಈ ರೀತಿ ಇದೆ :

"ಬಳಸಿದ ನಂದನಾಳಿಕರವೊಪ್ಪುವ ಪುಷ್ಪಲತಾಳಿ ಕೂಡೆ ಮಂ
ಡಳಿಪ ಶುಕಾಳಿ ಬಗ್ಗಿಪ ಪಿಕಾಳಿ ತೆಱಿಂದಿ [ರದು]ನ್ಮದಾಳಿ ಕಂ
ಣ್ಗೊಳಿಸುವ ಗನ್ಧಶಾಳಿ ಸುಳಿದಾಡುವ ತೆಂಕಣ ಗಾಳಿ ದೇಸೆಯಂ
ತಳೆದು ನಿರಂತರಂ ನಿವಿದ್ರ್ದ ರಂಜಿಸುಗುಂ ಬನವಾಸೆದೇಶದೊಳ್ ||"

ಕಳಚುರಿ ವಂಶದ ಬಿಜ್ಜಲನೃಪನ ಸುಮಾರು ಕ್ರಿ.ಶ. ೧೧೬೦ ನೆಯ ವರ್ಷದ ಶಾಸನವೊಂದು[20] ದಾವಣಗೆರೆ ತಾಲ್ಲೂಕು ಹರಿಹರದಲ್ಲಿನ ಹರಿಹರೇಶ್ವರ ದೇವಸ್ಥಾನ ದಲ್ಲಿದೆ. ಅದರಲ್ಲಿನ ಬನವಾಸಿ ಮಂಡಳದ ವರ್ಣನೆ ನೋಡಿ :

---

[19] *Ibid*, B.K. 20 of 1933-34.
[20] *Ep. Carn*, Vol. XI, Dg. 35.

"ಇದು ಸುಖದಾಗರಂ ಸಿರಿಯ ಪುಟ್ಟಿದ ಸಾಗರವಾರಯಲ್ಸಮ
ಭ್ಯುದಯದ ಗೊತ್ತು ಸತ್ಯದ ತವರ್ಮ್ಮನೆ ಚಿತ್ತಜನಿಕ್ಕೆ ದಾಣಮು
ನ್ಮದಯುವತೀಜನಂಗಳಿ ಬೆವಟ್ಟು ಬುಧಾಳಿಯ ಜನ್ಮಭೂಮಿಯೆಂ
ಬುದನೆ[ನೆ][21] ಶೋಭೆಯಂ ತಳೆದುದಿಂತನಿಶಂ ಬನವಾಸಿಮಣ್ಡಳಂ ||

ದೆಸೆಯಂ ಪೊಂಬಂಣ್ಣದಿಂ ತಿಂಬುವ ಕಳಮವನಂ ದಿವ್ಯಸೌರಭ್ಯದಿಂದಾ
ಗಸಮಂ ನಿರ್ವಾ್ಯಕುಳಂ ಪೂರಿಪ ಕುಸುಮವನಂ ಧಾತ್ರಿಯಂ ನಿರ್ಯ್ಯದಂಭ
ಪ್ರಸರಶ್ರೋತಂಗಳಿಂದಂ ಜಳಮಯಮೆನಿಪಾನಾಳಿಕೇರೀವನಂ ಸ
ದ್ವಿಸದಿಂ ಹಂಸಾಳಿಯಂ ರಕ್ಷಿಪ ಜಳಜವನಂ ರಯ್ಯನಾನಾಡೊಳೆಲ್ಲಂ ||"

ಸುಮಾರು ಕ್ರಿ.ಶ. ೧೪೩೦ ರ ಸುಮಾರಿಗೆ ವಿಜಯನಗರದ ಅಧಿಪತಿಯಾದ ಪ್ರೌಢದೇವರಾಯನ ಸಮಕಾಲೀನನಾದ ಕವಿ ಚಾಮರಸನು ತನ್ನ 'ಪ್ರಭುಲಿಂಗ ಲೀಲೆ'ಯಲ್ಲಿ ಬನವಾಸಿಯನ್ನು ವರ್ಣಿಸಿರುವ ಬಗೆ ಹೀಗೆ:

"ಕೇರಿಕೇರಿಯ ತಳಿರಿಡಿದ ಗುಡಿ |
ತೋರಣಂಗಳ ಪರಿಮಳಿಸುತಿಹ |
ಸಾರಣೆಯ ಕಾರಣೆಯ ಗಂಧೋದಕದ ಚಳೆಯುಗಳ ||
ಸೌರಭದ ಪೂವಲಿಗಳಲಿ ಶೃಂ |
ಗಾರಿಸಿದ ಬೀದಿಗಳ ಸೊಬಗಿನ |
ಸಾರದಲಿ ಸಮನಿಸಿದುದತಿ ಸೌರಭದ ಬನವಸೆಯು ||"

ಇಂತೆಲ್ಲಾ ವರ್ಣಿಸಲಾಗಿರುವ ಬನವಾಸಿದೇಶ ತುಂಗಭದ್ರೆಯಿಂದ ಹಿಡಿದು ವರದಾ ನದಿಯವರೆಗೂ ವಿಸ್ತರಿಸಿತ್ತು. ಧಾರವಾಡ ಜಿಲ್ಲೆಯ ರಾಣಿಬೆನ್ನೂರು ತಾಲ್ಲೂಕಿನ ನದಿಹರಳಹಳ್ಳಿಯಲ್ಲಿನ ಕಲಚುರಿ ವಂಶದ ವೀರಬಿಜ್ಜಣ ದೊರೆಯ ಶಾಸನದಲ್ಲಿ[22] "ಧರೆವೆತ್ತ . . . ತುಂಗಭದ್ರೆಯ ವರದೆಯ ಮಧ್ಯಪ್ರದೇಶದೊಳ್ಸೊಗ ಯಿಸುಗುಂ ಸಿರಿಯತವರ್ಮ್ಮನೆ ಸೌಖ್ಯಾಕರಮೆನೆ ಬನವಾಸಿದೇಶಮತುಳವಿಳಾಸಂ" ಎಂದು ಬನವಾಸಿ ದೇಶದ ವಿಸ್ತೀರ್ಣವನ್ನು ಕುರಿತು ಹೇಳಲಾಗಿದೆ. ೧೨,೦೦೦ ಗ್ರಾಮಗಳನ್ನೊಳಕೊಂಡಿದ್ದ ಈ ಬನವಾಸಿದೇಶ ಶಾಸನಗಳಲ್ಲಿ ಬನವಾಸಿ ಪನ್ನಿಚ್ಛಾ ಸಿರವೆಂದು ಹೆಸರಾಗಿದೆ.

ಬೌದ್ಧರು, ಜೈನರು ಹಾಗೂ ಶೈವರಾದಿಯಾಗಿ ಎಲ್ಲ ಮತದವರಿಗೂ ಬನವಾಸಿ ಯಾತ್ರಾಸ್ಥಳದಂತಿದ್ದಿತು. ಭೌದ್ಧಮತ ಪ್ರಚಾರಕ್ಕಾಗಿ ಬನವಾಸಿಯನ್ನು ಕೇಂದ್ರ

---

[21] ಈ ಪಾದದಲ್ಲಿ ಒಂದು ಅಕ್ಷರ ಕಡಿಮೆಯಿದೆ.

[22] *A.R.S.I.E*, B.K. 58 of 1934-35.

ಗಳಲ್ಲೊಂದಾಗಿ ಮಾಡಿ ಅಲ್ಲಿಗೆ ಭಿಕ್ಕು ಒಬ್ಬರನ್ನು ಕಳುಹಿದುದನ್ನು ಈ ಮೊದಲೇ ತಿಳುಹಲಾಗಿದೆ. ಜೈನರಿಗೂ ಸಹ ಬನವಾಸಿ ಅಂತೆಯೇ ಒಂದು ಪವಿತ್ರಸ್ಥಳ ವಾಗಿದ್ದಿತು. ಬನವಾಸಿಯಲ್ಲಿ ಜೈನರ ಬಸದಿಯನ್ನು ಇಂದಿಗೂ ಕಾಣಬಹುದು. ಕೊಂಡಕುಂದಾನ್ವಯ, ಪುಸ್ತಕಗಚ್ಛ, ದೇಶಿಗಣದ ಸಕಳಚಂದ್ರಭಟ್ಟಾರಕರ ಶಿಷ್ಯೆ ತಿಪ್ಪಿಸೆಟ್ಟಿ ಸಾತಯ್ಯನ ಪತ್ನಿ ಭೋಗವೆ ಎಂಬಾಕೆ ಕದಂಬಚಕ್ರವರ್ತಿ ವಿರಮ (ವಿಕ್ರಮ?) ದೇವನ ಆಳ್ವಿಕೆಯ ೧೨ ನೆಯ ವರ್ಷ, ದುರ್ಮತಿ ಸಂವತ್ಸರದ ಕಾರ್ತಿಕ ಬಹುಳ ಪಂಚಮಿ ಸೋಮವಾರದಂದು (೨೫-೧೦-೧೦೮೧ A.D.) ಸಮಾಧಿಯ ಮೂಲಕ ಜೀವ ತೊರೆದಳೆಂದು ಅಲ್ಲಿನ ಜೈನಬಸ್ತಿಯ ಸಮೀಪದ ಕಲ್ಲಿನಲ್ಲಿನ ಶಾಸನ[23] ತಿಳಿಸುತ್ತದೆ.

ಮಧುಕೇಶ್ವರ ದೇವಾಲಯದಲ್ಲಿರುವ ಶಾಸನಗಳಲ್ಲಿ ಒಂದಾದ, ಕಂಭವೊಂದರ ಮೇಲಿರುವ ಶಾಸನ[24] ಕನ್ನಡ, ಗ್ರಂಥ ಮತ್ತು ನಾಗರೀ ಈ ಮೂರು ಲಿಪಿಗಳಲ್ಲಿದೆ. ಇಂತಹ ಶಾಸನ ಕರ್ನೂಲು ಜಿಲ್ಲೆಯ ನಂದಿಕೊಟ್ಕೂರು ತಾಲ್ಲೂಕಿನ ಮುಸಲಿ ಮಡುಗು ಎಂಬ ಹಳ್ಳಿಯಲ್ಲಿರುವ ಭೂತೇಶ್ವರ ದೇವಾಲಯದ ಮಂಟಪದ ಕಂಬದ ಮೇಲೂ,[25] ಅದೇ ಜಿಲ್ಲೆಯ ನಂದ್ಯಾಲ ತಾಲ್ಲೂಕಿನ ಪಾನೆಂ ಎಂಬಲ್ಲಿ ಪಾಣಿಕೇಶ್ವರ ದೇವಾಲಯದ ಮುಖಮಂಟಪದ ಕಂಬದ ಮೇಲೂ[26] ಸಹ ದೊರೆತಿದೆ. ಮೇಲ್ಕಂಡ ಶಾಸನದ ಪಾಠ "ಶ್ರೀ ಜರುಗಂಟ್ಯಂತಿಕ ಮಾಚಿರಾಜುಪಲ್ಲಿಜಃ (ನಿ?) ಶ್ರೀಗಿರಿ ಶೃಂಗವಾಸೀ ಶ್ರೀ ಪಂಡಿತಾರಾಧ್ಯ ಗೃಹಸ್ಯ ದಾಸೋ ವಿಭೂತಿ ಗೌರಶ್ಯರಣಾ ಗತೋೀವಃ" ಎಂದಿದೆ. ಈ ಶಾಸನಗಳೂ ವಿಭೂತಿಯಾದ ಗೌರಯ್ಯನೊಬ್ಬನಿಗೇ ಅನ್ವಯಿಸುತ್ತದೆಂದು ತೋರುತ್ತದೆ. ಈತನು ಮಾಚಿರಾಜುಪಲ್ಲಿಯಲ್ಲಿ ಜನ್ಮತಾಳಿದವ ನಾಗಿ ಪಂಡಿತಾರಾಧ್ಯನ ದಾಸನೆಂದು ಇದು ತಿಳಿಸುತ್ತದೆ. ಈ ಪಂಡಿತಾರಾಧ್ಯರು ಬಸವಣ್ಣನವರ ಸಮಕಾಲೀನರಾಗಿದ್ದು ಬಸವಣ್ಣನವರಂತೆಯೇ ವೀರಶೈವಮತ ಪ್ರಚಾರದಲ್ಲಿ ನಿರತರಾಗಿದ್ದರು. ತಮ್ಮ ಪಂಚಮಠಗಳಲ್ಲಿ ಒಂದನ್ನು ಶ್ರೀಶೈಲ (ಶ್ರೀಪರ್ವತ) ದಲ್ಲಿ ಸ್ಥಾಪಿಸಲಾಗಿದೆಯೆಂದೂ, ಅದನ್ನು ಮಲ್ಲಿಕಾರ್ಜುನ ಪಂಡಿತಾ ರಾಧ್ಯರು ಸ್ಥಾಪಿಸಿದರೆಂದೂ ವೀರಶೈವರೂ ನಂಬುತ್ತಾರೆ. ಮೇಲ್ಕಂಡ ವಿಭೂತಿ ಗೌರಯ್ಯನು ಬಹುಶಃ ಆಗ್ಗೆ ಸುಪ್ರಸಿದ್ಧವಾದ ಬನವಾಸಿ ಕ್ಷೇತ್ರಕ್ಕೆ ಯಾತ್ರಾರ್ಥ ವಾಗಿ ಬಂದಿರಬಹುದೆಂದು ಇದರಿಂದ ತಿಳಿಯಬರುತ್ತದೆ.

---

[23] *Ibid*, B.K. 143 of 1935-36.
[24] *Ibid*, B.K. 128 of 1935-36.
[25] *Ibid*, 418 and 419 of 1926.
[26] *Ibid*, 168 and 169 of 1913.

ಬನವಾಸಿಯ ಕೋಟೆ ಬಹಳ ಪುರಾತನವಾದದ್ದು. ಮೇಲೆ ಕಾಣಿಸಿದ ಐಹೊಳೆ ಶಾಸನ ಪದ್ಯ ಬನವಾಸಿ ದುರ್ಗವನ್ನು ಹೆಸರಿಸುತ್ತದೆ. ಚಂದ್ರವಳ್ಳಿಯಲ್ಲಿ ದೊರೆತಿರುವ ಸುಮಾರು ಕ್ರಿ.ಶ. ೧೦೦ ನೆಯ ವರ್ಷದ್ದಾಗಿರಬಹುದಾದ ಇಟ್ಟಿಗೆಗಳಂತಹ ಪುರಾತನ ಇಟ್ಟಿಗೆಗಳನ್ನು ಈ ಕೋಟೆಯ ಗೋಡೆಯಲ್ಲಿ ಕಾಣಬಹುದು. ಈ ಇಟ್ಟಿಗೆಯ ಗೋಡೆಯ ಮೇಲೆ ಜಂಬಿಟ್ಟಿಗೆಯ ಗೋಡೆಯ (Laterite) ದಪ್ಪಗೋಡೆ ಕಟ್ಟಲಾಗಿದೆ. ಇದನ್ನು ವಿಜಯನಗರದ ಕಾಲದಲ್ಲಿ ಕಟ್ಟಿರಬಹುದೆಂದು ತೋರುತ್ತದೆ.

ಮಧುಕೇಶ್ವರ ದೇವಾಲಯದಲ್ಲಿನ ಶಿವಲಿಂಗ ಬಹಳ ಪುರಾತನವಾದದ್ದು. ಆದರೂ ಅದರ ಕಾಲದ ಬಗ್ಗೆ ಸ್ಪಷ್ಟವಾಗಿ ಹೇಳಲಾಗದು. ದೇವಾಲಯದ ಗರ್ಭ ಗೃಹ ಬಹುಶಃ ಕ್ರಿಸ್ತ ಶಕ ೯೦೦ ರ ವೇಳೆಗೆ ಕಟ್ಟಲ್ಪಟ್ಟಿರಬಹುದು. ಮುಖಮಂಟಪ ದಲ್ಲಿನ ಕಂಬಗಳಲ್ಲಿ ಮಧ್ಯದ ನಾಲ್ಕು ಹೊಯ್ಸಳರ ಕಾಲದವು. ಆದರೆ ಆ ಮಂಟಪ ವಿಜಯನಗರದ ರಾಜನಾದ ಹರಿಹರನ ಕಾಲದಲ್ಲಿ ಕಟ್ಟಲ್ಪಟ್ಟಿದ್ದಿತು. ಅಲ್ಲಿ ದೊರೆತಿರುವ ಬುಕ್ಕರಾಯನ ಶಾಸನಗಳೆರಡರಲ್ಲೂ,[27] ಮತ್ತು ಹರಿಹರರಾಯನ ಶಾಸನದ[28]ಲ್ಲೂ ಮಾಧವಾಮಾತ್ಯ, ಮಾಧವಾಂಕ, ಮಾಧವ ದಂಡನಾಥ ಎಂದು ವಿವಿಧವಾಗಿ ಕರೆ ಯಲ್ಪಡುವ ಬಹುಶಃ ಒಬ್ಬನೇ ಆದ ಅವರ ಮಂತ್ರಿ ಚಾಮುಂಡ ಮಾಧವನು ನಮೂದಿಸಲ್ಪಟ್ಟಿರುವುದರಿಂದ ಅವನೇ ಈ ಮಂಟಪದ ಕಟ್ಟುವಿಕೆಗೆ ಕಾರಣನಾಗಿರ ಬಹುದು[29]. ಈ ದೇವಾಲಯದಲ್ಲಿರುವ ಕಲ್ಲಿನ ಮಂಚ ಮತ್ತು ಪಾರ್ವತೀಗುಡಿಯಲ್ಲಿನ ಕಲ್ಲುಮಂಟಪಗಳು ಸೋದೆಯ ಅರಸರಾದ ರಘುನಾಥ ಮತ್ತು ಸದಾಶಿವರಾಜೇಂದ್ರ ಇವರುಗಳು ದೇವರಿಗೆ ಮಾಡಿಸಿಕೊಟ್ಟದ್ದು.[30]

ಇಂತು ಪುರಾತನವಾದ ಬನವಾಸಿ ಇಂದು ಹೇಳ ಹೆಸರಿಲ್ಲದ ಹಳ್ಳಿ ಯಾಗಿದೆ.[31]

ಬ. ರಾ. ಗೋಪಾಲ್

---

[27] *Ibid*, B.K. 130 and 142 of 1935-36.

[28] *Ibid*, B.K. 127 of 1935-36.

[29] *Annual Report of Archaeological Survey of Mysore*, 1931.

[30] *A.R.S.I.E*, B.K. 117, 125 of 1935-36.

[31] ಈ ಲೇಖನಕ್ಕಾಗಿ ಉಪಯೋಗಿಸಿರುವ ಅಪ್ರಕಾಶಿತ ಶಾಸನಗಳನ್ನು ನೋಡಿ ಈ ಲೇಖನ ಸಿದ್ಧಗೊಳಿಸಲು ಅನುಮತಿ ಕೊಟ್ಟ ಪ್ರಾಚೀನ ಶಿಲಾಶಾಸನದ ಇಲಾಖೆಯ ಎಪಿಗ್ರಾಫಿಸ್ಟ್‌ರಿಗೆ ನಾನು ಋಣಿಯಾಗಿದ್ದೇನೆ.

## ಯಾತ್ರೆ

ಜೀವನದ ಬೇಗೆಯುಲಿ ಬೆಂದು ಕಂಗೆಡಲು,
ಚಿತ್ತವನು ಕಲಕಿರಲು ಬೇಸರದ ಮುಗಿಲು—
ಗೆಳೆಯರೇ, ಪಯಣವಿದೊ ಹೊಸ ಲೋಕಕೆ;
ತೆರಳೋಣ ಬನ್ನಿ ದೂರದ ನಾಕಕೆ!

ಗಾಳಿಯರಿಯದೊ ಎಲ್ಲಿ ಜಗದ ಗಲಿಬಿಲಿಯ,
ಎಲ್ಲಿ ಸೊಲ್ಲಡಗುವುದೊ ಇಂದ್ರಿಯದ ಹುಲಿಯ,
ಮನವನುಭವಿಪುದೆಲ್ಲಿ ಶಾಂತತೆಯು ನೆಲೆಯ—
ಅಲ್ಲಿಗೈದುವ ಪಾವನದ ತಾಣಕೆ;
ನೂತನೋತ್ಸಾಹ ಬರಲೀ ಪ್ರಾಣಕೆ!

ಕಾಮಿನಿಯ, ಕಾಂಚನದ ಕಗ್ಗವನು ತೊರೆದು,
ಹೊಸ ಬೆಳಕು, ಗಾಳಿಗೆದೆ ಕಿಟಕಿಯನು ತೆರೆದು,
ಸ್ವಾರ್ಥತೆ, ಅಹಂಕೃತಿಯ ಶೃಂಖಲೆಯ ಮುರಿದು—
ಹೋಗೋಣ ಬನ್ನಿರೈ ಇಹವ ಮರೆತು,
ಆತ್ಮಾನುಸಂಧಾನವನ್ನು ಕುರಿತು!

ಎಲ್ಲಿ ಅಳಿವುದೊ ಎಲ್ಲ ಚಿಂತೆಗಳ ಭಾರ
ಎಲ್ಲಿ ಉಣ್ಮುವುದೊ ಸುಪವಿತ್ರ ಓಂಕಾರ,
ಎಲ್ಲಿ ಚೇತನಕೆ ಸಮನಿಪುದೊ ಉದ್ಧಾರ—
ಆ ಎಡೆಗೆ ಬನ್ನಿ—ಮಂಗಳ ಧಾಮಕೆ;
ಅಲ್ಪವನು ಬಿಟ್ಟು ಸುಖವಿಹ ಭೂಮಕೆ!

ಎಲ್ಲಿ ಎಲ್ಲವು ನಶಿಸಿ ಶೂನ್ಯಸುಖವಹುದೊ,
“ನಾನು” ಸತ್ತೆಲ್ಲಿ ಬರಿ “ನೀನು” ಉಳಿಯುವುದೊ,
ನೀರವತೆಯೆಲ್ಲಿ ನುಡಿಪೂಜೆಯೆನಿಸುವುದೊ—
ಬನ್ನಿರಲ್ಲಿಗೆ ಸುಧಾರಸಪಾನಕೆ;
ಕಿವಿಗೊಡಿರಿ: ಗುರುಕೃಪೆಯ ಆಹ್ವಾನಕೆ!

ಶ್ರೀರಮಣ ಸಾನ್ನಿಧ್ಯದಾ ಅರುಣಗಿರಿಗೆ,
ಯೋಗಿ ಶ್ರೀ ಅರವಿಂದರಾ ಪಾಂಡಿಚೆರಿಗೆ,
ಶ್ರೀ ರಾಮಕೃಷ್ಣರಾ ದಕ್ಷಿಣೇಶ್ವರಕೆ,—
ಬಾ, ತಪೋಮಂದಿರಕೆ, ಮೌನಗಹ್ವರಕೆ!

ಮೈತೊಳೆದು, ಮನತೊಳೆದು, ಕೊಳೆ ಕಳೆದು ಬನ್ನಿ,
ಭಕ್ತಿಜಲದಲಿ ಮಿಂದು ಕೈಮುಗಿದು ಬನ್ನಿ,
ಅಡಿಗಡಿಗೆ ರೋಮಾಂಚಗೊಳುತಲೈತನ್ನಿ,
ಮುಳುಗಲು ಸಮಾಧಿಯಲಿ ಎಲ್ಲ ನಡೆತನ್ನಿ,
ನೆಚ್ಚಿನಾ ನೇಹಿಗರೆ, ಬನ್ನಿ, ಓ, ಬನ್ನಿ ;
ವಿಫಲಗೊಳಿಸದೆ ಬಾಳನರಿಯಲ್ಕೆ ನನ್ನಿ !

—ಸಿ. ಪಿ. ಕೆ.

# ಕಾವ್ಯಾವಲೋಕನ

*Contemporary Indian Literature*—Published by the Sahitya Academy, New Dellhi; 1957; Pp. 299; Price Rs. 2·50.

ದೇಶದ ಪ್ರಗತಿಗೆ ದೊಡ್ಡದೊಡ್ಡ ಅಣೆಕಟ್ಟುಗಳೂ ಯಂತ್ರೋದ್ಯಮಗಳೂ ಅತ್ಯಗತ್ಯ. ಸಾಹಿತ್ಯ ಸಂಸ್ಕೃತಿಗಳ ಪ್ರಸಾರವೂ ಅಷ್ಟೇ ಅಗತ್ಯ. ನಮ್ಮ ಪುಣ್ಯ—ಸ್ವಾತಂತ್ರ್ಯೋತ್ತರ ಸರ್ಕಾರ ಇದನ್ನು ಸಂಪೂರ್ಣವಾಗಿ ಮನಗಂಡಿದೆ. ಅದಕ್ಕಾಗಿ ನಾನಾ ರೀತಿಯಲ್ಲಿ ಶ್ರಮಿಸುತ್ತಿದೆ. ಇದರ ಹಾದಿಯಲ್ಲಿ ನಡೆಯುತ್ತಿರುವ ಅನೇಕ ಶ್ರದ್ಧಾಪೂರ್ವಕ ಪ್ರಯೋಗಗಳಲ್ಲಿ 'ಸಮಕಾಲೀನ ಭಾರತೀಯ ಸಾಹಿತ್ಯ' ಎಂಬ ಹೆಸರಿನ ಲೇಖನಮಾಲೆಗಳ ಸಂಕಲನವಾದ ಈ ಕೃತಿಯ ಪ್ರಕಟಣೆಯೂ ಒಂದು.

ತನ್ನ ನೆರೆಯನಾಡಿನ ಸಾಹಿತ್ಯದಲ್ಲಿ ಏನು ನಡೆಯುತ್ತಿದೆ ಎಂಬ ಕುತೂಹಲ, ಅದರಿಂದ ತನ್ನ ಕಲಾಕೃತಿಯನ್ನು ಬೆಲೆಕಟ್ಟುವ, ಅದರ ಪರಿಪೂರ್ಣತೆಗೆ ನೆರವನ್ನು ಪಡೆಯುವ ಹಂಬಲ ಪ್ರತಿಯೊಬ್ಬ ಸಾಹಿತಿಗೂ ಇದ್ದೇ ಇರುತ್ತದೆ. ಸಹೃದಯರಿಗೂ ತಮ್ಮ ಸಾಹಿತಿಗಳು ಏನನ್ನಾದರೂ ಸಾಧಿಸಿದ್ದಾರೆಯೇ, ನೆರೆಯ ನಾಡಿನವರೊಡನೆ ಹೋಲಿಸಿ ನೋಡೋಣ ಎಂಬ ಬಯಕೆ ಮೂಡುವುದೂ ಸಹಜವೇ. ಆ ದೃಷ್ಟಿಯಿಂದ ಇಂತಹ ಕೃತಿಗಳ ಉಪಯೋಗ ಹೆಚ್ಚು.

ಭಾರತದ ಉಪಾಧ್ಯಕ್ಷರಾದ ಡಾ॥ ರಾಧಾಕೃಷ್ಣನ್ ಈ ಗ್ರಂಥಕ್ಕೆ ಮುನ್ನುಡಿ ಬರೆಯುತ್ತಾ ಅಮೂಲ್ಯವಾದ ಈ ಮಾತುಗಳನ್ನು ಹೇಳಿದ್ದಾರೆ: "ಸಾಹಿತ್ಯ ಪವಿತ್ರವಾದ ಸಾಧನ. ಅದನ್ನು ಸರಿಯಾಗಿ ಉಪಯೋಗಿಸಿ ನಾವು ಅಜ್ಞಾನ ಅಸೂಯೆಗಳೊಡನೆ ಹೋರಾಡಬಹುದು. ಜತೆಗೆ ರಾಷ್ಟ್ರೀಯ ಐಕ್ಯತೆಯನ್ನೂ ಅಂತರರಾಷ್ಟ್ರೀಯ ಸೌಹಾರ್ದವನ್ನೂ ಸಾಧಿಸಬಹುದು. ಸಾಹಿತ್ಯ ಹಿಂದಿನದನ್ನು ಪ್ರತಿಧ್ವನಿಸುವ ವಾಣಿಯಾಗಿರಬೇಕು; ಇಂದನ್ನು ಪ್ರತಿಫಲಿಸಬೇಕು; ಮುಂದನ್ನು ರೂಪಿಸಬೇಕು. ಸ್ಫೂರ್ತವಾಣಿ, 'ತೇಜೋಮಯ ವಾಕ್' ತನ್ನ ಓದುಗರಿಗೆ ಜೀವನದ ಬಗೆಗೆ ಮಾನವೀಯವೂ ವಿಶಾಲವೂ ಆದ ದೃಷ್ಟಿಯನ್ನು ಬೆಳೆಸಿಕೊಳ್ಳಲು, ತಾವು ಜೀವಿಸುತ್ತಿರುವ ಜಗತ್ತನ್ನು ಅರಿಯಲು, ತಮ್ಮನ್ನು ತಾವು ಅರ್ಥಮಾಡಿಕೊಳ್ಳಲು, ಭವಿಷ್ಯವನ್ನು ಜಾಣ್ಮೆಯಿಂದ ರೂಪಿಸಲು ನೆರವು ನೀಡುತ್ತದೆ."

ಭಾರತದ ಹದಿನಾಲ್ಕು ಪ್ರಧಾನಭಾಷೆಗಳು, ಜತೆಗೆ ಇಂಗ್ಲಿಷ್ ಇವುಗಳಲ್ಲಿ ರಚಿತವಾಗಿರುವ ಸಮಕಾಲೀನ ಸಾಹಿತ್ಯದ ಸಮೀಕ್ಷೆಗಾಗಿ ಕೇಂದ್ರ ಸರ್ಕಾರ ಅನೇಕ

ಪ್ರತಿಭಾನ್ವಿತ ವಿದ್ವಾಂಸರನ್ನು ಆರಿಸಿಕೊಂಡಿದೆ. ಅಸ್ಸಾಮೀ, ಬಂಗಾಳೀ, ಗುಜರಾತೀ, ಹಿಂದೀ, ಕನ್ನಡ, ಕಾಶ್ಮೀರಿ, ಮಲಯಾಳಂ, ಮರಾಠೀ, ಒರಿಯ, ಪಂಜಾಬೀ, ಸಂಸ್ಕೃತ, ತಮಿಳು, ತೆಲುಗು ಮತ್ತು ಉರ್ದು ಈ ಸಾಹಿತ್ಯಗಳನ್ನು ಕುರಿತು ಕ್ರಮವಾಗಿ ವಿರಿಂಚಿಕುಮಾರ್ ಬರುವಾ, ಕಾಜಿ ಅಬ್ದುಲ್‌ವಾದೂದ್, ಮನಸುಖ ಲಾಲ್ ಝುವೇರಿ, ಎಸ್. ಎಚ್. ವಾತ್ಸ್ಯಾಯನ್, ವಿ. ಕೆ. ಗೋಕಾಕ್, ಪಿ. ಎಸ್. ಪುಷ್ಪ, ಸಿ. ಕುನ್ಹನ್‌ರಾಜಾ, ಎಂ. ವಿ. ರಾಜಾಧ್ಯಕ್ಷ, ಮಯಧರ್ ಮಾನ್‌ಸಿನ್ಹ, ಖುಷ್ವಂತ್‌ಸಿಂಗ್, ವಿ. ರಾಘವನ್, ಟಿ. ಪಿ. ಮೀನಾಕ್ಷಿ ಸುಂದರಂ, ಕೆ. ರಾಮ ಕೋಟೀಶ್ವರರಾವ್ ಮತ್ತು ಖ್ವಾಜಾ ಅಹಮದ್ ಫರೂಕಿ ಇವರುಗಳು ಲೇಖನಗಳನ್ನು ಸಿದ್ಧಪಡಿಸಿದ್ದಾರೆ. ಜತೆಗೆ ಭಾರತೀಯ ಲೇಖಕರಿಂದ ಸೃಷ್ಟಿಯಾಗಿರುವ ಇಂಗ್ಲಿಷ್ ಸಾಹಿತ್ಯವನ್ನು ಕುರಿತು ಕೆ. ಆರ್. ಶ್ರೀನಿವಾಸ ಅಯ್ಯಂಗಾರ್ ಅವರು ಲೇಖನ ಬರೆದಿದ್ದಾರೆ. ಇದು ಈ ಪುಸ್ತಕದ ಒಂದು ವೈಶಿಷ್ಟ್ಯ.

ಪ್ರತಿಯೊಂದು ಸಾಹಿತ್ಯವನ್ನು ಕುರಿತ ಸಮೀಕ್ಷೆಯಲ್ಲಿ ಸಾಮಾನ್ಯವಾಗಿ ಈ ಕ್ರಮವನ್ನು ಅನುಸರಿಸಲಾಗಿದೆ: ಮೊದಲು ಈ ಸಾಹಿತ್ಯದ ಹುಟ್ಟು ಮತ್ತು ಬೆಳವಣಿಗೆಯ ಸಂಕ್ಷೇಪ ಇತಿಹಾಸ. ಅನಂತರ ಅದ್ಯಯುಗದ ಸಾಹಿತ್ಯ ನಿರ್ಮಾಣ. ಸಂಸ್ಕೃತ ಸಾಹಿತ್ಯ ಒಂದನ್ನು ಕುರಿತು ಮಾತ್ರ ಮುಂದೆ ಅದನ್ನು ಬೆಳೆಸಿಕೊಳ್ಳುವ ಬಗೆಗೆ ಸಾಹಿತಿಗಳು ಕೈಗೊಳ್ಳಬೇಕಾಗಿರುವ ಕ್ರಮಗಳನ್ನು ಕುರಿತ ಸೂಚನೆ.

ಸಮಕಾಲೀನ ಸಾಹಿತ್ಯವನ್ನು ಕುರಿತು ಬರೆಯುತ್ತಾ ಕೆಲವು ಲೇಖಕರು— ನಿದರ್ಶನಕ್ಕೆ ಗುಜರಾತೀ ಸಾಹಿತ್ಯವನ್ನು ಕುರಿತು ಬರೆದಿರುವ ಮನಸುಖಲಾಲ್ ಝುವೇರಿಯವರು ಮತ್ತು ಮರಾಠೀ ಸಾಹಿತ್ಯವನ್ನು ಕುರಿತು ಶ್ರೀ ರಾಜಾಧ್ಯಕ್ಷರು— ಸಾಹಿತ್ಯದ ವಿವಿಧ ಪ್ರಕಾರಗಳನ್ನು ಗಮನದಲ್ಲಿಟ್ಟುಕೊಂಡು ಕಾವ್ಯ, ನಾಟಕ, ಕಾದಂಬರಿ, ಇತ್ಯಾದಿ ತಲೆಬರಹಗಳಲ್ಲಿ ಆಯಾ ಸಾಹಿತ್ಯಗಳ ಪ್ರಗತಿಯನ್ನು ಚಿತ್ರಿಸಿದ್ದಾರೆ. ಎಲ್ಲ ಲೇಖಕರೂ ಈ ವಿಧಾನವನ್ನು ಅನುಸರಿಸಿದ್ದರೆ ಕೆಲವು ಲೇಖನಗಳಲ್ಲಿ ಆಗಿರುವಂತೆ ಬರಿಯ ಹೆಸರುಗಳ ಪಟ್ಟಿಯನ್ನು ಓದಬೇಕಾಗಿ ಬರುವ ಬೇಸರವನ್ನು ಕಳೆಯಬಹುದಾಗಿತ್ತು.

ಎಲ್ಲ ಲೇಖನಗಳನ್ನು ಕುರಿತು ವಿಮರ್ಶೆ ನಡೆಸುವ ಶಕ್ತಿ ಪ್ರಕೃತ ವಿಮರ್ಶಕನಿಗಿಲ್ಲ. ಅದನ್ನು ನಡೆಸಲು ಇರಬೇಕಾದ ಆಯಾ ಸಾಹಿತ್ಯಗಳ ಸಂಪೂರ್ಣ ಜ್ಞಾನದ ಅಭಾವವೇ ಅದಕ್ಕೆ ಕಾರಣ. ಕನ್ನಡ ಸಾಹಿತ್ಯವನ್ನು ಕುರಿತು ಶ್ರೀ ಗೋಕಾಕರು ನಡೆಸಿರುವ ಸಮೀಕ್ಷೆಯ ಬಗೆಗೆ ನಾಲ್ಕು ಮಾತುಗಳನ್ನು ಹೇಳುವ ಪ್ರಯತ್ನ ಇಲ್ಲಿ ನಡೆದಿದೆ.

ಈ ಪುಸ್ತಕದ ಉಳಿದ ಲೇಖಕರಂತೆ ಶ್ರೀ ಗೋಕಾಕರೂ ತುಂಬ ಶ್ರಮವಹಿಸಿ ವಿಷಯ ಸಂಗ್ರಹಣಮಾಡಿದ್ದಾರೆ. ಅದಕ್ಕಾಗಿ ಅವರು ಅಭಿನಂದನೀಯರು.

ಸಮಕಾಲೀನ ಸಾಹಿತ್ಯವನ್ನು ನಿಷ್ಪಕ್ಷಪಾತವಾಗಿ ಅಳೆಯುವುದು ಕಷ್ಟಸಾಧ್ಯವಾದುದು ಎಂಬುದು ಎಲ್ಲರೂ ಒಪ್ಪುವ ಮಾತು. ವಿಮರ್ಶಕ, ಲೇಖಕನೂ ಆಗಿರುವಾಗ ಆ ಕಷ್ಟ ಮತ್ತಷ್ಟು ಹೆಚ್ಚುತ್ತದೆ. ಆದರೆ ನಮ್ಮ ಪ್ರಾಚೀನ ಸಾಹಿತ್ಯ ಸಂಪತ್ತನ್ನು ಸರಿಯಾಗಿ ಪರಿಚಯಮಾಡಿಕೊಂಡರೆ, ಇಂಗ್ಲಿಷ್ ಮುಂತಾದ ಸಾಹಿತ್ಯಗಳ ಪರಿಚಯವನ್ನೂ ತಕ್ಕಮಟ್ಟಿಗಾದರೂ ಪಡೆದುಕೊಂಡರೆ ನಮ್ಮ ಅರ್ವಾಚೀನ ಕವಿಗಳು ಈ ಸಾಹಿತ್ಯದ ಸಂಪತ್ತನ್ನು ಎಷ್ಟರಮಟ್ಟಿಗೆ ಹೆಚ್ಚಿಸಿದ್ದಾರೆ ಎಂಬುದರ ಸ್ಥೂಲವಾದ ಅಂದಾಜನ್ನಾದರೂ ಕೊಡುವುದು ಕಷ್ಟವಾಗಲಾರದು. ಇಂತಹ ಒಂದು ಮಹೋದ್ಯಮದಲ್ಲಿ ತೊಡಗಿದಾಗ ಲೇಖಕ ತನ್ನ ಪ್ರಿಯಾಪ್ರಿಯಗಳನ್ನೂ ಪೂರ್ವಗ್ರಹಗಳನ್ನೂ ಬಹುಮಟ್ಟಿಗೆ ಹಿಂದಕ್ಕಿಡುವುದು ಅತ್ಯಗತ್ಯ. ಶ್ರೀ ಗೋಕಾಕರ ಲೇಖನವನ್ನು ನೋಡಿದರೆ ಈ ಕಾರ್ಯ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ನಡೆಯಬೇಕಾಗಿತ್ತು ಎನಿಸುತ್ತದೆ.

ಇಂದಿನ ಸಾಹಿತಿಗಳನ್ನು ಕುರಿತು ಅವರು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ವಿಮರ್ಶಿಸುವ ಮುನ್ನ ಸ್ವಲ್ಪ ಹಿಂದಿನ ಕವಿಗಳನ್ನು ಕುರಿತು ಅವರು ನುಡಿಯುವಾಗ ಅಭಿಮಾನ ಎಷ್ಟು ಅತಿರೇಕಕ್ಕೆ ಹೋಗಬಲ್ಲುದು ಎಂಬುದಕ್ಕೆ ಮುದ್ದಣನ 'ರಾಮಾಶ್ವಮೇಧ'ವನ್ನು ಕುರಿತು ಹೇಳಿರುವ ಈ ಮಾತುಗಳನ್ನು ಗಮನಕ್ಕೆ ತರಬಹುದು.

"The aesthetic crystallisation of the new consciousness took place on a grand scale in Muddana's Ramashwamedha—a 'novel' epic presenting a traditional legend in a framework which is new because of the vision of life presented in it—The love of Muddana, the narrator and Manorama, his wife in whom we have a Kannada Benedick and a Kannada Beatrice."

ಇಲ್ಲಿನ ಎಲ್ಲವನ್ನು ಆಂಗ್ಲ ಸಾಹಿತ್ಯದೊಡನೆ ಹೋಲಿಸಿ ತನ್ಮೂಲಕ ಇದರ ಘನತೆಯನ್ನು ಸ್ಥಾಪಿಸುವ ಸಾಮಾನ್ಯ ಹುಚ್ಚಿರಲಿ, ಮುದ್ದಣನ ಆ ಕೃತಿಗೆ ಈ ಮಾತುಗಳೆಲ್ಲ ಸಲ್ಲುತ್ತವೆಯೆ? 'grand scale' 'novel epic' 'vision of life' ಈ ಮಾತುಗಳಿಗೆ ಏನೇನೂ ಅರ್ಥವಿಲ್ಲವೆ? ಕಾಲದ ಅಂತರದಿಂದಲಾದರೂ ಈ ಕೃತಿಯ ಬೆಲೆಯೇನು ಎಂಬುದು ನಮಗೆ ವ್ಯಕ್ತವಾಗದೆ? ಶ್ರೀ ಎಸ್. ವಿ. ರಂಗಣ್ಣನವರ ಬದಲಿಸಲಾರದ ಆ ವಿಮರ್ಶೆಯ ನುಡಿ: 'ಸಾಮಾನ್ಯ ಚಿತ್ರಕ್ಕೆ ಸುವರ್ಣದ ಚೌಕಟ್ಟು' ಎಂಬುದಾದರೂ ಲೇಖಕರ ನೆನಪಿಗೆ ಬರಬಹುದಾಗಿತ್ತು.

ಇಂತಹ ಮಾತುಗಳ ಜತೆಯಲ್ಲಿ ಇದೇ ಪುಸ್ತಕದಲ್ಲಿರುವ ಮತ್ತೊಬ್ಬ ಲೇಖಕರ ವಿಮರ್ಶೆಯ ಕೆಲವು ನುಡಿಗಳನ್ನು ಹೋಲಿಸಿ. ವಿಖ್ಯಾತ ಕಾದಂಬರಿಕಾರರಾದ ಶರತ್ ಚಂದ್ರರನ್ನು ವಾಡೂದ್ ಅವರು ವಿಮರ್ಶೆಯ ತಕ್ಕಡಿಯಲ್ಲಿ ತೂಗುತ್ತಿದ್ದಾರೆ; ಹೇಳುತ್ತಾರೆ:

"About half a century has elapsed since Saratchandra took the reading public of Bengal by storm, and we are now in a better position to view him dispassionately. We now see clearly enough his limitations: he is not very rich in creative imagination, and his interests are not sufficiently wide. He often betrays sentimentality, which is almost the reverse of realism. But with all these serious defects Saratchandra is not likely to suffer much in popularity or importance for the chief reason that he has seen misery, self-wrought or imposed, in various shapes and has succeeded in depicting it in unfaltering lines. This is his realism, without which no writer is worth the name. But he is also an idealist, and quite a big one. Deep down in him there is the faith that man is by nature lovely and great and that all his errors and sins and failures are but dust and mud sticking on the outside; they may be shaken off in a moment and man reinstated in his native glory."

ಮುದ್ದಣನನ್ನು ಕುರಿತ ಹೇಳಿಕೆಯಲ್ಲಿ ಎಂತಹ 'ಸೆಂಟಿಮೆಂಟಾಲಿಟಿ' ವ್ಯಕ್ತವಾಗಿದೆ ಎಂಬುದು ಈಗ ಸ್ಪಷ್ಟವಾಗಬಹುದು.

ಆಧುನಿಕ ಕನ್ನಡ ಕಾವ್ಯರೀತಿಯಲ್ಲಿ ತಾವೊಂದು ನೂತನ ಸಂಪ್ರದಾಯದ ಪ್ರವರ್ತಕರು ಎಂಬ ಭಾವನೆಯಿಂದಲೋ ಏನೋ ಶ್ರೀ ಗೋಕಾಕರು ಹೀಗೆಂದಿದ್ದಾರೆ: "Young literary men who went to England or to the United States for higher studies imbibed these influences at the very source and were responsible for newer techniques, like Kailasam and Adya in drama and Gokak and P. Sadashivarao in poetry."

ಶರತ್ ಬಾಬುವಿನ ಕಾದಂಬರಿಗಳ ಬಗೆಗೆ ಭಾವೋದ್ರೇಕದೂರವಾದ ವಿವೇಚನೆ ನಡೆದಿರುವಂತೆ ಕೈಲಾಸಂ ನಾಟಕಗಳ ಬೆಲೆ ಏನು ಎಂಬುದನ್ನು ನಿರ್ಧರಿಸುವ ಕಾಲ ಈಗ ಬಂದಿದೆ. ಕನ್ನಡ ನಾಟಕ ಪ್ರಪಂಚಕ್ಕೆ ಆತನ ಕಾಣಿಕೆ ಏನು ಎಂಬುದು ಸ್ಪಷ್ಟವಾಗಬೇಕಾಗಿದೆ. ಆದ್ಯರ ಕೃತಿಗಳ ಬಗೆಗೆ ಇಷ್ಟು ಶ್ರಮವಹಿಸುವ ಅಗತ್ಯ ಬರಲಾರದು. ಇನ್ನು ಗೋಕಾಕರ ಮಾತು. ಅವರ ಕಾವ್ಯ ಸಂಪ್ರದಾಯ ಎಂಥದು? ಅದು ಯಾರಿಗಾದರೂ ಸ್ಫೂರ್ತಿ ನೀಡಿ ನೂತನ ಸಂಪ್ರದಾಯವನ್ನು ಪ್ರಚೋದಿಸಿತೆ?

ಸ್ಟ್ರಾಟ್‌ಕ್ಯಾಸಲ್‌ನಿಂದಲೇ ಕಲ್ಲಿದ್ದಲು ತಂದಿದ್ದೇವೆ ಎಂದ ಮಾತ್ರಕ್ಕೆ ಅದರಲ್ಲಿ ವಿಶೇಷ ವೇನು?

ಕಾವ್ಯಪ್ರಪಂಚದಲ್ಲಿ, ನಾಟಕಪ್ರಪಂಚದಲ್ಲಿ, ಉಳಿದ ಸಾಹಿತ್ಯ ಪ್ರಕಾರಗಳಲ್ಲಿ ಮೇರು ಕೃತಿಗಳು ಯಾವುವು? ಏಕೆ? ಎಂಬುದನ್ನು ಶ್ರೀ ಗೋಕಾಕರು ವಿವೇಚಿಸ ಬಹುದಾಗಿತ್ತು. ಆಧುನಿಕ ಕನ್ನಡ ಕಾವ್ಯಲೋಕದ ಮೇರು ಶೃಂಗವಾಗಿ ಮೂಡಿ ನಿಂತಿರುವ 'ಶ್ರೀ ರಾಮಾಯಣ ದರ್ಶನಂ' ಏನನ್ನು ಸಾಧಿಸಿದೆ ಎಂಬುದನ್ನು ವಿವರಿಸಿ ಕನ್ನಡದ ಸಿದ್ಧಿಯನ್ನು ಉಳಿದ ಸಾಹಿತ್ಯಗಳಿಗೆ ತೋರಿಸಿಕೊಡಬಹುದಾಗಿತ್ತು. ಅದರ ಬಗೆಗೆ ಅವರು ಬರೆದಿರುವ ಮಾತುಗಳು ಇವು: "Puttappa completed his Ramayana, the epic in blank verse, which won the Sahitya Academy Prize"! "ಎಷ್ಟೋ ಕಷ್ಟಪಟ್ಟು ನಮ್ಮ ಹುಡುಗ ಕಡೆಗೂ ಬಿ. ಎಸ್‌ಸಿ. ಮುಗಿಸಿ ಡಿಗ್ರಿ ಪಡೆದ" ಎಂಬ ಹೇಳಿಕೆಯಷ್ಟು ಮಂದವೂ ನಿರುತ್ಸಾಹಪೂರ್ಣವೂ ಆಗಿದೆ ಈ ಹೇಳಿಕೆ!

ಅನುವಾದ ಮಾಡಿ ಉದ್ಧರಿಸಿರುವ ಪದ್ಯಗಳೋ—ಯಾವುದನ್ನಾದರೂ ಕೊಡ ಬಹುದು ಎನ್ನುವುದಕ್ಕಿಂತ ಕನ್ನಡದಲ್ಲಿ ಮೈತಳೆದಿರುವ ಶ್ರೇಷ್ಠವಾದ ಪಂಕ್ತಿಗಳಲ್ಲಿ ಕೆಲವನ್ನು ಆರಿಸಬೇಕು ಎನ್ನುವ ಉತ್ಸಾಹವನ್ನು ತೋರಿದ್ದರೆ ಒಳಿತಾಗುತ್ತಿತ್ತು.

ಆಧುನಿಕ ಕನ್ನಡ ಸಾಹಿತ್ಯವನ್ನು ರೂಪಿಸುವುದರಲ್ಲಿ ಆಚಾರ್ಯಪುರುಷರಾದ ಟಿ. ಎಸ್. ವೆಂಕಣ್ಣಯ್ಯನವರೂ, ಎ. ಆರ್. ಕೃಷ್ಣಶಾಸ್ತ್ರಿಗಳೂ ಕೈಗೊಂಡ ವ್ರತದ ವಿಷಯವಾಗಿ ಏನೇನೂ ಪ್ರಸ್ತಾಪವಿಲ್ಲ ಈ ಲೇಖನದಲ್ಲಿ. ಅಲ್ಲದೆ ಸಂಶೋಧನೆಗಳನ್ನು ನಡೆಸಿದವರಲ್ಲಿ ಕೆಲವರ ಹೆಸರಿದೆ, ಆದರೆ ವಿದ್ಯೆಯ ಗಣಿಯಾಗಿ ಭಾಷೆ ಸಾಹಿತ್ಯಗಳ ಅಭ್ಯಾಸಕ್ಕೆ ಆಧಾರಸ್ತಂಭವಾಗಿರುವ ಶ್ರೀ ಡಿ. ಎಲ್. ನರಸಿಂಹಾಚಾರ್ಯರ ಪ್ರಸ್ತಾಪವಿಲ್ಲ!

ನಮ್ಮಲ್ಲಿ ಹೈಸ್ಕೂಲ್ ವಿದ್ಯಾರ್ಥಿಗಳು ತಮ್ಮ ಸ್ನೇಹಿತರುಗಳ ಬಳಗದಲ್ಲಿ ಉಪಾ ಧ್ಯಾಯರುಗಳನ್ನು ಅವರ ಇನಿಷಿಯಲ್‌ಗಳಿಂದ ನಿರ್ದೇಶಿಸುವಂತೆ ಲೇಖನದ ಮಧ್ಯೆ T. R. S, T. N. S., ಎಂಬುದನ್ನು ಕಾಣುತ್ತೇವೆ. ಪರಿಚಯವಿರುವವರು ಮಾತ್ರ ತ. ರಾ. ಸುಬ್ಬರಾವ್, ತೀ. ನಂ. ಶ್ರೀಕಂಠಯ್ಯ ಎಂದು ಊಹಿಸಬಹುದು. ಕನ್ನಡ ಸಾಹಿತ್ಯದ ಪರಿಚಯವನ್ನು ಈ ಲೇಖನದ ಮೂಲಕ ಪಡೆದುಕೊಳ್ಳ ಬಯಸುವವರಿಗೆ ಇದರಿಂದ ಕಷ್ಟವಾಗುತ್ತದೆ. ಜತೆಗೆ ಈ ವಿಧಾನದ ದೋಷದಿಂದಾಗಿ ಅವರ ಹೆಸರು ಗಳು ಇಂಡೆಕ್ಸ್‌ನಿಂದ ಜಾರಿಯೇ ಹೋಗಿವೆ.

ಈ ಸಣ್ಣ ಅಂಶಗಳನ್ನೆಲ್ಲ ಎತ್ತಿ ತೋರಿಸಿರುವುದರ ಉದ್ದೇಶ ಇಷ್ಟೇ. ಹಿರಿಯ

ವಿಮರ್ಶಕರು ರುಚಿಶುದ್ಧಿಯನ್ನು ಪ್ರಕಟಿಸಬೇಕು. ಉಳಿದ ಸಾಹಿತಿಗಳಿಗೆ ಕನ್ನಡದ ನಿಜವಾದ ಸತ್ವವನ್ನು ಶ್ರದ್ಧೆಯಿಂದ ಎತ್ತಿ ತೋರಿಸಬೇಕು. ಹಾಗೆ ನಿಷ್ಪಕ್ಷಪಾತವಾಗಿ ಸಾಹಿತ್ಯದ ಒಂದು ಸಮೀಕ್ಷೆಯನ್ನು ಯಶಸ್ವಿಯಾಗಿ ನಡೆಸಲಾರೆವು ಎಂಬ ಭಾವ ಮೂಡಿದಾಗ ಅಂತಹ ಉದ್ಯಮಗಳನ್ನು ಕೈಗೊಳ್ಳದಿರುವುದು ಉತ್ತಮ.

ಆಧುನಿಕ ಕನ್ನಡ ಸಾಹಿತ್ಯವನ್ನು ಕುರಿತು ಬರೆಯುವಾಗ ಅದರಲ್ಲಿ ಇಲ್ಲದ ಗುಣಗಳನ್ನು ಹಾಡಿ ಹೊಗಳುವ ಅಗತ್ಯವಿಲ್ಲ. ಹಾಗೆಯೇ ಅದರಲ್ಲಿ ಇರುವ ಸತ್ವವನ್ನು ಮುಚ್ಚಿ ಇಡುವ ಸಾಹಸವೂ ವ್ಯರ್ಥ. ಅದರ ಬಡಕಲು ಶಾಖೆಗಳು ಹೆಚ್ಚು ಶಕ್ತಿಪೂರ್ಣವಾಗಲಿ, ಶ್ರೀಮಂತ ಶಾಖೆಗಳು ಇನ್ನೂ ಇನ್ನೂ ಹೆಚ್ಚು ಶ್ರೀಮಂತವಾಗಲಿ ಎಂಬ ಏಕೈಕ ಉದ್ದೇಶದಿಂದ ಲೇಖಕರೂ ವಿಮರ್ಶಕರೂ ಶ್ರಮಿಸಿದರೆ ಕಲ್ಯಾಣ ನನಸಾಗುತ್ತದೆ.

ಪ್ರಭುಶಂಕರ

* * *

**ಹಂಪೆಯ ಕನಸು**—ಲೇಖಕರು : ಟಿ. ಎನ್. ಮಹದೇವಯ್ಯ. ಬಿ. ಎಸ್‌ಸಿ. ; ಪ್ರಕಾಶಕರು : ಕರ್ನಾಟಕ ಸಂಘ, ಚಿಕ್ಕನಾಯಕನ ಹಳ್ಳಿ ; ಪುಟ ೧೨+೪.

ಹಾಳು ಹಂಪೆಯ 'ಬಯಲು ಮಸಣ'ದಲ್ಲಿ ಶ್ರೀ ಟಿ. ಎನ್. ಮಹದೇವಯ್ಯನವರು ಕಂಡ ಘೋರ ದಿನದ ಕನಸು 'ಹಂಪೆಯ ಕನಸು' ಎಂಬ ಈ ನೀಳ್ಗವನದಲ್ಲಿ ಮೂಡಿದೆ. ಹಂಪೆಯ ಹಾಳು ದೇಗುಲಗಳನ್ನೂ, ಕಲೆಯ ಅರೆಯುಳಿವನ್ನೂ ಕಂಡು ಕಡು ನೊಂದ ಮನದಲ್ಲಿ ಇವನ್ನು ಹಾಳುಗೆಡೆದ ಘೋರ ದಿನದ ಕನಸು ಮೂಡುವುದು ಸಹಜ.

'ಕಾವೇರಿ ತಟದಿಂದ ಗೋದೆ ತೀರದ ತನಕ,
ಹಸಿರಾಗಿ ಉಸಿರಾಗಿ ನಗೆಮೊಗದ ಹೂವಾಗಿ,
ನಳನಳಿಸಿ ಬಾಳಿರ್ದ ನಾಡಗುಡಿ ಸಿರಿ'—

ವಿಧಿಯ ಪದಾಘಾತಕ್ಕೆ ಸಿಕ್ಕಿ ಬರಿ ಶೂನ್ಯವಾಯಿತೇ ?—ಎಂದು ಕವಿಯ ಮನಸ್ಸು ಪ್ರಶ್ನಿಸುತ್ತದೆ. ತಾಯಿ ಭುವನೇಶ್ವರಿಯ ಬೆಳ್ಗೊಡೆ 'ಕ್ರೂರಕಾಲನ ದವಡೆ ಮಸೆತದಲುಗಿಗೆ ಸಿಲ್ಕಿ' ನುಚ್ಚಾದುದನ್ನು ನೆನದು ಕವಿಯ ಎದೆ ನೊಂದು ಭಾರವಾಗುತ್ತದೆ. ಮೈಮನದ ಬೇಸರಿಕೆಯಲ್ಲಿ ವಿಶ್ರಮಿಸಿ ಕನಸು ಕಾಣುತ್ತಾರೆ.

ಮೂರು ಶತಮಾನಗಳ ಹಿಂದಿನ ದುರ್ದಿನದ ಕಾಳರಾತ್ರಿ ಶತಮಾನಗಳ ಸಂಸ್ಕೃತಿಯನ್ನು ಹಾಳುಗೆಡದ ಕದನದ ಚಿತ್ರದಿಂದ ಭೀತಿಯುಂಟಾಗಿ,

'ಅರಿ ಶಿಬಿರವನು ಸುಟ್ಟು ಸದೆಬಡಿದು ಸಲಹಿರ್ಕೆ
ನಮ್ಮ ನಾಡುಳುಹಿರ್ಕೆ! ಕನ್ನಡವ ಕಾಯಿರ್ಕೆ!'

ಒಂದು ಬೊಬ್ಬಿಟ್ಟು ಸ್ಮರಿಸುತ್ತಾರೆ ಕವಿಗಳು. ಬಿರುಮಳೆಯ ನಂತರದ ಪ್ರಶಾಂತ ಸೂರ್ಯ ಪ್ರಭೆಯಂತೆ ಕವಿಗಳಿಗೆ ಚಿಂತಾಮುಖಿಯಾದರೂ ಮುಖಕಾಂತಿ ಕುಂದದ ತಾಯಿ ಭುವನೇಶ್ವರಿಯ ದರುಶನವಾಗುತ್ತದೆ. ನೆರೆದ ಪರಿವಾರ ಸುತ್ತಣ ಪ್ರಕೃತಿ ಮುಂದಣ ಶುಭಕ್ಕೆ ನಾಂದಿಯೆನುವಂತೆ ಜಯಕಾರ ಮಾಡುತ್ತಾರೆ; ವಿರೂಪಾಕ್ಷನ ಗಂಟೆ ಆಶೀರ್ವದಿಸುತ್ತದೆ.

ಈ ನೀಳ್ಗವನವು ಕನ್ನಡ ಏಕೀಕರಣಕ್ಕಾಗಿ ಹಂಬಲಿಸುತ್ತಿದ್ದ ಕಾಲದಲ್ಲಿ ಕಟ್ಟಿದುದು. ಭವಿಷ್ಯದ್ವಾಣಿಯಂತೆ ಕವಿಗಳ ಆಶೆ ಕನಸಿನಲ್ಲಿ ಮೂಡಿ ಮುಂದಿನ ಏಕೀಕರಣದ ಶುಭವನ್ನು ನುಡಿದಿದೆ. ಹೊನ್ನಮಳೆಗರೆದ ಹಂಪೆಯ ಹಾಳು ಸ್ಥಿತಿಯನ್ನು ಕಂಡ ನೋವು; ಆ ದುರ್ದಿನದಲ್ಲಿ ನಡೆದ ಕದನದ ಸ್ಮರಣೆಯಭೀತಿ, ತಾಯಿಯ ದಿವ್ಯ ಮೂರ್ತಿ ದರ್ಶನ—ಇವು ಇಲ್ಲಿ ಮೂರ್ತಿವೆತ್ತಿವೆ. 'ಮುರುಕು ಮಂಟಪಗಳಲಿ ನಿಟ್ಟುಸಿರೆ ಕೇಳುತಿದೆ'—ಎಂದಾಗ ಓದುಗನ ಕಣ್ಣಲ್ಲೂ ಹಸಿಯಾಡದಿರದು. ಸಮರಾಂಗಣದಲ್ಲಿಯ ಪ್ರೇತಗಳ ಸುಳಿದಾಟವನ್ನು ಚಿತ್ರಿಸಿಕೊಂಡು 'ಓ ರುದ್ರ! ನಿನ್ನಾಳ್ಕೆ ಮಸಣದಲು ಸಡಿಲಿದುವೆ ಕಟ್ಟುಗಳು?'—ಎಂಬುದನ್ನು ಓದುವಾಗ ಉಸಿರು ಕಟ್ಟುತ್ತದೆ. ನುಡಿಗಟ್ಟುಗಳ ಜೋಡಣೆ ಮನಸ್ಸನ್ನು ಸೆರೆಹಿಡಿಯುವಂತಿದೆ. 'ಕಾಳರಾತ್ರಿಯು ಬಂದು ತಮ ತುಂಬಿತಿಂದೆಂದು ಕೈಬಿಡಬೇಡ' ಎನ್ನುವ ಕೆಚ್ಚು ಕಾಣುತ್ತದೆ. ಸರಳ ಶೈಲಿಯ ನಿರೂಪಣೆ ಮೆಚ್ಚುವಂತಿದೆ. ಭಾಷೆಯೂ ಸುಲಭಗ್ರಾಹ್ಯವಾಗಿದೆ.

*
* *

**ಯು. ಎಸ್. ಎಸ್. ಆರ್. ೧೦೦ ಪ್ರಶ್ನೆಗಳಿಗೆ ಉತ್ತರ: ಭಾಗ: ೧—ಪ್ರಕಾಶಕರು: ಭಾರತದಲ್ಲಿರುವ 'ಟಾಸ್' ಪ್ರತಿನಿಧಿ, ೨೫ ಭಾರತಾಂಬ ರಸ್ತೆ, ನವದೆಹಲಿ; ಪುಟ ೧೧೧+೪; ಬೆಲೆ, ರೂ. ೦-೪-೦.**

ವಿಶ್ವವೇ ಒಂದು ಕುಟುಂಬವಾಗುತ್ತಿರುವ ಈ ಕಾಲದಲ್ಲಿ ಒಂದು ದೇಶದವರು ಮತ್ತೊಂದು ದೇಶದ ಆಡಳಿತ, ಅಲ್ಲಿಯ ಜನಜೀವನ—ಇವುಗಳ ವಿಚಾರ ತಿಳಿದುಕೊಳ್ಳಬೇಕಾದುದು ಅವಶ್ಯವಾಗಿದೆ. ಪ್ರಗತಿಪರ ಪ್ರಮುಖ ದೇಶಗಳಲ್ಲೊಂದಾದ 'ಸೋವಿಯತ್ ಒಕ್ಕೂಟದ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನದ ಪರಿಚಯವನ್ನು' ಮಾಡಿಕೊಡುವ ಪ್ರಯತ್ನ ಈ ಪ್ರಶ್ನೋತ್ತರಗಳಲ್ಲಿದೆ.

ಸೋವಿಯತ್ ಒಕ್ಕೂಟಗಳ ಸರ್ವಅಧಿಕಾರವೂ ಸರ್ವೋಚ್ಚ ಸೋವಿಯತ್‌ಗೆ

ಸೇರಿದ್ದು. ಇದರಲ್ಲಿ 'ಒಕ್ಕೂಟದ ಸೋವಿಯತ್' ಮತ್ತು 'ಜನಾಂಗೀಯತೆಯ ಸೋವಿಯತ್' ಎಂದು ಎರಡು ವಿಭಾಗಗಳಿವೆ. ಈ ಒಕ್ಕೂಟವು ಹದಿನಾರು ಸ್ವತಂತ್ರ ಒಕ್ಕೂಟದ ಸೋವಿಯತ್ ಸಮಾಜವಾದಿ ಪ್ರಜಾತಂತ್ರಗಳನ್ನೊಳಗೊಂಡಿದೆ. ದುಡಿಯುವ ರೈತನ ಕೈಯಲ್ಲಿ ಆಡಳಿತವನ್ನು ಕೊಟ್ಟ ಮೊದಲ ದೇಶವಿದು. ಎಲ್ಲಾ ಸೋವಿಯತ್‌ಗಳಿಗೂ ಗುಪ್ತ ಮತದಾನ ಪದ್ಧತಿಯಿಂದ ಚುನಾವಣೆ ನಡೆಯುತ್ತದೆ. ಆರಿಸಿ ಬಂದ ಪ್ರತಿನಿಧಿಗಳು ಪ್ರಾಮಾಣಿಕತೆಯಿಂದ ಕೆಲಸಮಾಡುತ್ತಾರೆ.

ಎಲ್ಲ ರೈತರೂ, ಬುದ್ಧಿಜೀವಿಗಳೂ ಚುನಾಯಿಸಲಿಕ್ಕೂ, ಚುನಾಯಿತರಾಗಲಿಕ್ಕೂ ಹಕ್ಕುಳ್ಳವರಾಗಿರುತ್ತಾರೆ. ವೈಯಕ್ತಿಕ ಆಸ್ತಿಪಾಸ್ತಿಗಳ, ಉಳಿತಾಯದ ಹಕ್ಕುಗಳನ್ನು ಕಾನೂನು ಸಮ್ಮತಿಸುತ್ತದಾದರೂ ದುಡಿಯದೇ ಯಾರೂ ಜೀವಿಸುವಂತಿಲ್ಲ. ಸಹಕಾರ ಸಂಘದ ರೀತಿಯ ವ್ಯವಸಾಯವನ್ನು ರೂಢಿಯಲ್ಲಿ ತರಲಾಗಿದೆ. ಹೀಗಾಗಿ ಸೋವಿಯತ್ ಒಕ್ಕೂಟದಲ್ಲಿ ನಿರುದ್ಯೋಗವಿರಲು ಸಾಧ್ಯವಿಲ್ಲ. ಮಕ್ಕಳ ಅಭ್ಯಾಸ ವನ್ನೂ, ಮುಪ್ಪಿನ ಕಾಲದ ನಿವೃತ್ತಿವೇತನವನ್ನೂ, ಅನಾರೋಗ್ಯ ಕಾಲದ ವೇತನ ವನ್ನೂ—ನಾಗರಿಕರು ಸರ್ಕಾರದಿಂದ ಪಡೆಯುತ್ತಾರೆ. ಏಳು ವರ್ಷದ ಕಡ್ಡಾಯ ಶಿಕ್ಷಣಕ್ಕೂ, ಉನ್ನತಮಟ್ಟದ ವಿದ್ಯಾಭ್ಯಾಸಕ್ಕೂ, ಸಂಶೋಧನಕ್ಕೂ ಸರಕಾರ ಅವಕಾಶ ಕಲ್ಪಿಸಿಕೊಡುತ್ತದೆ.

ಪಂಚವಾರ್ಷಿಕ ಯೋಜನೆಗಳಿಂದ ಸೋವಿಯತ್ ಒಕ್ಕೂಟವು ತನ್ನ ಆರ್ಥಿಕ ಮಟ್ಟವನ್ನು ವರ್ಷವರ್ಷವೂ ಹೆಚ್ಚಿಸುತ್ತಿದೆ. ಒಕ್ಕೂಟವನ್ನು ಪರರ ಆಕ್ರಮಣದಿಂದ ರಕ್ಷಿಸಲು ಸಶಸ್ತ್ರ ಬಲವನ್ನು ತಯಾರಿಸಲಾಗಿದೆ. ವಯಸ್ಕರಿಗೆ ಸೈನಿಕ ಶಿಕ್ಷಣವನ್ನು ಕೊಡಲಾಗುತ್ತಿದೆ. ಅಣುಪ್ರಯೋಗದಲ್ಲಿ ಮುನ್ನಡೆದಿರುವ ಪ್ರಮುಖ ರಾಷ್ಟ್ರ ವಾಗಿದೆಯಾದರೂ, ಶಾಂತಿಯುತ ಜನೋಪಯೋಗಕ್ಕಾಗಿಯೇ ಅದನ್ನು ಬಳಸಲು ಪ್ರಯತ್ನಿಸುತ್ತಿದೆ. ತನ್ನ ಯಾವ ಸಂಶೋಧನೆಯನ್ನೂ ಗೂಢವಾಗಿಡದೆ ಎಲ್ಲ ರಾಷ್ಟ್ರ ಗಳಿಗೂ ತಿಳಿಸುತ್ತಾಬಂದಿದೆ. ಶಾಂತಿಪ್ರಿಯ ರಾಷ್ಟ್ರವಾದುದರಿಂದ ವಿಶ್ವಶಾಂತಿಗಾಗಿ ಅನೇಕ ಪ್ರಯತ್ನಗಳನ್ನು ಮಾಡುತ್ತಿದೆ. ಆದರೆ ಆಕ್ರಮಣಕಾರಿ ಒಳಸಂಚನ್ನು ಸಕ್ರಿಯವಾಗಿ ಎದುರಿಸುತ್ತಾಬಂದಿದೆ. ಇದರಿಂದಾಗಿ ಜನತೆಯು ಸುಖಶಾಂತಿ ಯಿಂದ ಕಮ್ಯೂನಿಸ್ಟ್ ಸಮಾಜವನ್ನು ನಿರ್ಮಿಸುವುದರಲ್ಲಿ ನಿರತರಾಗಿದ್ದಾರೆ. ಈ ಒಕ್ಕೂಟವು ವಿದೇಶೀ ವ್ಯಾಪಾರದ ಮೂಲಕ ಅನೇಕ ರಾಷ್ಟ್ರಗಳೊಡನೆ ವ್ಯವಹಾರ ಸಂಪರ್ಕವನ್ನಿಟ್ಟುಕೊಂಡು ಅವಶ್ಯವಾದ ಸರಕುಗಳನ್ನು ಒದಗಿಸುತ್ತದೆ. ಕಷ್ಟದಲ್ಲಿರುವ ರಾಷ್ಟ್ರಗಳಿಗೆ ಆರ್ಥಿಕ ಸಹಾಯವನ್ನೂ ನೀಡುತ್ತದೆ.

ಜನರೆಲ್ಲ ಸಮಾನತೆ, ಸುಖಶಾಂತಿಯಿಂದ ಪ್ರಗತಿಪಥದಲ್ಲಿರುವ ರಾಷ್ಟ್ರ

ಸೋವಿಯತ್ ಒಕ್ಕೂಟ—ಎನ್ನುವುದು ಈ ಪ್ರಶ್ನೋತ್ತರಗಳ ಒಟ್ಟು ಸಾರ. ಇದರಲ್ಲಿ ಸೋವಿಯತ್ ಜನತೆಯ ಜೀವನದ ಬಗ್ಗೆ ಅನೇಕ ವಿಷಯಗಳು ವಿದಿತವಾಗುತ್ತವೆ ಯಾದರೂ ಅವರ ಸಮಸ್ಯೆಗಳೇನು? ಎನ್ನುವುದು ಎಲ್ಲಿಯೂ ಸ್ಪಷ್ಟವಾಗಿ ಗೋಚರಿ ಸದು. ಅದೊಂದು ನಂದನವನ, ಅದರಲ್ಲಿಯೇ ನಾನೂ ಒಂದು ಕೋಗಿಲೆಯಾಗಿ ವಿಹರಿಸಲು ಹೋದರೆ ಉತ್ತಮ ಎನ್ನುವ ಅಭಿಪ್ರಾಯ ಓದುಗನಲ್ಲಿ ಮೂಡದಿರದು. ಇಲ್ಲಿಯ ಅಭಿಪ್ರಾಯಗಳು ಅನುಸರಿಸಬಹುದಾದಂತಹ ತತ್ವಗಳೇ ಎನ್ನುವುದರಲ್ಲಿ ಅನುಮಾನವಿಲ್ಲ. ಆದರೆ ಸ್ಥಿತ ಪ್ರಪಂಚದಲ್ಲಿ ಯಥಾವತ್ ಆ ತತ್ವಗಳೆಲ್ಲ ಕಾರ್ಯ ರೂಪಕ್ಕೆ ಬರಬಲ್ಲುವೇ?—ಎನ್ನುವ ಸಂಶಯ ಉದಿಸುತ್ತದೆ. ಆದ್ದರಿಂದ ಕೇವಲ ಕಾಗದದ ಮೇಲೆ ಇರುವ ನಿಯಮಾವಳಿಯನ್ನು ಮಾತ್ರ ನಿರೂಪಿಸಿ ಬೆನ್ನು ತಟ್ಟಿ ಕೊಳ್ಳುವುದಕ್ಕಿಂತ; ಜನಜೀವನದ ನೈಜಸ್ಥಿತಿಯೇನು? ಎಷ್ಟು ಸಮಸ್ಯೆಗಳಿವೆ? ಅದನ್ನು ಅವರು ಯಾವರೀತಿ ಎದುರಿಸುತ್ತಿದ್ದಾರೆ? ಸಾಕಷ್ಟು ಪ್ರಗತಿಯಾಗಿದೆಯೇ? —ಈ ಬಗ್ಗೆ ತಿಳುವಳಿಕೆ ನೀಡುವುದು ಹೆಚ್ಚು ಸೂಕ್ತವೆಂದು ಕಾಣುತ್ತದೆ. ಆದರೂ ಜನಜೀವನವನ್ನು ಪ್ರತಿಬಿಂಬಿಸುವ ಇಂತಹ ಪ್ರಯತ್ನ ಮೆಚ್ಚುವಂತಹುದು. ಪ್ರಶಂಸೆಯ ಕಡೆಗೇ ಹೆಚ್ಚು ಗಮನ ಕೊಡದೆ ನಿಜವಾದ ಜನಜೀವನದ ಪೂರ್ಣಾಭಿ ಪ್ರಾಯವನ್ನು ಕೊಡುವಂತಹ ಗ್ರಂಥಗಳು ಪ್ರತಿ ದೇಶದಲ್ಲಿಯೂ ಬೆಳಕಿಗೆ ಬರುವು ದಾದರೆ ಅಂತರರಾಷ್ಟ್ರೀಯ ಸಂಬಂಧಕ್ಕೂ ಹೆಚ್ಚು ಪ್ರಯೋಜನವಾದೀತು.

'ಶಿವ'

*
* *

**ಜೀವನಗೀತಾಂಜಲಿ:** (ಗೀತಗಳು ಮತ್ತು ವಚನಕವನಗಳು) ಮಾರನಾಡು ವರ್ಧ ಮಾನ ಹೆಗ್ಗಡೆ. ಪ್ರಕಾಶಕರು: ಶ್ರೀ ವೀರಸೇವಾ ಸಂಘ, ಧರ್ಮಸ್ಥಳ; ಪು. ೧೧೮; ಬೆಲೆ, ರೂ. ೧-೮-೦.

ಈ ಸಂಗ್ರಹದಲ್ಲಿ ಕನ್ನಡದಲ್ಲಿ ೫೫ ಗೀತಗಳೂ ಹಿಂದಿಯಲ್ಲಿ 'ನಿರ್ವಾಣ ರಹಸ್ಯ' ಎಂಬ ಗೀತವೂ, ಕನ್ನಡದ ೩೩ ವಚನಕವನಗಳೂ ಇವೆ. ಈ ಗೀತಗಳೂ ವಚನಗಳೂ ಇಂದಿನ ಯುಗಧರ್ಮವನ್ನು ಸಾರುತ್ತವೆಂದು ಲೇಖಕರು ಬಿನ್ನವಿಸಿ ಕೊಂಡಿದ್ದಾರೆ. ಗೋವಿಂದಪೈಯವರು ಬರಹಗಾರರಿಗೆ ಉತ್ತೇಜನ ಕೊಟ್ಟು ಪ್ರೋತ್ಸಾ ಹಿಸುವಂತಹ ಮುನ್ನುಡಿಯೊಂದನ್ನು ಬರೆದು "ಅಲ್ಲಲ್ಲಿ ಬಲಾತ್ಕಾರದ ಕುರುಹು ತೋರುತ್ತದೆ. ಅದೊಂದು ಕೊರತೆಯೇ ಎನ್ನಬೇಕಾದರೂ, ಈ ಗ್ರಂಥ ಅವರ ಚೊಚ್ಚಲ ಕೂಸೇಸೋ ಎಂಬ ದೃಷ್ಟಿಯಿಂದ ಈ ದೋಷವನ್ನು ಮೆತ್ತಗೆ ಕಡೆಗಣಿಸ

ಬಹುದು" ಎಂದಿದಾರೆ. ಹೊಸದಾಗಿ ಬರೆಯುವವರಿಗೆ ಈ ಬಗೆಯ ಉತ್ತೇಜನ ಅಗತ್ಯವೆಂಬುದರಲ್ಲಿ ಸಂದೇಹವೇ ಇಲ್ಲ.

ಗದ್ಯವನ್ನು ತೊರೆದು ಪದ್ಯವನ್ನ ತಮ್ಮ ವಿಚಾರಗಳಿಗೆ ಆಸರೆಯನ್ನಾಗಿ ಆರಿಸಿ ಕೊಳ್ಳುವಾಗ, ಬರಹಗಾರರು ಗದ್ಯದಲ್ಲಿಯೇ ಅದನ್ನು ಹೇಳುವುದು ಸಾಧ್ಯವಿಲ್ಲವೇ ಎಂಬ ಬಗ್ಗೆ ತೀವ್ರ ಆಲೋಚನೆ ಮಾಡಬೇಕು. ಹಾಗೆ ಮಾಡದಿದ್ದಾಗ ಗದ್ಯ ಕೆಟ್ಟು, ಕೆಟ್ಟ ಪದ್ಯವಾಗುತ್ತದೆ 'ಪದ್ಯಂಪದ್ಯಂ, ಗದ್ಯಹೃದ್ಯಂ' ಎಂದು ಆಗ ಅನ್ನಿಸಿದರೆ ಆಶ್ಚರ್ಯವಿಲ್ಲ.

"ಮಡದಿ ಮಕ್ಕಳಿಗಾಗಿ | ಕಡುಕಷ್ಟಪಡುತಿದ್ದು |
ಮಾಡಬಾರದ ಪಾಪ | ಕಾರ್ಯಗಳ ಮಾಡಿ |
ಕಡೆಗೆ ಕರ್ಮದ ಫಲವ | ಉಣ್ಣುತ್ತ ಕೂಗುವರು |
ಮೂಢಾತ್ಮ ಜನರೆಲ್ಲ | ಜಗದಿ ನೋಡಿ | "

(ಪು. ೨೧)

ಎಂಬಲ್ಲಿ ಹೊಸ ವಿಚಾರವಾಗಲಿ, ಹೊಸ ನಿರೂಪಣೆಯಾಗಲಿ ಇಲ್ಲ. ಮನಸ್ಸನ್ನು ಆಕರ್ಷಿಸುವಂತಹ ಪ್ರತಿಮಾಚಿತ್ರಣವೋ, ಭಾವಾವೇಗವೋ, ಬುದ್ಧಿಯನ್ನ ಕೆರಳಿಸು ವಂತಹ ವಿಚಾರಗಳೋ, ಆಲೋಚನೆಯೋ, ಮೈಜುಮ್ಮೆನಿಸುವಂತಹ ಅದ್ಭುತ ಕಲ್ಪನೆಯೋ ಇದ್ದಲ್ಲಿ ಕೃತಿಗೊಂದು ಬೆಲೆಯುಂಟು. ಆದರೆ ಇಲ್ಲಿ ಇದಾವ ಗುಣ ಗಳೂ ಇಲ್ಲ. ಹೆಚ್ಚಿನ ಗೀತಗಳೆಲ್ಲ ಈ ಬಗೆಯವೇ, ಚರ್ವಿತಚರ್ವಣವೆಂದು ವಿಷಾದಿಸ ಬೇಕಾಗಿದೆ.

ವಚನಗಳಲ್ಲಿ ಗದ್ಯತನ ತಾನೇ ಹಾಸುಹೊಕ್ಕಾಗಿರುವುದರಿಂದ, ನಾವು ಗೀತ ಗಳನ್ನೋದಿದಾಗ ನಿರೀಕ್ಷಿಸಿದಷ್ಟು ವಚನಗಳಿಂದ ನಿರಾಸೆಯಾಗುವುದಿಲ್ಲ. ಕೆಲವು ಚೆನ್ನಾಗಿಯೂ ಇವೆ.

"ಸಿರಿವಂತರು ಆವ ಪರಿಯೊಳ್
ಲೋಕದುನ್ನತಿಗೆ ನೆರವೀಯಬೇಕೆಂಬುದನು ಕೃತಿಯೊಳಗೆ
ಅನುದಿನವು ತೋರಿಪರು"

ಎಂದು ಧರ್ಮಸ್ಥಳದ ಮಂಜಯ್ಯ ಹೆಗ್ಗಡೆಯವರ ಬಗ್ಗೆ ಬರೆದಿರುವ ವಚನವೂ (ಪು. ೧೧೭-೧೧೮) ಭಗವಾನ್ ಮಹಾವೀರನ ಬಗ್ಗೆ ಬರೆದಿರುವ ವಿಸ್ತಾರ ವಚನವೂ (ಪು. ೧೨೦-೧೧೪) ಚೆನ್ನಾಗಿವೆ. ಭಾವಗೀತೆಯ ಆವೇಗವು ಬಾರದಿದ್ದರೂ ಕೊಂಚ ಕಾವಿರುವ ವಚನಗಳೆಂದರೆ ಇವೇ.

ಜೈನಧರ್ಮ ಮತ್ತಿತ್ತರ ಧರ್ಮಗಳು ಸಾರುವ ತತ್ತ್ವಗಳನ್ನು, ಲೌಕಿಕ ಬುದ್ಧಿವಾದಗಳನ್ನು ಹೇಳಿರುವ ಗೀತೆಗಳು ಹಾಡಲು ಬರುವಂತೆ ಸಂಗೀತದ ರಾಗಗಳನ್ನು ಪಕ್ಕದಲ್ಲಿಯೇ ಕೊಟ್ಟಿದಾರೆ. ಕೆಲವಕ್ಕೆ ಸಿನಿಮಾ ಹಾಡುಗಳ ಮಟ್ಟುಗಳನ್ನು ಸೂಚಿಸಿದಾರೆ; ಅದು ಸರ್ವಥಾ ಮೆಚ್ಚತಕ್ಕುದಲ್ಲ.

ಶ್ರೀ ವರ್ಧಮಾನ ಹೆಗ್ಗಡೆಯವರು ಈ ಗ್ರಂಥಾರಂಭದಲ್ಲಿ ಬರೆದಿರುವ 'ಜೀವನದ ಸಾಫಲ್ಯ' ಎಂಬ ಗದ್ಯ ಪ್ರಬಂಧ ಚೊಕ್ಕವಾಗಿದೆ. ಹೇಳಬೇಕಾದುದನ್ನು ನೇರವಾಗಿ, ಸಂಕ್ಷಿಪ್ತವಾಗಿ ಹೇಳಿ ತನ್ನ ಗುರಿ ಮುಟ್ಟುತ್ತದೆ. ಗ್ರಂಥದ ಪದ್ಯಗಳಿಗಿಂತ ಈ ಪ್ರಬಂಧವೇ ಹೆಚ್ಚು ಪರಿಣಾಮಕಾರಿಯಾಗಿದೆ. ಶ್ರೀ ಹೆಗ್ಗಡೆಯವರು ಪದ್ಯ ಬರೆಯುವಂತಿದ್ದರೆ ಬರೆಯಲಿ. ಆದರೆ ಗದ್ಯವನ್ನೇ ಹೆಚ್ಚಾಗಿ ಬರೆದರೆ ಅವರಿಗೂ ಶ್ರೇಯಸ್ಸು, ನುಡಿಗೂ ಲಾಭ.

ಎಸ್. ಅನಂತನಾರಾಯಣ

* * *

**ಆಂಧ್ರ ಪ್ರತಾಪರುದ್ರೀಯಮು (ಪ್ರಥಮ ಭಾಗಮು—ತೆಲುಗು)—ಗ್ರಂಥಕರ್ತರು: ಸಾಹಿತ್ಯಾಚಾರ್ಯ, ಲಾಕ್ಷಣಿಕ ಶಿರೋಮಣಿ, ಸಾಹಿತ್ಯ ವಿದ್ಯಾಪ್ರವೀಣ, ಶಾಸ್ತ್ರವಿಶಾರದ ಶ್ರೀ ಜಮ್ಮುಲಮಡಕ ಮಾಧವರಾಮಶರ್ಮ ಅವರು; ಪ್ರಕಾಶಕರು: ನವ್ಯಸಾಹಿತ್ಯ ಪರಿಷತ್ತು, ಗುಂಟೂರು (ಆಂಧ್ರ); ಪುಟಗಳು ೩೫೩; ಬೆಲೆ, ರೂ. ೬-೦-೦.**

ಇದು ಸಂಸ್ಕೃತದಲ್ಲಿ ವಿದ್ಯಾನಾಥನು ರಚಿಸಿರುವ ಪ್ರತಾಪರುದ್ರೀಯವೆಂಬ ವ್ಯಾಕರಣಶಾಸ್ತ್ರದ ಆಂಧ್ರಾನುವಾದ. ಇದರಲ್ಲಿ ನಾಯಕಪ್ರಕರಣ, ಕಾವ್ಯಪ್ರಕರಣ, ನಾಟಕಪ್ರಕರಣ, ರಸಪ್ರಕರಣವೆಂಬ ನಾಲ್ಕು ಭಾಗಗಳಿವೆ.

ಶ್ರೀಯುತ ಮಾಧವರಾಮಶರ್ಮರು ಜಗನ್ನಾಥನ ರಸಗಂಗಾಧರವನ್ನೂ, ಮಮ್ಮಟನ ಕಾವ್ಯಪ್ರಕಾಶವನ್ನೂ ತೆಲುಗಿಗೆ ಪರಿವರ್ತನೆಮಾಡಿದ್ದಾರೆ. ಇವಲ್ಲದೆ 'ವಕ್ರೋಕ್ತಿ ಜೀವಿತಸಾರಮು' 'ವ್ಯಕ್ತಿ ವಿವೇಕಸಾರಮು,' 'ಭಾವಪ್ರಕಾಶನ ಸಂಗ್ರಹಮು,' 'ನಾಟ್ಯಸಾರಮು' ಎಂಬ ಗ್ರಂಥಗಳನ್ನು ರಚಿಸಿದ್ದಾರೆ. ಇವರ 'ನವರಸ ಗಂಗಾಧರ'ವು ತೆಲುಗಿನಲ್ಲಿ ಉತ್ತಮ ಸಾಹಿತ್ಯ ವಿಮರ್ಶಾ ಗ್ರಂಥವೆಂದು ನಿರ್ಧರಿಸಿ ಮದ್ರಾಸು ಸರ್ಕಾರದ ತೆಲುಗು ಭಾಷಾ ಸಮಿತಿಯವರು ಬಹುಮಾನವನ್ನು ಕೊಟ್ಟಿದ್ದಾರೆ.

ತೆಲುಗಿನಲ್ಲಿ ಅಲಂಕಾರ ಗ್ರಂಥರಚನೆಯು ಪ್ರಾಚೀನವಾದದ್ದು. ೧೬ ನೆಯ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯದ ಅಳಿಯ ರಾಮರಾಯನ ಆಸ್ಥಾನ ಕವಿ

ಯಾದ ಆಂಧ್ರಮಹಾಭಾಷಣ ಎಂಬ ಬಿರುದನ್ನು ಪಡೆದ ಭಟ್ಟುಮೂರ್ತಿ ಕವಿ 'ಕಾವ್ಯಾಲಂಕಾರ ಸಂಗ್ರಹ' ವನ್ನು ರಚಿಸಿದ್ದಾನೆ. ಇದರಲ್ಲಿ ಸಾಹಿತ್ಯಕ್ಕೆ ಬೇಕಾಗಿರುವ ಕಾವ್ಯಲಕ್ಷಣಗಳು ಗುಣ, ವೃತ್ತಿ, ರೀತ್ಯಲಂಕಾರಗಳನ್ನೂ ವಿವರಿಸಿದ್ದಾನೆ. ಆಮೇಲೆ ೧೮ ನೆಯ ಶತಮಾನದಲ್ಲಿ ವಿನ್ನಕೋಟಿಪೆದ್ದನ ಎಂಬ ಕವಿ "ಕಾವ್ಯಾಲಂಕಾರ ಚೂಡಾಮಣಿ" ಯನ್ನೂ ಆಡಿದಮು ಸೂರಕವಿ "ಆಂಧ್ರ ಚಂದ್ರಾಲೋಕ"ವನ್ನೂ ರಚಿಸಿದ್ದಾರೆ. ಗಲ್ಟಿಕಿಯಲ್ಲಿ ದಂಪೂರು ವೆಂಕಟಸುಬ್ಬಶಾಸ್ತ್ರಿಗಳು "ಚಂದ್ರಾಲೋಕ"ವನ್ನೂ ತೆಲುಗಿಗೆ ಭಾಷಾಂತರಮಾಡಿದ್ದಾರೆ. (ಇದು ಈಗ ಮೈಸೂರು ಪಬ್ಲಿಕ್ ಲೈಬ್ರರಿಯಲ್ಲಿದೆ) ಇವೆಲ್ಲವೂ ಅಚ್ಚಾಗಿವೆ. ೨೦ ನೆಯ ಶತಮಾನದಲ್ಲಿ ಕೀ || ಶೇ || ವೇದಂ ವೆಂಕಟರಾಯಶಾಸ್ತ್ರಿಗಳು ವಿಶ್ವನಾಥನ "ಸಾಹಿತ್ಯದರ್ಪಣ"ವನ್ನೂ ಬಾನುಮಿಶ್ರ ಕವಿಯ "ರಸಮಂಜರಿ"ಯನ್ನೂ ಭಾಷಾಂತರಮಾಡಿದ್ದಾರೆ. "ಆಂಧ್ರಧ್ವನ್ಯಾಲೋಕ"ವನ್ನು ಪರತುಲ ಲಕ್ಷ್ಮೀನಾರಾಯಣಶಾಸ್ತ್ರಿಗಳೂ, ಉದ್ಭಟನ 'ಕಾವ್ಯಾಲಂಕಾರ ಸಂಗ್ರಹ'ವನ್ನು ಉಸ್ಮಾನಿಯಾ ವಿಶ್ವವಿದ್ಯಾನಿಲಯದ ಸನ್ನಿಧಾನಂ ಸೂರ್ಯನಾರಾಯಣಶಾಸ್ತ್ರಿಯವರೂ ತೆಲುಗಿಗೆ ಪರಿವರ್ತನೆಮಾಡಿದ್ದಾರೆ. ಸಂಸ್ಕೃತದಲ್ಲಿರುವ ನಾಟ್ಯಶಾಸ್ತ್ರ, ಕಾವ್ಯಾಲಂಕಾರ, ಕಾವ್ಯಾದರ್ಶ, ಧ್ವನ್ಯಾಲೋಕ, ಕಾವ್ಯಪ್ರಕಾಶ ಮುಂತಾದ ಗ್ರಂಥಗಳನ್ನು ಅನುಸರಿಸಿ "ಕಾವ್ಯಾತ್ಮ" ಎಂಬ ವಚನ ಗ್ರಂಥವನ್ನೂ ಶ್ರೀಯುತ ರಾಘವಯ್ಯಂಗಾರ್ ಬರೆದಿದ್ದಾರೆ.

ದಂಡಿ, ಭಾಮಹರು—ಇವರು ಆಲಂಕಾರಿಕರಲ್ಲಿ ಆಚಾರ್ಯಸ್ಥಾನವನ್ನು ಹೊಂದಿದ್ದಾರೆ. ಆನಂತರ ಬಂದಿರುವ ಲಾಕ್ಷಣಿಕರು ಅವರನ್ನು ಅನುಸರಿಸಿ ಅವರು ಕೊಟ್ಟಿರುವ ಉದಾಹರಣೆಗಳನ್ನೇ ತಾವೂ ಸವಿನಯದಿಂದ ಉದಾಹರಿಸಿದರು. ಇವರಿಬ್ಬರಲ್ಲಿ ಭಾಮಹನು ಕಾವ್ಯಕ್ಕೆ ಅಲಂಕಾರ, ಧರ್ಮ, ಶಬ್ದ, ವೈಶಿಷ್ಟ್ಯವನ್ನು ಪ್ರತಿಪಾದಿಸುತ್ತಾನೆ. ಆಚಾರ್ಯ ದಂಡಿ ಇಷ್ಟಾರ್ಥವ್ಯವಚ್ಛಿನ್ನತ್ವವನ್ನು ಜೀವಭೂತವಾಗಿ ಅಂಗೀಕರಿಸುತ್ತಾನೆ. ಅನಂತರ ಉದ್ಭಟನ ಕಾವ್ಯಾಲಂಕಾರ ಸಾರಸಂಗ್ರಹವೂ ವಾಮನನ ಕಾವ್ಯಾಲಂಕಾರ ಸೂತ್ರ ವೃತ್ತಿ, ಉದ್ಭಟನ ಕಾವ್ಯಾಲಂಕಾರ—ಇವು ಅಲಂಕಾರಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿವೆ.

ವಿದ್ಯಾನಾಥನ 'ಪ್ರತಾಪರುದ್ರೀಯ'ವು ದಕ್ಷಿಣಾಪಥದಲ್ಲಿ ಅನುದಿನ ಪಠನ ಸ್ಥಾನಗಳಲ್ಲಿ ವಿಶೇಷ ವ್ಯಾಪ್ತಿಯನ್ನು ಹೊಂದಿರುವ ಗ್ರಂಥ. ಇದರಲ್ಲಿ ನಾಟಕಾಲಂಕಾರ ಕಾವ್ಯಲಕ್ಷಣಗಳು ಸಲಕ್ಷ್ಯಗಳಿಂದ ಸರಳ ಶ್ರುತಿ ಸುಖವಾದ ಶೈಲಿಯಲ್ಲಿ ಸಂಗ್ರಹವಾಗಿವೆ. ಜೊತೆಗೆ ಕುಮಾರಸ್ವಾಮಿಯವರ ಟೀಕೆಯೂ ಅವರು ಕೊಟ್ಟಿರುವ ವಿವರಣೆಯೂ ಸರ್ವತೋಮುಖ ಸಾಹಿತ್ಯ ವಿಷಯಕವಾಗಿದೆ.

ನಾಯಕ ಪ್ರಕರಣದಲ್ಲಿ ನಾಯಕ ಲಕ್ಷಣಗಳು, ಧೀರೋದಾತ್ತ, ಧೀರೋದ್ಧತ, ಧೀರಲಲಿತ, ಧೀರಶಾಂತಾದಿ ನಾಯಕರ ಗುಣಗಣಗಳು, ನಾಯಿಕಾ ಭೇದಗಳು, ರಸ ಪ್ರಾಧಾನ್ಯತೆ, ಅಲಂಕಾರ ಪ್ರಾಧಾನ್ಯತೆ ಮುಂತಾದ ವಿವರಣೆಯಿದೆ. ಕಾವ್ಯ ಪ್ರಕರಣವು ಕಾವ್ಯಸ್ವರೂಪವನ್ನು ವಿವರಿಸಿ, ಕೈಶಿಕ್ಯಾದಿ ವೃತ್ತಿಗಳನ್ನೂ ಶೈಲಿಪಾಕ ಗಳನ್ನೂ ಒಳ್ಳೆಯ ಉದಾಹರಣೆಗಳೊಡನೆ ಕೊಡುತ್ತದೆ. ನಾಟಕ ಪ್ರಕರಣದಲ್ಲಿ ನಾಟ್ಯ ಸ್ವರೂಪ, ನೃತ್ಯ, ಅರ್ಥಪ್ರಕೃತಿಗಳು, ಸಂಧಿ—ಅದರ ಪ್ರಯೋಜನ, ನಾಟಕದಲ್ಲಿ ನಿಷಿದ್ಧ ರೀತಿಗಳು ಇವು ವಿವರಿಸಲ್ಪಟ್ಟಿವೆ. ರಸಪ್ರಕರಣವು ಬಹು ಮುಖ್ಯವಾದದ್ದು. ಇದರಲ್ಲಿ ರಸಸ್ವರೂಪ, ಭಟ್ಟಲೊಲ್ಲಟ ವಿವಾದ, ಅಭಿನವಗುಪ್ತನ ಸವಾದ, ಸ್ಥಾಯೀಭಾವ, ವಿಭಾವ, ಅನುಭಾವ ಸಾತ್ವಿಕ ಸಂಚಾರೀ ಭಾವಗಳು, ಶೃಂಗಾರ ಚೇಷ್ಟಾನಿರೂಪಣೆ, ಭಾವಶಬಲತೆ—ಇವುಗಳನ್ನು ಚರ್ಚಿಸಿ ರಸನಿಷ್ಕರ್ಷೆಮಾಡಿದೆ.

ಇದು ನಾಟಕದ ಲಕ್ಷಣಗಳು, ರಸಸ್ವರೂಪ ಮುಂತಾದ ವಿಷಯಗಳನ್ನು ತಿಳಿಯಬೇಕೆಂಬ ಇಚ್ಛೆ ಉಳ್ಳವರೆಲ್ಲರೂ ಸುಲಭವಾಗಿ ಅರ್ಥಮಾಡಿಕೊಂಡು ಓದಬಹು ದಾದಂತಹ ಗ್ರಂಥ. ವ್ಯಾಕರಣದ ವಿದ್ಯಾರ್ಥಿಗಳಿಗೆ ಮುಖ್ಯವಾಗಿ ಅತ್ಯಂತ ಉಪಯುಕ್ತವಾದುದು.

ವಿದ್ವಾನ್ ಕೆ. ಸುಬ್ಬರಾಮಪ್ಪ

# ಸಂಪಾದಕೀಯ

## ಸ್ವವಿಷಯ

ಕಳೆದ ಎರಡೂವರೆ ವರ್ಷಗಳಿಂದ ಪ್ರಬುದ್ಧ ಕರ್ಣಾಟಕದ ಸಹಾಯಕ ಸಂಪಾದಕರಲ್ಲಿ ಒಬ್ಬರಾಗಿ ಶ್ರದ್ಧೆ ಉತ್ಸಾಹಗಳಿಂದ ಕೆಲಸಮಾಡಿದ ಶ್ರೀ ಉ. ಕ. ಸುಬ್ಬರಾಯಾಚಾರ್, ಎಂ.ಎ. ಅವರು ಈಗ ಮೈಸೂರು ವಿಶ್ವವಿದ್ಯಾನಿಲಯದ ಪ್ರೌಢ ವಿದ್ಯಾರ್ಥಿ ವೇತನ (Fellowship) ಪಡೆದು ಕನ್ನಡ ಸಾಹಿತ್ಯ ಸಂಬಂಧವಾದ ಸಂಶೋಧನಾಕಾರ್ಯದಲ್ಲಿ ನಿರತರಾಗಿದ್ದಾರೆ. ಶ್ರೀಯುತರ ಸ್ಥಾನದಲ್ಲಿ ಮಹಾರಾಜ ಕಾಲೇಜಿನ ಕನ್ನಡ ಅಧ್ಯಾಪಕರಾದ ಶ್ರೀ ಪ್ರಭುಶಂಕರ, ಎಂ.ಎ. ಅವರು ನೇಮಕಗೊಂಡಿದ್ದಾರೆ. ಈ ಸಂದರ್ಭದಲ್ಲಿ ಈ ಇಬ್ಬರು ಮಹನೀಯರನ್ನೂ ನಾವು ಅಭಿನಂದಿಸುತ್ತೇವೆ. ಶ್ರೀ ಉ. ಕ. ಸುಬ್ಬರಾಯಾಚಾರ್ಯರಿಂದ ಪ್ರಬುದ್ಧ ಕರ್ಣಾಟಕಕ್ಕೆ ಸಂದ ಸೇವೆಯನ್ನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸುತ್ತೇವೆ.

# ಸಾದರ ಸ್ವೀಕಾರ

೧. **ಝಾನ್ಸಿಯ ರಾಣಿ ಲಕ್ಷ್ಮೀಬಾಯಿ** (ಜೀವನ ಚರಿತ್ರೆ)—ಮೂಲಲೇಖಕರು: ಶ್ರೀ ವೃಂದಾವನಲಾಲ್‌ವರ್ಮ; ಅನುವಾದಕರು: ಶ್ರೀ ಎನ್. ಜಿ. ಗೋವಿಂದರಾಜ್; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಪುಟಗಳು ಕ್ರಾ. ಅ. ಪ. ೪೮೮; ಬೆಲೆ, ರೂ. ೩.೭೫.

೨. **ದಾದಾಭಾಯಿ ನವರೋಜಿ** (ಜೀವನ ಚರಿತ್ರೆ)—ಮೂಲಲೇಖಕರು: ಸರ್. ಆರ್. ಪಿ. ಮಸಾನಿ; ಅನುವಾದಕರು: ಶ್ರೀ ಕೂಡಲಿ ಚಿದಂಬರಂ; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಪುಟಗಳು ಕ್ರಾ. ಅ. ಪ. ೧೭೮; ಬೆಲೆ, ೨.೫೦ (ರೂ. ೪-೮-೦).

೩. **ನನ್ನ ಬಾಲ್ಯದ ದಿನಗಳು** (ಆತ್ಮಕಥೆ)—ಮೂಲಲೇಖಕರು: ಶ್ರೀ ರವೀಂದ್ರನಾಥ ಠಾಕೂರರು; ಅನುವಾದಕರು: ಶ್ರೀ ಅಹೋಬಲಶಂಕರ; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಪುಟಗಳು ಕ್ರಾ. ಅ. ಪ. ೮೦; ಬೆಲೆ, ರೂ. ೧-೪-೦; ರೂ. ೨-೪-೦.

೪. **ಕೋಲುಕುದುರೆ** (ಮಕ್ಕಳ ಪದ್ಯಗಳು)—ಲೇಖಕರು: ಶ್ರೀ ಹೊಯಿಸಳ; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಪುಟಗಳು ಕ್ರಾ. ಅ. ಪ. ೩೨; ಬೆಲೆ, ರೂ. ೦.೫೦.

೫. **ಚಂದುಮಾಮ** (ಮಕ್ಕಳ ಪದ್ಯಗಳು)—ಲೇಖಕರು: ಶ್ರೀ ಹೊಯಿಸಳ; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಪುಟಗಳು ಕ್ರಾ. ಅ. ಪ. ೩೨; ಬೆಲೆ, ರೂ. ೦-೫೦.

೬. **ಅಂಚೆಯ ಮನೆ** (ನಾಟಕ)—ಮೂಲಲೇಖಕರು: ಶ್ರೀ ರವೀಂದ್ರನಾಥಠಾಕೂರ; ಅನುವಾದಕರು: ಶ್ರೀ ಅಹೋಬಲಶಂಕರ; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಪುಟಗಳು ಕ್ರಾ. ಅ. ಪ. ೪೩; ಬೆಲೆ, ರೂ. ೦.೭೫.

೭. **ಬೆಳದಿಂಗಳ ರಾತ್ರಿ** (ಸಣ್ಣ ಕಥೆಗಳು)—ಲೇಖಕಿಯರು: ಶ್ರೀಮತಿ ರಾಜೇಶ್ವರಿ ನರಸಿಂಹಮೂರ್ತಿ ಅವರು; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಪುಟಗಳು xiv + ೨೦೦; ಬೆಲೆ, ರೂ. ೧.೫೦.

೮. **ಬದುಕು ಜಟಕಾಬಂಡಿ** (ಕಾದಂಬರಿ)—ಲೇಖಕರು: ಶ್ರೀ ರಂಗ ಅವರು; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಪುಟಗಳು ೨೩೯; ಬೆಲೆ, ೧.೫೦.

೯. **ಜೇನಹನಿಗಳು** (ಜನಪದ ಪ್ರೇಮ ಗೀತಗಳು)—ಆಯ್ದವರು: ಶ್ರೀ ಕ. ರಾ. ಕೃ.; ಪ್ರಕಾಶಕರು: ಕಾವ್ಯೋದಯ ಪ್ರಕಾಶನ, ವಿದ್ಯಾಶ್ರಮ, ಸರಸ್ವತಿಪುರಂ, ಮೈಸೂರು; ಪುಟಗಳು ಕ್ರಾ. ಅ. ಪ. ೩೦; ಬೆಲೆ, ರೂ. ೦-೮-೦.

೧೦. *Kittur Channamma Rani* (ಚರಿತ್ರೆ ಮತ್ತು ಜೀವನ ಕಥೆ) ಲೇಖಕರು: ಶ್ರೀ ಶ್ರೀಧರಶೇಲ್ಕರ್; ಪ್ರಕಾಶಕರು: ಕಿತ್ತೂರು ಚನ್ನಮ್ಮ ರಾಣಿ ಇತಿಹಾಸಮಂಡಲ, ಬೈಲಹೊಂಗಲ, ಜಿಲ್ಲಾ ಬೆಳಗಾಂ; ಪುಟಗಳು ಕ್ರಾ. ಅ. ಪ. ೫೩; ಬೆಲೆ, ರೂ. ೧-೦-೦.

೧೧. ಸಾಹಿತ್ಯದ ಹಿನ್ನೆಲೆ (ಸಂಶೋಧನಾತ್ಮಕ ಪ್ರಬಂಧಗಳು)—ಲೇಖಕರು : ವಿದ್ವಾನ್ ಕೆ. ವೆಂಕಟರಾಯಾಚಾರ್ಯರು, ಸುರತ್ಕಲ್ ; ಪ್ರಕಾಶಕರು : ಸಾಹಿತ್ಯ ಭಂಡಾರ, ಹುಬ್ಬಳ್ಳಿ ; ಪುಟಗಳು ಕ್ರಾ. ಅ. ಪ. ೧೧೧ ; ಬೆಲೆ, ರೂ. ೧-೮-೦.

೧೨. ಮದುವೆಯ ಹತ್ತಲ ಮತ್ತು ಇತರ ನಗೆಯಾಟಗಳು (ಏಕಾಂಕ ದೃಶ್ಯಗಳು)—ಲೇಖಕರು : ಶ್ರೀ ಬೇಂದ್ರೆ ಲಕ್ಷ್ಮಣರಾಯರು ; ಪ್ರಕಾಶಕರು : ಸಾಹಿತ್ಯ ಭಂಡಾರ, ಹುಬ್ಬಳ್ಳಿ ; ಪುಟಗಳು ೧೨೦ ; ಬೆಲೆ, ಸಾದಾಪ್ರತಿ ರೂ. ೧.೭೫.

೧೩. ಸೌಂದರ್ಯಲಹರೀ (ಶ್ರೀ ಶಂಕರಾಚಾರ್ಯರ ಕೃತಿಯ ಗದ್ಯಾನುವಾದ) ಲೇಖಕರು : ಶ್ರೀ ಸೋಮನಾಥಾನಂದ ಸ್ವಾಮಿಜಿ ಅವರು ; ಪ್ರಕಾಶಕರು : ತ. ವೆಂ. ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿಪುರಂ, ಮೈಸೂರು ; ಪುಟಗಳು ೧೦೧ + iii ; ಬೆಲೆ, ೫೦ ನ. ಪೈ.

೧೪. ಅವಧೂತಗೀತಾ (ದತ್ತಾತ್ರೇಯ ವಿರಚಿತ) ಅನುವಾದಕರು : ಶ್ರೀ ಸೋಮನಾಥಾನಂದಸ್ವಾಮಿಜಿ ಅವರು ; ಪ್ರಕಾಶಕರು : ತ. ವೆಂ. ಸ್ಮಾರಕ ಗ್ರಂಥಮಾಲೆ, ಕೃಷ್ಣಮೂರ್ತಿಪುರಂ, ಮೈಸೂರು ; ಪುಟಗಳು ೨೩೧ ; ಬೆಲೆ, ರೂ. ೧-೮-೦.

# ಪ್ರಬುದ್ಧ ಕರ್ಣಾಟಕ

ಹೇವಿಳಂಬಿ ಸಂವತ್ಸರ | ೧೫೪ | ಪುಷ್ಯ ಸಂಚಿಕೆ

## ವೇದ ವಾಣಿ

ಗಿರಯಸ್ತೇ ಪರ್ವತಾ ಹಿಮವಂತೋ
ऽರಣ್ಯಂ ತೇ ಪೃಥಿವಿ ಸ್ಯೋನಮ್ ಅಸ್ತು
ಬಭ್ರು ಕೃಷ್ಣಾಂ ರೋಹಿಣೀಂ ವಿಶ್ವರೂಪಾಂ
ಧ್ರುವಾಂ ಭೂಮಿಂ ಪೃಥಿವೀಂ ಇಂದ್ರಗುಪ್ತಾಂ |
ಅಜೀತೋऽಹತೋ ಅಕ್ಷತೋऽಧ್ಯಷ್ಠಾಂ ಪೃಥಿವೀಂ ಅಹಂ ||

ಓ ಪೃಥಿವಿ, ಗಿರಿಪರ್ವತ ಹಿಮವಂತರಿಂದ, ದಿವ್ಯಾರಣ್ಯಗಳಿಂದ, ಸಿತ ಅಸಿತ ಆರಕ್ತ ವರ್ಣವೈವಿಧ್ಯದಿಂದ, ಶೋಭಿಸುತ್ತಿರುವ ಇಂದ್ರಗುಪ್ತಳಾದ ನಿನ್ನಮೇಲೆ ಅಜಿತನಾಗಿ ಅಹತನಾಗಿ, ಅಕ್ಷತನಾಗಿ ನಾನು ಸಂಚರಿಸುತ್ತಿದ್ದೇನೆ.

ಅಥರ್ವವೇದ

ಮೇಧಾ ದೇವೀ ಜುಷಮಾಣಾ ನ ಆಗಾದ್
ವಿಶ್ವಾಚೀ ಭದ್ರಾ ಸುಮನಸ್ಯಮಾನಾ |
ತ್ವಯಾ ಜುಷ್ಟಾ ನುದಮಾನಾ ದುರುಕ್ತಾನ್
ಬೃಹದ್ವದೇಮ ವಿದಥೇ ಸುವೀರಾಃ ||

ತ್ವಯಾ ಜುಷ್ಟ ಋಷಿರ್ಭವತಿ ದೇವಿ
ತ್ವಯಾ ಬ್ರಹ್ಮಾಗತಶ್ರೀರುತ ತ್ವಯಾ

ತ್ವಯಾ ಜುಷ್ಟಶ್ಚಿತ್ರಂ ವಿಂದತೇ ವಸು
ಸಾ ನೋ ಜುಷಸ್ವ ದ್ರವಿಣೋ ನ ಮೇಧೇ ||

ಧೀಶಕ್ತಿಯ ಅಧಿದೇವತೆ ಪ್ರೇಮದಿಂದ ನಮ್ಮ ಬಳಿಗೆ ಬರಲಿ. ಸರ್ವವೇದ್ಯೆಯೂ ಸರ್ವಮಂಗಲೆಯೂ ಆದ ಆಕೆ ನಮ್ಮ ಬಗೆಗೆ ಸುಪ್ರಸನ್ನಳಾಗಿದ್ದಾಳೆ.

ನಿನ್ನ ಅನುಗ್ರಹದಿಂದ, ಓ ದೇವಿ, ವೀರಶ್ರೇಷ್ಠರ ಪರಿವಾರವುಳ್ಳ ನಾವು ದುರುಕ್ತಿಗಳಿಗೆ ವಿಮುಖರಾಗುತ್ತೇವೆ. ಯಜ್ಞಾಂತ್ಯದಲ್ಲಿ ಪರಮಪುರುಷನನ್ನು ಕುರಿತು ಮಾತ್ರ ನುಡಿಯುತ್ತೇವೆ.

ಓ, ಧೀಶಕ್ತಿಯ ಅಧಿದೇವಿ, ನಿನ್ನ ಅನುಗ್ರಹವನ್ನು ಪಡೆದವನು ದ್ರಷ್ಟಾರನಾಗುತ್ತಾನೆ, ಬ್ರಹ್ಮನೇ ಆಗುತ್ತಾನೆ. ನಿನ್ನಿಂದ ಆತ ಅದ್ಭುತ ಸಂಪದವನ್ನು ಪಡೆಯುತ್ತಾನೆ. ಓ ದೇವಿ ಅಂತಹ ಸಂಪದವನ್ನು ನಮಗೆ ಕರುಣಿಸು.

ಕೃಷ್ಣಯಜುರ್ವೇದ

## ಕುಲಪತಿಗೆ ಹಕ್ಕಿಯ ಹರಕೆ

ಓ ಹಕ್ಕಿ,
ನಿನ್ನ ಸವಿಯ ಉಲಿಯನಾಲಿಸಲ್ಕೆ
ನನಗೆ ಈಗ ಹೊತ್ತೆ ಇಲ್ಲ:
ನಿನಗೆ ಗೊತ್ತೆ ಇಲ್ಲಾ?
ನನಗೀಗ ದೊಡ್ಡ ಹುದ್ದೆಯಾಗಿರುವುದಲ್ಲಾ!
ನಾನೀಗ
  ಮೈಸೂರು ವಿಶ್ವವಿದ್ಯಾನಿಲಯದ
    ವೈಸ್‌ಛಾನ್ಸಲರ್ ಕಣಾ!!

ಹಕ್ಕಿ ಮೆಲ್ಲನುಲಿಯಿತು:
"ಏನು ನಷ್ಟ! ಎಂಥ ಕಷ್ಟ!
ಅಯ್ಯೊ ಪಾಪ ದುರಾದೃಷ್ಟ!
ಕವಿ ಆದನೆ ರಸಭ್ರಷ್ಟ?"

ಅಯ್ಯೊ ಬೆಪ್ಪು ಹಕ್ಕಿ,
ಹೇಳುತಾರೆ ಎಲ್ಲ ಮಂದಿ:
  "ಏನದೃಷ್ಟ! ಎಂಥ ಪುಣ್ಯ!
  ಎಂಥ ಸ್ಥಾನ! ಎಷ್ಟು ಗಣ್ಯ!
    ಕುಲಪತಿ! ಕುಲಪತಿ!
    ವಿಶ್ವವಿದ್ಯಾ ಸ್ಥಾನಪತಿ!
  ಪಡೆದ ಕವಿಯೆ ನಿಜಕು ಸುಕೃತಿ!"

ಹಕ್ಕಿ ಮೆಲ್ಲನುಲಿಯಿತು:
  "ಸ್ಥಾನಪತಿ! ಸ್ಥಾನಪತಿ!
  ಅಯ್ಯೊ ಎಂಥ ದುರ್ಗತಿ,
      ಈ ರಸಚ್ಯುತಿ!
ಕವಿಗೊದಗಿತೆ ಈ ಕೀಳ್ಗತಿ?
ತಾನಾದನೆ ಕುಲಪತಿ?"

ಹಕ್ಕಿ, ನಿನಗೆ ಬುದ್ಧಿಯಿಲ್ಲ.
ಈಗ ನನ್ನ ಕೆಲಸವೆಲ್ಲ
ಬರಿಯ ಹೆಸರು ಬರೆವುದೊಂದೆ :
ಚಿಂತೆಯಿಲ್ಲ. ಚರ್ಚೆಯಿಲ್ಲ.
ಕಡೆಗೆ
ಆಲೋಚನೆಯ ಗೋಜೂ ಇಲ್ಲ.
ವ್ಯಾಕರಣ, ಶೈಲಿ, ಛಂದಸ್ಸು
ಯಾವುದರ ಪೀಡೆಯೂ ಇಲ್ಲ.
ಗದ್ಯ ಪದ್ಯ ಭೇದವಿಲ್ಲ :
ಹೃದ್ಯ ಬರೆದುದೆಲ್ಲ !—
ಆಲಸ್ಯವೊ ? ಅವಸರವೊ ?
ಅಜ್ಞಾನವೊ ? ಅವಿವೇಕವೊ ?
ಅನುಕೂಲದ ಈ ರೀತಿಗೆ
ನಿನಗೊಂದು ಹೆಸರು ಬೇಕಾದರೆ,
ಬೇಕಾದರೆ, ಬೇಕೇ ಬೇಕಾದರೆ,
'ನವ್ಯ' ಎಂದು ಕರೆ !
'ನವ್ಯ' ಎಂಬುದೂ ಹಳೆಯದಾದರೆ
'ನವೋನವ್ಯ !' 'ಭವ್ಯ !' 'ದಿವ್ಯ !'
ಏನು ಬೇಕಾದರೂ ಕರೆ.
ಅಂತೂ ಈಗ
ಹೆಸರು ಕೊರೆವುದೊಂದೇ
ನನಗೆ ರಸಕ್ರಿಯೆ !

ಹೆಸರು ! ಹೆಸರು ! ನನ್ನ ಹೆಸರು !
ದಾಸರೇನೋ ಹೇಳಿದ್ದರು
'ನೀನ್ಯಾಕೋ ನಿನ್ನ ಹಂಗ್ಯಾಕೋ
ನಿನ್ನ ನಾಮದ ಬಲವೊಂದಿದ್ದರೆ ಸಾಕೋ !'
ಇಂದು ನನಗೆ ತಿಳಿಯಿತದರ ಸತ್ಯ :
ಹೆಸರಿಗಿರುವ ಸತ್ತ್ವ ಮೇಣ್ ಮಹತ್ವ !

ಕಡೆಗೆ ಇಡಿಯ ಹೆಸರು ಕೂಡ ಬೇಡ;
ಮೊದಲಕ್ಕರದ ಚಿಕ್ಕರುಜುವೆ
ಸಾಕೋ‍ಓ ಸಾಕು!

ಹಕ್ಕಿಗರ್ಥವಾಗಲಿಲ್ಲ.
ಸನ್ಮಾರ್ಗವರಿವ ಶಕ್ತಿ ಅದಕ್ಕಿನ್ನೂ ಬಂದಿಲ್ಲ!

ಉಲಿಯಿತಿಂತು ಮತ್ತೆ
ತನಗೆ ತಾನೆ ಎಂಬಂತೆ:

"ಸ್ಥಾನಪತಿ! ಕುಲಪತಿ!
ಅಯ್ಯೊ ಎಂಥ ದುರ್ಗತಿ!
ಓ ದೇವಿ ಸರಸ್ವತಿ,
ಎಂತಾದರು ಕವಿಯ ಪೊರೆ
ಅವನಿಗೊದಗದಿರಲಿ
ಈ ರಸಚ್ಯುತಿ!
ನನ್ನ ಉಲಿಯನಾಲಿಸಲೂ
ಸಮಯವಿರದ ದುರ್ಗತಿ!"

೨೧-೯-೫೬ ಕುವೆಂಪು
ಮೈಸೂರು

## ಕ್ಷುರಸ್ಯಧಾರಾ . . .*

ಅಹಂ ಮಾರ್ಗಾಭಿಜ್ಞೋ ಭವತಿ ಸ ಋಜುಃ ಕಿಂ ಚ ತನುರಪ್ಯ-
ಸೇರ್ಧಾರೈವೇಯಂ ಸಮುದಮಹಮಸ್ಯಾಂ ಹಿತಪದಃ |
ಸ್ಖಲಸ್ರೋದಿಮ್ಯೈಶಂ ವಚನಮಿದಮಾಶ್ವಾಸಯತಿ ಮಾಂ
ಕದಾಚಿಶ್ನೈತ್ಯೇನ್ನಾ ಚರಿತದೃಢಯತ್ನೋ ಸ್ವವಿತಥಮ್ ||

ದಾರಿಯನ್ನು ನಾನು ಬಲ್ಲೆ. ಅದು ನೇರ ಮತ್ತು ಕಡಿದು. ಅದು ಕತ್ತಿಯ ಅಲಗಿನಂತೆ. ಅದರ ಮೇಲೆ ನಡೆಯಲು ನಾನು ಹರ್ಷಿಸುತ್ತೇನೆ. ಜಾರಿದೆನೋ—ರೋದಿಸುತ್ತೇನೆ. ಭಗವಂತನ ವಾಣಿ ಇದು: "ದೃಢಯತ್ನಶಾಲಿಗೆ ಎಂದೂ ವಿನಾಶವಿಲ್ಲ." ಆ ಅಭಯವಾಣಿಯಲ್ಲಿ ನನಗೆ ಸಂಪೂರ್ಣ ಶ್ರದ್ಧೆಯಿದೆ.

—ಮಹಾತ್ಮಾ ಗಾಂಧಿ.

---

* ಡಾ|| ಸಿ. ಡಿ. ದೇಶಮುಖ್‌ರವರ "ಗಾಂಧೀ ಸೂಕ್ತಿ ಮುಕ್ತಾವಲೀ" ಎಂಬ ಪುಸ್ತಕದಿಂದ. ಶ್ರೀಯುತರು ಮಹಾತ್ಮರ ನೂರು ಮುಕ್ತಕಸದೃಶ ನುಡಿಗಳನ್ನು ಮೇಲಿನಂತೆ ಸಂಸ್ಕೃತಕ್ಕೆ ಅನುವಾದಮಾಡಿ ಇಂಗ್ಲಿಷ್ ಮೂಲದೊಡನೆ ಪ್ರಕಟಿಸಿದ್ದಾರೆ. ಪ್ರಕಾಶಕರು: ಗಾಂಧೀ ಸ್ಮಾರಕ ನಿಧಿ. ರಾಜಘಾಟ್, ಹೊಸ ದೆಹಲಿ.

# "ಅಮರವಾಣಿ" *

ಮಾನ್ಯ ಅಧ್ಯಕ್ಷರೆ, ವಿದ್ವತ್ಪದವೀಧರರೆ, ಸಭಾಸದಮಹಾಶಯರೆ,

ಈಗ ನಡೆಯುತ್ತಿರುವ ನಾಡಹಬ್ಬದ ಮಂಗಳ ಮಹೋತ್ಸವದ ಸಮಯದಲ್ಲಿ ನೂತನ ಪದವೀಧರರು ಸಂಸ್ಕೃತ ವಿದ್ವತ್ಪ್ರಶಸ್ತಿಗಳನ್ನು ಪಡೆಯುವ ಸಮಾರಂಭದಲ್ಲಿ ಪ್ರಾಸ್ತಾವಿಕವಾದ ನಾಲ್ಕು ಮಾತುಗಳನ್ನು ಹೇಳಬೇಕೆಂದು ನನಗೆ ಕರೆ ಬಂದಾಗ ಮನಸ್ಸಿನಲ್ಲಿ ಮೊದಲು ಮೂಡಿದ ಭಾವಗಳೆಂದರೆ ಆಶ್ಚರ್ಯ ಮತ್ತು ಅಧೈರ್ಯ. ನಾನು ಶಾಲೆ ಕಾಲೇಜುಗಳಲ್ಲಿ ಮಿಕ್ಕ ವಿಷಯಗಳ ಜೊತೆಗೆ ಸಂಸ್ಕೃತವನ್ನು ಕೆಲಮಟ್ಟಿಗೆ ಕಲಿತವನೇ ಹೊರತು ಅದನ್ನೇ ಏಕನಿಷ್ಠೆಯಿಂದ ಪ್ರಾಚೀನ ಸಂಪ್ರದಾಯದ ಮೇರೆಗೆ ಅಧ್ಯಯನಮಾಡಿದವನಲ್ಲ; ನನ್ನ ಅಧ್ಯಾಪನದ ವಿಷಯವಾದರೂ ಸಂಸ್ಕೃತದ ಸಾಕುಮಗಳೆನ್ನಬಹುದಾದ ಕನ್ನಡವಲ್ಲದೆ ಪ್ರತ್ಯಕ್ಷವಾಗಿ ಸಂಸ್ಕೃತವಲ್ಲ. ಹೀಗಿರುವಲ್ಲಿ ನನಗೆ ಈ ಗೌರವ ಹೇಗೆ ಲಭಿಸಿತು ಎಂದು ಆಶ್ಚರ್ಯವಾಯಿತು. ನನಗೆ ಅಜ್ಞಾತವಾದ ಯಾವ ಸುಕೃತದಿಂದಲೋ ಒದಗಿರುವ ಈ ಗುರುಭಾರವನ್ನು ಹೇಗೆ ನಿರ್ವಹಿಸಿಯೇನು ಎಂದು ಅಧೈರ್ಯವೂ ಸುಳಿಯಿತು. ಆದರೂ ಸಂಸ್ಕೃತದಲ್ಲಿ ನನಗಿರುವ ಅಮಿತವಾದ ಪ್ರೀತಿಯಿಂದ ಪ್ರಚೋದನೆ ಪಡೆದು, ಅದರ ಮಹಿಮೆಯ, ಸೊಬಗಿನ ನಾಲ್ಕು ಎಳೆಗಳನ್ನಾದರೂ ಗುರುತಿಸುವಂತೆ ನನ್ನ ಕಣ್ಣುತೆರೆದ ಕೀರ್ತಿಶೇಷ ಆಚಾರ್ಯ ಎಂ. ಹಿರಿಯಣ್ಣನವರನ್ನು ಭಕ್ತಿಯಿಂದ ನೆನೆದು, ಈ ವಿದ್ವತ್ಸಭೆಯನ್ನು ಸಂಬೋಧಿಸಲು ದಿಟ್ಟತನದಿಂದ ಎದ್ದುನಿಂತಿದ್ದೇನೆ. ನನ್ನ ಆಲೋಚನೆಯ ಸರಣಿಯಲ್ಲಿ ಅಸಾಂಗತ್ಯ ವೇನಾದರೂ ಇದ್ದರೆ, ಆಧುನಿಕ ದೃಷ್ಟಿಯಿಂದ ನಿರೂಪಿಸುವಾಗ ನನ್ನ ಮಾತು ಒಮ್ಮೊಮ್ಮೆ ಯಾರೊಬ್ಬರ ಶ್ರದ್ಧೆಯನ್ನಾದರೂ ಕೆಣಕಿದರೆ, ಅದನ್ನೆಲ್ಲ ದಯವಿಟ್ಟು ಕ್ಷಮಿಸಬೇಕೆಂದು ಬೇಡುತ್ತೇನೆ.

ಮಾನವ ವ್ಯವಹಾರವು ಲೋಕದಲ್ಲಿ ತೊಡಗಿದಂದಿನಿಂದ ಎಷ್ಟೋ ಭಾಷೆಗಳು ಮೈದೋರಿವೆ, ಜನರ ನಾಲಗೆಗಳಲ್ಲಿ ನರ್ತಿಸಿವೆ, ಕಿವಿಗಳಲ್ಲಿ ಝೇಂಕರಿಸಿವೆ, ಸಾಹಿತ್ಯ ದಲ್ಲಿ ಉಲ್ಲೇಖಗೊಂಡಿವೆ, ಕಡೆಗೆ ಹೆಸರನ್ನು ಮಾತ್ರ ಉಳಿಸಿ, ಒಮ್ಮೊಮ್ಮೆ ಆ ಅವಶೇಷವೂ ಇಲ್ಲದೆ, ಗತಿಸಿವೆ. ಈ ಸಾವಿರಾರು ಭಾಷೆಗಳಲ್ಲಿ ಸಂಸ್ಕೃತದ ಸ್ಥಾನ

---

[1] ಹೇವಿಳಂಬಿನಾಮ ಸಂವತ್ಸರದ ಆಶ್ವಯುಜ ಶುದ್ಧ ನವಮಿ ಬುಧವಾರದಂದು (ತಾ|| ೨-೧೦-೧೯೫೭) ಮೈಸೂರು ಶ್ರೀಮನ್ಮಹಾರಾಜ ಸಂಸ್ಕೃತ ಮಹಾಪಾಠಶಾಲೆಯಲ್ಲಿ ನಡೆದ ಸಂಸ್ಕೃತ ವಿದ್ವತ್ಪ್ರಶಸ್ತಿ ವಿತರಣಮಹೋತ್ಸವ ಸಂದರ್ಭದಲ್ಲಿ ಮಾಡಿದ ಸಮಾರಂಭ ಭಾಷಣ.

ಬಲುಮಟ್ಟಿಗೆ ಅಪೂರ್ವದ್ದೆಂಬುದನ್ನು ಅದರ ವಿಷಯವಾಗಿ ಹೆಚ್ಚು ಶ್ರದ್ಧೆಯಿಲ್ಲದವರು ಕೂಡ ಒಪ್ಪಬೇಕೆಂದು ನನಗೆ ತೋರುತ್ತದೆ. ಸಂಸ್ಕೃತವು ಭರತಭೂಮಿಯಲ್ಲಿ ಜನರು ಆಡುವ ಮಾತಾಗಿ, ಸಮಾಜದ ಕೆಲವು ವರ್ಗಗಳಲ್ಲಾದರೂ ಮಕ್ಕಳು ಎಳೆತನದಿಂದ ತಾಯ ಮಡಿಲಲ್ಲಿ ಕಲಿತ ನುಡಿಯಾಗಿ ವಿಜೃಂಭಿಸಿದ ಕಾಲವೊಂದಿತ್ತು. ಸಂಸ್ಕೃತದ ಈ ಭಾಷಿತರೂಪ ಹೇಗಿದ್ದಿರಬಹುದೆಂದು ಆಧಾರ ಸಮೇತವಾಗಿ ವಿದ್ವಾಂಸರು ಪ್ರತಿಪಾದಿಸಿರುವುದೂ ಉಂಟು. ಆದರೆ ಸಂಸ್ಕೃತದ ಈ ಅವಸ್ಥಾನ ವಿಶೇಷವು ಮುಗಿದು ಬಹುಶಃ ಇಪ್ಪತ್ತು ಇಪ್ಪತ್ತೈದು ಶತಮಾನಗಳು ಕಳೆದಿರಬೇಕು. ಕಾಲಚಕ್ರದ ಪರಿವರ್ತನೆಯಲ್ಲಿ ಯಾವುದೊಂದು ಸ್ಥಿತಿಗೂ ಸ್ಥಿರತೆಯಿಲ್ಲ. ಮಹರ್ಷಿ ಪಾಣಿನಿಯ ಶಬ್ದಾನುಶಾಸನದ ರಕ್ಷಾಬಂಧನವಿದ್ದರೂ ಭಾಷಾಗತಿ ನಿಲ್ಲಲಿಲ್ಲ. ಪ್ರಾಕೃತಗಳು ಬೆಳೆದುವು; ಅಪಭ್ರಂಶಗಳು ಆವಿರ್ಭವಿಸಿದುವು; ಇಂದಿನ ಹಿಂದಿ, ಬಂಗಾಳಿ, ಮರಾಠಿ ಮೊದಲಾದ ಹತ್ತಾರು ಶಾಖೆಗಳಾಗಿ ಭಾರತೀಯ-ಆರ್ಯ ಮೂಲಭಾಷೆ ಹರಡಿಕೊಂಡಿತು. ಇತ್ತ ತಮಿಳು, ತೆಲುಗು, ಕನ್ನಡ ಮೊದಲಾದ ದ್ರಾವಿಡಭಾಷೆಗಳಂತೂ ತಮ್ಮ ದಾರಿಯಲ್ಲಿ ಹರಿದುವು. ಹೀಗಾಗಿ ಇಂದಿನ ಭಾರತದಲ್ಲಿ ಬಹುಶಃ ಯಾವ ವರ್ಗದಲ್ಲಿ ಕೂಡ ಸಂಸ್ಕೃತವು ಪರಂಪರಾಗತವಾದ ಮನೆಮಾತಾಗಿ ಉಳಿದಿಲ್ಲ.

ಹೀಗೆಂದ ಮಾತ್ರಕ್ಕೆ ಸಂಸ್ಕೃತವು ಅಳಿಯಿತೆಂದು ಸರ್ವಾತ್ಮನಾ ಅಭಿಪ್ರಾಯ ವಲ್ಲ. "ಸಂಸ್ಕೃತವು ಮೃತಭಾಷೆ" ಎಂಬ ಹೇಳಿಕೆ ಕೆಲವರ ಬಾಯಿಂದ ಒಮ್ಮೊಮ್ಮೆ ಹೊರಬೀಳುವುದುಂಟು. ಅದರಲ್ಲಿ ಒಂದು ವಕ್ರಧ್ವನಿಯನ್ನು ಗುರುತಿಸಿ ಅಭಿಮಾನಿಗಳು ಸಹಜವಾಗಿ ಕೆರಳುವುದೂ ಉಂಟು. "ಮೃತಭಾಷೆ" ಎಂಬುದರ ಸರಿಯಾದ ಅರ್ಥವನ್ನು ಗ್ರಹಿಸಿದರೆ ಇಲ್ಲಿಯ ವಿವಾದ ಬಲುಮಟ್ಟಿಗೆ ಪರಿಹಾರವಾಗಬಹುದೆಂದು ತೋರುತ್ತದೆ. ಇದೊಂದು ಲಾಕ್ಷಣಿಕೋಕ್ತಿ. ಒಂದು ಭಾಷೆ ಸಮಾಜದ ಯಾವು ದಾದರೂ ಒಂದು ಭಾಗದ ಮನೆಮಾತಾಗಿ, ಅದರ ಸಾಮಾನ್ಯ ವ್ಯವಹಾರದ ಸಾಧನವಾಗಿ ಉಳಿದಿಲ್ಲ ಎಂಬುದಿಷ್ಟೇ ಈ ಚರ್ಚಾಸ್ಪದವಾದ ಮಾತಿನ ಸರಳಾರ್ಥ. ಈ ಅರ್ಥದಲ್ಲಿ—ಈ ಅರ್ಥದಲ್ಲಿ ಮಾತ್ರ—ಪ್ರಾಚೀನ ಗ್ರೀಕ್, ಲ್ಯಾಟಿನ್ ಮೊದಲಾದವುಗಳಂತೆ ಸಂಸ್ಕೃತವೂ ಮೃತಭಾಷೆ ಎಂದು ಯಾರಾದರೂ ಹೇಳಿದರೆ, ಅಭಿಮಾನಿಗಳು ಅದರಿಂದ ಮನಸ್ಸಿಗೆ ಖೇದ ಹತ್ತಿಸಿಕೊಳ್ಳಬೇಕಾಗಿಲ್ಲ. ಇನ್ನೊಂದು ರೀತಿಯಲ್ಲಿ ಸಂಸ್ಕೃತವು ಪ್ರಪಂಚದ ಅನೇಕ ಜೀವಂತ ಭಾಷೆಗಳಿಗಿಂತ ಹೆಚ್ಚು ಜೀವಂತವಾಗಿ, ಅಮೃತವಾಣಿಯಾಗಿ ಕಂಗೊಳಿಸುತ್ತಿದೆಯೆಂಬುದನ್ನು ಅಷ್ಟೇನೂ ಕಷ್ಟವಿಲ್ಲದೆ ಮನಗಾಣಿಸಬಹುದು.

ನಮ್ಮ ಹಿರಿಯರ ನಂಬಿಕೆಯಂತೆ ಸಂಸ್ಕೃತವು ದೇವತೆಗಳ—ಅಮರರ—ಭಾಷೆ ಹೌದೆ ಅಲ್ಲವೆ ಎಂಬುದು ನಮ್ಮ ಸಾಮಾನ್ಯ ಪ್ರಜ್ಞೆಗೆ ನಿಲುಕದಿರುವ ವಿಷಯವಾದ ಕಾರಣ ಅದನ್ನು ಕುರಿತು ನಾನು ಏನನ್ನೂ ಹೇಳಲು ಇಷ್ಟಪಡುವುದಿಲ್ಲ. ಹಿಂದೂ ಧರ್ಮದ ಶ್ರುತಿಸ್ಮೃತಿಗಳು, ಇತಿಹಾಸಪುರಾಣಗಳು ಸಂಸ್ಕೃತದಲ್ಲೇ ರೂಪುತಳೆದಿರುವುದರಿಂದ ಅದು ನಮ್ಮ ಜನಜೀವನದ ಪೂಜ್ಯವೂ ಅವಿಭಾಜ್ಯವೂ ಆದ ಅಂಶವಾಗಿ ನೆಲೆಗೊಂಡು, ಆ ಮಟ್ಟಿಗಾದರೂ "ಅಮರ"ವಾಗಿ ಪ್ರತಿಷ್ಠಿತವಾಗಿರುವುದು ನಿಜ. ಎಲ್ಲರೂ ಬಲ್ಲ ಈ ವಿಷಯವನ್ನು ವಿಸ್ತರಿಸುವ ಉದ್ದೇಶವೂ ಇಂದು ನನಗಿಲ್ಲ. ಲೌಕಿಕ ದೃಷ್ಟಿಗೆ ಕೂಡ ಈ ಭಾಷೆಯಲ್ಲಿ ಗೋಚರವಾಗುವ ಇನ್ನೊಂದು ಅಮರತ್ವವನ್ನು ಇಲ್ಲಿ ಸ್ವಲ್ಪಮಟ್ಟಿಗೆ ಪ್ರಸ್ತಾವಿಸಬೇಕೆನ್ನಿಸುತ್ತದೆ. ಸಂಸ್ಕೃತದ ಶಬ್ದಕೋಶವನ್ನು ತೆಗೆದುಕೊಳ್ಳೋಣ. ಸಂಸ್ಕೃತದ ಪ್ರಾಚೀನಾವಸ್ಥಾನದಿಂದ ಈಚೆಗೆ ಪ್ರಾಕೃತಗಳೂ ಅಪಭ್ರಂಶಗಳೂ ಭಾರತೀಯರನೇಕರ ನಾಲಗೆಗಳಲ್ಲಿ ತಾಂಡವವಾಡಿದುವಷ್ಟೆ. ಆದರೆ ಅವುಗಳಲ್ಲಿ ರೂಪುಗೊಂಡ ಅನೇಕ ತದ್ಭವಗಳು ಈಗ ಎಲ್ಲಿ? "ಕಿದ", "ಖೀಣ", "ದಲಿದ್ದ", "ಪುಪ್ಫ" ಎಂದು ಕಿವಿಗೆ ಬಿದ್ದರೆ ಅಪ್ರವೀಣರು ಕ್ಷಣಕಾಲವಾದರೂ ಭ್ರಮೆಗೊಳ್ಳುತ್ತಾರೆ. "ಕೃತ", "ಕ್ಷೀಣ", "ದರಿದ್ರ", "ಪುಷ್ಪ" ಮೊದಲಾದ ಸಂಸ್ಕೃತ ರೂಪಗಳನ್ನು ಕೇಳಿದಾಗ ಆ ತೊಡಕು ಪರಿಹಾರವಾಗುತ್ತದೆ. ಸಂಸ್ಕೃತ ನಾಟಕಗಳನ್ನು ಓದುವವರಲ್ಲಿ ಎಷ್ಟುಮಂದಿ ಪ್ರಾಕೃತದ ವಾಕ್ಯಗಳನ್ನು ಅವುಗಳ ಪಾಡಿಗೇ ಬಿಟ್ಟು ಸಂಸ್ಕೃತಚ್ಛಾಯೆಯನ್ನೇ ಸೌಲಭ್ಯಕ್ಕಾಗಿ ಆಶ್ರಯಿಸುವುದಿಲ್ಲ! ಕಾಲಗತಿಯಲ್ಲಿ ಈಚೆಗೆ ಬಂದ ತದ್ಭವಗಳಿಗಿಂತ ಮೂಲ ಸಂಸ್ಕೃತ ರೂಪಗಳೇ ಇಂಥ ಅನೇಕ ಸಂದರ್ಭಗಳಲ್ಲಿ ದೃಢಸತ್ತ್ವವುಳ್ಳವುಗಳಂತೆ ವರ್ತಿಸಿವೆ.

ಕನ್ನಡದ ದಿಕ್ಕಿನಿಂದಲೂ ಈ ವಿಷಯವನ್ನು ಸಮರ್ಥಿಸಬಹುದು. ಕನ್ನಡದ ಪ್ರಾಚೀನಾವಸ್ಥೆಯಲ್ಲಿ ಸಾವಿರ ವರ್ಷಗಳಿಗೆ ಹಿಂದೆ, ಅದಕ್ಕೂ ಹಿಂದೆ, ನೂರಾರು ಸಂಸ್ಕೃತ ಶಬ್ದಗಳು ಭಾಷೆಗೆ ಸೇರಿದಂತೆಯೇ, ನೂರಾರು ತದ್ಭವಗಳೂ—ಬಲುಮಟ್ಟಿಗೆ ಪ್ರಾಕೃತಗಳ ಮೂಲಕ—ಬಳಕೆಗೆ ಬಂದುವು. ಇವುಗಳಲ್ಲಿ ಕೆಲವು ಕೇವಲ ವೈದುಷ್ಯದ ಶಬ್ದಗಳಾಗಿರಬಹುದು. ಆದರೆ ಬೆಜ್ಜ, ಮಿಟ್ಟು, ಅಂಚೆ, ಸಕ್ಕಿ—ಇಂಥವು ಜನರೂಢಿಯ ಮಾತಿನಲ್ಲೂ ಹರಡಿದ್ದುವೆಂಬುದರಲ್ಲಿ ಸಂದೇಹವಿಲ್ಲ. ಈಗ ಅವು ವಿದ್ವಾಂಸರಲ್ಲದ ಯಾರಿಗೆ ಅರ್ಥವಾಗುತ್ತವೆ? ವೈದ್ಯ, ಮೃತ್ಯು, ಹಂಸ, ಸಾಕ್ಷಿ ಎಂಬ ಸಂಸ್ಕೃತ ರೂಪಗಳನ್ನೇ ಈಗ ಸಾಮಾನ್ಯರೂ ಬಳಸುತ್ತಾರೆ. ಇಷ್ಟೇ ಅಲ್ಲ. ಕನ್ನಡದಲ್ಲಿ ಆದಿಯಿಂದ ರೂಢಿಯಲ್ಲಿದ್ದ ಅನೇಕ ದ್ರಾವಿಡ ಶಬ್ದಗಳನ್ನು ಕೂಡ ಸಂಸ್ಕೃತ ಶಬ್ದಗಳು ಮೂಲೆಗೊತ್ತಿ ಅವುಗಳ ಸ್ಥಾನವನ್ನು ಜನತೆಯ ನುಡಿಯಲ್ಲಿ ಆಕ್ರಮಿಸಿವೆ. ಬಾನ್,

ನೇಸಱ್, ಪೆಱೆ, ಅಱಿಲ್ ಎಂದರೆ ಏನೆಂದು ತಿಳಿಯಬೇಕಾದರೆ ಹಳಗನ್ನಡದ ನಿಘಂಟಿಗೆ ಶರಣುಹೋಗಬೇಕು. ಆಕಾಶ, ಸೂರ್ಯ, ಚಂದ್ರ, ನಕ್ಷತ್ರ ಎಂದು ಕ್ರಮ ವಾಗಿ ಇವುಗಳ ಅರ್ಥವೆಂದು ಸಂಸ್ಕೃತದ ಮಾತಿನ ಮೂಲಕ ತಿಳಿದುಕೊಳ್ಳಬೇಕು. ಕನ್ನಡಿಗರ ಮಾತಿನಲ್ಲೇ ಹಳಗನ್ನಡದ ಹಲವು ಶಬ್ದಗಳು ಅಳಿದು ಅವುಗಳ ಸ್ಥಾನದಲ್ಲಿ ಸಂಸ್ಕೃತ ಶಬ್ದಗಳು ಸಜೀವವಾಗಿ ಪ್ರಯೋಗದಲ್ಲಿವೆಯೆಂಬುದು ಇದರಿಂದ ಸ್ಫುಟ ವಾಗುವುದಿಲ್ಲವೆ?

ಬಳಕೆಯ ಪದಾರ್ಥಗಳನ್ನು ಕುರಿತೇ ಹೀಗಾದ ಮೇಲೆ ಶಾಸ್ತ್ರವಿಷಯವನ್ನು ಕುರಿತು ಏನನ್ನು ಹೇಳುವುದು! 'ಕಾವ್ಯಾದರ್ಶ'ದಲ್ಲಿ ದಂಡಿ ಬೇರೊಂದು ಪ್ರಸಂಗ ದಲ್ಲಿ ಹೇಳಿದ "ಶಾಸ್ತ್ರೇಷ್ವಸ್ಯೈವ ಸಾಮ್ರಾಜ್ಯಂ" ಎಂಬ ಮಾತನ್ನು ಸಂಸ್ಕೃತಕ್ಕೆ ಅನ್ವಯಿಸಬೇಕೆನ್ನಿಸುತ್ತದೆ. ಪ್ರಾಚೀನಕಾಲದಲ್ಲಂತೂ ನಮ್ಮ ದೇಶದಲ್ಲಿ ಸಂಸ್ಕೃತ ವೊಂದೇ ಶಾಸ್ತ್ರಭೂಮಿಕೆಯಾಗಿತ್ತು. ಸೂಕ್ಷ್ಮವಾದ, ಗಹನವಾದ ಸಮಸ್ತವಿಚಾರ ಸರಣಿಗೂ ಅದೇ ಪಾರಿಭಾಷಿಕ ಶಬ್ದಕೋಶವನ್ನು ಒದಗಿಸಿತು. ಹಿಂದಿನ ಶಾಸ್ತ್ರಗಳು ಹಾಗಿರಲಿ. ಇಂದಿನ ಅತ್ಯಾಧುನಿಕ ವಿಜ್ಞಾನಗಳ ನಿರೂಪಣೆಗೆ ಕೂಡ ಈ ಶಬ್ದಭಂಡಾರ ವನ್ನು ಅಳವಡಿಸಿಕೊಳ್ಳಬಹುದು. ಇತ್ತ ಉಪಸರ್ಗಗಳು, ಅತ್ತ ಪ್ರತ್ಯಯಗಳು, ನಡುವೆ ಧಾತುಗಳು: ಇವನ್ನು ಹದವರಿತು ಜೋಡಿಸಿಕೊಂಡರೆ ಯಾವುದೇ ಭಾವ ವನ್ನಾದರೂ ಅಡಕವಾಗಿ ಧಾರಣೆಮಾಡಬಲ್ಲ, ಎಂಥ ಸೂಕ್ಷ್ಮ ಭೇದಗಳನ್ನಾದರೂ ಪ್ರತ್ಯೇಕಿಸಬಲ್ಲ ಶಬ್ದರಾಶಿಯನ್ನು ಸೃಷ್ಟಿಮಾಡಬಹುದು. ಆದರೆ ಅಂಥ ಶಬ್ದಗಳು ಕ್ಲಿಷ್ಟವಾಗದಂತೆ, ಕೇವಲ ವಿದಗ್ಧಪ್ರಿಯವಾಗದಂತೆ ಮಾತ್ರ ಎಚ್ಚರಿಕೆ ವಹಿಸಬೇಕು. ಆರ್ಯವರ್ಗ ದ್ರಾವಿಡವರ್ಗಗಳಿಗೆ ಸೇರಿದ ಎಲ್ಲ ಭಾರತೀಯ ಭಾಷೆಗಳೂ—ಒಂದೆರಡನ್ನು ಬಿಟ್ಟರೆ—ಸಂಸ್ಕೃತದಿಂದಲೇ ತಮ್ಮ ಶಾಸ್ತ್ರೀಯ ಶಬ್ದಸಂಪತ್ತನ್ನು ಮುಖ್ಯವಾಗಿ ಪಡೆದಿರತಕ್ಕವು, ಇನ್ನು ಮುಂದೆಯೂ ಪಡೆಯತಕ್ಕವು. ಮೊನ್ನೆ ತಾನೆ ಹೊರಬಿದ್ದ ಕನ್ನಡ ಭೌತವಿಜ್ಞಾನ ಗ್ರಂಥವೊಂದರ 'ಪರಿಭಾಷೆಯ ಶಬ್ದಕೋಶ'ವನ್ನು ಹಾಗೆಯೇ ತೆರೆದು ನೋಡಿದೆನು. ಅದರ ಮೊದಲನೆಯ ಪುಟದಲ್ಲಿ—ಅಕ್ಷ, ಅಗ್ನಿಮಾಪಕ, ಅಡಿ, ಅಡಿ ಬತ್ತಿ, ಅಡ್ಡಲೆ, ಅಣುಗಣಿತ, ಅಣುಗಳು, ಅಣುಚಲನಮತ, ಅತಿಕೇಂದ್ರತೆ, ಅತಿನೀಲ, ಅತಿಶ್ರುತಿ, ಅತ್ಯಲ್ಪದಿಕ್ಪ್ಲೇಟ, ಅಧಶ್ಚರ, ಅಧಿಪತಿತರಶ್ಮಿ, ಅಧಿಪಾತಕೋನ, ಅಧಿಪಾತ ಸಮತಲ, ಅಧೀನತರಂಗಮುಖ, ಅಧೋವಾಟ, ಅನಿಲತಾಪಮಾಪಕ, ಅನುಕಾಂತೀಯ ವಸ್ತುಗಳು, ಅನುಪಾತಸೂಚಕಸಂಖ್ಯೆ—ಇಷ್ಟು ಶಬ್ದಗಳಿವೆ. ಈ ಇಪ್ಪತ್ತೊಂದು ಶಬ್ದಗಳಲ್ಲಿ ಮೂರು ಹೊರತು ಮಿಕ್ಕೆಲ್ಲವೂ ಕೇವಲ ಸಂಸ್ಕೃತದವು! ಆ ಪುಸ್ತಕದ ಮಿಕ್ಕ ಪುಟಗಳಲ್ಲೂ ಈ ಪರಿಮಾಣ ಹೆಚ್ಚು ಕಡಮೆ ಹೀಗೆಯೇ ಇರಬೇಕೆಂದು ನಂಬಬಹುದು.

ಪರಿಭಾಷೆಯ ವಿಚಾರ ಹಾಗಿರಲಿ. “ ರೇಡಿಯೋ ” ಎಂಬುದಕ್ಕೆ ನಮ್ಮ ದೇಶ ಭಾಷೆಗಳಲ್ಲಿ ಸಮಾನಪದ ಏನಾಗಿರಬೇಕೆಂಬ ವಿಚಾರ ಕೆಲವು ವರ್ಷಗಳ ಹಿಂದೆ ಹೊರಟಾಗ “ ಆಕಾಶವಾಣಿ ” ಎಂಬ ಸಂಸ್ಕೃತ ಶಬ್ದವನ್ನು ಕುಶಲಮತಿಗಳೊಬ್ಬರು ಎತ್ತಿ ಹಿಡಿದರು. ಅಶರೀರವಾದ ದೈವೀವಾಣಿಯೆಂಬ ಹಳೆಯ ಅರ್ಥಕವಚವನ್ನು ಅದು ಕಳಚಿಬಿಟ್ಟು ಹೊಸ ಅರ್ಥದಲ್ಲಿಯೇ ಈಗ ರೂಢಿಗೊಂಡಿದೆ. “ ಬಾನುಲಿ ” ಎಂಬ ಅದಕ್ಕೆ ಸಮನಾದ ಕನ್ನಡ ಶಬ್ದವನ್ನು ಪ್ರಖ್ಯಾತ ವಿದ್ವಾಂಸರೊಬ್ಬರು ಸೂಚಿಸಿದರೂ ಅದನ್ನು ನಮ್ಮ ಜನತೆ ಬಳಕೆಗೆ ತರಲಿಲ್ಲ. (ತಮಿಳಿನಲ್ಲಿ ಮಾತ್ರ “ ವಾನೊಲಿ ” ಎಂಬುದು ಪ್ರಚುರವಾಗಿದೆ.) ನಮ್ಮ ದೇಶಭಾಷೆಗಳಲ್ಲಿ ವೈಜ್ಞಾನಿಕ ಶಾಸ್ತ್ರಗಳನ್ನು ಪ್ರೌಢ ತರಗತಿಗಳಿಗೆ ಬೋಧಿಸಬೇಕಾದರೆ, ಆ ವಿಷಯದ ಗ್ರಂಥರಾಶಿ ಬೆಳೆಯ ಬೇಕಾದರೆ, ಅಖಿಲ ಭಾರತಕ್ಕೆ ಅನ್ವಯಿಸಬಲ್ಲ ಪಾರಿಭಾಷಿಕ ಶಬ್ದಕೋಶವು ನಿರ್ಮಾಣ ವಾಗಿ ಅಂಗೀಕಾರ ಪಡೆಯಬೇಕಾದದ್ದು ಅತ್ಯವಶ್ಯ. ಕೆಲವು ಜಟಿಲ ಸಮಸ್ಯೆ ಗಳನ್ನು ಇಲ್ಲಿ ಎದುರಿಸಬೇಕಾಗಿರುವುದು ನಿಜವಾದರೂ, ಈ ಕೋಶದ ಬಹುಭಾಗ ಸಂಸ್ಕೃತವನ್ನೇ ಅವಲಂಬಿಸಬೇಕೆಂಬುದು ಮಾತ್ರ ನಿರ್ವಿವಾದ.

“ ಶಾಸ್ತ್ರೇಷ್ವಸ್ಯೈವ ಸಾಮ್ರಾಜ್ಯಂ ” ಎಂಬ ಶ್ಲೋಕಪಾದವನ್ನು ಸಂಸ್ಕೃತಕ್ಕೆ ಅನ್ವಯಿಸಿ ಮಾತಾಡಿದೆನಷ್ಟೆ. “ ಕಾವ್ಯೇಷ್ವಪ್ಯೇತದೀಪ್ಸಿತಂ ” ಎಂಬ ಅದರ ಮುಂದಿನ ಪಾದವೂ ಇಲ್ಲಿಗೆ ಅಪ್ರಕೃತವಲ್ಲ. ಕನ್ನಡ, ತೆಲುಗು, ಮಲಯಾಳ ಮೊದ ಲಾದ ದ್ರಾವಿಡ ಭಾಷೆಗಳ ಪ್ರಾಚೀನ ಸಾಹಿತ್ಯವನ್ನೇ ನೋಡಬಹುದು. ಇಲ್ಲಿಯ ಕವಿಗಳು ಸ್ವಭಾಷೆಯಲ್ಲಿ ಹೇಗೋ ಹಾಗೆ ಸಂಸ್ಕೃತದಲ್ಲೂ ನಿಷ್ಣಾತರಾಗಿದ್ದವರು; ಸಂಸ್ಕೃತದ ಶಬ್ದಕೋಶವೆಲ್ಲ ತಮ್ಮ ಆಸ್ತಿಯೆಂದು ನಂಬಿದ್ದವರು. ಕನ್ನಡದ ಚಂಪೂಕಾವ್ಯವೊಂದನ್ನು ಕೈಗೆ ತೆಗೆದುಕೊಂಡಾಗ ಅಲ್ಲಿ ಕಾಣಬರುವ ಸಂಸ್ಕೃತ ಶಬ್ದ ಗಳನ್ನೆಲ್ಲ ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ‘ ಅಮರಕೋಶ ’ದ ಸಹಾಯವೂ ಒಮ್ಮೊಮ್ಮೆ ಸಾಲದೆ ಹೋಗುತ್ತದೆ. ಉದಾಹರಣೆಗೆ, “ ವ್ಯಾಸ ಮುನೀಂದ್ರ ರುಂದ್ರ ವಚನಾಮೃತ ವಾರ್ಧಿಯನೀಸುವೆಂ ” ಎಂಬುದು ‘ ಪಂಪಭಾರತ ’ದ ಒಂದು ವಾಕ್ಯ. ಇಲ್ಲಿ ಸಮಾಸಮಧ್ಯದಲ್ಲಿ ಬಂದಿರುವ “ ರುಂದ್ರ ” ಎಂಬ ಶಬ್ದ ‘ ಅಮರ ಕೋಶ ’ ದಲ್ಲಿಲ್ಲ; ಮೋನಿಯರ್ ವಿಲಿಯಮ್ಸ್ ಅವರ ಸಂಸ್ಕೃತ—ಇಂಗ್ಲಿಷ್ ನಿಘಂಟಿನಲ್ಲಿ “ ಸಮೃದ್ಧ ” ಎಂದು ಯಾವುದೋ ಕೋಶದ ಆಧಾರದಿಂದ ಅರ್ಥ ಕೊಟ್ಟಿದೆ; ಸಾಹಿತ್ಯದಲ್ಲಿ ಇದರ ಪ್ರಯೋಗ ಕಾಣಬಂದಿಲ್ಲವೆಂಬ ಸೂಚನೆಯಿದೆ. (“ ರುಂದ್ರಃ ಪರಿಪೂರ್ಣಃ ” ಎಂದು ನನ್ನ ಗುರುಗಳಾಗಿದ್ದ ಕೀರ್ತಿಶೇಷ ಪಂಡಿತ ಕಾಸಕಾನಹಳ್ಳಿ ವರದಾಚಾರ್ಯರ ಬಾಯಿಂದ ಹಿಂದೆ ಕೇಳಿದ್ದು ಇಲ್ಲಿ ನೆನಪಿಗೆ ಬರುತ್ತದೆ; ಇದು

ಎಲ್ಲಿಯ ಉಕ್ತಿಯೋ ನನಗೆ ತಿಳಿಯದು.) ಆದರೆ "ರುಂದ್ರ" ಎಂಬುದು ಸಂಸ್ಕೃತ ಭಾಷೆಯಲ್ಲಿ ಭಾರತದ ಕೆಲವು ಪ್ರದೇಶಗಳಲ್ಲಾದರೂ ಪ್ರಚುರವಾಗಿತ್ತೆಂದು ನಂಬಬಹುದು; ಉದಾಹರಣೆಗೆ, ಅದು ಕ್ರಿ.ಶ. ಸುಮಾರು ಐದನೆಯ ಶತಮಾನದಷ್ಟು ಹಿಂದೆಯೇ ಕದಂಬರ ಕೆಲವು ಸಂಸ್ಕೃತ ಶಾಸನಗಳಲ್ಲಿ ಗೋಚರವಾಗುತ್ತದೆ ("ಜಯತಿ ಭಗವಾನ್ ಜಿನೇಂದ್ರೋ ಗುಣರುಂದ್ರಃ ಪ್ರಥಿತ ಪರಮಕಾರುಣಿಕಃ). "ಅಗಲವಾದ, ವಿಸ್ತಾರವಾದ" ಎಂಬುದು ಬಹುಶಃ ಇದರ ಮೂಲಾರ್ಥವೆಂದು ನಿರ್ಧರಿಸಬೇಕಾದರೆ, "ಲಾಂಬಿ," "ರುಂದಿ" ಎಂದು ಇಂದಿಗೂ ಮರಗೆಲಸದವರ ಮಾತಿನಲ್ಲಿ ಕೇಳಬರುವ ರೂಢಿಯ ಶಬ್ದಗಳನ್ನು ಜ್ಞಾಪಿಸಿಕೊಳ್ಳಬೇಕು.

ಅಪ್ರಚುರವಾದ ಸಂಸ್ಕೃತ ಶಬ್ದಗಳನ್ನು ಹಿಡಿತವಿಲ್ಲದೆ ಕನ್ನಡದಲ್ಲಿ ಬಳಸಬಾರದೆಂಬ ಭಾವನೆ ಸಹಜವಾಗಿ ಹಿಂದಿನ ಕಾಲದಲ್ಲೇ ತಲೆಯೆತ್ತಿತ್ತು. ಅದು ಎಲ್ಲರೂ ಒಪ್ಪಬೇಕಾದ ವಿಚಾರವೇ ಸರಿ. ಆದರೆ ಮಿತವಾಗಿ ವಿಹಿತವಾಗಿ ಪದಮೈತ್ರಿಯನ್ನರಿತು ಸಂಸ್ಕೃತ ಶಬ್ದಗಳನ್ನು—ಸಮಾಸಗಳನ್ನು ಕೂಡ—ಉಪಯೋಗಿಸಿದರೆ ಅದರಿಂದ ಅರ್ಥದರ್ಶನವೂ ರಸಪೋಷಣೆಯೂ ಮಿಗಿಲಾಗಿ ಒದಗುವುವೆಂಬುದನ್ನು ಕನ್ನಡದ ಹಿಂದಿನ ಕಾವ್ಯಗಳಲ್ಲಿ ಮಾತ್ರವಲ್ಲದೆ ಇಂದಿನ ಕವಿಕೃತಿಗಳಲ್ಲೂ ಅಲ್ಲಲ್ಲಿ ನೋಡಿ ಮೆಚ್ಚಬಹುದು.

ಸಂಸ್ಕೃತ ವಿದ್ವಾಂಸರ ಸಭೆಯಲ್ಲಿ ಹೀಗೆ ದೇಶಭಾಷೆಗಳ ಮಾತನ್ನೇ ಹೆಚ್ಚಾಗಿ ನಾನು ಎತ್ತಿದ್ದು ಸಮುಚಿತವೆ ಎಂಬ ಸಂದೇಹ ತಮ್ಮಲ್ಲಿ ಕೆಲವರಿಗೆ ಉಂಟಾಗಿರಬಹುದು. ಆದರೆ ಇದು ನನ್ನಿಂದ ಉದ್ದೇಶಪೂರ್ವಕವಾಗಿ ಆದ ವಿಷಯಾಂತರ. ಇದರಮೇಲೆ ಇದು ಅಂಥ ವಿಷಯಾಂತರವೂ ಅಲ್ಲ. ಸಂಸ್ಕೃತವಾಣಿ ಇಂದಿಗೂ ಹೇಗೆ ಸಜೀವವಾಗಿ ನಮ್ಮ ಜನತೆಯ ನುಡಿಯಲ್ಲಿ ಹಾಸುಹೊಕ್ಕಾಗಿ ವಿರಾಜಿಸುತ್ತಿದೆ, ಅದರ ಸುವರ್ಣಸಂಪತ್ತು ನಮ್ಮ ದೇಶಭಾಷೆಗಳನ್ನು ಇಂದಿಗೂ ಹೇಗೆ ಅಲಂಕರಿಸುತ್ತಿದೆ, ಅದರ ಅಮೃತರಸವು ಆಧುನಿಕ ಶಾಸ್ತ್ರ ಸಾಹಿತ್ಯಗಳಿಗೆ ಇಂದಿಗೂ ಹೇಗೆ ತ್ರಾಣದಾಯಕವಾಗಿದೆ ಎಂಬುದನ್ನು ಕೆಲವುಮಟ್ಟಿಗೆ ವಿಶದಪಡಿಸಿ, ಸಂಸ್ಕೃತ ವಿದ್ವಾಂಸರ ಗಮನವನ್ನು ಸಂಸ್ಕೃತದ ಈ "ಸೀಮೋಲ್ಲಂಘನ"ದ ಕಡೆಗೆ—ಈ ವಿಜಯಯಾತ್ರೆಯ ಕಡೆಗೆ—ಸೆಳೆಯುವುದು ನನ್ನ ಇಂದಿನ ಉದ್ದೇಶಗಳಲ್ಲಿ ಒಂದು. ಅಲ್ಲದೆ, ದೇಶಭಾಷೆಗಳಲ್ಲಿ ಹೀಗೆ ಸಂಸ್ಕೃತವು ಕಾಲದಿಂದ ಕಾಲಕ್ಕೆ ಅಭಿನವರೂಪಗಳಲ್ಲಿ ಅವತರಿಸುತ್ತಿರುವಾಗ ಆ ವಿಷಯವಾಗಿ ಸಂಸ್ಕೃತ ವಿದ್ವಾಂಸರು ಆಸಕ್ತಿ ತಳೆಯುವುದು ಅವಶ್ಯವೆಂದು ಸೂಚಿಸುವುದೂ ನನ್ನ ಮನಸ್ಸಿನ ಆಶಯ.

ಆದರೂ, ಈ ದಿನ ಇಲ್ಲಿ ನೆರೆದಿರುವುದು ಸಂಸ್ಕೃತವಿದ್ಯೆಯನ್ನೇ ಮುಖ್ಯ ವಿಷಯ

ವಾಗಿ ಆರಿಸಿಕೊಂಡು ಅದರ ಸಾಧನೆಗಾಗಿ ಹಲವು ವರ್ಷಗಳ ವ್ಯಾಸಂಗದೀಕ್ಷೆಯನ್ನು ಕೈಕೊಂಡವರ ಸಭೆ, ಬಹುಮುಖವಾದ ಅದರ ಶಾಸ್ತ್ರಸಾಹಿತ್ಯಗಳಲ್ಲಿ ಒಂದು ಶಾಖೆಯ ಲ್ಲಾದರೂ ಪರಿಣತರೆನಿಸಿ ಪದವೀಧರರಾಗಿರುವವರ ಸಭೆ. ಇಷ್ಟುಮಂದಿ ವಿದ್ವಾಂಸರು ತಮ್ಮ ತಾರುಣ್ಯದ ಇಷ್ಟೊಂದು ಕಾಲವನ್ನು ಇದಕ್ಕೆ ಮುಡಿಪಾಗಿ ಸಲ್ಲಿಸಿರುವುದು ಯಾವ ಲಾಭಕ್ಕಾಗಿ? ಹಾಗೆ ದೃಢವ್ರತದಿಂದ ಅಭ್ಯಾಸಮಾಡದ ನಮ್ಮಂಥವರು ಕೂಡ ಇದರಿಂದ ಯಾವ ಫಲವನ್ನು ನಿರೀಕ್ಷಿಸಿ ಇದರ ಅನುಶೀಲನೆಯಲ್ಲಿ ಹಲವು ದಿನಗಳನ್ನು ಕಳೆದಿದ್ದೇವೆ?

ಇದಕ್ಕೆ ಉತ್ತರ ಸ್ಪಷ್ಟವಾಗಿಯೇ ಇದೆ! ವ್ಯಾವಹಾರಿಕವಾದ ಯಾವ ಪ್ರಯೋಜನವನ್ನಾಗಲಿ, ಆರ್ಥಿಕವಾದ ಯಾವ ಲಾಭವನ್ನಾಗಲಿ ಇದರಿಂದ ಗಳಿಸುವ ಆಸೆ ಬಹುದೂರ. ಸಂಸ್ಕೃತ ಕಲಿತು ಹಣವನ್ನು ಗಳಿಸುತ್ತೇನೆ, ಮನೆಯನ್ನು ಕಟ್ಟಿಸು ತ್ತೇನೆ, ಹೆಂಡತಿಗೆ ಒಡವೆಮಾಡಿಸಿಕೊಡುತ್ತೇನೆ, ಮಕ್ಕಳನ್ನು ಅಭಿವೃದ್ಧಿಗೆ ತರುತ್ತೇನೆ —ಎಂಬ ಉದ್ದೇಶದಿಂದ ಹೊರಡುವವನು ಅನಭಿಜ್ಞನೆಂದು ಹೇಳದೆ ವಿಧಿಯಿಲ್ಲ. ಈ ಯುಗದಲ್ಲಿ "ಅರ್ಥಕರಿ" ಯಾದ ವಿದ್ಯೆ ಇದಲ್ಲ. ಮೇಲುಗಳಿಕೆಯ ಮಾತಿರಲಿ. ಕಾರ್ಪಣ್ಯವಿಲ್ಲದೆ ಹೊಟ್ಟೆ ಹೊರೆಯುವುದೇ ಇದರಿಂದ ಕಠಿನ. ಕೈ ಸುಟ್ಟುಕೊಂಡ ಅನುಭವಿಯೊಬ್ಬನು ಈ ವಿದ್ಯೆಯ ಆಕರ್ಷಣೆಗೆ ಹೇಗೋ ಒಳಗಾದವರನ್ನು ಕುರಿತು ಎಷ್ಟೋ ಹಿಂದೆ ಹೇಳಿದ ಒಂದು "ಸುಭಾಷಿತ" ಇಂದಿಗೂ ನಮ್ಮ ಕಿವಿಗಳಲ್ಲಿ ಮೊರೆಯುತ್ತಿದೆ:

"ಬುಭುಕ್ಷಿತೈರ್ವ್ಯಾಕರಣಂ ನ ಭುಜ್ಯತೇ
ಪಿಪಾಸಿತೈಃ ಕಾವ್ಯರಸೋ ನ ಪೀಯತೇ |
ನ ಚ್ಛಂದಸಾ ಕೇನಚಿದುದ್ಧೃತಂ ಕುಲಂ
ಹಿರಣ್ಯಮೇವಾರ್ಜಯ ನಿಷ್ಫಲಾಃ ಕಲಾಃ ||"

[ವ್ಯಾಕರಣವನು ಭುಜಿಸರಯ್ಯ ಹಸಿದವರು.
ಕಾವ್ಯರಸವೀಂಟರೈ ಬಾಯಾರಿದವರು.
ಛಂದಸ್ಸಿನಿಂದಾರು ಕುಲವನೆತ್ತಿದರು?
ಹಣವನೊಂದನೆ ಗಳಿಸು, ಫಲವಿಲ್ಲ ಕಲೆಗೆ!]

ಇದು ಮಾಘಕವಿಯ ಉದ್ಗಾರವೆಂದು ಕ್ಷೇಮೇಂದ್ರನು ನಿರ್ದೇಶಿಸುತ್ತಾನೆ. ಇದ್ದರೂ ಇರಬಹುದು! ವ್ಯಾಕರಣ, ಛಂದಸ್ಸು ಮೊದಲಾದವಕ್ಕೆ ಮಾತ್ರವಲ್ಲದೆ ನ್ಯಾಯ, ಮೀಮಾಂಸಾ ಮೊದಲಾದ ಇತರ ಶಾಸ್ತ್ರಗಳಿಗೂ ಈ ಉಕ್ತಿಯನ್ನು ಅನ್ವಯಿಸ ಬಹುದು.

ಹಣದ ವಿಷಯ ಹೋಗಲಿ. ಗಣ್ಯತೆ, ಗೌರವ ಇವುಗಳಾದರೂ ವಿದ್ವತ್ತಿನಿಂದ ನಿಶ್ಚಿತವಾಗಿ ಲಭಿಸುತ್ತವೆಯೆ? ಎಲ್ಲೋ ಒಬ್ಬಿಬ್ಬರ ಹೆಸರುಗಳು ಮಾತ್ರ ತಮ್ಮ ಪಾಠಶಾಲೆಯ ಅಥವಾ ಊರಿನ ಎಲ್ಲೆಯನ್ನು ದಾಟಿ ಆಚೆಗೂ ನಾಲ್ಕುದಿನದಮಟ್ಟಿಗೆ ಕೇಳಿಸಬಹುದೇನೋ. ನೂರಕ್ಕೆ ಒಬ್ಬರು ಮಹಾವಿದ್ವಾಂಸರೆಂದು, ಸಾವಿರಕ್ಕೆ ಒಬ್ಬರು ಮಹಾಮಹೋಪಾಧ್ಯಾಯರೆಂದು ಪ್ರಶಸ್ತಿಪಡೆಯಬಹುದೇನೋ. ಇಂಥ ಗೌರವ ಪ್ರಶಸ್ತಿಗಳನ್ನು ಪ್ರದಾನಮಾಡುವ ಕಾಲವೂ ಈಗ ಹಿಂದೆ ಬಿದ್ದಿತಲ್ಲವೆ? ಗೌರವದ ಮಾತು ಹಾಗಿರಲಿ. ಕೇವಲ ಸಂಸ್ಕೃತಾಭ್ಯಾಸದಲ್ಲಿಯೇ ನಿರತರಾದವರಿಗೆ ಲೌಕಿಕ ವ್ಯವಹಾರ ತಿಳಿಯದೆಂದು ದೂರತಕ್ಕವರು ಕೂಡ ಲೋಕದಲ್ಲಿ ಉಂಟು. ಪಂಡಿತರ ಹಳೆಯ ರೀತಿಯ ವೇಷ ಭೂಷಣ ಭಾಷಿತಗಳನ್ನು ಹಾಸ್ಯಮಾಡುವವರೂ ಇಲ್ಲದಿಲ್ಲ.

ಹೀಗೆ ವ್ಯಾವಹಾರಿಕದೃಷ್ಟಿಯಿಂದ ಜೇಕೆನ್ನಿಸುವ ಫಲಗಳು ಸಂಸ್ಕೃತ ವಿದ್ಯೆಯಲ್ಲಿ ದುರ್ಲಭವೆಂದೇ ತೋರುವಾಗಲೂ, ಕೆಲವು ಮಂದಿಯಾದರೂ ಇದರ ಹಂಬಲನ್ನು ಹತ್ತಿಸಿಕೊಂಡಿರುವುದು ದಿಟವಷ್ಟೆ. ಹಾಗಾದರೆ ಇದರ ಉಪಾಸನೆಯಿಂದ ಪಡೆಯಬಹುದಾದ ಅಲೌಕಿಕಪ್ರಯೋಜನಗಳು ಯಾವುವು?—ನಿಷ್ಕೃಷ್ಟಜ್ಞಾನ, ಮನಃಪರಿಪಾಕ, ಆತ್ಮೋದ್ಧಾರ ಎಂದು ಸಂಗ್ರಹಿಸಿ ಹೇಳಬಹುದು. ಶಾಸ್ತ್ರವ್ಯವಸಾಯವು ಭಾರತವೊಂದಕ್ಕೇ ಮೀಸಲೇನೂ ಅಲ್ಲ. ದರ್ಶನ, ವಿಜ್ಞಾನ—ಇವುಗಳ ಹಲವು ಶಾಖೆಗಳಲ್ಲಿ ಪ್ರಪಂಚದ ಜ್ಞಾನವನ್ನು ಬೆಳಸಿರುವ ಮಹಾಕೃತಿಗಳು ಸಂಸ್ಕೃತದಲ್ಲಿರುವಂತೆಯೇ ಪಾಶ್ಚಾತ್ಯಭಾಷೆಗಳಲ್ಲೂ ದೊರೆಯುತ್ತವೆ. ಇದನ್ನು ಅಲ್ಲಗಳೆದರೆ ನಮ್ಮ ಸಂಕುಚಿತದೃಷ್ಟಿಯನ್ನು ಮಾತ್ರ ವ್ಯಕ್ತಪಡಿಸಿದಂತಾಗುತ್ತದೆ. ಆದರೆ ಒಂದು ಅಂಶದಲ್ಲೇನೋ ಸಂಸ್ಕೃತದ ಅಪೂರ್ವತೆ ಎದ್ದು ಕಾಣಿಸುತ್ತದೆಂದು ನನ್ನ ನಂಬಿಕೆ. ಅದು ಯಾವುದೆಂದರೆ, ವಿಷಯವಿನ್ಯಾಸದಲ್ಲೂ ಪ್ರತಿಪಾದನೆಯಲ್ಲೂ ನಮ್ಮವರು ಅನುಸರಿಸಿದ ಸರಣಿ. ಉಪನ್ಯಾಸಮಾಲಿಕೆಯಂತೆ ಒಂದು ಗ್ರಂಥವನ್ನು ರಚಿಸಿದರೆ, ಓದುವಾಗ ಅದು ಸರಳವೆಂದು ತೋರಿದರೂ ವಿಷಯ ಹಿಡಿತಕ್ಕೆ ಸಿಕ್ಕುವುದಿಲ್ಲ. ಎಷ್ಟೋವೇಳೆ ಹೊಳಪುಳ್ಳ ಬಿಳಿಮಂಜನ್ನು ನೋಡಿದಂತೆ ಆಗುತ್ತದೆ; ಪರಿಭಾವಿಸುವಷ್ಟರಲ್ಲಿ ಅದು ಚೆದರಿಬಿಡುವುದೂ ಉಂಟು. ಸೂತ್ರ—ವೃತ್ತಿ—ವ್ಯಾಖ್ಯಾನ: ಈ ಕ್ರಮವನ್ನು ಅನುಸರಿಸಿದರೆ, ಅರ್ಥಮಾಡಿಕೊಂಡದ್ದೆಲ್ಲ ಗಟ್ಟಿಮುಟ್ಟಾಗಿ ನೆನಪಿನಲ್ಲಿ ನೆಲಸುತ್ತದೆ. ಶಾಸ್ತ್ರಗಳ ಸಂಕ್ಷಿಪ್ತಶೈಲಿ ಇದಕ್ಕೆ ಎಷ್ಟರಮಟ್ಟಿಗೆ ಕಾರಣವೋ ಸಂಸ್ಕೃತಭಾಷೆಯ ಪಾರದರ್ಶಕತೆಯೂ ಅಷ್ಟರಮಟ್ಟಿಗೇ ಕಾರಣವಾಗಿರಬಹುದು. ಅಲ್ಪಾಕ್ಷರವೂ ಅಸಂದಿಗ್ಧವೂ ಸಾರಗ್ರಾಹಿಯೂ ಆದ ಸಂಸ್ಕೃತ ಸೂತ್ರಶೈಲಿಯ ಪ್ರಯೋಜನವನ್ನು ಮನಗಂಡು ಈಚೆಗೆ ಕೆಲಮಂದಿ ಪಾಶ್ಚಾತ್ಯ ವಿದ್ವಾಂಸರು ಕೂಡ

ಇದನ್ನು ಅನುಸರಿಸಿರುವುದುಂಟು. ಉದಾಹರಣೆಗೆ, ಭಾಷಾಶಾಸ್ತ್ರದಲ್ಲಿ ಈ ಬಗೆಯ ಕೆಲವು ಕೃತಿಗಳು ರಚಿತವಾಗಿವೆ.

ರೀತಿಯಲ್ಲಿ ಮಾತ್ರವೇ ಅಲ್ಲ, ವಸ್ತುವಿನಲ್ಲೂ ನಮ್ಮ ಶಾಸ್ತ್ರಕಾರರು ವಿಶೇಷ ಸಿದ್ಧಿಗಳನ್ನು ಪಡೆದು ಕೆಲಕೆಲವು ಕಡೆಗಳಲ್ಲಂತೂ ಮೇರುವನ್ನು ಮುಟ್ಟಿದ್ದಾರೆನ್ನ ಬಹುದು. ನನಗೆ ಕೊಂಚಮಟ್ಟಿಗೆ ಪ್ರವೇಶವಿರುವ ಕಾವ್ಯಮೀಮಾಂಸಾಶಾಸ್ತ್ರದಿಂದ ಇದನ್ನು ನಿದರ್ಶಿಸುವುದು ಸಾಧ್ಯ. ಕಾವ್ಯದ ಜೀವಾಳವೇನೆಂಬುದನ್ನು ಕುರಿತ ಚರ್ಚೆ ಪ್ರಪಂಚದ ಹಲವು ಭಾಗಗಳಲ್ಲಿ ಅನೇಕಾನೇಕ ಶತಮಾನಗಳಿಂದ ನಡೆದಿದೆ. ಆದರೆ ರಸ—ಧ್ವನಿ ತತ್ತ್ವವು ಮೊದಲು ರೂಪಿತವಾದದ್ದು ಭಾರತ ಭೂಮಿಯಲ್ಲಿ, ಸಾವಿರ ವರ್ಷಗಳಿಗಿಂತ ಇನ್ನೂ ಹಿಂದೆ. ಇಂದಿಗೂ ಅದು ಅಬಾಧಿತವೆಂದೇ ನನ್ನ ತಿಳಿವಳಿಕೆ. "ಅನುಭಾವವಿಭಾವಾನಾಂ ವರ್ಣನಾ ಕಾವ್ಯಮುಚ್ಯತೇ" ಎಂಬ ಒಂದು ಮಹಾವಾಕ್ಯ ಸಾಕು; ಇದರ ಅರ್ಥವ್ಯಾಪ್ತಿಯನ್ನು ಅರಿತುಕೊಂಡರೆ ಕಾವ್ಯ ತತ್ತ್ವವನ್ನೂ ಬಲುಮಟ್ಟಿಗೆ ಅರಿತಂತೆಯೇ ಸರಿ. ಮಿಕ್ಕ ಶಾಸ್ತ್ರಗಳಲ್ಲೂ ಹೀಗೆಯೇ ಇದೆಯಲ್ಲವೆ?

ಇಂಥ ನಿಶ್ಚಿತ ಜ್ಞಾನವನ್ನು ಸಾಧಿಸುವ ಪರಿಶ್ರಮದಿಂದಲೇ ವಿದ್ವಾಂಸನಿಗೆ ಆವಶ್ಯಕವಾದ ಮನಃಪರಿಪಾಕವೂ ಸಿದ್ಧಿಸುತ್ತದೆ. ಸದ್ಯಃಕ್ಷಣದ ಶೃಂಖಲೆಯಿಂದ ಬಿಡುಗಡೆ ಹೊಂದಿ, ಲಘುರುಚಿಗಳಿಗೂ ಅಲ್ಪವಾದ ಆಶೋತ್ತರಗಳಿಗೂ ಮೋಹ ಗೊಳ್ಳದೆ, ಉನ್ನತ ತತ್ತ್ವದ ಶೋಧನೆಯಲ್ಲಿ ಸಂತತವೂ ನಿರತವಾಗುವ ಚಿತ್ತಶುದ್ಧಿ ಅದು. ಜ್ಞಾನವನ್ನು ಒಂದೊಂದು ಕಣವಾಗಿ ಹುಡುಕಿ, ತಿಕ್ಕಿತೊಳೆದು, ಕೂಡಿಡ ಬೇಕು. ಆತುರವಿಲ್ಲದೆ ಬೇಸರವಿಲ್ಲದೆ, ಕಾಲಚಕ್ರದ ಚೀತ್ಕಾರಕ್ಕೆ ಭಯಪಡದೆ, ಅಜರರಂತೆ ಅಮರರಂತೆ ದುಡಿಯುತ್ತಾ ಹೋಗಬೇಕು. ಈ ಮನೋಧರ್ಮವನ್ನು ನಮಗೆ ಅಭ್ಯಾಸಮಾಡಿಸುವುದು ಸಂಸ್ಕೃತ ವಿದ್ಯೆಯ ಮುಖ್ಯಪ್ರಯೋಜನಗಳಲ್ಲಿ ಒಂದು.

ಕೆಲವು ಹೊಳೆಗಳುಂಟು. ಅವು ಹರಿಯುವ ಪಾತ್ರದ ಮೃತ್ತಿಕೆಯಲ್ಲಿ ಕಣ್ಣಿಟ್ಟು ಹುಡುಕುವವರಿಗೆ ಚಿನ್ನದ ಕಣಗಳು ಆಗಾಗ ದೊರೆಯುತ್ತವೆ. ಅದೃಷ್ಟ ಚೆನ್ನಾಗಿದ್ದರೆ ಒಮ್ಮೊಮ್ಮೆ ಚಿನ್ನದ ಚೊಕ್ಕ ಗಟ್ಟಿಯೇ ಕರವಶವಾಗುವುದುಂಟು. ಸಂಸ್ಕೃತ ವಾಙ್ಮಯದಲ್ಲಿ ಮಾರ್ಗಶೋಧನೆ ಮಾಡಿಕೊಂಡು ಸಂಚರಿಸುವಾಗ ಒಮ್ಮೊಮ್ಮೆ ಬಿಡಿ ಶ್ಲೋಕಗಳು ಕಣ್ಣನ್ನು ಹಿಡಿಯುತ್ತವೆ. ಘನಿಸಿದ ಅನುಭವ ಎಂದು ಅವನ್ನು ಕರೆಯಬಹುದು. ಸೂಕ್ಷ್ಮದೃಷ್ಟಿಯ ವಿಚಾರಕನೊಬ್ಬನು ಜೀವಮಾನದ ಅನುಭವವನ್ನೇ ಭಟ್ಟಿಯಿಳಿಸಿ ಒಂದು ಆಣಿಮುತ್ತಿನಲ್ಲಿ ಅಡಕಮಾಡಿ

ಕೊಟ್ಟಂತೆ ಅವು ಹೊಳೆಯುತ್ತವೆ. ಸದ್ಯದಲ್ಲಿ ನೆನಪಿಗೆ ಬಂದ ಈ ಮುಕ್ತಕ ವನ್ನು ನೋಡಿ :

"ಪರುಷೇ ಹಿತಮನ್ವೇಷ್ಯಂ
ತಚ್ಚೇನ್ನಾಸ್ತಿ ವಿಷಂ ಹಿ ತತ್ |
ಮಧುರೇ ಶಾಠ್ಯಮನ್ವೇಷ್ಯಂ
ತಚ್ಚೇನ್ನಾಸ್ತ್ಯಮೃತಂ ಹಿ ತತ್ ||"

[ಬಿರುಸಾದುದರಲ್ಲಿ ಹಿತವುಂಟೆ ಎಂದು ಹುಡುಕಬೇಕು ; ಅದಿಲ್ಲವಾದರೆ ಇದು ವಿಷವೇ ಸರಿ. ಸವಿಯಾದುದರಲ್ಲಿ ಮೋಸವುಂಟೆ ಎಂದು ಹುಡುಕಬೇಕು ; ಅದಿಲ್ಲವಾದರೆ ಇದು ಅಮೃತವೇ ಸರಿ.]

ಬಿರುನುಡಿ ಸವಿನುಡಿಗಳ ಒಳಗುಟ್ಟನ್ನು ಇದು ಎಷ್ಟು ಹೃದ್ಯವಾಗಿ ಮನದಟ್ಟು ಮಾಡಿಕೊಡುತ್ತದೆ! ಹಾಗೆಯೇ, ಜ್ಞಾನಾರ್ಜನೆಯ ಹಂತಗಳನ್ನು ವಿಭಾಗಿಸಿ ತೋರಿಸುವ ಈ ನಾಲ್ಕು ಪಾದಗಳು :

"ಆಚಾರ್ಯಾತ್ ಪಾದಮಾದತ್ತೇ
ಶಿಷ್ಯಃ ಪಾದಂ ಸ್ವಮೇಧಯಾ |
ಪಾದಂ ಸಬ್ರಹ್ಮಚಾರಿಭ್ಯಃ
ಪಾದಂ ಕಾಲಕ್ರಮೇಣ ತು ||

[(ಜ್ಞಾನದ) ಪಾದಾಂಶವನ್ನು ಶಿಷ್ಯನು ಆಚಾರ್ಯನಿಂದ ಗ್ರಹಿಸುತ್ತಾನೆ; ಪಾದಾಂಶವನ್ನು ಸ್ವಂತ ಬುದ್ಧಿಯಿಂದ; ಪಾದಾಂಶವನ್ನು ಜೊತೆಯ ವಿದ್ಯಾರ್ಥಿಗಳಿಂದ; ಪಾದಾಂಶವನ್ನಾದರೆ ಕಾಲಕ್ರಮದಿಂದ.]

ಈ ಒಂದು ಶ್ಲೋಕದ ಭಾವವಿಸ್ತರಣಕ್ಕೆ ಒಂದು ಉಪನ್ಯಾಸವನ್ನೇ ವಿನಿಯೋಗಿಸ ಬಹುದು. ಇಂಥ ಉಕ್ತಿಮುಕ್ತಾಫಲಗಳು ನಮ್ಮ ಸುಭಾಷಿತ ಗ್ರಂಥಗಳಲ್ಲಿ ಸೂರೆ ಯಾಗಿವೆ. ಇವುಗಳನ್ನು ಮನನಮಾಡಿ ಜೀವನಕ್ರಮದಲ್ಲಿ ಮಾರ್ಗದರ್ಶನ ಪಡೆದರೆ ಧರ್ಮಾರ್ಥಕಾಮಗಳೆಂಬ ಪುರುಷಾರ್ಥತ್ರಯವನ್ನೂ ಸಾಧಿಸಿಕೊಳ್ಳಬಹುದು.

ಪರಮಪುರುಷಾರ್ಥವಾದ ಮೋಕ್ಷವೆಂಬುದೂ ಉಂಟಷ್ಟೆ. ಈ ಜನ್ಮದಲ್ಲಿ ಅಲ್ಲದಿದ್ದರೆ ಇನ್ನು ನಾಲ್ಕು ಜನ್ಮಗಳ ಅನಂತರವಾದರೂ ಇದನ್ನು ಪಡೆಯ ಬೇಕೆಂಬ ಒಳಆಸೆ ಯಾವ ಭಾರತೀಯನ ಹೃದಯದಲ್ಲಿಲ್ಲ! ಮೋಕ್ಷಕ್ಕೆ ಅಭಿಮುಖವಾಗುವುದೇ ಆತ್ಮೋದ್ಧಾರ. ಇದರ ಸಾಧನೆಗೆ ಸಹಾಯಕವಾಗುವ ಸಾಮಗ್ರಿ ಸಂಸ್ಕೃತದಲ್ಲಿ ದೊರೆಯುವಷ್ಟು, ದೊರೆಯುವಹಾಗೆ, ಇನ್ನೆಲ್ಲೂ ನಮಗಂತೂ

ಕಾಣಬರುವುದಿಲ್ಲ. ಸಂಸ್ಕೃತವಿದ್ಯೆ, ಅಧ್ಯಾತ್ಮವಿದ್ಯೆ ಇವೆರಡೂ ಪರ್ಯಾಯಪದ ಗಳೆಂದು ಗಣಿಸುವಷ್ಟು ದೂರ ಕೂಡ ಕೆಲವರು ಹೋಗಬಹುದು. ಇದನ್ನು ಕುರಿತು ಪ್ರಸಂಗಿಸಲು ನನಗೆ ಅವಕಾಶವಿಲ್ಲ, ಅಧಿಕಾರವೂ ಇಲ್ಲ. "ಸಾ ವಿದ್ಯಾ ಯಾ ವಿಮುಕ್ತಯೇ" ಎಂಬ ಉಕ್ತಿಯನ್ನು ಸಂಸ್ಕೃತದ ಪ್ರಶಂಸೆಯಾಗಿ ತಿರುಗಿಸಿ ಕೊಂಡರೆ ಅಷ್ಟೇನೂ ಅನುಚಿತವಾಗಲಾರದೆಂದು ಮಾತ್ರ ಸೂಚಿಸಿ ಮುಂದು ವರಿಯುತ್ತೇನೆ.

ಇಂದಿನ ವಿದ್ವತ್ಸಭೆಯಲ್ಲಿ ಪ್ರಶಸ್ತಿಪಡೆಯುವವರು ಸಂಸ್ಕೃತದಲ್ಲಿ ಪ್ರೌಢಾಭ್ಯಾಸ ಮಾಡಿರತಕ್ಕವರು, ಈ ಆಧುನಿಕ ಯುಗದಲ್ಲೂ ತಕ್ಕಮಟ್ಟಿಗೆ ಅದರ ಪ್ರಾಚೀನ ಪದ್ಧತಿಗಳನ್ನು ಪಾಲಿಸಿಕೊಂಡು ಬಂದಿರತಕ್ಕವರು. ಆ ಮಾರ್ಗದಲ್ಲಿ ನಡೆದು ಪಂಡಿತನಾಗುವ ಅವಕಾಶ, ನಾನು ಹಿಂದೆಯೇ ಅರಿಕೆ ಮಾಡಿಕೊಂಡಂತೆ, ನನ್ನದಾಗ ಲಿಲ್ಲ. ಆದರೂ ಸುಮಾರು ನಲವತ್ತು ವರ್ಷಗಳ ಕೆಳಗೆ ಹಿಂದಿನ ರೀತಿಯ ಗುರು ಗಳೊಬ್ಬರ ಬಳಿ ನನಗೆ ಮೊಟ್ಟಮೊದಲ ಕಾವ್ಯಪಾಠವಾದದ್ದು ಇನ್ನೂ ನೆನಪಿನಲ್ಲಿದೆ. ಅವರು 'ರಘುವಂಶ'ದ ಎರಡನೆಯ ಸರ್ಗದಿಂದ ನೇರವಾಗಿ ಪ್ರಾರಂಭಿಸಿದರು. ಮುದ್ರಿತಗ್ರಂಥವನ್ನು ಸಂಪಾದಿಸಿಕೊಳ್ಳುವಷ್ಟು ಅನುಕೂಲ ನನ್ನ ಸಹಪಾಠಿಗಳಿಗೂ ನನಗೂ ಇರಲಿಲ್ಲ. ಮರುದಿನದ ಪಾಠದ ಪದ್ಯಗಳನ್ನು ಸ್ವಹಸ್ತಾಕ್ಷರದಲ್ಲೇ ಬರೆದು ಕೊಳ್ಳಬೇಕಾಗಿತ್ತು. ತರಗತಿಯಲ್ಲಿ ಗುರುಗಳು ಪದ್ಯಗಳನ್ನು ನೆನಪಿನಿಂದಲೇ ಹೇಳಿ, ಪದವಿಭಾಗ, ಶಬ್ದಸ್ವರೂಪ, ಅನ್ವಯ, ಅರ್ಥ, ಆಕಾಂಕ್ಷೆ ಮೊದಲಾದವನ್ನು ಕ್ರಮ ವಾಗಿ ಬೋಧಿಸುತ್ತಿದ್ದರು. ಆದರೆ ಕೇಳಿದ ಪಾಠದಿಂದ ಯಾವ ಟಿಪ್ಪಣಿಯನ್ನೇ ಆಗಲಿ ಪುಸ್ತಕದಲ್ಲಿ ಗುರುತುಹಾಕಿಕೊಳ್ಳಲು ಅವರು ಅವಕಾಶ ಕೊಡುತ್ತಿರಲಿಲ್ಲ. ಗುರುಗಳ ಮುಖವನ್ನೇ ನೋಡುತ್ತಾ, ಕಿವಿಯಿಂದಲೇ ಎಲ್ಲವನ್ನೂ ಗ್ರಹಿಸುತ್ತಾ, ಕೇಳಿದ ಹಾಗೆಯೇ ಹೃದ್ಗತಮಾಡಿಕೊಳ್ಳಬೇಕು; ಮರುದಿನದ ವೇಳೆಗೆ ಅದಷ್ಟೂ ನಮಗೂ ಮುಖೋದ್ಗತವಾಗಿರಬೇಕು. ಈ ಕಟ್ಟುನಿಟ್ಟಿನ ಪಾಠಪದ್ಧತಿ ಹೆಚ್ಚುದಿನ ಸಾಗಲಿಲ್ಲ. ಆದರೂ ಅದರಿಂದ ಪ್ರಯೋಜನ ಪಡೆದೆನೆಂದು ಈಗ ನನಗೆ ತೋರುತ್ತದೆ.

ಪ್ರಾಚೀನ ಪಾಠಕ್ರಮದಲ್ಲಿ ಜ್ಞಾಪಕಶಕ್ತಿಗೆ ಅತಿಶಯವಾದ ಪ್ರಾಮುಖ್ಯ ವಿತ್ತು. ಪುಸ್ತಕಗತವಾದ ವಿದ್ಯೆ ವಿದ್ಯೆಯೇ ಅಲ್ಲ; ಕಂಠಗತವಾಗಿದ್ದರೇ ಅದಕ್ಕೆ ಬೆಲೆ ಎಂಬ ಅಭಿಪ್ರಾಯವಿತ್ತು. ಇದರಲ್ಲಿ ಸತ್ಯಾಂಶ ಬಲುಮಟ್ಟಿಗೆ ಇರುವುದು ನಿಜ. ಆದರೆ ಹಿಂದೆ ಹತ್ತು ಪುಸ್ತಕಗಳಿದ್ದ ಕಡೆ ಈಗ ನೂರು ಬಂದಿವೆ; ಯಾವುದನ್ನೂ ಕಡೆಗಣಿಸುವಹಾಗಿಲ್ಲ. ಎಲ್ಲವನ್ನೂ ಕಂಠಪಾಠ ಮಾಡುವುದು ಸಾಧ್ಯವೇ ? ಬೇಕೆಂದಾಗ ಪುಸ್ತಕವು ಸರಸ್ವತೀಭಂಡಾರದಲ್ಲೋ ವಿದ್ವಾಂಸನ ಸ್ವಕೀಯಸಂಗ್ರಹದಲ್ಲೋ

ದೊರೆಯುವಾಗ ಎಲ್ಲವನ್ನೂ ಕಂಠಪಾಠ ಮಾಡುವುದು ಅವಶ್ಯವೆ? ಇದಲ್ಲದೆ ಒಂದು ಶ್ಲೋಕವನ್ನೋ ವಾಕ್ಯವನ್ನೋ ತಪ್ಪಿಲ್ಲದಂತೆ ಸಮಗ್ರವಾಗಿ ಉದ್ಧರಿಸಲು ನೆನಪಿನ ಹಾಳೆಗಳನ್ನು ಅಂತರ್ದೃಷ್ಟಿಯಿಂದ ಈಗ ತಿರುವಿಹಾಕಬೇಕಾಗಿಲ್ಲ. ಸಾನುಬಂಧವಾಗಿ ಮುದ್ರಿತವಾಗಿರುವ ಗ್ರಂಥದ ಅಕಾರಾದಿಯನ್ನು ನೋಡಿದರೆ ಸಾಕು. ಎಂಥ ಮೇಧಾವಂತನಿಗಾದರೂ ಒಂದು ಶಬ್ದದ ನಾಲ್ಕು ಪ್ರಯೋಗಗಳು ಮಾತ್ರ ನೆನಪಾಗಬಹುದು. ಆದರೆ ಒಳ್ಳೆಯ ಆಧುನಿಕ ನಿಘಂಟನ್ನು ತೆರೆದರೆ, ಅದರಲ್ಲಿ ಅಂಥ ಹತ್ತಾರು ಪ್ರಯೋಗಗಳನ್ನು ಅರ್ಥವೈವಿಧ್ಯ ಕಾಲಕ್ರಮಗಳಿಗೆ ಅನುಗುಣವಾಗಿ ವಿಂಗಡಿಸಿಕೊಟ್ಟಿರುತ್ತಾರೆ. ಇದರಮೇಲೆ ಪ್ರೌಢವ್ಯಾಸಂಗ ಮಾಡುವವರಿಗೂ ಸಂಶೋಧನ ಮಾಡುವವರಿಗೂ ಈಗ ದೊರೆಯುವ ಸಹಾಯಸಾಮಗ್ರಿ ಎಷ್ಟು! ಶಬ್ದಕೋಶಗಳೇನು, ವಿಶ್ವಕೋಶಗಳೇನು, ಸಂವಾದೋಲ್ಲೇಖ (ಕನ್‌ಕಾರ್ಡೆನ್ಸ್)ಗಳೇನು, ಸಂಕಲನ ಗ್ರಂಥಗಳೇನು! ಇದನ್ನೆಲ್ಲ ವಿದ್ವತ್‌ಪ್ರಪಂಚದ "ಸಾಮೂಹಿಕ ಸ್ಮೃತಿ ಕೋಶ"ವೆಂದು ಕರೆಯಬಹುದು. ಎಂಥ ಮಹಾಪಂಡಿತನಾದರೂ ಮರೆತಿರಬಹುದಾದ ಅಂಶಗಳು ಈ ಗ್ರಂಥಗಳ ಯಾವುದೋ ಮೂಲೆಯಲ್ಲಿ ಕುಳಿತಿರುತ್ತವೆ. ಇದರ ಜೊತೆಗೆ, ಪ್ರತಿಯೊಬ್ಬ ವಿದ್ವಾಂಸನೂ ತನ್ನ ತನ್ನ ಆವಶ್ಯಕತೆಗೆ ಅನುಗುಣವಾಗಿ ಸಿದ್ಧಪಡಿಸಿಕೊಳ್ಳಬಹುದಾದ ಸೂಚೀಪತ್ರ (ಕಾರ್ಡ್ ಇನ್‌ಡೆಕ್ಸ್) ವಿಧಾನ ಬೇರೆ ಇದೆ. ನಮ್ಮ ವಿದ್ವಾಂಸರ ಗಮನ ಇತ್ತಕಡೆ ಹರಿಯಬೇಕೆಂದು ನಾನು ಕೋರುತ್ತೇನೆ. ಈ ಪರಿಕರಗಳೆಲ್ಲ ನೆರವಿಗಿದ್ದರೆ ಸ್ಮೃತಿದಿಗ್ಗಜನಲ್ಲದವನು ಕೂಡ ಪರಿಮಿತ ಕಾಲದಲ್ಲಿಯೇ ಪಾಂಡಿತ್ಯವನ್ನು ದೃಢಪಡಿಸಿಕೊಳ್ಳಬಹುದು; ಸಂಯೋಜನಕೌಶಲವುಳ್ಳವನಾದರೆ ವಿದ್ವತ್ತಿನ ಎಲ್ಲೆಯನ್ನು ವಿಸ್ತರಿಸಬಹುದು. ಪಾಶ್ಚಾತ್ಯ ವಿದ್ವಾಂಸರು ಈ ಆಧುನಿಕ ಸೌಕರ್ಯಗಳ ಬಲದಿಂದ ಭಾರತೀಯ ಶಾಸ್ತ್ರ ಸಾಹಿತ್ಯಗಳ ಪ್ರೌಢವ್ಯಾಸಂಗವನ್ನು ಮಾಡಿ, ಎಷ್ಟೋ ಹೊಸ ವಿಷಯಗಳನ್ನು ಕಂಡುಹಿಡಿದು, ಕೆಲವು ವಿಷಯಗಳಲ್ಲಿ ಈಗ ನಮಗೇ ಬೋಧಕರಾಗಿರುವ ಅಂಶವನ್ನು ಗಮನಿಸಬೇಕು.

ಪಾಶ್ಚಾತ್ಯರ ಸಂಸರ್ಗದಿಂದ ನಮ್ಮ ಅಭ್ಯಾಸ ವಿಧಾನಗಳಲ್ಲೂ ಹೊಸ ಮಾರ್ಗಗಳು ಹೊರಟಿವೆ. ಐತಿಹಾಸಿಕದೃಷ್ಟಿ ಇವುಗಳಲ್ಲಿ ಮುಖ್ಯವಾದ ಒಂದು. ಯೂರೋಪಿನಲ್ಲಿ ಹತ್ತೊಂಬತ್ತನೆಯ ಶತಮಾನದಲ್ಲಿ ಪರಿಣಾಮವಾದವು ರೂಪುಗೊಂಡು ವಿದ್ವತ್ ಪ್ರಪಂಚದಲ್ಲಿ ಮಹಾಕ್ರಾಂತಿಯನ್ನೆಬ್ಬಿಸಿದ ಬಳಿಕ ಇದು ಸರ್ವವ್ಯಾಪಿಯಾಗಿ ಪರಿಣಮಿಸಿತು. ಜಗತ್ತಿನಲ್ಲಿ ತಲೆದೋರಿದ ಸಮಸ್ತದಲ್ಲೂ ವ್ಯತ್ಯಾಸ ವಿಕಾಸ ವಿಪರಿಣಾಮಗಳು ಸಂತತವಾಗಿ ನಡೆಯುತ್ತಿರುತ್ತವೆ. ಜೀವಿವರ್ಗದ ಶರೀರಗಳಲ್ಲಿ ಮಾತ್ರವಲ್ಲ, ಜೀವಿಗಳ ನಂಬಿಕೆ ತಿಳಿವಳಿಕೆಗಳಲ್ಲೂ ಈ ರೂಪಾಂತರವುಂಟು. ಒಟ್ಟು

ಜಗತ್ತಿಗೇ ಇಂಥ ಚರಿತ್ರೆ ಉಂಟೆಂದಮೇಲೆ ಭಾಷೆ, ಸಾಹಿತ್ಯ, ಶಾಸ್ತ್ರ, ಮತ್ತು ದರ್ಶನ—ಎಲ್ಲಕ್ಕೂ ಚರಿತ್ರೆಯಿರುವುದರಲ್ಲಿ ಏನಾಶ್ಚರ್ಯ ! ಈ ದೃಷ್ಟಿಯಿಂದ ನಮ್ಮ ಶಾಸ್ತ್ರವಿಷಯಗಳನ್ನು ಅವಲೋಕಿಸಿದರೆ ಹೊಸ ಅರ್ಥಗಳು ಸ್ಫುರಿಸುತ್ತವೆ, ಜಟಿಲ ಗ್ರಂಥಿಗಳು ಸಡಿಲವಾಗುತ್ತವೆ, ಪೂರ್ವಾಪರ ಸಂಬಂಧಗಳು ಪರಿಷ್ಕಾರವಾಗುತ್ತವೆ, ಜ್ಞಾನಕುತೂಹಲವೂ ಅಭಿವೃದ್ಧಿಯಾಗುತ್ತದೆ.

ಇಂಥ ಇನ್ನೊಂದು ವಿಧಾನವೆಂದರೆ ತುಲನದ ಮಾರ್ಗ. ಎರಡು ವಸ್ತುಗಳನ್ನೋ ವಿಷಯಗಳನ್ನೋ ಹೋಲಿಸಿ ನೋಡಿದರೆ ಅವುಗಳ ಸಾಮ್ಯ ವೈಷಮ್ಯಗಳು, ಹಾಗೆಯೇ ಗುಣದೋಷಗಳು, ಎದ್ದು ಕಾಣಿಸುತ್ತವೆ. ಈಗ ವಿಭಿನ್ನವೆಂದು ತೋರುವವುಗಳಿಗೆ ಹಿಂದೆ ಒಂದೇ ಮೂಲವೇನಾದರೂ ಇದ್ದಿದ್ದರೆ ಅದು ಗೋಚರವಾಗುತ್ತದೆ. ಲ್ಯಾಟಿನ್, ಗ್ರೀಕ್ ಮೊದಲಾದ ಅನೇಕ ಪಾಶ್ಚಾತ್ಯ ಭಾಷೆಗಳಲ್ಲಿ ಆಗಲೇ ಪಂಡಿತನಾಗಿದ್ದ ಸರ್ ವಿಲಿಯಮ್ ಜೋನ್ಸ್ ಎಂಬ ವಿದ್ವಾಂಸನು ಹದಿನೆಂಟನೆಯ ಶತಮಾನದ ಉತ್ತರಭಾಗದಲ್ಲಿ ನಮ್ಮ ದೇಶಕ್ಕೆ ಬಂದು ಸಂಸ್ಕೃತವನ್ನು ಅಭ್ಯಾಸ ಮಾಡಿದ ಬಳಿಕ ಅವನ ಸೂಕ್ಷ್ಮದೃಷ್ಟಿಗೆ ಈ ಅನೇಕ ಭಾಷೆಗಳಿಗಿರುವ ಮೂಲ ಸಾದೃಶ್ಯವು ಗೋಚರವಾಯಿತೆಂಬುದೂ ಮುಂದೆ ಹತ್ತೊಂಬತ್ತನೆಯ ಶತಮಾನದಲ್ಲಿ ತೌಲನಿಕ ಭಾಷಾಶಾಸ್ತ್ರವೆಂಬ ಹೊಸ ಶಾಸ್ತ್ರವೇ ವಿಸ್ತಾರವಾಗಿ ಹಬ್ಬಿತೆಂಬುದೂ ಈಗ ಸರ್ವರಿಗೂ ವಿದಿತವಾಗಿದೆ. ಈ ತುಲನಾತ್ಮಕ ವಿಚಾರವು ನಮ್ಮ ಎಲ್ಲ ವಿದ್ವಾಂಸರಿಗೂ ಅವಶ್ಯವೆಂದು ನನ್ನ ದೃಢವಾದ ನಂಬಿಕೆ. ತುಲನವು ನಿರ್ಮಲೀಕರಣದ, ನವೀಕರಣದ ಒಂದು ಪ್ರಬಲ ಸಾಧನ.

ಈ ಐತಿಹಾಸಿಕದೃಷ್ಟಿ ತೌಲನಿಕದೃಷ್ಟಿಗಳ ದಾರಿ ಹೇಗೆ, ಗುರಿ ಏನು, ಸಿದ್ಧಿ ಯಾವುದು ಎಂಬುದನ್ನು ಕೆಲಕೆಲವು ವಿಷಯಗಳಿಗೆ ಅನ್ವಯಿಸಿ ತೋರಿಸಬೇಕೆಂಬ ಆಸೆ ನನಗಿದ್ದರೂ, ಈಗಾಗಲೇ ದೀರ್ಘ ಭಾಷಣಮಾಡಿ ತಮ್ಮನ್ನು ಬೇಸರಪಡಿಸಿರುವುದರಿಂದ ಇನ್ನೂ ಅತಿಕ್ರಮಿಸಲು ಇಷ್ಟಪಡುವುದಿಲ್ಲ. ಆದರೆ ಈ ವಿಚಾರದಿಂದ ಹೊರಪಡುವ ಒಂದು ಮುಖ್ಯಾಂಶವನ್ನು ಮಾತ್ರ ಕುರಿತು ಒಂದು ಮಾತನ್ನು ನಾನು ಹೇಳಲೇಬೇಕಾಗಿದೆ. ಅದು ತಮ್ಮಲ್ಲಿ ಕೆಲವರಿಗೆ ಅಪ್ರಿಯವಾಗಬಹುದೋ ಏನೋ. ಆದರೂ ಅದೂ ತಥ್ಯವೆಂದು ನಾನು ನಂಬಿರುವುದರಿಂದ ಆ ಮಾತನ್ನು ನಾನು ಆಡದೆ ಹೋದರೆ ತಮ್ಮ ಹಿತೈಷಿಯೆನಿಸಿಕೊಳ್ಳಲಾರೆ.

ಸಂಸ್ಕೃತ ವಿದ್ಯೆಯನ್ನು ಕಲಿಯಲು ಎರಡು ಮಾರ್ಗಗಳಿವೆ: ಒಂದು ಪ್ರಾಚೀನ ಪದ್ಧತಿಯ ಪಾಠಶಾಲೆಗಳಲ್ಲಿ, ಇನ್ನೊಂದು ಆಧುನಿಕ ಪದ್ಧತಿಯ ಕಾಲೇಜುಗಳಲ್ಲಿ; ಈ ಎರಡರಿಂದ ಎರಡು ಬಗೆಯ ವಿದ್ವಾಂಸರು ಹೊರಬೀಳುತ್ತಾರೆ; ಒಬ್ಬರ

ಜ್ಞಾನದಲ್ಲಿ ಆಳ ಹೆಚ್ಚು; ಇನ್ನೊಬ್ಬರದರಲ್ಲಿ ಅಗಲ ಹೆಚ್ಚು; ಇವರದು ಉಪರಿ ಪ್ಲವನ, ಅವರದು ಗಾಢಾವಗಾಹನ—ಹೀಗೆನ್ನುವುದು ನಮ್ಮಲ್ಲಿ ಸಾಮಾನ್ಯವಾಗಿ ಹರಡಿಕೊಂಡಿರುವ ಭಾವನೆ. ಆದರೆ ನಿಜವಾದ ವಿದ್ವತ್ತು ಹೀಗೆ ಎರಡು ಬಗೆಯಾಗಿರಬಲ್ಲದು ಎಂಬುದರಲ್ಲೇ ನನಗೆ ಪ್ರಬಲ ಸಂದೇಹ. ಜಗತ್ತಿನಲ್ಲಿ ಕೋಲಾಹಲವೆಬ್ಬಿಸಿರುವ, ನಾಗರಿಕತೆಯ ಮೂಲಸ್ವರೂಪವನ್ನೇ ಗುರುತು ಸಿಕ್ಕದಂತೆ ರೂಪಾಂತರಗೊಳಿಸುತ್ತಿರುವ ಭೌತವಿಜ್ಞಾನ, ರಸಾಯನವಿಜ್ಞಾನ ಮೊದಲಾದವುಗಳಲ್ಲಾಗಲಿ ಪಾಶ್ಚಾತ್ಯರ ತತ್ತ್ವಶಾಸ್ತ್ರ, ರಾಜ್ಯನೀತಿಶಾಸ್ತ್ರ ಮೊದಲಾದವುಗಳಲ್ಲಾಗಲಿ ಈ ದಾಯಭಾಗವಿಲ್ಲ. ಗ್ರೀಕ್, ಲ್ಯಾಟಿನ್ ಮೊದಲಾದ ಪ್ರಾಚೀನ ಭಾಷೆಗಳ, ಇಂಗ್ಲಿಷ್, ಜರ್ಮನ್ ಮೊದಲಾದ ಪ್ರಚಲಿತ ಭಾಷೆಗಳ ವ್ಯಾಸಂಗದಲ್ಲೂ ಇದು ಕಾಣಬರುವುದಿಲ್ಲ. ನಮ್ಮ ದೇಶದಲ್ಲಾದರೆ, ಮುಖ್ಯವಾಗಿ ಐತಿಹಾಸಿಕ ಮತ್ತು ರಾಜಕೀಯ ಕಾರಣಗಳಿಂದ, ಸಂಸ್ಕೃತದಲ್ಲೂ ಕನ್ನಡ ಮೊದಲಾದ ಕೆಲವು ದೇಶಭಾಷೆಗಳಲ್ಲೂ ಈ ವಿದ್ವದ್ವಿಭಾಗ ಎರಡು ಮೂರು ತಲೆಮಾರುಗಳಿಂದ ತಲೆಯೆತ್ತಿದೆ. ಆದರೆ ಒಬ್ಬ ವಿದ್ವಾಂಸನ ಜ್ಞಾನವು ಸಮಗ್ರವಾಗಬೇಕಾದರೆ, ಸಮರ್ಪಕವಾಗಬೇಕಾದರೆ, ಅದು ಗಾಢವೂ ಆಗಿರಬೇಕು, ವಿಶಾಲವೂ ಆಗಿರಬೇಕು. ಅವನು ಮೂಲಗ್ರಂಥಗಳನ್ನು ಪಂಕ್ತಿಹಿಡಿದು ಓದಿ ಸವಿಮರ್ಶವಾಗಿ ಮನನಮಾಡಿಕೊಂಡಿರಬೇಕು; ಜೊತೆಗೆ ತನ್ನ ಶಾಸ್ತ್ರದಲ್ಲಿ ನಡೆದಿರುವ ಇತ್ತೀಚಿನ ಶೋಧನೆಗಳನ್ನೂ—ಅವು ಯಾವ ಭಾಷೆಯಲ್ಲೇ ಆಗಿರಲಿ—ಅವಗತ ಮಾಡಿಕೊಂಡಿರಬೇಕು. ಇಂಥ ವಿದ್ವಾಂಸರು ಯಾವಾಗಲೂ ವಿರಳವೇ. ಆದರೆ ಅವರು ಅಸಂಭಾವ್ಯರಲ್ಲ. ಭಾರತೀಯ ವಿದ್ವತ್ತಿಗೆ ಜಗತ್ತಿನಲ್ಲೇ ಕೀರ್ತಿತಂದ ಮಹಾರಾಷ್ಟ್ರದ ಡಾ|| ರಾಮಕೃಷ್ಣ ಗೋಪಾಲ ಭಾಂಡಾರಕರರನ್ನು ಇಲ್ಲಿ ಸ್ಮರಿಸಬಹುದು; ನಮ್ಮವರೇ ಆಗಿದ್ದ ಆಚಾರ್ಯ ಎಂ. ಹಿರಿಯಣ್ಣನವರನ್ನೂ ಸ್ಮರಿಸಬಹುದು. ನಮಗೆ ಇಂದು ಬೇಕಾಗಿರುವುದು ಇಂಥ ಹಿರಿಯರ ಮೇಲ್ಪಂಕ್ತಿ. ಅವರ ವಿದ್ವತ್ತಿನಲ್ಲಿ ಪ್ರಾಚ್ಯಪಾಶ್ಚಾತ್ಯ ಎಂಬ ಕಲ್ಪಿತ ಭೇದವಿರಲಿಲ್ಲ. ಈ ಬಗೆಯ ವಿದ್ವಾಂಸರು ಹೆಚ್ಚು ಸಂಖ್ಯೆಯಲ್ಲಿ ನಮ್ಮ ದೇಶದಲ್ಲಿ ಆವಿರ್ಭವಿಸಬೇಕಾದರೆ ನಮ್ಮ ಅಭ್ಯಾಸಕ್ರಮದಲ್ಲಿ ಯಾವ ಮಾರ್ಪಾಡುಗಳು ಆಗಬೇಕು? ಪಾಠಶಾಲೆಗಳನ್ನೂ ಕಾಲೇಜುಗಳನ್ನೂ ಈಗಿರುವ ರೀತಿಯಲ್ಲೇ ಮುಂದುವರಿಸಿಕೊಂಡು ಹೋಗಬೇಕೆ? ಎರಡನ್ನೂ ಸಮನ್ವಯಗೊಳಿಸುವುದು ಅಸಾಧ್ಯವೆ?—ಈ ಎಲ್ಲದರ ವಿಚಾರ ಕ್ಷಿಪ್ರದಲ್ಲೇ ನಡೆದು ನಿರ್ಣಯವಾಗಬೇಕಾಗಿದೆ.

ಭಾರತ ಸರ್ಕಾರದವರು ಸಂಸ್ಕೃತ ವಿದ್ಯೆಯ ಯೋಗಕ್ಷೇಮ ಚಿಂತನೆಗಾಗಿ "ಸಂಸ್ಕೃತ ಆಯೋಗ"ವನ್ನು ಡಾ|| ಸುನೀತಿ ಕುಮಾರ ಚಟರ್ಜಿಯವರಂಥ

ವಿಖ್ಯಾತವಿದ್ವಾಂಸರ ಅಧ್ಯಕ್ಷತೆಯಲ್ಲಿ ನೇಮಿಸಿರುವುದು ನಮ್ಮ ಅಭಿನಂದನೆಗೆ ಪಾತ್ರವಾದ ಸಂಗತಿ. ಈ ಆಯೋಗದವರು ದೇಶದ ಆದ್ಯಂತವೂ ಸಂಚರಿಸಿ ಇತ್ತೀಚೆಗೆ ನಮ್ಮ ರಾಜ್ಯಕ್ಕೂ ಈ ನಗರಕ್ಕೂ ಬಂದು, ಪ್ರಮುಖರ ಅಭಿಪ್ರಾಯಗಳನ್ನು ಸಂಗ್ರಹಿಸಿ ತೆರಳಿದ ವಿಷಯವು ಎಲ್ಲರಿಗೂ ತಿಳಿದಿದೆ. ಅವರ ವರದಿ ಇಷ್ಟರಲ್ಲೇ ಸಿದ್ಧವಾಗಿ ಹೊರಬೀಳುವುದೆಂಬ ನಿರೀಕ್ಷೆಯೂ ಇದೆ. ಆ ಮಹನೀಯವೃಂದದ ಪರಿಶೀಲನವೂ ಸದ್ವಿಚಾರವೂ ಸಂಸ್ಕೃತ ವಿದ್ಯೆಗೆ ಪೋಷಕವಾಗಲಿ, ಅದರಿಂದ ದೇಶಕ್ಕೆ ಹಿತವಾಗಲಿ ಎಂದು ಹಾರೈಸೋಣ.

ಸಂಸ್ಕೃತ ವಿದ್ವಾಂಸರನ್ನು—ಜೊತೆಗೆ ಕನ್ನಡದವರನ್ನೂ ಸೇರಿಸಿಕೊಂಡರೆ ನಾನು ಬೇಡವೆನ್ನುವಹಾಗಿಲ್ಲ—ಸಾಮಾನ್ಯ ಲೋಕವು ಕಡೆಗಣ್ಣಿನಿಂದ ನೋಡುವುದೆಂಬ ಅಂಶವನ್ನು ನಾನು ಆಗಲೇ ಸೂಚಿಸಿದೆನಷ್ಟೆ. ಭಾಷಾವಿದ್ವಾಂಸರೂ ಮಾನವ ಸಮಾಜದ ಒಂದು ಅಂಗ; ಅದರ ಸುಖದುಃಖಗಳಲ್ಲಿ ಇವರೂ ಅನಿವಾರ್ಯವಾಗಿ ಭಾಗಿಗಳು; ಅದರ ಲಾಭನಷ್ಟಗಳು ಇವರಿಗೂ ತಟ್ಟದೆ ಬಿಡುವುದಿಲ್ಲ. ಸಮಾಜದಲ್ಲಿ ಇವರಿಗೆ ಸಮೂಲ್ಯವಾದ—ಅಮೂಲ್ಯವಲ್ಲದಿದ್ದರೆ ಹೋಗಲಿ—ಒಂದು ಸ್ಥಾನವುಂಟೆಂಬ ಅರಿವು ಎಲ್ಲರಿಗೂ ಉಂಟಾಗಬೇಕು. ಇವರು ಕೇವಲ ಪ್ರದರ್ಶನಾಲಯದ ಅಲಂಕರಣ ವಸ್ತುಗಳೆಂಬ ಭಾವನೆ ತೊಲಗಬೇಕು. ಹಾಗಾದರೆ ಇವರಿಗೂ ಆತ್ಮವಿಶ್ವಾಸ ಬೆಳೆಯುತ್ತದೆ; ತಮ್ಮ ಸಾಮಾಜಿಕ ಜೀವನವು ಸಾರ್ಥಕವೆಂಬ ನಂಬಿಕೆ ಬಲಿಯುತ್ತದೆ.

ಈ ಹಾರೈಕೆ ಸಿದ್ಧಿಸಬೇಕಾದರೆ ನಮ್ಮ ವಿದ್ವಾಂಸರೂ ಇಂದಿನ ಜೀವನಕ್ಕೆ ಹೊಂದಿಕೊಳ್ಳಬೇಕೆಂದು ವಿನಯದಿಂದ ಅರಿಕೆಮಾಡಿಕೊಳ್ಳುತ್ತೇನೆ. ಅವರು "ಮಡಿವಂತಿಕೆ"ಯ ಮನೋಭಾವವನ್ನು ಲೋಕವ್ಯವಹಾರದ ಮಟ್ಟಿಗಾದರೂ ಸಡಿಲಿಸಬೇಕಾಗುತ್ತದೆ. ಮುಖ್ಯವಾಗಿ, ಸುತ್ತುಮುತ್ತಿನ ಜಗತ್ತಿನ ಸಮಸ್ಯೆಗಳನ್ನು ತೆರೆದ ಕಣ್ಣಿನಿಂದ, ತೆರೆದ ಮನಸ್ಸಿನಿಂದ ಪರಿಶೀಲಿಸಬೇಕು. ಆಧುನಿಕ ಸಮಾಜದ ಚಲನವಲನಗಳನ್ನು ಅನುಸರಿಸದಿದ್ದರೂ ಅರ್ಥಮಾಡಿಕೊಳ್ಳಬೇಕು. ಇದಕ್ಕೆ ಸಹಾಯಕವಾಗುವಂತೆ ತಮ್ಮ ವ್ಯಾಸಂಗವನ್ನು ವಿಶಾಲಪಡಿಸಿಕೊಳ್ಳಬೇಕು, ನವೀಕರಣ ಮಾಡಿಕೊಳ್ಳಲೂ ಬೇಕು.

ಜೊತೆಗೆ ಇನ್ನೊಂದು ಕರ್ತವ್ಯವೂ ಉಂಟು. ಸಂಸ್ಕೃತವು ಈಗ ಎಷ್ಟೋ ಮಟ್ಟಿಗೆ ದೇಶಭಾಷೆಗಳಲ್ಲೂ ದೇಶ್ಯವಾಙ್ಮಯಗಳಲ್ಲೂ ಉಜ್ಜೀವಿಸಿದೆಯೆಂಬುದನ್ನು ಆಗಲೆ ಗಮನಿಸಿದೆವು. ಸಂಸ್ಕೃತವು ದೃಢಮೂಲವಾಗಿ ಉಳಿಯಬೇಕಾದರೆ ಇವು ಬೆಳೆಯಬೇಕು. ಯಾವ ಕಾಲದಲ್ಲೇ ಆಗಲಿ, ಸಂಸ್ಕೃತದ ಪ್ರೌಢವಿದ್ವಾಂಸರ ಸಂಖ್ಯೆ

ವಿಪುಲವಾಗಿರಲಿಲ್ಲ. ಇನ್ನು ಮುಂದಾದರೂ ಅದು ಹೆಚ್ಚೀತೆಂಬ ನಿರೀಕ್ಷೆಗೆ ಆಧಾರ ವಿಲ್ಲ. ಈ ಮಿತಸಂಖ್ಯೆಯ ವಿಶಾರದರು ಶಾಸ್ತ್ರಸಾಹಿತ್ಯಗಳನ್ನು ಸಂಸ್ಕೃತದಲ್ಲಿ ತಮ್ಮ ನುಟ್ಟಿಗೆ ತಾವು ಓದಿಕೊಳ್ಳುತ್ತಾ ತೆಪ್ಪಗೆ ಕುಳಿತರೆ ಸಾಲದು. ಜನತೆ ಇವರಿಂದ ಹೆಚ್ಚಿನ ಸೇವೆಯನ್ನು ನಿರೀಕ್ಷಿಸುತ್ತದೆ. ಸಂಸ್ಕೃತದ ಜ್ಞಾನರಾಶಿಯನ್ನು ಕೃಷ್ಣರಾಜಸಾಗರದ ಜಲರಾಶಿಗೆ ಹೋಲಿಸಬಹುದು. ಅದು ನಿಂತಲ್ಲೇ ನಿಂತುಬಿಟ್ಟರೆ ಏನು ಸಾರ್ಥಕ? ಕಟ್ಟೆಯ ಮುಂದಿನ ಬೃಂದಾವನದಲ್ಲಿ ಬಣ್ಣಬಣ್ಣದ ಬುಗ್ಗೆಗಳನ್ನು ಚಿಮ್ಮಿಸು ವುದರಿಂದಲೂ ಅದಕ್ಕೆ ಹೆಚ್ಚಿನ ಗುಣ ಬರುವುದಿಲ್ಲ. ಇಲ್ಲಿ ಅಪರಿಮಿತವಾಗಿ ಕೂಡಿಟ್ಟ ಕಾವೇರಿಯ ನೀರು ಕಾಲುವೆಗಳ ಮೂಲಕ ನಾಡಿನಲ್ಲೆಲ್ಲ ಹರಿದು, "ಪಯಿರುಗಳ ಬದುಕಾಗಿ ಹೊಳಲುಗಳ ಬೆಳಕಾಗಿ ಕಣ್ಣುಗಳ ಬೆರಗಾಗಿ" ಎಲ್ಲ ಕಡೆಯಲ್ಲೂ ವ್ಯಾಪಿಸಿದಾಗಲೆ ಅದರ ಪೂರ್ಣಫಲ. ಹೀಗೆಯೇ ಸಂಸ್ಕೃತದ ಜ್ಞಾನತೀರ್ಥವನ್ನು ದೇಶಭಾಷೆಗಳಿಗೆ ಹರಿಸಿ ಜನಸಾಮಾನ್ಯಕ್ಕೆ ಪುಷ್ಟಿತುಷ್ಟಿಗಳನ್ನು ನೀಡುವ ಕಾಲುವೆ ಗಳಾಗಬೇಕು ತಮ್ಮಂಥ ವಿದ್ವಾಂಸರು. ತಾವು ಸಂಸ್ಕೃತದ ಶಾಸ್ತ್ರ ಸಾಹಿತ್ಯಗಳನ್ನು ಕುರಿತು ಪಾಠಪ್ರವಚನಗಳನ್ನು ಎಲ್ಲರಿಗೂ ಎಟಕುವಂತೆ ಕನ್ನಡದಲ್ಲಿ ನಡಸಬೇಕು. ಸಂಸ್ಕೃತದ ಉದ್ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರಿಸಬೇಕು. ಅಲ್ಲಿಯ ವಿಚಾರ ಸಾರವನ್ನು ಸರಳವಾದ ಕನ್ನಡ ಪುಸ್ತಕಗಳಲ್ಲಿ ಒದಗಿಸಬೇಕು. ಸಂಸ್ಕೃತದ ಪಾವನೋದಕದಿಂದ ಜನತಾಜನಾರ್ದನನಿಗೆ ಕನ್ನಡದ ಶಂಖದಲ್ಲಿ ಅಭಿಷೇಕ ಮಾಡಿ ಅವನ ಸೇವೆಯಿಂದ ತಾವೂ ಪುನೀತರಾಗಬೇಕು. ಅಂಥ ಶಕ್ತಿ ಸಂಕಲ್ಪಗಳು ತಮಗೆಲ್ಲ ಅಧಿಕ ಪ್ರಮಾಣದಲ್ಲಿ ಒದಗಲೆಂದೂ ಜೀವನದಲ್ಲಿ ಸುಖವೂ ಶ್ರೇಯಸ್ಸೂ ಕ್ಲೇಶವಿಲ್ಲದೆ ಕೈಗೂಡಲೆಂದೂ ನನ್ನ ಹಾರೈಕೆ.

"ತೇಜಸ್ವಿ ನಾವಧೀತಮಸ್ತು!"

ತೀ. ನಂ. ಶ್ರೀಕಂಠಯ್ಯ

# ತಂತ್ರೋಪಾಖ್ಯಾನ

ವಸುಭಾಗನ ಪಂಚತಂತ್ರವನ್ನು ಕುರಿತು ಶ್ರೀ ಎ. ಆರ್. ಕೃಷ್ಣಶಾಸ್ತ್ರಿಗಳ ಸಂಭಾವನಾ ಗ್ರಂಥ ಪ್ರಕಟನ ಸಮಿತಿಯಿಂದ ೧೯೫೭ ರಲ್ಲಿ ಪ್ರಕಾಶಿತವಾದ 'ಅಭಿವಂದನೆ' ಎಂಬ ಪುಸ್ತಕದ ೫೧೩-೫೨೩ ನೆಯ ಪುಟಗಳಲ್ಲಿ ಮುದ್ರಿತವಾಗಿರುವ ಲೇಖನದಲ್ಲಿ[1] ನಾನು ವಸುಭಾಗನ ಹೆಸರು (೧) ದುರ್ಗಸಿಂಹನ ಕನ್ನಡ ಪಂಚತಂತ್ರ ಮತ್ತು (೨) ಯುವದ್ವೀಪದಲ್ಲಿನ ತಂತ್ರಿ (ತಂತ್ರಿ ಕಾಮಂದಕ, ತಂತ್ರವಾಕ್ಯ ಅಥವಾ ತಂತ್ರಿಚರಿತ) ಎಂಬ ಎರಡು ಪಂಚತಂತ್ರ ಗ್ರಂಥಗಳಲ್ಲಿ ಮಾತ್ರ ನಮಗೆ ದೊರೆತಿದೆ ಯೆಂದು ಹೇಳಿರುವೆನಷ್ಟೆ. ಈ ಹೆಸರು ಪಂಚತಂತ್ರದ ಇನ್ನು ಎರಡು ಪಾಠಭೇದಗಳಲ್ಲಿ ಹೇಳಲ್ಪಟ್ಟಿದೆಯೆಂದು ಡಾ|| ಜಿ. ಟಿ. ಅರ್ಟೋಲಾ ಎಂಬ ವಿದ್ವಾಂಸರು ಈಚೆಗೆ ನನಗೆ ತಿಳಿಸಿದರು. ಇವುಗಳಲ್ಲಿ ಒಂದು ಲೇಯಾಸ್ ದೇಶದಲ್ಲಿರುವ ಪಂಚತಂತ್ರದ ಅನುವಾದ; ಇದಕ್ಕೆ ತಂತ್ರೈ ಎಂಬ ಹೆಸರು ಒಂದು ಲಿಖಿತ ಪುಸ್ತಕದಲ್ಲಿ ಹೇಳಲ್ಪಟ್ಟಿದೆ. ಈ ಗ್ರಂಥದಲ್ಲಿ (೧) ನಂದಪಕೊನ್ (ನಂದಕ ಪ್ರಕರಣ) (೨) ಮಂಡಪಕೊನ್ (ಮಂಡೂಕ ಪ್ರಕರಣ) (೩) ಪಿಸಪಕೊನ್ (ಪಿಶಾಚ ಪ್ರಕರಣ) (೪) ಸಕುನಪ ಕೊನ್ (ಶಕುನ ಪ್ರಕರಣ) ಎಂಬ ನಾಲ್ಕು ಪ್ರಕರಣಗಳಿರುವವು. ಈ ಗ್ರಂಥದ ಸುಮಾರು ಮೂರನೇ ಒಂದು ಭಾಗವು ಡಾ|| ಬ್ರೆಂಗೆ (Dr. Jean Brengue) ಅವರಿಂದ 'ಲೇಯಾಸ್ ದೇಶದ ಪಂಚತಂತ್ರ ಪಾಠ' (Une Version Laotienne du Pañcatantra) ಎಂಬ ಶಿರೋನಾಮದಿಂದ *Journal Asiatique* ಪತ್ರಿಕೆ ಯಲ್ಲಿಯೂ 1908, ಅದಕ್ಕಿಂತ ಮುಂಚೆ Contres et Legendcs du Pays Laotien ಎಂಬ (ಪುಟ 88-155) ಪುಸ್ತಕದಲ್ಲಿಯೂ ಫ್ರೆಂಚ್ ಭಾಷೆಯಲ್ಲಿ ಅನುವಾದ ಮಾಡಿ ಮುದ್ರಿಸಲ್ಪಟ್ಟಿತು. ಇದಾದ ಒಂಬತ್ತು ವರ್ಷಗಳನಂತರ ಡಾ|| ಫಿನೊ (Louis Finot) ಅವರು *Bulletin de L'Ecole* ' *Française* Extreme *Orient* ಪತ್ರಿಕೆಯಲ್ಲಿ (XVII, Pages 84-116, 1917) ಸಮಗ್ರ ಗ್ರಂಥದಲ್ಲಿರುವ ಕಥೆಗಳ ಸಾರವನ್ನು ಫ್ರೆಂಚ್ ಭಾಷೆಯಲ್ಲಿ ಬರೆದು ಪ್ರಕಟಿಸಿದರು.

---

[1] ಈ ಲೇಖನದಲ್ಲಿ ೫೨೩ ನೇ ಪುಟದ ೧೪ ನೇ ಸಾಲಿನಲ್ಲಿ 'ತಂತ್ರೈಯಲ್ಲಿ' ಎಂಬುದನ್ನು 'ತಂತೈಯಲ್ಲಿ' ಎಂದೂ, ೫೧೪ ನೇ ಪುಟದ ೨೪ ನೇ ಸಾಲಿನಲ್ಲಿ 'ಕಲಿಲಪದಮ್ನ' ಎಂಬುದನ್ನು 'ಕಲಿಲ ವ ದಿಮ್ನ' ಎಂದೂ ತಿದ್ದಿಕೊಳ್ಳಬೇಕು.

ವಸುಭಾಗನ ಹೆಸರು ಈ ಗ್ರಂಥದಲ್ಲಿ ಉಕ್ತವಾಗಿದೆಯೆಂದು ಮೇಲೆ ಹೇಳಿದ ಈ ಇಬ್ಬರು ವಿದ್ವಾಂಸರಲ್ಲೊಬ್ಬರಿಗೂ ತಿಳಿಯದು. ಆದರೆ ಬ್ರೆಂಗೆ ಅವರ ಅನುವಾದದಲ್ಲಿ (ಪುಟ ೧೧೨, ೧೧೪, ೧೧೭, ೯೬) ಬಂದಿರುವ 'ವಸು ಫಖ' ಎಂಬ ಅರ್ಥವಾಗದ ಅಕ್ಷರ ಸಮುದಾಯವು ವಸುಭಾಗ ಎಂಬ ಪದದ ವಿಕಾರವೆಂಬ ಡಾ|| ಆರ್ಟೊಲಾ ಅವರ ಅಭಿಪ್ರಾಯವು ಸೂಕ್ತವಾದುದೆಂದು ನನಗೆ ತೋರುತ್ತದೆ.

ವಸುಭಾಗನ ಹೆಸರನ್ನು ಹೇಳುವ ಎರಡನೇ ಗ್ರಂಥವು ತಂತ್ರೋಪಾಖ್ಯಾನವೆಂಬ ಸಂಸ್ಕೃತ ಪುಸ್ತಕ. ಇದು ೧೯೩೮ರಲ್ಲಿ ಅನಂತಶಯನ ಸಂಸ್ಕೃತ ಗ್ರಂಥಾವಳಿಯ ೧೩೨ ನೇ ಗ್ರಂಥಾಂಕವಾಗಿ ಪಂಡಿತ ಸಾಂಬಶಿವಶಾಸ್ತ್ರಿಗಳಿಂದ ಪ್ರಕಾಶಿಸಲ್ಪಟ್ಟಿತು. ಈ ಪಂಡಿತರ ಸಂಸ್ಕೃತ ಮುನ್ನುಡಿಯಲ್ಲಿ ಹೇಳಿರುವ ಪ್ರಕಾರ ಈ ಗ್ರಂಥವನ್ನು ಒಂದೇ ಒಂದು ಲಿಖಿತ ಪುಸ್ತಕದ ಆಧಾರದ ಮೇಲೆ ಅವರು ಪ್ರಕಾಶಿಸಿದ್ದಾರೆ.[2] ಇದರಲ್ಲಿ ನಂದಕಪ್ರಕರಣ, ಪಕ್ಷಿಪ್ರಕರಣ ಮತ್ತು ಮಂಡೂಕಪ್ರಕರಣ ಎಂದು ಮೂರು ಪ್ರಕರಣಗಳಿರುವವು. ಮೂರನೇ ಪ್ರಕರಣದ ಕೊನೆಯಲ್ಲಿ 'ಇತಿ ತಂತ್ರೋಪಾಖ್ಯಾನೇ ಮಂಡೂಕಪ್ರಕರಣಂ ಸಮಾಪ್ತಂ' ಎಂದು ಇಷ್ಟು ಮಾತ್ರ ವಿದೆಯೇ ವಿನಾ ಗ್ರಂಥವು ಇಲ್ಲಿಗೆ ಮುಗಿಯಿತೆಂದು ಸೂಚಿಸುವ ಯಾವ ಮಾತೂ ಇಲ್ಲ. ಮೇಲೆ ಹೇಳಿದಂತೆ ತಂತ್ರೈ ಗ್ರಂಥದಲ್ಲಿ ಈ ಮೂರು ಪ್ರಕರಣಗಳಲ್ಲದೆ ಪಿಶಾಚ ಪ್ರಕರಣವೆಂಬ ನಾಲ್ಕನೇ ಪ್ರಕರಣವೂ ಇರುವದಲ್ಲದೆ ಯವ ದ್ವೀಪದ ತಂತ್ರಿ ಗ್ರಂಥದಲ್ಲಿಯೂ ನಾಲ್ಕು ಪ್ರಕರಣಗಳಿತ್ತೆಂದೂ ತಾಯಿ ಸ್ಥಾನದಲ್ಲಿ (ಸಯಾಂದೇಶ) ದೊರೆಯುವ ತಂತ್ರೈಯೆಂಬ ಹೆಸರುಳ್ಳ ಪಂಚತಂತ್ರ ಗ್ರಂಥದಲ್ಲಿಯೂ ಪಿಶಾಚ ಪ್ರಕರಣವು ಇರುವದರಿಂದಲೂ ಸಹ ಮೇಲೆ ಹೇಳಿದ ತಂತ್ರೋಪಾಖ್ಯಾನವೂ ನಾಲ್ಕು ಪ್ರಕರಣಗಳನ್ನು ಒಳಗೊಂಡಿರುವುದೆಂದೂ, ಮುದ್ರಿತ ಗ್ರಂಥಕ್ಕೆ ಆಧಾರಭೂತವಾದ ಲಿಖಿತಕೋಶವು ಅಸಮಗ್ರ ಗ್ರಂಥವೆಂದೂ ನಾವು ನಿಸ್ಸಂದೇಹವಾಗಿ ಹೇಳ ಬಹುದು. ಈ ತಂತ್ರೋಪಾಖ್ಯಾನದ ಕರ್ತೃವು ವಸುಭಾಗನೆಂದು ಅಲ್ಲಿ ಹೇಳಲ್ಪಟ್ಟಿಲ್ಲ. ಆದರೆ ಅವನ ಹೆಸರು ಈ ಗ್ರಂಥದಲ್ಲಿ ೩೮ ಕಥೆಗಳ ಅಂತ್ಯದಲ್ಲಿ ಬರುವ "ವಸುಭಾಗಃ ಶ್ಲೋಕಮಮೋಚತ್" ಎಂಬ ವಾಕ್ಯದಲ್ಲಿ ಹೇಳಲ್ಪಟ್ಟಿರುವದು.

ಗ್ರಂಥಾರಂಭದಲ್ಲಿ—ದೇವದೇವಂ ಜಗದ್ಯೋನಿಂ ಪ್ರಣಮ್ಯ ವೃಷಭಧ್ವಜಂ ತಂತ್ರೋಪಾಖ್ಯಾಂ ಪ್ರವಕ್ಷ್ಯಾಮಿ ಶೃಣುತೈತಾಂ ಮನೀಷಣಃ || ೧ || ಯದಿಹಾಸ್ತಿ

---

[2] ಆಂಗ್ಲ ಭಾಷೆಯಲ್ಲಿ ಬರೆಯಲ್ಪಟ್ಟಿರುವ ಮುನ್ನುಡಿಯಲ್ಲಾದರೆ Manuscripts (ಲಿಖಿತ ಪುಸ್ತಕಗಳು) ಎಂದು ಬಹುವಚನವು ಉಪಯೋಗಿಸಲ್ಪಟ್ಟಿರುವದು. ಇದು ಕೇವಲ ಪ್ರಮಾದ ವೆಂದು ತೋರುತ್ತದೆ.

ತದನ್ಯತ್ರ ಯನ್ನೇಹಾಸ್ತಿ ನತತ್ ಕ್ವಚಿತ್ | ಇತಿ ವಾಕ್ಯಂ ಮುನೇಸ್ತಸ್ಮಾದಿಯಂ ಸಾ ಭಾರತೀ ಕಥಾ ‖ ೨ ‖ ಈಶ್ವರಾಣಾಮಿದಂ ತಂತ್ರಂ ಪ್ರಾಯೇಣೌತ್ಸುಕ್ಯ ಮಾವಹೇತ್ | ಯತಸ್ತಿರಶ್ಚಾಂ ಚರಿತೈರ್ನೀತಿಮಾರ್ಗಃ ಪ್ರದರ್ಶ್ಯತೇ ‖ ೩ ‖ ಅರ್ಥೇ ಭವೇನ್ನಯಜ್ಞಾನಮಾಖ್ಯಾನಶ್ರವಣೇ ಸುಖಂ | ಜ್ಞಾನಾರ್ಥಂ ಚ ಸುಖಾರ್ಥಂ ಚ ತಂತ್ರೋಪಾಖ್ಯಾನ ಮುಚ್ಯತೇ ‖ ೪ ‖ ದುರ್ಗ್ರಹತ್ವಾನ್ಮಹಚ್ಛಾಸ್ತ್ರಂ ಶ್ರೋತು ರಾಲಸ್ಯ ಮಾವಹೇತ್ | ಇತಿಹಾಸೇ ಕೃತಂ ಶಾಸ್ತ್ರ ಮತೋ ನೀತಿನಿಬಂಧನಂ ‖ ೫ ‖ ಹಿತಾಹಿತಪ್ರಾಪ್ತ್ಯವಮರ್ಶಪೇಶಲಾ ಕುತ ಸ್ತಿರಶ್ಚಾ ಮಿಯ ಮೀದೃಶೀ ಗತಿಃ | ಕುತಶ್ಚ ವಾಗಿತ್ಯವಿಚಾರ್ಯ ಕೇವಲಂ ಕವೇರಭಿಪ್ರಾಯಗತಂ ನಿಬೋಧತ ‖ ೬ ‖

"ಜಗತ್ತಿಗೆ ಕಾರಣಭೂತನಾದ ದೇವೋತ್ತಮನಾದ ಪರಶಿವನಿಗೆ ನಮಸ್ಕಾರ ಮಾಡಿ ತಂತ್ರೋಪಾಖ್ಯಾನವನ್ನು ಬರೆಯುತ್ತೇನೆ. ಎಲೈ ಪಂಡಿತರೇ, ಇದನ್ನು ನೀವು ಕೇಳುವರಾಗಿ (೧) 'ಇಲ್ಲಿರುವದು ಬೇರೆ ಗ್ರಂಥದಲ್ಲಿರುವದು; ಇಲ್ಲಿ ಇಲ್ಲದಿರುವುದು ಬೇರೆ ಯಾವ ಗ್ರಂಥದಲ್ಲಿಯೂ ಇಲ್ಲ' ಎಂದು (ವ್ಯಾಸ) ಮಹರ್ಷಿಯು ಹೇಳಿರುವನಷ್ಟೆ. ಆದ್ದರಿಂದ ಈ ಕಥೆಯು ಮಹಾಭಾರತದಿಂದ ಉದ್ಧೃತವಾದದ್ದು (೨) ರಾಜರಿಗೆ ಈ ಗ್ರಂಥವು ಉತ್ಸುಕತೆಯನ್ನು ಉಂಟುಮಾಡಬೇಕು. ಏಕೆಂದರೆ ಇಲ್ಲಿ ತಿರ್ಯಗ್ ಜಂತುಗಳನ್ನು ಕುರಿತ ಕಥೆಗಳಿಂದ ನೀತಿಯು ಹೀಗೆಂದು ತೋರಿ ಸಲ್ಪಡುತ್ತದೆ (೩) ಚೆನ್ನಾಗಿ ಅರ್ಥವನ್ನು ತಿಳಿದುಕೊಳ್ಳುವುದರಿಂದ ನೀತಿಜ್ಞಾನವೂ ಕಥೆಯನ್ನು ಕೇಳುವುದರಿಂದ ಸುಖವೂ ಉಂಟಾಗುವದು. ಜ್ಞಾನಕ್ಕಾಗಿಯೂ ಸುಖ ಕ್ಕಾಗಿಯೂ ಈ ತಂತ್ರೋಪಾಖ್ಯಾನವು ಹೇಳಲ್ಪಡುತ್ತದೆ (೪) (ನೀತಿ)ಶಾಸ್ತ್ರವು ದೊಡ್ಡದಾಗಿಯೂ ಕಷ್ಟವಾಗಿಯೂ ಇರುವುದರಿಂದ ಆ ಶಾಸ್ತ್ರವನ್ನು ಕೇಳುವವನಿಗೆ ಬೇಸರಿಕೆಯುಂಟಾಗುತ್ತದೆಂದು ನೀತಿಶಾಸ್ತ್ರ ಸಂಬದ್ಧವಾದ ಕಥೆಯು ರಚಿಸಲ್ಪಟ್ಟಿದೆ (೫) 'ತಿರ್ಯಗ್ಜಂತುಗಳಿಗೆ ಇದರಿಂದ ಹಿತವಾಗುವದು, ಇದರಿಂದ ಅಹಿತವಾಗುವುದು, ಎಂಬ ಬುದ್ಧಿಯೂ ಮಾತೂ ಎಲ್ಲಿಯದು' ಎಂಬ ವಿಚಾರಕ್ಕೆ ಹೋಗದೆ ಸುಮ್ಮನೆ ಕವಿಯು ಹೇಳುವುದನ್ನು ಕೇಳಿ ತಿಳಿದುಕೊಳ್ಳಿ (೬)" ಎಂದು ಕವಿಯು ಆರು ಶ್ಲೋಕಗಳಲ್ಲಿ ಹೇಳಿ ಅನಂತರ ಕಥೆಯುನ್ನು ಉಪಕ್ರಮಿಸುತ್ತಾನೆ.

ಈ ಗ್ರಂಥದಲ್ಲಿ ಹೇಳಲ್ಪಟ್ಟಿರುವ ಕಥೆಗಳು ಯಾವವೆಂಬುದನ್ನೂ ಅವುಗಳ ಕ್ರಮ ಯಾವದೆಂಬುದನ್ನೂ ಇಲ್ಲಿ ಕೊಟ್ಟಿರುವ ಪಟ್ಟಿಕೆಯು ತಿಳಿಸುತ್ತದೆ. ಅಲ್ಲದೆ ಈ ಕಥೆಗಳು ತಂತ್ರೈ ಮೊದಲಾದ ಯಾವ ಪಂಚತಂತ್ರಪಾಠದಲ್ಲಿ ಹೇಳಲ್ಪಟ್ಟಿರುವವೆಂಬುದನ್ನೂ ಈ ಪಟ್ಟಿಕೆಯು ತಿಳಿಸುತ್ತದೆ. ಈ ಪಂಚತಂತ್ರಪಾಠಗಳು ಯಾವುವೆಂದರೆ—

೧. ತಂತ್ರೈ ಎಂಬ ಹೆಸರುಳ್ಳ ಲೇಯಾಸ್ ದೇಶದ ಪಂಚತಂತ್ರ: ಇದರಲ್ಲಿನ

ಕಥೆಗಳ ಸಾರವನ್ನು ಮೇಲೆ ಹೇಳಿರುವಂತೆ ಡಾ|| ಫಿನೊ ಅವರು ಫ್ರೆಂಚ್ ಭಾಷೆ ಯಲ್ಲಿ ಬರೆದಿದ್ದಾರೆ.

೨. ತಂತ್ರಿ ಎಂಬ ಹೆಸರುಳ್ಳ ಯವ ದ್ವೀಪದಲ್ಲಿನ ಪಂಚತಂತ್ರ: ಇದರಲ್ಲಿನ ಕಥೆಗಳ ಸಾರವನ್ನು ಡಾ|| ಹೊಯ್ಕ್ಯಾಸ್ (C. Hooykaas ಅವರು Tanti, de Middeljavaansche Pañcotantra bewerking ಎಂಬ ಗ್ರಂಥದಲ್ಲಿ ಡಚ್ ಭಾಷೆ ಯಲ್ಲಿ ಕೊಟ್ಟಿದ್ದಾರೆ.

೩. ತಂತ್ರೈ ಎಂಬ ತಾಯಿದೇಶದ ಪಂಚತಂತ್ರ: ಈ ಗ್ರಂಥದ ಒಂದು ಕೋಶ ದಲ್ಲಿ ದೊರೆಯುವ ಕಥೆಗಳ ಸಾರವನ್ನು ಡಾ|| ಲೋರ್‌ಷೂ (E. Lorgeou ಅವರ Les Entretiems de Nang Tantrai) ಎಂಬ ಪುಸ್ತಕದಲ್ಲಿ ಫ್ರೆಂಚ್ ಭಾಷೆಯಲ್ಲಿ ಕೊಟ್ಟಿದ್ದಾರೆ.

೪. ದುರ್ಗಸಿಂಹನ ಪಂಚತಂತ್ರ (ದು.)—ಕನ್ನಡ ಗ್ರಂಥ; ಪಂಡಿತ ಎಸ್. ಜಿ. ನರಸಿಂಹಾಚಾರ್ ಮತ್ತು ಪಂಡಿತ ಮ. ಆ. ರಾಮಾನುಜಯ್ಯಂಗಾರ್ ಅವರಿಂದ ಸನ್ ೧೮೯೮ ರಲ್ಲಿ ಪ್ರಕಾಶಿತವಾಯಿತು.

೫. ದಾಕ್ಷಿಣಾತ್ಯ ಪಂಚತಂತ್ರ (ದಾ). ಸಂಸ್ಕೃತ.

೬. ಕಾಶ್ಮೀರ ಪಂಚತಂತ್ರ (ಕಾ) (ಸಂಸ್ಕೃತ): ಇದಕ್ಕೆ ತಂತ್ರಾಖ್ಯಾಯಿಕಾ ಅಥವಾ ತಂತ್ರಾಖ್ಯಾಯಿಕಂ ಎಂದು ಹೆಸರು. ಮೇಲ್ಕಂಡ ಎರಡು ಪಂಚತಂತ್ರ ಪಾಠಗಳೂ ಡಾ || ಹೆರ್ಟೆಲ್ ಅವರಿಂದ ಪ್ರಕಾಶಿತವಾಗಿವೆ.

೭. ದಾಕ್ಷಿಣಾತ್ಯ ಪಂಚತಂತ್ರದ ಬೃಹತ್ಪಾಠ (ದಾ. ಬೃ); ಸಂಸ್ಕೃತ: ಈ ಪಂಚತಂತ್ರದ ಒಂದು ಕೋಶವು ಡಾ|| ಹೆರ್ಟೆಲ್‌ರವರಿಗೆ ದೊರೆಯಿತು. ಅದು ಬಹಳ ಅಶುದ್ಧವಾದ್ದರಿಂದ ಅವರು ಗ್ರಂಥವನ್ನು ಪ್ರಕಾಶಿಸುವ ಗೋಜಿಗೆ ಹೋಗದೆ ಅದರಲ್ಲಿ ರುವ ಕಥೆಗಳ ಸಾರವನ್ನು *Zeitscrift der Dewtschen Morgenländischen Gesell_schaft* ಪತ್ರಿಕೆಯಲ್ಲಿ (ಸಂಪುಟ ೬೦,೬೧) ಜರ್ಮನ್ ಭಾಷೆಯಲ್ಲಿ ಕೊಟ್ಟಿರುತ್ತಾರೆ.

೮. ದಾಕ್ಷಿಣಾತ್ಯ ಬೃಹತ್ಪಂಚತಂತ್ರದ ಕನ್ನಡ ಅನುವಾದ (ದಾ. ಬೃ. ಕ) ನಾನು ನೋಡಿರುವ ಈ ಗ್ರಂಥವು 'ಸಟೀಕ ಕನ್ನಡ ಪಂಚತಂತ್ರ' ಎಂಬ ಹೆಸರಿನಿಂದ ೧೮೯೩ ರಲ್ಲಿ ಎ. ವೆಂಕಟಸುಬ್ಬಯ್ಯ ಎಂಬವರಿಂದ ಪರಿಷ್ಕರಿಸಲ್ಪಟ್ಟು ಮದ್ರಾಸಿನಲ್ಲಿ ಮುದ್ರಿಸಲ್ಪಟ್ಟಿತ್ತು.

೯. ದಾಕ್ಷಿಣಾತ್ಯ ಪಂಚತಂತ್ರದ ಬೃಹತ್ಪಾಠ (ದಾ. ಬೃ. ವೈ) ಸಂಸ್ಕೃತ: ದಾ. ವಿನ ಬೃಹದ್ರೂಪ; ದಾ. ಬೃ. ವಿನಿಂದ ಭಿನ್ನವಾದದ್ದು. ಇದರಲ್ಲಿರುವ ಕಥೆಗಳ

ಸಾರವು *Zeitscrift fuer Indologie wnd Iranistik* ಪತ್ರಿಕೆಯಲ್ಲಿ (೧೦,೬೨-೯೫) ಆಂಗ್ಲ ಭಾಷೆಯಲ್ಲಿ ನನ್ನಿಂದ ಕೊಡಲ್ಪಟ್ಟಿದೆ.

೧೦. ಲಾಟೀಯ ಪಂಚತಂತ್ರ (ಲಾ) ಸಂಸ್ಕೃತ. ಈಗ ಗುಜರಾತಿಭಾಷೆಯನ್ನು ಮಾತಾಡುವ ಲಾಟ ಸೌರಾಷ್ಟ್ರದೇಶಗಳಲ್ಲಿ ದೊರೆಯುವ ಪಂಚತಂತ್ರಪಾಠ. ಇದನ್ನು ಬೊಂಬಾಯಿ ಸಂಸ್ಕೃತ ಗ್ರಂಥಾವಳಿಯಲ್ಲಿ (Bombay Sanskrit Series) ಡಾ|| ಕೀಲ್ ಹೋರ್ನ್ ಮತ್ತು ಡಾ|| ಬೀಲರ್ ಅವರು ಪರಿಷ್ಕರಿಸಿ ಪ್ರಕಾಶಿಸಿದ್ದಾರೆ. ಆಂಗ್ಲ ಭಾಷೆಯಲ್ಲಿ ಇದಕ್ಕೆ Panchatantra Simplicior (ಪಂಚತಂತ್ರದ ಲಘುಪಾಠ) ಎಂದು ಪ್ರಾಯಿಕವಾಗಿ ಹೇಳುತ್ತಾರೆ.

೧೧. ಲಾಟೀಯ ಪಂಚತಂತ್ರದ ಬೃಹತ್ಪಾಠ (ಪೂ) ಸಂಸ್ಕೃತ: ಇದರ ಪಾಠವನ್ನು ಪೂರ್ಣಭದ್ರ ಎಂಬ ಜೈನ ಗುರುವು ಸೋಮಮಂತ್ರಿಗಾಗಿ ಪರಿಷ್ಕರಿಸಿ ಕೊಟ್ಟನು. ಇದನ್ನು ಹೆರ್ಟೆಲ್ ಅವರು Harvard Oriental Series ಎಂಬ ಗ್ರಂಥಾವಳಿಯಲ್ಲಿ ಪ್ರಕಾಶಿಸಿದ್ದಾರೆ. ಪೂರ್ಣಭದ್ರನು ಈ ಪಾಠಭೇದದ ಕರ್ತೃವೆಂದು ಅವರು ಭ್ರಮಿಸಿ ಈ ಪಾಠಭೇದಕ್ಕೆ 'ಪೂರ್ಣಭದ್ರನ ಪಂಚತಂತ್ರ' ಎಂಬ ಹೆಸರನ್ನು ಕೊಟ್ಟಿರುತ್ತಾರೆ. ಈ ಹೆಸರನ್ನೇ ನಾವೂ ಉಪಯೋಗಿಸುವೆವಾದರೂ ಪೂರ್ಣಭದ್ರನು ಇದರ ಕರ್ತೃವಲ್ಲವೆಂಬುದನ್ನು ನಾವು ನೆನಪಿನಲ್ಲಿಟ್ಟಿರಬೇಕು. ಈ ಸಂಬಂಧವಾಗಿ *Journal of Oriental Research* (೮,೧೦೪ ಅ) ಪತ್ರಿಕೆಯನ್ನು ನೋಡಿ.

ಮೇಲ್ಕಂಡ ಪಂಚತಂತ್ರ ಪಾಠಗಳಲ್ಲಿ ದಾ. ಬೃ. ವೈನ ಗ್ರಂಥದ ಕಾಲವು ತಿಳಿದಿಲ್ಲ. ಉಳಿದವೆಲ್ಲವೂ ಕ್ರಿ. ಶ. ೧೨೦೦ ಕ್ಕಿಂತ ಹಿಂದೆಯೇ ಬರೆಯಲ್ಪಟ್ಟವು.

## ಕಥಾಸಾರಾಂಶ

### ೧. ಸಿಂಹವೂ ಎತ್ತೂ

ಪಾಟಲೀಪುತ್ರವೆಂಬ ನಗರದಲ್ಲಿ ಧರ್ಮಸ್ವಾಮಿ ಎಂಬ ಶೆಟ್ಟಿ ಇದ್ದನು. ಅವನು ವ್ಯಾಪಾರಕ್ಕಾಗಿ ಸಾಮಾನುಗಳನ್ನು ನೂರಾರು ಗಾಡಿಗಳಲ್ಲಿ ತುಂಬಿಕೊಂಡು ಮಾರುವದಕ್ಕಾಗಿ ಉಜ್ಜಯಿನೀ ನಗರಕ್ಕೆ ಹೊರಟನು. ಒಂದು ಅರಣ್ಯದಲ್ಲಿ ಹೋಗುತ್ತಿದ್ದಾಗ ಒಂದು ಗಾಡಿಗೆ ಕಟ್ಟಿದ್ದ ಶೆಟ್ಟಿಗೆ ಪ್ರಿಯವಾಗಿದ್ದ ಸಂದಕ ಎಂಬ ಎತ್ತು ಶ್ರಮದಿಂದ ಮುಂದಕ್ಕೆ ಹೋಗಲಾರದೆ ಬಿದ್ದುಬಿಟ್ಟಿತು. ಅದು ಏಳಲಾಗದಂತಿದ್ದ ಸ್ಥಿತಿಯನ್ನು ನೋಡಿ ಶೆಟ್ಟಿಯು ನಾಲ್ಕು ಆಳುಗಳನ್ನು ಅದರ ಕಾವಲಿಗೆ ಬಿಟ್ಟು ಮುಂದಕ್ಕೆ ಪ್ರಯಾಣ ಬೆಳಸಿದನು. ಕಾವಲಿಗೆ ಇದ್ದ ಆಳುಗಳು ಭಯಂಕರ

ವಾದ ಅರಣ್ಯದಲ್ಲಿ ಇರುವುದು ಕ್ಷೇಮವಲ್ಲವೆಂದು ಯೋಚಿಸಿ ಎತ್ತನ್ನು ಅಲ್ಲಿಯೇ ಬಿಟ್ಟು ಹೊರಟುಹೋದರು. ದೈವವಶಾತ್ ಮಳೆ ಬಿದ್ದು ತಂಪಾದ ಗಾಳಿಯಿಂದ ಎತ್ತು ಚೇತರಿಸಿಕೊಂಡು ಸ್ವಲ್ಪ ಪ್ರಯಾಸದಿಂದ ಎದ್ದು ನಿಂತು ಅರಣ್ಯದಲ್ಲಿಯೇ ಹಸಿರು ಹುಲ್ಲನ್ನು ಮೇದು ಹೃಷ್ಟ ಪುಷ್ಟವಾಯಿತು. ಅರಣ್ಯದಲ್ಲಿದ್ದ ಚಂಡಪಿಂಗಳನೆಂಬ ಸಿಂಹರಾಜನಿಗೂ ಸಂದಕನಿಗೂ ಸ್ನೇಹವಾಯಿತು. ಇದನ್ನು ಸಹಿಸದೆ ಸಿಂಹನ ಮಂತ್ರಿಯಾದ ಶಂಬರನೆಂಬ ನರಿಯು ಇವೆರಡಕ್ಕೂ ಮಧ್ಯೆ ಒಡಕನ್ನು ಉಂಟುಮಾಡಿ ಯುದ್ಧ ನಡೆಯುವಂತೆ ಉಪಾಯಮಾಡಿತು. ಯುದ್ಧದಲ್ಲಿ ಸಿಂಹವೂ ಎತ್ತೂ ಎರಡೂ ಮಡಿದವು.

ಕೊನೆಯಲ್ಲಿ ವಸುಭಾಗನು ಈ ಶ್ಲೋಕಗಳನ್ನು ಹೇಳಿದನು:

ಸ್ನಿಗ್ಧಾನ್ ಪ್ರೀತಾನ್ ಸೌಹೃದೇನಾರ್ಥಬದ್ಧಾನ್
ಪ್ರಾಯೋ ದೃಷ್ಟ್ವಾ ಭೇದಯನ್ತ್ಯೇವ ನೀಚಾಃ |
ಪಶ್ಯೇದಾನೀಂ ತಾದೃಶಂ ಮೈತ್ರಭಾವಂ
ದುಷ್ಟಃ ಕ್ರೋಷ್ಟಾ ಗೋಮೃಗಾರ್ಯೌ ಬಿಭೇದ || ೭ ||

ನ ನೀಚಜನಸಂಸರ್ಗಾನ್ನರೋ ಭದ್ರಾಣಿ ಪಶ್ಯತಿ |
ವೃಷಸಿಂಹಗತಾ ಪ್ರೀತಿ ರ್ಜಂಬುಕೇನ ವಿನಾಶಿತಾ || ೮ ||

ಯತೋ ನೀಚೇನ ಸಂಸರ್ಗಾದ್ ವೃಷ ಸಿಂಹೌ ನಿಪಾತಿತೌ |
ತಸ್ಮಾನ್ನ ನೀಚಸಂಸರ್ಗಂ ಪ್ರಾಜ್ಞಃ ಕುರ್ಯಾತ್ ಕದಾಚನ || ೯ ||

ಕ್ಷುದ್ರಂ ಮಿತ್ರಂ ನಕುರ್ವೀತ ನೋಪಸೇವ್ಯಂ ಕದಾಚನ |
ಪಶ್ಯ ಸಿಂಹವೃಷಾ ವೇತೌ ಸೃಗಾಲೇನ ವಿನಾಶಿತೌ || ೧೦ ||

ಈ ಕಥೆಯಲ್ಲಿ—

ನದೀನಾಂ ಚ ನಖೀನಾಂ ಚ ಶೃಂಗಿಣಾಂ ಶಸ್ತ್ರಪಾಣಿನಾಂ |
ವಿಶ್ವಾಸೋ ನೋಪಗಂತವ್ಯಃ ಸ್ತ್ರೀಷು ರಾಜಕುಲೇಷು ಚ || ೧೧ ||

ಎಂಬ ಆಖ್ಯಾನ ಶ್ಲೋಕವಿದೆ.

## † ೨. ನರಿಯೂ ಭೇರಿಯೂ

ಈ ಕಥೆಯಲ್ಲಿ—

ಶ್ರುತ್ವೈವ ತುಮುಲಂ ಶಬ್ದಂ ಮನ್ಯೇಹಂ ಮೇದಸಾ ಕೃತಂ |
ಅಂತಃ ಪ್ರವಿಶ್ಯ ಜಾನಾಮಿ ಯಥಾ ಚರ್ಮಚ ದಾರುಚ || ೧೨ ||

ಎಂಬ ಆಖ್ಯಾನ ಶ್ಲೋಕವಿರುವುದು.

† ಈ ಗುರುತಿರುವ ಕಥೆಗಳು ಪ್ರಾಯಿಕವಾಗಿ ಎಲ್ಲರಿಗೂ ತಿಳಿದಿರಬಹುದಾದ್ದರಿಂದ, ಇಂಥ ಕಥೆಗಳ ಸಾರವನ್ನು ಇಲ್ಲಿ ನಾವು ಕೊಡುವುದಿಲ್ಲ. ಅಪೇಕ್ಷೆಯಿದ್ದವರು ದಾ. ದು. ವೊದಲಾದವನ್ನು ನೋಡಬಹುದು.

## † ೩. ಎರಡು ಗಿಣಿಗಳು

ಈ ಕಥೆಯಲ್ಲಿ—

ಮಾತಾ ಪ್ಯೇಕಾ ಪಿತಾ ಪ್ಯೇಕೋ ಮಮ ತಸ್ಯ ಶುಕಸ್ಯ ಚ |
ಅಹಂ ಮುನಿಭಿ ರಾನೀತಃ ಸ ಚಾನೀತೋ ಗವಾಶನೈಃ || ೧೩ ||

ಅಹಂ ಮುನೀನಾಂ ವಚನಂ ಶೃಣೋಮಿ
ಗವಾಶನಾನಾಂ ಸ ವಚಃ ಶೃಣೋತಿ |
ಪ್ರತ್ಯಕ್ಷ ಮೇತದ್ ಭವತಾದ್ಯ ದೃಷ್ಟಂ
ಸಂಸರ್ಗಜಾ ದೋಷಗುಣಾ ಭವಂತಿ || ೧೪ ||

ಎಂಬ ಎರಡು ಆಖ್ಯಾನ ಶ್ಲೋಕಗಳಿರುವುವು.

## † ೪. ಹಂಸಗಳೂ ಆಮೆಯೂ

* ಮಿತ್ರಾಣಾಂ ಹಿತಕಾಮಾನಾಂ ಯೋ ವಾಕ್ಯಂ ನಾನುತಿಷ್ಠತಿ |
ಸ ಕೂರ್ಮ ಇವ ದುರ್ಬುದ್ಧಿಃ ಕಾಷ್ಠಾದ್ ಭ್ರಷ್ಟೋ ವಿನಶ್ಯತಿ || ೧೫ ||

## † ೫. ತಿಗುಣೆಯೂ ಕೂರೆಯೂ

* ಶೀಲವೃತ್ತ ಮವಿಜ್ಞಾಯ ಯೋ ದದಾತಿ ಪ್ರತಿಶ್ರಯಂ |
ಸೋಚಿರಾನ್ನಶ್ಯತಿ ಯಥಾ ಯೂಕೋ ಮತ್ಕುಣ ಕಾದಿವ || ೧೬ ||

## † ೬. ಕೊಕ್ಕರೆಯೂ ಏಡಿಯೂ

* ನ ಜಾನನ್ತಿ ನ ಜಾನನ್ತೀತ್ಯನ್ಯಾನ್ ಯಃ ಪರಿಬಾಧತೇ |
ಸ ನಾಶಂ ಸ್ವಯಮಾಪ್ನೋತಿ ಬಕಃ ಕರ್ಕಟಕಾದ್ ಯಥಾ || ೧೭ ||

## † ೭. ಸಿಂಹವೂ, ಸಿಂಹಪರಿವಾರವೂ, ಒಂಟೆಯೂ

* ಬಹವಃ ಪಂಡಿತಾಃ ಕ್ಷುದ್ರಾಃ ಸರ್ವೇ ಮಾಯೋಪಜೀವಿನಃ |
ಕುರ್ಯುರ್ ದೋಷ ಮದೋಷಂ ವಾ ಉಷ್ಟ್ರಂ ಕಾಕಾದಯೋ ಯಥಾ || ೧೮ ||

ಈ ಕಥೆಯಲ್ಲಿ—

ಕರ್ಮಣಾ ಯೇನ ಕೇನಾಪಿ ಮೃದುನಾ ದಾರುಣೇನ ವಾ |
ಉದ್ಧರೇ ದ್ದೀನ ಮಾತ್ಮಾನಂ ಪಶ್ಚಾ ದ್ಧರ್ಮಂ ಸಮಾಚರೇತ್ || ೧೯ ||

ಯದಿ ಕ್ಷುಧಾನ್ವಿತಾ ಯೂಯಂ ಮಿತ್ರಂ ಮಾಮ್ ಭಕ್ಷಯಿಷ್ಯಥ |
ಇಹಲೋಕಸುಖಂ ಮಿತ್ರಂ ನ ಮಿತ್ರಂ ಪಾರಲೌಕಿಕಂ || ೨೦ ||

ಎಂಬ ಆಖ್ಯಾನ ಶ್ಲೋಕಗಳಿರುವುವು.

---

* ಈ ಗುರುತಿರುವ ಶ್ಲೋಕದ ಹಿಂದೆ 'ಇದನ್ನು ನೋಡಿ ವಸುಭಾಗನು ಈ ಮುಂದಿನ ಶ್ಲೋಕವನ್ನು ಹೇಳಿದನು,' ಎಂಬ ವಾಕ್ಯವನ್ನು ಸೇರಿಸಿಕೊಳ್ಳಬೇಕು.

## † ೮. ಟಿಟ್ಟಿಭಗಳೂ ಸಮುದ್ರವೂ

* ಶತ್ರೋ ರಾಕ್ರಾನ್ತಿ ಮಜ್ಞಾತ್ವಾ ವೈರ ಮಾಚರತೇ ತು ಯಃ
ಸ ಪರಾಭವ ಮಾಪ್ನೋತಿ ಸಮುದ್ರ ಇವ ಟಿಟ್ಟಿಭಾತ್ ‖ ೨೧ ‖

## † ೯. ಬೇಡ, ಹುಲಿ ಮತ್ತು ಕಪಿ

* ಪ್ರತ್ಯುತ್ಪನ್ನೇಷು ಕಾರ್ಯೇಷು ಬುದ್ಧಿರ್ಯಸ್ಯ ನ ಹೀಯತೇ |
ಸ ನಿಸ್ತರತಿ ಕಾರ್ಯಣಿ ಯಥಾ ಜೀವತಿ ವಾನರೀ ‖ ೨೨ ‖

* ತಿರ್ಯಗ್ಯೋನಿಗತೈ ಶ್ಚಾಪಿ ಕೃತಘ್ನೋ ನೋಪಭುಜ್ಯತೇ |
ನಿಷಾದಂ ಪಶ್ಯ ಪಾಪಿಷ್ಠಂ ವ್ಯಾಘ್ರೇಣ ಪರಿವರ್ಜಿತಂ ‖ ೨೩ ‖

ಈ ಕಥೆಯಲ್ಲಿ—

ಮಿತ್ರಘ್ನಂ ಸಮಯಾದ್ಭ್ರಷ್ಟಂ ಕೃತಘ್ನಂ ಬಹುಕಿಲ್ಬಿಷಂ |
ನ ಭಕ್ಷಯಾಮಿ ತ್ವಾಂ ಪಾಪ ಗಚ್ಛ ಶೀಘ್ರಂ ಮಮಾಗ್ರತಃ ‖ ೨೪ ‖

ಎಂಬ ಆಖ್ಯಾನ ಶ್ಲೋಕವು ಹೇಳಲ್ಪಟ್ಟಿದೆ.

## †೧೦. ಕೃತಜ್ಞ ಪ್ರಾಣಿಗಳೂ ಕೃತಘ್ನ ಮನುಷ್ಯನೂ

* ನರಾಃ ಕೃತಘ್ನಾಃ ಪಾಪಿಷ್ಠಾ ನ ಮೃಗಾ ನ ಚ ಪನ್ನಗಾಃ |
ನರೇಣ ದೂಷಿತೋ ವಿಪ್ರೋ ಭೋಗಿನಾ ಪರಿಮೋಚಿತಃ ‖ ೨೫ ‖

ಈ ಕಥೆಯಲ್ಲಿ—

ವ್ಯಾಘ್ರವಾನರಸರ್ಪಾಣಾಂ ಯನ್ಮಯಾ ನ ಕೃತಂ ವಚಃ |
ತೇನ ಕೂಪಾಪಸೀತೇನ ಮನುಷ್ಯೇಣಾಸ್ಮಿ ವಂಚಿತಃ ‖ ೨೬ ‖

ಮಾನುಷೇಷು ಕೃತಂ ನಾಸ್ತಿ ತಿರ್ಯಕ್ಷ್ವೇವ ಕೃತಂ ವರಂ |
ವ್ಯಾಘ್ರವಾನರಸರ್ಪಾಣಾಂ ಕೃತ ಮೇವ ಸ್ಮರಾಮ್ಯಹಂ ‖ ೨೭ ‖

ಎಂಬ ಆಖ್ಯಾನ ಶ್ಲೋಕಗಳು ಹೇಳಲ್ಪಟ್ಟಿರುವವು.

## ೧೧. ಸತ್ತ ಹುಲಿಯನ್ನು ಬದುಕಿಸಿದ ವೈದ್ಯನ ಕಥೆ

ಶಾಸ್ತ್ರಾಭ್ಯಾಸವನ್ನು ಮಾಡಿ ಹಿಂತಿರುಗುತ್ತಿದ್ದ ಒಬ್ಬ ವೈದ್ಯನು ಅಡವಿಯಲ್ಲಿ ಹಾವಿನಿಂದ ಕಡಿಯಲ್ಪಟ್ಟು ನಿಶ್ಚೇಷ್ಟವಾಗಿ ಬಿದ್ದಿದ್ದ ಒಂದು ಹುಲಿಯನ್ನು ನೋಡಿದನು. ಅದನ್ನು ಪರೀಕ್ಷಿಸಿ ‘ ಇದಕ್ಕೆ ಇನ್ನೂ ಪ್ರಾಣವು ಇದೆ. ನೋಡೋಣ ನಾನು ಕಲಿತಿರುವ ವಿದ್ಯೆಯ ಸಾಮರ್ಥ್ಯದಿಂದ ವಿಷವನ್ನು ಹೋಗಲಾಡಿಸುವುದಕ್ಕಾಗುವದೋ ಇಲ್ಲವೋ ’ ಎಂದು ಯೋಚಿಸಿ ತನ್ನ ವಿದ್ಯೆಯ ಬಲದಿಂದ ಹುಲಿಯು ಸ್ವಸ್ಥ

ವಾಗುವಂತೆ ಮಾಡಿದನು. ವಿಷಬಾಧೆಯು ನಿವಾರಣವಾದನಂತರ ಹುಲಿಯು ಎದ್ದು ಸುತ್ತಲೂ ನೋಡಿ ವೈದ್ಯನನ್ನು ಭಕ್ಷಿಸಿ ಹಸಿವನ್ನು ಶಮನಮಾಡಿಕೊಂಡಿತು.

* ಕೃತಘ್ನೋ ವಿಹಿತಂ ಕಾರ್ಯಂ ಕರ್ತಾರ ಮಪಿ ಪೀಡಯೇತ್ ।
ನಾಶಯತ್ಯಧಮೋ ವೈದ್ಯಂ ವ್ಯಾಘ್ರಃ ಸ್ವಂ ಜೀವಕಂ ಯಥಾ ॥ ೨೮ ॥

ಈ ಕಥೆಯಲ್ಲಿ—

ನವಂ ಜ್ಞಾನಂ ನವಂ ವಿತ್ತಂ ನವೈಶ್ವರ್ಯಂ ಚ ಯೌವನಂ ।
ಪಂಡಿತಾನಪಿ ಬಾಧಂತೇ ಕಿಂ ಪುನ ಸ್ತ್ವಾನಪಂಡಿತಾನ್ ॥ ೨೯ ॥

ಎಂಬ ಆಖ್ಯಾನ ಶ್ಲೋಕವು ಇದೆ.

## † ೧೨. ಪಕ್ಷಿಗಳ ಗೂಡನ್ನು ನಾಶಮಾಡಿದ ಕಪಿಯ ಕಥೆ

ಈ ಕಥೆಯಲ್ಲಿ—

ಹಸ್ತವಾ ನ್ಪಾದವಾಂಶ್ಚೈವ ಮತಿಮಾಂಶ್ಚೈವ ವಾನರ ।
ಶೀತವಾತಪರಿತ್ರಾಣೀಂ ಕಿಂ ಕುಟೀಂ ನ ಕರಿಷ್ಯಸಿ ॥ ೩೦ ॥

ನಾನಮ್ಯಂ ನಮ್ಯತೇ ಕಾಷ್ಠಂ ನ ಶಸ್ತ್ರಂ ಕ್ರಮತೇ ಶ್ಮನಿ ।
ಸೂಚೀಮುಖಿ ವಿಜಾನೀಹಿ ನಾಶಿಷ್ಯೇ ಹಿತಮುಚ್ಯತೇ ॥ ೩೧ ॥

ಎಂಬ ಎರಡು ಶ್ಲೋಕಗಳಿರುವವು. ಎರಡನೇ ಶ್ಲೋಕವನ್ನು ವಸುಭಾಗನೂ ಹೇಳಿದ ನೆಂದು ಈ ಸಂದರ್ಭದಲ್ಲಿ ಹೇಳಲ್ಪಟ್ಟಿದೆ.

## ೧೩. ಬುದ್ಧಿಯಿಲ್ಲದ ಕಪಿಯು ರಾಜನನ್ನು ಕೊಂದದ್ದು

ಮಧುರಾ ನಗರದ ರಾಜನು ವಸಂತಕಾಲದಲ್ಲಿ ಒಂದು ದಿನ ಉದ್ಯಾನದಲ್ಲಿ ಓಡ್ಯಾಡಿ ಅಲ್ಲಿಯೇ ಒಂದು ಮರದ ನೆರಳಿನಲ್ಲಿ ಮಲಗಿಕೊಂಡು 'ಯಾರೂ ಬರದಂತೆ ನೋಡಿಕೋ' ಎಂದು ಖಡ್ಗಧಾರಿಯಾದ ತನ್ನ ಅನುಚರನಾದ ಕಪಿಗೆ ಹೇಳಿ ನಿದ್ರೆ ಹೋದನು. ಆ ಸಮಯದಲ್ಲಿ ಒಂದು ದುಂಬಿಯು ರಾಜನ ಕಂಠದಲ್ಲಿದ್ದ ನಾನಾ ಕುಸುಮ ಗ್ರಥಿತವಾದ ಮಾಲೆಯ ಮೇಲೆ ಬಂದು ಕುಳಿತುಕೊಂಡಿತು. ಇದನ್ನು ನೋಡಿ 'ಈ ದುಂಬಿಯು ರಾಜನಿಗೆ ಅವಮಾನವನ್ನು ಮಾಡುತ್ತಿದೆ' ಎಂದು ಯೋಚಿಸಿ ಕಪಿಯು ದುಂಬಿಯನ್ನು ನಿಗ್ರಹಿಸುವದಕ್ಕಾಗಿ ಕತ್ತಿಯಿಂದ ಅದಕ್ಕೆ ಹೊಡೆಯಿತು. ಈ ಏಟಿನಿಂದ ರಾಜನು ಮೃತನಾದನು.

* ಪರಮಃ ಪಂಡಿತಃ ಶತ್ರು ರ್ನತು ಮಿತ್ರ ಮಪಂಡಿತಃ ।
ಪಶ್ಯ ವಾನರಮೂರ್ಖೇಣ ರಾಜಪುತ್ರೋ ವಿನಾಶಿತಃ ॥ ೩೨ ॥

## † ೧೪. ಮರಿಗಳನ್ನು ತುಳಿದ ಆನೆಯನ್ನು ಗುಬ್ಬಿಗಳು, ಕಾಗೆ ಮೊದಲಾದುವು ನಾಶಮಾಡಿದ ಕಥೆ

* ಉತ್ಸಾಹವಂತಃ ಪುರುಷಾ ದುರ್ಬಲಾ ಬಲಿನಂ ರಿಪುಂ |
ಹನಿಷ್ಯನ್ತಿ ಹಿ ಸಂಯಾತಾ ಯಥೈತೇ ಪಂಚ ಕುಂಜರಂ || ೩೩ ||
ಕಾಕಶ್ಚ ದ್ರುಮಕುಟ್ಟಶ್ಚ ಮಂಡೂಕೋ ನೀಲಮಕ್ಷಿಕಃ |
ಲಟ್ವಯಾ ಸಹ ಪಂಚೈತೇ ಗಜಂ ಜಘ್ನು ರುಪಾಯತಃ || ೩೪ ||

ಈ ಕಥೆಯಲ್ಲಿ—

ಯಃ ಪುತ್ರಮರಣಂ ಶ್ರುತ್ವಾ ಶೋಕಗ್ರಸ್ತ ಷಡಿಂದ್ರಿಯಃ |
ಶತ್ರುಷ್ವ ಶಕ್ತವೀರ್ಯಸ್ಯ ತಸ್ಯಾಶು ಮರಣಂ ವರಂ || ೩೫ ||
ಶ್ರೇಯೋ ನರಸ್ಯ ಮರಣಂ ಭೀರೋಃ ಶತ್ರುಷ್ವಶಕ್ತ ವೀರ್ಯಸ್ಯ |
ಕಿಂ ತಸ್ಯ ಜೀವಿತಫಲಂ ಪರಿಭವ ಶೋಕಾಭಿಭೂತಸ್ಯ || ೩೬ ||
ನಾತಿಕ್ರಾಂತಾನಿ ಶೋಚೇತ ಪ್ರತ್ಯುತಾ ನ್ಯಾಗತಾನಿ ಚಿಂತ್ಯಾನಿ |
ಶೋಚನ್ನತೀತಮರ್ಥಂ ನ ಚ ಲಭತೇ ತೇತು ನೈವ ಲಭ್ಯಂತೇ || ೩೭ ||
ನದೀ ಗತಜಲಾ ಕ್ವಾಪಿಸ್ಯಾಚ್ಚೇದ್ ವರ್ಷಶತಾದಪಿ |
ಸ್ಥಾನಂ ತತ್ರ ನ ಕುರ್ವೀತ ಪುನರಾಗಮ ಶಂಕಯಾ || ೩೮ ||
ಏವಮೇವ ಮನುಷ್ಯೇಷು ತೇಷು ಪೂರ್ವಾಪಕಾರಿಷು |
ವಿಶ್ವಾಸೋ ಲೋಪಗನ್ತವ್ಯೋ ನದೀ ಗತಜಲಾ ಯಥಾ || ೩೯ ||

ಎಂಬ ಆಖ್ಯಾನ ಶ್ಲೋಕಗಳಿರುವವು.

## ೧೫. ಇಂದ್ರನ ಗಿಣಿಯೂ ಮೃತ್ಯುವೂ

ಇಂದ್ರನ ಬಳಿಯಲ್ಲಿ ವಾಕ್ಚಾತುರ್ಯವುಳ್ಳ ಒಂದು ಗಿಣಿಯಿತ್ತು. ಒಂದು ದಿನ ಇಂದ್ರನ ಒಡ್ಡೋಲಗಕ್ಕೆ ಯಮನು ಬಂದಾಗ ಗಿಣಿಯು ಅವನನ್ನು ನೋಡಿ ಸಿಂಹಾಸನದ ಹಿಂದೆ ಹೋಗಿ ಅವಿತುಕೊಂಡಿತು. ಒಡ್ಡೋಲಗವು ಮುಗಿದನಂತರ ಇಂದ್ರನು ಗಿಣಿಯನ್ನು 'ನೀನು ಏತಕ್ಕೆ ಅವಿತುಕೊಂಡೆ' ಎಂದು ಕೇಳಲಾಗಿ 'ಮರಣ ಭಯದಿಂದ' ಎಂದು ಗಿಣಿಯು ಹೇಳಿತು. ಅದನ್ನು ಕೇಳಿದ ಇಂದ್ರನು ಗಿಣಿಯ ಸಹಿತವಾಗಿ ಐರಾವತವನ್ನು ಹತ್ತಿ ಯಮಪುರಿಗೆ ಹೋದನು. ಯಮನು ಇಂದ್ರನಿಗೆ ಸತ್ಕಾರಮಾಡಿ ಬಂದ ಕಾರ್ಯವೇನೆಂದು ಕೇಳಲಾಗಿ ಇಂದ್ರನು 'ಈ ಗಿಣಿಯು ನನಗೆ ಅತ್ಯಂತ ಪ್ರಿಯವಾದುದು. ಇದಕ್ಕೆ ಜರೆ ಮೃತ್ಯುಗಳಿಲ್ಲದಂತೆ ಮಾಡಬೇಕು' ಎಂದು ಹೇಳಿದನು. ಯಮನು 'ಈ ವಿಷಯದಲ್ಲಿ ನಾನು ಅಶಕ್ತನು. ನಾವಿಬ್ಬರೂ ಕಾಲನ ಮನೆಗೆ ಹೋಗೋಣ' ಎಂದು ಇಬ್ಬರೂ ಕಾಲನ ಮನೆಗೆ

ಹೋದರು. ಕಾಲನು ಇವರಿಗೆ ಸತ್ಕಾರಮಾಡಿ ಬಂದ ಕೆಲಸವೇನೆಂದು ಕೇಳಿಕೊಂಡನು. ಅದಕ್ಕೆ ಅವರಿಬ್ಬರೂ 'ಈ ಗಿಣಿಗೆ ಜರೆ ಮೃತ್ಯುಗಳಿಲ್ಲದಂತೆ ಮಾಡು' ಎಂದು ಹೇಳಿದರು. ಕಾಲನು 'ನನಗೆ ಹೀಗೆ ಮಾಡಲು ಶಕ್ತಿಯಿಲ್ಲ. ಚಿತ್ರಗುಪ್ತನ ಮನೆಗೆ ಹೋಗೋಣ' ಎಂದು ಹೇಳಿದನಂತರ ಮೂವರೂ ಚಿತ್ರಗುಪ್ತನ ಮನೆಗೆ ಹೋದರು. ಅಲ್ಲಿ ಅವನಿಂದ ಸತ್ಕೃತರಾಗಿ 'ಈ ಗಿಣಿಗೆ ಜರೆ ಮೃತ್ಯುಗಳಿಲ್ಲದಂತೆ ಮಾಡು' ಎಂದು ಹೇಳಲು, ಚಿತ್ರಗುಪ್ತನು ಸ್ವಲ್ಪಕಾಲ ಯೋಚಿಸಿ 'ಅಯ್ಯೋ ತಾವು ಇಲ್ಲಿಗೆ ಬಂದದ್ದು ನಿರರ್ಥಕವಾಯಿತು. ಕೇಳಿ ;

> ಯದಾ ಶಕ್ರೋ ಯಮಶ್ಚೈವ ಕಾಲಶ್ಚ ಸಹಿತಾ ಸ್ತ್ರಯಃ|
> ಚಿತ್ರಗುಪ್ತಂ ಗಮಿಷ್ಯನ್ತಿ ಮರಿಷ್ಯತಿ ತದಾ ಶುಕಃ ||೪೦||

ಎಂದು, ಈ ಗಿಣಿಯ ಆಯುಷ್ಪ್ರಮಾಣವು ಈಗತಾನೆ ನನ್ನಿಂದ ಬರೆಯಲ್ಪಟ್ಟಿತು' ಎಂದು ಹೇಳಿದನು. ಇದನ್ನು ಕೇಳಿ ಆ ಮೂವರೂ ನಿರುತ್ತರರಾಗಿ ತಮ್ಮತಮ್ಮ ಸ್ಥಾನಗಳಿಗೆ ಹಿಂದಿರುಗಿದರು.

## ೧೬. ಗರುಡನೂ ಆಮೆಯೂ

ಒಂದಾನೊಂದು ಕಾಲದಲ್ಲಿ ಸಮುದ್ರತೀರದಲ್ಲಿ ಅನೇಕ ಆಮೆಗಳು ಗುಂಪಾಗಿ ಸೇರಿದ್ದವು. ಆಗ ಗರುಡನು ಬಂದು 'ನೀವೆಲ್ಲರೂ ನನ್ನ ಆಹಾರವು. ನಾನು ನಿಮ್ಮನ್ನು ತಿನ್ನುತ್ತೇನೆ' ಎಂದು ಹೇಳಿದನು. ಅದನ್ನು ಕೇಳಿ ಆ ಆಮೆಗಳು ತಮ್ಮತಮ್ಮಲ್ಲೇ ಯೋಚನೆಮಾಡಿ 'ಎಲೈ ಪಕ್ಷಿರಾಜನೇ ನಮಗೂ ನಿನಗೂ ಒಂದು ಒಪ್ಪಂದವಾಗಲಿ. ನೀನು ನಮ್ಮ ಜೊತೆಯಲ್ಲಿ ಪಂದ್ಯವನ್ನು ಓಡು. ನೀನು ನಮ್ಮನ್ನು ಸೋಲಿಸಿದರೆ ನಾವು ನಿನಗೆ ಆಹಾರವಾಗುತ್ತೇವೆ' ಎಂದು ಹೇಳಿದವು. ಇದನ್ನು ಕೇಳಿ ಗರುಡನು ನಕ್ಕು 'ಓಹೋ, ಇವೆಲ್ಲಾ ನನ್ನ ಜೊತೆಯಲ್ಲಿ ಓಡುವವಂತೆ. ಇದು ಆಶ್ಚರ್ಯವೇ ಸರಿ' ಎಂದು ಮನಸ್ಸಿನಲ್ಲಿ ಅಂದುಕೊಂಡು, ಆಮೆಗಳ ಮಾತಿಗೆ ಒಪ್ಪಿಕೊಂಡನು. ಅನಂತರ ಆಮೆಗಳು ಸಮುದ್ರತೀರದ ದಂಡೆಗುಂಟೆಗೂ ಸ್ವಲ್ಪಸ್ವಲ್ಪ ದೂರದಲ್ಲಿ ಒಂದೊಂದಾಗಿ ನೀರಿನಲ್ಲಿ ನಿಂತು ಗರುಡನು ಆಕಾಶದಲ್ಲಿ ಹಾರುತ್ತಿದ್ದಾಗ ಮಧ್ಯೆಮಧ್ಯೆ ತಲೆ ಎತ್ತಿ 'ಎಲೈ ಪಕ್ಷಿರಾಜನೇ ನೀನು ಇನ್ನೂ ಹಿಂದೆಯೇ ಇರುವಿಯಾ' ಎಂದು ಹೇಳಿ ಪುನಃ ನೀರಿನಲ್ಲಿ ಮುಳುಗುತ್ತಿದ್ದವು. ಕೊನೆಯಲ್ಲಿಯೂ ಕೂಡ ಒಂದು ಆಮೆಯು ಹೀಗೆಯೇ ಮಾಡಿ 'ನೀನು ಪಂದ್ಯದಲ್ಲಿ ಸೋತಿದ್ದೀಯೆ. ನಾವು ಗೆದ್ದೆವು' ಎಂದು ಹೇಳಿತು. ಗರುಡನು ನಕ್ಕು 'ಹೌದು. ನಾನು ಸೋತೆನು. ಇನ್ನುಮೇಲೆ ನನ್ನಿಂದ ನಿಮಗೆ ಭಯವಿಲ್ಲ' ಎಂದು ಹೇಳಿ ಹೊರಟುಹೋದನು.

* ಬಾಂಧವಾಃ ಸಹಿತಾಃ ಸರ್ವೇ ಅನ್ಯೋನ್ಯವಶವರ್ತಿನಃ |
ನಿರ್ಜಯನ್ತಿ ರಣೇ ಶತ್ರೂನ್ ಗರುಡಂ ಕಚ್ಛಪಾ ಯಥಾ || ೪೧ ||

## ೧೭. ಕರೆಯದಿದ್ದರೆ ಹಾಲಿಲ್ಲ

ಒಬ್ಬ ಬ್ರಾಹ್ಮಣನು ಕರೆಯುವ ಹಸುವಿನೊಡನೆ ಬೇಡರ ಶೀಮೆಗೆ ಹೋಗಿ ಶಬರರಾಜನನ್ನು ನಿತ್ಯವೂ ನೋಡುತ್ತಾ ಹಾಲನ್ನೋ ಮೊಸರನ್ನೋ ತುಪ್ಪವನ್ನೋ ಏನಾದರೂ ಒಂದನ್ನು ಕಾಣಿಕೆಯಾಗಿ ಕೊಡುತ್ತಿದ್ದನು. ಒಂದು ದಿನ ಆ ರಾಜನು 'ಇದು ನಿನಗೆ ಎಲ್ಲಿ ದೊರೆಯಿತು' ಎಂದು ಕೇಳಲಾಗಿ ಬ್ರಾಹ್ಮಣನು ಎಲೈ ರಾಜನೆ, ನನ್ನ ಬಳಿಯಲ್ಲಿ ಒಂದು ಹಸುವಿರುವದು ಅದು ಇದನ್ನು ಕೊಟ್ಟಿತು' ಎಂದು ಹೇಳಿ ಹಸುವನ್ನು ಆ ರಾಜನಿಗೆ ತೋರಿಸಿ ಆ ರಾಜನ ಕೋರಿಕೆಯಂತೆ ಒಂದು ಸಾವಿರ ಸುವರ್ಣಮಾಷಗಳನ್ನು ಅವನಿಂದ ತೆಗೆದುಕೊಂಡು ಹಸುವನ್ನು ಅವನಿಗೆ ಕೊಟ್ಟು ತನ್ನ ಊರಿಗೆ ಹೊರಟುಹೋದನು. ಶಬರ ರಾಜನು ಹಸುವನ್ನು ತನ್ನ ಮನೆಗೆ ಒಯ್ದು 'ಎಲೈ ದೇವಿಯೇ ನನಗೆ ಹಾಲು, ಮೊಸರು, ತುಪ್ಪವನ್ನು ಕೊಡು', ಎಂದು ಹಸುವನ್ನು ಪೂಜಿಸಿ ಕೇಳಿಕೊಳ್ಳಲಾಗಿ ಹಸುವು ಏನನ್ನೂ ಕೊಡದೆ ಸುಮ್ಮನಿತ್ತು. ಪುನಃ ಅದಕ್ಕೆ ಏಟುಕೊಟ್ಟು ಕೇಳಿಕೊಂಡಾಗಲೂ ಅದು ಸುಮ್ಮನಿತ್ತು. ಆ ರಾಜನು 'ಬ್ರಾಹ್ಮಣನು ನನಗೆ ಮೋಸಮಾಡಿದನು' ಎಂದು ಯೋಚಿಸಿ ಹಸುವನ್ನು ಬಿಚ್ಚಿ ಕಾಡಿಗೆ ಅಟ್ಟಿದನು.

* ಅಕ್ರಮೇಣಾನುಪಾಯೇನ ಕರ್ಮಾರಂಭೋ ನ ಸಿಧ್ಯತಿ |
ದಧಿಸರ್ಪಿಃ ಪಯಾಂಸೀವ ಶಬರಸ್ಯ ಯಥಾ ಹಿ ಗೋಃ || ೪೨ ||

## ೧೮. ಹುಲಿಯೂ ಪಕ್ಷಿಯೂ

ಒಂದು ಅರಣ್ಯದಲ್ಲಿ ಒಂದು ಹುಲಿಯು ವಾಸಮಾಡುತ್ತಿತ್ತು. ಒಂದು ದಿನ ಅದರ ಹಲ್ಲುಗಳ ಮಧ್ಯೆ ಒಂದು ಎಲುಬು ಸಿಕ್ಕಿಕೊಂಡಿದ್ದರಿಂದ ಅದಕ್ಕೆ ಅದರಿಂದ ಬಹಳ ನೋವಾಗಿ ಆಹಾರವನ್ನು ತಿನ್ನದೆ ಒಂದು ಮರದ ಅಡಿಯಲ್ಲಿ ಬಿದ್ದುಕೊಂಡು ನರಳುತ್ತಿತ್ತು. ಇದನ್ನು ನೋಡಿ ಒಂದು ಮರಕುಟಿಗ ಪಕ್ಷಿಯು 'ಎಲೈ ಹುಲಿಯೇ, ಏಕೆ ವ್ಯಥೆಪಡುತ್ತಿಯೇ' ಎಂದು ಹೇಳಲಾಗಿ ಹುಲಿಯು ಎಲುಬಿನ ವಿಷಯವನ್ನು ಹೇಳಿ ಎಲೈ ಪಕ್ಷಿಯೇ, ನೀನು ಅದನ್ನು ಕಿತ್ತುಹಾಕಿದರೆ ನಾನು ನಿನಗೆ ನಿತ್ಯವೂ ಬಹಳ ಮಾಂಸವನ್ನು ಕೊಡುತ್ತೇನೆ ಎಂದು ಹೇಳಿತು. ಪಕ್ಷಿಯು 'ಹಾಗಾದರೆ ನಿನ್ನ ಬಾಯನ್ನು ತೆರೆ' ಎಂದು ಹೇಳಿ ತೆರೆದ ಬಾಯಿಯೊಳಗೆ ಪ್ರವೇಶಿಸಿ ಎಲುಬಿನ ಚೂರನ್ನು ಕಿತ್ತುಬಿಸುಟಿತು. ತದನಂತರ ಹುಲಿಯು ಸ್ವಸ್ಥವಾದ ಮೇಲೆ ಒಂದು ದಿವಸ ಒಂದು ಎತ್ತನ್ನು ಕೊಂದು ತಿನ್ನುತ್ತಿತ್ತು. ಆಗ

ಮರಕುಟಿಗನು ಅದರ ಬಳಿಗೆ ಹೋಗಿ 'ನನಗೆ ಸ್ವಲ್ಪ ಮಾಂಸವನ್ನು ಕೊಡು!' ಎಂದು ಕೇಳಿತು. ಹುಲಿಯು 'ನೀನು ಯಾರು' ಎಂದು ಕೇಳಿದಾಗ ಪಕ್ಷಿಯು 'ಓಹೊ, ಮರೆತುಬಿಟ್ಟೆಯಾ? ನಿನ್ನ ಬಾಯಿಯೊಳಗೆ ನುಗ್ಗಿ ನಾನು ಎಲುಬನ್ನು ಕಿತ್ತು ಹಾಕಲಿಲ್ಲವೆ' ಎಂದು ಹೇಳಿತು. ಇದನ್ನು ಕೇಳಿ ಹುಲಿಯು, 'ಎಲೈ, ನನ್ನ ದವಡೆಗಳ ಮಧ್ಯದಿಂದ ಜೀವಸಹಿತವಾಗಿ ನೀನು ಹೊರಗೆ ಬಂದಿದ್ದಲ್ಲದೆ ಇನ್ನೂ ಅಧಿಕವಾದ ಲಾಭವನ್ನು ಆಶಿಸುವೆಯಾ? ತೊಲಗು ಇಲ್ಲಿಂದ' ಎಂದು ಗದರಿಸಿತು. ಪಕ್ಷಿಯು ಇದನ್ನು ಕೇಳಿ ಕೋಪಿಸಿಕೊಂಡು ಹುಲಿಗೆ ನಿದ್ರೆ ಬಂದಿದ್ದಾಗ ಅದರ ಒಂದು ಕಣ್ಣನ್ನು ಕುಟಿಕಿಬಿಟ್ಟು 'ಎಲೈ ಹುಲಿಯೇ, ನಿನ್ನ ಎರಡು ಕಣ್ಣುಗಳಲ್ಲಿ ಒಂದನ್ನು ಕುಟುಕದೇ ಬಿಟ್ಟಿದೇನೆ, ಅದನ್ನೇ ಲಾಭವೆಂದು ತಿಳಿದುಕೋ' ಎಂದು ಹೇಳಿ ಹಾರಿ ಹೋಯಿತು.

> ಯೇನ ರೋಷಬಲಂ ಮತ್ವಾ ಬಂಧುಮಂತಂ ಪ್ರಪೀಡಯೇತ್ |
> ಸ ದೋಷಂ ವ್ಯಾಘ್ರವದ್ಭುಂಕ್ತೇ ದ್ರುಮಕುಟ್ಟಾ ದ್ಯಥಾಧಮಃ || ೪೩ ||

ಈ ಕಥೆಯಲ್ಲಿ—

> ದುಗ್ಧೇ ಪೀತೇಽಥ ಧೇನ್ವಾ ವಾ ತಿಂದುಕ್ಯಾ ವಾ ಫಲಾಶಿನಃ |
> ಉತ್ತೀರ್ಣಸ್ಯ ಚ ನಾವಾ ವಾ ಪುನ ರ್ನಾಸ್ತಿ ಪ್ರಯೋಜನಂ || ೪೪ ||
> ಪುನ ರ್ಧೇನ್ವಾಂ ಭವೇದ್ದುಗ್ಧಂ ಪುನಃ ಫಲತಿ ತಿಂದುಕಃ |
> ಉತ್ತೀರ್ಣಸ್ಯ ಚ ನಾವಾಪಿ ಪುನ ರಸ್ತಿ ಪ್ರಯೋಜನಂ || ೪೫ ||
> ಸದಾ ಶೋಣಿತಭಕ್ಷಸ್ಯ ಸರ್ವಜೀವಾನುಪಾತಿನಃ |
> ದಂಷ್ಟ್ರಾಂತರವಿನಿರ್ಮುಕ್ತಃ ಕಿಂ ನು ಲಾಭಂ ನ ಮನ್ಯಸೇ || ೪೬ ||
> ಶಕ್ತಶ್ಚಾಹಂ ಸಮರ್ಥಶ್ಚ ಉಭೇ ನೇತ್ರೇ ನಿಪಾತಿತುಂ |
> ಏಕನೇತ್ರವಿನಿರ್ಮುಕ್ತೋ ಲಾಭ ಮೇತನ್ನ ಮನ್ಯಸೇ || ೪೭ ||

ಎಂಬ ನಾಲ್ಕು ಆಖ್ಯಾನ ಶ್ಲೋಕಗಳಿವೆ.

## ೧೯. ವಿಧಿಲಿಖಿತವನ್ನು ಯಾರೂ ತಪ್ಪಿಸಿಕೊಳ್ಳಲಾರರು

ಉಜ್ಜಯಿನೀ ನಗರದಲ್ಲಿ ಪಟುತಸ್ಕರ ಎಂಬ ಹೆಸರಿನ ಕಳ್ಳನು ವಾಸವಾಗಿದ್ದನು. ಶಿವಸ್ವಾಮಿ ಎಂಬ ಬ್ರಾಹ್ಮಣನ ದಯೆಯಿಂದ ಅವನು ತನಗೆ ಪಾಟಲೀಪುತ್ರ ನಗರದ ಬಳಿಯಲ್ಲಿರುವ ಸುವಟವೆಂಬ ಆಲದ ಮರದಲ್ಲಿ ಮೃತ್ಯುವೆಂದು ತಿಳಿದುಕೊಂಡು ನಗರದ ಬಳಿಗೆ ಹೋಗಲೇಬಾರದೆಂದು ನಿಶ್ಚಯಮಾಡಿಕೊಂಡನು. ಮತ್ತು ಆ ನಗರಕ್ಕೆ ನೂರು ಯೋಜನ ದೂರದಲ್ಲಿದ್ದ ಸ್ಥಾನದಲ್ಲಿ ವಾಸಮಾಡಲು ತೊಡಗಿದನು. ಆಗ ಮೃತ್ಯುವು ಪರಮಸುಂದರಿಯಾದ ಯುವತಿಯ ರೂಪವನ್ನು ಧರಿಸಿ ತನ್ನ ಹೆಸರು

ವಸುಮತಿ ಎಂದೂ, ತಾನು ಅನಾಥಳೆಂದೂ ಇವನನ್ನು ನಂಬಿಸಿ ತನ್ನನ್ನು ಮದುವೆಯಾಗುವ ಹಾಗೆ ಮಾಡಿತು. ಕೆಲವು ತಿಂಗಳಾದನಂತರ ಆ ಹೆಂಗಸು ನಿತ್ಯವೂ ಅಳುತ್ತಿದ್ದಳು. ಕಾರಣವೇನೆಂದು ಕಳ್ಳನು ಕೇಳಿದ್ದಕ್ಕೆ ಬಂಧುಗಳೆಲ್ಲರೂ ಪಾಟಲೀಪುತ್ರದ ಸಮೀಪದಲ್ಲಿನ ಚಿತ್ರಗ್ರಾಮದಲ್ಲಿ ಇರುವರೆಂದೂ ಅವರನ್ನು ನೋಡಲು ಬಹಳ ಉತ್ಕಂಠಿತಳಾಗಿದ್ದೇನೆಂದೂ ಹೇಳಿಕೊಂಡು ಆ ಗ್ರಾಮಕ್ಕೆ ಪ್ರಯಾಣ ಮಾಡುವಂತೆ ಅವನನ್ನು ಒಡಂಬಡಿಸಿದಳು. ಪಾಟಲೀಪುತ್ರದ ಸಮೀಪಕ್ಕೆ ಬಂದಾಗ ಇವರ ಗಾಡಿಯನ್ನು ರಾಜಪುರುಷರು ತಡೆದು ಕಳುವಾದ ಒಂದು ಆಡನ್ನು ತಾವು ಹುಡುಕುತ್ತಿರುವುದಾಗಿಯೂ, ಗಾಡಿಯನ್ನು ಶೋಧಿಸದೆ ಮುಂದಕ್ಕೆ ಬಿಡುವುದಿಲ್ಲವೆಂದೂ ಹೇಳಿದರು. 'ನಾನು, ನನ್ನ ಹೆಂಡತಿ, ಇಬ್ಬರು ಮಾತ್ರವೇ ಗಾಡಿಯಲ್ಲಿ ಇರುವವರು' ಎಂದು ಇವನು ಎಷ್ಟು ಹೇಳಿದರೂ ಕೇಳದೆ ಅವರು ಗಾಡಿಯನ್ನು ಶೋಧಿಸಿದರು. ಆಗ ಇವನ ಹೆಂಡತಿಯ ಬದಲು ಒಂದು ಆಡು ಇದ್ದುದನ್ನು ಅವರು ನೋಡಿ, ಇವನೇ ಕಳ್ಳನೆಂದು ನಿಶ್ಚಯಿಸಿ ಸಮೀಪದಲ್ಲಿದ್ದ ಸುವಟವೆಂಬ ಆಲದ ಮರಕ್ಕೆ ಇವನನ್ನು ನೇಣುಹಾಕಿದರು. ಹೀಗೆ ಕಳ್ಳನು ಎಷ್ಟು ಪ್ರಯತ್ನಪಟ್ಟಾಗ್ಯೂ ವಿಧಿಲಿಖಿತವನ್ನು ತಪ್ಪಿಸಿಕೊಳ್ಳಲಾಗಲಿಲ್ಲ.

* ತೇನ ನಾಸ್ಮಿನ್ ಗತೇ ಮೃತ್ಯುರಿತಿ ಜ್ಞಾತ್ವಾ ನ ಮುಚ್ಯತೇ |
ಜಾನನ್ನಪಿ ಗತೋ ನಾಶಂ ಸುವಟೇ ಪಟುತಸ್ಕರಃ || ೪೮ ||

ಈ ಕಥೆಯಲ್ಲಿ—

ಕವಿತ್ವಮಾರೋಗ್ಯಮತೀವ ಮೇಧಾ
ಸ್ತ್ರೀಣಾಂ ಪ್ರಿಯತ್ವಂ ಕನಕಸ್ಯ ಲಾಭಃ |
ಸ್ವಪ್ನೇಷು ತಥ್ಯಂ ಸ್ವಜನೇಷು ಪೂಜಾ
ಸ್ವರ್ಗಚ್ಯುತಾನಾಮಿಹ ಚಿಹ್ನಮೇತತ್ || ೪೯ ||

ಮನುಷ್ಯಾಣಾಂ ಪ್ರಿಯಃ ಪುತ್ರಃ ಪುತ್ರಾದಪಿ ಧನಂ ಪ್ರಿಯಂ |
ಧನಾದಪಿ ಪ್ರಿಯಾಃ ಪ್ರಾಣಾಃ ಪ್ರಾಣಾದಪ್ಯಂಗನಾಃ ಪ್ರಿಯಾಃ || ೫೦ ||

ಪ್ರಾಪ್ತವ್ಯಂ ಲಭತೇ ವಿತ್ತಮಪ್ರಾಪ್ತವ್ಯಂ ನ ಲಭ್ಯತೇ |
ವಿಹಿತೇ ಪ್ರಾಪ್ತವಾನ್ ಮೃತ್ಯುಂ ಸುವಟೇ ಪಟುತಸ್ಕರಃ || ೫೧ ||

ಎಂಬ ಮೂರು ಶ್ಲೋಕಗಳು ಇರುವುವು.

## † ೨೦. ಮೂರು ಮತ್ಸ್ಯಗಳ ಕಥೆ

* ಅನಾಗತವಿಧಾತಾ ಚ ಪ್ರತ್ಯುತ್ಪನ್ನಮತಿಶ್ಚ ಯಃ |
ದ್ವಾವಿಮೌ ಸುಖ ಮೇಧೇತೇ ಯದ್ಭವಿಷ್ಯೋ ವಿನಶ್ಯತಿ || ೫೨ ||

ದೈವಂ ಮತ್ವಾ ನಿರುತ್ಸಾಹೋ ಧ್ರುವಂ ನಾಶಮವಾಪ್ನುಯಾತ್ |
ದೈವಂ ಮತ್ವಾ ಯಥಾ ನಷ್ಟೋ ಯದ್ಭವಿಷ್ಯೋ ದ್ವಿಜೋತ್ತಮಃ || ೫೩ ||

## ೨೧. ಪ್ರಾಣಿಗಳ ಭಾಷೆಯನ್ನು ತಿಳಿದಿದ್ದ ರಾಜನ ಕಥೆ

ಅಯೋಧ್ಯಾನಗರಿಯಲ್ಲಿ ಅನರಣ್ಯನೆಂಬ ರಾಜನಿದ್ದನು. ಅವನಿಗೆ ನಾಗರಾಜನು 'ನಿನಗೆ ಪಶುಪಕ್ಷ್ಯಾದಿಗಳ ಭಾಷೆಯ ಜ್ಞಾನವು ಉಂಟಾಗಲಿ. ಆದರೆ ಈ ರೀತಿಯಾಗಿ ತಿಳಿದ ವಿಷಯವನ್ನು ಯಾರಿಗಾದರೂ ಹೇಳಿದರೆ ನೀನು ಸಾಯುತ್ತೀಯೆ' ಎಂದು ವರವನ್ನು ಕೊಟ್ಟನು. ಒಂದು ದಿನ ರಾಜನು ಕಲಹಮಾಡುತ್ತಿದ್ದ ಎರಡು ಹಲ್ಲಿಗಳ ಮಾತನ್ನು ಕೇಳಿದಾಗ ಅವನಿಗೆ ನಗುವು ಬಂತು. ಅವನ ರಾಣಿಯು ಇದನ್ನು ನೋಡಿ 'ನೀನು ಏತಕ್ಕೆ ನಗುತ್ತೀ' ಎಂದು ಕೇಳಿದಳು. ರಾಜನು 'ಇದನ್ನು ನಿನಗೆ ಹೇಳಿದರೆ ನನಗೆ ಆ ಕ್ಷಣ ಮೃತ್ಯುವು' ಎಂದು ಎಷ್ಟು ಹೇಳಿದಾಗ್ಯೂ ಕೇಳದೆ ಅದನ್ನು ಹೇಳಲೇಬೇಕೆಂದು ರಾಣಿಯು ಪೀಡಿಸಿದಳು. ಸ್ತ್ರೀ ಮೋಹದಿಂದ ರಾಜನು ಇದಕ್ಕೆ ಒಪ್ಪಿಕೊಂಡು ಮಾರನೇ ದಿವಸ ಇಬ್ಬರೂ ಸ್ಮಶಾನಕ್ಕೆ ಹೋಗಿ ಅಲ್ಲಿ ರಾಜನು ತನಗಾಗಿ ಚಿತೆಯನ್ನು ಸಿದ್ಧಮಾಡಿಸಿದನು. ಆ ಸಮಯದಲ್ಲಿ ಒಂದು ಹೆಣ್ಣಾಡು ಗಂಡಿಗೆ 'ನನಗೆ ಎಳಸಾದ ಹುಲ್ಲನ್ನು ತಂದುಕೊಡು. ಇಲ್ಲದಿದ್ದರೆ ನಾನು ನಿನ್ನ ಹೆಂಡತಿಯಲ್ಲ' ಎಂದು ಹೇಳಿತು. ಇದನ್ನು ಕೇಳಿ ಗಂಡು 'ನೀನು ಸತ್ತುಹೋದರೂ ನಾನು ತಂದುಕೊಡುವುದಿಲ್ಲ. ನಾನೇನು ರಾಜನಂತೆ ಬುದ್ಧಿಹೀನನೆಂದು ತಿಳಿದುಕೊಂಡೆಯೋ. ನೀನಿಲ್ಲದಿದ್ದರೆ ಇನ್ನೂ ಅನೇಕರು ನನಗೆ ಹೆಂಡತಿಯರು ಸಿಕ್ಕುತ್ತಾರೆ' ಎಂದು ಹೇಳಿತು. ಇದನ್ನು ಕೇಳಿ ರಾಜನು 'ಇದು ನಿಜವೇಯೆ. ನನಗೂ ಕೂಡ ಒನಪು ಒಯ್ಯಾರಗಳಿಂದಕೂಡಿದ ಅನೇಕ ಹೆಂಡತಿಯರಿದ್ದಾರೆ' ಎಂದು ಯೋಚಿಸಿ ಆ ರಾಣಿಗೆ ಕಿವಿ ಮೂಗುಗಳನ್ನು ಕುಯ್ಯಿಸಿ ಪರಿತ್ಯಾಗಮಾಡಿದನು.

* ಉತ್ತಮಾಧಮ ಮಧ್ಯಾನಾಂ ಶ್ರೋತವ್ಯಂ ವಚನಂ ಬುಧೈಃ |
ತತ್ರ ಚಾತ್ಮಹಿತಂ ಗ್ರಾಹ್ಯಂ ಬಸ್ತವಾಕ್ಯಂ ಯಥಾ ನೃಪಃ || ೫೪ ||

## ೨೨. ಪಕ್ಷಿಪ್ರಕರಣ: ಮುಖಕಥೆ: ಪಕ್ಷಿಗಳು ರಾಜನನ್ನು ವರಿಸುವುವು

ಒಂದಾನೊಂದು ಕಾಲದಲ್ಲಿ ಸಮುದ್ರತೀರದಲ್ಲಿ ಹಂಸ, ಕಾರಂಡವ, ಚಕ್ರವಾಕ, ಬಕ, ಶುಕ, ಜೀವಂಜೀವಕ, ಮಯೂರ, ಮೊದಲಾದ ಪಕ್ಷಿಗಳೆಲ್ಲವೂ ಸೇರಿದ್ದವು. ಆಗ ಕೆಲವು ಪಕ್ಷಿಗಳು 'ಅಹೋ! ಈಗ ಬಲಿಷ್ಠನು ದುರ್ಬಲನನ್ನು ಕೊಲ್ಲುತ್ತಾನೆ. ಇದನ್ನು ತಪ್ಪಿಸಲು ಉಪಾಯವನ್ನು ಹುಡುಕಬೇಕೆಂದು ಈ ಸಭೆಯಲ್ಲಿ ನಮ್ಮ ವಿಜ್ಞಾಪನೆ' ಎಂದು ಹೇಳಿದವು. ಆಗ ಶುಕವು 'ನಾವು ರಾಜನೊಬ್ಬನನ್ನು ಆರಿ

ಸೋಣ. ರಾಜನಿದ್ದರೆ ಅವನು ಎಲ್ಲರನ್ನೂ ರಕ್ಷಿಸುತ್ತಾನೆ. ಯಾವ ವಿಧವಾದ ದುರ್ನಡತೆಗೂ ಅವಕಾಶವಿರುವುದಿಲ್ಲ' ಎಂದು ಹೇಳಿತು. ಈ ಮಾತನ್ನು ಎಲ್ಲ ಪಕ್ಷಿಗಳೂ ಅನುಮೋದಿಸಿದವು. ಆಗ ರಾಜನಾಗಲು ಯಾರು ಅರ್ಹನು ಎಂಬ ಪ್ರಶ್ನೆಯು ಎದ್ದಿತು. ಕ್ರೌಂಚವು ಹೇಳಿತು "ಹಂಸಗಳಲ್ಲಿ ಒಬ್ಬನನ್ನು ರಾಜನನ್ನಾಗಿ ಮಾಡೋಣ." ಆಗ ಒಂದು ಕಾಗೆಯು ಎದ್ದುನಿಂತು 'ಹಂಸೆಗಳಿಗೆ ಯಾವ ಸಾಮರ್ಥ್ಯವಿದೆ? ನಮ್ಮಷ್ಟು ದೂರ ಕೂಡ ಹಾರಲಾರವು' ಎಂದು ಹೇಳಿತು. ಅನಂತರ ಹದ್ದನ್ನು ರಾಜನನ್ನಾಗಿ ಮಾಡಬೇಕೆಂದು ಒಂದು ಪಕ್ಷಿಯು ಹೇಳಿತು. ಈ ಸಲಹೆಯನ್ನು ಇನ್ನೊಂದು ಪಕ್ಷಿಯು ವಿರೋಧಿಸಿತು. ಅನಂತರ ಕ್ರಮವಾಗಿ ಕಾಗೆಯನ್ನೂ ಜೀವಂಜೀವಕವನ್ನೂ ಶುಕವನ್ನೂ ಬಕವನ್ನೂ ಚಾತಕವನ್ನೂ ಗೂಬೆಯನ್ನೂ ಕೋಗಿಲೆಯನ್ನೂ ಕುರರವನ್ನೂ, (ಪುನಃ) ಕಾಗೆಯನ್ನೂ ರಾಜನನ್ನಾಗಿ ಮಾಡಬೇಕೆಂದು ಕೆಲವು ಪಕ್ಷಿಗಳಿಂದ ಸಲಹೆಗಳು ಮಂಡಿಸಲ್ಪಟ್ಟು ಇತರ ಕೆಲವು ಪಕ್ಷಿಗಳಿಂದ ವಿರೋಧಿಸಲ್ಪಟ್ಟವು. ಕೊನೆಗೆ ಪಕ್ಷಿಗಳೆಲ್ಲರೂ ಗರುಡನೇ ರಾಜನಾಗಲು ಯೋಗ್ಯನೆಂದು ನಿಶ್ಚಯಿಸಿ ಅವನಿಗೆ ಪಟ್ಟಾಭಿಷೇಕವನ್ನು ಮಾಡಿದವು.

ಈ ಪ್ರಕರಣದ ಆರಂಭದಲ್ಲಿ—

> ಸರ್ವಲೋಕೈಕಕರ್ತಾರಂ ಪ್ರಣಮ್ಯ ಗರುಡಧ್ವಜಂ |
> ಪಕ್ಷಿಪ್ರಕರಣಂ ವಕ್ಷ್ಯೇ ನವಮಾರ್ಗಾಶ್ರಿತಂ ಹಿತಂ || ೫೫ ||

ಎಂಬ ಮಂಗಳಶ್ಲೋಕವೂ ಈ ಮುಖಕಥೆಯಲ್ಲಿ

> **ಬಲವಾನ್ದುರ್ಬಲಂ ಹಂತಿ ಹೀನಾನ್ಹಂತಿ ತಥಾವರಃ |**
> **ಭೂಮೌ ಯಥಾ ನರಾಃ ಸರ್ವೇ ಹೀನಾನ್ ಹಂತಿ ತಥಾವಯಃ || ೫೬ ||**
>
> **ಅರಾಜಕೇತು ಲೋಕೇ ಸ್ಮಿಂಸ್ತಸ್ಮಾದ್ರಾಜಾ ವಿಧೀಯತಾಂ |**
> **ರಾಜಾ ರಾಜ್ಯೇ ಚಿರಂ ರಕ್ಷಾಂ ಕೃತ್ವಾ ಸ್ವರ್ಗಮವಾಪ್ನುಯಾತ್ || ೫೭ ||**

ಎಂಬ ಎರಡು ಶ್ಲೋಕಗಳೂ ಇರುವುವು.

### ೨೩. ಹಂಸವು ಕಾಗೆಯನ್ನು ಹಾರುವದರಲ್ಲಿ ಸೋಲಿಸುವದು

ಪಕ್ಷಿಗಳ ಸಭೆಯಲ್ಲಿ 'ಹಂಸಗಳಿಗೆ ಸಾಮರ್ಥ್ಯವಿಲ್ಲ. ದೂರ ಹಾರಲಾರವು' ಎಂದು ಕಾಗೆಗಳಿಂದ ಆಕ್ಷೇಪಿಸಲ್ಪಟ್ಟಿತು. ಅದಕ್ಕೆ ಉತ್ತರವಾಗಿ ಒಂದು ಹಂಸವು 'ಹಾಗಿದ್ದರೆ ಈಗಲೇ ಪರೀಕ್ಷೆ ಮಾಡೋಣ. ಕಾಗೆಗಳಲ್ಲಿ ಚೆನ್ನಾಗಿ ಹಾರುವ ಒಂದು ಕಾಗೆಯು ಒಂದು ಹಂಸದೊಡನೆ ಹಾರಲಿ. ಯಾರು ಗೆಲ್ಲುವರೆಂಬುದು ತಾನಾಗಿಯೇ ಸ್ಪಷ್ಟವಾಗುವುದು' ಎಂದು ಹೇಳಿತು. ಇದರಂತೆ ಒಂದು ಕಾಗೆಯೂ, ಒಂದು

ಹಂಸವೂ ಸಮುದ್ರದ ಮೇಲೆ ಹಾರಲು ಹೊರಟು ಕಾಗೆಗೆ ಶಕ್ತಿಯಿಲ್ಲದೆ ನೀರಿನ ಮೇಲೆ ಬೀಳುತ್ತಾ 'ಅಯ್ಯೋ, ನಾನು ಸತ್ತೆನು' ಎಂದು ಕೂಗಿಕೊಂಡಿತು. ಹಂಸವು ಕರುಣೆಯಿಂದ ಅದನ್ನು ತನ್ನ ಕಾಲುಗಳಲ್ಲಿ ಹಿಡಿದುಕೊಂಡು ತೀರದಲ್ಲಿದ್ದ ಪಕ್ಷಿಗಳ ಸಮೂಹಕ್ಕೆ ತಂದುಬಿಟ್ಟಿತು. ಪಕ್ಷಿಗಳೆಲ್ಲವೂ ಹಂಸವನ್ನು ಸ್ತೋತ್ರಮಾಡಿ ಕಾಗೆಯನ್ನು ಧಿಕ್ಕರಿಸಿದುವು.

* ದರ್ಪಾದನವಬುದ್ಧಾತ್ಮಾ ವಿಗೃಹ್ಯ ಬಲವತ್ತರೈಃ |
ಪರಾಭವ ಮವಾಪ್ನೋತಿ ಹಂಸೈರ್ಧ್ವಾಂಕ್ಷ ಇವಾರ್ಣವೇ || ೫೮ ||

ಪರುಷೋ ನೈವ ವಕ್ತವ್ಯಃ ಶತ್ರಾವಪಿ ಕದಾಚನ |
ವಿಕ್ರುಷ್ಟಂ ವಾಯಸಂ ಪಶ್ಯ ಹಂಸೇನ ವಿನಿಪಾತಿತಂ || ೫೯ ||

## ೨೮. ಗೃಧ್ರರಾಜನು ಪ್ರಜೆಗಳನ್ನು ಹಿಂಸೆಮಾಡುವುದು

ರಕ್ತಕರ್ಣನೆಂಬ ಗೃಧ್ರರಾಜನಿಗೆ ಒಂದು ಹುಲಿಯೂ, ಒಂದು ನರಿಯೂ, ಮಂತ್ರಿಗಳಾಗಿದ್ದವು. ಅವು ಅರಣ್ಯದಲ್ಲಿದ್ದ ಮೃಗಪಕ್ಷಿಗಳನ್ನು ಭಯಪಡಿಸಿ, 'ರಾಜನ ಆಜ್ಞೆಯಾಗಿದೆ!' ಎಂದು ಹೇಳುತ್ತಾ ಅನೇಕ ಪಕ್ಷಿಗಳನ್ನೂ, ಮೃಗಗಳನ್ನೂ ರಾಜನಿಗೆಂದು ಹೇಳಿ ತಾವೇ ಭಕ್ಷಿಸುತ್ತಿದ್ದವು. ಸ್ವಲ್ಪ ಕಾಲದಲ್ಲೇ ಮೃಗಪಕ್ಷಿಗಳು ಕ್ಷಯಹೊಂದಿದವು.

ಈ ಕಥೆಯಲ್ಲಿ—

ರಕ್ತಕರ್ಣೋ ಮಹಾರಾಜೋ ಮಾತ್ಯಃ ಸರ್ಪಮಾತುಲಃ |
ಸೇನಾಪತಿಶ್ಚ ಪಿಂಗಾಕ್ಷ ಸ್ತತ್ ಪುನರ್ನ ಚಿರಂ ಭವೇತ್ || ೬೦ ||

ಸೇನಾಪತೌ ನೃಪೇಮಾತ್ಯೇ ದುಷ್ಟೇ ಸತ್ಯಚಿರಾದ್ ಧ್ರುವಂ |
ವಿನಶ್ಯನ್ತಿ ನರಾಃ ಸರ್ವೇ ಗೃಧ್ರಾನ್ ಮೃಗಗಣಾ ಇವ || ೬೧ ||

ಎಂಬ ಎರಡು ಶ್ಲೋಕಗಳಿರುವುವು. ಇವು ವಸುಭಾಗಪ್ರೋಕ್ತವೆಂದು ತೋರುವುದು.

## † ೨೫. ಕಪಿಂಜಲವೂ, ಮೊಲವೂ, ಹುಲಿಯೂ

ಈ ಕಥೆಯಲ್ಲಿ—

ಕ್ಷುದ್ರ ಮರ್ಥಹರಂ ಚಾಪಿ ನ ವಿವಾದಂ ಸಮಾಚರೇತ್ |
ಉಭಾವಪಿ ವಿನಶ್ಯೇತಾಂ ಯಥಾ ಶಶಕಪಿಂಜಲೌ || ೬೨ ||

ಕ್ಷುದ್ರ ಮರ್ಥಪತಿಂ ಪ್ರಾಪ್ಯ ದ್ವಾವಪಿ ವ್ಯವಹಾರಿಣೌ |
ಸಮಮೇವ ವಿಪದ್ಯೇತೇ ಯಥಾ ಶಶಕಪಿಂಜಲೌ || ೬೩ ||

ಎಂಬ ಒಂದು ಶ್ಲೋಕದ ಪಾಠಾಂತರಗಳು ಇರುವವು. ಇದು ವಸುಭಾಗಪ್ರೋಕ್ತ ವೆಂದು ತೋರುವುದು.

## ೨೬. ಜೀವಂಜೀವಕ ಪಕ್ಷಿಯ ಕಥೆ

ಒಬ್ಬ ರಾಜನಿಗೆ ಕುಷ್ಠರೋಗವು ಉಂಟಾಯಿತು. ಅವನ ವೈದ್ಯನು 'ಜೀವಂ ಜೀವಕ ಪಕ್ಷಿಯನ್ನು ತರಿಸಿದರೆ ನಾನು ವ್ಯಾಧಿಯನ್ನು ಗುಣಮಾಡುವೆನು' ಎಂದು ಹೇಳಿದನು. ರಾಜನು ಬೇಡರನ್ನು ಕರೆಸಿ 'ಒಂದು ಜೀವಂಜೀವಕ ಪಕ್ಷಿಯನ್ನು ಹಿಡಿದು ತನ್ನಿ, ನಿಮಗೆ ತಕ್ಕ ಬಹುಮಾನವನ್ನು ಕೊಡುತ್ತೇನೆ' ಎಂದು ಹೇಳಿದನು. ಅವರಲ್ಲಿ ಒಬ್ಬನು ಹಿಮವತ್ಪರ್ವತದ ತಪ್ಪಲಿಗೆ ಹೋಗಿ ಜೀವಂ ಜೀವಕವು ಸಂಚಾರಮಾಡುವ ಪ್ರದೇಶದಲ್ಲಿ ಬಲೆಯನ್ನು ಬೀಸಿದನು. ಒಂದು ಜೀವಂಜೀವಕವು ಇದೆಲ್ಲವನ್ನೂ ನೋಡುತ್ತಿತ್ತು. ಬಲೆಗೆ ಬೀಳಲಿಲ್ಲ. ಆದರೆ ಅದರ ಜೊತೆಗಾರನಾದ ಬಕಪಕ್ಷಿಯು ಬಲೆಗೆ ಬೀಳಲಾಗಿ ಅದನ್ನು ಬಿಡಿಸುವುದಕ್ಕೆ ಹೋಗಿ ತಾನೂ ಬಿತ್ತು. ಬೇಡನು ಅದನ್ನು ಹಿಡಿದುಕೊಂಡಾಗ ಅದು ಅವನಿಗೆ 'ನೀನು ನನ್ನನ್ನು ಬಿಟ್ಟುಬಿಡು. ನಿನಗೆ ಎಂಟು ಮಣ ಚಿನ್ನವನ್ನು ಕೊಡುತ್ತೇನೆ' ಎಂದು ಹೇಳಿತು. ಬೇಡನಿಗೆ ಅದರ ಮಾತಿನಲ್ಲಿ ನಂಬಿಕೆ ಬರಲಿಲ್ಲವಾದ್ದರಿಂದ ಅವನು ಅದನ್ನು ರಾಜನಿಗೆ ಸಮರ್ಪಿಸಿದನು. ರಾಜವೈದ್ಯನು ಆ ಪಕ್ಷಿಯನ್ನು ಬಲಗೈಯಲ್ಲಿ ಹಿಡಿದುಕೊಂಡು ರಾಜನ ತಲೆಯ ಮೇಲೆ ಇರಿಸಿ ತೀರ್ಥೋದಕದಿಂದ ಅಭಿಷೇಕ ಮಾಡಿಸಿದನು. ರಾಜನಿಗೆ ಆ ಕ್ಷಣವೇ ಗುಣವಾಯಿತು. ಅವನು ಬೇರೆ ಯಾವ ಯೋಚನೆಯನ್ನೂ ಮಾಡದೆ ಪಕ್ಷಿಯನ್ನು ಬಿಟ್ಟು ಬಿಟ್ಟು ವೈದ್ಯನಿಗೆ ನೂರು ಗ್ರಾಮ ಗಳನ್ನೂ, ಬೇಡನಿಗೆ ಒಂದು ಮಡಕೆ ತುಂಬ ಧಾನ್ಯವನ್ನೂ, ಹಣವನ್ನೂ ಕೊಟ್ಟನು. ಆಗ ಜೀವಂಜೀವಕವು ಅರಮನೆಯ ಉಪ್ಪರಿಗೆಯ ಮೇಲೆ ಕೂತುಕೊಂಡು—

ತ್ರಯೋ ಮೂರ್ಖಾ ಮಹಾರಾಜ ಕೃತ್ಸ್ನೇ ಽಸ್ಮಿನ್ ಪೃಥಿವೀತಲೇ |
ಭವಾನ್ ಶಾಕುನಿಕಶ್ಚಾಹಂ ಜೀವಂಜೀವಕ ಏವ ಚ || ೬೪ ||

ಏತಕ್ಕೆನ್ನುವೆಯೋ ? ಬಲೆಯನ್ನು ನೋಡಿಯೂ ಅದರೊಳಗೆ ಬಿದ್ದದ್ದರಿಂದ ನಾನು ಮೂರ್ಖನು. ಎಂಟು ಮಣ ಚಿನ್ನವನ್ನು ಕೊಡುತ್ತೇನೆಂದು ನಾನು ಹೇಳಿದ ಮಾತಿಗೆ ಮನ್ನಣೆಯನ್ನು ಕೊಡದಿದ್ದುದರಿಂದ ಈ ಬೇಡನು ಮೂರ್ಖನು. ನಿನ್ನ ಕೈಲಿ ಸಿಕ್ಕಿದ ನನ್ನನ್ನು ಬಿಟ್ಟುಬಿಟ್ಟಿದ್ದರಿಂದ ನೀನೂ ಮೂರ್ಖನು. ನನ್ನ ಮಾಂಸವನ್ನು ನೀನು ತಿಂದಿದ್ದೇ ಆಗಿದ್ದರೆ ನಿನಗೆ ಮುಪ್ಪೂ ಮೃತ್ಯುವೂ ಬರುತ್ತಿರಲಿಲ್ಲ ಎಂದು ಹೇಳಿ ಹಾರಿಹೋಯಿತು.

ಈ ಕಥೆಯಲ್ಲಿ—

ಪ್ರಮಾದೋ ನೈವ ಕರ್ತವ್ಯೋ ನರೇಣ ಶುಭಮಿಚ್ಛತಾ |
ಪ್ರಮಾದಾ ಚ್ಯೋಚತೇ ರಾಜಾ ಜೀವಂಜೀವಕತೋ ಯಥಾ || ೬೫ ||

ಎಂಬ ಶ್ಲೋಕವೂ ಇರುವದು. ಇದು ವಸುಭಾಗ ಪ್ರೋಕ್ತವೆಂದು ತೋರುವುದು.

## ೨೭. ಮುಯ್ಯಿಗೆ ಮುಯ್ಯಿ : ಗಿಣಿಯ ಪ್ರತೀಕಾರ

ಸುರಾಷ್ಟ್ರದಲ್ಲಿ ಸುಕಥನನೆಂಬ ರೂಪವಂತನಾದ ವೈಶ್ಯಕುಮಾರನಿದ್ದನು. ಒಂದು ದಿನ ಅವನು ದೇವಕನ್ಯೆಯಂತೆ ಸರ್ವಾಂಗ ಸುಂದರಿಯಾದ ಗುಣವತಿಯೆಂಬ ವೈಶ್ಯಕನ್ಯೆಯನ್ನು ದೇವಾಲಯಕ್ಕೆ ಹೋಗುತ್ತಿದ್ದಾಗ ನೋಡಿದನು. ನೋಡಿದ ಕೂಡಲೇ ಅವಳಲ್ಲಿ ಅನುರಕ್ತನಾಗಿ ಮನೆಗೆ ಬಂದ ನಂತರ ಅವಳ ರೂಪವನ್ನೇ ಧ್ಯಾನ ಮಾಡುತ್ತಾ ಸ್ನಾನ ಭೋಜನಾದಿಗಳನ್ನು ತೊರೆದು ಹಾಸಿಗೆ ಹಿಡಿದನು. ಇದನ್ನು ನೋಡಿ ಅವನ ತಂದೆಯಾದ ಧರ್ಮಸ್ವಾಮಿಯು ಈ ಸಮಾಚಾರವನ್ನೆಲ್ಲಾ ತಿಳಿದು ಕೊಂಡು ಗುಣವತಿಯ ತಂದೆಯಾದ ಶಿವಸ್ವಾಮಿಯ ಬಳಿಗೆ ಹೋಗಿ ಅವಳನ್ನು ತನ್ನ ಮಗನಿಗೆ ಮದುವೆಮಾಡಿಕೊಡಬೇಕೆಂದು ಕೇಳಿದನು. ಶಿವಸ್ವಾಮಿಯು 'ಅದು ಸಾಧ್ಯವಿಲ್ಲ. ಮಹೇಶ್ವರನು ಸ್ವಯಂ ಯಾರಿಗೆ ಕೊಡಬೇಕೆಂದು ಆಜ್ಞಾಪಿಸುತ್ತಾನೋ, ಅವನಿಗೆ ನನ್ನ ಕನ್ಯೆಯನ್ನು ಕೊಡುವೆನು' ಎಂದು ಹೇಳಿದನು. ಇದನ್ನು ಕೇಳಿ ಧರ್ಮಸ್ವಾಮಿಗೆ ಬಹಳ ಕೋಪಬಂದಿತು. ಅವನು ಮನೆಗೆ ಹಿಂತಿರುಗಿ ಈ ವೃತ್ತಾಂತ ವನ್ನು ಮಗನಿಗೆ ತಿಳಿಸಿದನು. ಸುಕಥನನಾದರೋ ಇದನ್ನು ಕೇಳಿ ದುಃಖಿತನಾಗಿ ದಿನ ದಿನಕ್ಕೂ ಕೃಶವಾಗುತ್ತಾಬಂದನು. ಅವನ ಬಳಿಯಲ್ಲಿ ಗೃಹಬಲಿ ಎಂಬ ಚತುರ ವಾದ ಗಿಣಿ ಇತ್ತು. ತನ್ನ ಸ್ವಾಮಿಯ ಅವಸ್ಥೆಯನ್ನು ನೋಡಿ ಇದು ಏಕೆಂದು ಕೇಳಿತು. ಮತ್ತು ವಿಷಯವನ್ನು ತಿಳಿದುಕೊಂಡು 'ಇದಕ್ಕೆ ನೀನು ಏಕೆ ಯೋಚನೆ ಮಾಡುವೆ. ಆ ಕನ್ಯೆಯು ನಿನಗೆ ದೊರೆಯುವಂತೆ ನಾನು ಮಾಡುತ್ತೇನೆ' ಎಂದು ಹೇಳಿತು. ಮಾರನೆಯದಿವಸವೇ ಅದು ಮಹೇಶ್ವರನ ಗುಡಿಗೆ ಹೋಗಿ ದೇವರ ಮೂರ್ತಿಯ ಹಿಂದೆ ಅಡಗಿಕೊಂಡಿದ್ದು, ಶಿವಸ್ವಾಮಿಯು ಬಂದು ನಮಸ್ಕಾರ ಮಾಡಿದಾಗ 'ಎಲೈ, ಶಿವಸ್ವಾಮಿಯೇ ನಿನ್ನ ಮಗಳಾದ ಗುಣವತಿಯನ್ನು ಸುಕಥನನಿಗೆ ಕೊಡು. ಅವನು ನನ್ನ ಗಣಗಳಲ್ಲಿ ಒಬ್ಬನು, ಶಾಪದಿಂದ ಭೂಮಿಯಲ್ಲಿ ಹುಟ್ಟಿದ್ದಾನೆ' ಎಂದು ಹೇಳಿತು. ಶಿವಸ್ವಾಮಿಯು ಇದನ್ನು ಕೇಳಿ ಹರ್ಷಗೊಂಡು, ತನ್ನ ಮಗಳನ್ನು ಸುಕಥನನಿಗೆ ಮದುವೆಮಾಡಿಕೊಟ್ಟನು.

ಒಂದು ದಿವಸ ಈ ದಂಪತಿಗಳಿಗೆ ಪ್ರಣಯಕಲಹವಾದ ಸಂದರ್ಭದಲ್ಲಿ

ಗುಣವತಿಯು 'ಏತಕ್ಕೆ ನಿನ್ನನ್ನೇ ನೀನು ಶ್ಲಾಘಿಸಿಕೊಳ್ಳುತ್ತೀ. ಮಹೇಶ್ವರನ ಆಜ್ಞೆಯಿಲ್ಲದಿದ್ದರೆ ನಾನು ನಿನಗೆ ದೊರೆಯುತ್ತಿದ್ದೇನೇ' ಎಂದು ಹೇಳಿದಳು. ಸುಕಥನನು ನಕ್ಕು 'ಎಲೈ, ಮುಗ್ಧೆಯೇ ಮಹೇಶ್ವರನ ಆಜ್ಞೆ ಎಲ್ಲಿಂದ ಬಂತು. ಇದೆಲ್ಲವೂ ನನಗೋಸ್ಕರ ನನ್ನ ಗಿಣಿಯು ಮಾಡಿದ ತಂತ್ರವು' ಎಂದು ಹೇಳಿದನು. ಇದನ್ನು ಕೇಳಿ ಗುಣವತಿಗೆ ಬಹಳ ಅವಮಾನವಾಗಿ ಈ ವಿಷಯವನ್ನೆಲ್ಲಾ ತಂದೆಗೆ ತಿಳಿಸಿದಳು. ಅವನು 'ಇರಲಿ, ಎಲೈ ಗಿಣಿಯೇ ನಿನಗೆ ತಕ್ಕ ಶಾಸ್ತಿಯನ್ನು ಮಾಡುತ್ತೇನೆ' ಎಂದುಕೊಂಡು ಉಪಾಯದಿಂದ ಗಿಣಿಯನ್ನು ತನ್ನ ಮನೆಗೆ ಬರಮಾಡಿಕೊಂಡು, ಅದರ ರೆಕ್ಕೆ ಪುಕ್ಕಗಳನ್ನು ತರಿದು, ತನಗೆ ಅದನ್ನು ಅಡಿಗೆಮಾಡಿ ಬಡಿಸಬೇಕೆಂದು ಭೃತ್ಯನಿಗೆ ಆಜ್ಞಾಪಿಸಿದನು. ಭೃತ್ಯನು ಗಿಣಿಯನ್ನು ತೆಗೆದುಕೊಂಡು ಹೋಗಿ ತನ್ನ ಹೆಂಡತಿಯ ಕೈಯಲ್ಲಿ ಕೊಟ್ಟು ಸ್ವಾಮಿಯ ಆಜ್ಞೆಯನ್ನು ತಿಳಿಸಿದನು. ಅವಳು ಹಾಗೆಯೇ ಆಗಲೆಂದು ಹೇಳಿ ಅಡಿಗೆಮನೆಯಲ್ಲಿ ಗಿಣಿಯನ್ನು ಒಂದು ಕಡೆ ಇಟ್ಟು ಬೇರೆ ಕೆಲಸದಲ್ಲಿ ನಿರತಳಾದಳು. ಈ ಸಮಯದಲ್ಲಿ ಶುಕವು ಮೆಲ್ಲನೆ ತೆವಳಿಕೊಂಡು ಬಚ್ಚಲಿನ ರಂಧ್ರದಲ್ಲಿ ಅಡಗಿಕೊಂಡಿತು. ಅಲ್ಲಿ ನೀರಿನೊಡನೆ ಹರಿದು ಬಂದ ಆಹಾರವನ್ನು ತಿನ್ನುತ್ತಾ ಇತ್ತು. ಕೆಲವು ದಿನಗಳಲ್ಲಿ ರೆಕ್ಕೆ ಪುಕ್ಕಗಳು ಪುನಃ ಬೆಳೆದನಂತರ ಅದು ಹಾರಿಹೋಯಿತು. ಅಡಿಗೆಯವಳು ಬಂದು ಗಿಣಿ ಇಲ್ಲದಿದ್ದುದನ್ನು ನೋಡಿ ಸೋರೆಕಾಯಿಯನ್ನು ಬೇಯಿಸಿ, ಸಂಸ್ಕಾರಮಾಡಿ ಅದೇ ಗಿಣಿಯೆಂದು ಹೇಳಿ ಬಡಿಸಿದಳು.

ಗಿಣಿಯು ಹಾರಿಹೋದನಂತರ ಇತರ ಗಿಣಿಗಳೊಡನೆ ಸೇರಿಕೊಂಡು ಆ ಹಿಂಡಿಗೆ ತಾನೇ ಒಡೆಯನಾಯಿತು. ಆ ಪಟ್ಟಣದ ರಾಜಪುತ್ರನು ಚಿಂತಾಕ್ರಾಂತನಾಗಿದ್ದುದನ್ನು ಒಂದು ದಿವಸ ನೋಡಿ 'ಎಲೈ ರಾಜಕುಮಾರನೇ, ಏಕೆ ಚಿಂತಿಸುತ್ತೀ' ಎಂದು ಕೇಳಿತು. ಅವನು 'ನನ್ನ ತಮ್ಮನಿಗೆ ಪಟ್ಟವನ್ನು ಕಟ್ಟಬೇಕೆಂದು ನನ್ನ ತಂದೆಯು ಯೋಚಿಸಿದ್ದಾನೆ. ಅದಕ್ಕಾಗಿ ನಾನು ಚಿಂತಿಸುತ್ತಿದ್ದೇನೆ' ಎಂದು ಹೇಳಿದನು. ಗಿಣಿಯು ಅದನ್ನು ಕೇಳಿ 'ಚಿಂತೆಯನ್ನು ಬಿಡು. ರಾಜ್ಯವು ಈಗಲೇ ನಿನ್ನ ಕೈ ಸೇರುವಂತೆ ನಾನು ಮಾಡುತ್ತೇನೆ. ಆದರೆ ನೀನು ನಮಗೆ ಒಂದು ಕೆಲಸ ಮಾಡಿಕೊಡಬೇಕು. ನನ್ನ ಹಿಂಡಿನಲ್ಲಿರುವ ಗಿಣಿಗಳ ಕೊರಳುಗಳಿಗೆಲ್ಲಾ ಗಂಟೆಗಳನ್ನು ಕಟ್ಟಿಸಬೇಕು' ಎಂದು ಹೇಳಿತು. ಹೀಗೆ ಗಂಟೆಗಳು ಕಟ್ಟಲ್ಪಟ್ಟನಂತರ ರಾಜನು ಉಪ್ಪರಿಗೆಯ ಮೇಲೆ ಇದ್ದ ಕಾಲದಲ್ಲಿ ಗಿಣಿಯು ಹಿಂಡಿನೊಡನೆ ಮೇಲೆ ಆಕಾಶದಲ್ಲಿ ನಿಂತುಕೊಂಡು ಗಟ್ಟಿಯಾಗಿ ಘಂಟೆಗಳ ಶಬ್ದವನ್ನು ಮಾಡಿತು. ಅನಂತರ 'ಎಲೈ ರಾಜನೇ, ಇಗೋ ವಸುಗಳು ಇಲ್ಲಿಗೆ ಬಂದಿದ್ದಾರೆ' ಎಂದು ಹೇಳಿತು.

ಇದನ್ನು ಕೇಳಿದ ರಾಜನು ವಿಸ್ಮಯಗೊಂಡು ವಿಮಾನವು ಬಂದಿದೆಯೆಂದು ತಿಳಿದು 'ನನ್ನಿಂದ ಏನಾಗಬೇಕು, ಆಜ್ಞಾಪಿಸಿ. ಅದನ್ನು ಶಿರಸಾವಹಿಸಿ ಮಾಡುತ್ತೇನೆ' ಎಂದು ಹೇಳಿದನು. ಆಗ ಗಿಣಿಯು 'ನೀನು ಈಗಲೇ ನಿನ್ನ ಜ್ಯೇಷ್ಠಪುತ್ರನಿಗೆ ರಾಜ್ಯವನ್ನು ಕೊಟ್ಟು ಪಟ್ಟಾಭಿಷೇಕ ಮಾಡು. ನಾವು ಇಂದ್ರನ ಆಜ್ಞೆಯಂತೆ ಈ ಮಾತನ್ನು ನಿನಗೆ ತಿಳಿಸಿದ್ದೇವೆ. ನಿನ್ನ ಹಿರಿಯಮಗನು ಇಂದ್ರ ಭಕ್ತನು' ಎಂದು ಹೇಳಿತು. ಈ ಮಾತುಗಳನ್ನು ನಂಬಿ ರಾಜನು ತನ್ನ ಹಿರಿಯಮಗನಿಗೆ ರಾಜ್ಯವನ್ನು ಕೊಟ್ಟನು. ಅವನು ರಾಜನಾದ ಕೂಡಲೆ ಗಿಣಿಯನ್ನು ಕರೆದು 'ನಿನ್ನಿಂದ ನನಗೆ ಉಪಕಾರವಾಯಿತು. ನಿನಗೆ ಇಷ್ಟವಾದ ಯಾವಕಾರ್ಯವನ್ನು ನಾನು ನಿನಗೆ ಮಾಡಿಕೊಡಲಿ' ಎಂದು ಕೇಳಿದನು. ಗಿಣಿಯು 'ಈ ಊರಿನಲ್ಲಿರುವ ವೈಶ್ಯ ಶಿವಸ್ವಾಮಿಯ ತಲೆಯನ್ನು ಬೋಳಿಸು' ಎಂದು ಹೇಳಿತು. ಹಾಗೆಯೇ ಆಗಲೆಂದು ರಾಜನು ಹೇಳಿ ಪುತ್ರದಾರಸಹಿತನಾದ ಶಿವಸ್ವಾಮಿಯ ತಲೆಯನ್ನು ಬೋಳಿಸಿದನು. ಆಗ ಗಿಣಿಯು—

ತ್ವಯಾ ಮೇ ಲುಂಭಿತೌ ಪಕ್ಷೌ ಮಯಾ ತೇ ಮುಂಡಿತಂ ಶಿರಃ |
ಕೃತೇ ಪ್ರತಿಕೃತಂ ಕಾರ್ಯಂ ಮುಂಡನೇ ಪ್ರತಿಮುಂಡನಂ || ೬೬ ||

ಎಂಬ ಶ್ಲೋಕವನ್ನು ಶಿವಸ್ವಾಮಿಗೆ ಹೇಳಿತು.

ವೈರಂ ಮತಿಮತಾ ನೈವ ಕಾರ್ಯ ಮಾತ್ಮಹಿತೈಷಿಣಾ |
ಕುರ್ವನ್ ಮತಿಮತಾ ವೈರಂ ವಣಿಕ್ ಪ್ರಾಪ್ತಸ್ತು ಮುಂಡನಂ || ೬೭ ||

## ೨೮. ಗಿಣಿಯೂ ಹಾವೂ

ಒಂದು ಕಾಡಿನಲ್ಲಿ ಒಂದು ಮಧುಕವೃಕ್ಷದ ಪೊಟರೆಯಲ್ಲಿ ಒಂದು ಹೆಣ್ಣು ಗಿಣಿಯು ವಾಸಮಾಡುತ್ತಿತ್ತು. ಅದರ ಸಮೀಪದಲ್ಲಿದ್ದ ಇನ್ನೊಂದು ಮರದ ಪೊಟರೆಯಲ್ಲಿ ಒಂದು ಸರ್ಪವು ವಾಸಮಾಡುತ್ತಿತ್ತು. ಒಬ್ಬ ಬೇಡನು ಪ್ರತಿವರ್ಷವೂ ಗಿಣಿಯ ಮರಿಗಳನ್ನು ಹಿಡಿದುಕೊಂಡು ಹೋಗಿ ಮಾರಿಬಿಡುತ್ತಿದ್ದನು. ಹಾವಿನ ಮರಿಗಳನ್ನು ಕೊಂದುಬಿಡುತ್ತಿದ್ದನು. ಒಂದು ದಿವಸ ಗಿಣಿಯು ಹಾವನ್ನು ಕರೆದು ಹೇಳಿತು: "ಈ ಪಾಪಿಯು ನಿನ್ನ ಮರಿಗಳನ್ನು ಕೊಲ್ಲುತ್ತಾನೆ. ನಾನು ಹೇಳಿದ ಹಾಗೆ ಮಾಡು. ನಿನ್ನ ಮರದ ಪೊಟರೆಯಲ್ಲಿ ಹಣವಿದೆಯೆಂದು ನಾನು ಅವನಿಗೆ ಹೇಳುತ್ತೇನೆ. ಅವನು ನಿನ್ನ ಬಳಿಗೆ ಬಂದಾಗ ಅವನನ್ನು ಕಚ್ಚು." ಹಾವು ಹಾಗೆಯೇ ಮಾಡಿತು. ಬೇಡನು ಸತ್ತುಹೋದನು.

* ಘಾತಿತಃ ಶತ್ರುಣಾ ಶತ್ರು ರ್ವಿತ್ರಂ ಮಿತ್ರೇಣ ತೋಷಿತಂ |
ಶುಕ್ಯಾ ತು ಮಾರಿತಃ ಶತ್ರು ರ್ನೀತಿಯುಕ್ತೇನ ಕರ್ಮಣಾ || ೬೮ ||

## ೨೯. ನಾಲ್ಕು ಮೂರ್ಖರಾಜರ ಕಥೆ

ಒಬ್ಬ ರಾಜನು ಚಂದನವನಕ್ಕೆ ಒಡೆಯನಾಗಿದ್ದನು. ಒಣಗಿಹೋದ ಮರಗಳನ್ನೂ ಬಿದ್ದುಹೋದ ಮರಗಳನ್ನೂ ಅವನು ವಿಕ್ರಯಿಸಿ ಬಹುವಾಗಿ ಧನವನ್ನು ಸಂಪಾದಿಸಿದನು. ಅವನ ನಂತರ ಒಡೆಯನಾದ ರಾಜನಾದರೋ ಚಂದನವನವನ್ನೆಲ್ಲಾ ಕತ್ತರಿಸಿ ನಿರ್ಮೂಲಮಾಡಿ ಧನವನ್ನು ಗಳಿಸಿದನು. ಇನ್ನೊಬ್ಬ ರಾಜನು ಇದ್ದಬದ್ದ ಹಣಕ್ಕೆಲ್ಲಾ ರಥ, ತುರಗ, ಪದಾತಿಗಳನ್ನು ಸಂಗ್ರಹಿಸಿದನು. ಅದೆಲ್ಲಾ ನಾಶವನ್ನೈದಿತು. ಮತ್ತೊಬ್ಬ ರಾಜನು ಅನೇಕ ಮತ್ಸ್ಯಗಳಿಂದ ತುಂಬಿದ್ದ ಒಂದು ಕೆರೆಗೆ ಅಧ್ಯಕ್ಷನಾಗಿ ಒಬ್ಬನನ್ನು ನೇಮಿಸಿದನು. ಅವನು ಪ್ರತಿದಿನವೂ ರಾಜನ ಅಡಿಗೆಮನೆಗೆ ನೂರು ಮೀನುಗಳನ್ನು ತಲಪಿಸಿ ತಾನೂ ಒಂದು ಮೀನನ್ನು ತೆಗೆದುಕೊಳ್ಳುತ್ತಿದ್ದನು. ರಾಜನಿಗೆ ಇವನಲ್ಲಿ ಅಪನಂಬಿಕೆಯುಂಟಾಗಿ ಇವನ ಜೊತೆಗೆ ಇನ್ನೊಬ್ಬನನ್ನೂ, ಇವರಿಬ್ಬರಲ್ಲಿ ನಂಬಿಕೆಯಿಲ್ಲದೆ ಮೂರನೆಯವನನ್ನೂ ಈ ರೀತಿ ನೂರು ಜನರನ್ನು ಅಧ್ಯಕ್ಷರನ್ನಾಗಿ ಮಾಡಿದನು. ಮೀನುಗಳೆಲ್ಲವೂ ಇವರಿಂದಲೇ ತಿನ್ನಲ್ಪಟ್ಟು ಕೆರೆಯಲ್ಲಿ ಒಂದು ಮೀನೂ ಇಲ್ಲದಂತಾಯಿತು. ಇನ್ನೊಬ್ಬ ರಾಜನ ಬಳಿಯಲ್ಲಿ ಒಂದು ಹಸು ವಿತ್ತು. ಹುಲಿ ಮೊದಲಾದ ದುಷ್ಟಮೃಗಗಳಿಂದ ಅಪಾಯವಾಗದಿರಲೆಂದು ಅವನು ಅದನ್ನು ಹೊರಗೆ ಬಿಡದೆ ಒಳಗೇ ಯಾವಾಗಲೂ ಕಟ್ಟಿರುತ್ತಿದ್ದನು. ಆ ಹಸುವು ಬಡವಾಗಿ ಸತ್ತುಹೋಯಿತು.

* ಚಂದನವನ ಮತಿಲೋಭಾ ದತ್ಯಾದಾನಾ ದ್ಧನಸ್ಯ ಕೋಶರ್ಧಿಃ ।
ಅಧ್ಯಕ್ಷೈ ರ್ಝಷನಿಕರೋ ಗೌ ರಪ್ಯತಿರಕ್ಷಣಾ ನ್ನಷ್ಟಾ ॥ ೬೯ ॥

## ೩೦. ನಾಳಿಕೇರಬಕದ ಕಥೆ

ದೊಡ್ಡ ಅಡವಿಯ ಮಧ್ಯದಲ್ಲಿ ಒಂದು ಸರಸ್ಸಿತ್ತು. ಆ ಸರಸ್ಸಿನಲ್ಲಿ ಬಕಗಳ ಒಂದು ಹಿಂಡು ವಾಸಮಾಡುತ್ತಿತ್ತು. ಒಂದಾನೊಂದು ಕಾಲದಲ್ಲಿ ಆ ಸರಸ್ಸಿನ ನೀರು ಬತ್ತಿಹೋಗಿ ಸ್ವಲ್ಪ ನೀರು ಮಾತ್ರ ಉಳಿದಿತ್ತು. ಇದನ್ನು ನೋಡಿ ಒಂದು ಬಕವು 'ಈ ಸರಸ್ಸಿನಲ್ಲಿ ಸ್ವಲ್ಪ ಮಾತ್ರ ನೀರಿರುವುದು. ನಾವೆಲ್ಲರೂ ಬೇರೆ ಸರಸ್ಸಿಗೆ ಹೋಗೋಣ' ಎಂದು ಹೇಳಿತು. ಈ ಮಾತಿಗೆ ಇತರ ಬಕಗಳೂ ಒಪ್ಪಿ ಎಲ್ಲ ಬಕಗಳೂ ಇನ್ನೊಂದು ಕಡೆಗೆ ಹೋದವು. ಒಂದು ಬಕವು ಮಾತ್ರ ಅಲ್ಲಿಯೇ ಉಳಿದುಕೊಂಡಿತು. ಒಂದು ದಿವಸ ಅದು ಆಕಾಶದಲ್ಲಿ ಹೋಗುತ್ತಿದ್ದ ಒಂದು ಬಕಗಳ ಹಿಂಡನ್ನು ನೋಡಿ, 'ಎಲೈ ಬಕಗಳಿರಾ, ನೀವು ಬಹುದೂರದಿಂದ ಬಂದು ದಣಿದಿದ್ದೀರಿ. ಈ ದಿವಸ ನನ್ನ ಅತಿಥಿಗಳಾಗಿ ಇಲ್ಲಿ ತಂಗಿ ಈ ಸರಸ್ಸಿನಲ್ಲಿರುವ

ಮೀನುಗಳನ್ನು ತಿಂದು ನಾಳೆ ದಿವಸ ಮುಂದೆಹೋಗಿ' ಎಂದು ಹೇಳಿತು. ಆ ಬಕಗಳ ಹಿಂಡು ಹಾಗೆಯೇ ಮಾಡಿತು. ಮಾರನೇದಿವಸ ಆ ಹಿಂಡು ಹೋದಮೇಲೆ ಈ ಬಕವು ತನ್ನ ಆಹಾರಕ್ಕಾಗಿ ಸರಸ್ಸನ್ನೆಲ್ಲಾ ಹುಡುಕಿದರೂ ಒಂದು ಸಣ್ಣ ಮೀನೂ ಕೂಡ ಅದಕ್ಕೆ ದೊರೆಯಲಿಲ್ಲ. ಆಗ ಅದು ಮನಸ್ಸಿನಲ್ಲಿ ಪರಿತಾಪ ಪಡುತ್ತಾ, ತೆಂಗಿನ ಮರದ ಮೇಲೆ ಕುಳಿತು 'ಹೀಗಾಯಿತಲ್ಲಾ' ಎಂದು ಯೋಚನೆ ಮಾಡುತ್ತಿತ್ತು.

* ಅಲ್ಪಸಾರೋ ಹಿ ಯೋ ಮೋಹಾ ದ್ವಿಸ್ತಾರಂ ಕರ್ತುಮಿಚ್ಛತಿ |
ಪಶ್ಚಾ ಚ್ಛೋಚತಿ ದುರ್ಬುದ್ಧಿ ರ್ನಾರಿಕೇಳಬಕೋ ಯಥಾ ||೭೦||

## ೩೧. ತಪಸ್ವಿಯಾದ ಬೆಕ್ಕಿನ ಕಥೆ

ಒಂದು ಬೆಕ್ಕು ನೆಲದಲ್ಲಿ ಬಿದ್ದ ಫಲಮೂಲಗಳನ್ನು ತನ್ನ ಮುಂದೆ ಗುಡ್ಡೆ ಹಾಕಿಕೊಂಡು ತಪಸ್ಸನ್ನು ಮಾಡುವಂತೆ ನಟಿಸುತ್ತಾ ಒಂದು ಇಲಿಯ ಬಿಲದ ಮುಂದೆ ಕೂತಿತ್ತು. ಇಲಿಗಳೆಲ್ಲವೂ ಬಿಲದಿಂದ ಹೊರಗೆ ಬಂದಾಗ ಬೆಕ್ಕಿಗೆ ಪ್ರದಕ್ಷಿಣೆ ಮಾಡಿ ಹೋಗುತ್ತಿದ್ದವು. ಆ ಬೆಕ್ಕು ಎಲ್ಲಕ್ಕಿಂತಲೂ ಹಿಂದೆ ಉಳಿದ ಇಲಿಯನ್ನು ಹಿಡಿದು ತಿನ್ನುತ್ತಿತ್ತು. ಹೀಗೆ ಕೊಂಚಕಾಲ ಕಳೆಯಲಾಗಿ ಇಲಿಗಳ ಸಂಖ್ಯೆಯು ಕಡಿಮೆಯಾದುದನ್ನು ನೋಡಿ 'ಇದೇನು; ಯಾವ ಉಪದ್ರವವಿಲ್ಲದಿದ್ದಾಗ್ಯೂ ನಮ್ಮ ಸಂಖ್ಯೆ ಕಡಿಮೆಯಾಗುತ್ತಿದೆ. ಇದಕ್ಕೆ ಕಾರಣವು ತಿಳಿಯಲಿಲ್ಲ. ನಮಗೆ ಜಾತಿಶತ್ರುವಾದ ಈ ಬೆಕ್ಕು ಇಲ್ಲಿಗೆ ಬಂದು ತಪಸ್ಸಿಗೆ ಪ್ರಾರಂಭಮಾಡಿದಂದಿನಿಂದಲೂ ಹೀಗಾಗುತ್ತಿದೆ' ಎಂದು ಹೇಳಿ ಪರೀಕ್ಷೆಗಾಗಿ ರೋಮಶವೆಂಬ ಇಲಿಯು ಬೆಕ್ಕಿನ ಸಮೀಪಕ್ಕೆ ಹೋಯಿತು. ಬೆಕ್ಕು ಅದನ್ನು ಹಿಡಿದು ತಿಂದಿತು. ಅದು ಬರದೇ ಇದ್ದುದನ್ನು ಇತರ ಇಲಿಗಳು ನೋಡಿ ಅಲ್ಲಿ ಇಲ್ಲಿ ಹುಡಿಕಿದಾಗ ರೋಮಶನ ಎಲುಬುಗಳೂ ರೋಮಗಳೂ ಬೆಕ್ಕಿನ ಪುರೀಷದಲ್ಲಿ ಅವುಗಳ ಕಣ್ಣಿಗೆ ಬಿದ್ದವು. ಅದನ್ನು ನೋಡಿ ಆ ಇಲಿಗಳೆಲ್ಲವೂ ಬೆಕ್ಕಿನ ಬಳಿಗೆ ಬಂದು 'ಇದು ಶೀಲವೂ ಧರ್ಮವೂ ಅಲ್ಲ. ಆಹಾರಕ್ಕಾಗಿ ಮಾಡುವ ತಪಸ್ಸು ಇದು. ಫಲಮೂಲಗಳನ್ನು ತಿಂದು ಜೀವಿಸುವವರ ಪುರೀಷದಲ್ಲಿ ರೋಮಗಳು ದೊರೆಯುವುದಿಲ್ಲ' ಎಂದು ಹೇಳಿ ಇಲಿಗಳೆಲ್ಲವೂ ಆ ಬಿಲವನ್ನು ಬಿಟ್ಟು ಇನ್ನೊಂದು ಸ್ಥಾನಕ್ಕೆ ಹೋದವು.

* ಯಸ್ಯ ಧರ್ಮಧ್ವಜೋ ನಿತ್ಯಂ ಸುರಧ್ವಜ ಇವೋಚ್ಛ್ರಿತಃ |
ಪ್ರಚ್ಛನ್ನಾನಿ ಚ ಪಾಪಾನಿ ಮಾರ್ಜಾರ ಮಿವ ತಂ ತ್ಯಜೇತ್ ||೭೧||

ಈ ಕಥೆಯಲ್ಲಿ

> ನೇದಂ ಶೀಲಂ ಚ ಧರ್ಮಶ್ಚ ವೃತ್ತಿಹೇತೋ ರಿದಂ ತಪಃ |
> ನ ಮೂಲಫಲಭಕ್ಷಸ್ಯ ವಿಪ್ರತ್ವಂ ಭವತಿ ರೋಮಶಾ || ೭೨ ||

ಎಂಬ ಶ್ಲೋಕವಿರುವುದು.

## ೩೨. ನಾವಿಕ ಬ್ರಾಹ್ಮಣನ ಕಥೆ

ಉತ್ತರಾಪಥದಲ್ಲಿ ಮಧುರೆಯೆಂಬ ನಗರವಿರುವುದು. ಅಲ್ಲಿ ಗೋಕಪಿಲನೆಂಬ ಬ್ರಾಹ್ಮಣನು ಶೌಚಾಚಾರಸಂಪನ್ನನಾಗಿ ಬ್ರಾಹ್ಮಣ ಹುಡುಗರಿಗೆ ಪಾಠ ಹೇಳುತ್ತಾ ಹೆಂಡತಿ ಮಕ್ಕಳೊಡನೆ ಸುಖದಿಂದ ಜೀವಿಸುತ್ತಿದ್ದನು. ದಕ್ಷಿಣದೇಶದ ಮಧುರೆಯಲ್ಲಿ ವಿಶ್ವಕರ್ಮನೆಂಬ ನಾವಿಕ[1]ನಿದ್ದನು. ಅವನು ನಾಲ್ಕು ವರ್ಣದವರ ಸೇವೆಯನ್ನು ಮಾಡುತ್ತಿದ್ದನು. ಒಂದು ದಿನ ಅವನು ಇತರರಿಂದ ಬಹುಮಾನಿತನಾದ ಶಾಸ್ತ್ರ ಕೋವಿದನಾದ ನಾವಿಕ[2]ನೊಬ್ಬನನ್ನು ನೋಡಿ ತನ್ನ ಸ್ಥಿತಿಯ ಬಗ್ಗೆ ಖೇದಪಟ್ಟು ಆ ಊರನ್ನು ಬಿಟ್ಟು ಬ್ರಾಹ್ಮಣವೇಷವನ್ನು ಧರಿಸಿ ದೇಶಾಟನ ಮಾಡುತ್ತಾ ಉತ್ತರ ಮಧುರೆಗೆ ಬಂದನು. ಅಲ್ಲಿ ವಿದ್ಯೆಯನ್ನು ಕಲಿಯಬೇಕೆಂದು ನಿರ್ಧರಿಸಿ ಗೋಕಪಿಲನ ಬಳಿಗೆ ಬಂದು ಅವನ ಶಿಷ್ಯನಾಗಿ ಸ್ವಲ್ಪಕಾಲದಲ್ಲೇ ವೇದಶಾಸ್ತ್ರಪಾರಂಗತನಾದನು. ಗೋಕಪಿಲನಿಗೆ ಇವನಲ್ಲಿ ಆದರವುಂಟಾಗಿ ತನ್ನ ಮಗಳನ್ನು ಇವನಿಗೆ ಮದುವೆಮಾಡಿ ಕೊಟ್ಟನು. ಹೀಗೆ ಕೆಲವು ದಿನಗಳು ಕಳೆಯಲಾಗಿ ಒಂದು ದಿನ ದಕ್ಷಿಣ ಮಧುರೆ

---

[1] ತಂತ್ರೆಯಲ್ಲಿರುವ ಕಥೆಯು ನಾಪಿತ (ಕ್ಷೌರಕ) ನನ್ನು (Barber) ಕುರಿತು ಹೇಳಲ್ಪಟ್ಟಿದೆ. ಕನ್ನಡ ಲಿಪಿಯಲ್ಲಿ (ಹೀಗೆಯೇ ತೆಲುಗು ತಮಿಳು ಮತ್ತು ಮಲಯಾಳಿ ಲಿಪಿಯಲ್ಲಿ) ಶೀಘ್ರವಾಗಿ ಬರೆಯುವಾಗ ಅನೇಕರ ಬರಹವು ಸ್ವಲ್ಪ ಅಸ್ಪಷ್ಟವಾಗುವದರಿಂದ ಅಂಥವರು ಬರೆದ 'ನಾಪಿತ' ಎಂಬ ಪದವನ್ನು 'ನಾವಿಕ' ಎಂದು ಓದುಗರು ಓದಬಹುದು. ಪ್ರಕೃತ ಕಥೆಯಲ್ಲಿರುವ 'ನಾವಿಕನು ನಾಲ್ಕು ವರ್ಣಗಳ ಸೇವೆಯನ್ನು ಮಾಡುತ್ತಿದ್ದನು' ಎಂಬ ವಾಕ್ಯವೂ 'ನಾವಿಕನ ಉಪಕರಣಗಳು' ಎಂಬ ಮಾತೂ ಅಷ್ಟೇನೂ ಸಮಂಜಸವಾಗಿಲ್ಲ. ಏಕೆಂದರೆ, ನಮಗೆ ತಿಳಿದಂತೆ, ನಾವಿಕರು ಯಾರ ಪರಿಚರ್ಯೆಯನ್ನೂ ಮಾಡುವದಿಲ್ಲ. ಮತ್ತು 'ನಾವಿಕನ ಉಪಕರಣ' ಎಂದು ಹೇಳಿಸಿಕೊಳ್ಳ ಬಹುದಾದ ಯಾವ ಸಾಮುಗ್ರಿಯೂ ನಾವಿಕರ ಬಳಿಯಲ್ಲಿರುವುದಿಲ್ಲ. ನಾಪಿತನಾದರೆ ಚತುರ್ವರ್ಣ ದವರ ಸೇವೆಯನ್ನು ಮಾಡುತ್ತಾನೆ. ಮತ್ತು ಅವನ ಬಳಿಯಲ್ಲಿ ಕ್ಷೌರದ ಕತ್ತಿಯೇ ಮೊದಲಾದ 'ನಾಪಿತನ ಉಪಕರಣಗಳು' ಇರುತ್ತವೆ. ಆದ್ದರಿಂದ ಪ್ರಕೃತ ಕಥೆಯಲ್ಲಿ ತಂತ್ರೋಕ್ತದ ಕರ್ತೃವು 'ನಾಪಿತ' ಎಂದು ಬರೆದನೆಂದೂ ಅದನ್ನು ಯಾರೋ ಅಸ್ಪಷ್ಟವಾಗಿ ಬರೆದದ್ದರಿಂದ ಓದುವವನು 'ನಾವಿಕ' ಎಂದು ಓದಿ ಪುಸ್ತಕದಲ್ಲಿ ಬರೆದನೆಂದೂ ನಮಗೆ ತೋರುತ್ತದೆ.

[2] 'ನಾವಿಕ' ಎಂಬುದು 'ಬ್ರಾಹ್ಮಣ' ಎಂಬುದರ ಬದಲು ತಪ್ಪಾಗಿ ಇಲ್ಲಿ ಬರೆಯಲ್ಪಟ್ಟಿರು ವದೆಂದು ತೋರುತ್ತದೆ.

ಯಿಂದ ಅಲ್ಲಿಗೆ ಬಂದಿದ್ದ ಒಬ್ಬ ಬ್ರಾಹ್ಮಣನು ಬ್ರಾಹ್ಮಣ ಸಮೂಹದಲ್ಲಿ ಬ್ರಾಹ್ಮಣ ವೇಷವನ್ನು ಧರಿಸಿ ಸುಖವಾಗಿ ಕುಳಿತಿದ್ದ ಇವನನ್ನು ನೋಡಿ “ಅಹೋ! ನಮ್ಮ ದಕ್ಷಿಣ ಮಧುರೆಯಲ್ಲಿ ನಾಲ್ಕು ವರ್ಣಗಳ ಸೇವೆಯನ್ನು ಮಾಡುತ್ತಿದ್ದ ನಾವಿಕ ವಿಶ್ವಕರ್ಮನು ಉತ್ತರ ಮಧುರೆಯಲ್ಲಿ ಬ್ರಾಹ್ಮಣನಾಗಿಬಿಟ್ಟಿದ್ದಾನೆ” ಎಂದು ಗಟ್ಟಿಯಾಗಿ ಹೇಳಿ ಹೊರಟುಹೋದನು. ವಜ್ರಾಘಾತದಂತಿದ್ದ ಈ ಮಾತನ್ನು ಕೇಳಿ ವಿಶ್ವಕರ್ಮನಿಗೆ ಅತ್ಯಂತ ವಿಷಾದವುಂಟಾಯಿತು. ಅವನು ‘ಇನ್ನು ಮೇಲೆ ಬದುಕಿರಬಾರದು. ವಿಷವನ್ನು ಕುಡಿದೋ ಅಗ್ನಿಪ್ರವೇಶಮಾಡಿಯೋ ಹೇಗಾದರೂ ಪ್ರಾಣವನ್ನು ಬಿಡಬೇಕು’ ಎಂದು ಯೋಚಿಸುತ್ತಿದ್ದಾಗ ಅವನ ಮಾವನು ಇದನ್ನು ನೋಡಿ ಅತ್ಯಂತ ವಾತ್ಸಲ್ಯದಿಂದ ಇವನ ಬಳಿಗೆ ಬಂದು ಕೈಹಿಡಿದುಕೊಂಡು ತನ್ನ ಮನೆಯೊಳಗೆ ಕರೆದುಕೊಂಡು ಹೋಗಿ ಅಲ್ಲಿ ಒಂದು ಕಡೆ ಗುದ್ದಲಿಯಿಂದ ಅಗೆದು ಅಲ್ಲಿ ಬಚ್ಚಿಟ್ಟಿದ್ದ ನಾವಿಕರ ಉಪಕರಣಗಳನ್ನು ತೋರಿಸಿ ನೀನು ಖೇದಪಡಬೇಡ; ನಮ್ಮಿಬ್ಬರ ಕುಲವೂ ಒಂದೇ ಎಂದು ಹೇಳಿದನು. ಇದನ್ನು ಕೇಳಿ ವಿಶ್ವಕರ್ಮನು ಸ್ವಸ್ಥಚಿತ್ತನಾದನು.

* ನಾಸಮಾನಃ ಸಮಾನೇನ ಬಂಧುತ್ವಮುಪಗಚ್ಛತಿ |
ಉಭೌ ತೌ ನಾವಿಕೌ ಪಶ್ಯ ದಕ್ಷಿಣೋತ್ತರಮಾಧುರೌ || ೭೩ ||

## ೩೩. ಹುಲಿ, ನರಿ, ಮತ್ತು ಕತ್ತೆ

* ಮೃಗಪಕ್ಷಿಮನುಷ್ಯೇಷು ಧಾರ್ಷ್ಟ್ಯಮೇವ ಹಿ ಶೋಭತೇ |
ಜಂಬುಕೇನಾತಿಧೃಷ್ಟೇನ ಮೃಗೇಂದ್ರಂ ಪಶ್ಯ ವಂಚಿತಂ || ೭೪ ||

ಈ ಕಥೆಯಲ್ಲಿ—

ಆಯುಷ್ಯಂ ಸರ್ವಥಾ ರಕ್ಷ್ಯಂ ಪ್ರಾಣಿನಾ ವಿಹ ಧೀಮತಾ |
ಅಪ್ಯಲ್ಪಗುಣಸಂಪನ್ನೋ ಜೀವನ್ ಭದ್ರಾಣಿ ಪಶ್ಯತಿ || ೭೫ ||

ಎಂಬ ಆಖ್ಯಾನ ಶ್ಲೋಕವಿದೆ.

## † ೩೪. ಮೊಸಳೆಯೂ ಕಪಿಯೂ

* ಸಾಧು ವಾನರಶಾರ್ದೂಲ ಮತಿಮಾನಸಿ ಸರ್ವಥಾ |
ಶಿಂಶುಮಾರಗ್ರಹೀತಸ್ಯ ಯಸ್ಯ ತೇ ಬುದ್ಧಿರುತ್ತಮಾ || ೭೬ ||

ಬುದ್ಧಿಸತ್ತ್ವಸಮಾಯುಕ್ತೋ ನರೋ ನರ್ಥಾದ್ವಿಮುಚ್ಯತೇ |
ಯಥೈವ ಶಿಂಶುಮಾರೇಣ ಹೃತೋ ಜೀವತಿ ವಾನರಃ || ೭೭ ||

ಪ್ರತ್ಯುತ್ಪನ್ನೇಷು ಕಾರ್ಯೇಷು ಬುದ್ಧಿರ್ಯಸ್ಯ ನ ಹೀಯತೇ |
ಸ ನಿಸ್ತರತಿ ಕಾರ್ಯಾಣಿ ಜಲಮಧ್ಯೇ ಕಪಿರ್ಯಥಾ || ೭೮ ||

ಅನುಷ್ಠಿತೇಷು ಕಾರ್ಯೇಷು ಯೋ ಗುಹ್ಯಂ ನ ಪ್ರಕಾಶಯೇತ್ |
ಸ ತತ್ರ ಲಭತೇ ಸಿದ್ಧಿಂ ಜಲಮಧ್ಯೇ ಕಪಿ ರ್ಯಥಾ || ೭೯ ||

ಈ ಕಥೆಯಲ್ಲಿ—

ನ ನೀಚಜನಸಂಪರ್ಕ ಮಿಚ್ಛೇ ತ್ಸಾಧುಃ ಸಮಾಹಿತಃ |
ಅಹಂ ದುರ್ಬುದ್ಧಿನಾ ಬದ್ಧಃ ಸ್ವಬುದ್ಧ್ಯಾ ಪರಿಮೋಚಿತಃ || ೮೦ ||

ಎಂಬ ಆಖ್ಯಾನ ಶ್ಲೋಕವಿರುವುದು.

## ೩೫. ಗಜೇಂದ್ರ ಮೋಕ್ಷದ ಕಥೆ

ತ್ರಿಕೂಟಗಿರಿಯ ತಪ್ಪಲಿನಲ್ಲಿ ಒಂದು ಸರೋವರವಿತ್ತು. ಅದರಲ್ಲಿ ಒಂದು ಬಲಿಷ್ಠವಾದ ಮೊಸಳೆಯಿತ್ತು. ಒಂದು ದಿನ ಒಂದು ಆನೆಯು ಆ ಸರೋವರದಲ್ಲಿ ಇಳಿದಾಗ ಮೊಸಳೆಯು ಅದರ ಕಾಲನ್ನು ಹಿಡಿದುಕೊಂಡಿತು. ಎಷ್ಟು ಯತ್ನಮಾಡಿದರೂ ಆನೆಗೆ ಕಾಲನ್ನು ಬಿಡಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಆಗ ಆ ಆನೆಯು ವಿಷ್ಣುವನ್ನು ಸ್ತುತಿಸಲಾಗಿ ಅವನು ಗರುಡಾರೂಢನಾಗಿ ಅಲ್ಲಿಗೆ ಬಂದು ಮೊಸಳೆಯನ್ನು ತನ್ನ ಚಕ್ರದಿಂದ ಸಂಹರಿಸಿ ಆನೆಯನ್ನು ಬಿಡಿಸಿದನು. ತದನಂತರ ಮೊಸಳೆಗೂ ಆನೆಗೂ ವೈಕುಂಠಲೋಕ ಪ್ರಾಪ್ತಿಯಾಯಿತು.

* ಹಿತಂ ವಾ ಪ್ಯಹಿತಂ ವಾಪಿ ಯತ್ಕರ್ಮ ಕುರುತೇ ನರಃ |
ತತ್ ಸಾಧುಷ್ವೇವ ಕರ್ತವ್ಯಂ ಗಜಗ್ರಾಹವ ದೀದೃಶಂ || ೮೧ ||

ಉಭಯೋರಪಿ ನಿಸ್ತರ್ತುಂ ಶಕ್ತಃ ಸಾಧು ಸ್ತಥಾ ಪದಂ |
ಶತ್ರೋಃ ಸ್ವಸ್ಯ ಚ ನಿಸ್ತೀರ್ಣೌ ಗಜಗ್ರಾಹೌ ಯಥಾ ಪದಂ || ೮೨ ||

ಈ ಕಥೆಯಲ್ಲಿ

ಏತದುಕ್ತಂ ಮಯಾ ಸರ್ವ ಮೇತತ್ತಥ್ಯಂ ಶುಭಾವಹಂ |
ಭಗವಂತಂ ಪ್ರಪನ್ನೋಸ್ಮಿ ನಮೋ ನಾರಾಯಣಾಯ ಚ || ೮೩ ||

ಎಂಬ ಆಖ್ಯಾನ ಶ್ಲೋಕವಿದೆ.

## ೩೬. ಹೆಂಟೇಗೊದ್ದವೂ ಆನೆಯೂ

ಒಂದು ದೊಡ್ಡ ಅಡವಿಯ ಮಧ್ಯದಲ್ಲಿ ಒಂದು ಕೊಳವಿತ್ತು. ಆ ಕೊಳದ ಸುತ್ತಲೂ ಎರಡು ಮೂರು ಮತ್ತು ನಾಲ್ಕು ಅಂತಸ್ತುಗಳ ಪ್ರಾಸಾದಗಳಿದ್ದವು. ಅವುಗಳೆಲ್ಲವೂ ಮಂಡಪಗೋಪುರಾದಿಗಳಿಂದ ಅಲಂಕೃತವಾಗಿಯೂ ಅನ್ನಪಾನಗಳಿಂದ ಪೂರ್ಣವಾಗಿಯೂ ಇದ್ದವು. ಅವುಗಳಲ್ಲಿ ವ್ರತಗಳನ್ನು ಆಚರಿಸುವರಂತೆ

ವೇಷವನ್ನು ಧರಿಸಿದ್ದ ಕಪಟಿಗಳಾದ ಕ್ಷಪಣಕರು ವಾಸಮಾಡುತ್ತಿದ್ದರು. ಅಲ್ಲಿಯೇ ಅನೇಕ ಪಕ್ಷಿಗಳಿಗೂ ಹೆಂಟೇಗೊದ್ದಗಳಿಗೂ ಆವಾಸವಾಗಿದ್ದ ಒಂದು ದೊಡ್ಡ ಆಲದ ಮರವಿತ್ತು. ಒಂದು ದಿನ ಅಲ್ಲಿದ್ದ ಹೆಂಟೇಗೊದ್ದಗಳಲ್ಲಿ ಕಲಹವುಂಟಾಗಿ ಅವು ಒಂದನ್ನು ಒಂದು ತಿನ್ನಲು ತೊಡಗಿದವು. ಇದನ್ನು ನೋಡಿ ದುರ್ಬಲ ವಾಗಿದ್ದ ಒಂದು ಹೆಂಟೇಗೊದ್ದವು ಅಲ್ಲಿಂದ ತಪ್ಪಿಸಿಕೊಂಡು ಹೋಗುವದಕ್ಕೆ ಯಾವ ಉಪಾಯವನ್ನೂ ಕಾಣದೆ ಸರೋವರದಲ್ಲಿ ನೀರನ್ನು ಕುಡಿಯುತ್ತಿದ್ದ ಒಂದು ಮಹಾಗಜದ ಸೊಂಡಿಲ ಒಳಗೆ ಹೊಕ್ಕಿತು. ಇದರಿಂದ ವ್ಯಾಕುಲಗೊಂಡ ಆ ಗಜಪತಿಯು ಆ ಸರೋವರದಲ್ಲೆಲ್ಲಾ ಓಡಾಡಿ ಅಲ್ಲಿದ್ದ ಜಲಚರಪ್ರಾಣಿಗಳನ್ನೆಲ್ಲಾ ನಾಶಮಾಡಿ ಮೇಲಕ್ಕೆ ಬಂದು ಅಲ್ಲಿದ್ದ ಮನೆ ಮಂಟಪಗಳನ್ನೂ ಅಲ್ಲಿದ್ದ ಜನರನ್ನೂ ನಾಶಮಾಡಿ ತನ್ನ ಕಷ್ಟವು ಇನ್ನೂ ನಿವಾರಣೆಯಾಗಲಿಲ್ಲವಾದ್ದರಿಂದ ಆ ದೊಡ್ಡ ಆಲದಮರವನ್ನು ಬೀಳಿಸಿ ಅಲ್ಲಿದ್ದ ಹೆಂಟೇಗೊದ್ದಗಳನ್ನೂ ನಾಶಮಾಡಿ ಸೊಂಡಿಲನ್ನು ಕೊಡಹಿ ಕೊಡಹಿ ಕೊನೆಗೆ ಒಳಗಿದ್ದ ಹೆಂಟೇಗೊದ್ದವು ಹೊರಗೆ ಬರುವಂತೆ ಮಾಡಿ ಅನಂತರ ಸ್ವಸ್ಥವಾಗಿ ಹೊರಟುಹೋಯಿತು.

ಸರಟಾಃ ಕಲಹಾ ನ್ನಷ್ಟಾ ಶ್ಚಪಲಾಶ್ಚ ದಿಗಂಬರಾಃ |
ತಸ್ಮಾ ತ್ಕಲಹಸಂಸ್ಪೃಷ್ಟಾ ನ್ದೂರತಃ ಪರಿವರ್ಜಯೇತ್ || ೮೪ ||

ಜಲಜಾತಾಃ ಸ್ಥಲೇ ಜಾತಾ ನಿಹತಾ ಸ್ತೇನ ಹಸ್ತಿನಾ |
ಸ ವಟೋಽಪಿ ಮಹಾಶಾಖಃ ಕಲಹಾ ನ್ನಿಧನಂ ಗತಃ || ೮೫ ||

### † ೩೭. ತೊತ್ತು ಮತ್ತು ಟಗರಿನ ಕಲಹದಿಂದ ಕಪಿಗಳು ನಾಶವಾದ ಕಥೆ

* ದಾಸೀ—ಮೇಷವಿರೋಧೇನ ವಾನರಾ ನಿಧನಂ ಗತಾಃ |
ತಸ್ಮಾತ್ಕಲಹಸಂಸ್ಪೃಷ್ಟಾ ನ್ದೂರತಃ ಪರಿವರ್ಜಯೇತ್ || ೮೬ ||

### ೩೮. ಜೇನುತುಪ್ಪದ ತೊಟ್ಟಿನಿಂದ ಉಂಟಾದ ವಿಪ್ಲವ

ಗಂಗಾ ಯಮುನಾ ನದಿಗಳ ನಡುವೆ ಪ್ರತಿಷ್ಠಾನವೆಂಬ ನಗರವುಂಟು. ಆ ನಗರದ ಅಂಗಡಿಬೀದಿಯಲ್ಲಿ ಒಬ್ಬ ಹಳ್ಳಿಯವನು ಜೇನುತುಪ್ಪದ ಗಡಿಗೆ ಇದ್ದ ಒಂದು ಹುರಿಯನ್ನು ಹೊತ್ತುಕೊಂಡು ಹೋಗುತ್ತಾ ಇದ್ದಾಗ ದಾರಿಯನ್ನು ಸರಿ ಯಾಗಿ ನೋಡದೆ ಎಡವಿಬಿದ್ದನು. ಜೇನುತುಪ್ಪದ ಗಡಿಗೆಯು ಒಡೆದುಹೋಯಿತು. ಆಗ ಒಂದು ನೊಣವು ಬಂದು ಜೇನುತುಪ್ಪದ ಒಂದು ತೊಟ್ಟಿನಮೇಲೆ ಕೂತು ಕೊಂಡಿತು. ಅದನ್ನು ತಿನ್ನಬೇಕೆಂದು ಮೇಲಿನಿಂದ ಒಂದು ಜೇಡರಹುಳುವೂ ಜೇಡರಹುಳುವನ್ನು ತಿನ್ನಬೇಕೆಂದು ಒಂದು ಹಲ್ಲಿಯೂ ಬಂದವು. ಹಲ್ಲಿಯನ್ನು ತಿನ್ನ

ಬೇಕೆಂದು ಅಲ್ಲಿದ್ದ ಅಂಗಡಿಯವನ ಬೆಕ್ಕು ಬಂದಿತು. ಮತ್ತು ಆಗ ಅಲ್ಲಿ ಹೋಗುತ್ತಿದ್ದ ರಾಜನ ನಾಯಿಯು ಬೆಕ್ಕನ್ನು ತಿನ್ನಬೇಕೆಂದು ಬಂದಿತು. ಇದನ್ನು ನೋಡಿ ಅಂಗಡಿಯವನು 'ನನ್ನ ಬೆಕ್ಕಿಗೆ ಏನಾದರೂ ತೊಂದರೆಯು ನಾಯಿಯಿಂದ ಉಂಟಾದರೆ ನಾನು ನಾಯಿಯನ್ನು ಬಡಿದು ಸಾಯಿಸುತ್ತೇನೆ' ಎಂದು ಹೇಳಿ ದೊಣ್ಣೆಯನ್ನು ತೆಗೆದುಕೊಂಡು ಬಂದನು. ಇವನನ್ನು ನೋಡಿ ನಾಯಿಯ ಜೊತೆಯಲ್ಲಿದ್ದ ರಾಜಪುರುಷನು 'ನನ್ನ ನಾಯಿಯನ್ನು ನೀನು ಸಾಯಿಸಿದರೆ ನಾನೂ ನಿನ್ನ ತಲೆಯನ್ನು ಕತ್ತರಿಸುತ್ತೇನೆ' ಎಂದು ಹೇಳಿ ಕತ್ತಿಯನ್ನು ಒರೆಯಿಂದ ತೆಗೆದನು. ಆ ವೇಳೆಗೆ ನೊಣವನ್ನು ಜೇಡರಹುಳುವೂ ಜೇಡರಹುಳುವನ್ನು ಹಲ್ಲಿಯೂ, ಹಲ್ಲಿಯನ್ನು ಬೆಕ್ಕೂ ತಿಂದವು. ಬೆಕ್ಕನ್ನು ನಾಯಿಯೂ ಕಚ್ಚಿತು; ಅಂಗಡಿಯವನು ನಾಯಿಯನ್ನು ದೊಣ್ಣೆಯಿಂದ ಬಡಿದನು ಮತ್ತು ಅಂಗಡಿಯವನನ್ನು ರಾಜಪುರುಷನು ಕತ್ತಿಯಿಂದ ಕತ್ತರಿಸಿದನು. ಅದನ್ನು ನೋಡಿ ಆ ಬೀದಿಯಲ್ಲಿದ್ದ ಇತರ ಅಂಗಡಿಯವರು ರಾಜಪುರುಷನನ್ನು ಕೊಂದರು. ಇದನ್ನು ಕೇಳಿ ರಾಜನು ಪಟ್ಟಣಿಗರನ್ನು ಕೊಲ್ಲಲು ತನ್ನ ಸೈನಿಕರನ್ನು ಕಳಿಸಿದನು. ಎರಡು ಕಡೆಯವರಿಗೂ ಯುದ್ಧವಾಗಿ ಎಲ್ಲರೂ ಮಡಿದರು.

* ಅತಿಕ್ರೋಧೋ ನ ಕರ್ತವ್ಯಃ ಕ್ರೋಧೋ ಭವತಿ ನಾಶನಃ |
ಸಾ ರಾಜನಗರೀ ನಷ್ಟಾ ತ್ವೇಕೇನ ಮಧುಬಿಂದುನಾ || ೮೭ ||

ನಿರ್ಜಿತಾಃ ಕ್ರೋಧವೈರೇಣ ಮಾನೇನ ಚ ಮದೇನ ಚ |
ನಾಶಂ ಪ್ರಯಾಂತಿ ಸಹಸಾ ಲಾಟನಾಗರಿಕಾ ಯಥಾ || ೮೮ ||

**ವಿನಾಶಿತಂ ಕ್ಷಣೇನೈವ ನಾನಾಜನಸಮಾಕುಲಂ |
ಪ್ರತಿಷ್ಠಾನಂ ಸುಖಸ್ಥಾನ ಮೇಕೇನ ಮಧುಬಿಂದುನಾ || ೮೯ ||**

ಈ ಕಥೆಯಲ್ಲಿ—

**ಕ್ಷೇತ್ರೇ ಗೃಹೇ ಚ ಸತತಂ ಕಿಲ ವರ್ಧಿತಸ್ಯ
ಗೋಭಿಃ ಸಮಂ ಗಲಿತಯೌವನವಿಭ್ರಮಸ್ಯ |**
ವೇಶ್ಯಾಂಗನಾಗೃಹಸಭಾಸು ಬಹಿಷ್ಕೃತಸ್ಯ
ಗ್ರಾಮೇಯಕಸ್ಯ ಲಲಿತಾನಿ ಸುದಾರುಣಾನಿ || ೯೦ ||

ಎಂಬ ಆಖ್ಯಾನ ಶ್ಲೋಕವಿರುವದು.

## † ೩೯. ಋಷಿಯೂ ನಾಯಿಯೂ

* ದುರ್ಜನಃ ಸತ್ಕೃತೋ ವಾಪಿ ಸ್ಥಿತಾಂ ಶ್ರಿಯ ಮವಾಪ್ಯವಾ |
ಸ್ವಾಮಿನ್ಯೇ ವಾಪಕುರುತೇ ಯಥಾ ಶ್ವಾ ಗುಣಿಗೌತಮೇ || ೯೧ ||

ಈ ಕಥೆಯಲ್ಲಿ—

ತ್ವಂ ನೀಚಕುಲ ಸಂಭೂತಃ ಕೃತಘ್ನೋ ದುರ್ಬಲಾಶಯಃ|
ಯ ಜ್ಜಿಘಾಂಸಸಿ ಮಾಮೇವ ತತ್ಪುನಃ ಶ್ವಾ ಭವಿಷ್ಯಸಿ ||೯೨||

ವ್ಯಾಘ್ರತ್ವಂ ಚ ಮೃಗತ್ವಂ ಚ ಸಿಂಹತ್ವಂ ಚ ಮಯಾ ಕೃತಂ|
ಅಕೃತಜ್ಞೋ ದುರಾಚಾರಃ ಪತಿತಃ ಶ್ವಾ ಭವಿಷ್ಯಸಿ ||೯೩||

ಎಂಬ ಆಖ್ಯಾನ ಶ್ಲೋಕಗಳಿರುವುವು.

### †೪೦. ಬ್ರಾಹ್ಮಣಿಯೂ ಮುಂಗಿಸಿಯೂ

* ಯಸ್ತು ಕಾರ್ಯ ಮವಿಜ್ಞಾಯ ಕ್ರೋಧಾಂಧೋ ಮಾರಯೇ ನ್ನರಃ|
ಸ ತು ತ್ಯಜತಿ ಮಿತ್ರಾಣಿ ಬ್ರಾಹ್ಮಣೀ ನಕುಲಂ ಯಥಾ ||೯೪||

ವಿಚಾರಯಿತ್ವಾ ಕರ್ತವ್ಯಂ ಸ್ವಂ ನಿಹಂತ್ಯ ವಿಚಾರಿತಂ|
ಬ್ರಾಹ್ಮಣೀ ನಕುಲಂ ಹತ್ವಾ ಪಶ್ಚಾತ್ತಾಪೇನ ತಾಪಿತಾ ||೯೫||

ಈ ಕಥೆಯಲ್ಲಿ—

ವಿಶ್ವಾಸೋ ನೋಪಗಂತವ್ಯಃ ಸ್ತ್ರೀಷು ರಾಜಕುಲೇಷು ಚ

ಎಂಬ ಅರ್ಧಶ್ಲೋಕವೂ,

ಅಪರೀಕ್ಷ್ಯ ನ ಕರ್ತವ್ಯಂ ಕರ್ತವ್ಯಂ ಸುಪರೀಕ್ಷಿತಂ|
ಪಶ್ಚಾದ್ಭವತಿ ಸಂತಾಪೋ ಬ್ರಾಹ್ಮಣೀ ನಕುಲೇ ಯಥಾ ||೯೬||

ಎಂಬ ಶ್ಲೋಕವೂ ಇರುವುವು.

### †೪೧. ಅಮೌಲ್ಯವಾದ ಶ್ಲೋಕ

### †೪೨. ಕಾಗೆಗಳು ಗೂಬೆಗಳನ್ನು ನಾಶಮಾಡಿದ್ದು

* ನ ವಿಶ್ವಸೇ ತ್ಪೂರ್ವವಿರೋಧಿನಸ್ತು
ಶತ್ರೋಃ ಪುನ ರ್ಮಿತ್ರ ಮುಪಾಗತಸ್ಯ|
ದಗ್ಧಾಂ ಗುಹಾಂ ಪಶ್ಯ ದಿವಾಂಧಪೂರ್ಣಾಂ
ಕಾಕಪ್ರಣೀತೇನ ಹುತಾಶನೇನ ||೯೭||

### ೪೩. ಮಂಡೂಕ ಪ್ರಕರಣ—ಮುಖಕಥೆ: ಕಪ್ಪೆಗಳೂ ಹಾವೂ

ದೊಡ್ಡದಾದ ಒಂದು ಅಡವಿಯಲ್ಲಿ ಒಂದು ಹಾವು ಒಂದು ಬಿಲದಲ್ಲಿ ವಾಸ ಮಾಡುತ್ತಿತ್ತು. ಆಗ ಅನಾವೃಷ್ಟಿಯಿಂದ ಕಾಡೆಲ್ಲವೂ ಒಣಗಿಹೋಗಿ ಅಲ್ಲಿದ್ದ ಪ್ರಾಣಿಗಳೆಲ್ಲವೂ ಸತ್ತುಹೋದವು. ನೀರು ದೊರೆಯದೆ ಈ ಹಾವು ನೀರಡಿಕೆಯಿಂದ

ಬಹಳ ಬಳಲಿ ನೀರನ್ನು ಹುಡುಕುತ್ತಾ ಒಂದು ಬಾವಿಯ ಬಳಿಗೆ ಬಂದಿತು. ಆ ಬಾವಿಯಲ್ಲಿ ನೀರು ಸಮೃದ್ಧವಾಗಿತ್ತು; ಆದ್ದರಿಂದ ಅದು ಅನೇಕ ಕಪ್ಪೆಗಳಿಗೆ ಆವಾಸಸ್ಥಾನವಾಗಿತ್ತು. ಆ ಕಪ್ಪೆಗಳಿಗೆ ಮಹಾಗಜನೆಂಬ ರಾಜನಿದ್ದನು. ಬಾವಿಯ ಒಳಗೆ ಇಳಿದು ನೀರನ್ನು ಕುಡಿಯುವುದಕ್ಕೆ ದಾರಿಯಿಲ್ಲದಿದ್ದಾಗ್ಯೂ ಈ ಹಾವು ನೀರನ್ನು ನೋಡಿ ಸಂತೋಷಪಡುತ್ತಾ ಬಾವಿಯ ದಂಡೆಯಲ್ಲಿ ಇರುತ್ತಿತ್ತು. ಒಂದು ದಿನ ಮಹಾಗಜನು ಈ ಹಾವನ್ನು ನೋಡಿ ಅದರೊಡನೆ ಸಂಭಾಷಿಸಿ ಅದರೊಡನೆ ಸ್ನೇಹವನ್ನು ಬೆಳೆಸಿ ಬಾವಿಯೊಳಗೆ ಹೋಗುವ ದಾರಿಯನ್ನು ತೋರಿಸಿಕೊಟ್ಟನು. ಹಾವು ಆ ದಾರಿಯಿಂದ ಬಾವಿಯ ಒಳಗೆ ಹೋಗಿ ಅಲ್ಲಿದ್ದ ಕಪ್ಪೆಗಳನ್ನೆಲ್ಲಾ ತಿಂದು ಕೊನೆಗೆ ಮಹಾಗಜನನ್ನೂ ತಿಂದಿತು.

* ಕುಮಿತ್ರ ಮಹಿತಂ ತ್ಯಕ್ತ್ವಾ ಸುಮಿತ್ರ ಮಖಿಲಂ ಭಜ |
ಕ್ರೂರಸರ್ಪೇಣ ಮಿತ್ರತ್ವಂ ಮಂಡೂಕಕುಲನಾಶನಂ ||೧೦೦||

ಈ ಕಥೆಯಲ್ಲಿ—

ರೌದ್ರಯಾ ವೀಕ್ಷಿತೇ ದೃಷ್ಟ್ಯಾ ಕೌಟಿಲ್ಯಚರಿತೇ ಮೃದು |
ಕ್ರೂರೇ ಹಿ ಭವನಂ ಪ್ರಾಪ್ತೇ ತದ್ ಗೃಹಂ ನ ಶುಭಂ ಭವೇತ್ ||೧೦೧||

ಸರ್ಪಾಃ ಕ್ರೂರಾ ಮಹಾದೋಷಾ ಮಂತ್ರೌಷಧಿವಶಾನುಗಾಃ |
ನಹಿ ಖಲ್ವಧಮೇ ಶಾಂತಿ ಸ್ತಸ್ಮಾ ತ್ತ್ಯಾಜ್ಯಾ ವಿಷೋರಗಾಃ ||೧೦೨||

ಪಿಶಾಚಾನಾಂ ವಿವಾಹೇಷು ಗರ್ದಭಾಃ ಕಿಲ ಗಾಯಕಾಃ |
ತೇಷಾಂ ಗೀತರವಂ ಶ್ರುತ್ವಾ ಸೃಗಾಲಾ ವಿಸ್ಮಯಂ ಗತಾಃ ||೧೦೩||

ದೇವಾಸುರಮನುಷ್ಯಾಶ್ಚ ವೈವಸ್ವತಮತಾನುಗಾಃ |
ತಿರ್ಯಕ್ ಪ್ರಾಣಭೃತಃ ಸರ್ವೇ ಭೂಮೌ ಜೀವನ್ನ ತಿಷ್ಠತಿ ||೧೦೪||

ಕಿ ಮಾಕ್ರೋಶಸಿ ದುರ್ಬುದ್ಧೇ ಸ್ವಪಕ್ಷಕ್ಷಯಕಾರಕ |
ಮಯಾ ವಿನಾಶಿತಾಃ ಸರ್ವೇ ತ್ರಾತಃ ಶತ್ರು ರ್ನಿಹನ್ಯತೇ ||೧೦೫||

ಎಂಬ ಆಖ್ಯಾನ ಶ್ಲೋಕಗಳಿರುವುವು.

### ೪೪. ವಿದ್ಯಾಧರನು ಗರ್ಭವನ್ನು ಧರಿಸಿದ ಕಥೆ

ಹಿಂದೆ ವಿದ್ಯಾಧರರು ಪರಮೇಶ್ವರನ ಉತ್ಸವವನ್ನು ಪ್ರತಿ ಸಂವತ್ಸರವೂ ಮಾಡುತ್ತಾ ತಂತಮ್ಮ ಪತ್ನಿಯರೊಡನೆ ಹೋಗಿ ಉತ್ಸವದಲ್ಲಿ ಭಾಗಿಗಳಾಗುತ್ತಿದ್ದರು. ಒಂದು ವರ್ಷ ಗರ್ಭಿಣಿಯಾಗಿದ್ದ ಒಬ್ಬಳು ವಿದ್ಯಾಧರಿಯು ಉತ್ಸವಕ್ಕೆ ಹೋಗಲಾಗುವುದಿಲ್ಲವಲ್ಲಾ ಎಂದು ವ್ಯಾಕುಲಪಡುತ್ತಿದ್ದಳು. ಆಗ ಅವಳ ಗಂಡನು ಅವಳಲ್ಲಿನ

ವ್ಯಾಮೋಹದಿಂದ "ಭದ್ರೆ, ನೀನು ವ್ಯಾಕುಲಪಡಬೇಡ. ಉತ್ಸವಕ್ಕೆ ನಾನೂ ಹೋಗುವುದಿಲ್ಲ" ಎಂದು ಹೇಳಿದನು. ಅದನ್ನು ಕೇಳಿ ವಿದ್ಯಾಧರಿಯು 'ನೀನು ಉತ್ಸವಕ್ಕೆ ಹೋಗುವುದಿಲ್ಲವಷ್ಟೆ. ಆದ್ದರಿಂದ ನನ್ನ ಗರ್ಭವನ್ನು ಸ್ವಲ್ಪ ಕಾಲ ನೀನು ಧರಿಸಿರು. ನಾನು ಉತ್ಸವಕ್ಕೆ ಹೋಗಿಬರುತ್ತೇನೆ' ಎಂದು ಹೇಳಿದಳು. ಅವಳಲ್ಲಿನ ಪ್ರೇಮದಿಂದ ವಿದ್ಯಾಧರನು ಒಪ್ಪಿಕೊಂಡು ಆ ಗರ್ಭವನ್ನು ಧರಿಸಿದನು. ವಿದ್ಯಾಧರಿಯು ಉತ್ಸವಕ್ಕೆ ಹೋಗಿ ಅಲ್ಲಿಗೆ ಬಂದಿದ್ದ ತರುಣ ವಿದ್ಯಾಧರನೊಬ್ಬನೊಡನೆ ವಿಷಯಸುಖವನ್ನನುಭವಿಸುತ್ತಾ, ಈ ಸದ್ಯಕ್ಕೆ ಈ ಪ್ರಸವದುಃಖವು ನನಗೆ ನೀಗಿತು ಎಂದುಕೊಂಡು ಸುಖವಾಗಿದ್ದಳು. ಗರ್ಭವು ಸಂಪೂರ್ಣವಾಗಿ ಬೆಳೆಯಿತು. ಹೊರಗೆ ಬರುವುದಕ್ಕೆ ಅದಕ್ಕೆ ಮಾರ್ಗವಿಲ್ಲದ್ದರಿಂದ ಅದು ಕುಕ್ಷಿಯಲ್ಲೇ ಇತ್ತು. ಗರ್ಭದಿಂದ ಪೀಡಿತನಾಗಿ ವಿದ್ಯಾಧರನು ಸತ್ತನು.

* ದಾಕ್ಷಿಣ್ಯಂ ಕುರುತೇ ಯೋಽಸೌ ದಾಕ್ಷಿಣ್ಯೇನ ವಿನಶ್ಯತಿ |
ಅತಿದಾಕ್ಷಿಣ್ಯದೋಷೇಣ ಯಕ್ಷೋಽ ಭವತಿ ಗರ್ಭವಾನ್ || ೧೦೬ ||

## ೪೫. ಅತಿಲೋಭಿಯಾದ ನರಿಯ ಕಥೆ

ಕುಂಜರಪತಿಯೆಂಬ ರಾಜನು ಮದ್ರದೇಶದ ರಾಜನೊಡನೆ ಯುದ್ಧವನ್ನು ಮಾಡಿದನು. ಯುದ್ಧರಂಗದಲ್ಲಿ ಅನೇಕ ಕುದುರೆಗಳೂ, ಆನೆಗಳೂ, ಯೋಧರೂ ಮಡಿದರು. ಒಂದು ನರಿಯು ಆ ಯುದ್ಧರಂಗಕ್ಕೆ ಬಂದು ಆ ಹೆಣಗಳನ್ನು ನೋಡಿ ಹರ್ಷಗೊಂಡು 'ನನಗೆ ಬಹುದಿನಗಳ ಆಹಾರವು ದೊರೆಯಿತು. ಆದರೆ ಈ ಹೆಣಗಳನ್ನು ಈಗ ತಿನ್ನುವುದಿಲ್ಲ. ಈವತ್ತು ಬಿಲ್ಲಿನ ಹೆದೆಯನ್ನು ತಿನ್ನುತ್ತೇನೆ' ಎಂದು ಮನಸ್ಸಿನಲ್ಲಿ ಮಾಡಿಕೊಂಡು ಹೆದೆಯೇರಿಸಿದ್ದ ಒಂದು ಬಿಲ್ಲಿನ ಹೆದೆಯನ್ನು ಒಂದುಕಡೆ ಕಚ್ಚಿತು. ಬಿಲ್ಲಿನಕೋಲು ಆ ಕ್ಷಣವೇ ಸೇರವಾಗಿ ಹಿಂದಕ್ಕೆ ಬಡಿಯಲಾಗಿ ನರಿಯು ಅದರ ಏಟಿಗೆ ಸಿಕ್ಕಿ ಸತ್ತುಹೋಯಿತು.

* ಅತಿಲೋಭೋ ನ ಕರ್ತವ್ಯಃ ಕರ್ತವ್ಯಸ್ತು ಪ್ರಮಾಣತಃ |
ಅತಿಲೋಭಜದೋಷೇಣ ಜಂಬುಕೋ ನಿಧನಂ ಗತಃ || ೧೦೭ ||

## † ೪೬. ಅತಿಲೋಭವನ್ನು ಮಾಡಿದ ನರಿಯ ಕಥೆ

ಈ ಕಥೆಯಲ್ಲಿ—

ಷಣ್ಮಾಸಸ್ಯ ಭವೇನ್ನಾಗಃ ಸಪ್ತರಾತ್ರಸ್ಯ ಮಾನವಃ |
ಏಕರಾತ್ರಸ್ಯ ಸರ್ಪಃ ಸ್ಯಾ ದದ್ಯ ಭೋಕ್ಷ್ಯಾಮ್ಯಹಂ ಧನುಃ || ೧೦೮ ||

ಎಂಬ ಆಖ್ಯಾನ ಶ್ಲೋಕವಿದೆ.

## † ೪೭. ಇಲಿಗಳು ಕಬ್ಬಿಣವನ್ನು ತಿಂದ ಕಥೆ

ಈ ಕಥೆಯಲ್ಲಿ—

ಶಠಸ್ಯ ಗತ್ವಾ ಶಠತಾಂ ಪ್ರತೀಕಾರಂ ಶಠೋ ವ್ರಜೇತ್ |
ಆಯಸಂ ಹ್ಯಾಖುಭಿ ರ್ಭಕ್ತಂ ಬಿಡಾಲೇನ ಹೃತಃ ಸುತಃ || ೯೮ ||

ಎಂಬ ಆಖ್ಯಾನ ಶ್ಲೋಕವಿದೆ.

## ೪೮. ರಹಸ್ಯದಲ್ಲಿ ಮಾಡಿದ ಕೊಲೆಯು ಬಯಲಾಗುವುದು

ವಿಶ್ವಾವಸುವೆಂಬ ರಾಜನು ಸಿಂಧುರಾಜ್ಯದ ಒಡೆಯನಾಗಿದ್ದನು. ಅವನಿಗೆ ವಿಶ್ವಾವಸು, ಕಶ್ಮೀರ ಎಂಬ ಹೆಸರಿನ ಇಬ್ಬರು ಪುತ್ರರಿದ್ದರು. ಅವನು ಅವರಿಬ್ಬರಿಗೂ ತನ್ನ ರಾಜ್ಯದ ಅರ್ಧ ಅರ್ಧ ಭಾಗವನ್ನು ಸಮವಾಗಿ ಹಂಚಿ ಮೃತನಾದನು. ಹೀಗೆ ಇವರಿಬ್ಬರೂ ರಾಜ್ಯಭಾರ ಮಾಡುತ್ತಿದ್ದಾಗ ವಿಶ್ವಾವಸುವಿಗೆ ತಮ್ಮನ ವಿಷಯದಲ್ಲಿ ಅಸೂಯೆಯುಂಟಾಯಿತು. ಅವನು ಒಂದು ದಿವಸ ತಮ್ಮನನ್ನು ಬರಮಾಡಿಕೊಂಡು 'ಬೇಟೆಯಾಡೋಣ' ಎಂದು ಹೇಳಿ ಅವನೊಡನೆ ಕಾಡನ್ನು ಪ್ರವೇಶಿಸಿ ಅಲ್ಲಿ ನಿರ್ಜನಪ್ರದೇಶಕ್ಕೆ ತಮ್ಮನನ್ನು ಕರೆದುಕೊಂಡು ಹೋಗಿ ಅಲ್ಲಿ ಅವನನ್ನು ಕೊಂದನು. ಆಗ ಸಮೀಪದಲ್ಲಿದ್ದ ಒಂದು ಮರದ ಕೊಂಬೆಯು ಕಂಪಿಸುತ್ತಿತ್ತು. ವಿಶ್ವಾವಸುವು ಇದನ್ನು ನೋಡಿ "ಕೊಂಬೆಯು ಕಂಪಿಸುವದಕ್ಕೆ ಕಾರಣವೇನು? ಕಪಿಯು ಅಲ್ಲಾಡಿಸಿತೋ? ಅಥವಾ ಮನುಷ್ಯನೋ? ಮನುಷ್ಯನಾದರೆ ನಾನು ಮಾಡಿದ ಕೊಲೆಯನ್ನು ನೋಡಿರುವನು" ಎಂದು ಚಿಂತಾಗ್ರಸ್ತನಾದನು.

ಅವನು ತದನಂತರ ತನ್ನ ಪರಿವಾರದೊಡನೆ ಸೇರಿಕೊಂಡು 'ಕಶ್ಮೀರನು ಎಲ್ಲಿ? ಅವನು ಬರಲಿಲ್ಲವಲ್ಲ' ಎಂದು ಹೇಳಿ ಅವನನ್ನು ಹುಡುಕುವದಕ್ಕೆ ಕೆಲವು ಪುರುಷರನ್ನು ಕಳಿಸಿದನು. ಅವರು ಅಡವಿಯನ್ನು ಹುಡುಕಿ ಕಶ್ಮೀರನು ನಮಗೆ ಸಿಕ್ಕಲಿಲ್ಲವೆಂದು ಹೇಳಿದರು. ವಿಶ್ವಾವಸುವಿನ ಮನಸ್ಸನ್ನು ಮೇಲೆ ಹೇಳಿದ ಚಿಂತೆಯು ಕೊರೆಯುತ್ತಲೇ ಇತ್ತು. ಅವನು ಒಂದು ದಿನ ರಾತ್ರಿ ಗೋಪ್ಯವಾಗಿ ನಗರದಲ್ಲಿ ಸಂಚಾರಮಾಡುತ್ತಾ ಒಬ್ಬ ಬಡಗಿಯ ಮನೆಯ ಬಳಿಗೆ ಬಂದನು. ಆಗ ಆ ಬಡಗಿಯು ಪತ್ನೀವಿಯೋಗದಿಂದ ದುಃಖಿತನಾಗಿ—

ಸುವೃತ್ತೇ ಪದ್ಮಪತ್ರಾಕ್ಷಿ ಹಂಸಸಾರಸಗಾಮಿನಿ |
ಹೃದಯೇ ಮಮ ತಿಷ್ಠಂತೀ ಶಾಖಾ ವಿಶ್ವಾವಸೋರಿವ || ೯೯ ||

ಎಂಬ ಶ್ಲೋಕವನ್ನು ಹೇಳುತ್ತಿದ್ದನು. ವಿಶ್ವಾವಸುವು ಅದನ್ನು ಕೇಳಿ ಮಾರನೇ ದಿನ ಬಡಗಿಯನ್ನು ಬರಮಾಡಿಕೊಂಡು ಅವನನ್ನು ಪ್ರಶ್ನೆಮಾಡಿ ತಾನು ಮಾಡಿದ

ಕೊಲೆಯು ಬಡಗಿಯಿಂದ ನೋಡಲ್ಪಟ್ಟಿತೆಂಬುದನ್ನು ತಿಳಿದನು. ತದನಂತರ ಅವನು 'ಅಪವಾದಕ್ಕೆ ಗುರಿಯಾಗಿ ಜೀವಿಸಬಾರದು' ಎಂದು ಆತ್ಮಹತ್ಯೆಮಾಡಿ ಕೊಂಡನು.

* ಭೃತ್ಯವೈರಂ ಸಮುತ್ಪನ್ನ ಮಿತಿ ನಿಶ್ಚಿತ್ಯ ನೀಚವತ್ |
ವಿಶ್ವಾವಸು ರ್ನೃಪಃ ಸ್ವೇನ ದುಃಖೇನ ಮರಣಂ ಗತಃ || ೧೦೯ ||

## ೪೯. ಹೋತನೂ ಸಿಂಹನೂ

ಗೊಲ್ಲರ ಗುಂಪು ಒಂದು ಹೆಂಡತಿಯರೊಡನೆ ತಾವು ವಾಸಮಾಡುತ್ತಿದ್ದ ಸ್ಥಾನವನ್ನು ಬಿಟ್ಟು ಇನ್ನೊಂದು ಸ್ಥಾನಕ್ಕೆ ಹೋಗುತ್ತಿತ್ತು. ಆ ಗುಂಪು ಒಂದು ಅಡವಿಯಲ್ಲಿದ್ದಾಗ ಅವರೊಡನೆ ಇದ್ದ ಆಡಿನ ಮಂದೆಯಲ್ಲಿದ್ದ ಒಂದು ಆಡು ಶಕ್ತಿಯಿಲ್ಲದ್ದರಿಂದ ಹಿಂದೆ ಬಿದ್ದಿತು. ಗೊಲ್ಲರು ಅದನ್ನು ನೋಡಿ 'ಈ ಆಡಿಗೆ ನಮ್ಮೊಡನೆ ಬರಲು ಶಕ್ತಿಯಿಲ್ಲ; ಆದರೆ ನಾವು ಏನನ್ನೂ ಮಾಡಲು ಸಾಧ್ಯವಿಲ್ಲ'ವೆಂದು ಹೇಳಿಕೊಂಡು ಮುಂದೆ ಹೊರಟುಹೋದರು. ಆಡು ಅಡವಿಯಲ್ಲಿಯೇ ಉಳಿದು ಅಲ್ಲಿಯೇ ಹಸುರುಸೊಪ್ಪನ್ನು ತಿನ್ನುತ್ತಾ ವನಮೃಗಗಳೊಡನೆ ಸಂಚರಿಸುತ್ತಿತ್ತು. ಹೀಗೆ ಕೆಲವು ದಿನಗಳು ಕಳೆಯಲಾಗಿ ಅದರ ಮೈಮೇಲಿನ ಕೂದಲೂ ಗಡ್ಡವೂ ಬೆಳೆದು ಅದು ನೋಡುವುದಕ್ಕೆ ಭಯಂಕರವಾಗಿ ಕಾಣಿಸುತ್ತಿತ್ತು. ಒಂದು ದಿನ ಮೃಗರಾಜನ ಮಂತ್ರಿಯಾದ ತಸ್ಕರನೆಂಬ ನರಿಯು ಇದನ್ನು ನೋಡಿ 'ಇದೇನೋ ವಿಚಿತ್ರ ಪ್ರಾಣಿಯು ಇಲ್ಲಿಗೆ ಬಂದಿರುವುದು. ಹಳ್ಳಿಯಿಂದ ಬಂದಿರಬೇಕು' ಎಂದು ಯೋಚಿಸಿ ತನ್ನ ಸ್ವಾಮಿಯಾದ ಸಿಂಹನ ಬಳಿಗೆ ಹೋಗಿ 'ಎಲೈ ಸ್ವಾಮಿಯೇ ಗ್ರಾಮದ ಮೃಗವೊಂದು ಈ ಅಡವಿಗೆ ಬಂದಿದೆ, ಅದನ್ನು ಕೊಂದು ತಿನ್ನಬಹುದು' ಎಂದು ಹೇಳಿ ಸಿಂಹವನ್ನು ಹೋತನ ಬಳಿಗೆ ಕರೆದುಕೊಂಡು ಹೋಯಿತು. ಸಿಂಹವು ಬರುವದನ್ನು ಹೋತನು ನೋಡಿ 'ಈಗ ನಾನು ಬುದ್ಧಿಯನ್ನು ಉಪಯೋಗಿಸದಿದ್ದರೆ ನನಗೆ ಉಳಿಗಾಲವಿಲ್ಲ' ಎಂದು ಯೋಚಿಸಿ ತಲೆಯನ್ನು ಕೊಡಹಿತು. ಈ ವಿಚಿತ್ರ ಪ್ರಾಣಿಯನ್ನು ನೋಡಿ ಸಿಂಹವು ಬೆದರಿ 'ನೀವು ಯಾರು' ಎಂದು ಕೇಳಿತು. ಹೋತನು ಅದಕ್ಕೆ 'ಎಲೈ ದೇವತೆಗಳಲ್ಲಿ ಯಜ್ಞವೆಂದು ಹೇಳಲ್ಪಡುವದಿಲ್ಲವೇ? ಆ ಯಜ್ಞವೇ ನಾನು. ಈಗ ನಾನು ಇಂದ್ರನ ಆಜ್ಞೆಯಿಂದ ಬ್ರಾಹ್ಮಣರನ್ನು ಅನುಗ್ರಹಿಸುವದಕ್ಕಾಗಿ ಭೂಲೋಕಕ್ಕೆ ಬಂದಿದ್ದೇನೆ. ಸಿಂಹ, ಗಜ, ಮಹಿಷ, ವರಾಹ ಮೊದಲಾದ ಪ್ರಾಣಿಗಳನ್ನು ತಿನ್ನುತ್ತಾ ಇಲ್ಲಿ ಇದೇನೆ. ಈವರೆಗೆ ನೂರು ಹುಲಿಗಳನ್ನೂ ಐದು ಸಿಂಹಗಳನ್ನೂ ಮೂರು ಆನೆಗಳನ್ನೂ ಕೊಂದಿದ್ದೇನೆ. ಇನ್ನೊಂದು ಸಿಂಹವನ್ನು ನೋಡುವವರೆಗೆ ಈ

ಬೆಳೆದ ಕೂದಲೆಲ್ಲಾ ಹೀಗೆಯೇ ಇರುವದು' ಎಂದು ಹೇಳಿತು. ಸಿಂಹವು ಇದನ್ನು ಕೇಳಿ ಭಯಗೊಂಡು ಉಪಾಯದಿಂದ ಓಡಿಹೋಯಿತು.

ಈ ಕಥೆಯಲ್ಲಿ—

ಹತಾ ಮಯಾ ಶತಂ ವ್ಯಾಘ್ರಾಃ ಪಂಚ ಸಿಂಹಾ ಸ್ತ್ರಯೋ ಗಜಾಃ |
ಏಕಸಿಂಹ ಮದ್ಯಪ್ರಾಪ್ಯದ್ಯ ಸ್ವಕೇಶಂ ಧಾರಯಾಮ್ಯಹಂ || ೧೧೦ ||

ಎಂಬ ಆಖ್ಯಾನ ಶ್ಲೋಕವಿದೆ.

## † ೫೦. ಬ್ರಾಹ್ಮಣನೂ ಏಡಿಯೂ ಹಾವೂ ಕಾಗೆಯೂ

* ಏಕಪುಂಸಾ ನ ಗಂತವ್ಯಂ ಕಾಕಸರ್ಪಸ್ಯ ಕಾರಣಾತ್ |
ಕರ್ಕಟಸ್ಯ ಪ್ರಸಾದೇನ ಬ್ರಾಹ್ಮಣೋ ಜೀವಿತೋ ಯಥಾ || ೧೧೧ ||

೧. ಮೇಲೆ ಕೊಟ್ಟಿರುವ ಪಟ್ಟಿಕೆಯನ್ನು ಪರಿಕಿಸಿದರೆ ನಮ್ಮ ಗಮನವನ್ನು ಮೊದಲು ಸೆಳೆಯುವ ವಿಷಯವಾವುದೆಂದರೆ, ತಂತ್ರೋಂಗೂ ಲೇಯಾಸ್ ದೇಶದ ತಂತ್ರೈಗೂ ಇರುವ ಸಾದೃಶ್ಯ. ಮೂರು ಪ್ರಕರಣಗಳ ಮುಖ ಕಥೆಗಳನ್ನೂ ಸೇರಿಸಿ ಕೊಂಡರೆ ತಂತ್ರೋಂದಲ್ಲಿ ಒಟ್ಟು ೫೦ ಕಥೆಗಳಿರುವವು. ಇವುಗಳಲ್ಲಿ ನಾಲ್ಕನ್ನು ಬಿಟ್ಟರೆ ಉಳಿದವೆಲ್ಲಾ ತಂತ್ರೈಯಲ್ಲೂ ದೊರೆಯುವವು. ಅಷ್ಟೇ ಅಲ್ಲ ; ತಂತ್ರೋಂದಲ್ಲೂ ತಂತ್ರೈನಲ್ಲೂ ಮೊದಲನೇದಾದ ನಂದಕ ಪ್ರಕರಣದಲ್ಲಿ ಅದೇ ಮುಖಕಥೆಯೂ ಅದೇ ೨೦ ಕಥೆಗಳು—ಹೆಚ್ಚೂ ಇಲ್ಲ ಕಡಿಮೆಯೂ ಇಲ್ಲ—ಅದೇ[1] ಕ್ರಮದಲ್ಲಿ ಹೇಳಲ್ಪಟ್ಟಿರುವವು. ಪಕ್ಷಿಪ್ರಕರಣದಲ್ಲಿಯೂ ಕೂಡ (ಇದು ತಂತ್ರೈನಲ್ಲಿ ೪ ನೇ ಪ್ರಕರಣ) ಮುಖಕಥೆಯೂ ಮತ್ತು ಮೊದಲು ೧೨ ಕಥೆಗಳೂ ಅದೇ ಕ್ರಮದಲ್ಲಿ ತಂತ್ರೋಂದಲ್ಲಿಯೂ ತಂತ್ರೈನಲ್ಲಿಯೂ[2] ಹೇಳಲ್ಪಟ್ಟಿರುವವು.

---

[1] ಕಥೆಗಳಲ್ಲಿನ ವಿವರಗಳಲ್ಲಾದರೆ ತಂತ್ರೈಗೂ ತಂತ್ರೋಂಗೂ ಬಹಳಕಡೆ ವ್ಯತ್ಯಾಸಗಳಿರುವವು.

[2] ನಾವು ಮೇಲೆ ಹೇಳಿರುವಂತೆ ಡಾ|| ಫಿನೋ ಅವರು ತಂತ್ರೈಯಿನ ಸಾರವನ್ನು ಮಾತ್ರ ಕೊಟ್ಟಿರುತ್ತಾರೆ. ಇದು ಬಹಳ ಸಂಕ್ಷೇಪವಾಗಿರುವದು. ಆದ್ದರಿಂದ ತಂತ್ರೋಂವಿನ ೨೩ ನೇ ಕಥೆಯು ಅವರ ಸಾರದಲ್ಲಿ ಪ್ರಕರಣದ ಮುಖಕಥೆಯಲ್ಲಿ ಸೇರಿಹೋಗಿರುವದು. ೨೯ ನೇ ಕಥೆಗೆ ಸಂವಾದಿಯಾದ ಕಥೆಯು ಅವರ ಸಾರದಲ್ಲಿ ದೊರೆಯುವುದಿಲ್ಲ ; ಆದರೂ ಅದು ತಂತ್ರೈಯಲ್ಲಿ ಹೇಳಲ್ಪಟ್ಟದೆಯೆಂದೂ ಫಿನೊ ಅವರು ಅದು ಒಂದು ಪ್ರತ್ಯೇಕವಾದ ಕಥೆಯೆಂದು ತಿಳಿಯದೆ ಬಿಟ್ಟುಬಿಟ್ಟದ್ದಾರೆಂದೂ ನಾನು ಊಹಿಸುತ್ತೇನೆ.

ಆದ್ದರಿಂದ ಈ ಸಾದೃಶ್ಯವನ್ನು ನೋಡಿದರೆ ತಂತ್ರೈಯಿನ ಆಕರಕ್ಕೂ ತಂತ್ರೋಪಾಖ್ಯಾನಕ್ಕೂ ಅತ್ಯಂತ ನಿಕಟವಾದ ಸಂಬಂಧವಿದೆಯೆಂದು ಸ್ಪಷ್ಟವಾಗುವದು. ತಂತ್ರೋಪಾಖ್ಯಾನದ ಮುದ್ರಿತವಾದ (ಅಸಮಗ್ರ) ಪುಸ್ತಕದ ಆಧಾರದ ಮೇಲೆ ನಾವು ಯಾವ ವಿಧವಾದ ಖಚಿತವಾದ ನಿರ್ಣಯವನ್ನು ಮಾಡುವದಕ್ಕಾಗುವದಿಲ್ಲವಾದರೂ ತಂತ್ರೈಯಿನ ಆಕರವು ತಂತ್ರೋಪಾಖ್ಯಾನವೇ ಇರಬಹುದೆಂದು ನಾವು ಸದ್ಯ ಊಹಿಸುವದರಲ್ಲಿ ತಪ್ಪೇನೂ ಇರಲಾರದೆಂದು ತೋರುತ್ತದೆ. ತಂತ್ರೈಯಂತೆ ನಂದಕ ಪ್ರಕರಣವೇ ಮೊದಲಾದ ನಾಲ್ಕು ಪ್ರಕರಣಗಳನ್ನು ಒಳಗೊಂಡಿರುವ ಪಂಚತಂತ್ರ ಸಾರರೂಪವಾದ ಸಂಸ್ಕೃತ ಗ್ರಂಥವು ನಮಗೆ ತಿಳಿದಿರುವಂತೆ ತಂತ್ರೋಪಾಖ್ಯಾನವೊಂದೇ ಎಂಬುದನ್ನು ನಾವು ಈ ಸಂದರ್ಭದಲ್ಲಿ ನೆನಪಿಸಲ್ಲಿಟ್ಟಿರಬೇಕು.

ಪಂಚತಂತ್ರ ಕಥೆಗಳ ಸಾರವನ್ನು ಒಳಗೊಂಡಿರುವ ಹಿತೋಪದೇಶವೆಂಬ ಸಂಸ್ಕೃತ ಗ್ರಂಥವೊಂದಿರುವದು. ಇದು ನಾರಾಯಣ ಎಂಬವನಿಂದ ಬರೆಯಲ್ಪಟ್ಟದ್ದು; ಇದರಲ್ಲಿಯೂ ನಾಲ್ಕು ಭಾಗಗಳಿರುವವು; ಆದರೆ ಈ ಭಾಗಗಳಿಗೆ ಪ್ರಕರಣ ಎಂದಲ್ಲ, ಕಥಾಸಂಗ್ರಹ ಎಂದು ಹೆಸರು. ಈ ಹಿತೋಪದೇಶದಲ್ಲಿ ನಾಲ್ಕು ಕಥಾಸಂಗ್ರಹಗಳ ಮುಖಕಥೆಗಳನ್ನು ಸೇರಿಸಿ ಒಟ್ಟು ೪೩ ಕಥೆಗಳು ಇರುವವು. ಇವುಗಳಲ್ಲಿ ಹದಿಮೂರು ಕಥೆಗಳಿಗೆ ಮಾತ್ರ ತಂತ್ರೈಯಲ್ಲಿ ಸಂವಾದಿಯಾದ ಕಥೆಗಳು ದೊರೆಯುವವು. ತಂತ್ರೈಯಲ್ಲಿರುವ ಉಳಿದ ೫೮ ಕಥೆಗಳಿಗೂ ಹಿತೋಪದೇಶದ ಇತರ ಕಥೆಗಳಿಗೂ ಯಾವ ಸಂಬಂಧವೂ ಇಲ್ಲ. ಆದ್ದರಿಂದ ಹಿತೋಪದೇಶವು ತಂತ್ರೈಯಿನ ಆಕರವಾಗಿರಲಾರದು. ಅಲ್ಲದೆ 'ಪಂಚತಂತ್ರದಿಂದಲೂ ಇನ್ನೊಂದು ಗ್ರಂಥದಿಂದಲೂ ಆಯ್ದು ಮಿತ್ರಲಾಭ ಸುಹೃದ್ಭೇದ ಸಂಧಿ ಮತ್ತು ವಿಗ್ರಹವು ಹೇಳಲ್ಪಡುತ್ತದೆ' ಎಂದು ನಾರಾಯಣನು ಉಪೋದ್ಘಾತದಲ್ಲಿ ಹೇಳಿ ಪ್ರಸ್ತಾವಿಕೆಯಲ್ಲಿ 'ರಾಜಕುಮಾರರಿಗೆ ಕಥೆಗಳು ವಿಷ್ಣುಶರ್ಮನಿಂದ ಹೇಳಲ್ಪಟ್ಟವು' ಎಂದು ಹೇಳಿದ್ದಾನೆ. ತಂತ್ರೈಯಲ್ಲಿಯೂ ತಂತ್ರಿಯಲ್ಲಿಯೂ ನಾವು ಮೇಲೆ ಹೇಳಿದಂತೆ ವಸುಭಾಗನ ಹೆಸರು ಹೇಳಲ್ಪಟ್ಟಿರುವದರಿಂದ ಈ ಪಂಚತಂತ್ರದ ಪರಿವರ್ತನೆಗಳಿಗೆ ಹಿತೋಪದೇಶವು ಮೂಲವಲ್ಲವೆಂಬುದು ಇದರಿಂದಲೂ ಸ್ಥಿರಪಡುವದು.

೨. ಮುದ್ರಿತವಾದ ತಂತ್ರೋಪಾಖ್ಯಾನದಲ್ಲಿ ೧೧೧ ಶ್ಲೋಕಗಳಿರುವವು. ಇವುಗಳೆಲ್ಲವನ್ನು ನಾವು ಮೇಲೆ ಉದ್ಧರಿಸಿ ಬರೆದಿರುವೆವು. ಇವುಗಳಲ್ಲಿ ೫೭ ಶ್ಲೋಕಗಳು ಕಥಾಸಂಗ್ರಹ ಶ್ಲೋಕಗಳು. ಎಂದರೆ ಕಥೆಗಳ ವಸ್ತುವನ್ನು ಸಂಕ್ಷೇಪವಾಗಿ ಹೇಳುವವು. ಇನ್ನೂ ಎರಡು ಶ್ಲೋಕಗಳು (೬೦, ೬೧ ನೆಯದು) ಇದೇ ಜಾತಿಗೆ ಸೇರಿದವೆಂದು ತೋರುತ್ತದೆ. ಪಕ್ಷಿಪ್ರಕರಣದ ಆದಿಯಲ್ಲಿ ಒಂದು ಮಂಗಳ

ಶ್ಲೋಕವೂ ಗ್ರಂಥಾರಂಭದಲ್ಲಿ ಒಂದು ಮಂಗಳಶ್ಲೋಕವೂ ಮತ್ತು ೫ ಉಪೋದ್ಘಾತ ಶ್ಲೋಕಗಳೂ ಇರುವವು. ಉಳಿದ ೪೬ ಶ್ಲೋಕಗಳು ಆಖ್ಯಾನ ಶ್ಲೋಕಗಳು ಎಂದರೆ ಕಥೆಯ ಮಧ್ಯದಲ್ಲಿ ಹೇಳಲ್ಪಟ್ಟಿರುವ ಶ್ಲೋಕಗಳು. ಇವುಗಳೆಲ್ಲವೂ ಆಯಾ ಕಥೆಗಳಲ್ಲಿನ ಯಾವುದೋ ಪಾತ್ರದಿಂದ ಹೇಳಲ್ಪಟ್ಟಿರುವುವು. ಕಥಾಸಂಗ್ರಹ ಶ್ಲೋಕಗಳ ಸಂಬಂಧದಲ್ಲಾದರೆ ಕವಿಯು 'ವಸುಭಾಗಃ ಶ್ಲೋಕಮವೋಚತ್ (ವಸುಭಾಗನು ಶ್ಲೋಕವನ್ನು ಹೇಳಿದನು)' ಎಂದು ಹೇಳಿದ್ದಾನೆ. ಅವನು ಹೀಗೆ ಹೇಳದೆ ಇದ್ದಿದ್ದರೆ ಈ ಶ್ಲೋಕಗಳೆಲ್ಲವೂ ಕವಿಯಿಂದ (ಎಂದರೆ ತಂತ್ರೋಪಾಖ್ಯಾನದ ಕರ್ತೃವಿನಿಂದ) ಹೇಳಲ್ಪಟ್ಟವೆಂದು ಎಂದರೆ ಕವಿಯಿಂದ ರಚಿಸಲ್ಪಟ್ಟವೆಂದು, ಓದುಗರು ಭಾವಿಸಲು ಅವಕಾಶವಿರುತ್ತಿತ್ತು. ಕವಿಯು ಈ ವಾಕ್ಯವನ್ನು ಹೇಳಿರುವದರಿಂದ ಈ ೫೬ ಶ್ಲೋಕಗಳನ್ನು ಕವಿಯು ವಸುಭಾಗನ ಗ್ರಂಥದಿಂದ ಉದ್ಧರಿಸಿ ಇಲ್ಲಿ ಬರೆದಿದ್ದಾನೆಂದು ಓದುಗರು ಚೆನ್ನಾಗಿ ತಿಳಿದುಕೊಳ್ಳಬಲ್ಲರು.

ಕಥಾಸಂಗ್ರಹ ಶ್ಲೋಕಗಳಂತೆ ಪಂಚತಂತ್ರ ಕಥೆಗಳಲ್ಲಿ ಬರುವ ಆಖ್ಯಾನ ಶ್ಲೋಕಗಳೂ ಕೂಡ ವಸುಭಾಗನಿಂದ ರಚಿತವಾಗಿವೆಯಷ್ಟೆ. ಇಂತಹ ಶ್ಲೋಕಗಳ ಹಿಂದೆ ತಂತ್ರೋಪಾಖ್ಯಾನದಲ್ಲಿ 'ಶ್ಲೋಕವನ್ನು ವಸುಭಾಗನು ಹೇಳಿದನು' ಎಂದು ಹೇಳಲ್ಪಟ್ಟಿಲ್ಲವಾದ್ದರಿಂದ ಓದುಗರು ಈ ಶ್ಲೋಕಗಳನ್ನು ತಂತ್ರೋಪಾಖ್ಯಾನದ ಕವಿಯೇ ರಚಿಸಿದ್ದಾನೆಂದು ತಿಳಿಯುವರಲ್ಲಾ ಎಂದು ಆಕ್ಷೇಪಣೆ ಮಾಡಲ್ಪಡಬಹುದು. ಇಂತಹ ಆಕ್ಷೇಪಣೆಯು ನ್ಯಾಯವಾಗಿಯೇ ಇದೆ. ಆದರೆ 'ಮಾತಾಪ್ಯೇಕೋ ಪಿತಾಪ್ಯೇಕೋ ಮಮತಸ್ಯ ಚ ಪಕ್ಷಿಣಃ (ನನಗೂ ಆ ಪಕ್ಷಿಗೂ ಒಂದೇ ತಂದೆಯು ಒಬ್ಬಳೇ ತಾಯಿಯು) ಎಂಬ (೩ ನೇ ಕಥೆಯಲ್ಲಿರುವ) ಆಖ್ಯಾನ ಶ್ಲೋಕದ ಹಿಂದೆ ಈ ಶ್ಲೋಕವನ್ನು ವಸುಭಾಗನು ಹೇಳಿದನು' ಎಂದು ಹೇಳುವದಕ್ಕೆ ಸಾಧ್ಯವಿಲ್ಲವಾದ್ದರಿಂದ ಕವಿಯು ಇಂತಹ ಶ್ಲೋಕಗಳ ಹಿಂದೆ ಆ ಮಾತನ್ನು ಹೇಳಿಲ್ಲ. ಇಂಥ ಸಂದರ್ಭಗಳಲ್ಲಿ ಓದುಗರಿಗೆ ತಪ್ಪು ತಿಳಿವಳಿಕೆ ಉಂಟಾಗದಂತೆ ಮಾಡಲು ಕವಿಗೆ ಸಾಧ್ಯವಿಲ್ಲ.

'ವಸುಭಾಗಃ ಶ್ಲೋಕ ಮವೋಚತ್' ಎಂಬ ವಾಕ್ಯವು ತಂತ್ರೋಪಾಖ್ಯಾನದಲ್ಲಿ ೩೭ (೩೮) ಕಥೆಗಳ ಅಂತ್ಯದಲ್ಲಿ ಹೇಳಲ್ಪಟ್ಟಿರುವದು.[1] 'ಶ್ಲೋಕ' ಎಂದು ಏಕವಚನವನ್ನು ಕವಿಯು ಉಪಯೋಗಿಸಿದ್ದಾಗ್ಯೂ, ಈ ಪದವು ೧೪,೨೩,೩೫,೩೬

[1] ೯ ನೇ ಕಥೆಯಲ್ಲಿ ಈ ವಾಕ್ಯವು ಎರಡು ಸಲ ಬರುವದು. ಕವಿಯು (ಅಥವಾ ತಂತ್ರೋ° ವಿನ ಆಕರವಾದ ಪಂಚತಂತ್ರದ ಕರ್ತೃವು) ಅದನ್ನು ಎರಡು ಕಥೆಗಳೆಂದು ಭಾವಿಸಿದ್ದನೆಂದು ತೋರುತ್ತದೆ.

ಮತ್ತು ೪೦ ನೇ ಕಥೆಗಳಲ್ಲಿರುವ ಕಥಾಸಂಗ್ರಹ ಶ್ಲೋಕಗಳಿಗೂ, ೩೮ ನೇ ಕಥೆಯಲ್ಲಿರುವ ೩ ಕಥಾಸಂಗ್ರಹ ಶ್ಲೋಕಗಳಿಗೂ, ೧ ನೇ ಮತ್ತು ೩೪ ನೇ ಕಥೆಗಳಲ್ಲಿರುವ ೪ ಕಥಾಸಂಗ್ರಹ ಶ್ಲೋಕಗಳಿಗೂ ಅನ್ವಯಿಸುವಂತೆ ತೋರುವುದು.

ಮೇಲ್ಕಂಡ ವಾಕ್ಯದ ಹಿಂದೆ ಕವಿಯು ಇದನ್ನು ನೋಡಿದನಂತರ 'ತಂದೃಷ್ಟ್ವಾ' ಎಂಬ ಅರ್ಥವನ್ನು ಬೋಧಿಸುವ 'ಏತದ್ದೃಷ್ಟ್ವಾ' 'ಸನ್ನಿರೀಕ್ಷ್ಯ' ಎಂದು ಮೊದಲಾದ ಪದಗಳನ್ನು ಉಪಯೋಗಿಸಿದ್ದಾನೆ. 'ಇದನ್ನು ನೋಡಿದ ನಂತರ' ಎಂದರೆ 'ಈ ಸಂದರ್ಭವನ್ನು ನೋಡಿ, ಈ ಸಂದರ್ಭದಲ್ಲಿ' ಎಂದು ಅರ್ಥಮಾಡಬೇಕೆಂದು ತೋರುತ್ತದೆ. ಆದರೂ ಇಂತಹ ಪದಗಳನ್ನು ಕವಿಯು ಉಪಯೋಗಿಸಿರುವದು ವಿಚಿತ್ರವೆಂದೇ ನಮಗೆ ತೋರುವದು.

೩. ಏಳು ಕಥೆಗಳ ಸಂಬಂಧದಲ್ಲಿ ಕವಿಯು ಮೇಲೆ ಹೇಳಿದಂತೆ ಒಂದಕ್ಕಿಂತ ಹೆಚ್ಚಾದ ಕಥಾಸಂಗ್ರಹ ಶ್ಲೋಕಗಳನ್ನು ನೋಡಿ ಅವುಗಳಲ್ಲಿದ್ದ ಕಥಾಸಂಗ್ರಹ ಶ್ಲೋಕಗಳನ್ನು ತನ್ನ ಗ್ರಂಥದಲ್ಲಿ ಸೇರಿಸಿದನೆಂದು ತೋರುತ್ತದೆ. ಹೀಗೆ ಅವನು ಮಾಡಿರುವದರಿಂದ ೩೮ ನೇ ಕಥೆಯಲ್ಲಿ ಕಥೆಗೂ ಕಥಾಸಂಗ್ರಹ ಶ್ಲೋಕಕ್ಕೂ ವಿರೋಧ ಬರುವದಕ್ಕೆ ಅವಕಾಶವಾಯಿತು. ಕಥೆಯಲ್ಲಿ 'ಗಂಗಾ ಯಮುನಾ ನದಿಗಳ ಮಧ್ಯದಲ್ಲಿ ಪ್ರತಿಷ್ಠಾನವೆಂಬ ನಗರವಿತ್ತು' ಎಂದು ಹೇಳಲ್ಪಟ್ಟಿರುವದು; ಈ ಕಥೆಯ ಎರಡನೇ ಸಂಗ್ರಹ ಶ್ಲೋಕದಲ್ಲಾದರೆ 'ನಾಶಂ ಪ್ರಯಾಂತಿ ಸಹಸಾ ಲಾಟ ನಾಗರಿಕಾಯಥಾ' ಎಂದು ಲಾಟದೇಶದ ಪಟ್ಟಣವಾಸಿಗಳ ಪ್ರಸ್ತಾಪವಿರುವದು. ಲಾಟದೇಶವು ಗಂಗಾ ಯಮುನಾ ನದಿಗಳ ಮಧ್ಯದಲ್ಲಿಲ್ಲವೆಂಬುದು ಪ್ರಾಯಃ ಎಲ್ಲರಿಗೂ ತಿಳಿದ ವಿಷಯ.

ಹೀಗೆಯೇ ೪೮ ನೇ ಕಥೆಯ ಸಂಬಂಧದಲ್ಲಿ ಸಂಗ್ರಹ ಶ್ಲೋಕವೊಂದೇ ಇದ್ದಾಗ್ಯೂ ಶ್ಲೋಕಕ್ಕೂ ಕಥೆಗೂ ವಿರೋಧವಿರುವದು. ಸಂಗ್ರಹ ಶ್ಲೋಕದಲ್ಲಿ (ಭೃತ್ಯವೈರಂ ಸಮುತ್ಪನ್ನ ಮಿತಿ ನಿಶ್ಚಿತ್ಯನೀಚವತ್) ಭೃತ್ಯವೈರದ ಪ್ರಸ್ತಾಪವಿರುವದು; ಕಥೆಯಲ್ಲಿ ವೈರದ ಪ್ರಸ್ತಾಪವನೇ ಇಲ್ಲ.[1]

೪. ಪಂಚತಂತ್ರದ ಅನುವಾದಗಳೂ ಪರಿವರ್ತನಗಳೂ ಪ್ರಪಂಚದ ನಾನಾ ಭಾಷೆಗಳಲ್ಲಿ ನಾನಾ ದೇಶಗಳಲ್ಲಿ ದೊರೆಯುತ್ತವೆಂದು ನಾನು ಹಿಂದೆಯೇ ಹೇಳಿದ್ದೇನೆ. ಇವುಗಳಲ್ಲಿ ಭರತಖಂಡಕ್ಕೆ ಪಶ್ಚಿಮದಲ್ಲಿರುವ ಪಾರಸಿಸ್ಥಾನ, ಅರಬ್ಬೀಸ್ಥಾನ, ಜರ್ಮನಿ, ಇಟಲಿ ಮೊದಲಾದ ದೇಶಗಳಲ್ಲಿ ದೊರೆಯುವ ಪಂಚತಂತ್ರದ ಅನುವಾದ

[1] ಹೀಗೆ ಕವಿಯು ಉಪಯೋಗಿಸಿದ ಪಂಚತಂತ್ರ ಗ್ರಂಥಗಳಲ್ಲಿ ದುರ್ಗಸಿಂಹನ ಕನ್ನಡ ಪಂಚತಂತ್ರಕ್ಕೆ ಮೂಲಭೂತವಾದ ಸಂಸ್ಕೃತ ಪಂಚತಂತ್ರವೊಂದಾಗಿದ್ದರೂ ಆಗಿರಬಹುದು.

ಗಳಿಗೆ ಕ್ರಿ. ಶ. ೬ ನೇ ಶತಮಾನದಲ್ಲಿ ಪಾಲವಿ ಭಾಷೆಯಲ್ಲಿ ಬರೆಯಲ್ಪಟ್ಟ ಅನುವಾದವೇ ಮೂಲವು. ಮೇಲೆ ನಾವು ಮಾಡಿರುವ ಊಹೆಯು ಸರಿಯಾಗಿದ್ದಲ್ಲಿ ಭರತಖಂಡದ ಪೂರ್ವದಲ್ಲಿರುವ ತಾಯಿದೇಶ, ಲೇಯಾಸ್‌ದೇಶ, ಯವದ್ವೀಪ, ಬಲಿದ್ವೀಪ, ಮೊದಲಾದ ಪ್ರದೇಶಗಳಲ್ಲಿ ದೊರೆಯುವ ಪಂಚತಂತ್ರದ ಅನುವಾದಗಳಿಗೆ ತಂತ್ರೋಪಾಖ್ಯಾನವೇ ಮೂಲವು. ಈ ಎರಡು ಮೂಲಗಳಲ್ಲಿ ಪಾಲವಿ ಅನುವಾದವು ಬಹು ಕಾಲದ ಹಿಂದೆಯೇ ನಷ್ಟವಾಯಿತು. ತಂತ್ರೋಪಾಖ್ಯಾನದಲ್ಲಾದರೆ ಒಂದು ಪ್ರಕರಣವು ಈಗ ದೊರೆಯದಿದ್ದಾಗ್ಯೂ ಉಳಿದ ಮೂರು ಪ್ರಕರಣಗಳು ದೊರೆತಿರುವದಕ್ಕೆ ನಾವು ಸಂತೋಷಪಡಬೇಕಾಗಿದೆ.

ಅ. ವೆಂಕಟಸುಬ್ಬಯ್ಯ

## ಜೀರ್ಣೋದ್ಧಾರ

೧

ಹೊರಗೆ ಭಾರೀ ಥಂಡಿ
ನೆಲದ ಮೇಲಿದ್ದುದೆಲ್ಲವ ದುಂಡುಸುತ್ತಿ ಮೇಲೆತ್ತಿ
ಎಲ್ಲಿಗೋ ಒಯ್ದು ಒಗೆಯುತ್ತಿಹುದು ಗಾಳಿ!
ಗುಡ್ಡದೋವರಿಯಿಂದ ಸಂದಿಗೊಂದಿಗಳಿಂದ
ಒಮ್ಮೆಲೇ ಇದರ ದಾಳಿ.
(ಕಂಡ ಕಂಡವರ ಬಾಚಿ ತಬ್ಬಿಕೊಳ್ಳುವದಿದರ ಕೆಟ್ಟಚಾಳಿ)
ಶ್ರಾವಣದ ಹಸಿರು ರೇಶಿಮೆ ನೆನೆದು ನೆಲದ ಮೈಗಂಟಿಹುದು
ಸಿರಸಲದ ಹೂವಿನರಿಶಿಣವ ತೊಡೆದು
ಮಳೆಯು ಚಾಲರಿ ಹಿಡಿದು ಮುಂದೆ ಸಾಗಿವೆ ಮೋಡ
ಆಗಾಗ ಹೂ ಬಿಸಿಲ ಮುಗುಳುನಗೆ ತಳೆದು—

ಆದರೀಗಾಳಿ ರೋಮರೋಮವ ಕಿತ್ತು ತೆಗೆಯುತಿದೆ
ಎಲ್ಲೊ ಎಂದೊ ಉದುರಿಹೋದ ಎಲೆಗಳನೆತ್ತಿ
ಬುಗುರಿಯಾಡಿಸಿ ಮೇಲೆ ಆಕಾಶಕೊಯ್ದು
ಬೇಕು ಬೇಕಾದತ್ತ ಬೀಸಾಡಿದೆ!

ಮೈಮೇಲೆ ಎಚ್ಚರಿಲ್ಲದೆ ಅಲೆವ ಈ ಮದ್ದಾನೆಗೊಂದಲ್ಲ ಸಾವಿರ ಸೊಂಡಿಲು!
ದೂರ್ವಾಸ ಮುನಿಯು ಹೂವಿನ ಹಾರ ನೆಲಕೊಗೆದು ತಿಕ್ಕಿದ್ದೈರಾವತಕು ಮಿಗಿಲು;
ಮೇಲೆ ಕುಳಿತವನಿಂದ್ರನೊ ಚಂದ್ರನೊ
ಕೊಟ್ಟ ಶಾಪವು ಅವನಿಗೇ ತಟ್ಟುತಿರಲು—
ಅದೊ ಬಂತು ಮೊರಗಿವಿಯ ಝಾಡಿಸಿ, ನೆಲದ
ಮಣ್ಣು ಮೇಲಕೆ ತೂರಿ, ಕಾಲೊಳಗೆ ಸಿಕ್ಕದ್ದೆಲ್ಲ ಕಚಪಚ ತುಳಿದು
ಭೂಮಿಯಾಕಾಶ ಒಂದು ಮಾಡಿ—

ಸಾಧುಗೊಳಿಸಿದ ಮಾವುತನೆ ಕಂಗಾಲಾಗಿ ಕುಳಿತಿದ್ದಾನೆ
ಉಳಿದವರಿಗೆಲ್ಲಿಯದು ಜೀವದಾನ?

ಕಿಟಕಿ ಮುಚ್ಚಿ, ಬಾಗಿಲು ಹಾಕಿ, ಅಗಳಿ ಜಡಿದು ಬಿಡು
ನಿಶ್ಚಿಂತೆ; ಹೊರಗಿನ ಪೀಡೆ ಹೊರಗೇ ಇರಲಿ
ಅದರುಸಾಬರಿ ಬೇಡ, ತಿಳಿಯಿತೆ?

೨

ಈ ಕಣ್ಣು ಕಾಣುವ ಜಗದ ಸೊಗದ ಸೋಟ
ಈ ದಿನದ ಈ ಹೊತ್ತಿನ ಈ ಗಳಿಗೆಯ ಸಂಪುಟ—
ಒಳಗೆ ಕನ್ನಡಿಸಿ ತೆರೆದಿದೆ ನೂರು ಪದರುಗಳ ಮನೋಮಂದಿರದ
ಸುಂದರ ಕವಾಟ!
ಬಣ್ಣ ಬಣ್ಣದ ಗೋಲ ಬಣ್ಣ ಬಣ್ಣದ ಛಾಯೆ
ಒಂದೊಂದೂ ಪ್ರಸ್ಫುಟ.
ಒಡೆದ ಗಾಜಿನ ಬಳೆಯ ತುಂಡುಗಳ ಶೇಖರಿಸಿ
ಚಿತ್ರದಲಿ ಬಿಡಿಸಿಟ್ಟು ಕಂಡ ಮಾಟ.
ಕಣ್ಣೆದುರು ಬೀಳದೆಯೆ ಕಿವಿಗೆ ಕೇಳಿಸುತಿಹುದು
ಕೇಳಿದಂತೆಯೆ ಕಣ್ಣು ಕಾಣುತಿಹುದು;
ಈ ದೃಶ್ಯದಾಚೆಗಿನ ಬೇರೆ ದೃಶ್ಯದ ಪರದೆ
ರಂಗಭೂಮಿಯ ಮೇಲೆ ಜಾರುತಿಹುದು.

ಹನಿ ಹನಿಯಿಂದ ಹೊಡೆದು ಕವಣೆಗಲ್ಲನು ಹಿಡಿದು
ನುಗ್ಗು ನುಗ್ಗಾಗಿಸುವ ಕಾರೊಡಲ ಮೇಘ
ಹಳ್ಳ ಹೊಳೆ ಹುಚ್ಚೆದ್ದು ಹರಿದು, ಸೇತುವೆ ಮುರಿದು
ಊರುಕೇರಿಯ ಹೊಕ್ಕು ನೀರಿನೋಘ
ಅತ್ತ ದನಕರು ಇತ್ತ ಮನೆಮಾರು ತೆಪ್ಪತೇಲಿ
ನೀರು ಕಾಯ್ದಿದೆ ತನ್ನ ಸಮಪಾತಳಿ.

ಒಮ್ಮೊಮ್ಮೆ ಮೈಯಲ್ಲಿ ದೆವ್ವ ಹೊಕ್ಕಂತೆ ಭೂಕಂಪ
ಆಕಾಶ ಗಾಳಿಯಪಟ,
ಬಸಿರು ಬಸಿರೇ ಬಿರಿದು ಬಕ್ಕರಿಸುವದು
ಕಣ್ಣು ಕೆಕ್ಕರಿಸುವದು—ಸೌರಬಿಂಬದಲಿ ಸ್ಫೋಟ!
Things fall apart

The centre cannot hold
“ ತಾಸಿಗಿಪ್ಪತ್ತು ಅಪಘಾತ ಆಕಾಶದಲ್ಲಿ ನೆಲದಲ್ಲಿ ಪಾತಾಳದಲ್ಲಿ ”
ಹತ್ತು ದಿಕ್ಕಿಗು ಸಂಪು ಒತ್ತಿ ಮಾತಾಡಿದರೆ ರಂಪು
ಕೂಟು ಕೂಟಿಗೆ ಜನದ ಗುಂಪು, ಕೋಲಾಹಲ
ಕಲ್ಲು, ಲಾಠಿ, ಲೂಟಿ, ಸೋಡಾಬಾಟ್ಲಿ, ಅಶ್ರುವಾಯು ಪ್ರಯೋಗ
ಕೊನೆಗೆ ಗುಂಡಿನೇಟು !
ಸದಾ ತೆರೆದಿಹುದು ಆಸ್ಪತ್ರೆಗೇಟು.

ಮಹಾಸಾಗರದಿ ಗಂಭೀರವಾಗಿ ಸಾಗಿದ ಹಡಗು ಹೀಗೇಕೆ ಹೊಯ್ದಾಡಿದೆ ?
ಅಂತರಿಕ್ಷದಲಿ ತೂಗಿ ತಾಕಲಾಡಿವೆ ದೀಪ
ಬೆಳಕಿನ ಪೊಟ್ಟೆಯೊಡೆದು ಕತ್ತಲೆ ಬರುವದುಂಟೆ, ಪಾಪ
ಕಿವಿಯಲ್ಲಿ ಗಾಳಿದುಂಬಿದ ಕರುವಿನಂತೆ ಸದಾ ಜಿಗಿದಾಡುತಿರುವ ಇದಕೆ
ಇದ್ದಕಿದ್ದಂತೆ ಎಲ್ಲಿಂದ ಬಂತು ಲಂಗರು ಬಿಚ್ಚಿ ನೀರತಳಕಿಳಿವ ಬಯಕೆ !
ದಿಗಂತವನೆ ವ್ಯಾಪಿಸಿ ನಿಂತ ಕ್ಷುಬ್ಧ ಸಾಗರದ ಮಧ್ಯದಲಿ
ಎದ್ದು ನಿಂತಿದೆ ಮುಗಿಲವರೆಗೆ ವಿಷಧೂಮ-ವಿಜಯಸ್ತಂಭ
ಮೆದುಳಿನ ಮೇಲೆ ನಾಯಿಕೊಡೆ ಬೆಳೆದರೆಂತೊ ಅಂತೆ
ಆದಕು ಇದಕೂ ಇಹುದು ಸಾಮ್ಯ ತುಂಬ.

೩

ಗತವೈಭವವೊ ಪಾಳುಬಿದ್ದ ಗುಡಿ.
ಅಂಗಳದಿ ಅಂಗುಲಂಗುಲಕೆ ನೆಗ್ಗಲಿಮುಳ್ಳು
ಗೊಳಗೊಳಿಕೆ. ಈ ಹಿಂದೆ ಎಲ್ಲ ಕಡೆಯಿಂದಲೂ ಇಲ್ಲಿಗೆ
ದಾರಿಯಿತ್ತೆಂದು ಹೇಳುವರು ; ನಮಗಿಂದು
ಕಾಣುವದು ಬರಿಯ ತೋರುಬೆರಳು—
ಗೋಡೆಗೋಡೆಯ ಗೋರಿಯಲ್ಲಿ ಹುಳುಹುಪ್ಪಡಿ
ಕಣ್ಣುಕಪ್ಪಡಿ ಬಿಚ್ಚುಗತ್ತಿ ಮೈಗಾವಲು !
ಗಾಳಿಯಾಡಿದರೆ ಕುರಿದಡ್ಡಿ ಜಿಡ್ಡುನಾತ ; ಆಚೀಚೆ
ನಡುಬಾಗಿ ಒಂಟಿಮಲಗಿದ ತೆಂಗು :
(ಆಯುಷ್ಯಗಟ್ಟಿಯಿದ್ದರೆ ಯಾರದೇನು ಹಂಗು)
ಬದಿಯಲ್ಲಿ ಬಹುಪುರಾತನಕಾಲದಿಂದ ನಿಂತಿದೆ ಸ್ವಾಮಿ

ಅಶ್ವತ್ಥವೃಕ್ಷ ! ಸುತ್ತುಮುತ್ತೂ ಹಸುರುಪೈರು ಮೊಳೆದಂತಿಲ್ಲ
ಅಷ್ಟು ವರ್ತುಲ ಜಾಗ ಇಂದಿಗೂ ರುಕ್ಷ.
ಇದರಡಿಯಲ್ಲಿ ಕುಳಿತು ಮೋಕ್ಷಪಡೆದವರೆಷ್ಟೊ
ಆಗಲೂ ಈಗಲೂ ಟೊಂಗೆಟೊಂಗೆಗೆ ಜೋತುಬಿದ್ದಿರುವ
ತೊಗಲಬಾವಲಿ ಸಾಕ್ಷಿ ನುಡಿಯಬಹುದಲ್ಲ !
ಧೂಳಡರಿ ಜಂತಿಗೆ ಸೇರಿ ಕುಳಿತ ಪಲ್ಲಕ್ಕಿ ಮೂಲೆಗುಂಪಾಗಿರುವ ತೇರು
ಒಳಗಿನುತ್ಸವಮೂರ್ತಿ ಮೊದಲೇ ಗಡೀಪಾರು !
ಯಾರ ಪುಣ್ಯವೊ, ಗರ್ಭಗುಡಿಯಲ್ಲಿ ಇನ್ನೂ ಮಿಣುಕುತಿದೆ ಸಣ್ಣ ಹಣತೆ
ನಮಸ್ತೆ !
ನಮಸ್ತೆ !
ನಮಸ್ತೆ !
ಕಲ್ಲುಕಟೆಯುವ, ಮಣ್ಣುಹೊರುವ, ನೇಗಿಲುಹಿಡಿದು ಉಳುವ
ಬಟ್ಟೆನೇಯುವ, ಕಾರಖಾನೆಯಲಿ ದುಡಿವ
ಭಂಗಿಬುಟ್ಟಿಯ ಹೊರುವ, ಪತ್ರಿಕೆಯ ಮಾರುವ
ಕಚೇರಿಯಲಿ ಕುರ್ಚಿಗೆ ಕುಳಿತು ಬಗ್ಗಿ ಬರೆದೇ ಬರೆವ
ಆಣೆಕಟ್ಟನು ಕಟ್ಟಿ ಕಾಲುವೆಯ ತೋಡುವ
ಭೂಗರ್ಭದಿಂದ ಭಂಗಾರ ತೋಡಿಕೊಡುವ
ಲೇಖನಿ ಹಿಡಿದು ಜೀವಿಸುವ ಜೀವಿಜೀವಿಯ ಅಂತರಂಗ ಕರಗಿಸುವ
ಪಾಟಿಪೇಣೆಯ ಕೊಟ್ಟು ಅಕ್ಷರವ ತೀಡಿಸುವ
ಲಕ್ಷ ಲಕ್ಷ ಹೋರೆಯ ಭಾರತಶಕ್ತಿ ಪ್ರತ್ಯಕ್ಷ !
ಬೇಕಾದ ವರವ ಬೇಡಿಕೊ 'ತಥಾಸ್ತು.'

ಭಾರತದ ಭವ್ಯದೇಗುಲದಲ್ಲಿ ನಡೆವುದು ಪೂಜೆ
ಗುಣಾಃ ಪೂಜಾಸ್ಥಾನಂ ಗುಣಿಷು ನ ಚ ಲಿಂಗಂ ನ ಚ ವಯಃ
ದುಡಿದು ಹಣ್ಣಾದವಗೆ ಮಾತ್ರ ಇಲ್ಲಿ ಸಾಕ್ಷಾತ್ಕಾರ
ಆಗ ಮುಗಿದೀತು ಭವ್ಯಪರಂಪರೆಯ ಪಾಳುಗುಡಿಯ ಜೀರ್ಣೋದ್ಧಾರ.

—ಚೆನ್ನವೀರ ಕಣವಿ.

## ಪಾತ್ರ ವಿವರ

ಅಲ್ಲಮ ಪ್ರಭು

ಕಾಮಲತೆ

ಮಧುಮಾನಿ } ಕಾಮಲತೆಯ ಸಖಿಯರು
ವಿಮಲೆ }

ನಾಟ್ಯಗುರು

## ದೃಶ್ಯ ೧

[ಬನವಾಸಿಯ ಮಧುಕೇಶ್ವರನ ದೇಗುಲ. ರಾಜಕುಮಾರಿ ಕಾಮಲತೆಯ ಆರಾಧನಾ ನೃತ್ಯ ಸಾಗಿದೆ. ನಾಟ್ಯಕ್ಕೆ ತಕ್ಕ ಮಂಜುಲ ನಾದ ತರಂಗ. ಅರಮನೆಯ ನಾಟ್ಯಾಚಾರ್ಯನ ಮೃದಂಗ ಬಾಜನೆಗೆ ಅನುಸಾರವಾಗಿ ಕಾಮಲತೆ ನರ್ತಿಸುತ್ತಿದ್ದಾಳೆ. ಸಖಿಯರಾದ ವಿಮಲೆ ಮಧುಮಾನಿಯರು ನಿಂತು ನೋಡುತ್ತಿದ್ದಾರೆ. ಈ ಎಲ್ಲ ನಾದವೂ ಕ್ರಮೇಣ ಹಿನ್ನೆಲೆಗೆ ಸರಿದು ಸಖಿಯರು ಆಡುವ ಮಾತು ಕೇಳಿಬರುವುದು.]

ಮಧುಮಾನಿ

ವಿಮಲೆ, ಏನಪೂರ್ವದ ನೃತ್ಯ!
ನಾಟ್ಯಗುರು ಕಲಿಸಿರುವ ರೂಢಿ ನರ್ತನವಲ್ಲ,
ದಿವ್ಯ ಸ್ಫೂರ್ತಿಯದೊಂದು ರಾಜಕುವರಿಯ ತುಂಬಿ,
ಹೊಮ್ಮುತಿದೆ ನವಲಾಸ್ಯ ಬಂಧುರ ಕೃತಿಯೊಂದು!

ವಿಮಲೆ

ಅಹುದಲ್ಲ! ಮಿಂಚು ತೆರೆ ಹರಿದಂತೆ ಪದಗತಿಯ ವಿನ್ಯಾಸ!
ಗ್ರಹಗತಿಯ ಚಿತ್ರವಿನ್ಯಾಸದಲಿ ನರ್ತಿಸುವಳೀ ಕನ್ಯೆ,
ಅದೊ, ತಪ್ಪುತಿದೆ ತಾಳ, ಈ ಗತಿಗೆ ಹೊಂದಲಾರದೆ
ಕೈ ನಡುಗುತಿದೆ, ಅದೆಕೊ ಮದ್ದಲೆಯ ಗುರುಗಳಿಗೆ.

ಮಧುಮಾನಿ

ಭಕ್ತಿಪರವಶಳಾಗಿ ನರ್ತಿಸುವ ದೇವಿಗಿದು
ತಿಳಿಯದಾಗಿದೆ ವಿಮಲೆ, ಏನಪ್ಪುದೋ ಕಾಣೆ,
ರಸಭಂಗವಾದರೆಂತೋ ಏನೊ. . . . ಅಯ್ಯೋ,
ವಾದಕರ ಕೈ ನಿಲ್ಲುವಂತಿದೆಯಲ್ಲೆ. . . .

(ನಾಟ್ಯಾಚಾರ್ಯರ ವಾದನದ ತಾಳ ತಡವರಿಸುತ್ತ ನಿಧಾನವಾಗುವುದು. ಗೆಜ್ಜೆಯ ಸದ್ದು ಮಿಂಚಿನ ವೇಗವನ್ನುಳಿದು, ತಾನೂ ನಿಲ್ಲುವುದು. ಅಲ್ಲಮ ಪ್ರಭು ಪ್ರವೇಶಿಸುವನು)

ಅಲ್ಲಮ

ಭಲೆ ಆಚಾರ್ಯ
ತಾಳಮೇಳವೆ ಬೇಡ ನಿಮ್ಮ ವಾದನ ಕಲೆಗೆ.

ಈ ನಾಟ್ಯ, ನಿಮ್ಮ ಪಾಠಕ್ರಮವ ಮೀರಿತೆಂದೇತಕ್ಕೆ
ಕೋಪದಲಿ ಮದ್ದಲೆಯ ಕುಟ್ಟುವಿರೊ; ಪಾಪ,
ಬಿಡಿ, ಮದ್ದಲೆಯು ತಪ್ಪಲ್ಲ.

ಆಚಾರ್ಯ

ಯಾರಯ್ಯ ನೀನು, ಅನಾಹೂತ ಪಾಂಥ?
ಕರೆಸದೆಯೆ ಬಂದವಗೆ ಕಲೆಯ ಟೀಕೆಯ ಬಿಂಕ.
ಕೊರಳೊಳಗೆ ಮದ್ದಲೆಯ ತೂಗುಬಿಟ್ಟಾಕ್ಷಣಕೆ
ನಾಟ್ಯವಿದ್ಯೆಯೊಳಿನ್ನು ಸರ್ವಜ್ಞನೆಂಬ ಮದ!
ಬೀದಿ ಮದ್ದಳೆಯಲ್ಲ, ಶಾಸ್ತ್ರ ವಿದ್ಯೆಯ ಪಾಂಗು.
ನುಡಿಸಬಲ್ಲಡೆ ಕೆಣಕಿ ಮಾತಾಡ ಬರಬಹುದು . . .

ಅಲ್ಲಮ

ಕ್ಷಮಿಸಿ ಆಚಾರ್ಯ, ನೀವೆಂದಂತೆ ನಾನೊರ್ವ
ಅನಾಹೂತ ಪಾಂಥನೆಂಬುದು ದಿಟವೆ.
ಆದರೂ ದೇಗುಲಕೆ ಕರೆಸದೆಯೆ ಬರಬಾರದೆನುವ
ಕಟ್ಟಳೆಯನರಿಯೆನಾ.
ಭಕ್ತಿಯಾವೇಶದಲಿ, ಸಹಜ ಪ್ರತಿಭೆಯು ಮಿಂಚಿ
ಲಾಸ್ಯಪೂಜೆಯಗೈದ ಚೆಲುವೆಯೀ ನರ್ತನದಿ
ರಸಭಂಗವಾಯ್ತೆಂದು, ಮನನೊಂದು ಇಂತೆಂದೆ.
ಮುಂದೆ ಸಾಗಲಿ ನೃತ್ಯ, ನುಡಿಸುವೆನೊ, ಬರಿದೆ ಟೀಕೆಯ
ನುಡಿವ ಮಾತುಗಾರನೊ ನಾನು . . . ತಾನಾಗಿ ತೋರುವುದು.
ಬೀದಿಮದ್ದಳೆ ಸಾಕು.

(ನಿಬ್ಬೆರಗಾಗುವಂತೆ ಅಲ್ಲಮನ ಮದ್ದಲೆಯ ಅಪೂರ್ವಗತ್ತಿನ ವಾದನ ಕೇಳಿಬರುವುದು; ಕಾಮಲತೆಯ ನರ್ತನ ಇದರೊಂದಿಗೆ ಮುಂದುವರಿಯುವುದು. ನರ್ತನದ ನಡುವೆಯೇ ಅರಮನೆಯ ನಾಟ್ಯಾಚಾರ್ಯ ಭಂಗಿತನಾದಂತಾಗಿ ಹೊರಟುಹೋಗುವನು. ನರ್ತನ ನಿಲುಗಡೆಗೆ ಬಂದನಂತರ)

ಅಲ್ಲಮ

ಬಲ್ಸೊಗಸು, ಬಲ್ಸೊಗಸು!
ಏನಪೂರ್ವದ ನೃತ್ಯ!
ತಾಂಡವನನೊಲಿಸಿದಾ ಉಮೆಯ ನರ್ತನವಿಂತೆ ಇದ್ದಿರಬಹುದು.

ಅಯ್ಯೊ ನಿಮ್ಮ ನಾಟ್ಯಾಚಾರ್ಯರೆಲ್ಲಿ ಹೋದರೊ ಕಾಣೆ, . .
ಮಧ್ಯೆಯೇ ಮುನಿದು ಹೋದರೊ ಏನೊ! . . .
ಇಂತು ಪೂಜೆಯ ಸಲಿಸಿ ದೇವಕೃಪೆಗೊಳಗಾದ ನೀನಾರು ಚೆಲುವೆ?
ಏಕೆ, ಮಾತಾಡದೆಯೆ ತಲೆತಗ್ಗಿಸುವೆ?
ನಾಚಿಕೆಯೊ, ಮನೆತನದ ಹೆಮ್ಮೆಯೊ?
ನಿಮ್ಮೊಡತಿ ಮೂಕಿಯೋ ತಂಗಿಯರೆ,
ಅಥವಾ ಅವಳ ನುಡಿಮಾಧುರ್ಯ ನಮಗೆ ದುರ್ಲಭವೆಂದೊ?

ವಿಮಲೆ

ಕ್ಷಮಿಸಣ್ಣ, ದಿವ್ಯಾತ್ಮ.
ನಮ್ಮ ಒಡತಿಯು ಇಂದು ನಿಮ್ಮವಾದನದಿಂದ
ಸಂತುಷ್ಟ ಸಂಭ್ರಾಂತಿಯಲ್ಲಿಹಳು,
ಇವಳೆಮ್ಮ ದೊರೆಗುವರಿ; ಕಾಮಲತೆ,
ಮಮಕಾರ ನೃಪತನುಜೆ; ಮಧುಕೇಶ್ವರನ ಭಕ್ತೆ,
ಲಾಸ್ಯ ಪೂಜಾಸಕ್ತೆ . . .

ಮಧುಮಾನಿ

ನೀವಾರು ತೇಜಸ್ವಿ?
ನಿಮ್ಮವಾದನ ಕಲೆಯೋ ನಿಮ್ಮ ಕಲ್ಕೆಗೆ ಸಾಕ್ಷಿ;
ತಮ್ಮ ವಿವರಕೆ ನಾವು ಕಿವಿಯಾಗಿ ಕಾದಿಹೆವು.

ಅಲ್ಲಮ

ವಿವರವೇತಕೆ ತಾಯಿ? ಹೆಸರು ಅಲ್ಲಮ ಎಂದು,
ಮದ್ದಲೆಯ ದನಿಯಿಂದ ಮುದವನೆಚ್ಚರಗೊಳಿಸಿ
ಒಳಗ ಬೆಳಗುವುದೊಂದೆ, ನನ್ನವಾದನ ರೀತಿ!

ವಿಮಲೆ

ಬಲು ಚದುರು ನಿಮ್ಮನುಡಿ ಆಚಾರ್ಯ, ಬಲು ಚದುರು
ಒಗಟೆಯೊಲು . . . ತಿಳಿಯದಿದ್ದರು ಮಧುರ.
ಈ ಉಡುಗೆ, ಈ ತೊಡಿಗೆ, ಈ ಹೆಸರು, ಈ ಮಾತು
ಎಲ್ಲವೂ ಅಂತೆಯೇ!

ಅಲ್ಲಮ

ಒಗಟೆ ?
ಎನಿತೊ ಒಗಟುಗಳಿಹವು ಈ ವಿಶ್ವದಲಿ ತಾಯಿ,
ನನ್ನ ಪರಿಯೂ ಒಂದು ಒಗಟಾಗಿ ತೋರಿದರೆ
ಅಚ್ಚರಿಯದೇನಿಲ್ಲ !

ಮಧುಮಾನಿ

ಅಂತಿರಲಿ ಆಚಾರ್ಯ, ಎಲ್ಲಿಂದ ಬಂದಿಹಿರಿ,
ಪಯಣವೆಲ್ಲಿಗೆ ಮುಂದೆ ?

ಅಲ್ಲಮ

ಅಲ್ಲಿಗಿಲ್ಲಿಗೆ ಎಂಬ ಮಿತಿಯ ಬಂಧನವಿಲ್ಲ.
ಎಲ್ಲಿಗೆಂದರೆ ಅಲ್ಲಿ.
ದೇವನಿರ್ಮಿತ ಜಗದ ಬಯಲ ಜಂಗಮ ನಾನು.

ವಿಮಲೆ

ಮದ್ದಲೆಯ ಮಧುರಗತಿಗಿಂತಲೂ ಸೊಗಸು
ನಿಮ್ಮ ಮಾತಿನ ರೀತಿ.

ಅಲ್ಲಮ

ನನ್ನ ನುಡಿ ಅಂತಿರಲಿ ; ನಿಮ್ಮೊಡತಿಯನು ನುಡಿಸಿ.
ಸವಿಯೆಂದರೇನೆಂದು ತಿಳಿಯೋಣ.
ಮೌನವೇ ವ್ರತವೇನೋ. ನಾನೇಕೆ ಭಂಗಮಾಡಲಿ
ಅದನು. ಇನ್ನು ನಾ ಬರುವೆ . . . ಅಪ್ಪಣೆಯೇ . . .

(ಹೊರಟುಹೋಗುವನು)

ಕಾಮಲತೆ

ಆ್ಞ . . . ! . . . ಕ್ಷಮಿ . . . .

ವಿಮಲೆ

ಅಯ್ಯೊ, ಹೊರಟೆ ಹೋದರು ನಿಲದೆ . . .
ತಳುವಿದಿರಿ ಅಮ್ಮಾಜಿ, ನುಡಿಯಿಸಲು ತಳುವಿದಿರಿ.
ಮುನಿದರೇನೋ ಅವರು ನಿಮ್ಮ ಮೌನದ ಪರಿಗೆ . . .

### ಕಾಮಲತೆ

(ಅಂತರ್ಮುಖಿಯಾಗಿ)

ಏನವರ ನಡೆ, ನಿಲುವು !
ಜಂಗಮು ಸ್ತಿಮಿತಪ್ರದೀಪವೋ ಅವರಿರವು !
ಕಂಡೊಡನೆ ಗೌರವವನುಕ್ಕಿಸುವ ಆ ತೇಜ,
ಎಳೆಯ ಬೆಳದಿಂಗಳನು ತೊಟ್ಟು ನಿಂದೊಲು ಉಡುಗೆ !
ಯಾರು ಆ ತೇಜಸ್ವಿ ?

### ವಿಮಲೆ

ತೇಜಸ್ವಿ ಎಂದಿರ ಅವ್ವ ; ಕಾಮಸನ್ನಿಭ ಚದುರ
ಎಂದರಿನ್ನೂ ಒಪ್ಪು; ಆ ರೂಪೊ ಮದ್ದಲೆಯ ದನಿಯೊ,
ಮೋಡಿಯಲಿ ಬಿಗಿದಿಹವು. ಅಲ್ಲವೇ ಅಮ್ಮಾಜಿ ?

### ಕಾಮಲತೆ

ಅಹುದು ಸಖಿ ; ಏನು ಆ ಮದ್ದಲೆಯ ಮೊಳಗು !
ಎನಿತೊ ದನಿಗೇಳಿಹೆನು ಇದುವರೆಗು.
ಆದರೀ ಮದ್ದಲೆಯ ದನಿ ಸೆಳೆಯುತಿದೆ ನನ್ನನಿದೊ
ಬಣ್ಣ ಬಣ್ಣದ ಬಹುಲ ಸ್ವಪ್ನಸೂತ್ರವನೆಸೆದು !
ಏನು ದನಿ ಅದು ವಿಮಲೆ !
ಜನ್ಮ ಜನ್ಮಾಂತರದ ಅಕ್ಕರೆಯ ಕರೆಮೊರೆಯೊ,
ಭವ ಭವದ ವಿಸ್ಮೃತಿಯ ಸವಿನೆನಹುಗಳ ತೆರೆಯೊ,
ಅಥವಾ ಮುಂದನ್ನೊರೆವ ಅಭಯ ಶಂಖಧ್ವನಿಯೊ
ಏನೆಂದು ಅರಿಯೆನಾ . . . .
ನನ್ನೆಲ್ಲವನು ಇಂದು ಸೆರೆಗೈದು ಮೋಹಿಸಿದೆ
ದಿವ್ಯ ನೂತನ ಗತಿಯ ಚತುರತೆಯ ಆ
ಮಧುರ ಮೋಡಿ !

### ಮಧುಮಾನಿ

ಸರಿಯಾಗಿ ಹೇಳಿದಿರಿ ಅಮ್ಮಾಜಿ.
ಕಾರ್ಮೊಳಗೆ ಸರಿ, ಮದ್ದಲೆಯ ದನಿಯಲ್ಲ.
ಮುಂಗಾರ ಮೊಳಗಿಂಗೆ ತನ್ನ ಸಾಸಿರ ಕಣ್ಣ

ಕಾಮಧನು ಪಿಂಛವನು ಬಿಚ್ಚಿ ನರ್ತನಗೈವ
ನವಿಲಿಸಂದದಿ ನೀವು ಲಾಸ್ಯದಲಿ ಮುಳುಗಿರಲು,
ಮುಗ್ಧರಾದೆವು ನಾವು.

ಕಾಮಲತೆ

ನೂರು ಊಹೆಗಳೆನ್ನ ನವಿರು ನವಿರನು ತುಂಬಿ
ಹಾರೈಸುತಿವೆ ಇಂದು,
ಯಾವುದೋ ಇನಿಯ ಸಂದೇಶವನು.

ವಿಮಲೆ

ಇನಿಯ ಸಂದೇಶವನು . . . . ! ಸರಿ, ಸರಿ.
ಈಗ ಅರಿವಾಗುತಿದೆ !
ನಿಮ್ಮ ಪ್ರಾರ್ಥನೆಗಿಂದು ಮಧುಕೇಶನೊಲಿದಿಹನು.
ಅಲ್ಲಮನ ರೂಪದಲಿ ಇನಿಯನೈತಂದಿಹನೊ. .
ಆಗಲೇ ಅನುರಾಗ . . . .

ಕಾಮಲತೆ

ಸಾಕು, ಸುಮ್ಮನಿರು ವಿಮಳೆ,
ಪರಿಹಾಸವೇಕೀಗ, ಕಲೆಯು ಹೃದಯಕೆ ತಂದ
ಮಧುರ ಸಂದೇಶವೆನೆ ಏನೇನೊ ಊಹಿಸುವೆ.
ನಿನಗದೇ ಚಿಂತೆ; ಪ್ರೇಮಗೀಮದ ಮಾತು
ಯೋಚನೆಗೆ ಬಂದಿಲ್ಲ.

ವಿಮಲೆ

ಓಹೋ, ದಿಟ ದಿಟ ದೇವಿ
ದಿನವು ಮಧುಕೇಶ್ವರನ ಲಾಸ್ಯಪೂಜೆಯೊಳಿಂತು
ಬೇಡುತಿಹುದೇತಕೋ. . . .

ಕಾಮಲತೆ

ಸೋತಿರುವೆ ದಿಟ ನಾನು ;
ಮಧುರ ಮದ್ದಲೆ ದನಿಗೆ . . . !
ಇಂಥ ಗುರುವಿನ ಬಳಿಯೆ ನರ್ತನವ ಕಲಿವಾಸೆ
ಚಿಗುರಿ ಹೊಗರೇರುತಿದೆ.

ಮಧುಮಾನಿ

ಅದಕೆ ಚಿಂತೆಯೆ ಅವ್ವ ;
ರಾಜರಿಗೆ ತಿಳಿಸಿದರೆ, ನಿಮ್ಮಿಚ್ಛೆ ಸಲ್ಲುವುದು.

ಕಾಮಲತೆ

ಆದರಾ ಧೀರಮತಿ, ಒಪ್ಪುವರೂ ಇಲ್ಲವೊ ?

ವಿಮಲೆ

ಚಿಂತಿಸದಿರಮ್ಮಾಜಿ, ಆದರ ಹೊಣೆ ನನಗಿರಲಿ.
ಈಗಲಾದರು ಒಪ್ಪಿ, ನಿಮ್ಮ ಪ್ರೇಮದ ಕನಸ.

ಕಾಮಲತೆ

ವಿಮಲೆ, ಎಂದೇಕೆ ಹೆಸರನಿಟ್ಟರೊ ನಿನಗೆ.
ಚತುರೆ ಎಂದರೆ ನಿನಗೆ ಒಪ್ಪುತಿತ್ತೋ ಏನೊ.
ಸರಿ ; ನೆನಪಿರಲಿ, ನಿನ್ನ ಹೊಣೆ.
ಮಧುಮಾನಿ, ಎಲ್ಲಿ, ಪೂಜಾದಿ ಪರಿಕರವ
ಇತ್ತುಕೊಡು ; ಹೊತ್ತಾಯ್ತು. ಪೂಜೆಯನು ಮುಗಿಸೋಣ.

(ಗಂಭೀರ ತಂಬೂರಿನಾದದ ಹಿನ್ನೆಲೆಗೆ ಗಂಟೆಯ ಟಿಂಟಿಣಿ ಜನುಗುವುದು.)

## ದೃಶ್ಯ ೨

[ತೆರೆಯ ಹಿಂದಿನಿಂದ ಹೇಳಬೇಕಾದ ಕಥಾಸೂತ್ರ : ಮಮಕಾರನೃಪನ ಒತ್ತಾಯದಿಂದ ಅಲ್ಲಮನು ಕಾಮಲತೆಯ ನಾಟ್ಯಶಿಕ್ಷಾಚಾರ್ಯನಾಗಿ ಅರಮನೆಯಲ್ಲಿ ನಿಲ್ಲುತ್ತಾನೆ. ನಾಟ್ಯ ಶಿಕ್ಷಣ ಕೆಲವು ಕಾಲ ಸಾಗುತ್ತದೆ. ಅಲ್ಲಮನ ಚೆಲುವಿಗೆ ಮನಸೋತ ಕಾಮಲತೆ ಅವನಲ್ಲಿ ಅನುರಕ್ತಳಾಗಿದ್ದಾಳೆ. ಆದರೆ ಅಲ್ಲಮನ ನಿರಂಜನ ಮನೋಭಾವದಿಂದ ನಿರಾಸೆಗೊಂಡು ನಮೆ ಯುವ ಕಾಮಲತೆಯನ್ನು ಅಲ್ಲಮನೊಂದಿಗೆ ಸಮಾಗಮುಗೊಳಿಸಲು ಅವಳ ಸಖಿಯರು ಒಂದು ಸಂಜೆ ಏರ್ಪಡಿಸಿದ್ದಾರೆ. ಉದ್ಯಾನದ ಪುಷ್ಕರಿಣಿಯ ಬಳಿ ಸಖಿಯರು ಮತ್ತು ಕಾಮಲತೆ ಅಲ್ಲಮನ ಆಗಮನವನ್ನು ಹಾರೈಸುತ್ತಿದ್ದಾರೆ.]

ವಿಮಲೆ

ಇಂದೆ ಆ ಶುಭದಿವಸ, ಬಲುದಿನದ ಕನಸಿಂದು
ನನಸಾಗಲಿದೆ ದೇವಿ ; ನಾ ಹೊತ್ತಹೊಣೆಗೀಗ
ಸಾಫಲ್ಯ ಸನಿಯವಿದೆ.

ಮಧುಮಾನಿ

ಚತುರೆಯಲ್ಲವೆ ನೀನು, ಅವ್ವನವರೆಂದಂತೆ !
ಎಷ್ಟುಹೊತ್ತಿಗೆ ಅವರ ಬರಲು ಹೇಳಿದೆ ವಿಮಳೆ ?
ಇದೆತಾನೆ ಉದ್ಯಾನ, ಸಂಕೇತಸ್ಥಾನ ?

ವಿಮಲೆ

ಅವರಿಲ್ಲಿಗೈತರುವ ಸಮಯ ಬಳಿಸಾರುತಿದೆ.
ಈ ಮನೋಹರ ಸಂಧ್ಯೆ, ಚೆಲುವಿನಧಿಕಾರವನು
ಬೆಳ್ದಿಂಗಳಪ್ಪುಗೆಗೆ ಒಪ್ಪಿಸುವ ಶುಭಘಳಿಗೆ.

ಕಾಮಲತೆ

(ಕಾತರದಿಂದ)

ಬರಲು ಒಪ್ಪಿದರೇನೆ ?
ಬರಿಯ ಭ್ರಮೆಯೋ ಏನೊ.

(ನಿಡುಸುಯ್ಯುವಳು)

ಮಧುಮಾನಿ

ಏನಿದಚ್ಚರಿ ದೇವಿ !
ನಿಮ್ಮ ಬಾಯಿಂದಲೂ ಈ ನಿರಾಸೆಯ ಮಾತೆ ?
ಇಂದಿಂತು ನುಡಿವವರು ನಮ್ಮ ದೊರೆಗುವರಿಯೇ ?
ಚೆಲುವ ಪುತ್ಥಳಿ—ಬಿಂಕ ಬಿಗುಮಾನಗಳ ಗಣಿ,
ಎನಿತೆನಿತೊ ರಾಜಪುತ್ರರ ಚೆಲುವಿನೊಲವಿನ ಕರೆಯ
ಧಿಕ್ಕರಿಸಿದಭಿಮಾನಿ ;
ಇಂಥವಳ ಬಾಯಿಂದ ಈ ನಿರಾಸೆಯ ಮಾತೆ !

ಕಾಮಲತೆ

ನನ್ನೆದೆಯ ತಳಮಳವ ನೀನೇನು ಬಲ್ಲೆ ಸಖಿ.
ಚುಚ್ಚುನುಡಿಯಾಡದಿರು ; ಕಲಕದಿರು ಮಧುಮಾನಿ,
ಮೊದಲೆ ಕಲಕಿದ ಕೊಳವ ಮತ್ತೆ ನೀ ಕಲಕದಿರು.

(ನಿಡುಸುಯ್ದು)

ನನ್ನ ರೂಪದ ಮದದ ಅಭಿಮಾನದೀಟಿಯಲಿ
ಎನಿತು ಜನರೆದೆಯನ್ನು ಗಾಸಿಗೈದೆನೊ ನಾನು,

ಅವರ ನೋವೆಷ್ಟೆಂದು ಈಗ ಅರಿವಾಗುತಿದೆ.
ರೂಪಗರ್ವಾಂಧತೆಯ ನನ್ನ ಅಂದಿನ ಪರಿಗೆ
ಇಂದವಜ್ಞೆಯ ಶಿಕ್ಷೆ.

ಮಧುಮಾನಿ

ಇಂದು ನಿಮ್ಮನು ಇವರು ತಿರಸ್ಕರಿಸಬಹುದೆಂಬ
ಹುಸಿಯ ಶಂಕೆಯದೇಕೆ?
ಇಂದುವರೆಗೂ ಅವರು ತಮ್ಮ ಮೌನದ ಹೊಸಿಲ
ಹೊರಗೆ ನಿಮ್ಮನು ನಿಲಿಸಿ ಶಿಕ್ಷಣವನಿತ್ತರೇ?
ರಾಜಕುವರಿಯ ಜೊತೆಗೆ ಪ್ರಣಯ ಸರಸವ ನುಡಿವ
ಬರಿ ಅಧೀರತೆಯಿಂದ ಸುಮ್ಮನಿದ್ದರೊ ಏನೊ.
ನೀವಾಗಿಯೇ ಅವರ ನುಡಿಸಬಹುದಿತ್ತಲ್ಲ?

ಕಾಮಲತೆ

ಮಾತನಾಡದೆ ಏನು. ಎನಿತೊ ಸಲ ನೃತ್ಯಪಾಠದ ವೇಳೆ
ಅವರೊಡನೆ ನುಡಿದಿಹೆನು—ಪ್ರಣಯ ಸಂಕೇತದಲಿ,
ಆದರೂ. . .

ಮಧುಮಾನಿ

ಏನವ್ವ ಆದರೂ. . .

ಕಾಮಲತೆ

ಮಾತು ಮಾತಿಗೆ ಚದುರ ಪ್ರತಿನುಡಿಯ ನುಡಿದರೂ,
ನನ್ನಿಂದ ಎಲ್ಲಿಯೋ ದೂರ ನಿಂತೊಲು ಅವರ ನಡೆ, ನುಡಿ, ಎಲ್ಲ.
ಅಧೀರರೆಂಬೆಯ ಅವರ!
ಅವರ ಆ ಧೀರ ಗಂಭೀರ ವದನವನೊಮ್ಮೆ ನೋಡಿದೆನೊ. . .
ಸೌಂದರ್ಯಮದವಿರಲಿ, ನನ್ನ ಸರ್ವಸ್ವವೂ
ಚೂರು ಚೂರಾಗುವುದು!
ಅರಮನೆಯ ಸುಖ ಬೇಡ; ರಾಜಸಂಪದ ಬೇಡ,
ಅವರಡಿಯನೆರಳಾಗಿ ನಡೆವಾಸೆ ತುಂಬುವುದು.
ಅವರೊಮ್ಮೆ ನನ್ನ ಮುಖನೋಡಿದರೊ,
ನನ್ನಹಮ್ಮನು ಕೊರೆವ ಕನಿಕರದ ಹೊಳೆಹರಿದು

ಬರುವುದಾ ಕಣ್ಣಿಂದ!
ಪ್ರೀತಿಯನು ಬೇಡಿದರೆ, ಕನಿಕರದ ಕೂರಲಗು
ಇರಿವಂತೆ ತೋರುವುದು.

ವಿಮಲೆ

ಬಿಡಿ ಭೀತಿಯನು ದೇವಿ, ಕನಿಕರವೆ ಪ್ರೇಮಕ್ಕೆ
ಮೊದಲ ಪೀಠಿಕೆಯಷ್ಟೆ?
ಅಲ್ಲಮನ ರಸಿಕತೆಯ ನಾ ಬಲ್ಲೆ ಅಮ್ಮಾಜಿ.
ಅಂದು ರಾಜರು ಅವರ ನಿಮಗೆ ನಾಟ್ಯಾಚಾರ್ಯ-
ರಾಗುವೊಲು ಬಿನ್ನವಿಸೆ, ಏನು ನುಡಿದರು ಗೊತ್ತೆ?

ಕಾಮಲತೆ

ಏನ ನುಡಿದರು?

ವಿಮಲೆ

ಎಲ್ಲೆಂದರಲ್ಲಲೆವ ಗಾಳಿಗೇತಕೆ ಇನ್ನು
ಅರಮನೆಯ ಆಶ್ರಯದ ಪರಿಮಳದ ಸಂಕೋಲೆ?—
ಎಂದರವ್ವಾ ಅವರು.

ಕಾಮಲತೆ

ಗಾಳಿಯೇ ಸರಿಯೆಂದೆ, ಬಳಿಯಿದ್ದರೂ ಕೂಡ
ಬಗೆಗೆ ನಿಲುಕದ ಹವಣು!

ವಿಮಲೆ

ನೋಡಿದಿರ ಅಮ್ಮಾಜಿ; ತಮ್ಮನೇ ಗಾಳಿ ಎಂದೆನುವಲ್ಲಿ
ಎಂಥ ಚತುರತೆಯಿಂದ ನೀವು ಪರಿಮಳವೆಂದು
ಬಣ್ಣಿಸುತೆ ತಮ್ಮಂತರಾರ್ಥವನು
ಧ್ವನಿಸುತಿರುವರು ಅವರು!
ಮೊದಮೊದಲು ನಿಮಗೆ ಶಿಕ್ಷಣವೀಯಲೊಪ್ಪದಂದದಿ ನಟಿಸಿ
ಕಡೆಗೆ ತಾವೇ ಒಲಿದು ಒಪ್ಪಲಿಲ್ಲವೆ ಅವರು!
ನಿಮ್ಮ ಈ ರೂಪಕ್ಕೆ ಅವರು ಮರುಳಾಗದಿರೆ,
ಬರಿದೆ ನಾಟ್ಯಾಚಾರ್ಯರಾಗುತಿದ್ದರೆ ನಿಮಗೆ!

ಈ ಸಂಜೆ ನಿಮ್ಮನೀಯೆಡೆ ನೋಡಬೇಕೆಂದಾಗ
ಎಷ್ಟೊಂದು ಉತ್ಸಾಹದಲಿ ಮುಗುಳು ನಕ್ಕರು ಅವರು !

ಮಧುಮಾನಿ

ಪಾಪ—ಅವರೂ ಕೂಡ ಎಷ್ಟೊಂದು ದಿನದಿಂದ
ಇದನು ಹಾರೈಸಿದರೊ, ನೊಂದು ಬೆಂದರೊ ಏನೊ.
ನಮ್ಮ ಅಮ್ಮಾಜಿಯೋ ಬರಿದೆ ಅನುಮಾನಿಸಿದ-
ರವರ ಒಲವಿನ ಪರಿಯ !
ಕಾತರದ ಬಗೆಗಂತು ಆತುರದ ಸಿದ್ಧಾಂತ !

ವಿಮಲೆ

ಮಾತಿನಲಿ ಕತ್ತಲಾದುದು ಕೂಡ ತಿಳಿಯದಾಯಿತು ನಮಗೆ.
ಅಗೊ . . . ಹುಣ್ಣಿಮೆಯು ಕಣ್ಣರಳುತಿದೆ ಬಾನ್ಗೆ !
ಪ್ರಿಯ ಸಮಾಗಮಕದುವೆ ಶುಭದ ಸೂಚನೆಯಾಯ್ತು !

ಮಧುಮಾನಿ

ಬಾರೆ ಸಖಿ, ನಾವಿನ್ನು ಹೊರಡೋಣ.
ದೇವಿಯರ ಬಳಿಯಿರಲಿ ತಿಂಗಳೇ ಸಖಿಯಾಗಿ.
ಗೆಲವಕ್ಕೆ ಅಮ್ಮಾಜಿ ; ಕನಸು ನನಸಾಗಲಿ.

ಕಾಮಲತೆ

(ಸ್ವಗತ)

ಕನಸು ನನಸಾಗಲಿ !
ಕನಸು ಕನಸಾಗಿಯೇ ಉಳಿಯದೆಯೆ
ಮತ್ತೆ ನನಸೂ ಕೂಡ ಆಗದೆಯೆ ಒಡೆದರೇಗತಿ ಇಂದು ?

(ನಿಟ್ಟುಸಿರು)

ವಿಮಲೆ

ಅಗೊ ಅವ್ವ . . . ಕನಸು ನನಸಾಗುತಿದೆ.

ಕಾಮಲತೆ

(ಕಾತರದಿಂದ)

ಆ್ಞ ! ಬಂದರೇನೇ ಅವರು . . .

ವಿಮಲೆ

ಅದೊ ಅವ್ವ.
ಮುಗಿಲ ಹೊನ್ನಿನ ಕನಸು ನನಸಾಗುತಿದೆ ಅಲ್ಲಿ,
ಮೂಡಣದ ಕರೆಯಲ್ಲಿ!
ಮಲ್ಲಿಗೆಯ ಕಂಪಿದಿಗೊ ತಿಂಗಳನು ತುಂಬುತಿದೆ.
ಅದೊ . . . ಅವರೆ . . . ಅವರೆ ಬರುತಿಹರಲ್ಲಿ . . .
ಬೆಳದಿಂಗಳನು ತೊಟ್ಟ ಕುಸುಮಾಸ್ತ್ರನೆಂಬಂತೆ!
ನೀವಿನ್ನು ರತಿಯಂತೆ . . . ನಾವು ಬರುವೆವು ಇನ್ನು.

(ಹೊರಡುವರು)

ಅಲ್ಲಮ

ಆಹ್! ಎಂಥ ಚೆಲುವಿನ ಸೂರೆ!
ಬೆಳ್ದಿಂಗಳಪ್ಪುಗೆಯ ಮಾಯೆಯಲಿ ಸಂದ ಈ
ಆವರಣವೋ—ಮಧುರ ಮೌನದ ಗೀತೆ!
. . . ನನಸೆಲ್ಲ ಕನಸಾಗುತಿದೆ!

ಕಾಮಲತೆ

(ಬೆಚ್ಚಿ) (ಸ್ವಗತ)

ನನಸೆಲ್ಲ ಕನಸಾಗುತಿದೆ . . .?
ಏನಿದೀ ಒಗಟು . . .!
ದಯಮಾಡಿ ಪ್ರಭುದೇವ . . .

ಅಲ್ಲಮ

ಓ . . . ಕಾಮಲತೆ!
ಚಂದ್ರಿಕೆಯಲಿನ್ನೇನು ಮೆಲ್ಲಮೆಲ್ಲನೆ ಕರಗಿ
ಹೋಗುತಿಹ ಚಂದ್ರಕಾಂತದ ಚೆಲುವಮೂರ್ತಿಯಂತೇ ಕಂಡೆ!
ಏನು ಚೆಲುವಿನ ಮಾಯೆ!

ಕಾಮಲತೆ

ನೀವಿಲ್ಲಿಗೈತಂದು, ಚೆಲುವು ನೂರ್ಮಡಿಯಾಯ್ತು.
ಸವಿವ ಕವಿ-ರಸಿಕರಿರೆ ಸೊಬಗು ಸಾರ್ಥಕವಲ್ತೆ?

ಅಲ್ಲಮ

ಚೆಲುವನೀಕ್ಷಿಸಿದೊಡನೆ ತಲ್ಲೀನಗೊಳುವಂಥ
ಕವಿಯಲ್ಲವಾದರೂ, ಅದನು ಹಳಿಯದೆ ನಿಂತು
ಸವಿಯ ಬಲ್ಲೆನು ನಾನು.
ಕುಳಿತುಕೋ ಕಾಮಲತೆ;
ನಿನ್ನ ನೃತ್ಯದ ಕಲಿಕೆ ಈಗೆಂತು ಸಾಗುತಿದೆ?

ಕಾಮಲತೆ

ನಿಮ್ಮ ಕೃಪೆಯಿಂದದಕೆ ಇಂದಪೂರ್ವದ ಪ್ರಗತಿ.
ಸಾಮಾನ್ಯ ಆಚಾರ್ಯರೇ ನೀವು! ನಿಮ್ಮ ಸಾಮೀಪ್ಯದಲಿ
ಶಿಷ್ಯಳಿಗೆ ಕಲಿಸದೆಯೆ ಬರುವುದಾ ಲಾಸ್ಯಕಲೆ.
ಮೈ ಮಾತ್ರವಲ್ಲದೆಯೆ ಮನವು ಕೂಡಾ ಲಾಸ್ಯದ ಲಯಕೆ
ಒಳಗಾಗುವುದು.

ಅಲ್ಲಮ

ನಿನ್ನೊಳಡಗಿದ ಕಲೆಯ ನಿಧಿಯ ಕದವನು ತೆರೆವ
ಸೂಚನೆಯನಿತ್ತು ನಾ ಗುರುವಾದೆ; ನಿಧಿಯ-
ನಿತ್ತೆನೆ ನಾನು? ನಾನೊ ಬರಿ ನಿಮಿತ್ತ.

ಕಾಮಲತೆ

ಓಹೋ ಈಗಳರಿತೆನು ನಾನು,
ಎದೆಯೊಳಡಗಿದ ಕಲೆಯ ನಿಧಿಯ ತೋರುವ ನೆಪದಿ
ಹೃದಯವನೆ ಅಪಹರಿಸಿ ಗುರು ನಿಂತ ಅನುಭವವ
ಈಗಳರಿತೆನು ನಾನು.

ಅಲ್ಲಮ

. . . ಆಕ್ಷೇಪವಿದ್ದಲ್ಲಿ ನನ್ನ ಯಾತ್ರೆಯ ನಾನು
ಮುಂದುವರಿಸಲು ಸಿದ್ಧ.

ಕಾಮಲತೆ

ನನ್ನ ಆಕ್ಷೇಪವೇ . . . .
ನನ್ನ ಹೃದಯದ ಪ್ರಭುವೆ, ನಿಮ್ಮ ಪದಧೂಳಿಯಲಿ
ನಾನು ಪಾವನಳಾದೆ;

ಹೇಳಿ, ಮತ್ತೊಮ್ಮೆ ಹೇಳಿ, ನನ್ನ ಸಂಶಯವೆಲ್ಲ
ಬರಿದೆ ಹುಸಿ ಎಂಬುದನು ಮತ್ತೊಮ್ಮೆ ಹೇಳಿ.
ಹೇಳಿ . . . ನೀವೆನ್ನ ಸೊಲಿದಿಹಿರ?

ಅಲ್ಲಮ

ಏತಕೀ ಉದ್ವೇಗ? ನಾ ನಿನ್ನ ಪ್ರೀತಿಸೆನು
ಎಂದು ಒರೆದವರಾರು?

ಕಾಮಲತೆ

ಇದು ದಿಟವೆ . . . . ದಿಟವೆ ಇದು ಮನದನ್ನ ?

ಅಲ್ಲಮ

ದಿಟಕು, ನನ್ನೆದೆಯ ತುಂಬೆಲ್ಲ ಇರುವುದೊಂದೇ ಪ್ರೀತಿ!

ಕಾಮಲತೆ

ಧನ್ಯಳಾದೆನು ಸ್ವಾಮಿ, ಬರಿಯ ಸಂಶಯದಲ್ಲಿ
ಇದುವರೆಗು ಏನನೋ ಭಾವಿಸಿದ್ದೆನು ನಾನು,
ನಿಮ್ಮ ಈ ನುಡಿಯೊಳಗೆ ಎನಿತು ಸವಿಯಡಗಿಹುದು!
ನನ್ನೆದೆಯ ಬಟ್ಟಲಿಗೆ ಅಮೃತವನೆ ತುಂಬುತಿದೆ.
ಈ ಮಧುರ ಚಣಕಾಗಿ ಎನಿತು ಹಾರೈಸಿದೆನು:
ಏನದಾಕಸ್ಮಿಕವೊ, ಆ ಅಂದು,
ಮಧುಕೇಶ್ವರಾಲಯದಿ ನಾ ನಿಮ್ಮ ಕಂಡಂದು.

ಅಲ್ಲಮ

ಆಕಸ್ಮಿಕವೆ? . . . . ಮೇಲು ನೋಟಕೆ ಮಾತ್ರ.
ನಿನಗಾಗಿಯೇ ಬಂದೆ ಕಾಮಲತೆ, ನಿನಗಾಗಿಯೇ;
ಬಲುದೂರದೂರಿಂದ ನಿನ್ನ ನರಸಿಯೆ ಬಂದೆ.

ಕಾಮಲತೆ

(ಸಗದ್ಗದಳಾಗಿ)

ನನಗಾಗಿ . . . . ನನಗಾಗಿಯೇ . . . .
ಅಂತೆನ್ನದಿರಿ ದೊರೆಯೆ ಅಂತೆನ್ನದಿರಿ. ಅಂತೆಂದು,

ಸುಚ್ಚು ಸೂರಾದೆನ್ನಹಂಕಾರವನು ಮತ್ತೆ
ಪೋಷಿಸಬೇಡಿ.
ಮೊದಮೊದಲು ರೂಪಮದದಲಿ ನಿಮ್ಮ ಸೆರೆಹಿಡಿವ
ಭ್ರಾಂತಿಯಲಿ ನಡೆದೆ. ಗೆಲುವೆನೆಂಬಾ ಗರ್ವ
ಭಗ್ನವಾಗುತ ಇಂದು ಸೋತು ಸೋಲಿನ ಸವಿಗೆ
ಹಿಗ್ಗುತಿರುವೆನು ನಾನು.
ಸೆರೆಹಿಡಿವ ಯತ್ನದಲಿ ನಾನೆ ಸೆರೆಯಾಳಾದೆ !

ಅಲ್ಲಮ

ಬರುವ ಗೆಲುವಿನ ಛಾಯೆ ಸೋಲ ಸೋಗನು ತಳೆದು
ಬಂದಿಹುದು ಕಾಮಲತೆ.
ಸೆರೆಹಿಡಿಯುವವರಾರು ? ಸೆರೆ ಸಿಕ್ಕುವವರಾರು ?
ಸಕಲ ಸೆರೆ ಪರಿಹಾರವಾಗುತಿಹ ಸಂಕೇತವಿದು.

ಕಾಮಲತೆ

ನಿಮ್ಮ ಒಗಟಿನ ಮಾತನರಿಯಲಾರೆನು ನಾನು.
ಮೊದಲಿಂದಲೂ ಅಷ್ಟೆ, ಬರಿಯ ಒಗಟಿನ ಪಗಡೆ,
ಮಾತೊ, ರೀತಿಯೋ, ಎಲ್ಲವೂ ! ಸ್ಪಷ್ಟನುಡಿ ನುಡಿಯಿರಿ.
ನಿಮ್ಮ ಮನೆ ಮಠವೆಲ್ಲೊ, ತಾಯಿ ತಂದೆಯರಾರೋ
ನಿಮ್ಮ ಈ ಪರ್ಯಟನದಾದಿ ಅಂತ್ಯಗಳೆಲ್ಲೊ,
ಈಗಲಾದರು ಎಲ್ಲ ಎದೆತೆರೆದು ಹೇಳುವಿರ ?

ಅಲ್ಲಮ

ಕಾಮಲತೆ, ಅದನೆಲ್ಲ ತಿಳಿಯಲೆತ್ನಿಪೆಯೇಕೆ ?
ವೃಥಾ. ಇಂದು ಇಲ್ಲಿರುವುದಂತು ದಿಟ.
ಅದೂ ನಿನಗಾಗಿ. ನಾಳೆಯಂತಪ್ಪುದೋ ಶಿವನಿಚ್ಛೆ.

ಕಾಮಲತೆ

ಮತ್ತೆ ಸಂದೇಹಗಳ ಎದೆಗೆ ಬಿತ್ತುವಿರೇಕೆ ?
ನನ್ನನೊಲಿವಿರ ನೀವು, ನನಗಾಗಿ ನಿಂತಿರಾ. . . ?

ಅಲ್ಲಮ

ನಿನಗಾಗಿಯೇ. ಅಲ್ಲದಿರೆ ನಾ ನಿನಗೆ
ನಾಟ್ಯ ಶಿಕ್ಷಾಚಾರ್ಯನಾಗುತ್ತಿದ್ದೆನೆ ಇಲ್ಲಿ?
ನಾನಿಂತು, ಇಷ್ಟುದಿನ ಎಲ್ಲಿಯೂ ನಿಲಲಿಲ್ಲ;
ಬಯಲ ಜಂಗಮ ನಾನು.

ಕಾಮಲತೆ

ಬಯಲು, ಬಯಲು, ಬಯಲು—
ಬರಿಯ ನುಡಿ ಚಮತ್ಕಾರದೀ ಒಲವ ನಾನೊಲ್ಲೆ.
ಒಂದು ನೆಲೆ ಒಂದು ಮನೆ, ಒಂದು ಹೆಸರಿನ ಮಧುರ
ಮಿತಿಯ ರಕ್ಷೆಗೆ ನಿಲುವ, ಒಂದು ಹಿಡಿವಿಗೆ ಸಿಗುವ
ಒಲವನೇತಕೆ ನೀವು ತೋರದಿರುವಿರಿ ನನಗೆ?

ಅಲ್ಲಮ

ಶ್ರಾವಣದ ಮೋಡಗಳ ವರ್ಣ ಸೌಂದರ್ಯವನು,
ಹರಿವ ತೊರೆ ಹಾಡುವೀ ಮಧುರ ಮರ್ಮರವನ್ನು,
ದಕ್ಷಿಣಾನಿಲತರುವ ಸವಿಯ ಪರಿಮಳವನ್ನು,
ಹಿಡಿಯಲೆಳಸುವ ವಿಫಲ ಸಾಹಸವದಿನ್ನೇಕೆ?
ಎದೆಯೊಲವಿಗಲ್ಲದೆಯೆ ಮೈ ಚೆಲುವಿಗಾನೊಲಿಯೆ.

ಕಾಮಲತೆ

ಹೃದಯಕಿರುವೀ ಪುಣ್ಯ ದೇಹಕಿಲ್ಲೆನುವಂಥ
ನಿಷ್ಠುರದ ನಡೆಯೇಕೆ? ಒಂದುಸಲ ನುಡಿದಾಗ
ಸನಿಯವಿದ್ದೊಲು ತೋರಿ, ಮತ್ತೊಂದುಸಲ ನುಡಿಯೆ
ದೂರವೆಲ್ಲೋ ಜಾರಿ ನಿಲುವ ಈ ಒಗಟೇಕೆ?

ಅಲ್ಲಮ

ಬೆಳಕು ಬೆಳಕಿಗೆ ಸನಿಯ, ಕತ್ತಲೆಗೆ ದೂರ.

ಕಾಮಲತೆ

ನನ್ನ ಒಲವಿನೊಳೇನು ಕತ್ತಲೆಯ ಗುಣವಿಹುದೆ?

ಅಲ್ಲಮ

ಪ್ರೀತಿಯ ಕತ್ತಲಲ್ಲ ಅದು, ಕಾಮಲತೆ
ಕಾಯದ ಕತ್ತಲೆ! ಈ ಇದೇ ಮೋಹದಲಿ ಬಂಧಿಸಿದೆ.
ಕಾಯದೀ ಕತ್ತಲೆಯ ನೀನು ಕಳೆಯುವವರೆಗು
ನನ್ನೊಲವ ನೀನರಿಯೆ.

ಕಾಮಲತೆ

ಬೆಳಕು-ಕತ್ತಲೆ ಎಂಬ ಒಗಟುಗಳ ಮಾತೇಕೆ!
ತಿಳಿಯ ಬೆಳುದಿಂಗಳಿದೆ, ತಂಗಾಳಿ ತೀಡುತಿದೆ,
ಮಲ್ಲಿಗೆಯ ಕಂಪಿಗೋ ತಿಂಗಳಲಿ ಕರಗುತಿದೆ.
ಸೊಗದ ಬೆಳುದಿಂಗಳಲಿ ನನ್ನೆಲ್ಲ ಮೈಸಿರಿಯ
ನೈವೇದ್ಯ ಮಾಡುವೀ ಪ್ರೇಮ ಪೂಜೆಗೆ ನಾನು
ಕಾದು ನಿಂದಿಹೆನೀಗ.

ಅಲ್ಲಮ

(ಸ್ವಗತ) ಮಾಯೆ!
(ಪ್ರಕಾಶ) ಕಾಮಲತೆ, ಮನವ ಬಿಗಿಹಿಡಿದುಕೊ.
ನಾ ಬಂದ ಕಾರ್ಯವಾಯಿತು ಇನ್ನು. ಹೊರಡುವೆನು,
ಮತ್ತೆ ಪಯಣದ ಹಾದಿ ನನ್ನೆದುರು ತೆರೆದಿಹುದು.

ಕಾಮಲತೆ

ಅಯ್ಯೋ, ನಿಲ್ಲಿ, ನಿಲ್ಲಿ, ನನ್ನ ಕೈ ಬಿಡಬೇಡಿ,
ಸೆರಗೊಡ್ಡಿ ಬೇಡುವೆನು—ನಿಮ್ಮ ಒಲುಮೆಯ ಹೊರಗೆ
ನೂಕಬೇಡಿರಿ ಇಂತು.

ಅಲ್ಲಮ

ಕೈ ಹಿಡಿವ ಕೈ ಬಿಡುವ ಭ್ರಾಂತಿ ಎಲ್ಲಿದೆ ಚೆಲುವೆ
ಈ ಪ್ರೇಮಬದ್ಧರಿಗೆ!
ಮತ್ತೊಮ್ಮೆ ಸೇರುವೆವು.

ಕಾಮಲತೆ

ಮತ್ತೊಮ್ಮೆ ಸೇರುವೆವೆ? ಎಲ್ಲಿ, ಯಾವಾಗ?

ಅಲ್ಲಮ

ಕಾಮಲತೆ—ನೀನೀಗ ಬರಿಯ 'ಕಾಮಲತೆ'.
'ಪ್ರೇಮಲತೆ' ಯಾದಾಗ ಮತ್ತೆ ನಾನೇ ಬರುವೆ.

(ಹೋಗುತ್ತಾನೆ)

ಕಾಮಲತೆ

ಅಯ್ಯೊ, ಹೊರಟೆಹೋದರೆ ಇವರು.
ಕಡೆಗೂ ಕನಸೊಡೆಯಿತೇ . . .
ಬೆಳುದಿಂಗಳೂ ಬಿಸಿಲಾಯ್ತೆ ?

## ದೃಶ್ಯ ೩

(ಆವರಣ: ಕಾಡು. ಕಾಮಲತೆ ಮತ್ತು ಸಖಿಯರು: ಮಧುಮಾನಿ, ವಿಮಲೆ. ಸುಡು ಬೇಸಗೆಯ ನಡುಹಗಲು.)

ವಿಮಲೆ

ಏನು ಪಾಡವ್ವ ಇದು !
ಉಪವನದ ಹಸುರಿನಲಿ ನಡೆಯೆ ಬಳಲುವ ನಿಮಗೆ
ಕಾಡಿನೀ ಕಲ್ಲುಮುಳ್ಳನು ತುಳಿದು ನಡೆಯುವಂತಾಯ್ತೆ.

ಮಧುಮಾನಿ

ಎಲ್ಲ, ಆ ಅಲ್ಲಮನ ದೆಸೆಯಿಂದ !
ಆ, ಅವನೇಕೆ ಬಂದನೋ, ಈ ಬೇಗೆಯನು ತಂದನೋ !

ಕಾಮಲತೆ

ಅವರ ನೀ ದೂರದಿರು ಮಧುಮಾನಿ.
ನನ್ನ ಪಾಡೇ ಇಂತು ; ಬೆಳುದಿಂಗಳೂ ಬಿಸಿಲಾಯ್ತು
ನನ್ನ ಹಾದಿಯ ತುಂಬ.

ವಿಮಲೆ

ಬಳಲಿಹಿರಿ ಅಮ್ಮಾಜಿ. ಇಲ್ಲಿ ಈ ಮರದಡಿ ಕುಳಿತು
ವಿಶ್ರಮಿಸಿಕೊಳ್ಳಿ.

ಕಾಮಲತೆ

ಇನ್ನೆಲ್ಲಿ ವಿಶ್ರಾಂತಿ, ವಿಮಲೆ, ಇನ್ನೆಲ್ಲಿ ವಿಶ್ರಾಂತಿ!
ನಾನವರ ಕಾಣುವತನಕ ಮನಕಿಲ್ಲ ಶಾಂತಿ.

ಮಧುಮಾನಿ

ಎಲ್ಲಿ ಹೋದನೊ ಅವನು, ಆ ಮೋಡಿಕಾರ.
ಮೊದಲಿಂದಲೂ ಅಷ್ಟೆ; ಬರಿಯ ಮೋಡಿಯ ಆಟ!

ವಿಮಲೆ

ಅವನಿತ್ತಲೇ ನಡೆದುದನು ಕಂಡು ಹಿಂಬಾಲಿಸಲು,
ಇನ್ನೆತ್ತ ಹೋದನೋ . .

(ಮೆಲ್ಲಮೆಲ್ಲನೆ ದೂರದಿಂದ—ಅಸ್ಪಷ್ಟವಾಗಿ ಮದ್ದಲೆಯ ದನಿ ಕೇಳಿಸುತ್ತದೆ)

ಅದೊ ಅವ್ವ, ಮೊಳಗುತಿದೆ, ಮಧುರ ಮುರಜಧ್ವಾನ,
ನಡುಹಗಲ ಮೌನದಲಿ ದುಮುದುಮಿಸ ತೊಡಗಿಹುದು.

ಮಧುಮಾನಿ

ಆ, ಅದೊ—ಅವ್ವ, ಮದ್ದಲೆಯ ದೂರ ಬಂಧುರನಾದ!
ಅಹುದವ್ವ, ಆತನದೇ ವಾದನ.

ಕಾಮಲತೆ

(ನೆನಪುಗಳ ಸುರುಳಿ ಬಿಚ್ಚುವಂತೆ—ಆತ್ಮಗತ)

ಆ! ಅದೇ ಮಧುರ ಮುರಜಧ್ವಾನ!
ಆ ಅಂದು ಮಧುಕೇಶ್ವರಾಲಯದಿ ಅನುರಾಗ ದೀಪ್ತಿಯನು
ಹತ್ತಿಸಿದ ಬೆಳಕುದನಿ! . . . . . .
ಆದರೂ, ಆದರೂ, ಅವರತ್ತ, ನಾನಿತ್ತ,
ನಡುವೆ ನಾದದ ಹೊನಲು!
ಓ! ಮತ್ತೆ ವಿರಹದುರಿಯನು ಕೆದಕಿ
ಮೊಳಗುತಿದೆ ಬೆಂಕಿದನಿ!

ಮಧುಮಾನಿ

ಅವ್ವ, ಏನು ಇದು! ಏನನೋ ಜಾನಿಸುತ ನಿಂತಿರೇತಕೆ ಇಂತು.
ಬನ್ನಿ, ಈ ದನಿಯ ದಾರಿಯಲೆ ನಡೆದು ನೋಡುವ ಅವರ.

(ದನಿ ಬರು ಬರುತ್ತಾ ಸಮೀಪಸ್ಥವಾದಂತೆ ಮೊಳಗುತ್ತದೆ)

ವಿಮಲೆ

ಅಗೋ, ಅಲ್ಲಿ . . . ಹಸುರ ಕಣ್ಣಂತೆಸೆವ ಆ ಸರಸ್ತೀರದೆಡೆ
ಆ ಅವರೆ ನಾದದುನ್ಮಾದದಲಿ ಮುಳುಗಿಹರು!

ಮಧುಮಾನಿ

ಏನು ನಾದದ ಮೋಡಿ! ಕಾನನದ ತರುಲತೆಯನೂ ಕೂಡ
ನರ್ತನಂಗೈಸುವುದು.

(ಮೃದಂಗವಾದನ ಇದ್ದಕ್ಕಿದ್ದಂತೆ ನಿಲ್ಲುತ್ತದೆ)

ಅಲ್ಲಮ

ಓ! . . . ನೀವೊ.
ಇಂಥ ದಟ್ಟಡವಿಗೂ, ಎಂತು ಬಂದಿರಿ ನೀವು?

ವಿಮಲೆ

ನಿಮ್ಮ ಮದ್ದಲೆ ದನಿಯೆ ದಾರಿಯಾಯಿತು ನಮಗೆ.

ಮಧುಮಾನಿ

ನಿಮ್ಮ ಏಕಾಂತತೆಗೆ ಭಂಗವಾಯಿತೋ ಏನೊ.

ವಿಮಲೆ

ಭಂಗವಾಗದೆ ಉಂಟೆ?
ಬೇಕೆಂದೆಯೇ ಹೇಳದೆಯೆ ಕೇಳದೆಯೆ
ಬಂದು ಕುಳಿತಿಹರಿಲ್ಲಿ; ಭಂಗವಾಗದೆ ಉಂಟೆ!

ಅಲ್ಲಮ

ಹೇಳದೆಯೆ ಕೇಳದೆಯೆ ಬಂದವಗೆ,
ಹೇಳದೆಯೆ ಕೇಳದೆಯೆ ನಡೆವುದೂ ಸಹಜವೆ.

ಮಧುಮಾನಿ

ಅಹುದಹುದು ; ನೀವೇನ ಮಾಡಿದರು ಅದು ನಿಮಗೆ ಸಹಜವೇ.
ಕಾಮುಲತೆಯನ್ನೊಲಿವುದೆಂತು ಸಹಜವೋ.
ಅಂತೆಯೇ ಬಿಟ್ಟು ಬರುವುದು ಸಹಜ . . . . ಅಲ್ಲವೆ ?

ಅಲ್ಲಮ

ಏನು ವಿಭ್ರಾಂತಿಯಿದು !
ಕಪ್ಪುರದ ಪಾತ್ರೆಯಲಿ ಬೆಂಕಿಯನ್ನಳೆಯುವುದೆ ?

ಕಾಮಲತೆ

ಬರಿಯ ಒಗಟಿನ ಮಾತು ; ಅರ್ಥವಾಗದ ತೊಡಕು.
ನನಗಾಗಿಯೇ, ನನ್ನ ನರಸಿಯೆ ಬಂದಿರೆಂದು ನುಡಿದವರೀಗ,
ನಾಟ್ಯವಿದ್ಯೆಯ ಸೆಪದಿ ಮನವ ಕದ್ದವರೀಗ—
ವೈರಾಗ್ಯ ಸೆಪವೊಡ್ಡಿ ಬಿಟ್ಟು ನಡೆವುದು ಸರಿಯೆ ?

ಅಲ್ಲಮ

ಕೇಳು ಓ ಕಾಮಲತೆ ; ಕೇಳು :
ಮುಂದೆ ಇನ್ನೂ ಮುಂದೆ, . . .
ಕಾಯದೀ ಕತ್ತಲೆಯ ಕಳೆದಂದು ನೀನರಿವೆ
ನಾನಾರು—ನೀನಾರು ಎಂಬುದನು ;
ಎಲ್ಲಿಯೂ ನಿಲದೆ ನಿನ್ನೊಲವು ನನ್ನೆಡೆಗೇ
ತುಡಿಯುತಿಹುದೇಕೆಂದು ;
ನೀನರಿವೆ, ನಿನ್ನ ನರಸುತ ನಾನು ಬಂದುದೇಕೆಂದು ;
ಪೂರ್ಣವಹುದೀ ಒಲುಮೆ ಕಾಳಿಕೆಯ ಕಳೆದಂದು.

ಕಾಮಲತೆ

ನೀವೆನ್ನ ಬಳಿಯಿರಲು, ಕಾಳಿಕೆಯು ಕಳೆಯದೇ ?
ಪೂರ್ಣವಾಗದೆ ಒಲುಮೆ ?
ಬೇಡುವೆನು, ಕೈಮುಗಿದು—ತಳ್ಳದಿರಿ
ನಿಮ್ಮಗಲಿಕೆಯ ಕಂದರಕೆ.

ಅಲ್ಲಮ

ಕಾಮಲತೆ, ನಾನೆನಿತು ಹೇಳಿದರು ನೀನಿನ್ನು
ಕಾಮಲತೆಯಂತೆಯೇ ನುಡಿವೆ!
ಪ್ರೇಮಲತೆಯಾಗು ನೀ, ಭಕ್ತಿಲತೆಯಾಗು;
ದೇಹಮೋಹವ ತೊರೆದು, ದಿವ್ಯಪ್ರೇಮದ ಧವಳ
ಹೈಮಾಚಲೋನ್ನತಿಗೆ ನೀನೇರಿ ಬಂದಾಗ
ಎಲ್ಲವೂ ತಿಳಿಯುವುದು.

ಕಾಮಲತೆ

ಅಂಗವನು ಧರಿಸಿಯೂ ಅಂಗದ ಹಂಗ ತೊರೆಯ-
ಬೇಕೆಂದೆಂಬ ಹಟವೇಕೆ?
ಈ ಮಧುರ ಸುಂದರ ದೇಹದಾಕರ್ಷಣೆಯ ಜೊತೆಯಲ್ಲಿ
ಸಕಲವನು ಸೋಲಿಸುವ ಮದ್ದಲೆಯ ಕಲೆ ಏಕೆ?
ನಿಮ್ಮ ಈ ಮದ್ದಲೆಯ ದನಿಯಿಂದ ನನ್ನೊಲವ ಗುರುತಿಸಿದೆ.
ಜನ್ಮಜನ್ಮಕು ನಿಮ್ಮ ಚರಣಪಥವನೆ ಹಿಡಿವೆ;
ನೀವೆನ್ನ ನಗಲಿದರೆ, ಬದುಕಲಾರೆನು ಪ್ರಭುವೆ.

ಅಲ್ಲಮ

ತನುವಿನೊಳಗಿದ್ದೂ ತನುವ ಗೆಲಬೇಕು ಕಾಮಲತೆ.
ನಿನ್ನ ನೀ ಮೋಹದಿಂದೆಚ್ಚರಿಸಲೆಂದೆಯೇ
ಮದ್ದಲೆಯ ಹಂಗಿಗೊಳಗಾದೆ, ಆ ಕಾರ್ಯವಾಯ್ತಿನ್ನು.
ನಾನಿಲ್ಲಿಂದ ನಡೆವ ಮೊದಲಿದೊ, ಈ ಮದ್ದಲೆಯನಿಲ್ಲಿಯೇ
ಬಿಸುಡುವೆನು . . . ಬಂಧನಕೆ ಒಳಪಡಿಸಿದೀ ವಸ್ತು ಎಂದಿಗೂ
ಬಂಧನವೆ!

(ಕೊಳಕ್ಕೆ ಎಸೆಯುವನು: ನೀರಿಗೆ ಬಿದ್ದ ಸದ್ದು)

ಕಾಮಲತೆ

ಅಯ್ಯೋ. . . . . . ಏನು ಮಾಡಿದಿರಿ. . . . .

ಅಲ್ಲಮ

ಹರಿಯಿತಿದು, ನಿನ್ನ ಸನ್ನೆಡೆಗೆಳೆದ
ಹೊರದನಿಯ ಬಂಧನ.
ಈ ದನಿಗು ಮಿಗಿಲುಂಟು ಮನದ ಮದ್ದಲೆ ನಿನದ!
ಅದ ಕೇಳು ಕಾಮಲತೆ. . . ಬಲು ಮಧುರ
ಒಳಗೆ ಬೆಳಕಾದಾಗ ನೀನೆ ಕೇಳುವೆ ಅದನು. . .

ದೂರವಿಲ್ಲಾ ದಿನವು. . .
ನಾ, ಬರುವೆ ಕಾಮಲತೆ; ಬರಿ ಬವಣೆಗೊಳ್ಳದಿರು
ಶುದ್ಧಸಾತ್ವಿಕ ಪಥವ ಹಿಡಿದು ಬಾ ಸನ್ನೆಡೆಗೆ—
ಪೂರ್ಣವಾಗುವುದಂದು, ನಿನ್ನೊಲುಮೆ ನನ್ನೊಳಗೆ!
ಶುಭಮಸ್ತು.

(ಹೋಗುವನು)

ಕಾಮಲತೆ

ಪ್ರಭೂ . . . . . . ಪ್ರಭೂ . . . . .

(ಮೂರ್ಛೆ ಹೋಗುವಳು)

ವಿಮಲೆ

ನಿಲ್ಲಿ, ಹೋಗದಿರಿ; ಅಯ್ಯೋ ಮೂರ್ಛೆಹೋದಳು ಒಡತಿ.

ಮಧುಮಾನಿ

ಅಮ್ಮಾಜಿ . . . ಅಮ್ಮಾಜಿ . . .
ಎಂಥ ಕಲ್ಲೆದೆಯವನೆ, ಆ ನಿಷ್ಕರುಣಿ, . . . ಅಮ್ಮಾಜೀ . . .

ವಿಮಲೆ

ಮಧುಮಾನಿ, ಅಳುವ ಸಮಯವಿದೇನೆ? ನೀರು ತಾ ಕೊಂಚ.
ಅಗೊ, ಅಮ್ಮಾಜಿ ಕಣ್ಣು ತೆರೆಯುತಲಿಹರು—
ಸದ್ಯ! . . ಬದುಕಿದೆವು ನಾವು. . .

ಕಾಮಲತೆ

(ಅದೇ ಉನ್ಮಾದ ಸ್ಥಿತಿಯಲ್ಲಿ)

ಪ್ರಭೂ . . . ಪ್ರಭೂ . . . ನನ್ನ ಹೃದಯುವ ಕದ್ದು
ಓಡಲೆಳಸುವೆಯಾ . . .
ಇಲ್ಲ, ಇಲ್ಲ, ಹಿಂದೆನಿತೊ ಭವಗಳಲಿ ಆಡಿದಾಟವ ಮತ್ತೆ
ಇಂದು, ಈಗಲು, ಆಡಿ ನುಸುಳಲಾರೆ.
ಈ, ಇಗೊ, ನನ್ನ ಕೈ ಹಿಡಿದಿಹುದು ನಿನ್ನ ಮೃದುಪಾದವನು
ಇಲ್ಲ, ಕಣ್ಣುತಪ್ಪಿಸಲಾರೆ ನೀನೆನ್ನ ; ಕಣ್ಣುತಪ್ಪಿಸಲಾರೆ.
ಓಹ್ ; ಏನೊಲವು ಪ್ರಭೂ, ನಿನ್ನದೇನೊಲವು . . .

ಮಧುಮಾನಿ

ಇದೇನೆ ವಿಮಲೆ ; ಅವ್ವನವರೇನೇನೊ
ಕನವರಿಸುವಂತಿಹುದು, ಉನ್ಮಾದಗೊಂಡಿಹರು . . .

ವಿಮಲೆ

(ಕಾತರಳಾಗಿ)

ಅಮ್ಮಾಜೀ ; ಸಹಿಸಿಕೊಳ್ಳಿ, ಅಮ್ಮಾಜಿ.
ಚೆಲುವೆ ರಾಜಕುಮಾರಿ ಸಾಮಾನ್ಯನೊಬ್ಬನಿಗೆ
ಇಂತು ಹಂಬಲಿಸುವುದೆ ; ಹೋದರೇನಂತೆ ಬಿಡಿ ಅವನೊಬ್ಬ . . .

ಕಾಮಲತೆ

ತೊರೆದು ಹೋದರೆ ಅವರು . . . ದಿಟವೆ . . .
ನುಡಿಯದಿರು ಅಪ್ರಿಯುವ ವಿಮಲೆ, ನುಡಿಯದಿರು
ಹೊರಟು ಹೋದರೆ ಅವರು . . . ?
ಘನತಿಮಿರದಾಳಕ್ಕೆ ನೂಕಿಹೋದರೆ ಅವರು . . . ?

(ಮತ್ತೆ ಮದ್ದಲೆಯ ದನಿ ಕೇಳಿದಂತಾಗುವುದು)

ಆ ! ಯಾವುದದು, ಮಧುರ ದನಿ . . . . .
ಆ, ಅದೇ ಮದ್ದಲೆಯ ಮಧುರನಾದದ ಹೊನಲು
ಅವರಲ್ಲಿ . . . . . . ನಾನಿಲ್ಲಿ . . . . . .
ತಾ ದೋಣಿಯನು ; ತಾ, ದಾಟಿಯೇ ಬಿಡುವೆನೀ
ಕಿಚ್ಚುಕಾರುವ ಹೊನಲ.

ಧ್ವನಿ

ನಿನಗಾಗಿಯೇ ಬಂದೆ ಕಾಮಲತೆ . . . .
ನಿನಗಾಗಿಯೇ ಬಲು ದೂರದೂರಿಂದ ನಿನ್ನನರಸಿಯೆ ಬಂದೆ . . .
. . . . . . . . . . . . . .
ಏತಕೀ ಉದ್ವೇಗ:
ನನ್ನೆದೆಯ ತುಂಬೆಲ್ಲ ಇರುವುದೊಂದೇ ಪ್ರೀತಿ . . . .
. . . . . . . . . . . . . .
ಕಪ್ಪುರದ ಪಾತ್ರೆಯಲಿ ಬೆಂಕಿಯನ್ನಳಿಯುವುದೆ!
ಎದೆಯೊಲವಿಗಲ್ಲದೆಯೆ ಮೈ ಚಲುವಿಗಾನೊಲಿಯೆ . . .
. . . . . . . . . . . . . .
ಪ್ರೇಮಲತೆಯಾಗು ನೀ, ಭಕ್ತಿಲತೆಯಾಗು . . .
ಶುದ್ಧ ಸಾತ್ವಿಕ ಪಥವ ಹಿಡಿದು ಬಾ ನನ್ನೆಡೆಗೆ . . .
. . . . . . . . . . . . . .
ಬಾ ನನ್ನೆಡೆಗೆ . . . . . . ಬಾ ನನ್ನೆಡೆಗೆ . . . . . .

ಕಾಮಲತೆ

(ಉದ್ವೇಗ ಪೂರ್ಣಳಾಗಿ)

ಇಗೊ ಬಂದೆ . . . . . ಬಂದೆ ಪ್ರಭುವೆ . . .
ನೋಡದೋ ವಿಮಲೆ, ನೋಡದೋ . . . .
ಅದೊ ಅಲ್ಲಿ
ಚೆಲುವ ತೇಜಸ್ವಿ ಪ್ರಭುವರನಲ್ಲಿ
ಹೊಂಬೆಳಗಿನಿಂದ್ರಧನು ಪರಿವೇಷದಾಚೆಯಲಿ
ಚಂದ್ರಹಾಸದೊಳೆಂತು ಕೈ ಬೀಸುತಿಹನು!
ಇಲ್ಲಿಂದ ಅಲ್ಲಿವರೆಗೂ ನೋಡು
ಬೆಳ್ಳಿ ಬೆಳಕಿನ ಹಾದಿ!
ಇದೊ ಹೊರಟೆ . . . ಏನಿದು,
ಹೋದಂತೆ, ಹೋದಂತೆ ದೂರ ಸರಿಯುವರೇಕೆ—
ಎಲ್ಲಿಗೆ, ಮತ್ತೆಲ್ಲಿಗೆ . . . ?
ಅದೊ, ಅದೊ, ಆ ಧವಳ ಶಿಖರದಲಿ,

ಸುಂದರ ಪ್ರಭುವರನ ಮಧುರ ಮಂಗಳ ರೂಹು
ಕರಗಿ ಬಯಲಾಗುತಿದೆ!
ಕಡಲಾಡುತಿದೆ ಬೆಳಕು . . . ಏನಪೂರ್ವದ ಸೊಗಸು . . .
ಈಗಳರಿತೆನು ಪ್ರಭುವೆ,
ಈಗಳರಿತೆನು ನಾನು . . .
ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ ಚೆಲುವಂಗೇಕೊಲಿದೆನೆಂಬುದನು,
ಅನಂತಕಾಲವೂ ನಿನಗೇಕೆ ನಾನಿಂತು ತಪಿಸಿದ್ದೆನೆಂಬುದನು . . .
. . . ಸಖಿ ವಿಮಳೆ . . . ಮಧುಮಾನಿ . . . ಹಾರೈಸಿ ಕಳುಹಿಸಿರಿ
ಜನ್ಮ ಜನ್ಮದ ಒಡೆಯ ಪ್ರಭುವರನ ಕೈವಿಡಿಯೆ ಹೊರಟಿಹೆನು.
ಬೇಡ, ಬಿಡಿ ಸಿಂಗಾರ . . . ಲಜ್ಜೆ ಬಿಂಕಗಳೇಕೆ?
ಆ, ಅದೋ, ಮಧುರ ನಾದದ ಸೇತು . . .!
ಹೋಗಿ ಬರುವೆ, ಪ್ರಿಯಸಖೀ, ಹೋಗಿ ಬರುವೆ . . .

[ಕರುಣ ಮಿಶ್ರಿತವಾದ ವಾದ್ಯಸ್ವರದ ಹಿನ್ನೆಲೆಯಲ್ಲಿ ಗಂಭೀರವಾದ ಮೃದಂಗ ನಾದ ಅಸ್ಪಷ್ಟವಾಗಿ ಕೇಳಿಬರುವುದು.]

## ಇದೆ ಬದುಕು ?—ಇದೆ ಬದುಕು !

ಬಂದಳೋ ಮಂಥರೆ !
ವಕ್ರಗತಿ, ವಕ್ರನಡೆ ! ವಕ್ರದೇಹಿಯ ವಕ್ರನೆರಳು
ಬಿತ್ತು ! ಚಾಚಿತು
ರಾಮನಿಗು ರಾಜ್ಯಕೂ ನಡುವೆ ಹದಿನಾಲ್ಕು ವರುಷಗಳ ದಾರುಣಾರಣ್ಯ !
ಸೀತೆಗೂ ಸುಖಕು ನಟ್ಟನಡು ಹಾರುತಿಹ ಸುಡುಲಂಕೆಯಾ ನೆರಳು !
ಮೈಗೆ ಮೈ ಅಂಟದೊಲು ಅಡ್ಡಿ ಬಂದೀತೇನೊ
ಎನುತ ಹೂವಿನಹಾರ ಮುಳ್ಳೆನಿಸಿ ಕಿತ್ತೆಸೆದ
ಪ್ರೇಮಿಗಳು—ಆ ರಾಮ ! ಆ ಸೀತೆ !
ಹಾ ರಾಮ ! ಹಾ ರಾಮ ! ಎನುವ ಆಕ್ರಂದನ
ನಡುವೆ ಕಾನನ !
ಕರಿನೀರು, ಕಪ್ಪುನೆರಳು !
ಅಶೋಕವೃಕ್ಷದ ಅಡಿಗೆ ಶೋಕತಪ್ತೆ !
ದೀಪದಡಿಯಲಿ ಹೆಪ್ಪು
ಹೆಪ್ಪಾದ ವಿಷಗಪ್ಪು !
ಇದೆ ಜಗವೇ ? ಇದೆ ಬದುಕೆ ? ಇದುವೆ ಬದುಕು !

ಕರ್ಣ ! ಪಾಪದ ಕೂಸು ಕರ್ಣ !
ಹೆತ್ತ ಕರುಳೊಮ್ಮೆ ಒತ್ತರಿಸಿತ್ತು—ಮತ್ತೆ ಕಿತ್ತು ತಿನ್ನಲು ಬಂತು !
ಕುರುರಂಗದಲ್ಲೊದಗಿ ಬಂದಿತ್ತು, ಇಳಿದಿತ್ತು ಹಳೆಸರಕು.
ಕರಿಯನೋ ? ಕುಂತಿಯ ನೆರಳೋ ?
ಕುರುಭೂಮಿಯಲ್ಲೊದವಿ ಬಂದಿತ್ತು ಸರ್ಪಾಸ್ತ್ರ !
ಅರಿಯನೋ ?—ಇಳಿದಿಳಿದು ಉರುಳಿತ್ತು ತೆರೆ
ಕಣ್ಣಮೇಲಿಳಿದ ಪ್ರೀತಿಯ ಮಂಜುಪರೆ !
ಮಿತ್ರನಿಗೆ ರಾಹು !
ಸೂರ್ಯಪುತ್ರನಿಗೆ ಕೃಷ್ಣ ಸರ್ಪಾಸ್ತ್ರ
ಅವನ ಕೊಲ್ಲುವರಿಲ್ಲ—ನೆರಳು ನಿತ್ಯ !
ನಾಯಂ ಹಂತಿ ನ ಹನ್ಯತೇ !

ಅತ್ತ ಹೆತ್ತೊಡಲು ಬೆಂಕಿ
ಇತ್ತ ಎತ್ತೆತ್ತಲೂ ಹೊಗೆಯದೇ ಆಟ!
ಇದೆ ಬಲವೆ? ಇದೆ ಬದುಕೆ? ಇದುವೆ ಜಗವೇನು?
ಕುರುರಾಯ—ಹೂಡಿದ್ದ ಹೂಟವೊಂದು
ಆಡಿದ್ದೇಆಟ ಬೇರೊಂದು:
'ರಾಮರಾಮಾ ಏನು ಆಯಿತೊ ಆಯಿತಾಯಿತು ಹೋಯಿತು'
Between the conception and the creation—
ಕೃಷ್ಣ ಸರ್ಪದ ನೆರಳು!

ಮುಗಿಲಿನಲಿ ನೆತ್ತಿ ಮೇಲೊಂದು ಮೋಡ ಆಡುತಿತ್ತು
ನೆಲದಲ್ಲಿ ಹುಡಿಗೊಂಡು ಹಾತೊರೆದು ಬತ್ತಿತ್ತು
ಹನಿಗಾಗಿ ಹೃದಯ,
ಬನಿಗಾಗಿ ಬಸಿರು!
ಇಳಿದಿತ್ತು ಬರಿಯ ಬಿಸಿನೆರಳು!
'ಮಲಗು ಮಲಗೆನ್ನದೆಯು ಮಂಟಪದ ಮೂರ್ತಿ
ಮುಗಿಲಿನಲಿ ಮೋಡಗಳು ಕೂಡುತಿವೆ ಭರದಿ'
ರಾಮು! ರಾಮಾ!
'ಗಿಳಿಯು ಪಂಜರದೊಳಿಲ್ಲ—ಬರಿಪಂಜರವಾಯಿತಲ್ಲ!'

ಬಾಳಾಯ್ತು ಬಂಜೆಗುಡಿ
ಮಾತಾಯ್ತು ನಂಜುನುಡಿ!
ಹೃದಯದೀ ಹಸಿರುನೆಲ ಉಸಿರುಗಟ್ಟಿಹುದೇನೊ
ಅರೆಬೆಂದ ಆಸೆಗಳ ಹಸಕುಹೊಗೆ
ಮುಕ್ಕಳಿಸಿ ಮೊಗೆಯುತಿದೆ ಅತ್ತಕಡೆ!
ಅಲ್ಲೆ ಅದೊ ಬೆಟ್ಟ ನಿಂತಿಹುದು. ಬಿಸಿಲಿನಲಿ ನಿಗಿ ನಿಗಿ ನಿಗಿ!
ಉರಿಯುತಿದೆ ಈ ಇಲ್ಲಿ ಹೊಗೆಯಡಿಗ ಚಿತೆಯೊಂದು ಧಗ ಧಗ ಧಗ
ನಿಂತಿಹುದು ಬೆಂಕಿಹೊತ್ತೊಂದು ಕೈ
ಅದರಾಚೆ ಬೆಂಕಿಯಾಗಿಹ ಮೈ
Asleep my love? oh! Dead my dove?
ಋತುವಸಂತವು ಬಂದು ಬಾಗಿಲಲಿ ನಿಂದಾಗ

ನೆಲವು ನಾಚಿಕೆಗೊಂಡು ಮಂಜತೆರೆಯಲಿ ಮೊಗವ
ಮರೆಮಾಚಿ ನಿಂದಿಹುದು ! ಮೊಗ್ಗು ಮೈದೆರೆದಾಗ
ದುಂಬಿ ನಾಚಿಕೆಗೊಂಡು ಕಂಪು ಮೊಗೆಮೊಗೆದೆಸೆವ
ಒಲವಿನೀ ಸೆಳೆತವನು ತಪ್ಪಿಸುತ—
ಈ ಸೆಳೆತ ತಪ್ಪಿಸಿತು—ಆ ಸೆಳೆತ ತಪ್ಪದಿದೆ !
ನೀಲನೀಲದ ಆಚೆ ಎಲ್ಲಿ ಹುಟ್ಟಿದರೇನು ?
ಈ ಸೆಳೆತ ತಪ್ಪುವುದೆ ?
ಅಲೆಯೆಲ್ಲ ಬಂದು ಬಡಿವುದು ಇಲ್ಲಿ—ವಿಧಿಯಿಲ್ಲ ?
ಕಪ್ಪು ನೆಲದಲಿ—ಕಪ್ಪುತೀರದಲಿ !
ಮುರಿದಹಾಡನು ತುಂಬಿ ಹೊರಟಹರಿದ ಗಂಟು !
ಇದೆ ಬದುಕೆ ? ಇದೆ ಜಗವೆ ? ಇದುವೆ ಒಲವೇ ?

ಮುರಿಯಲಾರದ ನಂಟು
ಅಲೆ—ದಡ, ಒಲವು ವಿರಹ !
ದೀಪ ಕಿರಿದೋ ಅದರ ನೆರಳು ಹಿರಿದು !
ಒಲವು ಕಿರಿದೋ ಅದರ ವಿರಹ ಹಿರಿದು !
ರಾಮನಿಗು ಸೀತೆಗೂ ನಡುವೆ ಹಾಲಾಹಲವನೂಡುತಿಹ
ಮಂಥರಾಲಂಕೆ ರಾವಣಾರಣ್ಯ !
ಹೃದಯ ಒಲವಿನ ಬದುಕು—ಕೊನೆಗೆ ಸುಡುಗಾಡು !
ಇದನು ಕೊಲ್ಲುವರಿಲ್ಲ—ನೈನಂ ದಹತಿಪಾವಕಃ !!
ಕೆಕ್ಕರಿಸಿ ಮುಗಿಲಿಂದ ಬಂದೊಂದೆ ಚಿಕ್ಕೆ
ಗಕ್ಕನೆಯೆ ಕೆಳಗುರುಳಿ ಆರುತಿದೆ
ಆದರೂ ಆಗಸದ ಸಂಭ್ರಮಕೆ ಕೊನೆಯಿಲ್ಲ.
ಸಾವು ಬಂದೊಡೆ ಏನು, ಬದುಕಿಗೋ ಮಿತಿಯಿಲ್ಲ !
ಬಾನಾಡಿ ಮೋಡಗಳು ತಮ್ಮ ಹೊಸ ಸಂಚಿ
ಬಿಚ್ಚಿ ಚೆಲ್ಲುವುವಿಲ್ಲಿ ಸಿಹಿನೀರು ಸಾಗರಕೆ
ಆದರೂ ಸಾಗರದ ನೀರು ಉಪ್ಪು-ಉಪ್ಪು !
ಆಸೆ ತುಂಬಿದರೇನು, ಬದುಕು ಕಪ್ಪಿನ ಹೆಪ್ಪು !
ನೆರಳಿಗಂದೂ ಗೆಲವು—ಇದೆ ಬದುಕು ? ಇದೆ ಬದುಕು !

ಎಸ್. ಅನಂತ ನಾರಾಯಣ

## ಗಾಥಾಸಪ್ತಶತಿಯಿಂದ

೧

ಅಂತಿಮ ದೆಶೆಯೊಳುಮುನ್ನತಮಾಗಿಯೆ
ಮಾನವಂತರ ಮನವಿಹುದು ;
ಮುಳುಗುತಲಿದ್ದರು ಮೇಲ್ಮೊಗವಾಗಿಯೆ
ಸೂರ್ಯನ ಕಿರಣ ಹೊಳೆಯುವುದು.

೨

ಖಲ ಜನ ಮೈತ್ರಿಯು ಮೊದಲೆ ತಾಸಳಿವುದು
ನೀರೊಳು ಬರೆದ ಗೆರೆಯಂತೆ
ಸುಜನರ ಮೈತ್ರಿಯು ಚಿರಕಾಲ ಉಳಿವುದು
ಶಿಲೆಯೊಳು ಕೊರೆದ ಗೆರೆಯಂತೆ.

೪

ಸುಜನರು ಕೋಪವ ತಾಳರು, ತಳೆದರು,
ಕೇಡನು ನೆನೆಯರು ಅವರು ;
ಕೇಡನು ನೆನೆದರು ನೆನೆದುದ ನುಡಿಯರು,
ನುಡಿದರೆ ಒಡನೆ ನಾಚುವರು.

೫

ಮುನಿದಿಹ ಸುಜನರ ಹೃದಯದ ತೆರದೊಳು
ಶರದದೊಳೀ ಕೊಳದ ನೀರು ;
ಹೊರಗಡೆ ಬೆಚ್ಚನೆ ತೋರುತಲಿರುವುದು,
ಒಳಗಡೆ ಕಡು ತಣ್ಣಗಿಹುದು.

ಎಸ್. ವಿ. ಪರಮೇಶ್ವರಭಟ್ಟ

# ಜೇಡರ ದಾಸಿಮಯ್ಯ

ಪುರಾತನ ಶಿವಶರಣನಾದ ಜೇಡರ ಅಥವಾ ದೇವರ ದಾಸಿಮಯ್ಯನ ಜೀವನಾಂಶಗಳ ವಿಚಾರದಲ್ಲಿ ಅನೇಕ ವಿಮರ್ಶೆಗಳು ನಡೆದಿವೆ. ಈತನ ಮೇಲೆ ನಾಲ್ಕು ವರ್ಷಗಳ ಹಿಂದೆ 'ದೇವರ ದಾಸಿಮಾರ್ಯ ಪ್ರಶಸ್ತಿ' ಎಂಬ ಉದ್‌ಗ್ರಂಥವೊಂದು ಪ್ರಕಟವಾಗಿದೆ. ಶಾಸನಗಳನ್ನು ಪರಿಶೀಲಿಸುತ್ತಿರುವಾಗ ಈಚೆಗೆ ಆತನನ್ನು ಕುರಿತು ನನಗೆ ಕೆಲವು ಸಂಗತಿಗಳು ಗೋಚರವಾದುವು. ಅವು ಅನ್ವೇಷಕರ ದೃಷ್ಟಿಪಥದಲ್ಲಿ ಸಾಕಷ್ಟು ಪ್ರವೇಶಮಾಡಿದಂತೆ ತೋರಲಿಲ್ಲ. ಆದುದರಿಂದ ಅವನ್ನು ಪ್ರಸ್ತುತ ಲೇಖನದಲ್ಲಿ ವಿವೇಚಿಸುತ್ತೇನೆ.

ಮೇಲೆ ಲಕ್ಷಿಸಿದ ಪ್ರಶಸ್ತಿಗ್ರಂಥದಲ್ಲಿ ಪ್ರಕಟವಾದ 'ದೇವರ ದಾಸಿಮಯ್ಯನ ಕಾಲವಿಚಾರ' ಎಂಬ ಲೇಖನದಲ್ಲಿ ಶ್ರೀ ಗೋವಿಂದ ಪೈ ಅವರು ಜೇಡರ ದಾಸಿಮಯ್ಯ ಮತ್ತು ದೇವರ ದಾಸಿಮಯ್ಯ ಎಂಬ ಹೆಸರುಗಳು ಒಂದೇ ವ್ಯಕ್ತಿಗೆ ಅನ್ವಯಿಸುತ್ತವೆ ಎಂದು ಸಾಧಾರವಾಗಿ ಪ್ರತಿಪಾದಿಸಿದ್ದಾರೆ. ಈ ಅಭಿಪ್ರಾಯವನ್ನು ಅಂಗೀಕರಿಸಿ ನಾನು ಪ್ರಕೃತ ವಿವೇಚನೆಗೆ ಉದ್ಯುಕ್ತನಾಗಿದ್ದೇನೆ.

ವಿಜಾಪುರದ ಪ್ರಾಚೀನ ವಸ್ತುಸಂಗ್ರಹಾಲಯದಲ್ಲಿ ಒಂದು ಶಾಸನವಿದೆ. ಅದನ್ನು ಕೇಂದ್ರ ಸರಕಾರದ ಶಾಸನ ಇಲಾಖೆಯವರು ಇ.ಸ. ೧೯೩೩-೩೪ ರಲ್ಲಿ ಪರಿಶೋಧಿಸಿದರು. ಅದರ ಮುಖ್ಯಾಂಶಗಳು ಅದೇ ವರ್ಷದ ಶಾಸನ ಇಲಾಖೆಯ ವರದಿಯ ಮುಂಬಯಿ ಕರ್ನಾಟಕದ ಶಾಸನಗಳ ಪಟ್ಟಿಯಲ್ಲಿ (List of Inscriptions Copied in Bombay Karnatak, No. 157) ಪ್ರಕಟವಾಗಿವೆ. ಅನಂತರ Inscriptions in Northern Karnatak and the Kolhapur State ಎಂಬ ಗ್ರಂಥದಲ್ಲಿ (ಇ.ಸ. ೧೯೩೯) ಶ್ರೀ ಕುಂದಣಗಾರರು ಈ ಶಾಸನವನ್ನು ಪೂರ್ತಿಯಾಗಿ ಪ್ರಕಾಶಗೊಳಿಸಿದ್ದಾರೆ (No. 17). ಮೇಲ್ಕಂಡ ಪ್ರಶಸ್ತಿಗ್ರಂಥದ 'ದೇವರ ದಾಸಿಮಯ್ಯ' ಎಂಬ ತಮ್ಮ ಲೇಖನದಲ್ಲಿ ಡಾ|| ಎಸ್. ಶ್ರೀಕಂಠಶಾಸ್ತ್ರಿಗಳು ಈ ಶಾಸನವನ್ನು ಸಂದರ್ಭಿಸಿದ್ದಾರೆ (ಪು. ೨೦೨). ಆದರೆ ಅವರು ಅದರಲ್ಲಿನ ವಿಷಯಗಳನ್ನು ಚರ್ಚಿಸುವ ಗೊಡವೆಗೆ ಹೋಗಿಲ್ಲ.

ಶ್ರೀ ಕುಂದಣಗಾರರು ಪ್ರಕಟಿಸಿದ ಈ ಶಾಸನಪಾಠವನ್ನು ಶಾಸನ ಇಲಾಖೆಯ ಮುದ್ರಾಪ್ರತಿಗಳ ಸಹಾಯದಿಂದ ಪರೀಕ್ಷಿಸಿದೆನು. ಆಗ ಕೆಲವೆಡೆಗಳಲ್ಲಿ ತಿದ್ದುಪಡಿ

ಅವಶ್ಯಕವೆಂದು ತೋರಿತು. ಈ ಮುಂದೆ ಉದಾಹರಿಸಿದ ಶಾಸನದ ಭಾಗಗಳು ನಾನು ತಿದ್ದಿ ಓದಿದ ಶಾಸನಪಾಠವನ್ನು ಅನುಸರಿಸುತ್ತವೆ.

ದೇವತಾಸ್ತುತಿಯಿಂದ ಪ್ರಾರಂಭವಾಗುವ ಈ ಶಾಸನವು ದೇಶವರ್ಣನೆಗೆ ತೊಡಗಿ, ಕುಂತಲನಾಡಿನ ತರ್ದವಾಡಿ ವಿಷಯವನ್ನು ಮತ್ತು ಆ ಪ್ರದೇಶದ ಕಂಪಣ ಮೂವತ್ತಾರು ಬಾಡ[1] (ಎಂದರೆ ಮೂವತ್ತಾರು ಗ್ರಾಮಗಳ ವಿಭಾಗ) ವನ್ನು ಪ್ರಶಂಸಿಸುತ್ತದೆ. ಈ ಕಂಪಣದಲ್ಲಿ ವಿಶಾಲವಾದ ಕೆರೆಯಿಂದ ಶೋಭಿಸುವ ಕಿರಿಯಿಂಡಿ ಅಥವಾ ಚಿಕ್ಕಿಂಡಿ ಎಂಬ ಗ್ರಾಮವಿದ್ದಿತು. ಮುಂದೆ ಈ ಗ್ರಾಮದ ಅಧಿಕಾರಿಗಳ ವಿವರಗಳು ಬರುತ್ತವೆ. ಬಳಿಕ ಅಲ್ಲಿನ ಬಂದಿನಾಥ ಎಂಬ ಈಶ್ವರನನ್ನು ಕೆಳಗಿನಂತೆ ಸ್ತುತಿಸಿದೆ.

ಅರುವತ್ತೆಂಟುಂ ತೀರ್ಥದೆ
ಕಿರಿಯಿಂಡಿಯ ಠಾವು ಲೇಸೆನುತ್ತೊಲವಿಂದಾ |
ಪರೆಯಂ ಸೂಡಿದ ದೇವಂ
ಕರೆಕಂಠಂ ನೆಲಸಿ ಬಂದಿನಾಥಂ ನಿಂದಂ || ೧

ಈ ಶಿವಸ್ಥಾನಕ್ಕೆ ಶಿವಾಗಮ ತಜ್ಞನಾದ ಚಂದ್ರಾಭರಣ ಎಂಬ ಯತಿ ಆಚಾರ್ಯನಾಗಿದ್ದನು. ಈ ಕಿರಿಯಿಂಡಿ ಗ್ರಾಮದಲ್ಲಿ ದೇಡರದಾಸ ಎಂಬುವನ ವಂಶದಲ್ಲಿ ಸೋಮಯ್ಯನು ಜನಿಸಿದನು. ಈತನ ಸತಿ ಹೊಲ್ಲವ್ವೆ. ಇವರ ಮಗ ಚೀಲಯ್ಯ; ಈತನಿಗೆ ಕೇತನೆಂಬ ತಮ್ಮನಿದ್ದನು. ಈ ಸಂಗತಿಯನ್ನು ವಿವರಿಸುವ ಪದ್ಯಗಳು ಇಂತು:

ದೇಡರ[2]ದಾಸನ ಕುಲದೊಳು
ನೋಡಿರೆ ಸೋಮಯ್ಯನೊಗೆದನಾತನ ಸತಿ ತಾಂ |
ನೋಡ ಪತಿಬ್ರತೆ ಸದ್ಗುಣಿ
ರೂಡಿಯ ಹೊಲ್ಲವ್ವೆಯೆಂಬಳಬಳಾರತ್ನಂ || ೨

ಅವರಿರ್ಬರ್ಗೊಗೆದಂ ತಾಂ
ಭುವನಸ್ತುತನೆನಿಸಿ ನೆಗಳ್ದ ಚೀಲಾಳ್ವಂ ಸಂ-|
ಭವಿಸಿದವೊಲು ಚೀಲಯ್ಯಂ
ಕವಿಜನಸಂಸ್ತುತ್ಯನೆನಿಪ ವೇಲಂ ಕೇತಂ || ೩

---

[1] ಈ ಪದದಲ್ಲಿ ಮತ್ತು ಮುಂದೆ ಸರ್ವತ್ರ ಮೂಲದಲ್ಲಿ ಶಕಟರೇಫವಿದ್ದ ಸ್ಥಳದಲ್ಲಿ ಸಾಮಾನ್ಯ ರಕಾರವನ್ನು ಬಳಸಲಾಗಿದೆ.

[2] ಇಲ್ಲಿ ಮತ್ತು ಮುಂದಿನ ೫-೬ ಪದ್ಯಗಳಲ್ಲಿ 'ದೇಡ' ಎಂಬ ಪದವು ಶ್ರೀ ಕುಂದಣಗಾರರ ಗ್ರಂಥದಲ್ಲಿ 'ದೋಡ' ಎಂದು ಪ್ರಕಟವಾಗಿದೆ. ಅದು ಸರಿಯಲ್ಲ. ಮೂಲ ಶಾಸನಪಾಠವು ನಿರ್ದುಷ್ಟವಾಗಿ 'ದೇಡ' ಎಂದೇ ಕಂಡರಿಸಲಾಗಿದೆ.

ಈ ಚೀಲಯ್ಯನು ಆ ಗ್ರಾಮದ ಮೂವರು ಪ್ರಭುಗಳಾದ ಬಮ್ಮರಸ, ಕೇಶಿರಾಜ ಹಾಗೂ ಸೋವರಸ; ಸ್ಥಾನಿಕರು, ಅರುವತ್ತೊಕ್ಕಲು; ಮುಂತಾದವರ ಕೈಯಿಂದ ಒಂದು ಮನೆ ಮತ್ತು ಹನ್ನೆರಡು ಮತ್ತರು ಭೂಮಿಯನ್ನು ಪಡೆದುಕೊಂಡು ಬಂದಿನಾಥ ಇಲ್ಲಿವೆ ಬಂದೇಶನೆಂಬ ಶಿವನಿಗೆ ಧಾರೆಯೆರೆದು ದತ್ತಿಯಾಗಿ ಕೊಟ್ಟನು. ಈ ದಾನವನ್ನು ಪ್ರತಿಗ್ರಹಿಸಿದವನು ಆ ಶಿವಸ್ಥಾನದ ಆಚಾರ್ಯನಾದ ಚಂದ್ರಾಭರಣ ಯತಿ. ಈ ವಿಷಯಗಳನ್ನು ವಿವರಿಸುವ ಶಾಸನಸ್ಥ ಪದ್ಯಗಳು ಹೀಗೆ.

ಸ್ಥಾನಂ ಮಾನ್ಯಂ ಪಿಟ್ಟುಂ
ಭೂನುತರಪ್ಪರುವತೊಕ್ಕಲುಂ ಬಂಮರಸಂ |
ಮಾನನಿಧಿ ಕೇಶಿರಾಜಂ
ಜೈನಾಗಮವಾರ್ಧಿ ಸೋಮನೆನಿಸುವ ಸೋಮಂ || ೪

ಇನಿಬರ ಕೈಯೊಳು ಧಾರೆಯ
ನನುನಯದಿಂ ಪಡೆದು ಬಳಿಕ ದೇಡರಬೇಲಂ |
ಮುನಿಚಂದ್ರಾಭರಣಬ್ರತಿಗ-
ನುನಯದಿಂ ಕಾಲಕರ್ಚಿ ಧಾರೆಯನಿತ್ತಂ || ೫

ಹಂನೆರಡು ಕೈಯ ಮನೆಯಂ
ಹಂನಿರ್ಮತ್ತರ್ಸುಭೂಮಿಯಪ್ಪಾ ಕೆಯ್ಯಂ |
ತಂನೊಲವಿಂ ಬಂದೇಶಂ-
ಗುಂನತಮತಿ ದೇಡಚೀಲ ಧಾರೆಯನಿತ್ತಂ || ೬

ಈ ಘಟನೆಗಳು ನಡೆದಾಗ ದೇವಗಿರಿ ಯಾದವ ವಂಶದ ಜೈತ್ರಪಾಳ ಅಥವಾ ಜೈತುಗಿ ಎಂಬ ರಾಜನು ಆಳುತ್ತಿದ್ದನು. ಈ ಶಾಸನದ ಕಾಲ ಶತವರ್ಷ ೧೧೧೯, ನಳ ಸಂವತ್ಸರದ ಪುಷ್ಯ ಶುದ್ಧ ಪಂಚಮಿ ಬುಧವಾರ, ಉತ್ತರಾಯಣ ಸಂಕ್ರಮಣ, ಅಂದರೆ **ಕ್ರಿ. ಶ. ೧೧೯೬ ಡಿಸೆಂಬರ ೨೫.**

ಈ ಮುಂದಿನ

ಮೇಳಾಳಿಕೆ ಮನೆಯಂ [ತಾಂ]
ಮೂಲಿಗರುಂ ಪ್ರಭುಗಳೆಂಟು ಹಿಟ್ಟುಂ ಮಾನ್ಯಂ |
ಕೇಳಿರೆ ಸರ್ಬನಮಶ್ಯವ
ಪಾಳಿಪೆವಾವೆಂದು ಧಾರೆಯಿತ್ತರ್ಮುದದಿಂ || ೭

ಎಂಬ ಪದ್ಯದಲ್ಲಿ ಗ್ರಾಮಮುಖ್ಯರು ಮೊದಲಾದವರು ದತ್ತ ಆಸ್ತಿಯನ್ನು ಸಂರಕ್ಷಿಸುವಂತೆ ಆಶ್ವಾಸನವಿತ್ತ ಅಂಶವನ್ನು ನಿರೂಪಿಸಿದೆ.

ಮೇಲೆ ಉದಾಹರಿಸಿದ ಶಾಸನಭಾಗದ ೨ ನೆಯ ಪದ್ಯದಲ್ಲಿ ದೇಡರದಾಸನ ಕುಲದಲ್ಲಿ ಜನಿಸಿದ ಮುಂದಿನ ಪೀಳಿಗೆಯವರ ವೃತ್ತಾಂತವು ಆರಂಭವಾಗಿ ಅದು ೩ ನೆಯ ಪದ್ಯದಲ್ಲಿ ಮುಂದುವರಿಯುತ್ತದೆ. ಇಲ್ಲಿ ನಿರ್ದಿಷ್ಟನಾದ ದೇಡರ ದಾಸನು ಯಾರು ?

ಹನ್ನೆರಡನೆಯ ಶತಮಾನದಲ್ಲಿ ಮತ್ತು ಅನಂತರ ಕರ್ನಾಟಕದ ಶಿವಭಕ್ತರ ಪ್ರಪಂಚದಲ್ಲಿ ದಾಸ, ದಾಸಿ, ದಾಸಿಮಯ್ಯ ಮುಂತಾದ ಪದಗಳಿಂದ ಒಬ್ಬ ಪ್ರಸಿದ್ಧ ವ್ಯಕ್ತಿ ಕೀರ್ತಿತನಾಗುತ್ತಿದ್ದನು. ಆತನು **ದೇವರ ದಾಸಿಮಯ್ಯ.** ಆತನು ಈ ಹೊತ್ತಿಗೆ ಮಹಾಶಿವಭಕ್ತನೆಂದು, ಪವಾಡಪುರುಷನೆಂದು ಗಣ್ಯನಾಗಿದ್ದನು. ಶಾಸನೋಕ್ತ **ದೇಡರ ದಾಸನು, ದೇವರ ದಾಸಿಮಯ್ಯ**ನಾಗಿರಬೇಕು ಎಂದು ಗ್ರಹಿಸಲು ಹೆಚ್ಚಿನ ವಿವೇಚನೆಯ ಅಗತ್ಯತೋರುವುದಿಲ್ಲ. ದೇವರ ದಾಸಿಮಯ್ಯ **ಜೇಡರ ದಾಸಿಮಯ್ಯ**ನೆಂದೂ ಸಂಬೋಧಿತನಾಗುತ್ತಿದ್ದನು ಎಂಬ ಅಂಶವನ್ನು ಇಲ್ಲಿ ಸ್ಮರಿಸಬಹುದು.

ಶಾಸನೋಕ್ತ **ದೇಡರದಾಸ** ಎಂಬ ಹೆಸರಿನಲ್ಲಿಯ **ದೇಡ** ಎಂಬ ಪದ **ಜೇಡ** ಎಂಬುದರ ರೂಪಾಂತರವಾಗಿರಬೇಕು. ದಕಾರವನ್ನು ಜಕಾರವಾಗಿಯೂ ಜಕಾರವನ್ನು ದಕಾರವಾಗಿಯೂ ಉಚ್ಚರಿಸುವುದು ಭಾಷೆಯ ಒಂದು ನಡವಳಿ. ಸಂಸ್ಕೃತದ ದಂತ ಕನ್ನಡದಲ್ಲಿ ಜಂತವಾಯಿತು; ಸಂಸ್ಕೃತದಲ್ಲಿ ಜಂಪತಿ ಎಂಬುದು ದಂಪತಿ ಎಂದು ಮಾರ್ಪಟ್ಟಿತು. ಜಯಸಿಂಹ—ದೇಸಿಂಗ, ಜಿನಸು—ದಿನಸು; ಇವು ಇಂಥ ಜ-ದ ಪರಿವರ್ತನೆಗೆ ಕೆಲವು ಉದಾಹರಣೆಗಳೆಂದು ಹೇಳಬಹುದು.

ಶಾಸನಕಾಲದಲ್ಲಿ ಜೇಡರ ದಾಸಿಮಯ್ಯನ ವಂಶದವರಲ್ಲಿ ಕೆಲವರು **ಕಿರಿಯಿಂಡಿ** ಅಥವಾ **ಚಿಕ್ಕಿಂಡಿ** ಗ್ರಾಮದಲ್ಲಿ ನೆಲಸಿದ್ದರು. ಅವರು ಸೋಮಯ್ಯ ಮತ್ತು ಅವನ ಮಗ ಚೀಲಯ್ಯ. ಪ್ರಕೃತ, ಚೀಲಯ್ಯನು ಶಿವಭಕ್ತನಾಗಿದ್ದನು. ಇದಕ್ಕೆ ನಿದರ್ಶನ ಶಾಸನದಲ್ಲಿ ಹೇಳಿದಂತೆ ಆತನು ದಾನಮಾಡಿದ ವಿಷಯ. ಆತನನ್ನು ೩ ನೆಯ ಪದ್ಯದಲ್ಲಿ ಸುವಿಖ್ಯಾತ ಚೀಲಾಳ್ವನಿಗೆ ಹೋಲಿಸಿದೆ. ಚೀಲಯ್ಯ ಮತ್ತು ಚೀಲ್ವಾಳ ಇವು ಒಂದೇ ಹೆಸರಿನ ರೂಪಭೇದಗಳು. ಆ ಹೆಸರು ಬಸವಣ್ಣನವರ ವಚನಗಳು ಮುಂತಾದ ವೀರಶೈವ ಸಾಹಿತ್ಯದಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವ ಚೀಲಾಳ ಅಥವಾ ಚಿಲ್ಲಾಳ ಎಂಬ ಹೆಸರಿಗೆ ಸಮಾನವಾಗಿದೆ.

ಚೀಲಾಳ ಲೋಕೋತ್ತರ ಶಿವಭಕ್ತನಾದ ಸಿರಿಯಾಳನ ಪುತ್ರ. ತಂದೆಯ ಸತ್ತ್ವಪರೀಕ್ಷೆಯ ವಿಕಟ ರೌದ್ರನಾಟಕದಲ್ಲಿ ಬಲಿದಾನದ ವಸ್ತುವಾಗುವ ಅಮೋಘ ಭಾಗ್ಯವನ್ನು ಪಡೆದವನೆಂಬ ಕಾರಣದಿಂದ ಚೀಲಾಳನು ಶೈವ ಭಕ್ತಿ ವಾಙ್ಮಯದಲ್ಲಿ

ಚಿರಸ್ಮರಣೀಯನಾಗಿದ್ದಾನೆ. ಈ ಕಥೆಯ ಉಗಮ ಮತ್ತು ವಿಸ್ತಾರದ ವೃತ್ತಾಂತ ಕುತೂಹಲಪೂರ್ಣವಾಗಿದೆ. ಅದನ್ನು ಅನ್ಯತ್ರ ನಿವೇದಿಸಿದ್ದೇನೆ.[3]

ದೇವರ ದಾಸಿಮಯ್ಯನಿಗೂ ಪ್ರಸ್ತುತ ಶಾಸನದ ಸೋಮಯ್ಯ-ಚೀಲಯ್ಯರಿಗೂ ಸುಮಾರು ಒಂದುವರೆ ನೂರುವರ್ಷ ಎಂದರೆ ಐದಾರು ತಲೆಮಾರಿನಷ್ಟು ಕಾಲ ವ್ಯತ್ಯಾಸವಿದೆ. ಮೇಲಾಗಿ, ಇವರು ದಾಸಿಮಯ್ಯನ ಹೆಣ್ಣು ಸಂತತಿಯವರೋ ಇಲ್ಲವೆ ಗಂಡು ಸಂತತಿಯವರೋ ಎಂಬುದನ್ನು ತಿಳಿಯಲಿಕ್ಕೆ ಸಾಧನವಿಲ್ಲ. ಗಂಡು ಸಂತತಿಯವರು ಆಗಿದ್ದರೂ ಆಗಿರಬಹುದು. ಈ ಅಂಶವು ಇವರ ವಂಶನಾಮದಿಂದ ಸೂಚಿತವಾಗುತ್ತದೆ. ಚೀಲಯ್ಯನ ಕಾಲವು ೧೨ ನೆಯ ಶತಮಾನದ ಅಂತ್ಯಭಾಗ ವಾದುದರಿಂದ ಆತನ ತಂದೆ ಸೋಮಯ್ಯ ಸ್ಥೂಲವಾಗಿ ಅದೇ ಶತಮಾನದ ಮಧ್ಯ ಭಾಗದಲ್ಲಿ ಜೀವಿಸಿದ್ದನು ಎಂದು ಇಟ್ಟುಕೊಳ್ಳಬಹುದು.

ಚೀಲಯ್ಯನನ್ನು ೫ ನೆಯ ಪದ್ಯದಲ್ಲಿ 'ದೇಡರ ಚೀಲ'ನೆಂದು, ೬ ನೆಯ ಪದ್ಯ ದಲ್ಲಿ 'ದೇಡ ಚೀಲ'ನೆಂದು ನಿರ್ದೇಶಿಸಿದೆ. ಇದು ಲಕ್ಷಣೀಯವಾದ ಅಂಶ. ಮೇಲೆ 'ದೇಡ' ಎಂಬುದು 'ಜೇಡ' ಎಂಬುದರ ಪರ್ಯಾಯಪದವೆಂದು ವಿವರಿಸಿದ್ದೇನೆ. ಈ ಪ್ರಯೋಗಗಳಿಂದ ದಾಸಿಮಯ್ಯನ 'ಜೇಡ-ಜೇಡರ' ಎಂಬ ಕಾಯಕದ ಉಪಾಧಿ ಆತನ ಮುಂದಿನ ಸಂತತಿಯವರಲ್ಲಿ ಅನೂಚಾನವಾಗಿ ನಡೆದುಹೋಯಿತು ಎಂಬ ವಿಷಯ ಸ್ಫುಟವಾಗುತ್ತದೆ.

ವಿಜಾಪುರದ ವಸ್ತುಸಂಗ್ರಹಾಲಯದಲ್ಲಿದ್ದ ಪ್ರಸ್ತುತ ಶಾಸನ ಪೂರ್ವದಲ್ಲಿ ಯಾವ ಗ್ರಾಮದಲ್ಲಿ ಇದ್ದಿತು ಎಂಬ ವಿಷಯ ತಿಳಿದಿಲ್ಲ. ಅದು ಮೂಲತಃ ವಿಜಾಪುರ ಜಿಲ್ಲೆಯ ತಾಲ್ಲೂಕಿನ ಸ್ಥಳವಾದ ಇಂಡಿಯಲ್ಲಿ ಇದ್ದಿರಬಹುದು. ಈ ಸೂಚನೆಗೆ ಆಧಾ ರವು ಶಾಸನದಲ್ಲಿ ವರ್ಣಿತವಾದ ಕಿರಿಯಿಂಡಿ ಅಥವಾ ಚಿಕ್ಕಿಂಡಿ ಈ ಗ್ರಾಮನಾಮ ದಲ್ಲಿ ದೊರೆಯುತ್ತದೆ. ಶಾಸನಕಾಲದಲ್ಲಿ ಹತ್ತಿರ ಹತ್ತಿರ ಒಂದೇ ಹೆಸರಿನ ಎರಡು ಹಿರಿ-ಕಿರಿಯ ಗ್ರಾಮಗಳಿದ್ದು ಅವುಗಳಲ್ಲಿ ಒಂದು ಹಾಳಾಗಿ ಇನ್ನೊಂದು ಉಳಿದಿ ದ್ದಂತೆ ತರ್ಕಿಸಬಹುದು. ಇಲ್ಲವೆ ಆ ಎರಡು ಗ್ರಾಮಗಳು ಸೇರಿ ಈಗಿನ ಒಂದು ಊರು ಆಗಿರಬಹುದು.

ದೇವರ ದಾಸಿಮಯ್ಯನ ಗ್ರಾಮ ಮುದನೂರು; ಇದು ವಿಜಾಪುರದ ನೆರೆಯ ಕಲಬರ್ಗಿ ಜಿಲ್ಲೆಯಲ್ಲಿದೆ. ಇಂಡಿಯಿಂದ ಇದರ ಅಂತರ ಬಹಳ ದೂರವಿರಲಾರದು. ದಾಸಿಮಯ್ಯನ ವಂಶಿಕರಲ್ಲಿ ಕೆಲವರು ಮುಂದೆ ಮುದನೂರಿಂದ ಬಂದು **ಇಂಡಿಯಲ್ಲಿ**

[3] ಪ್ರಬುದ್ಧ ಕರ್ನಾಟಕ, ಸಂಪುಟ ೩೫, ಸಂಚಿಕೆ ೧ (೧೯೫೩), 'ಸಿರಿಯಾಳಸೆಟ್ಟಿ' ಎಂಬ ಲೇಖನವನ್ನು ನೋಡಿ.

**ನೆಲಸಿದಂತೆ** ಗೋಚರವಾಗುತ್ತದೆ. ಈ ಸ್ಥಲಾಂತರದ ಕಾಲವನ್ನಾಗಲಿ, ಅನ್ಯವಿವರಗಳನ್ನಾಗಲಿ ನಿರ್ಧರಿಸಲು ಸಾಧನಗಳು ಉಪಲಬ್ಧವಿಲ್ಲ.

ಮೇಲೆ ಕನ್ನಡಸಾಹಿತ್ಯ ಮತ್ತು ಭಾಷಾನಿಯಮದ ಆಧಾರಗಳಿಂದ ವಿಜಾಪುರದ ಶಾಸನದಲ್ಲಿ ಉಕ್ತನಾದ 'ದೇಡರ ದಾಸ'ನು ಜೇಡರ ದಾಸಿಮಯ್ಯನಾಗಿರಬೇಕೆಂದು ಪ್ರತಿಪಾದಿಸಲಾಗಿದೆಯಷ್ಟೆ. ಈ ಅಭಿಪ್ರಾಯ ಆಂಧ್ರ ಸಾಹಿತ್ಯದ ಕೆಲವು ಆಧಾರಗಳಿಂದಲೂ ಸಮರ್ಥನೆಗೊಳ್ಳುತ್ತದೆ ಎಂಬ ವಿಷಯ ಲಕ್ಷಣೀಯವಾಗಿದೆ. ಆಂಧ್ರಸಾಹಿತ್ಯದಲ್ಲಿ ದಾಸಿಮಯ್ಯನು ಮಲ್ಲಿಕಾರ್ಜುನ ಪಂಡಿತಾರಾಧ್ಯನ (೧೨ ನೆಯ ಶತಮಾನ) ಶಿವತತ್ತ್ವಸಾರ ಎಂಬ ಗ್ರಂಥದಲ್ಲಿ ನಿರ್ದಿಷ್ಟನಾಗುತ್ತಾನೆ. ಈ ಕೃತಿಯಲ್ಲಿ ಅಸೀಮ ಶಿವಭಕ್ತನೆಂದು ಆತನನ್ನು ವರ್ಣಿಸುತ್ತಾ 'ತೇಡರ ದಾಸಯ'ನೆಂದು ಹೆಸರಿಸಿದೆ (ದೇ. ದಾ. ಪ್ರಶಸ್ತಿ, ಪುಟ ೩೧೩). ಅನಂತರ ದಾಸಿಮಯ್ಯನನ್ನು ಕೀರ್ತಿಸಿದ ಇನ್ನೊಬ್ಬ ತೆಲುಗು ಕವಿ ಪಾಲ್ಕುರಿಕೆ ಸೋಮನಾಥ (ಕ್ರಿ. ಶ. ೧೧೬೦-೧೨೪೦). ಈತನು ತನ್ನ ಬಸವಪುರಾಣದಲ್ಲಿ ದಾಸಿಮಯ್ಯನನ್ನು ದೇಡರ ದಾಸಿಮಯ್ಯನೆಂದು ಕರೆದಿದ್ದಾನೆ (ಅದೇ ಗ್ರಂಥ ಪುಟ ೩೧೪).

ದೇವರದಾಸಿಮಯ್ಯ ಎಂಬ ಹೆಸರು ಪ್ರಾಚೀನ ಶಾಸನ ಮತ್ತು ಸಾಹಿತ್ಯ ಪ್ರಯೋಗಗಳಿಂದ ಸಾಧುವೂ ಸಮರ್ಥನೀಯವೂ ಆಗಿದ್ದರೂ ಈಚೆಗೆ ಕೆಲವರಿಗೆ ಅದರ ಔಚಿತ್ಯ ವಿಚಾರದಲ್ಲಿ ಸಂದೇಹವು ತಲೆದೋರಿದೆ. ಈ ಸಂದೇಹದ ಮೂಲಕ ಈ ಪ್ರಾಚೀನ ಹೆಸರನ್ನು 'ದೇವದಾಸಮಯ್ಯ' ಎಂದು ಉದ್ದಕ್ಕೂ ಮಾರ್ಪಡಿಸಿ ಅದಕ್ಕೆ ಕಾರಣವನ್ನು ಹೀಗೆ ತೋರಿಸಲಾಗಿದೆ.

> "ದೇವರ ದಾಸಿಮಯ್ಯ ಎಂಬ ಹೆಸರೇ ಹದಿಮೂರನೆಯ ಶತಮಾನದಿಂದೀಚಿನ ಕನ್ನಡ ಕವಿಗಳಲ್ಲಿ ಹೆಚ್ಚು ರೂಢಿಯಾಗಿ ಬಂದಿದೆಯಾದರೂ ಶಂಕರದಾಸ, ಶಿವದಾಸ, ಕಾಳಿದಾಸಗಳಂತೆ ದೇವದಾಸ ಎಂಬ ಸಮಾಸ ಪದವೆ ಸೂಕ್ತವಾಗಿದೆ. ಬಹುಮಾನ ವಾಚಕವಾಗಿ 'ಇ—ಮ' ಪ್ರತ್ಯಯಗಳನ್ನು ಸೇರಿಸುವ ಬದಲು 'ಮ' ಒಂದನ್ನೆ ಸೇರಿಸಿ 'ಅಯ್ಯ' ಪದದೊಡನೆ ಕೂಡಿ ಕರೆವುದೇ ಒಂದು ಬಗೆಯಲ್ಲಿ ಲೇಸೆನಿಸುತ್ತದೆ. ಇಕಾರವನ್ನು ಸೇರಿಸುವದರಿಂದ ಆಗುವ ವಿಕಾರವೆಂದರೆ 'ದೇವದಾಸಿಮಯ್ಯ' ಎಂಬುದನ್ನು ಸಂಕ್ಷೇಪಿಸಿ ಹೇಳಹೊರಟು ಮ—ಅಯ್ಯಗಳನ್ನು ತೆಗೆದುಹಾಕಿದಾಗ ಬರೀ 'ದೇವದಾಸಿ' ಎಂದು ಉಳಿಯುತ್ತದೆ. ಇದು ವಿಕಾರವಲ್ಲವೆ?"
>
> [ದೇ. ದಾ. ಪ್ರಶಸ್ತಿ, ಪು. ೩೬-೩೭]

ಈ ವಾದಸರಣಿಗೆ ಒಂದು ತಪ್ಪು ತಿಳಿವಳಿಕೆ ಹಿನ್ನೆಲೆಯಾಗಿದೆ. ಅದೇನೆಂದರೆ ಕನ್ನಡ 'ದಾಸಿ' ಎಂಬ ರೂಪವನ್ನು ಸಂಸ್ಕೃತ 'ದಾಸೀ' (ದಾಸ ಎಂಬುದರ ಸ್ತ್ರೀಲಿಂಗ) ಎಂಬ ಪದಕ್ಕೆ ಸಮೀಕರಿಸಿದುದು.

ಕನ್ನಡ ದಾಸಿ ಎಂಬ ಪದದ ಭಾವವನ್ನೂ ಔಚಿತ್ಯವನ್ನೂ ತಿಳಿಯಬೇಕಾದರೆ ಅಂದಿನ ಕಾಲದ ಸಾಹಿತ್ಯ ಮತ್ತು ಶಾಸನ ವಾಙ್ಮಯವನ್ನು ಸ್ವಲ್ಪದೂರಕ್ಕೆ ಹಣೆಯಿಕ್ಕಿ ನೋಡುವುದು ಅಗತ್ಯ.

ಅಕಾರಾಂತ ಪುಲ್ಲಿಂಗಿ ಹೆಸರುಗಳಿಗೆ ಅಂತ್ಯದಲ್ಲಿ ಇಕಾರವನ್ನು ಸೇರಿಸಿ ಕರೆಯುವ ರೂಢಿ ಆ ಕಾಲದಲ್ಲಿ ಸಾರ್ವತ್ರಿಕವಾಗಿದ್ದಿತು. ಅನಂತರ ಇಂಥ ಆಗಮ ಹೊಂದಿದ ಹೆಸರುಗಳ ಕೊನೆಯಲ್ಲಿ ಗ, ಮ, ಅಯ್ಯ, ಮಯ್ಯ, ಮುಂತಾದ ಅದೇ ಅರ್ಥದ ಇಲ್ಲವೆ ಆದರಾರ್ಥಕ ಪದಪ್ರತ್ಯಯಗಳನ್ನು ಸೇರಿಸುತ್ತಿದ್ದರು. ಉದಾಹರಣಾರ್ಥ, ರಾಚ—ರಾಚ್ಚಿ— ರಾಚಿಗ ; ನಾಗ—ನಾಗಿ—ನಾಗಿಮಯ್ಯ ; ಸಂಸ್ಕೃತ ಸಿಂಹದಿಂದ ಸಿಂಗ—ಸಿಂಗಿ—ಸಿಂಗಿರಾಜ ; ಸಂಸ್ಕೃತ ಸೋಮದಿಂದ ಸೋವ—ಸೋವಿ—ಸೋವಿದೇವ ; ಸಂಸ್ಕೃತ ಗೋಪದಿಂದ ಗೋವ—ಗೋವಿ—ಗೋವಿದೇವ ; ಸಂಸ್ಕೃತ ಜೈತ್ರಕದಿಂದ ಜೈತುಗ—ಜೈತುಗಿ—ಜೈತುಗಿದೇವ ; ಸಂಸ್ಕೃತ ಕೇಶವದಿಂದ ಆಗಿರಬಹುದಾದ ಕೇಶ—ಕೇಶಿ—ಕೇಶಿರಾಜ ಇಲ್ಲವೆ ಕೇಶಿಮಯ್ಯ ; ಸಂಸ್ಕೃತ ಮಾಧವದಿಂದ ಆಗಿರಬಹುದಾದ ಮಾದ—ಮಾದಿ—ಮಾದಿರಾಜ; ಸಂಸ್ಕೃತ ಮಲ್ಲಿಕಾರ್ಜುನದಿಂದ ಮಲ್ಲುಗ ಅಥವಾ ಮೈಳುಗ—ಮಲ್ಲುಗಿ (ಮೈಳುಗಿ)—ಮಲ್ಲುಗಿದೇವ (ಮೈಳುಗಿದೇವ). ಈ ನಿಯಮಾನುಸಾರ ಏಕೋರಾಮಿ ತಂದೆ ಎಂಬ ಹೆಸರನ್ನು ನಾವು ಲಕ್ಷಿಸಬಹುದು.

ಈ ನಿಯಮವು ಸಂಸ್ಕೃತಜನ್ಯ ಹೆಸರುಗಳಲ್ಲಿ ಮಾತ್ರವಲ್ಲ, ಕನ್ನಡ ಹೆಸರುಗಳಲ್ಲಿಯೂ ಗೋಚರವಾಗುತ್ತದೆ. ಉದಾಹರಣಾರ್ಥ, ಪೊನ್ನ—ಪೊನ್ನಿ—ಪೊನ್ನಿಮಯ್ಯ ; ಏಚ—ಏಚಿ—ಏಚಿಮಯ್ಯ ; ದೇಚ—ದೇಚಿ—ದೇಚಿಮಯ್ಯ ; ಮಾಚ—ಮಾಚಿ—ಮಾಚಿಮಯ್ಯ ; ಗೊಗ್ಗ—ಗೊಗ್ಗಿ—ಗೊಗ್ಗಿದೇವ ; ಅಮ್ಮ—ಅಮ್ಮಗ—ಅಮ್ಮಗಿ. ಇದೇ ವರ್ಗದಲ್ಲಿ ಉರಿಲಿಂಗ ಪೆದ್ದಿ ಎಂಬ ಹೆಸರನ್ನು ಸೇರಿಸಬಹುದೇನೋ.

ಈ ಮೇಲೆ ಕೆಲವು ಉದಾಹರಣೆಗಳನ್ನು ಮಾತ್ರ ಕೊಟ್ಟಿದೆ. ಇಂಥವುಗಳ ಪಟ್ಟಿಯನ್ನು ಬೇಕಾದಷ್ಟು ಉದ್ದಕ್ಕೂ ಬೆಳೆಯಿಸಬಹುದು.

ವಿಜಾಪುರ ಜಿಲ್ಲೆಯ ಬಾದಾಮಿ ತಾಲೂಕಿನ ನೀಲಗುಂದ ಗ್ರಾಮದ ಕ್ರಿ. ಶ. ೧೧೦೬ ರ ಒಂದು ವೀರಗಲ್ಲ. ಶಾಸನದ ಕೊನೆಯಲ್ಲಿ ಈ ವಾಕ್ಯವು ಬರುತ್ತದೆ : 'ಸರಸ್ವತೀಗಣದಾಸಿ ರೂವಾರಿ ಚಾವುಣ್ಡೋಜನ ಮಾಡಿದ ಕೆಲಸ' (Bombay Karnatak Inscription, Vol. I, Part II, No. 188). ಇದರಲ್ಲಿ ಕಾಣಿಸಿಕೊಳ್ಳುವ 'ದಾಸಿ' ಎಂಬ ಪದ ಪುರುಷವಾಚಕವೆಂಬುದು ಸ್ಪಷ್ಟವಿದೆ. ಇಂಥ ಬೇರೆ

ಉದಾಹರಣೆಗಳೂ ಸಿಕ್ಕುತ್ತವೆ. ಕಿಟೆಲ ಕೋಶದಲ್ಲಿ ಪುಲ್ಲಿಂಗಾತ್ಮಕ 'ದಾಸಿ' ಎಂಬ ಪದವನ್ನು ಲಕ್ಷಿಸಿ, ಅದು ಸಂಸ್ಕೃತ 'ದಾಸೇಯ' ಅಥವಾ 'ದಾಸ್ಯ'ದ ತದ್ಭವವಾಗಿರಬಹುದೆಂದು ಸೂಚಿಸಿದೆ. ಈ ಸೂಚನೆ ಸಮರ್ಪಕವಲ್ಲವೆಂದು ಮೇಲಿನ ವಿವೇಚನೆಯಿಂದ ತಿಳಿಯಬಹುದಾಗಿದೆ.

ಮೇಲೆ ವಿವರಿಸಿದ ರೂಢಿಯನ್ನು ಅನುಸರಿಸಿ ವೃಷಭ ಎಂಬ ಸಂಸ್ಕೃತ ಪದ ಬಸವ ಎಂದು ತದ್ಭವ ಹೊಂದಿ, ಮುಂದೆ ಬಸವಿ ಎಂಬುದಾಗಿ ಪ್ರಯೋಗದಲ್ಲಿ ಕಾಣಿಸಿಕೊಳ್ಳುತ್ತದೆ. ಬಸವಿ, ಬಸವಿದೇವ ಎಂಬ ಹೆಸರು ಬಹುಮಾನ್ಯ ಮತ್ತು ಗೌರವಾಸ್ಪದವಾಗಿದ್ದಿತು ಎನ್ನುವುದಕ್ಕೆ ಅನೇಕ ಪ್ರಸಿದ್ಧ ವ್ಯಕ್ತಿಗಳು ಈ ಹೆಸರಿನಿಂದ ಸಂಬೋಧಿತರಾಗುತ್ತಿದ್ದುದೇ ಸಾಕ್ಷಿ. ಹೆಚ್ಚೇನು, ಹರಿಹರನು ತನ್ನ ಬಸವರಾಜದೇವರ ರಗಳೆಯಲ್ಲಿ ಕಥಾನಾಯಕರಾದ ಬಸವಣ್ಣನವರನ್ನು ಹಲವು ಬಾರಿ ಬಸವಿದೇವ ಎಂದು ಕರೆದಿದ್ದಾನೆ. ಈ 'ಬಸವಿ' ಎಂಬ ಪದವನ್ನು ಮೇಲೆ ಉದಾಹರಿಸಿದ 'ದೇವದಾಸಿ' ಎಂಬ ಮಾತಿನೊಡನೆ ಹೋಲಿಸಬಹುದು. 'ಬಸವಿ' ಎಂಬ ಪದಕ್ಕೆ ಅಂದಿನ ಕಾಲದಲ್ಲಿ ಕಿಂಚಿತ್ತಾದರೂ ನೀಚಾನುಸಂಧಾನ ಅಥವಾ ಕುತ್ಸಿತಾರ್ಥ ಸೂಚನೆ ಇದ್ದಿದ್ದರೆ ಸನ್ಮಾನ್ಯ ಕವಿಗಳೂ ಪ್ರತಿಷ್ಠಿತ ನಾಯಕರೂ ಅದರ ಬಳಕೆಗೆ ಒಪ್ಪುತ್ತಿರಲಿಲ್ಲ.

ಈ ಕಾರಣಗಳಿಂದಾಗಿ ಜೇಡರ ಇಲ್ಲವೆ ದೇವರ ದಾಸಿಮಯ್ಯ ಎಂಬ ಹೆಸರಿನಲ್ಲಿಯ ದಾಸಿ ಎಂಬ ಮಾತನ್ನು ದಾಸ ಎಂದು ತಿದ್ದುವುದು ಶಾಸ್ತ್ರಕ್ಕೂ ವ್ಯವಹಾರಕ್ಕೂ ಸಮ್ಮತವಾಗಲಾರದು.

ದೇಸಾಯಿ ಪಾಂಡುರಂಗರಾಯರು

# ಕವಿಯಲ್ಲಿ ಆಗಂತುಕ ಪ್ರಜ್ಞೆ ಹಾಗೂ ಅನಿಕೇತನ ಪ್ರಜ್ಞೆ

“ಈ ಪ್ರಪಂಚಕ್ಕೆ ಬಂದ ಆಗಂತುಕ ನಾನು ಎಂದು, ಹಲವು ಬಾರಿ ಅನಿಸಿದೆ ನನಗೆ. ನಾನು ಇದರ ಭಾಗವಲ್ಲವೇನೋ! ಯಾವೊಂದು ತಾಣವೂ ಮನೆಯೆನಿಸಿಲ್ಲ ನನಗೆ. ನನಗೆ ಪ್ರಪಂಚದ ವಿಷಯವಾಗಿ ತೀವ್ರವಾದ ಆಸಕ್ತಿಯಿದೆ. ನನ್ನ ಕುತೂಹಲಕ್ಕೆ ಎಲ್ಲೆಯಿಲ್ಲ. ಆದರೆ . . . ಆದರೆ ಪ್ರಪಂಚ ನನ್ನನ್ನು ಗೆದ್ದಿಲ್ಲ; ನನ್ನ ಮನಸ್ಸನ್ನು ಕದ್ದಿಲ್ಲ” ಹೀಗೆಂದು ಒಮ್ಮೆ ಹೇಳಿದರು ಕವಿವರ್ಯ ಶ್ರೀ ಪು. ತಿ. ನ. ಅವರು. ಮೊದಲು ಅದನ್ನು ಕೇಳಿ ಆಶ್ಚರ್ಯವಾಯಿತು. ‘ಕವಿಯೆಂದರೇನು? ಆಗಂತುಕ ಎಂದರೇನು? ಅವನು ಈ ಮಣ್ಣಿನ ಮಗನಾಗಿರುವಾಗ. ಸೌಂದರ್ಯಾರಾಧಕನಾದ ಅವನು ಲೋಕವಶನಾಗದಿದ್ದರೆ ಹೇಗೆ ತಾನೆ ಕವಿಯಾದಾನು? ಇದು ವಿಚಿತ್ರ!’ ಎಂದೆಲ್ಲ ಅನ್ನಿಸಿತು. ಉತ್ತರ ಹೊಳೆಯುವುದಕ್ಕೆ ಬಹಳ ಹೊತ್ತಾಗಲಿಲ್ಲ. ಅಂದು ಅರಿವಾಯಿತು ಲೋಕದಲ್ಲಿ ಒಂದಿನಿತೂ ಆಗಂತುಕನಾಗಿರಲಾರದವನು ಕವಿಯಾಗಲಾರ ಎಂದು. ಆ ವೇಳೆಗೆ ಖಲೀಲ್ ಗಿಬ್ರಾನನ ಮಾತುಗಳು ನೆನಪಿಗೆ ಬಂದುವು. “I am a stranger in this world; I roamed the universe from end to end, but could not find a place to rest my head; nor did I know any human I confronted, neither an individual who would hearken to my mind.”

(‘*Secrets of the Heart*’ by KAHLIL GIBRAN.)

ಎಷ್ಟು ವಿಚಿತ್ರವಾದ ಆದರೂ ಸಮಾನವಾದ ಅನುಭವಗಳನ್ನು ಮೇಲಿನ ಮಾತುಗಳಲ್ಲಿ ಕಾಣಬಹುದು! ಕವಿಕರ್ಮದ ರಹಸ್ಯಲೋಕಕ್ಕೆ ಸರ್ಚ್‌ಲೈಟಿನ ಬೆಳಕಿನ ದಾರಿಯನ್ನಲ್ಲಿ ಕಾಣಬಹುದು.

ಲೌಕಿಕನಿಗೂ ಕವಿಗೂ ಇರುವ ವ್ಯತ್ಯಾಸವಿಷ್ಟೆ: ಲೌಕಿಕ ಲೋಕದವನು, ಲೋಕದ ಪ್ರಜೆ; ಕವಿ ಲೋಕದವನೇ ಆದರೂ ಲೋಕದ ಸಾಕ್ಷಿ, ಆಗಂತುಕ.*

---

* ಕವಿಯೂ ಮನುಷ್ಯನೆ. ಆದರೂ ಆಗುವಿಕೆಯಲ್ಲಿ ತಾರತಮ್ಯವಿದೆ. ಸಾಗರದ ಮೇಲ್ಭಾಗ—ತರಂಗ ಭಾಗ—ಕವಿ; ತಲಭಾಗ ಜನತೆ. ಮೇಲೆ ಕಾಣುವ ತರಂಗ ನೃತ್ಯವಿಲಾಸ ಕವಿಯಲ್ಲಿ ವಿಶೇಷವಾಗಿದೆ. ಆ ವಿಲಾಸವು ಸಾಗರತಲದಲ್ಲಿ ಮಂದ, ಅಸ್ಪಷ್ಟ. ಅಲ್ಲಿಯ ಮಾಂದ್ಯ, ಅಸ್ಪಷ್ಟತೆ ಮೇಲ್ಭಾಗದಲ್ಲಿ ಸ್ಪಷ್ಟರೂಪಧಾರಣಮಾಡಿ ಸಾರ್ಥಕ್ಯ ಪಡೆಯುತ್ತದೆ. ಮತ್ತೆ ಈ ತರಂಗಭಾಗದ ಜಲ ಬಾಹ್ಯ ವಾತಾವರಣಕ್ಕೆ ಅತ್ಯಂತ ಹೆಚ್ಚು ಪ್ರತಿಸ್ಪಂದನ ತೋರುತ್ತದೆ. ಸೂರ್ಯಕಿರಣ ಸ್ಪರ್ಶ

ಈ ಮಾತುಗಳಿಗೆ ವಿಪರೀತಾರ್ಥವಾಗದಿರಲೆಂದು ಮುಂದೆ ಅವುಗಳನ್ನು ವಿವರಿಸ ಲಾಗುತ್ತದೆ. ಕವಿಯೆಂದರೇನು? ಕಾವ್ಯ ಎಂದರೇನು? ಎಂಬ ಪ್ರಶ್ನೆಗಳಿಗೆ ಉತ್ತರ ಕೊಡುವುದಕ್ಕೆ ಹೊರಟಾಗ ಮೇಲಿನ ಮಾತುಗಳ ವಿವರಣೆ ತಾನಾಗಿಯೆ ದೊರೆಯು ತ್ತದೆ.

ನುಡಿಯಾಗಿ ಒಡಮೂಡುವ ಹೃದಯದ ರಸಾನುಭವವನ್ನು ಕಾವ್ಯವೆಂದೂ, ಹಾಗೆ ತಾನು ಪಡೆದ ರಸಾನುಭವವನ್ನು ವಾಗ್ರೂಪದಿಂದ ಅಭಿವ್ಯಕ್ತಗೊಳಿಸ ತಕ್ಕವನನ್ನು ಕವಿಯೆಂದೂ ಹೇಳಬಹುದು. ಇಲ್ಲಿ ಕವಿಯಲ್ಲಿ ಎರಡು ಶಕ್ತಿಯನ್ನು ಕಾಣುತ್ತೇವೆ. ಒಂದು ತಾನು ಕಂಡ ವಸ್ತುವಿನಲ್ಲಿ ರಸಾನುಭವ ಪಡೆಯುವ ಶಕ್ತಿ; ಮತ್ತೊಂದು ಹಾಗೆ ಪಡೆದ ಅನುಭವವನ್ನು ಮಾತಾಗಿಸಿ ಎಲ್ಲರೊಡನೆ ಸುಖಿಸುವ ಶಕ್ತಿ. ಸುಂದರವಾದುದನ್ನು ಕಂಡು ಸುಖಿಸಿದ ಮಾತ್ರದಿಂದಲೆ ಯಾರೂ ಕವಿ ಯಾಗರು. ಯಾವ ಕೇವಲ ತೀವ್ರಾನುಭವವೂ—ಅದು ಸುಖವಿರಬಹುದು, ದುಃಖ ವಿರಬಹುದು; ಪ್ರಸಾದವಿರಬಹುದು, ಜಿಗುಪ್ಸೆಯಿರಬಹುದು—ಕಾವ್ಯವಾಗದು. ಹುಳಿ ಗೊಂಡು ಮೊಸರಾದ ಮಾತ್ರದಿಂದಲೆ ಬೆಣ್ಣೆಯಾದಂತಲ್ಲ! ಮೊಸರಿನಿಂದ ಅದರ ಸತ್ವವನ್ನು ಮಥಿಸಿ ಬೇರ್ಪಡಿಸುವ, ಆ ಅನುಭವವನ್ನು ಮಣ್ಣಂಟಿನಿಂದ ಬೇರ್ಪಡಿಸುವ ಶಕ್ತಿ ಹಾಗೂ ಅದನ್ನು ಮಾತಿನಲ್ಲಿ ಹೇಳಿ ಎಲ್ಲರ ಅನುಭವವಾಗುವಂತೆ ಮಾಡುವ ಸಾಮರ್ಥ್ಯಬೇಕು. ಈ ಸಾಹಸ ಹಲಸಿನ ಹಣ್ಣಿನಿಂದ ಅದರ ಅಂಟನ್ನು ಬೇರ್ಪಡಿಸುವ ಸಾಹಸದಂತಹದು. ಶ್ರೀರಾಮಕೃಷ್ಣರು ಹೇಳಿದರು: ಹಾಗೆ ಮಾಡಬೇಕಾದವರು ಎಣ್ಣೆಯನ್ನು ಸವರಿಕೊಳ್ಳಬೇಕೆಂದು. ಕವಿ ಮಾಡುವ ಕೆಲಸ ಅದೆ. ಇದು ಪ್ರಜ್ಞಾ ಪೂರ್ವಕವಾಗಿ ಅವನಿಂದ ಆಗುತ್ತದೆಂದು ಹೇಳಲಾಗುವುದಿಲ್ಲ. ಸ್ವಭಾವಸಿದ್ಧವಾಗಿ ರುವ ಶಕ್ತಿಯೊಂದರಿಂದ ಸ್ವಯಂಪ್ರೇರಿತವಾಗಿ ಆಗುತ್ತದೆ. ಆ ಅದನ್ನೆ ಆಗಂತುಕ ಪ್ರಜ್ಞೆಯೆಂದು ಮತ್ತು ಅನಿಕೇತನ ಪ್ರಜ್ಞೆಯೆಂದು ವರ್ಣಿಸುತ್ತೇವೆ.

ಒಂದು ವಸ್ತುವಿನಲ್ಲಿ ಆನಂದ ಉಂಟಾಗಬೇಕಾದರೆ ಅದರಿಂದ ನಮ್ಮಲ್ಲಿ ಮೊದಲು ವಿಸ್ಮಯ ಉಂಟಾಗಿರಬೇಕು. ಈ ವಿಸ್ಮಯ ನಿರ್ವ್ಯಾಜ ಪ್ರೀತಿಯಾದಾಗ ಆನಂದಾನು ಭವವಾಗುತ್ತದೆ. ಆದರೆ ಆನಂದಾನುಭವ ಮಾತನಾಡುವಷ್ಟು ಸುಲಭವಲ್ಲ. ಲೋಕ

---

ವಾದಾಗ, ಬಿಸಿಯಗಾಳಿ ಮೈದಡವಿ ಬೀಸಿದಾಗ, ಆವಿಯಾಗಿ, ಜಲಮುಕ್ತವಾಗಿ, ನೀಲಗಗನದಲ್ಲಿ ಅದು ಲೀಲೆಗೊಳ್ಳುತ್ತದೆ. ಹಿಮ ಶೀತಚುಂಬಿತವಾದಾಗ ಮಂಜುಗೆಡ್ಡೆಯಾಗಿ ಕಡಲ ಮೇಲ್ಭಾಗದಲ್ಲಿ ತೇಲಾಡಿ ಮೋದಗೊಳ್ಳುತ್ತದೆ. ಹಾಗಾಗಿ ಮುಗಿಲು, ಮಂಜುಗೆಡ್ಡೆಗಳೆಲ್ಲ ಕಡಲಿನಿಂದ ಬೇರೆ ಯೆಂಬ ಭ್ರಮೆಯನ್ನುಂಟುಮಾಡುತ್ತದೆ. ಬೇರಾದರೂ ಬೇರಲ್ಲ; ಬೇರಲ್ಲದಿದ್ದರೂ ಬೇರೆ! ಕವಿ ಜನತೆ ಹಾಗೆ.

ದಲ್ಲಿ ಅದನ್ನು ಒಂದು ಕ್ಷಣವಾದರೂ ಶುದ್ಧರೂಪದಲ್ಲಿ ಪಡೆಯುವುದು ಎಲ್ಲರಿಗೂ ಸಾಧ್ಯವಲ್ಲ. ಕಾರಣ, ವಸ್ತುವಿಗೂ ನಮಗೂ ಆನಂದಬಾಂಧವ್ಯವಲ್ಲದ ಇತರ ಬಾಂಧವ್ಯಗಳೆ ಹೆಚ್ಚು. ಸುಂದರವಾದ ವಸ್ತು ಉಪಯೋಗಕವಾದುದೂ, ವ್ಯಾಪಾರ ಯೋಗ್ಯವಾದುದೂ, ಅಹಂಸಂಬಂಧಿಯಾದುದೂ, ಇಲ್ಲವೆ ವೈರಭಾಜನವಾದುದೂ ಆಗಿರಬಹುದು. ಆದ್ದರಿಂದ ಅದರ ವಿಚಾರವಾಗಿ ನಿರ್ವ್ಯಾಜ ಪ್ರೀತಿ ಮೂಡುವುದು ಕಷ್ಟ. ಹಾಗೂ ವಸ್ತು ಅತಿಪರಿಚಿತವಾದಾಗ ಅದು ಎಷ್ಟೆ ಸುಂದರವಾದುದಾಗಿದ್ದರೂ ವಿಸ್ಮಯವಾಗದೆ ಹೋಗುತ್ತದೆ. ಹೀಗಿರುವುದರಿಂದ ಸೌಂದರ್ಯಾನುಭವ ಸುಲಭ ಸಾಧ್ಯವಲ್ಲ. ಮತ್ತೊಂದು ಕಷ್ಟವೆಂದರೆ ಒಮ್ಮೊಮ್ಮೆ ಆಗುವ ಅನುಭವವೂ ಶುದ್ಧವಾಗಿರುವುದಿಲ್ಲ. ಅದರಲ್ಲಿ ಉಳಿದ ಎಷ್ಟೋ ವ್ಯಭಿಚಾರೀಭಾವಗಳು ಬೆರೆತು ಕೊಂಡಿರುತ್ತವೆ. ಅದು ಸುಂದರವಾಗಿದೆ ಎಂದುಕೊಳ್ಳುವ ವೇಳೆಗೆ ಹೊಲಸು ಭಾವಗಳೆಷ್ಟೊ ಬಂದು ಶುದ್ಧವಾದ ಸೌಂದರ್ಯಾನುಭವವನ್ನು ಮಲಿನಗೊಳಿಸ ಬಹುದು. ಅದರ ಬೆಲೆ ಅಷ್ಟೆಂದಾಗಲಿ, ಅದು ಕಾಮ್ಯವೆಂದಾಗಲಿ, ಅದು ತನಗಾಗದ ಒಬ್ಬರಿಗೆ ಸೇರಿದುದು ಎಂದಾಗಲಿ ಯಾವುದಾದರೂ ಭಾವಗಳು ಬಂದು ಪೀಡೆ ಹಾಕುತ್ತವೆ, ಕೀಡೆಹಾಕುತ್ತವೆ. ದೇವಾಲಯದ ಗರ್ಭಗುಡಿಯಲ್ಲಿರುವಾಗಲೂ, ಮಂಗಳಾರತಿ ಬೆಳಗುತ್ತಿರುವಾಗಲೂ ನಮ್ಮ ಗಮನ ಅಕ್ಕಪಕ್ಕದ ಬಳೆದನಿಗಳ ಮೇಲೆ, ದೇವಮೂರ್ತಿಗೆ ಧರಿಸಿರುವ ಒಡವೆಗಳ ಬೆಲೆಯಮೇಲೆ, ಮಂಗಳಾರತಿಯ ತಟ್ಟೆಯಲ್ಲಿ ಬಿದ್ದಿರುವ ಕಾಸಿನ ಮೇಲೆ, ಚರಪಿನ ಕಡೆ ಹರಿದಿರುತ್ತದೆ! ಈ ಎಲ್ಲ ವ್ಯಭಿಚಾರೀ ಭಾವಗಳ ಮಧ್ಯೆ ಭಕ್ತಿಭಾವ ಎಷ್ಟರಮಟ್ಟಿಗೆ ಬದುಕಬಲ್ಲುದು? ತಿಳಿನೀರಿನ 'ಜಲ' ದೊಡನೆ—ಊಟೆಯೊಡನೆ—ಬಗ್ಗಡ ಬೆರೆಯುದಂತೆ, ಜೇನಿನೊಡನೆ ಹುಳುಗಳ ಕೀವು ಬೆರೆಯುದಂತೆ ನೋಡಿಕೊಳ್ಳುವುದು ಕಷ್ಟಸಾಧ್ಯವಾದ ಕೆಲಸ. ಆಗಂತುಕ ಪ್ರಜ್ಞೆ, ಅನಿಕೇತನ ಪ್ರಜ್ಞೆ ಅದನ್ನು ಅನಾಯಾಸವಾಗಿ ನೆರವೇರಿಸುತ್ತದೆ.

ಪ್ರತಿಭೆಯನ್ನು 'ಪ್ರಜ್ಞಾ ನವನವೋನ್ಮೇಷಶಾಲಿನೀ' ಎಂದು ಭಟ್ಟತೌತರು ವರ್ಣಿಸಿರುವುದು ಲೋಕಪ್ರಸಿದ್ಧವಾಗಿದೆ. ಹೊಸ ಹೊಸತನ್ನು ಹೊಳೆಸುವ ಪ್ರಜ್ಞೆಯನ್ನು ಪ್ರತಿಭೆಯೆಂದೂ, ಆ ಪ್ರತಿಭೆಯುಳ್ಳವನೆ ಕವಿಯೆಂದೂ, ಆ ಕವಿಯ ಕರ್ಮವನ್ನೆ ಕಾವ್ಯವೆಂದೂ ಹೇಳುವಲ್ಲಿ ಮೇಲಿನ ಹೊಸನೋಟಗಳಿಗೂ ವ್ಯಾಖ್ಯಾನ ದೊರೆಯುತ್ತದೆ.

ಲೋಕದಲ್ಲಿ ಎಲ್ಲರೂ ಕಂಡುದನ್ನೆ ತಾನೂ ಕಂಡರು ಏನೊ ಒಂದು ಹೊಸತನ್ನು, ವಿಶೇಷವಾದುದನ್ನು ಕವಿ ಕಾಣುತ್ತಾನೆ. ಕಾರಣ ಅವನು ಪ್ರತಿಭಾವಂತ. ಆದರೆ ಇಷ್ಟು ಹೇಳಿದರೆ ಕವಿಕರ್ಮದ ವಿಧಾನವನ್ನು ವಿವರಿಸಿದಂತಾಗುವುದಿಲ್ಲ. ಅದು

ಜಟಿಲತಮವಾದುದೇನೊ ಸರಿಯೆ. ಹಾಗೆಂದು ಬಿಟ್ಟುಬಿಟ್ಟರೆ ಹೇಗೆ? ಕವಿ ಎಲ್ಲರೂ ಕಾಣುವುದರಲ್ಲೆ ಏಕೆ ಹೊಸತನ್ನು ಕಾಣುತ್ತಾನೆ, ಹೇಗೆ ಕಾಣುತ್ತಾನೆ ಎಂಬ ಅಂಶ ಮುಖ್ಯ. ಹಿಂದೆಯೆ ತಿಳಿಸಿದಂತೆ ಸೌಂದರ್ಯಾನುಭವವಾಗಬೇಕಾದರೆ ಮೊದಲು ನಮ್ಮಲ್ಲಿ ಅದರಿಂದ ವಿಸ್ಮಯವಾಗಬೇಕು. ನಿತ್ಯವೂ ನೋಡುತ್ತಲೆ ಇರುವ ವಸ್ತುವಿನಲ್ಲಿ ಏನು ತಾನೆ ವಿಸ್ಮಯವಾಗಬಹುದು? ಆಕಾಶ, ಭೂಮಿ, ಸೂರ್ಯ, ಚಂದ್ರ, ನಕ್ಷತ್ರ, ಜನ ಇತ್ಯಾದಿ ಎಲ್ಲವೂ ಅತಿಪರಿಚಿತ. ಆದರೆ ಚಂದ್ರಸೂರ್ಯರು ವರ್ಷಕ್ಕೊಮ್ಮೆ ಮಾತ್ರ ಕಾಣಿಸಿಕೊಳ್ಳುತ್ತಿದ್ದಿದ್ದರೆ! ವಾರಕ್ಕೊಮ್ಮೆ ಬರುವುದರಿಂದಲೇ ಭಾನುವಾರವನ್ನು—ವಿಶೇಷ ವಾರದ ದಿನವನ್ನು—ಕಂಡರೆ ಎಷ್ಟುಪ್ರೀತಿ! ಆದುದರಿಂದಲೆ ಅತಿಪರಿಚಯ ವಿಸ್ಮಯಾನುಭವಕ್ಕೆ ಒಂದು ವಿಧದಲ್ಲಿ ಕಂಟಕವೆ ಸರಿ. ಶ್ರವಣಬೆಳುಗೊಳದಲ್ಲೆ ಇರುವವರಿಗೆ ಶ್ರೀ ಗೊಮ್ಮಟನ ಭವ್ಯ ಸುಂದರಗಾತ್ರ ವಿಸ್ಮಯಕಾರಿಯಾಗಿ ತೋರದಿದ್ದರೆ ಆಶ್ಚರವೇನಲ್ಲ.* ಹಾಗೆಯೆ ಗೇರುಸೊಪ್ಪೆ ಬೇಲೂರು ಹಳೆಯಬೀಡುಗಳೂ ಸಹ ಅಲ್ಲಿಯವರಿಗೆ ಅಷ್ಟಾಗಿ ಪ್ರೇಕ್ಷಣೀಯವಾಗಿ—ಅಲ್ಲಿಗೆ ಜನ ಬಂದು ವಿಸ್ಮಯಗೊಳ್ಳುವಷ್ಟು ವಿಶೇಷವಾದುದಾಗಿ—ತೋರದಿದ್ದರೆ ವಿಸ್ಮಯಪಡಬೇಕಾಗಿಲ್ಲ. ಅಷ್ಟೆ ಏಕೆ? ನಮ್ಮ ತಲೆಯಮೇಲಿರುವ ವ್ಯೋಮಕಿರೀಟಕ್ಕಿಂತಲೂ ವಿಸ್ಮಯಕಾರಿ ಬೇರೊಂದು ಬೇಕೆ? ಆದರೂ ಅದು ಸಪ್ಪೆ. ಅತಿಪರಿಚಯದಿಂದ (ಅಂದರೆ ಒಳ್ಳೆಯ ಆಳವಾದ ಪರಿಚಯ ಎಂದಲ್ಲ; familiarity ಎಂದಷ್ಟೆ.—Familiarity breeds contempt) ನಮ್ಮ ಹೃದಯದಮೇಲೆ ತೊಗಟೆ ಬೆಳೆದಿರುತ್ತದೆ. ಅದು ಜಾರಿಹೋದರೆ ಆರ್ದ್ರಭಾಗ ಕಾಣಿಸುತ್ತದೆ. ಆಗಂತುಕ ಪ್ರಜ್ಞೆ ಆ ಆರ್ದ್ರಭಾಗವನ್ನು ತೆರೆದುಕೊಡುತ್ತದೆ. ದೂರ ದೂರಿಂದ ಹೋಗುವವನಿಗೆ ಗೊಮ್ಮಟೇಶ್ವರ ಅದ್ಭುತ ವಿಸ್ಮಯಕಾರಿಯಾಗಿ ಕಂಡಾನು! ಕಾರಣ ಅವನು ನೋಡುತ್ತಿರುವುದು ಮೊದಲಬಾರಿಗೆ; ಆಗಂತುಕನಾಗಿ. ಅಂದ ಮಾತ್ರದಿಂದಲೆ ಎಲ್ಲ ಸಂಚಾರಿಗಳೂ ಆಗಂತುಕರಲ್ಲ. ಅವರೆಲ್ಲ ವಿಸ್ಮಯಾನುಭವವನ್ನು ಪಡೆಯುತ್ತಾರೆಂದು ಹೇಳುವುದೂ ಕಷ್ಟ. ಗೊಮ್ಮಟೇಶ್ವರನನ್ನು ನೋಡಹೋಗಿ ಅಲ್ಲಿಯ ಪ್ರಾಕಾರದ ತಣ್ಣೆಳಲಲ್ಲಿ ಇಸ್ಪೀಟು ಆಡುತ್ತಾ ಮೈಮರೆತವರು ಎಷ್ಟು ಮಂದಿ ಇಲ್ಲ. ಆದ್ದರಿಂದಲೆ ಅವರು ಆಗಂತುಕರಲ್ಲ. ಆಗಂತುಕನಿಗೆ

---

* ಅಂದರೆ ಊರಿನ ಜನರಿಗೆ ಆ ವಿಚಾರವಾಗಿ ವಿಸ್ಮಯವೆ ಇಲ್ಲವೆಂದಲ್ಲ. ಹಾಗೆ ಎಲ್ಲರಿಗೂ ಎಲ್ಲ ವೇಳೆಯೂ ವಿಸ್ಮಯವಾಗದೆಂದಷ್ಟೆ. ಒಮ್ಮೆ ವಿಸ್ಮಯವಾಗಬೇಕಾದರೂ ಕೂಡ ಆ ವ್ಯಕ್ತಿ ಸಾಧಾರಣತೆಯಿಂದ ಮೇಲೆದ್ದು ನಿಂತವನಾಗಿದ್ದಿರಬೇಕಾಗುತ್ತದೆ. ತಾನು ಆಗಂತುಕನಾಗಿ ಅದನ್ನು ಕಾಣಬೇಕಾಗುತ್ತದೆ. ಹಾಗೆ ಅತಿಪರಿಚಿತವಾದುದರಲ್ಲೂ ವಿಸ್ಮಯನ್ನು, ತಾನು ಮೊದಲಬಾರಿಗೆ ನೋಡುತ್ತಿರುವಂತೆ ವಿಸ್ಮಯವನ್ನು ಪಡೆಸುವುದೆ ಆಗಂತುಕ ಪ್ರಜ್ಞೆ.

ತಾನು ಕಂಡ ವಸ್ತುವಿನಿಂದ ವಿಸ್ಮಯಾನುಭವವಾಗುತ್ತದೆ. ಕವಿಗೆ ಈ ಶಕ್ತಿ—ಎಲ್ಲವನ್ನೂ ಹೊಸ ಹೊಸದಾಗಿ ಕಾಣುವ ಶಕ್ತಿ—ಇರುತ್ತದೆ. ನೋಡಿದುದನ್ನೆ ನೋಡುವುದರಿಂದ ಬೇಸರವಾಗುವುದಿಲ್ಲ. ಒಮ್ಮೊಮ್ಮೆಯೂ ಹೊಸತಾಗಿಯೆ, ಅಪೂರ್ವವಾಗಿಯೆ ತೋರುವುದರಿಂದ ವಿಸ್ಮಯಾನುಭವ ಆಗುತ್ತಲೆ ಇರುತ್ತದೆ. ಪ್ರತಿಭೆಯನ್ನು 'ಅಪೂರ್ವ ವಸ್ತು ನಿರ್ಮಾಣಕ್ಷಮಾ' ಎಂದರು. ಪ್ರತಿಭಾವಂತ ಆ ಅರ್ಥದಲ್ಲಿ ಆಗಂತುಕ, ಆಗಂತುಕ ಪ್ರಜ್ಞಾವಂತ. ಆಗಂತುಕ ಪ್ರಜ್ಞೆಯೆಂದರೆ ಪರಿಚಿತಿಯಲ್ಲೂ ಅಪೂರ್ವತೆಯನ್ನು ಕಾಣುವ, ವಿಸ್ಮಯವನ್ನುಂಟುಮಾಡುವ (ಪಡೆಯುವ) ಶಕ್ತಿ. ಆದರೆ ಇದರ ವ್ಯಾಪ್ತಿ ಇಷ್ಟೆ ಅಲ್ಲ. ವಿಸ್ಮಯಾನುಭವವೆ ಆನಂದಾನುಭವವಲ್ಲವಲ್ಲ. ಈ ವಿಸ್ಮಯಾನುಭವ ಪ್ರೀತಿಯಾಗಿ, ನಿರ್ವ್ಯಾಜಪ್ರೀತಿಯಾಗಿ, ಸ್ವಾರ್ಥದೂರ ಪ್ರೀತಿಯಾಗಿ ವರ್ಧಿಸಬೇಕಾದರೆ ಆಗಂತುಕಪ್ರಜ್ಞೆ ಏನುಮಾಡುತ್ತದೆ ನೋಡಬಹುದು. ಹಿಂದೆಯೆ ಹೇಳಿದಂತೆ ನಾವು ಲೋಕದ ವಸ್ತುಗಳೊಡನೆ ಪಡೆದಿರುವ ಸಂಬಂಧ ಕೇವಲ ಆನಂದ ಸಂಬಂಧವಲ್ಲ. ಔಪಯೋಗಿಕವಾದ ವ್ಯಾಪಾರಸಂಬಂಧವಾಗಿರುತ್ತದೆ. ಅದೆಲ್ಲ ನಮ್ಮ ರಾಗದ್ವೇಷಗಳಿಗೆ ಗುರಿಯಾಗಿರುತ್ತದೆ. ಆದ್ದರಿಂದ ನಮಗೆ ನಾವು ನಿರೀಕ್ಷಿಸುವ ಸ್ವಾರ್ಥದೂರ ಪ್ರೀತಿ ದೊರೆಯಲಾರದು. ನವಿಲನ್ನು ಮಾರುವವನ ಹತ್ತಿರ ಅದರ ಬೆಲೆ ಮುಖ್ಯವೇ ಹೊರತು ಅದರ ಸೌಂದರ್ಯವಲ್ಲ. ಸೌಂದರ್ಯವೇನಾದರೂ ಗಮನಕ್ಕೆ ಬಂದರೆ ಅದು ಅದರ ಬೆಲೆಯಮೇಲೆ ಪ್ರಭಾವ ಬೀರುವುದಾಗಿದ್ದರಷ್ಟೆ. ಹಾಗೆಯೇ ರಾಗದ್ವೇಷಗಳಿಗೆ ಸಂಬಂಧಿಸಿದಾಗಲೂ ನಿರ್ವ್ಯಾಜ ಪ್ರೀತಿ ದೊರೆಯಲಾರದು. ಅಂದು ದೊರೆಯಬಹುದಾದುದು ಅತಿಮೋಹ ಇಲ್ಲವೆ ಅಸಹ್ಯಗಳ ಅನುಭವ. ದೇವಾಲಯ ಸುಂದರವಾಗಿದ್ದರೂ ಅನ್ಯಮತೀಯರದೆಂಬ ಕಾರಣದಿಂದ ಅದರ ವಿಷಯವಾಗಿ ದ್ವೇಷಮೂಡುವುದುಂಟು. ತನ್ನ ಊರಿನ ತಾವರೆಯ ಕೆರೆ ಸುಂದರವಾಗಿದ್ದರೂ ತಾನು ಅದರ ಕೊಳೆತು ಹುಳಿತ ನೀರನ್ನು ಕುಡಿಯಲಾರದೆ ಅದರ ವಿಚಾರವಾಗಿ ದ್ವೇಷ ಬೆಳೆಯುವುದುಂಟು. ಆದರೆ ಆಗಂತುಕನಿಗೆ, ಆಗಂತುಕಪ್ರಜ್ಞೆಯುಳ್ಳವನಿಗೆ ಇವೆಲ್ಲ ಗಮನಕ್ಕೆ ಬರದೆ ಅವುಗಳ ವಿಚಾರವಾಗಿ ಸಹಜವಾದ ಪ್ರೀತಿಯುಂಟಾಗುತ್ತದೆ. ಕವಿಯಲ್ಲಿ ಈ ಆಗಂತುಕಪ್ರಜ್ಞೆ ಇರುವುದರಿಂದ ಅವನಿಗೆ ವಸ್ತುವಿನಲ್ಲಿ ಲೌಕಿಕವಾದ ಅನುಭವಕ್ಕಿಂತ ಮಿಗಿಲಾಗಿ ರಸಾನುಭವ ಉಂಟಾಗುತ್ತದೆ. ತನ್ನ ಸುತ್ತಮುತ್ತಣವರನ್ನು, ತನ್ನವರನ್ನು ಆಗಂತುಕನಾಗಿ ನೋಡಲು ಶಕ್ತನಾದ ಕವಿ ತನ್ನನ್ನೆ ತಾನು ಆಗಂತುಕನಾಗಿ ನೋಡುವುದು ಮುಖ್ಯ. ಅದೆ ಕಷ್ಟಸಾಧ್ಯ. ಅದನ್ನು ಒಂದಿನಿತು ಸಾಧಿಸಬಲ್ಲಾತ ಮಹಾಕವಿಯಾಗುತ್ತಾನೆ.

ಭೂಮಿಯಮೇಲೆ ಇರುವ ನಮಗೆ ಭೂಮಿಯ ಆಕಾರ ಖಚಿತವಾಗಿ ತಿಳಿಯದು.

ಅದನ್ನರಿಯಲು ಭೂಮಿ ಬಿಟ್ಟು ಮೇಲೇರಬೇಕು. ಭೂಮಿಯವರಾಗಿದ್ದೂ ಬಹುದೂರ ಮೇಲೇರುವುದು ಕಷ್ಟ. ಕೃತಕ ಉಪಗ್ರಹ ಹಾಗೆ ಮೇಲೇರಬಲ್ಲದು. ಆದರೆ ಅದನ್ನು ಮೇಲೆಸೆಯುವ ಶಕ್ತಿ ಅಗಾಧವಾಗಿ ಬೇಕು. ಮೇಲಣ ಆವರಣದ ಒತ್ತಡವನ್ನು ತಳೆದುಕೊಳ್ಳುವ ಶಕ್ತಿ, ಹಾಗೂ ಸ್ವವೇಗಜನ್ಯವಾದ ಪರಿಣಾಮವನ್ನು ಭರಿಸುವ ಶಕ್ತಿ ಅದಕ್ಕಿದ್ದಿರಬೇಕು. ಕವಿಯಲ್ಲಿ ಈ ಶಕ್ತಿ—ಏರಿಸುವ, ಏರುವ ಶಕ್ತಿ—ಇದೆ. ಸಾಮಾನ್ಯ ಮನುಷ್ಯ ತಾಳಿಕೊಳ್ಳಲಾರದ ಒತ್ತಡಗಳನ್ನೂ ವೇಗರಭಸವನ್ನೂ ತಾಳಿಕೊಳ್ಳುವ ಶಕ್ತಿ, ಮೇಲೇರುವ ಶಕ್ತಿ ಅವನಲ್ಲಿ ಒಂದಿನಿತಿದೆ. ಭೂಮಿಯ ಮಗನೆ ಆದರೂ ಭೂಮಿಯ ಮೇಲೇರಿ ಅದನ್ನು ನೋಡುವ ಶಕ್ತಿ ಅವನಿಗುಂಟು. ಭೂಮಿಯೆಲ್ಲವನ್ನು ಅಪ್ಪಿಕೊಳ್ಳುವ ಒಪ್ಪಿಕೊಳ್ಳುವ ಶಕ್ತಿಯಿರುತ್ತದೆ. ಎಲ್ಲವನ್ನೂ ಪ್ರೀತಿಸುತ್ತಾನೆ; ಆದರೆ ಯಾವುದಕ್ಕೂ ಮಾರುಹೋಗ. ಹರಿಯುವ ನದಿ ಪುಣ್ಯತೀರ್ಥಕ್ಷೇತ್ರದಲ್ಲಾಗಲಿ ಕಟ್ಟೆಯಿರುವೆಡೆಯಾಗಲಿ ನಿಲ್ಲದು. ನಿಂತನೀರು ಸಾಗರ ಸೇರದು. ಸದಾ ಆಗಂತಕನಾದವನಿಗೆ ಯಾವೊಂದು ಊರೂ ಅಂತಿಮ ಆಶ್ರಯಸ್ಥಾನವಾಗಿ ಪರಿಣಮಿಸದು; ವಿಶ್ರಾಮಸ್ಥಾನವಾಗಬಹುದಷ್ಟೆ. ನಿಂತೆಡೆಯಲ್ಲೆ ನಿಲ್ಲುವವನು ಆಗಂತಕನಲ್ಲ. ಯಾವುದಾದರು ಒಂದಕ್ಕೇ ಮಾರುಹೋದಾತ ಮಹಾಕವಿಯಲ್ಲ. ಹರಿದುಹೋಗುತ್ತಿರುವಾಗ ಕಟ್ಟೆಯನ್ನು ಕಂಡು ನಿಂತುಕೊಂಡು ಕೆರೆಯಾಗಿ ತೃಪ್ತಗೊಳ್ಳುವುದು ತೊರೆಯಷ್ಟೆ; ನದಿಯಲ್ಲ. ಮಹಾನದಿ ಹಳ್ಳವನ್ನೂ ತನ್ನ ಪ್ರವಾಹದಲ್ಲಿ ಸೆಳೆದೊಯ್ದು ಸಾಗರಕ್ಕೆಸೆಯುತ್ತದೆ.

ನೀರಿಗೆ ಹರಿಯುವ ಸ್ವಭಾವವಿರುವಂತೆಯೆ ನಿಂತು ಮಡುಗೊಳ್ಳುವ ಸ್ವಭಾವವೂ ಉಂಟು. ಎಲ್ಲೂ ಮನೆ ಕಟ್ಟದೆಯೆ ಅಲೆದಾಡುವ ಚೇತನವೂ ಯಾವುದಾದರೊಂದು ವಸ್ತುವಿನ ಸುತ್ತ, ತತ್ವದ ಸುತ್ತ, ಭಾವನೆಯ ಸುತ್ತ, ವ್ಯಕ್ತಿಯ ಸುತ್ತ ಮನೆ ಕಟ್ಟಿಕೊಳ್ಳುವುದನ್ನು ಕಾಣುತ್ತೇವೆ. ಸಿದ್ಧನಾದವನ ಚೇತನವೂ ಕೂಡ ದ್ವೈತ, ಅದ್ವೈತ, ವಿಶಿಷ್ಟಾದ್ವೈತಗಳ ಕೋಟೆಗೋಡೆಯ ಭಾರೀ ಮನೆಗಳನ್ನು ಕಟ್ಟಿಕೊಳ್ಳುವುದನ್ನು ಕಾಣುತ್ತೇವೆ. ಹಾಗೆ ಕಟ್ಟಿಕೊಂಡು ವಿಶ್ವದರ್ಶನದ ನೀಲಾಕಾಶದಿಂದ ಬೇರಾಗಿ ಉಳಿಯುತ್ತದೆ. ಸ್ಯಂದನ ಶೀಲೆಯಾದ ದೇವಿಗಂಗೆಯನ್ನು ಶಿವಜಟಾ ಕೋಟೆಗಳಿಂದ, ಜಹ್ನು ಜಠರದುರ್ಗಗಳಿಂದ ಬಿಡಿಸಿ ತರುವುದಕ್ಕೆ ಭಗೀರಥತಪಸ್ಸೇ ಬೇಕು. ಇದನ್ನೇ ಅನಿಕೇತನ ಪ್ರಜ್ಞೆ ಮಾಡುತ್ತದೆ.

ಅನಿಕೇತನ ಪ್ರಜ್ಞೆಯೆಂದರೆ ಬಿಕಾರಿಯಂತೆ ಅಲೆಯುವುದು ಎಂದಲ್ಲ. ಅವಧೂತನಾಗುವುದು ಎಂದು. ಹೇಗೆ ಸಂಚಾರಿಯೆ (Tourist) ಆಗಂತಕನಲ್ಲವೊ ಹಾಗೆಯೆ ಊರಾಡಿ, ನಾಡಾಡಿಯೆ ಅನಿಕೇತನನಲ್ಲ. ಅನಿಕೇತನಚೇತನನಾದವನು ತನ್ನದೆಂಬ

ಮನೆಯೊಂದರಲ್ಲೆ ಸೆರೆಯಾಳಾಗದೆ ಲೋಕವನ್ನೆ ತನ್ನ ಮನೆಯನ್ನಾಗಿ ಮಾಡಿಕೊಳ್ಳು ತ್ತಾನೆ. ತನ್ನ ಮನೆಯಿದ್ದರೂ ಅದರಿಂದ ಹೊರಗೆ ಮಿಂಚಿನಂತೆ ಬರಬಲ್ಲ. ಅನ್ಯ ನಿಕೇತನನಾಗಬಲ್ಲ; ಅಲ್ಲಿಯೂ ಅನಿಕೇತನನಾಗಿಯೆ ಇರಬಲ್ಲ. ಹೀಗಾಗಿ ವಿಶ್ವ ನಿಕೇತನನಾಗುತ್ತಾನೆ. ಹೂವು ಮೊಗ್ಗಾಗಿರುವಾಗ ಅದರ ಸೌರಭವು ಕುಟ್ಮಲಬಂಧಿತ ವಾಗಿ ನಿಕೇತನವಾಗಿ ಇರುತ್ತದೆ. ಆದರೆ ಅರಳಿದಾಗ ಕಾಣದ ದಿಕ್ಕುಗಳಿಗೆಲ್ಲ ಹರಡಿ ಕೊಂಡು, ನಿಕೇತನ ಮುಕ್ತವಾಗುತ್ತದೆ: ಅನಿಕೇತನವಾಗುತ್ತದೆ. ಆದರೂ ಅದಕ್ಕೆ ಅರಳಿದ ಹೂತೊಟ್ಟಲಿನ ಮನೆ ಇದ್ದೆ ಇರುತ್ತದೆ. ಆ ನಿಕೇತನವಿದ್ದೂ ಸೌರಭ, ಅನಿಕೇತನವಾಗುತ್ತದೆ.

ಹಿಂದೆಯೆ ಹೇಳಿದಂತೆ ನಮಗೆಲ್ಲ ಅಹಂನಿರ್ಮಿತವಾದ ಒಂದೊಂದು ವ್ಯಕ್ತಿ ನಿಕೇತನವುಂಟು, ಸ್ವಭಾವವುಂಟು. ನಾವು ಅಲ್ಲಿ ಬಂದಿಗಳಾಗಿರುತ್ತೇವೆ. ಮನೆ ಯಿಲ್ಲದೆಯೆ ಇರುವುದು ಕಷ್ಟ ಎಂದು ಕೋಟೆಕಟ್ಟಿಕೊಳ್ಳುತ್ತೇವೆ. ಅದರಿಂದ ಹೊರಗೆ ಹೋಗಬೇಕೆಂದರೇ ಕಷ್ಟ. ಒಂದರೆಕ್ಷಣ ಹೊರಬಂದರೂ ನಮ್ಮ ಮನೆಯನ್ನು ಹೊತ್ತುಕೊಂಡೇ ಬರುತ್ತೇವೆ—ಬಸವನ ಹುಳುವಿನಂತೆ. ಸಮುದ್ರದಲ್ಲಿ ಮುಳುಗಿದರೂ ಬೆರೆಯಲಾರದ ಗಡುಗೆಯ ನೀರಿನಂತೆ ಎಲ್ಲಿದ್ದರೂ, ಆನಂದಪದದಲ್ಲೂ ಬೇರಾಗಿಯೆ ಇರುತ್ತೇವೆ. ಆದರೆ ಭಗವದ್ಗೀತೆಯಲ್ಲಿ ಹೇಳುವ ಅನಾಸಕ್ತ ಕರ್ಮಯೋಗಿ 'ಕೂರ್ಮೋಂಗಾನೀವ'ನಾಗಿರುತ್ತಾನೆ. ಅಲ್ಲಿಯ ಭಕ್ತ "ಅನಿಕೇತಃ ಸ್ಥಿರಮತಿಃ."*

* ಅನಿಕೇತನ ಪ್ರಜ್ಞೆಯನ್ನು ಪ್ರಾರ್ಥಿಸುವ ಶ್ರೀ ಕುವೆಂಪು ಅವರ 'ಅನಿಕೇತನ' ಎಂಬ ಕವನವನ್ನು ನೋಡಬಹುದು :

> ಓ ನನ್ನ ಚೇತನ,
> ಆಗು ನೀ ಅನಿಕೇತನ!
>
> ರೂಪರೂಪಗಳನು ದಾಟಿ,
> ನಾಮಕೋಟಿಗಳನು ಮೀಟಿ,
> ಎದೆಯ ಬಿರಿಯೆ ಭಾವದೀಟಿ,
>
> ಓ ನನ್ನ ಚೇತನ
> ಆಗು ನೀ ಅನಿಕೇತನ!
>
> ನೂರು ಮತದ ಹೊಟ್ಟ ತೂರಿ
> ಎಲ್ಲ ತತ್ವದೆಲ್ಲೆ ಮೀರಿ
> ನಿರ್ದಿಗಂತವಾಗಿ ಏರಿ

ಮೇಲಿನ ಮಾತುಗಳನ್ನು ಮತ್ತೂ ಸ್ಪಷ್ಟಪಡಿಸಬಹುದು. ತಾನು ಕಂಡ ವಸ್ತುವಿನಲ್ಲಿ ಕವಿ ಆನಂದಾನುಭವ ಪಡೆಯುತ್ತಾನೆ ಎಂದೆವು. ಹೀಗೆ ಆನಂದಾನುಭವ ವಾಗುವಾಗ ಕವಿ ಆ ವಸ್ತುವಿನಲ್ಲಿ ಪರವಶನಾಗಿರುತ್ತಾನೆ. ಪರವಶನಾಗದವನು ಕವಿಯಾಗಲಾರ. ಪರವಶತೆ ಎಂದರೆ ಅವಶತೆ ಎಂದರ್ಥವಲ್ಲ ; ಅಸ್ಯವಶತೆ ಎಂದೂ ಅಲ್ಲ. ಜಡವಾಗಿಬಿದ್ದಿರುವ ಬುಗುರಿಯನ್ನು ದಾರಸುತ್ತಿ ಬೀಸಿದಾಗ ಅದು ಜಾಗೃತವಾಗು ತ್ತದೆ. ಮೊದಲು ಸ್ವಲ್ಪ ಗಡಬಡಿಸುತ್ತದೆ. ಆಮೇಲೆ ನಿದ್ರೆಮಾಡುತ್ತಿರುವಂತೆ ತೋರು ತ್ತದೆ. ಆದರೆ ವೇಗದಿಂದ ಸುತ್ತುತ್ತಿರುತ್ತದೆ. ಜಡವಾಗಿಬಿದ್ದಿರುವಾಗ ಅದು ತಾನೇ ತಾನಾಗಿತ್ತು ; ತನ್ನ ವಶದಲ್ಲಿತ್ತು. ದಾರಸುತ್ತಿ ಬೀಸಿದಾಗ ಅನ್ಯವಶವಾಯಿತು ; ವೇಗವಶವಾಯಿತು. ಆದರೆ ತನ್ನತನದ ಭಾರದಿಂದ ಸ್ವವಶವಾಯಿತು ; ಸ್ವವೇಗವಶ ವಾಯಿತು. ಹಾಗಾಗಿ ನಿದ್ದೆಮಾಡುತ್ತಿರುವಂತೆ ತೋರುವಷ್ಟು ಮಟ್ಟಿಗೆ ವೇಗದಲ್ಲಿ ಸುತ್ತುತ್ತಿರುತ್ತದೆ. ಕವಿಯಲ್ಲಿರಬೇಕಾದ ಪರವಶತೆ ಅಂತಹದು. ಒಂದುಕಡೆ ಗಾಳಿಯ ವಶದಲ್ಲಿ ಮತ್ತೊಂದು ತುದಿಯಲ್ಲಿ ಸೂತ್ರಧಾರನ ವಶದಲ್ಲಿ ಇರುವ ಗಾಳಿಪಟದಂತೆ ಕವಿ. ಎರಡು ಶಕ್ತಿಯ ಸಾಮರಸ್ಯ ಅವನ ವ್ಯಕ್ತಿತೆ.

ಪರವಶಗೊಳ್ಳಲು ಕವಿ ತನ್ನನ್ನು ತಾನು ತನ್ನಿಂದ, ಅಹಂಬಂಧಿತವಾದ ಪ್ರಜ್ಞೆ ಯಿಂದ, ವ್ಯಕ್ತಿನಿಕೇತನದಿಂದ ಅನಿಕೇತನಗೊಳಿಸಿಕೊಂಡು ಅನ್ಯಜೀವ ನಿಕೇತನನಾಗ

---

ಓ ನನ್ನ ಚೇತನ
ಆಗು ನೀ ಅನಿಕೇತನ !

ಎಲ್ಲಿಯೂ ನಿಲ್ಲದಿರು ;
ಮನೆಯನೆಂದೂ ಕಟ್ಟದಿರು ;
ಕೊನೆಯನೆಂದೂ ಮುಟ್ಟದಿರು ;

ಓ ಅನಂತವಾಗಿರು !
ಓ ನನ್ನ ಚೇತನ,
ಆಗು ನೀ ಅನಿಕೇತನ !

ಅನಂತ ತಾನ್ ಅನಂತವಾಗಿ
ಆಗುತಿಹನೆ ನಿತ್ಯಯೋಗಿ :
ಅನಂತ ನೀ ಅನಂತವಾಗು ;
ಆಗು, ಆಗು, ಆಗು, ಆಗು,

ಓ ನನ್ನ ಚೇತನ,
ಆಗು ನೀ ಅನಿಕೇತನ !

ಬೇಕಾಗುತ್ತದೆ; ಅನ್ಯಭಾವ ನಿಕೇತನನಾಗಬೇಕಾಗುತ್ತದೆ*. ಆನಂದಾನುಭವದ ಅವಸ್ಥೆಯಲ್ಲಿ ಪರವಶತೆಯುಂಟಾಗುತ್ತದೆ ಎಂದರೆ ಅಹಂ ಕ್ಷಣನಿರಸನವಾಗಿರುತ್ತದೆ ಎಂದರ್ಥ. ಆದ್ದರಿಂದಲೆ ಕಾವ್ಯವನ್ನು "ಅಹಂಕಾರದ ಕ್ಷಣನಿರಸನದಿಂದುಣ್ಮುವ ಆನಂದ" ಎಂದರು. ಅಂದರೆ—ಮೇಲೆ ಹೇಳಿದಂತೆ—ಅನಿಕೇತನತೆ ಆ ವೇಳೆಯಲ್ಲಿ ಉಂಟಾಗುತ್ತದೆ; ಇಲ್ಲವೆ ಅದು ಅಂದು ಅಹಂವಿರತಿಗೆ ಕಾರಣವಾಗುತ್ತದೆ. ಅನಿಕೇತನ ಪ್ರಜ್ಞೆ ಕವಿಯ ಸೌಂದರ್ಯಾನುಭವಕಾಲದಲ್ಲಿ ಹೀಗೆ ಕೆಲಸಮಾಡುತ್ತದೆ. ಭಿನ್ನ ಭಿನ್ನ ಪಾತ್ರಗಳ ಹೃದಯದಲ್ಲಿ ಸಂಚರಿಸಿ ಅದರೊಡನೆ ಬೆರೆಯಲೂ ಈ ಶಕ್ತಿಯೆ ಬೇಕು. ತನ್ನನ್ನು ತನ್ನ ವ್ಯಕ್ತಿತೆಯಿಂದ ಬಿಡಿಸಿ ಅನ್ಯವ್ಯಕ್ತಿತೆಯಲ್ಲಿ ಕರಗಿಸುವ ಈ ಶಕ್ತಿ ಮಹಾಕವಿಗೆ ವಿಶೇಷವಾಗಿರುತ್ತದೆ. ಅದಿಲ್ಲದವರು ಏನನ್ನೂ ಮಾಡರು. ಮಾನಸಿಕವಾಗಿ ಕಮ್ಯೂನಿಷ್ಟನಾದ ಕವಿ ಸಾತ್ವಿಕನಾದ ಶ್ರೀಮಂತನೊಬ್ಬನ ಚಿತ್ರಣವನ್ನು ಕಾಣಲು ಕಷ್ಟವಾಗುತ್ತದೆ. ಬ್ರಹ್ಮಚಾರಿಗೆ ವ್ಯಭಿಚಾರಿಯನ್ನು ಚಿತ್ರಿಸಲು, ಇಲ್ಲವೆ ವಿರಹವನ್ನು ಚಿತ್ರಿಸಲು ಕಷ್ಟವಾಗುತ್ತದೆ. ಆದರೆ ಒಬ್ಬ ವಾಲ್ಮೀಕಿ ಶ್ರೀರಾಮ ಸೀತೆಯರ ಭೋಗವನ್ನು ಮೈಜುಮ್ಮೆನ್ನದೆ ಚಿತ್ರಿಸಬಲ್ಲ. ವ್ಯಾಸರು ತಮ್ಮವರ ಇತಿಹಾಸವನ್ನೆ ಸಾಕ್ಷಿಯಾಗಿ ಚಿತ್ರಿಸಬಲ್ಲರು. ಷೇಕ್ಸ್ಪಿಯರ್ ನೂರಾರು ಭಿನ್ನಪಾತ್ರಗಳನ್ನು ಸೃಜಿಸುವಾಗಲೂ ತನ್ನನ್ನು ಮರೆಸಿಕೊಳ್ಳುವುದನ್ನು ಬಲ್ಲ. ಅವನಲ್ಲಿ ಯಾವೊಂದನ್ನೂ ಮರೆಸುವ ನೈತಿಕ ಹಠವಿಲ್ಲ. ಎಷ್ಟರಮಟ್ಟಿಗೆ ತಮ್ಮನ್ನು ತಾವು ತಮ್ಮಿಂದ ಬೇರಾಗಿಸಿಕೊಂಡು ಬೇರೆಯದರಲ್ಲಿ ಒಂದಾಗುವ ಶಕ್ತಿ ಕವಿಗಳಿಗಿದೆಯೊ ಅಷ್ಟೂ ಅನಿಕೇತನ ಪ್ರಜ್ಞೆ ಅವರಲ್ಲಿದೆ ಎಂದು ಒಪ್ಪಬೇಕು. ಆದಷ್ಟೂ ಅನಿಕೇತನವಾಗದ ಕವಿಯ ಪ್ರಜ್ಞೆ ಕುಂಡವನ್ನೊಡೆದು ಮರವಾಗಿ ಬೆಳೆಯಲಾರದ ಗಿಡದಂತೆ!

ಆದರೆ ಎಲ್ಲರ ಸೌಂದರ್ಯಾನುಭವವೂ ಒಂದೆ ಸಮವಾಗಿರುವುದಿಲ್ಲ. ಒಬ್ಬರಿಗೆ ಹೂವು ಕಂಡರೆ ಸಂತೋಷವಾಗುತ್ತೆ; ಮತ್ತೊಬ್ಬರಿಗೆ ಅದ್ಭುತವಾದುದೆ ಆಗಬೇಕು. ಕೆಲವರಿಗೆ ಮತ್ತೊಬ್ಬರ ಕಂಬನಿಯನ್ನು ಕಂಡರೆ ಸಾಕು, ಅವರ ನಗೆ ಅನುಕಂಪೆಯಾಗುತ್ತದೆ; ಬಹುಜನಕ್ಕೆ ಯಾವುದೂ ಮಿಡಿಯುವುದಿಲ್ಲ! ಕಲ್ಲು ಬಿದ್ದೆಡೆಯಲ್ಲೆ ಬಿದ್ದಿರುತ್ತೆ; ನೀರು ಎಡೆ ಕಂಡೆಡೆಗೆಲ್ಲ ಹರಿದುಹೋಗುತ್ತದೆ—ಬಹಳ ಹೊತ್ತಿದ್ದರೆ, ಬಿಸಿಲು ಬಂದರೆ ಆವಿಯಾಗಿಹೋಗುತ್ತದೆ. ಪೆಟ್ರೋಲ್ ಅದಕ್ಕೂ ಮಿಗಿಲಾಗಿ ಬಿಟ್ಟೆಡೆ

* ಮುಳುಗಿದ ಭವದಿಂದ ತನ್ನನ್ನು ಬಿಡಿಸಿಕೊಳ್ಳುವ ಚೈತನ್ಯವನ್ನು ಶ್ರೀ ಪು.ತಿ.ನ. ಅವರು 'ಲಘಿಮಾಕೌಶಲ' ಎಂದು ಕರೆದಿದ್ದಾರೆ. ವ್ಯಕ್ತಿತೆಯನ್ನು ಬಿಡಿಸಿಕೊಳ್ಳುವುದಷ್ಟೆ ಅಲ್ಲದೆ ಬೇರೊಂದರಲ್ಲಿ ಬೆರೆಯಲೂಬೇಕಾದ್ದರಿಂದ 'ಅನಿಕೇತನ ಪ್ರಜ್ಞೆ' ಎಂಬ ಮಾತನ್ನು ಬಳಸಿಕೊಳ್ಳಬೇಕಾಯಿತು. ಇದರ ಸ್ಫೂರ್ತಿಯೆಲ್ಲ ಅವರ ಮಾತೆ! ಅದಕ್ಕೆ ಋಣಿ.

ನಿಲ್ಲದೆ ಸಾಧಾರಣ ವಾತಾವರಣಕ್ಕೆ ಆವಿಯಾಗಿಹೋಗುತ್ತದೆ. ಅಂದರೆ ಹಾಳಾಗುತ್ತ ದೆಂದಲ್ಲ; ಅನ್ಯವಸ್ತುವಿನಲ್ಲಿ, ವೈಶಾಲ್ಯದಲ್ಲಿ ಬೆರೆಯುತ್ತದೆಂದು. ಸ್ಥೂಲಮಾನಸನಿಗೆ ಆಕಾಶದ ನೀಲಮೂಕ-ಸೌಂದರ್ಯವೂ ಮೂಕಸನ್ನಾಗಿ ಮಾಡುವುದಿಲ್ಲ. ಪರಮಹಂಸ ರಿಗೆ ಬೆಳ್ಳಕ್ಕಿಯ ಹಿಂಡೂ ಕೂಡ ಸಮಾಧಿ ತಂದಿತು.

ವಸ್ತುಗಳ ಆಗುವಿಕೆಯಲ್ಲಿ—ಕಲ್ಲು, ನೀರು, ಕರ್ಪೂರ, ಪೆಟ್ರೋಲ್‌ಗಳ ಆಗುವಿಕೆ ಯಲ್ಲಿ, ಭೂತಿಯಲ್ಲಿ—ತಾರತಮ್ಯವಿರುವಂತೆ ಮನುಷ್ಯರ ಅನಿಕೇತನ ಪ್ರಜ್ಞೆಯಲ್ಲಿ— ಅಷ್ಟೇ ಏಕೆ ವಿವಿಧ ಕವಿಗಳ ಅನಿಕೇತನ ಪ್ರಜ್ಞೆ ಹಾಗೂ ಆಗಂತುಕ ಪ್ರಜ್ಞೆಯಲ್ಲಿ— ಶ್ರೇಣಿಯುಂಟು. ಅನಿಕೇತನಗೊಳಿಸುವ ಸೌಂದರ್ಯ ಸಣ್ಣ ಕವಿಗಳಿಗೆ ಕೆಲ ವಾಗಿರುತ್ತದೆ. ಕೆಲವು ಮಾತ್ರ ಅವರನ್ನು ಸೆರೆಹಿಡಿಯುತ್ತವೆ; ಕೆಲವಕ್ಕೆ ಮಾತ್ರ ಅವರು ಪರವಶರಾಗುತ್ತಾರೆ. ಅವರಿಗೆ ಹೆಚ್ಚು ಹೆಚ್ಚು ಸ್ಥೂಲವಾದ, ಬಾಹ್ಯವಾದ, ಇಂದ್ರಿಯ ವಿಷಯಗಳು ಸ್ಫೂರ್ತಿಯಾಗಿರುತ್ತವೆ. ಬೆಳೆದ ಚೇತನಕ್ಕೆ ಸೌಂದರ್ಯದ ಆಕರ ಬೆಳೆಯುತ್ತ ಹೋಗುತ್ತದೆ, ಸೂಕ್ಷ್ಮವಾಗುತ್ತದೆ; ಅಂತರ್‌ನಿಹಿತವಾದುದಾಗು ತ್ತದೆ. ಪರಮಯೋಗಿಯಾದವನಿಗೆ ಆತ್ಮವೆ ವಿಷಯವಾಗುತ್ತದೆ; ಭೋಗ್ಯವಾಗು ತ್ತದೆ. ಅವನಿಗೆ ಅನಿಕೇತನ ಪ್ರಜ್ಞೆ ಪೂರ್ಣವಾಗಿರುತ್ತದೆ. ಕವಿಯ ಅನಿಕೇತನ ಪ್ರಜ್ಞೆಗೆ ಮಿತಿಯುಂಟು. ಕಾರಣ ಅವರಿಬ್ಬರ ಆನಂದದ ರೀತಿಯಲ್ಲೆ ಒಂದು ಅಂತರವಿದೆ. ಕವಿ ತನ್ನ ಆನಂದಾವಸ್ಥೆಯಲ್ಲೂ ಸಂಪೂರ್ಣವಾಗಿ ಅನಿಕೇತನನಾಗಿರಲಾರ; ಕೇವಲ ನಿರಹಂ ಅವಸ್ಥೆ ಅವನಿಗಿಲ್ಲ. ಇದ್ದರೆ ಕಾವ್ಯ ಬರುವುದಿಲ್ಲ. ಪರಮಾನಂದದ ಅವಸ್ಥೆಯನ್ನು "ಯತೋವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ" ಎಂದು ಋಷಿಗಳು ವರ್ಣಿಸಿದ್ದಾರೆ. ಅಲ್ಲಿ ಮಾತು ಮೈಲಿಗೆ; ಅವು ಬದುಕಲಾರವು. ಅಷ್ಟೇ ಏಕೆ ವ್ಯಕ್ತಿತೆಯೂ ಬದುಕಿರಲಾರದು. "ಕಡಲನ್ನು ಅಳೆಯಹೋದ ಉಪ್ಪಿನ ವಿಗ್ರಹದಂತಾ' ಗಿರುತ್ತದೆ; "ಕಡಲೊಳಗೆ ಬೆರತ ಆಲಿಯಕಲ್ಲಿನಂತಾ"ಗಿರುತ್ತದೆ ಅಂದು ವ್ಯಕ್ತಿತೆ. ಶ್ರೀ ಪು.ತಿ.ನ. ಅವರು ಈ ಅವಸ್ಥೆಯನ್ನು ಬಹು ಸುಂದರವಾಗಿ ವರ್ಣಿಸಿದ್ದಾರೆ:

"ಬೆರೆದರೂ ಬೇರೆಂದೆ ಸಮದೂರದೊಳು ಸರಿವ
ವಿಷಯಾತ್ಮಸಂಗವಿಸುವಾನಂತ್ಯವೇ,
ಸೋಂಕಲರಿವೇ ಕರಗಿ ನೆನವೆಂಬ ನೆರಳುಳಿಯೆ
ಪ್ರತ್ಯಕ್ಷವೆನಲಾಗದಾನಂದವೇ,

ಪಡಲಿಲ್ಲವೆನಲಾಗದಪರೋಕ್ಷದನುಭವವೆ,
ಅರಿತಿಲ್ಲವೆನಲಾಗದಂದದರುಳೇ,

ಒಲಿವಂದವೆನ್ನೆಸಗಿ ಒಲವ ಕೊಳೆ ಕೈತೆರೆಯು—
ತಾವರ್ತ ತೇಜದೊಳು ಬೆಳಗುವಿರುಳೇ,

ಮನಮನವ ಎಳೆಗೊಂಡು ಮುಡಿವ ಮೂರ್ತಿ,
ನಮ್ಮರ್ತಿ ಮಡುಗೊಳುವ ಗುಡಿಯೊಳೇ ನಿನ್ನ ಕೀರ್ತಿ ?"

ಸೋಂಕಿದೊಡನೆಯೆ ಕರಗಿಸಿಕೊಂಡುಬಿಡುವ ಆ ಆನಂದವನ್ನು ಪ್ರತ್ಯಕ್ಷ ಎಂದು ಹೇಗೆ ಹೇಳಬಹುದು? ನಮಗೆ ಉಳಿದಿರುವುದು ನೆನಪಿನ ನೆರಳಷ್ಟೆ. ಯೋಗಿಯ ಸಮಾಧಿಗೂ ಕವಿಯ ಸಮಾಧಿಗೂ ವ್ಯತ್ಯಾಸವಿದೆ. ಯೋಗಿ ಬೆಳ್ಳಕ್ಕಿಯನ್ನು ಕಂಡು ಸಮಾಧಿ ಹೋಗುತ್ತಾನೆ. ಕವಿಯಾದರೊ ದೇವರು ರುಜುಮಾಡಿದ್ದನ್ನು ಕಂಡು ಆನಂದಿಸುತ್ತಾನೆ. ಯೋಗಿ ಅರೂಪಗಗನಲೀನನಾಗುತ್ತಾನೆ; ಕವಿ ಅರೂಪಗಗನ ಸುರೂಪ ವಿಹಾರಿಯಾಗುತ್ತಾನೆ. ಯೋಗಿಯ ಆನಂದ ಹೂವಿಲ್ಲದ ಸೌರಭ; ಸೊಡರಿಲ್ಲದ ಬೆಳಕು; ಚಂದ್ರನಿಲ್ಲದ ಚಂದ್ರಿಕೆ. ಕವಿಯ ಆನಂದ ಹೂವು-ಸೌರಭ; ಸೊಡರು-ಬೆಳಕು; ಚಂದ್ರ-ಚಂದ್ರಿಕೆ. ಸಾಂತವಾದ ಸೊಡರು, ಹೂವು, ಚಂದ್ರ, ಅನಂತ ಸೌರಭಕಾಂತಿ ಯನ್ನು ಬೀರುವಂತೆ ಕವಿಯ ಪ್ರಜ್ಞೆ ನಿಕೇತನವಾಗಿದ್ದೂ ಅನಿಕೇತನವಾಗಿರುವ ಪ್ರಜ್ಞೆ. ಮೊಗ್ಗಿನಲ್ಲಿ ನಿಕೇತನವಾಗಿರುವ ಸೌರಭ ಹೂವಿನಲ್ಲಿ ಅನಿಕೇತನಗೊಳ್ಳುವಂತೆ ಜನತೆ ಯಲ್ಲಿ ನಿಕೇತನವಾಗಿರುವ ಶಕ್ತಿ ಅವನಲ್ಲಿ ಅನಿಕೇತನವಾಗುತ್ತದೆ. ಕವಿ ಅಕಾಮ ಭಕ್ತನಲ್ಲ; ಸಕಾಮಭಕ್ತನೂ ಅಲ್ಲ. ಅಕಾಮ ಸಕಾಮಭಕ್ತ. ತೀರ್ಥಕ್ಷೇತ್ರಕ್ಕೆ ಹೋದವರು ಗಿಂಡಿಯಲ್ಲಿ ತೀರ್ಥಜಲವನ್ನು ತರುವ ಲೋಭತೋರುವಂತೆ ಕವಿ ತನ್ನ ಆನಂದವನ್ನು ಮಾತಿನಲ್ಲಿ ತಂದು ಎಲ್ಲರಿಗೂ ಎರೆಯ ಬಯಸುತ್ತಾನೆ. ಅಕಾಮಾವಸ್ಥೆ ಶುಭ್ರಮೇಘದಂತೆ ಗಗನ ನಿವಾಸಿ. ಅದು ಮಳೆಯಾಗಿ ಕೆಳಗಿಳಿದು ಬರಲು ಭೂಮಿಯ ಧೂಳೀಸ್ಪರ್ಶನವಾಗಲೇಬೇಕು; ಅಷ್ಟರಮಟ್ಟಿಗೆ ಕಲುಷಗೊಳ್ಳಬೇಕು. ಅಪ್ಪಟ ಚಿನ್ನ ಅವ್ಯವಹಾರ್ಯ; ವ್ಯವಹಾರ್ಯವಾಗಲು ತಾಮ್ರ ಬೆರಸುತ್ತಾರೆ.*

ಕವಿಯ ಮತ್ತು ಯೋಗಿಯ ಅನಿಕೇತನ ಹಾಗೂ ಆಗಂತುಕ ಪ್ರಜ್ಞೆಯಲ್ಲಿ, ಅನುಭವದಲ್ಲಿ ಇರುವ ವ್ಯತ್ಯಾಸವನ್ನು ಮತ್ತೂ ಖಚಿತವಾಗಿ ಹೇಳಬಹುದು. ಶ್ರೀ ಪಾತಂಜಲಿ ತಮ್ಮ ಯೋಗಸೂತ್ರದಲ್ಲಿ ಬೇರೆ ಬೇರೆಯ ಸಮಾಧಿಯನ್ನು ಹೇಳುತ್ತಾರೆ. ವಿದೇಹಿಗಳ ಹಾಗೂ ಪ್ರಕೃತಿಲಯರ ಸಮಾಧಿಗೆ ಭಿನ್ನವಾದ ಯೋಗಿಯ ಸಮಾಧಿ ಯನ್ನು ಅವರು ಹೇಳುತ್ತಾರೆ. ಕವಿ ವಿದೇಹಿಯಂತೆ; ಹೆಚ್ಚೆಂದರೆ ಪ್ರಕೃತಿ ಲಯರಂತೆ. ವಿದೇಹಿಯೆಂದರೆ ರಜಸ್ತಮೋಗುಣಗಳು ಸಂಪೂರ್ಣವಾಗಿ ನಾಶವಾಗಿಲ್ಲ

---

* ಶ್ರೀರಾಮಕೃಷ್ಣರು ಹೇಳುತ್ತಿದ್ದರು: ಲೋಕದ ಹಿತಕ್ಕಾಗಿ ಮುಕ್ತಾತ್ಮ ಸ್ವಲ್ಪ ಅಹಂಕಾರವನ್ನುಳಿಸಿಕೊಂಡಿರುತ್ತಾನೆ, ಎಂದು.

ದವರು. ಆದರೆ ಅಷ್ಟರಿಂದಲೆ ಅವರಲ್ಲಿರುವ ಸತ್ವಗುಣವು ಪ್ರಜ್ವಲಿಸುತ್ತದೆ. ಅದರಿಂದಾಗುವ ಸಮಾಧಿಗೆ ಸಾನಂದ ಸಮಾಧಿ ಎಂದು ಹೇಳುತ್ತಾರೆ. ಆ ಅವಸ್ಥೆಯ ಚಿತ್ತದಲ್ಲಿ ಸಂಸ್ಕಾರಗಳ ಸ್ಮೃತಿಯಿರುತ್ತದೆಯೆ ವಿನಾ ವೃತ್ತಿಯಿರುವುದಿಲ್ಲ. (ಅಂದರೆ ಕರುಣರಸಾನುಭವ ಸ್ಥಿತಿಯಲ್ಲಿ ಶೋಕದ ಸ್ಮೃತಿಯಿರುತ್ತದೆಯೆ ಹೊರತು ಅದರ ವೃತ್ತಿಯಿರುವುದಿಲ್ಲ—ಹೀಗೆಂದು ಭಾವಪಿರಬಹುದೆ?) ಮತ್ತೆ ವಿದೇಹಿಗಳು ಮುಕ್ತರಲ್ಲ, ದೇವತೆಗಳಷ್ಟೆ; ಅವರಿಗೆ ಪುನಃ ಸಂಸೃತಿಯುಂಟು. ಸಾನಂದಾವಸ್ಥೆ ತಾತ್ಕಾಲಿಕ.

ಪ್ರಕೃತಿಲಯರು ರಜಸ್ತಮೋಗುಣ ರಹಿತವಾದ ಶುದ್ಧ ಸತ್ತ್ವನ್ನು ಅನುಭವಿಸುತ್ತ ಅದರಾಚೆಯ ಚೈತನ್ಯಶಕ್ತಿಯನ್ನು ಕಾಣುತ್ತಾರೆ. ಚಿತ್‌ಪ್ರಕಾಶದಲ್ಲಿ ಸ್ವಕಾರಣವಾದ ಪ್ರಕೃತಿಯಲ್ಲಿ ಲೀನವಾಗುತ್ತಾರೆ. ವಿದೇಹಿಗಳು ಪಂಚಭೂತಗಳನ್ನೂ ಇಂದ್ರಿಯಗಳನ್ನೂ ಆತ್ಮನೆಂದು ಭಾವಿಸಿದರೆ ಇವರು ಅವ್ಯಕ್ತ ತತ್ವ, ಮಹತ್‌ತತ್ವ, ಅಹಂಕಾರ ತತ್ವಗಳನ್ನು ಆತ್ಮನೆಂದು ಭಾವಿಸಿ ಉಪಾಸನೆಮಾಡಿ ಲೀನರಾಗುತ್ತಾರೆ. ಹೀಗಿರುವಾಗಲೂ ಯಾವುದಾದರೊಂದರ ವಾಸನೆ ಅವರ ಅಂತಃಕರಣವನ್ನು ಹಿಡಿದೆ ಇರುತ್ತದೆ. ಇವರು ಮುಕ್ತಿಯನ್ನು ಅನುಭವಿಸುತ್ತ ಇರುವ ಹಾಗೆ ತಿಳಿದಿರುತ್ತಾರೆ. ಆದರೆ ಅದರಿಂದ ಶಾಶ್ವತವಾದ ಕೈವಲ್ಯಪ್ರಾಪ್ತಿಯಿಲ್ಲ. ಅವರಿಗೂ ಮತ್ತೆ ಸಂಸಾರವುಂಟು.[1]

ಮೇಲೆ ಹೇಳಿದ ವರ್ಗಕ್ಕೆ ಕವಿ ಸೇರುತ್ತಾನೆ ಎನ್ನಬಹುದು. ಕವಿಯ ಆನಂದಾನುಭವ 'ಸಾನಂದಾವಸ್ಥೆ'ಯ ಬಗೆಯದು. ಅಲ್ಲಿ ಭವಸ್ಮೃತಿ ಇರುತ್ತದೆ; ಭವವೃತ್ತಿಯಿರುವುದಿಲ್ಲ. ಆ ಅವಸ್ಥೆಯಿಂದ ಕೆಳಗೆ ಬಂದಾಗ ಭವಬಂಧನ ಉಂಟೇ ಉಂಟು. ಈ ಅಂಶವನ್ನು ತಿಳಿದರೆ ಕವಿಯ ವಿಚಾರವಾಗಿರುವ ಅತಿಭಾವನೆಗಳು, ಅಪಚಾರಕ ಭಾವನೆಗಳು ಎಲ್ಲಾ ಮಾಯವಾದಾವು.[2]

ಕವಿಯ ಅನುಭವವನ್ನು ಎಂ. ಬ್ರೆಮೊಂಡ್ ಎಂಬಾತ ವರ್ಣಿಸುತ್ತಾ ಹೇಳುತ್ತಾನೆ: "Instead of surrendering himself to the silent ecstasy of communion with God, the poet is lured by the demon of expression into utterance of the unutterable." ಈ ಮಾತನ್ನು ಒಪ್ಪದವರೂ ಉಂಟು. ಆದರೆ ಯೋಗದ ಸ್ಥಿತಿ ಚಿತ್ತವೃತ್ತಿ ಲಯಸ್ಥಿತಿ. ಕಾವ್ಯ ಆ ಸ್ಥಿತಿಗೆ ಪೂರ್ವವಾದು

---

[1] ಯೋಗಸೂತ್ರದ ಸಾನಂದಾವಸ್ಥೆಯ ನೆನಪನ್ನು ಒಮ್ಮೆ ಮಾಡಿಕೊಟ್ಟವರು ಶ್ರೀ ಪು.ತಿ.ನ. ಅವರು.

[2] ಕವಿವ್ಯಕ್ತಿಯ ವಿಷಯವಾಗಿ ಬೇರೊಂದೆಡೆ ಬರೆಯುತ್ತೇನೆ; ಅಲ್ಲಿ ಇದನ್ನು ವಿಶದಪಡಿಸುವೆ. ಜತೆಗೆ ಶ್ರೀ ಶಿವರುದ್ರಪ್ಪನವರ 'ಕವಿವ್ಯಕ್ತಿ' ಯೆಂಬ ಲೇಖನವನ್ನು ನೋಡಬಹುದು. (ಪ್ರ.ಕ. ಸಂ. ೩೯ ಸಂ. ೨).

ದೆನ್ನದೆ ವಿಧಿಯಿಲ್ಲ. ತಾಯಿಯ ಎದೆಯ ಹಾಲನ್ನು ಕುಡಿಯುತ್ತ ಮೈಮರೆತಿರುವ ಮಗುವನ್ನು ಗಿಲಕಿ ಶಬ್ದಮಾಡಿ ತಿಂಡಿಯ ಸವಿವಾಸನೆ ಬೀರಿ ಅನ್ಯಾಸಕ್ತವಾಗುವಂತೆ ಮಾಡುವ ತಾಯಿಯ ಪ್ರಯತ್ನದಂತೆ ಕಾವ್ಯ, ಎಂದು ಭಾವಿಸುವವರುಂಟು :

"ಎದೆ ಹಾಲಿಗೆ ತುಟಿ ತೆರೆಯುವ
ಹಸುಳೆಯ ಮುಂದುಗಡೆ
ಗೆಜ್ಜೆಯ ಸದ್ದನು ಹಣ್ಣಿನ ಸವಿಯನು
ತೋರಿ ಸರಿವ ತಾಯೇ !
ಧ್ಯಾನಾಂಬರದಿಂಗಡಲೊಳು
ಈಜುವ ಹಂಸವನು
-ಸಾಸಿರ ದಳ ತಾವರೆಯೆಡೆ
ಈಜುವ ಹಂಸವನು-
ಸುರಧನುವಿನ ನೊರೆತೆರೆಯೊಳು
ಸೆಳೆಯುವೆಯಾ ತಾಯೆ !
ನಿರ್ಭಾವದ ಸುಖಕೇರುವ
ಸಾಧಕ ಚೇತನಕೆ
ಕವಿತೆಯ ವರದಾಸೆಯ
ಬೀರುವೆಯಾ ತಾಯೆ !

ಹಾಪ್‌ಕಿನ್ಸ್ ಹೇಳಿದ : 'If one could be a saint who could be a poet' ಎಂದು. ಮೇಲಿನ ಮಾತುಗಳಲ್ಲಿ ಸತ್ಯವಿಲ್ಲದಿಲ್ಲ.

ಒಟ್ಟಿನಲ್ಲಿ ಕವಿಯ ಅನಿಕೇತನ ಪ್ರಜ್ಞೆ ಯೋಗಿಯ ಅನಿಕೇತನ ಪ್ರಜ್ಞೆಯಂತೆ ಕೇವಲವಲ್ಲ ; ಸಾಪೇಕ್ಷವಾದುದು. ಕವಿ ಪಾತ್ರಚಿತ್ರಣದಲ್ಲಿ ತಾನು ಅನಿಕೇತನನಾಗಿ ಆ ಪಾತ್ರಗಳಲ್ಲಿ ನಿಕೇತನನಾಗುವಾಗಲೂ ಸಂಪೂರ್ಣವಾಗಿ ಅನಿಕೇತನನಾಗಲು ಕಷ್ಟ. ಐಯಾಗೊ ಪಾತ್ರವನ್ನು ಚಿತ್ರಿಸುವಾಗ ಕವಿಪ್ರಜ್ಞೆ ಅವನ ಪಾತ್ರದಲ್ಲಿ ಲೀನವಾಗಿದೆ ಸರಿ. ಆದರೆ ಒಂದಿನಿತೂ ತನ್ನತನವಿಲ್ಲದಂತೆ ಲೀನವಾಗಿಲ್ಲ.

ತಾನಿಲ್ಲದಂತಾದಾಗ ಉಕ್ತಿ ಇರದು. ಕವಿಯಲ್ಲಿ ಆಗಂತುಕ ಪ್ರಜ್ಞೆ, ಅನಿಕೇತನ ಪ್ರಜ್ಞೆ ಕೆಲಸ ಮಾಡುತ್ತವೆ ಎಂದ ಮಾತ್ರದಿಂದಲೆ ಕವಿ ಆಗಂತುಕನೇ ಅನಿಕೇತನನೇ ಎಂದು ಹೇಳುವುದು ಕಷ್ಟ. ಅವತಾರಿಗಳನ್ನೆ ಅಂಶಸಂಭೂತರು ಎನ್ನುತ್ತಾರೆ. ಕವಿ ಇನ್ನು ಹೇಗೆ ಇದ್ದಿರಬೇಕು. ಎಷ್ಟೇ ಮಹಾಕವಿಯಾದರೂ ಅವನೂ ಆ ಪ್ರಜ್ಞೆಯ

ಅಂಶ ಸಂಭೂತನೆ. ವಿರಾಟ್‌ಕವಿ ಭಗವಂತನಲ್ಲಿ ಅದು ಪೂರ್ಣರೂಪದಲ್ಲಿದೆ. ಅದಕ್ಕೆ ಅವನ ಸೃಷ್ಟಿಕಾವ್ಯವೇ ಸಾಕ್ಷಿ.

ಕೊನೆಯದಾಗಿ, ಆಗಂತುಕಪ್ರಜ್ಞೆ ಲೋಕದಲ್ಲಿ ಸದಾ ವಿಸ್ಮಯವನ್ನು ನಿರ್ವ್ಯಾಜ ಪ್ರೀತಿಯನ್ನು ಪಡೆಯುವುದರ ಮೂಲಕ ಆನಂದವನ್ನು ಪಡೆಯುವಂತೆ ಮಾಡುತ್ತದೆ. ಅನಿಕೇತನಪ್ರಜ್ಞೆ ವ್ಯಕ್ತಿಮಿತಿಯನ್ನು ದಾಟಿ ವಿಶ್ವವ್ಯಕ್ತಿಯಲ್ಲಿ ಬೆರೆಯುವಂತೆ ಮಾಡುತ್ತದೆ. ಇವೆರಡೂ ಆ ನವನವೋನ್ಮೇಷಶಾಲಿನೀ ಪ್ರಜ್ಞೆಯ ಅಭಿವ್ಯಕ್ತಿಗಳೆ. ಆ ಶಕ್ತಿ ಕವಿಗಳಲ್ಲಿ, ಅಂಶರೂಪದಲ್ಲಿರುತ್ತದೆ ಎಂದಂತೆಯೆ ಕವಿ ಕವಿಗೂ ಈ ಪ್ರಜ್ಞೆ ವ್ಯತ್ಯಸ್ತವಾಗುತ್ತ ಹೋಗುತ್ತದೆ ಎಂಬುದೂ ಸತ್ಯ. ಊರೆಲ್ಲವನ್ನೂ ತಮ್ಮ ಮನೆಯೆಂದು ಭಾವಿಸುವ ಹಿರಿಯರೂ ಕೂಡ ತಮ್ಮ ಊರಷ್ಟನ್ನೆ ತಮ್ಮ ಮನೆಯನ್ನಾಗಿ ಮಾಡಿಕೊಂಡಿರುತ್ತಾರೆ. ಆದರೆ ಆ ಶಕ್ತಿ ಶುಕರಲ್ಲಿ, ಭಗವಾನ್ ಶ್ರೀಕೃಷ್ಣರಲ್ಲಿ ಜಾಜ್ವಲ್ಯಮಾನವಾಗಿರುತ್ತದೆ. ಕಾರಣ ಹಾಲಿನಲ್ಲಿದ್ದೂ ಹಾಲಿನಿಂದ ಬೇರಿರುವ ಬೆಣ್ಣೆಯ ಸತ್ವದಂತೆ ಅವರು. ಆ ಅವರ ಒಂದಂಶವಿದ್ದವನೂ ನಮ್ಮ ಮಹಾಕವಿಯಾಗುತ್ತಾನೆ!

**ಸುಜನಾ**

---

# ಬಾಡಿದ ಹೂ

ಹೂತಿತ್ತು ಹೊಂಗಿ ಮೊರೆದಿತ್ತು ಭೃಂಗಿ
ತೊನೆದಿತ್ತು ಕಾಯಿ ತೂಗಿ.
ಹಾಸಿತ್ತು ಹಸುರು ಅರಳಿತ್ತು ಮಲರು
ಚರಿಸಿತ್ತು ಕಂಪೆಲರು ಸಾಗಿ. ೧

ಬನ ಬನಗಳಲ್ಲಿ ಕುಣಿಕುಣಿದು ನವಿಲು
ಓಡಿತ್ತು ನವ ತರುಣಿಯಂತೆ.
ತಿಳಿಬಾನ ಮೇಲೆ ಬಿಳಿ ಮೋಡಲೀಲೆ
ನಡೆದಿತ್ತು ಬಿಳುಪಂಚೆ ಸಂತೆ. ೨

ಎಳೆ ತಳಿರ ಮೇಲೆ ಹನಿಯೊಂದು ಬೀಳೆ
ಹೊಳೆದಿತ್ತು ಮುತ್ತಿನಂತೆ.
ಮನೆ ತೊರೆದು ಗೋವು ಹುಡುಕುತ್ತ ಮೇವು
ಹೊರಟಿಹವು ಎಂದಿನಂತೆ. ೩

ಮಾವಿನಲಿ ಪಿಕವು ತೆಂಗಿನಲಿ ಶುಕವು
ಸ್ವರಗೂಡಿ ಹಾಡುತಿಹವು.
ಬಂದಿಹನು ಚೈತ್ರ ತಂದಿಹನು ಸೊಬಗು
ಬನವೆಲ್ಲ ತಳಿರು ಹೂವು. ೪

ಮರಕಿತ್ತು ಮೈಯ್ಯ ನುಲಿಯುತ್ತ ಕಯ್ಯ
ಕುಳಿತಿಹುದು ಹೆಣ್ಣದೊಂದು ;
ತಲೆಗಿಲ್ಲ ಎಣ್ಣೆ ಮಾಸಿಹುದು ಕೆನ್ನೆ
ಉಡುಪೆಲ್ಲ ಚಿಂದಿ ಚಿಂದಿ. ೫

ಎಂತಿಹುದೊ ದುಃಖ ಸುಯ್ಯುವುದು ಮುಖ
ಸೊಬಗೆಲ್ಲ ಮರೆತು ಮತ್ತೆ
ಏದುವದು ಉಸಿರು, ಬಾಡಿಹುದು ಕಣ್ಣು
ದೂರೆಡೆಯ ದೃಷ್ಟಿಸುತ್ತೆ. ೬

ತಪನ ಕಿರಣವದೊಂದು ನೀರ ಹನಿಯನು ಹಾಯೆ
ಮೂಡುವದು ಇಂದ್ರಚಾಪ
ಅವಳ ದೃಷ್ಟಿಯ ಕಿರಣ ಅಕ್ಷಿ ಬಿಂದುವ ಹಾದು
ಚಿತ್ರಿಸಿತು ಬಾಳ ರೂಪ. ೭

*  *  *

ಬಹುದಿನದ ಬಯಕೆ ಬಸಿರಾಂತ ಹರಕೆ
ತೊಟ್ಟಿಲಲಿ ನಲಿಯುತಿಹುದು,
ಕುಲುಕುತ್ತ ಮಯ್ಯ ಕುಣಿಸುತ್ತ ಕಯ್ಯ
ಚಲು ಕಂದ ಆಡುತಿಹುದು. ೮

ಜೋಲುತ್ತ ನಡೆದು ತೊದಲುತ್ತ ನುಡಿದು
ತಾಯೆದೆಗೆ ಹರ್ಷ ತಹುದು.
ಗೆಳತಿಯರ ಕೂಟ ವೊಸರನ್ನ ದೂಟ
ಮೋದದಲಿ ಬೆಳೆಯುತಿಹುದು. ೯

ತಂದೆಯನು ಸೇರಿ ಹೊಲದತ್ತ ಸಾರಿ
ಎಳೆಮಲ್ಲಿ ಕುಣಿಯುತಿಹಳು
ಹಕ್ಕಿಗಳ ನೋಡಿ ಹರ್ಷದಲ್ಲಿ ಕೂಡಿ
ಹಿಡಿತರಲು ಓಡುತಿಹಳು. ೧೦

ಹನಿದಿರಲು ಮುಗಿಲು ಹಗಲಲ್ಲಿ ನವಿಲು
ಕುಣಿವಂತೆ ಗೆಳತಿಯೊಡನೆ.
ಬಾಳೆಲ್ಲ ಶಿಶಿರು ಹರಡಿರಲು ಹಸುರು
ಕರಿಯನಿಹ ಚನ್ನಿಯೊಡನೆ. ೧೧

ಕಳೆದೆರಡು ವರುಷ ತುಂಬಿತ್ತು ಹರುಷ
ಗಂಡೊಂದು ಹುಟ್ಟಿತಾಗ.
ಕುಳಿತರಲು ಮಲ್ಲಿ ಕಂದ ನೆರೆಯಲ್ಲಿ
ತಬ್ಬುವಳು ಚನ್ನಿ ಬೇಗ. ೧೨

ಕಾಲನಟ್ಟುವ ದೂತ ಹಾಳುಗೆಡೆವನು ಬಾಳ
ಅವಗಿಲ್ಲ ಕರುಣೆ ಮತ್ತೆ

ಫಲಬಿಟ್ಟ ಮರಕೆ ಬಲುಸಲವ ಜಗಕೆ
ತಪ್ಪಿಹುದೆ ಅವನ ಲತ್ತೆ ? ೧೩

ಮೃತ್ಯುವೆಂಬುವ ಕಲ್ಲು ಮಾಡಿದುದು ಗುಲ್ಲು
ಕೊಂಡೊಯ್ದು ಕರಿಯನನ್ನು
ಶಾಂತ ಕಡಲಿನಲೊಂದು ಹಿರಿಗಲ್ಲು ಬಿದ್ದು
ಕದಡಿದುದು ಶಾಂತಿಯನ್ನು. ೧೪

ಹೊಣೆಯಾದ ಸಾಲ ಆಗಿಹುದು ಶೂಲ
ಬಂದಿಹನು ಧನಿಯು ಮುಂದೆ
ದಿನ ಮೂರು ಕಳೆದಿಲ್ಲ ಪತಿದುಃಖವಳಿದಿಲ್ಲ
ಕುತ್ತೊಂದು ಬಂತು ಹಿಂದೆ. ೧೫

ಬಿದ್ದಿಹನು ಇವನೀಗ ಇಳಿಯಲ್ಲಿ ತುಳಿಬೇಗ
ಎನುವ ನೀಚರ ತಂಡವಿಹುದು
ಬಾಯಲ್ಲಿ ಬಣ್ಣ ಕೃತಿಯಲ್ಲಿ ಸುಣ್ಣ
ಕೈತವವು ಮೆರೆಯುತಿಹುದು. ೧೬

ದುಡಿವವರು ಹಲರು ಉಣುವವರು ಕೆಲರು
ಜಗವೆಲ್ಲ ಒಂದೆ ಮಾಟ
ಸಾಲಕ್ಕೆ ಹೊಲವು ಮಾನಕ್ಕೆ ಮನೆಯು
ಮಕ್ಕಳಿಗೆ ಭಿಕ್ಷೆಯೂಟ. ೧೭

ನಡೆಯುತ್ತ ಕಾಲು ಜಾರುತ್ತ ಬೀಳೆ
ಕೈತಟ್ಟಿ ನಗುವರೆಲ್ಲ
ಬಾಳೆಲ್ಲ ಒಡೆದು ಹಣವೆಲ್ಲ ಕಳೆಯೆ
ಕೈನೀಡಿ ಕರೆವರಿಲ್ಲ. ೧೮

ಮಕ್ಕಳನು ಕೂಡಿ ದುಃಖದಲಿ ಬಾಡಿ
ಸೇರಿದಳು ಅಣ್ಣನೂರು
ತಂಗಿಯನು ಕಂಡು ಸಂತೈಸ ಬಂದು
ಒರಸಿದನು ಕಣ್ಣನೀರು. ೧೯

ಸತಿಯಳಿದ ಮನೆಯಲ್ಲಿ ಎಳೆಮಗನ ಜೊತೆಯಲ್ಲಿ
ಚೆನ್ನಿಯಣ್ಣನು ಬಾಳುತಿದ್ದ,
ತಬ್ಬಲಿಯು ಬಸವ ಸಭ್ಯತೆಯು ಕೆಳೆಕೂಡಿ
ಮುದ್ದಾಗಿ ಓದುತಿದ್ದ. ೨೦

ಅತ್ತೆಯನು ಕೂಡಿ ತಾಯನ್ನೆ ಮಾಡಿ
ಪ್ರೀತಿಯಲಿ ಬಸವನಿಹನು.
ಅವಳೆದೆಯ ಅರಿತು ಸಂಕಟವ ಮರೆತು
ಸಂತಸದಿ ಬಾಳುತಿಹನು. ೨೧

ಹಕ್ಕಿಗಳ ತೆರದಿ ಗೊಂಬೆಗಳ ಜೊತೆಗೆ
ಮೂರು ಮಕ್ಕಳಾಡುತಿಹವು ;
ಹುಸಿ ಮದುವೆಮಾಡಿ ನೇಗಿಲನು ಹೂಡಿ
ಇಹಬಾಳ ಅಣುಕುತಿಹವು. ೨೨

ದುಃಖದೊತ್ತಿಗೆ ಗಂಟು ಬಿಚ್ಚಿದರೆ ಬಹುವುಂಟು
ಒಂಟೊಂಟಿ ಬರುವುದಿಲ್ಲ,
ಮೃತ್ಯುದೇವತೆ ಬಂದು ಚೆನ್ನಿ ಕೂಸನು ಕೊಂದು
ಬತ್ತಿಸಿತು ಎದೆಯನೆಲ್ಲ. ೨೩

ಕಟುನುಡಿಯ ಕೇಳಿ ಬೇಸರವ ತಾಳಿ
ಚೆನ್ನಿ ಕ್ಷಯಿಸುತಿಹಳು
'ಸಾಕಿನ್ನು ಧರೆಯು ಕೇಳೆನ್ನ ಮೊರೆಯ'—
ಮೃತ್ಯುವನು ಕರೆಯುತಿಹಳು. ೨೪

ಕೊರಗೊಂದು ಹೊಕ್ಕು ಬದುಕಾಯ್ತು ಸಿಕ್ಕು
ಚೆನ್ನಿಯನು ಸುತ್ತಿ ಸುತ್ತಿ
ಕಾಲದೂತರದಂಡು ಚನ್ನಿ ದೇಹವ ಕೊಂಡು
ಮಲ್ಲಿಗಿಟ್ಟಿತು ಬಿಚ್ಚು ಗತ್ತಿ. ೨೫

ಎಳೆ ಮಲ್ಲಿ ತಾನು ನಗುತಿದ್ದ ಜೇನು
ಒಣಗಿದುದು ಸವಿಯು ಬತ್ತಿ

ಮುಗುಳಲ್ಲೆ ಕುಡಿಯು ಬಾಡುತ್ತಲಿಹುದು
ಅದಕಿಲ್ಲ ಸುಖದ ಸೊತ್ತು. ೨೬

ತಾಯಿ ಶವವನು ತಬ್ಬಿ ತಂದೆತಮ್ಮರ ನೆನಸಿ
ಒರಲಿದಳು ಮತ್ತೆ ಮತ್ತೆ
'ನೀನೆನ್ನ ತೊರೆದೆ ತಬ್ಬಲಿಯು ಆದೆ
ಯಾರೆನಗೆ ರಕ್ಷೆ ?'—ಎನುತ. ೨೭

*　　　*　　　*

ತಾಯ ರೂಪವು ಬಂದು ಕಣ್ಣೆದುರು ನಿಂದು
ಕರುಣೆಯಲಿ ನೋಡುತಿಹುದು.
ಮಲ್ಲಿ ಬಾಳನು ಹಳಿದು ಕಣ್ಣೀರು ಹರಿದು
ಎದೆ ಮಲರು ತೋಯುತಿಹುದು. ೨೮

ದುಃಖವೇದನೆ ಹೆಚ್ಚಿ ಕೂಗಿದಳು ಹುಚ್ಚಿ
ಬನಮೌನ ಕದಡುವಂತೆ.
ಕಿಚ್ಚುರಿಯೆ ಒಡಲಲ್ಲಿ ಒರಗಿದಳು ಮಲ್ಲಿ
ಅಳುವ ಮಗು ತಾಯಿಪ್ಪುವಂತೆ. ೨೯

ಹಸುರು ಹಾಸನು ಹಾಸಿ ತಂಪೆಲರ ಬೀಸಿ
ಬನದೇವಿ ಸಂತವಿಸುತಿಹಳು
ಬಸವಳಿದ ಒಡಲಲ್ಲಿ ಬೇಸರದ ಮನದಲ್ಲಿ
ಮಲ್ಲಿ ಎವೆ ಮುಚ್ಚುತಿಹಳು. ೩೦

ಸುಡುಗದಿರು ಬಾನಲ್ಲಿ ಅಲರುಣಿಗಳಲ್ಲಲ್ಲಿ
ಜೋಗುಳವ ಹಾಡುತಿಹವು.
ಕಪಿಮರಿಯು ತೆರದಲ್ಲಿ ತಿರೆಯನಪ್ಪಿರೆ ಮಲ್ಲಿ
ಕುರುಳೆಲ್ಲ ಹಾರುತಿಹವು. ೩೧

ಮಲ್ಲಿ ಚಿತ್ತದ ಲಹರಿ ತಿರೆಗೆಸೆದ ಬುಗುರಿ
ಸುತ್ತುತಿದೆ ಮತ್ತೆಮತ್ತೆ.
ಇಹದ ಲೋಕವ ಮರಸಿ ಸ್ವಪ್ನ ಲೋಕದಿಚರಿಸಿ
ಸಾಗುತಿದೆ ಅವಳ ಕಂತೆ. ೩೨

*　　　*　　　*

ತಾಯಿ ತೀರಿದ ಬಳಿಕ ಹೆಣ್ಣಾಗಿ ಬದುಕೆ
ಪರ ಮನೆಯು ಮಲ್ಲಿಗಾಯ್ತು.
ಮಾವ ಬಸವರ ಜಿಟ್ಟು ಎದೆಯನ್ನು ಸುಟ್ಟು
ಬಾಳುವುದೆ ಬೇಡವಾಯ್ತು. ೩೩

ಹೆಸರೀಗೆ ಒಲಿದು ಒಲುವನ್ನೆ ಮರೆದು
ಬಾಳುವುದೆಂಥ ಜನತೆ?
ತನ್ನ ಕರುಳನು ಜಿಟ್ಟು ಅನ್ಯರಿಗೆ ಒಂದಿಷ್ಟು
ಮರುಗದಿಹುದೆಂಥ ನಡತೆ? ೩೪

ಮಲ್ಲಿ ಬಾಳಿನ ಹೊಗರು ಗಾಳಿಗಿಟ್ಟಿಹ ಸೊಡರು
ಮಿಣುಕುತಿದೆ ಮುಂಕುಕಟ್ಟಿ
ಪರಮನೆಯ ಹಂಗಿನಲಿ ಕಹಿನುಡಿಯ ಬದುಕಿಲಿ
ಸಾಗಿಹಳು ಟೊಂಕಕಟ್ಟಿ. ೩೫

ಹಗಲೆಲ್ಲ ಹೊಲಗೆಲಸ ಇರುಳಿನಲಿ ಮನೆಗೆಲಸ
ಬಿಡುವಿರದ ಬಾಳಸಂತೆ
ಗಾಣದೆತ್ತಿನ ತೆರದಿ ದುಡಿಯುತಿದ್ದಳು ಭರದಿ
ಕರುಣೆಯನು ಕಾಣದಂತೆ. ೩೬

ಕಾಲನೆಂಬುವನಾತ ಜಗಕೆಲ್ಲ ಕರ್ತ
ಯಾರಿಗೂ ನಿಲುವನಲ್ಲ
ಕಾಮದೇವನ ಉಕ್ಕು ಮಲ್ಲಿ ದೇಹವ ಹೊಕ್ಕು
ತುಂಬಿತವಳಂಗವೆಲ್ಲ. ೩೭

ಬಾಡಿದ್ದ ಕೆನ್ನೆ ತಳೆದಿತ್ತು ಬಣ್ಣ
ಅವಳ ದನಿ ಮಧುರವಾಯ್ತು
ಒಡವೆಗಳ ಬಂಧ ಇರದಂಥ ಚೆಂದ
ಮಲ್ಲಿಯಲಿ ಸಹಜವಾಯ್ತು. ೩೮

ಎದೆಯುಬ್ಬಿ ಬಂದು ಚಲುವನ್ನು ತಂದು
ನಿಲಿಸಿಹುದು ಹತ್ತೇಳರಲ್ಲಿ.

ಕಾಡ ಹೂವೊಂದು, ಮರೆಯಲ್ಲಿ ನಿಂದು
ಮಲರಿಹುದು ಕಂಪು ಚೆಲ್ಲಿ. ೩೯

ಹರುಕು ಸೀರೆಯನುಟ್ಟು ಕುಂಕುಮವ ಹಣೆಗಿಟ್ಟು
ಮಲ್ಲಿ ನಡೆಯುವುದೆಂಥ ಸೊಗಸು!
ಗೌರಿ ಹಬ್ಬದ ದಿನದಿ ಗೆಳತಿಯರ ಸೊಗದಿ
ನಲಿವೆನೆನ್ನುವುದೆಲ್ಲ ಕನಸು. ೪೦

"ಬಾಳ ಕತ್ತಲೆ ಕಳೆದು ಕದಿರೊಂದು ಹರಿದು
ತಣಿಸುವುದೆ ಹಿಂದಿನಂತೆ
ನನ್ನ ರೂಪಕೆ ಒಲಿದು ಬಾಳಿಗಮೃತವನೆರೆದು
ಕೈ ಹಿಡಿವರಿಹರೆ?"—ಎನುವ ಚಿಂತೆ. ೪೧

ಮಳೆ ಸೆಳೆದ ಹೊಲದಲ್ಲಿ ಬರಡಾದ ನೆಲದಲ್ಲಿ
ಬೆಳೆದದ್ದೆ ಒಳ್ಳೆ ಬೆಳೆಯು
ಒಲವಳಿದ ಮನದಲ್ಲಿ ಮೊರಟಾದ ಲತೆಯಲ್ಲಿ
ಬಸವನದೊಂದೆ ಕುಡಿಯು. ೪೨

ಬಸವ ನೆಲಸಿಹನಿಂದು ತುಂಬು ಯೌವನ ಬಂದು
ಹಳ್ಳಿಯಲಿ ತಂದೆಯೊಡನೆ.
ಗುಲಗಂಜಿ ಕೆಂಪಿನಲಿ ಕರಿಬಿಂದು ತೆರನಲಿ
ಇತ್ತವನ ಮೂರ್ಛೆಬೇನೆ. ೪೩

ಹೂವಾದ ಹೃದಯ ನಸುಗೆಂಪು ದೇಹ
ಕುಡಿಮೀಸೆಯೊಪ್ಪುತಿಹುದು.
ಯೌವನದ ಬಣ್ಣ ಬಳಿದಿರಲು ಅವನ
ಬೇನೆಯನು ಮುಚ್ಚುತಿಹುದು. ೪೪

ಬಾಡಿದ್ದ ಹೂವ ತೆಗೆದೆತ್ತಿಮುಡಿವ
ಸುಂದರನು ಬರುವನೆಂದು
ಬರಿದಾದ ಎದೆಯಲ್ಲಿ ಸೊಡರೊಂದನಿಡುತಲ್ಲಿ
ಕಾಯುತ್ತಲಿಹಳು ಮಲ್ಲಿ. ೪೫

ಬಸವನಂಕವಸರಸಿ ಬಾಳನ್ನು ಬಯಸಿ
ದಿನ ದಿನವು ತಪಿಸುತಿಹಳು
ಮರವಾದ ಅವಳಾಸೆ ಹೆಣೆದಿತ್ತು ಪಾಶ
ಅರಿಯದೆಯೆ ಬಲಿಯಾಗುತಿಹಳು. ೪೬.

ಮದುವೆ ಸುದ್ದಿಯ ಕೇಳಿ ಗಗನಯಾನದಿ ಮಲ್ಲಿ
ಸುಮಚೆಲ್ಲಿ ಚರಿಸುತಿಹಳು
'ತನ್ನ ಗಾಳಿಯ ಮನೆಯು ಆಯ್ತಿಂದು ನಿಜವು'
ಎಂದೆನುತ ನಲಿಯುತಿಹಳು. ೪೭.

ಅರಿಷಿಣವ ಮೈಗಚ್ಚಿ ನಗವಿಟ್ಟು ತಲೆಬಾಚಿ
ನಿಲಿಸಿದರು ಮಲ್ಲಿಯನ್ನು
ಮಂತ್ರ ಶಾಸ್ತ್ರವ ಮಾಡಿ ಹಾಲುತುಪ್ಪವನೂಡಿ
ಮುಗಿಸಿದರು ಮದುವೆಯನ್ನು. ೪೮

ಮಲ್ಲಿ ಬಸವರನಂಟು ಇಬ್ಬರಿಗು ಸಮವುಂಟು
ವಿಧಿಯಿಲ್ಲ ಬಿತ್ತುಗಂಟು
ಕನಸು ತೊಟ್ಟಿಲ ಕಟ್ಟಿ ಎಣಿಕೆ ಹಾಡಸು ಹಾಡಿ
ಮಲ್ಲಿ ದಿನ ಕಳೆದುದುಂಟು. ೪೯

ಮುಂಗಾರು ಮಳೆಬಂದು ನೆಲವೆಲ್ಲ ಹಸರುಗಿದು
ಬಿಸಿಲುರಿಯು ತಣಿಯುವಂತೆ
ಹೊಸಬಾಳ ಹುರುಪಿನಲಿ ಒಣಗಿದ್ದ ಲತೆಯಲ್ಲಿ
ಕುಡಿಯಾಸೆ ತಳಿರುಬಂತು. ೫೦

ಮುದಿಮಾವ ಮನೆಯಲ್ಲಿ ಪತಿಬಸವ ಜೊತೆಯಲ್ಲಿ
ಇರಲಿನ್ನು ಗೆಲುವಾಯಿತೆಂದು
ಗತದುಃಖವಳಿದು ಶಾಂತಿಯನು ತಳೆದು
ಜೀವಿಪಳು ಮಲ್ಲಿಯಿಂದು. ೫೧

ತಳಿರಿದ್ದ ಲತೆಯಿಂದು ಹೂತುಂಬಿನಿಂದು
ಮೈಯೊಡ್ಡಿ ಕರೆಯುತಿಹುದು

ಬಂಡುಣಯು ಬಂದು ಸವಿಜೇನತಿಂದು
ಫಲವೊಂದ ನಿಡುವುದೆಂದು. ೫೨

ಪತಿಯೊಡನೆ ಮಲ್ಲಿ ಗದ್ದೆಗಳ ಬದಿಯಲ್ಲಿ
ಕಳೆದ ದಿನವೆಷ್ಟು ಸೊಗಸು !
ಅವಳತ್ತ ನೋಡಿ ಸ್ಮಿತವನ್ನು ತೋರಿ
ಬಸವ ನೀಡಿದುದೆಂಥ ಉಣಿಸು !! ೫೩

ಹಿರಿಯಾಸೆ ತೀರಿ ಎಳೆಯರಲಿ ತೋರಿ
ಮುದಿಯನಿಗೆ ತೃಪ್ತಿಯಹುದು.
'ಅಳಿದೋಯ್ತು ಗೋಳು ಹಸನಾಯ್ತು ಬಾಳು'
ಎನೆ ವಿಧಿಯು ನಗುತಲಿಹುದು. ೫೪

ನೆನಸಿನಲಿ ಕನಸು ತುಂಬುವುದು ಮನಸು
ಜಗವೆಲ್ಲ ಕಾಣುವುದು ಕನಸು
ಹಿರಿಯಾಸೆ ಕಿರುನೌಕೆ ಸಾಗುತ್ತಲಿರಲಾಕೆ
ವಿಧಿಗಾಯ್ತು ಸವಿಯ ಉಣಿಸು. ೫೫

ಖಗವೆರಡು ಕೂಡಿ ಮನೆಯನ್ನು ಮಾಡಿ
ಪ್ರೀತಿಯಲಿ ಹಾಡುತಿಹವು
ರಸಮಗ್ನ ಖಗವು ಅಪ್ಪುತ್ತ ಚೆಲುವ
ಬೇಡನನು ಕಾಣದಿಹವು. ೫೬

ಎಸೆದಿದ್ದ ಬಾಣ ಮುರಿದಿತ್ತುಗೋಣ
ಗಂಡುರುಳಿ ಧರೆಗೆ ಬಿತ್ತು
ಹೆಣ್ಣೆದೆಯು ನಡುಗಿ ಪತಿಯೆಡೆಗೆ ಸುರುಗಿ
ವಿರಹದಲಿ ಕ್ಷಯಿಸುತಿತ್ತು. ೫೭

ಬೇಸೆಯದು ಬೆಳೆದು ಬಸವನನು ಕೊರೆದು
ಕರುಳನ್ನು ಕೀಳುತಿಹುದು;
ವಿಧಿಗಾಳ ತಾಗಿ ಅಸುವನ್ನು ನೀಗಿ
ಬರಿ ಶವವು ಕಾಣುತಿಹುದು. ೫೮

ಪತಿದೇಹ ಕೊಂಡು ಮಸಣಕ್ಕೆ ಸಂದು
ಕಂಬನಿಯ ಕರೆಯುತಿಹಳು
ವಿಧಿಯನ್ನು ಹಳಿದು ಎದೆ ಎದೆಯ ಬಡಿದು
ಮಲ್ಲಿ ತಾ ಒರಲುತಿಹಳು. ೫೯

ಮೂಗುತಿಯ ತೆಗೆದು ಬಳೆಯನ್ನು ಒಡೆದು
ಬೆಂತರರಿನ ತೆರದೊಳಿಹಳು
ಪತಿಯನ್ನು ನೆನಸಿ ಮರಣವನು ಬಯಸಿ
ತಿರೆಯನಪ್ಪಳಿಸುತಿಹಳು. ೬೦

"ಬಾಳ ಬಲೆಬೀಸಿ ಮನವನ್ನು ಕುಣಿಸಿ
ಕೊರಳೀಗ ಕೊಯ್ದುದಾಯ್ತು
ಪತಿಯನ್ನು ಅಪ್ಪಿ ಕುಡಿಯಿಡುವ ತೃಪ್ತಿ
ಕೈಯಲ್ಲೆ ಕರಗಿಹೋಯ್ತು. ೬೧

"ಇದ್ದೊಂದು ಸೊಡರು ಕಳೆದಿಹುದು ಉಸಿರು
ಜೀವಿತವು ಇಲ್ಲ"—ವೆಂದು
ಶವವನ್ನು ತಬ್ಬಿ ಅವಳ ಕೊರಳುಬ್ಬಿ
ಕುಳಿತಿಹಳು 'ಮನೆ ಬೇಡ' ವೆಂದು. ೬೨

"ಸತ್ತಿಲ್ಲ ಬಸವ ಕೊಡೆ ನಾನು ಶವವ
ಹೂಳಲಿದ ಮಣ್ಣಿನಲ್ಲಿ
ಎಚ್ಚೆತ್ತು ಮೇಲೆ ಅವನೊಡನೆ ಬರುವೆ"
ಎನುತವಳು ಅಳುತಲಿರಲು; ೬೩

ಹಿಂದಿದ್ದ ಜನರು ಎಳೆತಂದರವರು
ಮಲ್ಲಿಯನು ಮನೆಯ ಕಡೆಗೆ
ಒಣಗಿರುವ ಮರಳಲ್ಲಿ ಹನಿಬಿದ್ದ ತೆರದಲ್ಲಿ
ಅಡಗಿದುದು ಮಲ್ಲಿಸೊಬಗು. ೬೪

ಮಲ್ಲಿ-ಬಸವರ ಬಾಳು ಕಡೆಗಾಯ್ತು ಹಾಳು
ಮುದಿಮಾವ ಕೊರಗುತಿಹನು

ಇದ್ದೊಬ್ಬ ಮಗನು ಅಳಿದಿರಲು ಅವನು
ಧರೆ ಶೂನ್ಯ ಮುದಿಯಗಿನ್ನು. ೬೫

ಮಾವನನು ನೆನೆದು ಮನವನ್ನು ಬಿಗಿದು
ಮಸಣದಲಿ ಬಾಳುತಿಹಳು
ಮಸಣಕ್ಕೆ ಹೋಗಿ ಪತಿಗೊಮ್ಮೆ ಬಾಗಿ
ಬೇಸರದಿ ತಿರುಗುತಿಹಳು. ೬೬

ತಾಳಲಾರದೆ ವಿರಹ ಶೀರ್ಣವಾಗಲು ದೇಹ
ಮಾವ ನಡೆದನು ಮಗನ ನೆನೆದು
ತುಂಬಿದ್ದ ಮನೆಯಿಂದು ಬರಿದಾಯ್ತು ವಿಧಿತಿಂದು
ಮಲ್ಲಿಯೊಬ್ಬಳನೆಸೆದು ಹಿಂದೆ. ೬೭

ಉರಿಯನ್ನು ತಣಿಸಿ ಮನವನ್ನು ಕುಣಿಸಿ
ಬಾಳ್ ದಹಿಕೆ ತಡೆವರಿಲ್ಲ
ಚಿಗುರಿದ್ದ ಬಗೆಯು ಕರುಕಾಯ್ತು ಲತೆಯು
ಜೀವಿಸಲು ಸಾರವಿಲ್ಲ. ೬೮

"ಚೆಂಡೊದೆಯುವ ತೆರದಿ ಬಾಳೆನ್ನ ತುಳಿದ
ವಿಧಿಗಿಲ್ಲ ಕರುಣೆಚೂರು
ಮುಡುಪಿಟ್ಟು ಮುದದಿ ಮನವಿಟ್ಟು ವ್ರತದಿ
ಬೇಡಿದರು ಉಳುಹರಾರೂ. ೬೯

"ಆರ್ತ ರಕ್ಷಕ ಶಂಭು ನೀನೆನಗೆ ಇಂಬು
ಎನುತತ್ತುಕರೆದುದಾಯ್ತು
ಕರುಣೆ ಇಲ್ಲದೆ ಹೋಯ್ತು ಎನ್ನ ಬಾಳ್ ಬರಿದಾಯ್ತು
ಮನೆಯಿಂದು ಮಸಣವಾಯ್ತು. ೭೦

"ಹುಟ್ಟುತ್ತ ಪಡದೆ ಕಹಿ ಬಾಳ ಸವಿದೆ
ಇನ್ನಿಲ್ಲ ಬಾಳ ಬಯಕೆ
ಎನ್ನೆಲ್ಲ ಬಯಕೆ ವಿಷಬಿಂದು ಬೆರಕೆ"
ಎನ್ನುತ್ತ ಅಳುವಳಾಕೆ. ೭೧

'ತಿಂಗಳೆರಡರಲಿ ಮನೆತಿಂದ ಮೂಳಿ'
ಎನುವ ನುಡಿಕಹಿಯು ತುತ್ತು.
ನೆನೆ ನೆನೆದು ಮನದಿ ಒಡಲೊಡೆವ ತೆರದಿ
ಒರಲುವಳು ಹುಚ್ಚಿಯಂತೆ. ೭೨

ಉಪ್ಪೆರಚಿ ಗಾಯಕ್ಕೆ ಉರಿಯಿಟ್ಟು ಜೀವಕ್ಕೆ
ನಗುತಿರುವ ಜನರು ಇಹರು.
ಸಂಕಟವ ದೂಡಿ ಕಲ್ಲೆದೆಯ ಮಾಡಿ
ಬಾಳಿದರು ಬಾಳಗೊಡರು. ೭೩

ದಿನ ದಿನವು ಬಂದು ಮಸಣದಲಿ ನಿಂದು
ಮೊರೆಯಿಡುತ ಬಸವನಲ್ಲಿ
ಹರಿದರುವೆಯುಟ್ಟು ಮನವನ್ನು ಸುಟ್ಟು
ಯೋಗಿನಿಯ ತೆರದೊಳಿಹಳು. ೭೪

* * *

ಅಳಿದಿದ್ದ ಪತಿಯಿಂದು ಕನಸಿನಲಿ ಬಂದು
ಕೈ ನೀಡಿ ಕರೆಯುತಿಹನು
ಮಲ್ಲಿ ದೇಹದ ಚಲುವ ಬಂಡುಣಲು ಬಸವ
ಅವಳನ್ನು ಚುಂಬಿಸಿಹನು. ೭೫

ಕಾಮದೇವನ ಬಂಧ ತುಟಿಯಲ್ಲಿ ಸುಳಿದು
ಕನಸಿನಲಿ ನಗಿಸುತಿಹುದು
ಪತಿಯು ಚೇಷ್ಟೆಯು ಕಂಡು ಮನ ಹರ್ಷಗೊಂಡು
ಮಲ್ಲಿಯೆದೆಯುಬ್ಬುತಿಹುದು. ೭೬

ಪತಿಯು ಸ್ಪರ್ಶಕೆ ಬೀಗಿ ನಸುನಾಚಿ ಬಾಗಿ
ಲತೆಯಂತೆ ಬಳುಕುತಿಹಳು
ಕನಸ ರಾಜ್ಯಕೆ ಒಲಿದು ಆಸೆಕಣ್ಣನು ತೆರೆದು
ಬರಿಬಯಲ ಶಪಿಸುತಿಹಳು. ೭೭

ಬಯಸಿದ್ದ ಭೋಗ ಹರಿದಿತ್ತು ಯೋಗ
ಪಡುಗಡಲ ರವಿಯು ಕಂಡು

ತಿರೆಬಿಸುಟಿ ಮಲ್ಲಿ ಬಗೆ ಕದಡಿನಿಲ್ಲೆ
ಕೆಣಕುತಿದೆ ದುಂಬಿವಿಂಡು. ೭೮

'ಕಣ್ಣೇಕೆ ತೆರೆದೆ? ಕನಸೇಕೆ ಮರದೆ?
ಈ ಬಾಳ ಸವಿಯಲೇನು?'
ಎನುತೊಮ್ಮೆ ಸುಯ್ದು ಕಣ್ಣೆರಡು ತೊಯ್ದು
ನೆನಪವಳ ಸುಡುತಲಿರಲು; ೭೯

ಒಣಗುತ್ತಲಿರುವ ಹೂವೊಂದ ತುಳಿವ
ಹಸುವನ್ನು ಕಾಣುತವಳು
ಹೂವನ್ನು ಎತ್ತಿ ಎದೆಗದನು ಒತ್ತಿ
ನಿಟ್ಟುಸಿರನಿಡುತಲಿಹಳು. ೮೦

'ಸೂಸುತ್ತ ಚಲುವ ಮೆರೆದಿದ್ದ ಹೂವೆ
ನಿನಗೀಗತಿಯದೇನು?
ಎನ್ನಂತೆ ನೀನು ನೊಂದಿದ್ದೆ ಏನು?
ಮೃಗಪಾದ ಕೊಂದಿತೇನು? ೮೧

'ಅಲರುಣಿಯು ಬಯಸಿ ಕಂಪನ್ನು ಬೀಸಿ
ನಲಿಯುತ್ತಲಿದ್ದೆಯೇನು?
ಬಿರುಗಾಳಿ ಬಂದು ಭ್ರಮರವನು ತೊಡೆದು
ವಿರಹವನು ತಂದಿತೇನು? ೮೨

'ಬಾಡುತ್ತ ನೀನು ಬಿದ್ದಿರಲುಕೂಡ
ಸ್ಥಳವಿಲ್ಲವಾಯಿತೇನು?'
ಎನ್ನುತ್ತಲವಳು ಧರೆಗೆಸೆದು ಹೂವ
ಚಿಂತಿಸುತಲಿರುವಳೇಸೋ. ೮೩

ಕುಣಿಯುತ್ತಲಿದ್ದ ಹುಚ್ಚೆದ ಬುದ್ಧಿ
ಜ್ಞಾಪಿಸಿತು ಕರ್ಮವನ್ನು
ರವಿ ಇಳಿಯುತಿರಲು ಓಡುತ್ತಲವಳು
ಸೇರಿದಳು ಮಸಣವನ್ನು. ೮೪

ಹರಿದರುವೆ ತಟ್ಟು, ಕೋಲುಗಳ ಕಟ್ಟು
ತುಂಬಿಹುದು ಹಳ್ಳಿಮಸಣ.
ಅಲ್ಲಲ್ಲಿ ಗುದ್ದು, ಇರಲಲ್ಲಿ ಹದ್ದು
ಹುಡುಕುತ್ತಲಿಹವು ಅಶನ. ೮೫

ಮಲ್ಲಿಯನು ಕಂಡ ಹೆಣತಿನಿಯತಂಡ
ಹಾರಿದುದು ಅಣಕುವಂತೆ
ಅವುಗಳನು ನೋಡಿ ಹಾಸ್ಯವನು ಮಾಡಿ
ಮಲ್ಲಿ ನಕ್ಕಳು ಮರುಳಿನಂತೆ. ೮೬

ಮಸಣವನು ಬಿಟ್ಟು ಆಚೆಯಲಿ ಒಂಟಿ
ಮರವೊಂದು ಕಾಣುತಿಹುದು.
ಮರದಡಿಯಲಿಟ್ಟ ಬಂಡೆಯನು ಮುಟ್ಟಿ
ಬಸವನ ಗುದ್ದು ಇಹುದು. ೮೭

ಅನ್ನವನು ಬಿಟ್ಟು ವ್ರತವನ್ನು ತೊಟ್ಟು
ಬಸವ ಮಲಗಿರುವನಲ್ಲಿ
ಬಂದವಳೆ ಮಲ್ಲಿ ತಬ್ಬುತ್ತ ಕಲ್ಲ
ಒರಗಿದಳು ಬಸವನಲ್ಲಿ. ೮೮

ಕಣ್ಣೀರು ಹರಿದು ಇಳೆಯಲ್ಲಿ ಇಳಿದು
ಕರುಳನ್ನು ಕರೆಯುತಿಹುದು
ಸುತ್ತುತ್ತಲೊಮ್ಮೆ ಸುಯ್ಯುತ್ತಲೊಮ್ಮೆ
ಹೃದಯವದು ಬೇಯುತಿಹುದು. ೮೯

ಅತ್ತತ್ತು ಕಣ್ಣು ತೊಂಡೇಯಹಣ್ಣು
ಸೆರಗವಳ ಹಾರುತಿಹುದು
ಮಲ್ಲಿಯನು ನೆನೆದು ಹೊಲಕೆಂದು ಬಂದ
ಕಾಮಿಯನು ಕುಣಿಸುತಿಹುದು. ೯೦

ಬಿದ್ದಿಹುದು ಕಾಯ ಅಳಿದಿಹನು ಒಡೆಯ
ಎನ್ನಾಸೆ ತೀರಿಸುವೆನು

ಯೋಚಿಸುತ ಕವಡ ಆತುರದಿ ಗೌಡ
ಮರದತ್ತ ನಡೆಯುತಿಹನು. ೯೧

ಆಸೆಯಲಿ ಬಂದು ಮಲ್ಲಿಯೆಡೆ ನಿಂದ
ಗೌಡನೆದೆ ಬಡಿಯುತಿಹುದು.
ದುಃಖದಲಿ ಎದೆಯು ಏರಿಳಿಯುತಿರಲು
ಅವನ ಕಾಮವು ಕೆರಳುತಿಹುದು. ೯೨

ಊರೊಡೆಯನಿಂದು ಸಂಜೆಯಲಿ ಬಂದು
ಮಲ್ಲಿಯನು ಕಾಡುತಿಹನು
ಕಾಮಕ್ಕೆ ಚಲಿಸಿ ದೇಹವನು ಬಯಸಿ
ಕರುಣೆಯನು ನಟಿಸುತಿಹನು. ೯೩

"ಏಳೇಳು ಮಲ್ಲಿ ಯಾಕಳುವೆ ಇಲ್ಲಿ
ಹೊತ್ತಿನ್ನು ಮುಳುಗುತಿಹುದು
ಮನೆಯತ್ತ ಜನರು ಸಾಗುತ್ತಲಿಹರು
ಸರಿಯಲ್ಲ ನೀನೋರ್ವಳಿಹುದು. ೯೪

"ನಿನ್ನಂಥ ಯುವತಿ! ದುಃಖದಲಿ ಸೋತು
ಕೊರಗುತ್ತ ಸಾಯಬಹುದೆ?
ಸತ್ತವರಿಗತ್ತು ಮರಳನ್ನು ಉತ್ತು
ಫಲವನ್ನು ಪಡೆಯಬಹುದೆ? ೯೫

"ಶೋಕವನು ಬಿಟ್ಟು ಧೈರ್ಯವನು ತೊಟ್ಟು
ಬಾಯಿನ್ನು ಮನೆಯ ಕಡೆಗೆ"
ಎನ್ನುತ್ತಲವನು ಮುಚ್ಚುತ್ತ ನಿಜವ
ಸಾರಿದನು ಮಲ್ಲಿಯೆಡೆಗೆ. ೯೬

ಧ್ವನಿಯನ್ನು ಕೇಳಿ ನೋಡಿದಳು ಹೊರಳಿ
ನಿಂತಿರುವ ಕಾಮಿಯನ್ನು
ಮೂಕಾದ ಶೋಕ ಧ್ವನಿಯಾಂತು ಬಳಿಕ
ಅಳುತಿಹಳು ಮಲ್ಲಿಯಿನ್ನು. ೯೭

‘ಪತಿಯನ್ನು ಬಿಟ್ಟು ಕರುಳನ್ನು ಸುಟ್ಟು
ಬರಲಾರೆ; ಹೋಗು ನೀನು’
ಬಿಕ್ಕುತ್ತಲವಳು ತೊದಲುತ್ತಲಿರಲು
ಮನವನ್ನು ಬಿಚ್ಚುತಿಹನು. ೯೮

“ನಿನ್ನ ದುಃಖವ ನೋಡಿ ಎನ್ನ ಮನ ಕದಡಿ
ಬಂದಿರುವೆ, ಏಳು ಇನ್ನು
ನೆನಪನ್ನು ದೂಡಿ ಇದ್ದವರ ಕೂಡಿ
ಸುಖಿಸಿದರೆ ಆಗದೇನು? ೯೯

“ಭ್ರಮರ ಸೋಂಕದ ಮುನ್ನ ಅಳಿದಿಹುದು ಜೊನ್ನ
ಬಂದಿಹೆನು ಸುಖವೀಯಲೆಂದು
ನಿನ್ನ ಯೌವನವನು ಪಾಳ್‌ಗಯ್ಯದಿನ್ನು
ಸುಖಿಸೆನ್ನೊಡನೆ ಬಂದು. ೧೦೦

“ದುಃಖವನು ದೂಡಿ ಎನ್ನೊಡನೆ ಕೂಡಿ
ನಿನ್ನಾಸೆಯನ್ನು ತಣಿಸು
ಮನದರಸಿ ನೀನು ನಿನ್ನಂಕ ಜೇನು
ಸವಿಯಿತ್ತು ಮನವ ಕುಣಿಸು.” ೧೦೧

ಕೇಳುತ್ತ ನುಡಿಯ ಕಚ್ಚುತ್ತ ತುಟಿಯ
ಬೀರಿದಳು ಉರಿವ ದೃಷ್ಟಿ
ನೈರಾಶ್ಯ ತಿರುಗಿ ಕೋಪಕ್ಕೆ ಬಾಗಿ
ಸುರಿಸಿದಳು ಕೆಂಡವೃಷ್ಟಿ. ೧೦೨

‘ವಿಧಿರೂಪಿ ನೀನು ಬಂದಿರುವೆಯೇನು
ಪತಿಬಿಡಿಸಿ ಎಳೆಯಲೆಂದು?
ಸ್ಮಿತವನ್ನು ತೋರಿ ಕೊಲಲಿರುವ ಮಾರಿ
ಹೋಗಿನ್ನು ದಾರಿಹಿಡಿದು.’ ೧೦೩

“ಕೇಳಿಲ್ಲಿ ಮಲ್ಲಿ ದುಃಖಿಗಳಿಗೆಲ್ಲ
ಸುಖವೀವ ಜೀವಿ ನಾನು

ಬಾಳಲ್ಲಿ ಸೋತು ಇರುವವರ ಓತು
ಸಲಹುವುದೆ ಎನ್ನ ನಿಯಮ. ೧೦೪

"ನಿನ್ನನ್ನು ಬಯಸಿ ಕೇಳೆನ್ನ ಅರಸಿ
ತಪಿಸಿತ್ತು ಎನ್ನ ಮನವು
ಗಂಡನನು ನೋಡಿ ಬಯಕೆಯನು ದೂಡಿ
ಕಾದಿದ್ದೆ ಇಷ್ಟು ದಿನವು. ೧೦೫

"ವಿಧಿಯೆನ್ನ ನೊಲಿದು ಮಾಡಿಹುದು ಬರಿದು
ನೀನೆನ್ನ ಕೂಡಲೆಂದು
ವಾದಿಸದೆ ಬರಿದೆ ಬಾಳಿನ್ನು ಸುಖದಿ
ಹೇಳುವೆನು ನಿನ್ನ ಹಿತದಿ." ೧೦೬

'ಬೆಂಕಿಯನು ಮುಟ್ಟಿ ಹೋಗದಿರು ಸುಟ್ಟು
ಎನ್ನ ಮನ ಉರಿಯುತಿಹುದು.'
ಗುಡುಗುತ್ತ ಮಲ್ಲಿ ಸಿಡಿದೆದ್ದು ನಿಲ್ಲೆ
ತೊಯ್ದೆದೆಯು ಕಾಣುತಿಹುದು. ೧೦೭

ಎದೆ ಮುಗುಳ ಕಂಡು ಗೌಡನೆದೆ ಗಂಡು
ಕಾಮದಲಿ ಕಾಯುತಿಹುದು.
"ಹಟ ಬೇಡವೀಗ, ಕೂಡೆನ್ನ ಬೇಗ"
ಸುಖವನ್ನು ಪಡೆಯಬಹುದು. ೧೦೮

"ಸುಖಬಂದು, ಚಿನ್ನ! ಎದುರಲ್ಲಿ ನಿನ್ನ
ತಣಿಸುವಡೆ ದೂಡಬೇಡ.
ನೀನಬಲೆ ಈಗ ಹಾಕದಿರು ಸೋಗ
ತಡಮಾಡಿ ಕೆಣಕಬೇಡ." ೧೦೯

ಗದರುತ್ತ ಗೌಡ ಕೈಯನ್ನು ನೀಡಿ
ಅವಳತ್ತ ಹೆಜ್ಜೆ ಇಡಲು;
ಕಾಲನ್ನು ತಾಗಿ ಮಲಗಿದ್ದ ಕೋಲ
ಕೈಗಾಂತು ನಗುತಲಿಹಳು. ೧೧೦

ಹ ಹ್ಹ ಹಃ ಹಃ! 'ಸರಿ ದೂರ ಪಾಪಿ!!
ನೀನೆನ್ನ ಮುಟ್ಟ ಬೇಡ'—
ಗುಡುಗಿದಳು ನಗುತ ಹ ಹ್ಹ ಹ ಹ್ಹ ಹಃ!!!
'ಮೃತ್ಯುವಿಗೆ ಉಣಿಸಾಗಬೇಡ.' ೧೧೧

ದೃಢವಾದ ಕಾಯ ಬಲಿತಿದ್ದ ಧ್ಯೇಯ
ಕೆಣಕಿದವು ಅಹಂಕಾರವನ್ನು
'ಅಳುತಿದ್ದ ನಾರಿ ಮಿಾರಿದಳು ದಾರಿ'
ಎನುತವನು ಕುದಿಯುತಿಹನು. ೧೧೨

'ನಿನಗೆಷ್ಟು ಸೊಕ್ಕು ಯಾರಿಹರು ದಿಕ್ಕು
ಆಡುವೆಯ ಗಡುಸು ಮಾತು?'
ಎಂದೆನುತ ಕಾಮಿ ಮೆಟ್ಟಿದನು ಭೂಮಿ
ನಾಗಹೆಡೆ ಬಡಿಯುವಂತೆ. ೧೧೩

ಕಾಮದಲಿ ಕಣ್ಣು ತುಂಬಿರಲು ಮಣ್ಣು
ಹಿಡಿದೆಳೆದ ಮಲ್ಲಿ ಸೆರಗ
ಭರದಲ್ಲಿ ಮಲ್ಲಿ ತಿರುಗುತ್ತ ಕೋಲ
ಬೀಸಿದಳು ತಲೆಯ ಕಡೆಗೆ. ೧೧೪

ರಭಸದಲಿ ಬಂದ ಕೋಲನ್ನು ಹಿಡಿದು
ಕೋಪದಲಿ ದೂಡಿದನು ಹಿಂದೆ
ನಿಂತಿದ್ದ ಮಲ್ಲಿ ಚೀರುತ್ತ ಬೀಳೆ
ತಲೆಯೊಡೆದುದು ಬಂಡೆಬಡಿದು. ೧೧೫

ಕನ್ಯೆಯರ ಕೆಡಿಸಿ ಬಾಳೆನಿತೊ ಒಡೆದ
ಕಾಮಿಯೆದೆ ಇರಿಯಲೆಂದು
ಪುಟದಿದ್ದ ರಕುತ; ಸ್ಪರ್ಶಿಸಲು ಹೇಸಿ
ಇಳೆಯತ್ತ ತಿರುಗುತಿಹುದು. ೧೧೬

ಭೂಮಿಯಲಿ ನಿಂದ ರಕ್ತದಲಿ ಮಿಂದು
ಕೆಂಪಾಯ್ತು ಮಲ್ಲಿ ತಲೆಯು

ಮೆದುಳೆಲ್ಲ ಚೆಲ್ಲಿ ಸಾವಪ್ಪಿ ಮಲ್ಲಿ
ಸೇರಿದಳು ಬಸವನಲ್ಲಿ. ೧೧೭

ಹೃದಯವನು ಸೀಳಿ ಚೀರುಲಿಯು ಕೇಳೆ
ಗೌಡ ನೋಡಿದ ಮಲ್ಲಿ ಶವವ.
ರಕ್ತಕಣ್ಣಿಯ ಕಂಡು ಗಾಬರಿಯಗೊಂಡು
ತಿರುಗಿದನು ಊರ ಕಡೆಗೆ. ೧೧೮

ಹಿಂದೊಮ್ಮೆ ನೋಡಿ ಮುಂದಕ್ಕೆ ಓಡಿ
ಮಬ್ಬಿನಲಿ ಸಾಗುತಿಹನು
ಮಲ್ಲಿಯನು ನೆನೆದು ಪ್ರೇತವನು ಕಡೆದು
ಒಮ್ಮೊಮ್ಮೆ ನಡುಗುತಿಹನು. ೧೧೯

*　　*　　*　　*

ಕಾಮಿಯನು ಕಂಡು ಹೇಸಿಕೆಯಗೊಂಡು
ಸರಿದಿದ್ದ ರವಿಯು ಹಿಂದೆ
' ಈ ಜೋಡಿಯನ್ನು ಕಾದಿರುವೆನಿನ್ನು '
ಎನುತ ನಿಶೆ ಬಂತು ಮುಂದೆ. ೧೨೦

ವಿಧಿಚಕ್ರ ಉರುಳಿ ಬಾಡಿದ್ದ ಅರಳು
ಕಾಮಿ ಕಾಲಿಗೆ ನಾಶವಾಯ್ತು.
ಮಲ್ಲಿ-ಬಸವರ ಜೋಡಿ ಮಸಣದಲಿ ಕೂಡಿ
ಅಮರ ಬಾಳ್ ನಡೆಸುತಿಹುದು. ೧೨೧

' ಶಿವಮೂರ್ತಿ '

(ದಿವಂಗತ ಪ್ರೊ. ಬಿ. ಎಂ. ಶ್ರೀಕಂಠಯ್ಯನವರ ರಜತೋತ್ಸವ ಸುವರ್ಣ ಪದಕವನ್ನು ೧೯೫೬ ನೆಯ ವರ್ಷದಲ್ಲಿ ಪಡೆದ ಕವಿತೆಯಿದು.)

# ಕಾವ್ಯಾವಲೋಕನ

**ವಿಜಯ ದುಂದುಭಿ**—ಸಂಪಾದಕರು: ಶ್ರೀ ಬಿ. ಎ. ಸನದಿ; ಪ್ರಕಾಶಕರು: ಚೇತನ ಪ್ರಕಾಶನ, ಬೆಳಗಾವಿ; ಕಿರೀಟ ಅಷ್ಟದಳ, ಪುಟಗಳು, XV + ೭೮; ಬೆಲೆ, ರೂ. ೦-೧೨-೦.

ಕರ್ಣಾಟಕದ ಏಕೀಕರಣವಾದಂದು ಬೆಳಗಾವಿಯ ಹಲವು ಗೆಳೆಯರು ಕೂಡಿ ಈ ಕವನಸಂಕಲನವನ್ನು ಪ್ರಕಟಿಸಿರುತ್ತಾರೆ. ಕರ್ಣಾಟಕದ ಏಕೀಕರಣದ ಕಾರ್ಯ ಗಡಿನಾಡುಗಳಲ್ಲಿ ಹೇಗೆ ಬಿರುಸಿನಿಂದ ಸಾಗುತ್ತಿತ್ತು ಎನ್ನುವುದನ್ನು ಕನ್ನಡಿಗರೆಲ್ಲರೂ ಬಲ್ಲರು. ಅನ್ಯಭಾಷಾ ಪ್ರಾಬಲ್ಯದಿಂದ ಕನ್ನಡಿಗರಿಗೆ ಆ ಎಡೆಗಳಲ್ಲಿ ಎಷ್ಟೆಷ್ಟು ಅನ್ಯಾಯಗಳಾಗಿವೆಯೆಂಬುದು ಸ್ಪಷ್ಟವಾದ ಸಂಗತಿ. ಇಂಥ ಇಕ್ಕಟ್ಟಿನಲ್ಲಿ ಸಿಕ್ಕಿದ್ದ ಬೆಳಗಾವಿಯ ಕನ್ನಡ ಬಂಧುಗಳಿಗೆ ಕರ್ಣಾಟಕದ ಏಕೀಕರಣವು ಒಂದು ಬಿಡುಗಡೆಯ ದಿನವೇ ಸರಿ. ಇಂಥ ಉತ್ಸಾಹದಾಯಕವಾದ ದಿನವನ್ನು ಅವರು ಆನಂದದಿಂದ ಸ್ವಾಗತಿಸಿ, ಕವಿತೆಯ ಮೂಲಕ ಅದರ ಮಹತ್ವವನ್ನು ಸಾರಿಹೇಳುವ ಪ್ರಯತ್ನವನ್ನು ಈ ಪುಸ್ತಕದಲ್ಲಿ ಮಾಡಿರುತ್ತಾರೆ.

ಈ ಸಂಕಲನದಲ್ಲಿ ಒಟ್ಟು ನಲ್ವತ್ತೊಂದು ಕವನಗಳಿವೆ. ಸಂಪಾದಕರು ಕವಿ-ಕಾವ್ಯ ಪರಿಚಯವನ್ನು ಮಾಡಿಕೊಟ್ಟಿರುತ್ತಾರೆ. ಕವಿಸಮುದಾಯದವರೆಲ್ಲ ಬೆಳಗಾವಿಯ ಬಳಗದವರೇ ಆಗಿರುತ್ತಾರೆ. ಕಿರಿಯರಿಂದ ವೊದಲ್ಗೊಂಡು ಹಿರಿಯರವರೆಗೆ ಅನೇಕರು ಈ ಬಳಗದಲ್ಲಿ ಇದ್ದಾರೆ. ಎಲ್ಲರೂ ನಿರ್ದಿಷ್ಟವಾದ ಒಂದು ವಿಷಯವನ್ನೇ ಕುರಿತು ಬರೆದಿರುವುದರಿಂದ ಸಂಕಲನದಲ್ಲಿ ವೈವಿಧ್ಯಕ್ಕೆ ಹೆಚ್ಚು ಅವಕಾಶವಿಲ್ಲ. ಆದರೂ ಸಂಪಾದಕರು ಸ್ಥೂಲವಾಗಿ ವಿಷಯಪ್ರತಿಪಾದನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಸುಸ್ವಾಗತಂ, ಶುಭೋದಯ, ಸಿಂಹಾವಲೋಕನ, ಭವಿಷ್ಯತ್ತಿನೆಡೆಗೆ ಎಂದು ವಿಭಾಗಿಸಿ ಪ್ರಕಟಿಸಿರುತ್ತಾರೆ. ಕವಿಗಳ ಶಕ್ತಿ, ಸಾಮರ್ಥ್ಯಗಳೂ ವಿವಿಧ ತೆರನಾಗಿರುವುದರಿಂದ ಒಟ್ಟು ಸಂಕಲನಕ್ಕೆ ಒಂದು ನಿಶ್ಚಿತವಾದ ಮಟ್ಟವನ್ನು ನಿರ್ಣಯಿಸುವುದು ಕಷ್ಟವೇ ಸರಿ.

ಮೊಟ್ಟಮೊದಲಿನಲ್ಲಿ ಶ್ರೀ. ಓ. ದೇ.ಶಿ., ಅವರು "ಬೆಳಗಾವಿ ನಾಡು" ಎಂಬ ತಮ್ಮ ಕವಿತೆಯಲ್ಲಿ ಆ ಊರಿನ ಹಿರಿಮೆಯನ್ನು ಸಾರಿಹೇಳಿರುತ್ತಾರೆ. ಇಲ್ಲಿ ಕವಿತೆಗೆ ತಕ್ಕ ಕೆಚ್ಚಿರುವುದಲ್ಲದೆ, ಕೊಟ್ಟಿರುವ ವಿವರಗಳು ಕೃತಿಗೆ ಒಂದು ಅಪೂರ್ವವಾದ ಕಾಂತಿಯನ್ನು ನೀಡಿವೆ. ಬೆಳಗಾವಿಯ ಇತಿಹಾಸವನ್ನೇ ಕವಿಗಳು ಅಚ್ಚುಕಟ್ಟಾಗಿ ಪವಣಿಸಿದ್ದಾರೆ.

ಕಿತ್ತೂರೊ ಮುತ್ತೂರೊ ಹೊಮ್ಮುತಿದೆ:
ಹುಡಿಮಣ್ಣು ವೀರರಸ ಚಿಮ್ಮುತಿದೆ
ಕಣ್ಣಾಗಿ ಗುಡಿಯಾಗಿ ಬೆಳಗುತಿದೆ.
ಹೊನ್ನಾಗಿ ಕುಡಿಯಾಗಿ ತೊಳಗುತಿದೆ
ಕೆಂಧೂಳಿ ಕಲಿತನವ ಸಾರುತಿದೆ
ಇಂದಿಗೂ ಹಿರಿತನವ ಬೀರುತಿದೆ.
ಆರೇರ ನಾಡಲ್ಲ—ಅರಿಯಿರೋ
ನಮ್ಮವರ ನಾಡಿಂಗೆ ನಂಬಿರೋ!
ಬೆಳವಡಿಯ ಮಲ್ಲಮ್ಮನ ನೆನೆಯಿರೋ!
ನಮ್ಮವರ ನಾಡಿಂಗೆ ನಮಿಸಿರೋ!

ಇಂಥ ನುಡಿಗಳು ಧಮನಿ ಧಮನಿಗಳಲ್ಲಿ ಆವೇಶವನ್ನು ಉಂಟುಮಾಡಬಲ್ಲವು. ಬಿಡುಗಡೆಯಾದರೂ, ಯಾವುದೋ ಕಾರಣಕ್ಕಾಗಿ ಇನ್ನೂ ಕಳೆಗುಂದಿ ಮ್ಲಾನವದನಳಾಗಿದ್ದ ಕನ್ನಡ ತಾಯಿಯನ್ನು ಕಂಡು,

ಆವ ಪಾಡಿಗೆ ಅಯ್ಯೊ! ನೀನಿಂತು ಮೌನದಲಿ
ಕೊರಗುತಿಹೆ! ಸೊರಗುತಿಹೆ! ಶೋಕ, ವಿಷ, ಪಾನದಲಿ!
ವಿಷವೀಂಟಿಯೂ ಶಿವನು ಚಿರ ಹಸಿತನಾಗಿಹನು!
ವಿಶ್ವವನು ರಕ್ಷಿಸೆ, ಕೃಪಾ-ಭಸಿತನಾಗಿಹನು!

ಎಂಬುದಾಗಿ ಸಮಾಧಾನ ಹೇಳುವ ಮಾತುಗಳು ಮನೋಜ್ಞವಾಗಿವೆ. ರಾಜ್ಯೋದಯವನ್ನು ಸೂರ್ಯೋದಯಕ್ಕೂ ಭಾಗ್ಯೋದಯಕ್ಕೂ ಹೋಲಿಸಿ ಹೊಗಳುವ ಕ್ರಮ ಎಂದಿನಂತೆಯೇ ಸಾಗಿದೆ, ಆದರೆ, ಈವರೆಗೆ ಸವೆದ ದಿನಗಳನ್ನು ಅತ್ಯುಗ್ರವಾದ ತಪಸ್ಸೆಂದು ಭಾವಿಸಿ,

ಸುಜಲದ ಸುಫಲದ ಕರಿನಾಡಿನ ನೆಲ
ಕಂಡಿರಲಿಂದಿಗೆ ನವೋದಯ
ಸಾರ್ಥಕವಾಯಿತು ಕನ್ನಡಿಗರ ತಪ
ಪ್ರಗತಿಗೆ ನಾಂದಿಯು ಈ ವಿಜಯ!

ಎಂದು ನಿರೂಪಿಸಿರುವುದು ಅರ್ಥವತ್ತಾಗಿದೆ. "ಕನ್ನಡ ನವಜೀವನ ಜನನವೆ ಕರ್ನಾಟಕದೇಕೀಕರಣ" ಎಂಬ ಹೇಳಿಕೆಯೂ ಒಪ್ಪತಕ್ಕದ್ದೆ. ಇಂತೆಯೇ, ಭಾರತಾಂಬೆಯ ಕುವರಿಯರಲ್ಲಿ ಒಬ್ಬಳಾದ ಕನ್ನಡದೇವಿಯನ್ನು ಕುರಿತು ಆ ತಾಯಿಯೇ ಹರಿಸಿದಳೆಂಬ ಕಲ್ಪನೆ ಮನಸ್ಸನ್ನು ಸೆಳೆಯುವ ರೀತಿಯಲ್ಲಿ ಒಂದು ಕವನದಲ್ಲಿ ಮೂಡಿಬಂದಿದೆ.

ವರದ ಫಲದಿಂದುಡಿಯ ತುಂಬುವೆ
ಶುಭದ ಕುಂಕುಮ ಹಚ್ಚುವೆ
ಏಳು ! ಕನ್ನಡ ಕುಲದ ದೇವಿಯೆ
ಕರುಳಿನಾರುತಿ ಬೆಳಗುವೆ !

* * * * *

ತುಂಬಿ ನಿಂದಿದೆ ಗರ್ಭಗುಡಿಯಲಿ
ಯುಗದ ನೂತನ ಜೀವನ
ಎಲ್ಲಿ ನೋಡಿದರಲ್ಲಿ ಉದಯದ
ನವ್ಯದರ್ಶನ ಚೇತನ !

ಈ ಪಂಕ್ತಿಗಳಲ್ಲಿ ನಮ್ಮ ಸಂಸ್ಕೃತಿಗೆ ತಕ್ಕ ಭಾವನೆಗಳು ಪ್ರತಿಬಿಂಬಿಸಿರುವುದನ್ನು ಕಾಣಬಹುದು.

.ನಮಗೆ ಲಭಿಸಿರುವ ನಾಡಿನ ಹಾಡಿನ ಜೊತೆಗೆ ಇನ್ನೂ ಲಭಿಸದಿರುವ ನಾಡಿನ ಭಾಗಗಳನ್ನು ಕುರಿತು ಕೊರಗುವ ಕವಿವಾಣಿಯೊಂದು ಈ ಸಂಕಲನದ ಏಕತಾನವನ್ನು ಸ್ವಲ್ಪಮಟ್ಟಿಗೆ ಹೋಗಲಾಡಿಸುವಂತೆ ಇದೆ.

ನಮ್ಮಕ್ಕತಂಗಿಯರು
ನಮ್ಮ ಪ್ರೀತಿಗೆ ಪಾತ್ರರು !
ಆದರೂ
ಏತಕೇನೊ ಅವರು
ತಮ್ಮ ಮನೆ ಕಟ್ಟಲಿಕೆ
ತವರುಮನೆ ಕೆಡಹಲಿಕೆ
ಯತ್ನಗೈಯುತಲಿಹರು !
ಹಿಂದಿನೊಲು ಮತ್ತಿಂದು
ಬೇಡಿ ಹಟವಾಡುತಿಹರು !

ಈ ರೀತಿ ಪೀಠಿಕೆಯೊಂದನ್ನು ಹಾಕಿ, ಅನಂತರ, ಈಗ ನಮ್ಮ ಕೈ ತಪ್ಪಿಹೋಗಿರುವ ಅನೇಕ ಊರುಗಳನ್ನು ಹೇಳಿ, ಅದಕ್ಕಾಗಿ ಪಶ್ಚಾತ್ತಾಪ ಪಟ್ಟಿರುವ ಕವಿಯ ಮನಸ್ಸು ಯಾರನ್ನಾದರೂ ಒಲಿಸದೆ ಇರದು.

ಇನ್ನಾದರೂ ಸುಮ್ಮನಿರು ಮಹಾತಾಯಿ !
ಹೊಸ ಮೈಸೂರು ಸೊಸೆ
ಮನೆಗೆ ಬಂದಿಹಳು !
ಮನೆಕಾಯ್ದುಕೊಳ್ಳಲೇಳು !
ಸುಖದಿಂದ ಬಾಳಲವಳು !

ಮೇಲಿನ ನುಡಿಗಳು ಕನ್ನಡಿಗರ ಶಾಂತಸ್ವಭಾವಕ್ಕೆ ತಕ್ಕಂತಿವೆ. ಇದೇ ರೀತಿ, ಇತರ ಹಲಕೆಲವು ಕವಿತೆಗಳಲ್ಲಿ ಕನ್ನಡಿಗರ ಪೂರ್ವಚರಿತ್ರೆ, ಪ್ರಾಚೀನರ ಪಾಶಸ್ತ್ಯ, ಇಂದಿನ ಹೊಣೆ ಮುಂತಾದುವುಗಳನ್ನು ಕವಿಗಳು ನಿರೂಪಿಸಿರುತ್ತಾರೆ.

ನಾಡನ್ನು ಕಟ್ಟಿದ ಜನ ನಾಡನ್ನು ಬೆಳಸುವ ಕೆಲಸಕ್ಕೂ ಸಿದ್ಧರಾಗಬೇಕಲ್ಲವೆ? ಈ ಎಚ್ಚರವನ್ನು ಕುರಿತು ಕವಿಗಳೊಬ್ಬರು,

ನಾಡಿನ ಸೇವೆಗೆ ಜನುಮದ ಕಾಣಿಕೆ
ಸಲ್ಲಿಸಿ ಘನತೆಯ ಬೆಳಗೋಣ!

ಎಂದು ಕರೆಯಿತ್ತಿದ್ದಾರೆ. "ಕರುನಾಡ ಹಣತೆಯೊಳಗೆ ಭಾರತ ಭಕ್ತಿಯನೆರೆದು ವಿಶ್ವಾತ್ಮಗೆ ಆರತಿಯನೆತ್ತೋಣ" ಎಂಬುದಾಗಿ ಮತ್ತೊಬ್ಬರು ನುಡಿದಿದ್ದಾರೆ. ಒಬ್ಬರಂತೂ ಏಕೀಕರಣವನ್ನು "ಮಳೆಬಂತು" ಎಂದು ಭಾವಿಸಿ,

ಮಳೆ ಬಂತು ಕೊನೆಗೆ
ಕಳೆ ಬಂತು ಕನ್ನಡಕೆ-ಕರುನಾಡಿಗೆ!

* * * *

ಬಾಗಿಲಿಗೆ ಬಂದಿರುವ ಅಮ್ಮನನು ಕರೆಯಯ್ಯ
ಕಣ್‌ತುಂಬಿ ನಿಂದಿರುವ ಕಂಬನಿಯ ತೊಡೆಯಯ್ಯ.
ಎಳೆಹುಲ್ಲ ಮಕಮಲ್ಲ ಹಾಸಿನಲಿ ನಡೆಸು
ಬಹುದಿನದ ಬಳಲಿಕೆಯ ನೀನಿಂದು ತಣಿಸು!
ಅವಳ ಪಾದದ ಧೂಳಿಕಣವೆಲ್ಲ ಸ್ವರ್ಣ;
ಆ ಮಂದಹಾಸದಲಿ ಮಿಂದಜೀವನ ಪೂರ್ಣ!

ಎಂಬುದಾಗಿ ಸಾಂಕೇತಿಕವಾಗಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿರುತ್ತಾರೆ. ಈವರೆಗೆ ನಾಡಿನ ಗಡಿಗಾಗಿ ಬಡಿದಾಡಿದ್ದು ಆಯಿತು. ಇನ್ನು ಮುಂದೆ ಮನದ ಏಕೀಕರಣವಾಗಬೇಕೆಂಬ ಸೂಚನೆ ಸಮಯೋಚಿತವಾಗಿದೆ. ಅದಕ್ಕಾಗಿಯೇ ಒಬ್ಬರು,

ನಾಡೊಂದಿದಿದ್ದರೆ ಹಿರಿ ಹಿರಿ ಹಿಗ್ಗೇ?
ಪೂರೈಸಿತೆ ಈಗಲೆ ಕೊರತೆ?
ಮೂಡಣ ಪಡುವಣ ಬಡಗಣ ತೆಂಕಣ
ದಲಿ ಮೂಡಲಿ ಬಂಧುರ ಸಮತೆ!
ಕಟ್ಟಿದ ಕನ್ನಡ ಹೊಂದೇರೆಳೆಯಲು
ನೆರೆದ ಪರಸಿ ಕೈಗೂಡಿಸಲಿ!
'ಹರಹರ ಮಾದೇವ' ಎಂದರೆ ಸಾಲದು
ಮನಮನದೆಳೆ ಹುರಿಗೊಂಡಿರಲಿ!

ಎಂಬುದಾಗಿ ಹಾರೈಸಿರುತ್ತಾರೆ. ಈ ಮಾತು ಅಕ್ಷರಶಃ ಸತ್ಯ. ಇಂದು ಮೊದಲು ಆಗಬೇಕಾದ ಕಾರ್ಯವಿದು. ಏಕೆಂದರೆ ಮನಸ್ಸು ಕೂಡದಿದ್ದರೆ ಏನಾಗಿ ಏನು ಪ್ರಯೋಜನ? "ಹರಹರಾ ಐಕ್ಯವಿಲ್ಲದ ಸೌಖ್ಯವೆಂತೊ!" ಎಂಬುದು ಉದ್ಗಾರ ಮಾತ್ರವಲ್ಲ; ವಾಸ್ತವವೂ ಹೌದು. ನಾಡಿನ ಏಕೀಕರಣದ ದೃಷ್ಟಿ ವಿಶ್ವದ ಏಕೀಕರಣಕ್ಕೆ ಒಂದು ಮೆಟ್ಟಲಿನಂತೆ ಇರಲೆಂಬ ಕವಿಯ ಆಶಯ ಉದಾತ್ತವಾಗಿದೆ.

ಕನ್ನಡದ ಕುಲವೊಂದೆ. ಭಾರತದ ನೆಲವೊಂದೆ
ಜೀವಕೋಟಿಯ ಕೋಟಿಗೋಡೆಯೊಂದೆ!
ಒಂದೊಂದಕಿನ್ನೊಂದು ಛಂದವಾಗಿರಲಿಂದು
ವಿಶ್ವಶಾಂತಿಯ ಗೀತ ವಿಶ್ವಕೊಂದೆ!

ಈ ರೀತಿ ಬೆಳಗಾವಿಯ ಕವಿ ಬಳಗದವರು ಕನ್ನಡನಾಡಿನ ಒಕ್ಕೂಟವನ್ನು ಕುರಿತು ಹಲವಾರು ರೀತಿಯಲ್ಲಿ ಹಾಡಿರುತ್ತಾರೆ. ಕನ್ನಡನಾಡಿನ ಜಾಗೃತಿಗೆ ಹಿಂದಿನಿಂದಲೂ ಕನ್ನಡ ಕವಿಗಳು ಬೇಕಾದ ಹಾಗೆ ತಮ್ಮ ಕಾಣಿಕೆಯನ್ನು ನೀಡಿರುತ್ತಾರೆ. ಪ್ರಕೃತ ಗ್ರಂಥದಂತೆಯೇ, ಇಡಿಯ ಕನ್ನಡನಾಡಿನ ಕವಿಗಳನ್ನು ಗಮನದಲ್ಲಿಟ್ಟುಕೊಂಡು ನಾಡಿನ ರಚನೆಗೆ ಸ್ಫೂರ್ತಿಯನ್ನೂ, ಮೂರ್ತಿಸ್ವರೂಪವನ್ನೂ ಕೊಟ್ಟ ಕೆಲವು ಉತ್ತಮೋತ್ತಮ ಕೃತಿಗಳನ್ನು ಒಂದೆಡೆ ಸಂಗ್ರಹಿಸುವುದು ಅಗತ್ಯ. ಅಂಥ ಉದ್ದೇಶಕ್ಕೆ ಪ್ರಕೃತ ಸಂಕಲನವೊಂದು ಮಾದರಿಯಾದೀತೆಂದು ಎಣಿಸುತ್ತೇವೆ. ನಾಡುನುಡಿಗಳ ಅಭಿಮಾನವನ್ನು ಉಕ್ಕಿಸುವ ಪ್ರೇರಣೆ ಸಾಹಿತ್ಯಶಕ್ತಿಗೆ ಸಹಜವಾಗಿ ಬಂದದ್ದು. ಆದ್ದರಿಂದ, ಪ್ರಕೃತ ಗ್ರಂಥದಲ್ಲಿ ಅಡಕವಾಗಿರುವ ಕೃತಿಗಳ ಮಟ್ಟ ಒಂದೇ ರೀತಿಯಲ್ಲಿ ಇಲ್ಲದಿದ್ದರೂ, ಅವರೆಲ್ಲರ ಹೃದಯದ ಮಿಡಿತ ಒಂದೇ ಬಗೆಯಾದದ್ದು ಎಂದು ಹೇಳಲು ಹಿಂತೆಗೆಯಬೇಕಾಗಿಲ್ಲ. ಬೆಳಗಾವಿಯ ಕನ್ನಡಿಗರನ್ನು ಈ ಬಗ್ಗೆ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇವೆ. ಅವರ ಕನ್ನಡದ ಕೆಚ್ಚು ಇನ್ನೂ ನೂರು ಮಡಿಯಾಗಿ ಬೆಳೆದು ಅಲ್ಲಿನ ಹಿಂದಿನ ವೈಭವ ಮರಳಿ ವಿರಾಜಿಸಲಿ, ಅಂತೆಯೇ ಕನ್ನಡ ನಾಡಿನ ಇತರ ಭಾಗಗಳೂ ಬೇಗ ಒಂದಾಗಲಿ. ಕನ್ನಡದ ಏಳಿಗೆ ಸಂತತವಾಗಿ ಮುಂದೆ ಮುಂದೆ ಸಾಗುತ್ತಿರಲಿ.

—ಜಿ. ವ.

* * *

**ಜೀವನಾದ**—ಬರೆದವರು: ಕೃಷ್ಣಮೂರ್ತಿ ಪುರಾಣಿಕ; ಪ್ರಕಾಶಕರು: ಸುದರ್ಶನ ಪ್ರಕಾಶನ, ತಾರಾನಿವಾಸ್, ತಿಪಟೂರು; ಪುಟಗಳು ೭೫; ಬೆಲೆ, ರೂ. ೧-೮-೦.

ಕವನ ಕಟ್ಟುವುದೂ ಒಂದು ಕಲೆ. ಅದು ಅನುಭವದಿಂದ ಮೂಡಿ ಬರುವಂತ

ಹುದಾದರೂ ಪ್ರಚೋದಕ ಕಾರಣವೊಂದು ಬೇಕು. ಕಾವ್ಯರಾಣಿ ತಾನಾಗಿಯೇ ಒಲಿದು ಮಿಡಿಯಬೇಕು. ಆಕೆಯನ್ನು ಬಂಧಿಸಿ ಎಳೆಯುವಂತಿಲ್ಲ. ಸಾಹಿತ್ಯಪ್ರಪಂಚಕ್ಕೆ ಹೊಸಬರೇನಲ್ಲದ ಶ್ರೀ ಕೃಷ್ಣಮೂರ್ತಿ ಪುರಾಣಿಕರವರ 'ಜೀವನಾದ'—ಕವನ ಸಂಗ್ರಹವು ಕಾವ್ಯದೇವಿ ಅವರ ಜೀವನವನ್ನು ಮಿಡಿದಾಗ ಉದಿಸಿದ ನಾದದ ಪ್ರತೀಕವೆಂದು ಹೇಳಬಹುದು.

ಇಲ್ಲಿಯ ಕವನಗಳು ವಿವಿಧ ವಿಷಯಗಳನ್ನು ಕುರಿತವುಗಳಾದರೂ, ಅವುಗಳಲ್ಲಿ ಬಹಳ ಕವನಗಳು ಪ್ರೇಮ ಕವನಗಳು. ಇವುಗಳನ್ನು ಶ್ರೀಯುತರು ಚೆನ್ನಾಗಿ ಹೆಣೆದಿದ್ದಾರೆ. 'ಹುಚ್ಚುಬಾಳಿನ ಸವಿಯ ಕನಸಾಗಿ' ಬಂದ 'ಮೆಚ್ಚಿದಾಕೆ':

'ನನ್ನ ಜೀವನದಲ್ಲಿ
ನಿನ್ನ ಬಾಳಿನ ಬಳ್ಳಿ
ಚಿಗಿತು ಹೆಮ್ಮರವಾಗಿ ಹೂದುಂಬಲಿ;
ಹೂವಾಗಿ ಕಾಯಾಗಿ ಫಲದುಂಬಲಿ.'

ಎಂದು ಎದೆಯುಬ್ಬಿ ಹೇಳುವುದು ಸೊಗಸಾಗಿದೆ. ಹಾಗೆಯೆ 'ಒಪ್ಪಿಗೆ' ಕವನದಲ್ಲಿ:

'ನಿನ್ನೆದೆಯ ಕಾರಂಜಿ ಹೊರಬಿದ್ದು ಬರುವಾಗ
ಪ್ರೇಮಗಂಗಾನದಿಯು ನೀನಾದೆ
ಪ್ರೇಮಗಂಗಾನದಿಯು ಹೊನಲಾಗಿ ಹರಿವಾಗ
ನನ್ನದೆಯ ಸಾಗರವ ನೀ ಸೇರಿದೆ.'

ಎಂಬ ನಲ್ಲ-ನಲ್ಲೆಯರ ಸಂಗಮದ ಚಿತ್ರ ಕಲ್ಪನೆಯು ನವ್ಯತೆಯನ್ನು ತೋರಿಸುತ್ತದೆ. ಸವಿಜೇನು ಸವಿಯು ಹೊರಟ ನವತಾರುಣ್ಯದ ಉರುಬನ್ನು ಕವಿ ಸ್ಪಷ್ಟವಾಗಿ ಮೂಡಿಸಿದ್ದಾರೆ. ಆಗ ಮಡಿದರೂ ಜೊತೆಯಲ್ಲ ಮಡಿಯಬೇಕು ಎನ್ನುವ ಆಶೆ! ಅದಕ್ಕಾಗಿಯೇ:

'ಕಡಲಲ್ಲಿ ಮುಳುಗೋಣ
ದಡದಾಸೆ ನಮಗೇನ'

ಎನ್ನುತ್ತಾರೆ. ಇನ್ನು ಹೊರಜಗತ್ತಿನ ಪರಿವೆಯೆಲ್ಲಿ? ಆಗ ಜೀವನದ ಪೂರ್ಣಜ್ಞಾನವಿಲ್ಲ; ಆಗ 'ಜೀವನವು ಚಿನ್ನಾಟ ಕುಣಿಯೋಣ'—ಎನ್ನುತ್ತಾರೆ. ಬಾಳಿನಲ್ಲಿ ಸಾವು, ನೋವು ಇದೆ. ಆದರೆ ಅದನ್ನೇ ನೆನೆಯುತ್ತಿದ್ದರೆ ಬದುಕುವುದು ಹೇಗೆ? ಅದಕ್ಕಾಗಿಯೇ:

'ಬಾಳ ಗೋಳೊಳು ನಗೆಯೆ ತೇಲಲು
ಅದುವೆ ನಮ್ಮ ಜೀವನಾ
ಬದುಕಲೆಮ್ಮ ಸಾಧನಾ'—

ಎನ್ನುತ್ತಾರೆ ಕವಿ. ದಿನ ಕಳೆದರೆ ದಿನ ನೋವು ತರುತ್ತದೆ; ಎಚ್ಚರವಾಗಿರಬೇಕು ಎನ್ನುವ ಜ್ಞಾನ ಅವಶ್ಯವಾದರೂ ಬಾಳಬೇಕು, ಚೆನ್ನಾಗಿ ಬಾಳಬೇಕು ಎನ್ನುವುದು ಕವಿಯ ಆಶಯ.

'ದಿನಕಿಲ್ಲ ಸಾವು ನಮಗಿಹುದು ನೋವು
ನೋವನ್ನು ಮರೆತು ಬಾಳು'

ಎನ್ನುವುದು ಈ ಭಾಗದ ಕವನಗಳ ಒಟ್ಟು ಸಂದೇಶ. ಜೀವನದ ಜಂಜಡದಲ್ಲೇ ಸುಂದರ ಸೌಧವನ್ನು ಕಟ್ಟಿ ಸುಖಿಯಾದವನು ಜಾಣ.

ರಾಷ್ಟ್ರೀಯತೆಯನ್ನು ಸೂಚಿಸುವ ಒಂದೆರಡು ಕವನಗಳೂ ಇವೆ. ಕವಿ:

'ಕನ್ನಡ ನುಡಿಯೊಳಗೆಲ್ಲವು ತುಂಬಿದೆ
ಕಂದರು ನೀವೈತನ್ನಿರೆಲೆ!'

ಎಂದು ಕನ್ನಡ ಕಂದರನ್ನು ಕರೆಯುತ್ತಾರೆ. ಸುಪ್ತ ಚೇತನರಾಗಿರುವವರಿಗೆ ರಾಷ್ಟ್ರದ ಪ್ರಗತಿಯತ್ತ ಕಣ್ ತೆರೆಯಲು 'ನವಯುಗಾರಂಭ' ಕವನವು ಹೊಸ ಚೇತನ ತುಂಬುವಂತಿದೆ. ಹಾರಾಡುತ್ತಿರುವ ಬಾವುಟವನ್ನು ನಮಿಸಲು ಹೊರಟಾಗ ಸ್ವಾತಂತ್ರ್ಯದ ಹೋರಾಟ ಜ್ಞಾಪಕಕ್ಕೆ ಬಂದು ಮೈ ನಡುಗುತ್ತದೆ:

'ಜೀವ ಝುಲ್ಲೆನುವಂತೆ ಸಾವು ನರ್ತಿಸುತಿರಲು
ಬಿಡುಗಡೆಯ ಹಂಬಲಿಂದೆ
ಸಾಗಿದಳು ಭಾರತಾಂಬೆ'

ಹಾಗಿತ್ತು ಸ್ವಾತಂತ್ರ್ಯ ನವಚೇತನ! ಯಾವುದಕ್ಕೂ ಹಿಮ್ಮೆಟ್ಟುವಂತಿರಲಿಲ್ಲ. ಅಂತೂ ಸ್ವಾತಂತ್ರ್ಯ ಬಂತು. ನಿಜವಾದ ಬಿಡುಗಡೆಯೇ?

'ಜಯಘೋಷದಿಂದೇನು ತುಂಬುವುದೆ ಬರಿಯೊಡಲು
ಸಿಂಗಾರದಿಂದೇನು ಹಿಂಗುವದೆ ಹಸಿವೆ?
ಸ್ವಾತಂತ್ರ್ಯವೆಂದರದು ಸಂಭ್ರಮದ ಸಾವಲ್ಲ
ಬದುಕಿ ಬಾಳುವ ಸ್ಥಿತಿಯು ತಿಳಿದು ನೋಡು!'

ಎಂದು ಕಳವಳವನ್ನು ಸೂಚಿಸುತ್ತಾರೆ ಕವಿ.

'ಸಗ್ಗವೆಣ್ಣು,' 'ದಮಯಂತಿ' ಮತ್ತು 'ಕಾಳನಕೆರೆ' ಇವು ಮೂರು ಕಥನ ಕವನಗಳು. 'ಸಗ್ಗವೆಣ್ಣಿ' ನಲ್ಲಿ ಅರ್ಜುನನಿಗೆ ಊರ್ವಸಿ ಕೊಟ್ಟ ಶಾಪ ವರ್ಣಿಸಲ್ಪಟ್ಟಿದೆ. 'ದಮಯಂತಿ' ಕವನದಲ್ಲಿ ದಮಯಂತಿಯ ವಿರಹ ದುಃಖ ಮೂಡಿದೆ. ಇವುಗಳಲ್ಲೆಲ್ಲ ಅತ್ಯಂತ ದೀರ್ಘವಾದ, ಹೃದಯ ವಿದ್ರಾವಕವಾದ ಕವನ—'ಕಾಳನಕೆರೆ'.

'ತನ್ನ ಜನಗಳಿಗಾಗಿ ತಾನೊಡಲ ತೆತ್ತ' ಆತ್ಮಬಲಿಯ ಧೀರಕಥೆ ಇದು. ನೀರಿಲ್ಲದೆ ಸಾಯುತ್ತಿದ್ದ ಜನಕ್ಕೆ ಎಂದೂ ಬತ್ತದಂತಹ ಸಿಹಿನೀರಿನ ಸೆಲೆಯನ್ನು ಆತ್ಮಾರ್ಪಣ ದಿಂದ ತಂದುಕೊಟ್ಟ ಕಾಳನ ಹಿರಿಯ ಧ್ಯೇಯವನ್ನಿಲ್ಲಿ ಕವಿ ಚೆನ್ನಾಗಿ ಚಿತ್ರಿಸಿದ್ದಾರೆ. ಜಾತ್ಯಂಧರ ಕಣ್ಣು ತೆರೆಯಿಸಿದ್ದಾರೆ; ಕಾಳನ ಹೆಸರನ್ನು ಅಮರವಾಗಿ ಮಾಡಿದ್ದಾರೆ.

'ಬೇಂದ್ರೆ,' 'ಕೈಲಾಸಂ,' 'ಗಳಗನಾಥರಿಗೆ' ಮತ್ತು 'ಮುದವೀಡು'—ಈ ಕವನಗಳಲ್ಲಿ ಕವಿ ತಮ್ಮ ನೆಚ್ಚಿನ ಹಿರಿಯ ಸಾಹಿತಿಗಳನ್ನು ಕೊಂಡಾಡಿದ್ದಾರೆ. ಅವರಿಂದಾಗಿರುವ ಕನ್ನಡಮ್ಮನ ಸೇವೆಯನ್ನೂ ಸ್ಪಷ್ಟವಾಗಿ ಚಿತ್ರಿಸಿದ್ದಾರೆ: ಕೈಲಾಸಂರವರನ್ನು ಕುರಿತು:

> 'ನಿನ್ನಾತ್ಮರಂಗದಲಿ ಪಾತ್ರವಾಡುತಲಿರುವ
> ಪಾತ್ರಗಳ ವಿವಿಧತೆಗೆ ರಂಗಭೂಮಿಯೆ ಕೊನೆಯೆ ?'

ಎಂದು ಪ್ರಶ್ನಿಸುತ್ತಾರೆ. ಕೈಲಾಸಂರವರ ಅಂತರಂಗವೇ ಒಂದು ನಾಟಕರಂಗ. ಹಾಗಲ್ಲದಿದ್ದರೆ ಅಂತಹ ನಾಟಕಗಳು ಸೃಷ್ಟಿಯಾಗುವುದಾದರೂ ಹೇಗೆ?

ಕವಿಯೇ 'ಭಾವಬಂಧ' ಎನ್ನುವ ಕವಿತೆಯಲ್ಲಿ ಹೇಳಿರುವಂತೆ:

> 'ಹೊಂದಿಕೊಂಡು ಬಂದರಂದ
> ಛಂದಕವಿತೆಗೆ.'

ಎಂಬ ಮಾತನ್ನು ಅವರು ತಮ್ಮ ಕವಿತೆಗಳಲ್ಲಿ ತರಲು ಪ್ರಯತ್ನಿಸಿದ್ದಾರೆ. ಕವಿತೆಯನ್ನು ಅನೇಕ ವಿಕೃತಿಗೀಡುಮಾಡದೆ ಸರಳವಾಗಿ, ಭಾವಕ್ಕೆ ತಕ್ಕಂತೆ ಸೃಜಿಸುವುದು ಉತ್ತಮ. "ಜೀವನಾದ" ದಲ್ಲಿಯ ಕವನಗಳ ಛಂದಸ್ಸು ಹೆಚ್ಚು ನ್ಯೂನತೆ ಇಲ್ಲದೆ ಭಾವಕ್ಕೆ ಹೊಂದಿಕೊಂಡೇ ಬಂದಿದೆ. ಕವಿ ಪದ್ಯಗಳ ಗತಿ ವ್ಯತ್ಯಾಸವಾಗದಂತೆಯೇ ತಮ್ಮ ಹಲವು ಕಲ್ಪನೆಗಳನ್ನು ವಿವರಿಸಿರುವುದು ಸ್ತುತ್ಯ.

'ಶಿವ'

*
* *

ಕನ್ನಡ ಜಾನಪದ ಕಥೆಗಳು—ಅನುವಾದಕರು: ಶ್ರೀ ಕೆ. ಟಿ. ಎಸ್. ಸುಂದರ್; ಪ್ರಕಾಶಕರು: ಶ್ರೀ ಡಿ. ಆರ್. ಕೃಷ್ಣಮೂರ್ತಿ, ಪೀಪಲ್ಸ್ ಬುಕ್ ಹೌಸ್, ಮೈಸೂರು; ಪುಟಗಳು ೧೫೬; ಬೆಲೆ, ರೂ. ೧-೮-೦.

ನಾವೆಲ್ಲಾ ಚಿಕ್ಕ ಮಕ್ಕಳಾಗಿದ್ದಾಗ ಮನೆಯ ಅಂಗಳದ ಹಾಲ್ದಿಂಗಳಲ್ಲಿ ಅಜ್ಜಿ

ಹೇಳಿದ ಕಿನ್ನರ ಕಥೆಗಳನ್ನು ಕೇಳಿ ಎಷ್ಟು ಆಶ್ಚರ್ಯಚಕಿತರಾಗಿಲ್ಲ! ಅಜ್ಜಿ ಹೇಳಿದ ಏಳು ಸಮುದ್ರದಾಚೆ ಒಂದು ಕೀಳು ಸಮುದ್ರ, ಅದನ್ನು ದಾಟಿ ಮರದ ಪೊಟ್ಟರೆಯ ಮೂಲಕ ಹೋಗಿ ಸಿಂಹ ಶಾರ್ದೂಲಗಳನ್ನೂ, ಭೂತ ಪ್ರೇತಾದಿಗಳನ್ನೂ ಕೊಂದು ಅಲ್ಲೆಲ್ಲೋ ಬಚ್ಚಿಟ್ಟಿದ್ದ ಬಿದರೆಯೊಳಗಿನ ಚದುರೆಯನ್ನು ಬಿಡಿಸಿಕೊಂಡು ಬಂದಿಲ್ಲ! ಹಾಗೆಯೇ ಎಷ್ಟು ಮಂದಿ ರಾಜಕುಮಾರರಿಗೆ ರಾಜಕುಮಾರಿಯರನ್ನು ಮದುವೆ ಮಾಡಿಸಿಲ್ಲ! ಇಂತಹ ಅದ್ಭುತ, ಭಯಾನಕ ಹಾಗೂ ಸುಂದರವಾದ ಕಥೆಗಳನ್ನು ಕೇಳಿದಾಗ ನಾವು ವಿಸ್ಮಿತರಾಗುತ್ತೇವೆ. ಈ ರೀತಿಯ ವಿಸ್ಮಯಕಾರಕ ಕಥೆಗಳು ಪ್ರಪಂಚದ ಎಲ್ಲಾ ದೇಶಗಳಲ್ಲೂ ಸಾಧಾರಣವಾಗಿ ಜನಪದದಲ್ಲಿ ಹೆಚ್ಚು ಬಳಕೆ ಯಲ್ಲಿರುತ್ತವೆ. ಅಂತಹ ಜನಪದ ಕಥೆಗಳ ಕನ್ನಡ ಅನುವಾದ ಈ "ರಷ್ಯದ ಜಾನ ಪದ ಕಥೆಗಳು."

ಈ ಪುಸ್ತಕದಲ್ಲಿ ಇಪ್ಪತ್ತೊಂಬತ್ತು ಕಥೆಗಳಿವೆ. ಎಲ್ಲಾ ಕಥೆಗಳಲ್ಲದಿದ್ದರೂ ಕೆಲವಂತೂ ಅತ್ಯುತ್ತಮ ತರಗತಿಯವು. 'ಒಡಕು ಬಾಯಿನ ಹೆಂಡತಿ'; 'ಏಳು ವರ್ಷದ ಹುಡುಗಿ'; 'ಚತುರೆ ವ್ಯಾಸ್ಲಿಲಿಸಾ'; 'ಮುರೋವಿನ ವೀರ ಇಲ್ಯ'; 'ಮಹಾವೀರ ಅಲ್ಯೋಷ ಪೊಪೋವಿ' ಇತ್ಯಾದಿ.

ಜಾನಪದ ಕಥೆಗಳಲ್ಲಿ ಕೇವಲ ಆಶ್ಚರ್ಯಕಾರಕ ಕಥಾನಿರೂಪಣೆ ಅಷ್ಟೇ ಅಲ್ಲ. ಅವು ಯಾವ ನಾಡಿನಲ್ಲಿ ಜನಜನಿತವಾಗಿರುತ್ತವೋ ಆ ದೇಶದ ನಾಗರಿಕತೆ, ಜನ ಜೀವನ ಮುಂತಾದ ಅಂಶಗಳನ್ನು ತಿಳಿಸಲು ಇತಿಹಾಸ ಲೇಖಕರಿಗೂ ಬಹಳಮಟ್ಟಿಗೆ ಸಹಕಾರಿಯಾಗುತ್ತವೆ. ರಷ್ಯದ ಜಾನಪದ ಕಥೆಗಳಲ್ಲಿ ಅಲ್ಲಿಯ ವಾತಾವರಣ, ಅಲ್ಲಿಯ ಜನತೆ ಹಾಗೂ ಅವರ ಜೀವನ ಪರಿಚಯ ನಮಗೆ ಪ್ರತ್ಯಕ್ಷವಾಗಿ ಕಂಡುಬಂದರೆ ಅಲ್ಲಿಯ ಜನತೆಯ ಅಂತರಂಗ ಸೂಕ್ಷ್ಮವಾಗಿ ಹಲವು ವ್ಯಕ್ತಿಗಳ ಬಾಯಿಮಾತಿನ ಮೂಲಕ ಹೊರಪಟ್ಟಿದೆ. ನಿಜಕ್ಕೂ ಈ ಕಥೆಗಳು ರಷ್ಯದ ಜನಪದದ ಮನೋಭಿ ಪ್ರಾಯಕ್ಕೆ ಹಿಡಿದ ಕನ್ನಡಿಗಳೆನ್ನಬೇಕು. ಮಗನೊಬ್ಬನಿಗೆ ತಂದೆ ಆಶೀರ್ವದಿಸು ವಾಗ ಹೇಳುವ "....ನಿನ್ನ ಮಾತೃಭೂಮಿ ರಷ್ಯವನ್ನು ಕಾಪಾಡುವುದಕ್ಕೋಸ್ಕರ ಯುದ್ಧ ಮಾಡು. ಆದರೆ ಬೆಳ್ಳಿಬಂಗಾರಗಳಿಗಾಗಿ ಯುದ್ಧಮಾಡಬೇಡ. ಎಂದಿಗೂ ಜನರನ್ನು ಕೊಂದು ಅವರ ತಂದೆತಾಯಿಯರ ಕಣ್ಣೀರು ಹರಿಸಬೇಡ. ಎಂದಿಗೂ ನೀನು ಮಣ್ಣಿನ ಮಗ ರೈತನೆಂಬುದನ್ನು ಮರೆಯಬೇಡ" ಈ ಮಾತುಗಳಲ್ಲಿ ಆ ಜನತೆಯ ಮಾನವೀಯತೆ ಹಾಗೂ ದೇಶಾಭಿಮಾನಗಳು ವ್ಯಕ್ತವಾಗುತ್ತವೆ. "ರಷ್ಯಾ ವೀರರ ನಾಡು. ರಷ್ಯಾದೇಶದ ವೀರರು ಮನಸ್ಸುಮಾಡಿದರೆ ನಿಮ್ಮ ಕುಲವನ್ನು ಒಂದು ದಿನದಲ್ಲಿ ಪೂರ್ಣವಾಗಿ ನಾಶಮಾಡಿಬಿಡಬಲ್ಲರು" ಎಂಬ ಮಾತುಗಳಲ್ಲಿ ಅವರ ಕಾರ್ಯ

ಪ್ರತಾಪಗಳು ವ್ಯಕ್ತವಾಗುತ್ತವೆ. ಕಳ್ಳನೊಬ್ಬನ ಹೆಂಡತಿಗೆ ಇಲ್ಯವೀರನ "....ನಿಮ್ಮಲ್ಲಿರುವ ಹಣದಿಂದ ಎಷ್ಟುಜನ ರಕ್ತ ಸುರಿಸಿದ್ದಾರೋ, ಎಷ್ಟು ಮಕ್ಕಳು ಇನ್ನೂ ಕಣ್ಣೀರು ಸುರಿಸುತ್ತಿರುವರೋ? ನೀವು ಎಷ್ಟುಜನ ಬಡವರನ್ನು ಕೊಂದು ಈ ಹಣವನ್ನು ಕೂಡಿಟ್ಟಿದ್ದೀರೋ? ಹೀಗೆ ಕೆಟ್ಟದಾರಿಯಿಂದ ಬಂದ ಹಣವನ್ನು ನಾನು ಮುಟ್ಟುವುದಿಲ್ಲ."—ಈ ನುಡಿಗಳಲ್ಲಿ ಅವರ ಧರ್ಮಬುದ್ಧಿ ಹಾಗೂ ಸಮತಾವಾದದ ಅಭಿಪ್ರಾಯಗಳು ಗೋಚರಿಸುತ್ತವೆ.

ಪುಷ್ಕಿನ್ ಮಹಾಕವಿ "ಪ್ರತಿಯೊಂದೂ ಒಂದೊಂದು ಕಾವ್ಯ" ಎಂದಿದ್ದಾನೆ. ಈ ಮಾತು ಅಕ್ಷರಶಃ ನಿಜ ಎಂಬುದು ಕಥೆಗಳನ್ನು ಓದಿದಮೇಲೆ ವ್ಯಕ್ತವಾಗುತ್ತದೆ. ಕನ್ನಡ ಸಾಹಿತ್ಯಪ್ರಪಂಚಕ್ಕೆ ಇಂತಹ ಹಲವು ದೇಶದ ಹಲವು ರೀತಿಯ ಜನಪದ ಕಥೆಗಳೂ, ಜನಪದ ಗೀತೆಗಳೂ ಇನ್ನೂ ಪರಿಚಯವಾಗುವ ಅಗತ್ಯವಿದೆ.

*
* *

"ದುಬ್ರೋವ್‌ಸ್ಕಿ" (ಕಾದಂಬರಿ)—ಮೂಲಲೇಖಕರು : ಎ. ಎಸ್. ಪುಷ್ಕಿನ್ ; ಕನ್ನಡಿಸಿದವರು : ಶ್ರೀ ಕೆ. ಎಲ್. ಗೋಪಾಲಕೃಷ್ಣರಾವ್ ; ಪ್ರಕಾಶಕರು : ಶ್ರೀ ಡಿ. ಆರ್. ಕೃಷ್ಣಮೂರ್ತಿ, ಪೀಪಲ್ಸ್ ಬುಕ್ ಹೌಸ್, ಮೈಸೂರು ; ಪುಟಗಳು ೧೪೪ ; ಬೆಲೆ, ಒಂದು ರೂಪಾಯಿ.

ಖಂಡಿತವಾದಿ ಎಂದೆಂದಿಗೂ ಲೋಕವಿರೋಧಿ ತಾನೆ. ಸತ್ಯದಿಂದ, ಧರ್ಮದಿಂದ, ನ್ಯಾಯದಿಂದ ಬಾಳು ನಡೆಸುವವನಿಗೆ ಸುಖ ಸಿಕ್ಕುವುದು ಸ್ವಲ್ಪ ಕಷ್ಟ. ಯಾವ ವಿಧದಿಂದಲಾದರೂ ಅವನು ತೊಂದರೆಗೆ ಗುರಿಯಾಗಿಯೇ ಆಗುತ್ತಾನೆ. ಈ ಅಭಿಪ್ರಾಯಗಳಿಗೆ ಉತ್ತಮ ನಿದರ್ಶನ ಈ "ದುಬ್ರೋವ್‌ಸ್ಕಿ."

ಆಂದ್ರಿ ಗಾವ್ರಿಲೋವಿಷ್ ದುಬ್ರೋವ್‌ಸ್ಕಿ ಆತ್ಮಗೌರವವನ್ನು ನೀಗಿಕೊಂಡು ಎಂದಿಗೂ ಬಾಳಿದವನಲ್ಲ. ಇವನ ಗೌರವ ಪ್ರತಿಷ್ಠೆಗಳಿಗೆ ಕೊಡಲಿ ಪೆಟ್ಟು ಹಾಕಿದವನು ಕಿರಿಲ್ಲಾ ಪೆಟ್ರೋವಿಷ್ ಟ್ರಾಯಿಕ್ಯುರೋವ್ ಎಂಬ ಮತ್ತೊಬ್ಬ ಶ್ರೀಮಂತ. ಈತನು ಆಂದ್ರಿಯ ಸಮಸ್ತ ಆಸ್ತಿಪಾಸ್ತಿಗಳನ್ನು ಮೋಸದಿಂದ ಹೊಡೆದುಕೊಂಡು ಆಂದ್ರಿಯ ಮೃತ್ಯುವಿಗೆ ಕಾರಣನಾಗುತ್ತಾನೆ. ತಂದೆಯ ದುರ್ಮರಣಕ್ಕೆ ಕಾರಣನಾದವನ ಮೇಲೆ ಸೇಡು ತೀರಿಸಿಕೊಳ್ಳಲು ವ್ಲಾಡಿಮಿರ್ ದುಬ್ರೋವ್‌ಸ್ಕಿ ಮಾಡಿದ ಸತತ ಪ್ರಯತ್ನದ ಪ್ರತಿಪಾದನೆಯೇ ಈ ಕಿರುಕಾದಂಬರಿ.

ವ್ಲಾಡಿಮಿರ್ ಇಲ್ಲಿ ಕಥಾನಾಯಕನಾಗಿ, ನಾಯಕರತ್ನವಾಗಿ ಗೋಚರಿಸಿದ್ದಾನೆ. ಈತ ಮೊದಮೊದಲು ಸ್ವಲ್ಪ ಪುಂಡುಪೋಕರಿಯಾಗಿ ಅಪ್ಪ ಕಳುಹಿಸಿದ ಹಣದಲ್ಲಿ ದುಂದುಮಾಡುತ್ತಾ ಸಿಕ್ಕಾಬಟ್ಟೆ ಕುಡಿದು ಮಿಲಿಟರಿಯಲ್ಲಿದ್ದ ವ್ಯಕ್ತಿ. ಆದರೆ ತಂದೆ

ಮರಣದೆಸೆಯಲ್ಲಿರುವುದನ್ನು ತಿಳಿದು ಹಳ್ಳಿಗೆ ಬಂದು ಅಲ್ಲಿಯ ದುಃಸ್ಥಿತಿಯನ್ನು ಕಂಡಾಗ ಸಂಪೂರ್ಣವಾಗಿ ಬದಲಿಸುತ್ತಾನೆ. ಈ ಪಾತ್ರದಲ್ಲಿ ಇದಕ್ಕಿಂತ ಹೆಚ್ಚು ಬದಲಾವಣೆಯನ್ನಾಗಲೀ, ಬೆಳವಣಿಗೆಯನ್ನಾಗಲೀ ಕಾಣುವುದಿಲ್ಲ. ಕಾದಂಬರಿಯಲ್ಲಿ ಪ್ರತ್ಯಕ್ಷನಾದಾಗಲೇ ದುಬ್ರೋವ್‌ಸ್ಕಿ ಸಭ್ಯ ಹಾಗೂ ಸಂಭಾವಿತನಾಗಿ ಕಾಣುತ್ತಾನೆ. ತನ್ನ ತಂದೆಯ ಮರಣಾನಂತರ ತನ್ನ ತಾಯಿಯ ಕೊಠಡಿಗೆ ಹೋಗಿ ಆಕೆಯ ಫೋಟೋ ನೋಡಿದಾಗ ವ್ಲಾಡಿಮಿರ್ ಮಗುವಿನಂತೆ ಅಳುತ್ತಾನೆ. ತಂದೆಯಷ್ಟೇ ಸ್ವಾಭಿಮಾನದ ಸಿಂಧುವಾದ ಇವನು ತಾಯಿ ತನ್ನನ್ನು ಹೆತ್ತು ಹೊತ್ತು ಸಾಕಿ, ಬೆಳೆದ ಮನೆ ಪಾಪಿಯೊಬ್ಬನ ಜನಾನವಾಗಬಾರದೆಂದು ಇಚ್ಛಿಸಿ ಅದಕ್ಕೆಲ್ಲಾ ಬೆಂಕಿ ಇಡಿಸುತ್ತಾನೆ. ಇಲ್ಲಿ ದುಬ್ರೋವ್‌ಸ್ಕಿಯ ಅಂತರಂಗದ ಹೃದಯಜ್ವಾಲೆ ಬಹಿರಂಗದಲ್ಲಿ ಮೂಡಿಬರುತ್ತದೆ; ಅಂತೆಯೇ ಪೆಟ್ರೋವಿಚ್‌ನ ಮೇಲೆ ಸೇಡು ಬೆಳೆಯುತ್ತದೆ. ಅದಕ್ಕಾಗಿ ವೇಷ ಮರೆಸಿಕೊಂಡು ಫ್ರೆಂಚ್ ಶಿಕ್ಷಕನಂತೆ ತನ್ನ ಶತ್ರುವಾದ ಪೆಟ್ರೋವಿಚ್ ಬಳಿಗೆ ಹೋಗಿ ಅವನ ಮಗಳಿಗೆ ಪಾಠ ಹೇಳಿಕೊಡುತ್ತಾನೆ; ಅವಳ ಪ್ರೀತಿಗೆ ಪಾತ್ರನಾಗುತ್ತಾನೆ; ಅಷ್ಟೇ ಅಲ್ಲ ಪೆಟ್ರೋವಿಚ್‌ಗೂ ಅತ್ಯಂತ ಆಪ್ತನಾಗುತ್ತಾನೆ. ಇಲ್ಲಿಯೂ ಈ ಪಾತ್ರ ಬಹಳ ಗಾಂಭೀರ್ಯದಿಂದ ಮುಂದುವರಿಯುತ್ತದೆ. ತನ್ನ ನೈಜತೆಯನ್ನು ಕಿರಿಲ್ಲೋವ್ನಾಳಿಗೆ ತಿಳಿಸಿ ಅವಳ ಮನೋಭಿಷ್ಟವನ್ನು ತಿಳಿಸಲು ಅವಳಿಗೇ ಸ್ವಾತಂತ್ರ್ಯ ಕೊಡುತ್ತಾನೆ. ಕಡೆಗೆ ಪರಿಸ್ಥಿತಿ ವಿಷಮಿಸಿ ತಂದೆಯ ಲೋಭಕ್ಕೆ ತುತ್ತಾದ ಕಿರಿಲ್ಲೋವ್ನಾ ಬೇರೊಬ್ಬ ಐವತ್ತು ವರ್ಷದ ಮುದಿಯನನ್ನೂ ಲಗ್ನವಾಗಬೇಕಾಗುತ್ತದೆ. ಈ ವಿಚಾರವನ್ನು ತಿಳಿದಮೇಲೆ ದುಬ್ರೋವ್‌ಸ್ಕಿ ಅವಳನ್ನು ಬಲವಂತಪಡಿಸಲಿಲ್ಲ. ತನ್ನ ಬಾಳಿನಲ್ಲಿ ವಿಷ ಬೆರೆಸಿದ ಆ ಮುದುಕನಿಗೆ ಸ್ವಲ್ಪವೂ ತೊಂದರೆ ಕೊಡದೆ ತನ್ನ ಸ್ನೇಹಿತರನ್ನು ಕರೆದುಕೊಂಡು ಹೊರಟುಹೋಗುತ್ತಾನೆ. ಮತ್ತೆಲ್ಲೋ ಅರಣ್ಯಮಧ್ಯದಲ್ಲಿ ಬೀಡುಬಿಟ್ಟಿದ್ದ ದುಬ್ರೋವ್‌ಸ್ಕಿ ಸರ್ಕಾರೀ ಅಧಿಕಾರಿಗಳ ಅವಾಂತರವನ್ನು ತಡೆಯಲಾರದೆ ದೇಶಾಂತರ ಹೋಗಬೇಕಾಗಿ ಬರುತ್ತದೆ. ಹೀಗೆ ಕಾದಂಬರಿಯ ಉದ್ದಕ್ಕೂ ತುಂಬುಹೊಳೆಯಾಗಿ ಹರಿದುಬಂದಿರುವ ಪಾತ್ರ ಇದು. ಇದರ ಜೊತೆಗೆ ಇನ್ನಿತರ ಪಾತ್ರಗಳು ಹಾಸುಹೊಕ್ಕಾಗಿ ಬಂದಿವೆ. ಪೆಟ್ರೋವಿಚ್‌ನ ಪಾತ್ರವೂ ಸಾಕಷ್ಟು ಚೆನ್ನಾಗಿ ನಿರೂಪಿತವಾಗಿದೆ. ಮರಯ್ಯಾ ಕಿರಿಲ್ಲೋವ್ನಾ ಮತ್ತು ದಾದಿ ಯೆಗೊರೋವ್ನಾ ಆದರ್ಶ ಮಹಿಳಾರತ್ನಗಳಾಗಿ ಬೆಳಗಿವೆ. ರಷ್ಯದ ಗ್ರಾಮ ಜೀವನ ಕಥೆಗೆ ಮೆರಗುಕೊಟ್ಟು ಶ್ರೀ ನಿರಂಜನರು ಮುನ್ನುಡಿಯಲ್ಲಿ ಹೇಳಿರುವಂತೆ, ಇದು "ಸುಂದರ ಕಾವ್ಯದಂತಿರುವ ಹೃದಯಸ್ಪರ್ಶಿಯಾದ ಕಾದಂಬರಿಯಾಗಿದೆ."

ಇನ್ನು ಭಾಷಾಂತರದ ವಿಚಾರ. ಶ್ರೀ ಗೋಪಾಲಕೃಷ್ಣರಾಯರು ಇದನ್ನು ಭಾಷಾಂತರಿಸಿಲ್ಲ ; ಕನ್ನಡಿಸಿದ್ದಾರೆ ! ಸಾಧಾರಣವಾಗಿ ಭಾಷಾಂತರಕಾರರು ಕೊಲೆಗಡುಕರೆಂಬ ಮಾತು ಇಲ್ಲಿ ಅನ್ವಯಿಸುವುದಿಲ್ಲ. ಗೋಪಾಲಕೃಷ್ಣರಾಯರಲ್ಲಿ ಇಂಗ್ಲೀಷು ಕನ್ನಡ ಎರಡು ಭಾಷೆಗಳಲ್ಲೂ ಸಾಕಷ್ಟು ಪಾಂಡಿತ್ಯವಿದೆ. ಭಾಷಾಂತರ ಕಾರ್ಯದಲ್ಲಿ ಅವರದು ಸಿದ್ಧಹಸ್ತ; ಹಾಗೂ ಅವರಲ್ಲಿ ಸ್ವಭಾವಜನ್ಯವಾದ ಪ್ರತಿಭೆ ಗೋಚರವಾಗುತ್ತದೆ. ಕನ್ನಡ ದುಬ್ರೋವ್‌ಸ್ಕಿಯನ್ನು ಓದುತ್ತಿದ್ದರೆ ಅಲ್ಲಿಯ ಹೆಸರುಗಳು ಮಾತ್ರ ಇದು ಭಾಷಾಂತರ ಎಂಬ ಭಾವನೆಯನ್ನು ತರುತ್ತದೆಯೇ ವಿನಹ ಎಲ್ಲೂ ಕಾದಂಬರಿಯಲ್ಲಿ ಓದುಗನಿಗೆ ಇದು ಭಾಷಾಂತರ ಎಂಬ ಕಲ್ಪನೆ ಬರುವುದಿಲ್ಲ. ಒಟ್ಟಿನಲ್ಲಿ ಇಂತಹ ಸುಂದರವಾದ ರಷ್ಯದೇಶದ ಶ್ರೇಷ್ಠ ಸಾಹಿತಿ ಪುಷ್ಕಿನ್ನನನ್ನು ಕನ್ನಡಿಗರಿಗೆ ಆತನ ಕೃತಿಯ ಮೂಲಕ ಪರಿಚಯಮಾಡಿಕೊಟ್ಟ ಶ್ರೀ ಗೋಪಾಲಕೃಷ್ಣ ರಾಯರು ರಷ್ಯಾದೇಶದ ಇನ್ನೂ ಅನೇಕ ಸಾಹಿತ್ಯ ಕೃತಿಗಳನ್ನು ಕನ್ನಡಕ್ಕೆ ತರಲಿ, ಇಂತಹ ಉತ್ತಮ ಬರಹಗಾರರಿಗೆ ಪ್ರಕಾಶಕರೂ ವಿಶಾಲ ಮನೋಭಾವನೆಯಿಂದ, ಉದಾರಬುದ್ಧಿಯಿಂದ ನೆರವು ನೀಡಲಿ ಎಂದು ಹೃತ್ಪೂರ್ವಕವಾಗಿ ಕೋರುತ್ತೇವೆ.

ಸಾ. ಶಿ. ಮುರಳಯ್ಯ

*
* *

**ಭೂಮಿ ಮತ್ತು ಇತರ ಗ್ರಹಗಳ ಹುಟ್ಟು**—ಲೇಖಕ : ಬೋರಿಸ್ ಲೆವಿನ್ ; ಅನುವಾದಕರು : ಶ್ರೀ ಬಿ. ವಿ. ಸುಬ್ಬರಾಯಪ್ಪ ; ಪ್ರಕಾಶಕರು : ಪೀಪಲ್ಸ್ ಬುಕ್ ಹೌಸ್, ಮೈಸೂರು.

ರಷ್ಯಾದೇಶದಲ್ಲಿ ೧೯೧೭ರ ನೇ ಮಹಾಕ್ರಾಂತಿಯಾದನಂತರ ಆ ದೇಶದ ಆಡಳಿತಗಾರರು ವಿಜ್ಞಾನಕ್ಕೆ ವಿಶೇಷ ಪ್ರೋತ್ಸಾಹ ಮತ್ತು ಮನ್ನಣೆ ಕೊಟ್ಟುದರ ಪರಿಣಾಮವಾಗಿ ಆ ದೇಶದಲ್ಲಿ ವಿಜ್ಞಾನವು ಸರ್ವತೋಮುಖವಾಗಿ ಬೆಳೆದು ಇಂದು ಪ್ರಪಂಚದ ವಿಜ್ಞಾನಕ್ಷೇತ್ರದಲ್ಲಿ ಗಣ್ಯಸ್ಥಾನವನ್ನು ಗಳಿಸಿದೆ. ಅಣುಶಕ್ತಿಗೆ ಸಂಬಂಧಪಟ್ಟ ವಿಜ್ಞಾನ, ರಾಕೆಟ್ ಯಂತ್ರಗಳ ರಚನೆ, ಮತ್ತು ಕೃತಕ ಉಪಗ್ರಹಗಳನ್ನು ಹಾರಿಸುವುದು—ಈ ಕ್ಷೇತ್ರಗಳಲ್ಲಿಯೇ ಅಲ್ಲದೆ ಶುದ್ಧ ವಿಜ್ಞಾನಭಾಗದಲ್ಲಿಯೂ ಅಲ್ಲಿಯ ವಿಜ್ಞಾನಿಗಳು ಅನೇಕ ಪರಿಣಾಮಕಾರಿ ಸಂಶೋಧನೆಗಳನ್ನು ನಡೆಸಿರುತ್ತಾರೆ. ವಿಶ್ವದ ಸ್ವರೂಪ, ಅದರ ರಚನೆ ಮತ್ತು ಉತ್ಪತ್ತಿ, ಅಂತೆಯೇ ಸೌರವ್ಯೂಹದ ಸ್ವರೂಪ, ರಚನೆ, ಗ್ರಹ ಮತ್ತು ಉಪಗ್ರಹಗಳ, ಉತ್ಪತ್ತಿ—ಇವುಗಳ ಸಂಬಂಧವಾಗಿಯೂ ಸೋವಿಯಟ್ ವಿಜ್ಞಾನಿಗಳು ಹೊಸ ಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾರೆ. ಷ್ಮಿಡ್ಟ್ ಎಂಬ ಸೋವಿಯಟ್ ಖಗೋಳಶಾಸ್ತ್ರಜ್ಞನು ಗ್ರಹ ಮತ್ತು ಉಪಗ್ರಹಗಳ

ಉತ್ಪತ್ತಿಗೆ ಸಂಬಂಧಪಟ್ಟಂತೆ ಪ್ರತಿಪಾದಿಸಿರುವ ಸಿದ್ಧಾಂತವೇ ಈ ಪುಸ್ತಕದ ವಸ್ತು ವಿಷಯ.

ಸೂರ್ಯ ಮತ್ತು ಗ್ರಹಗಳು ಅನೇಕ ಸಾಮಾನ್ಯ ಭೌತ ಮತ್ತು ರಾಸಾಯನಿಕ ಲಕ್ಷಣಗಳನ್ನು ಹೊಂದಿರುವ ಕಾರಣ ಇವೆಲ್ಲವೂ ಒಂದೇ ಮೂಲದಿಂದಲೂ ಮತ್ತು ಒಂದೇ ಕ್ರಿಯೆಯಿಂದಲೂ ಉತ್ಪತ್ತಿಯಾಗಿರಬೇಕೆಂಬ ನಿರ್ಧಾರ ಬಹಳ ಹಿಂದಿನಿಂದಲೂ ವಿಜ್ಞಾನಿಗಳಲ್ಲಿ ಮೂಡಿತ್ತು. ಆದರೆ ಇದನ್ನು ಮೊಟ್ಟಮೊದಲು ನಿರ್ದಿಷ್ಟವಾದ ಸಿದ್ಧಾಂತರೂಪದಲ್ಲಿ ಪ್ರತಿಪಾದಿಸಿದವನೆಂದರೆ ಫ್ರೆಂಚ್ ದೇಶದ ಗಣಿತಶಾಸ್ತ್ರಜ್ಞ ಲೆಪ್ಲಾಸ್. "ಈ ವಿಜ್ಞಾನಿ ೧೭೯೬ ನೇ ವರ್ಷದಲ್ಲಿ ಸೂರ್ಯ ಮತ್ತು ಗ್ರಹಗಳು ಅಪಾರವಾದ ಜ್ಯೋತಿರ್ಮೇಘದಿಂದ ರೂಪತಾಳಿದವೆಂದು ಕಲ್ಪಿಸಿಕೊಂಡನು." ಆದರೆ ಸೌರವ್ಯೂಹಕ್ಕೆ ಸಂಬಂಧಪಟ್ಟ ಅನೇಕ ವಿಷಯಗಳನ್ನು ಸಮರ್ಪಕವಾಗಿ ವಿವರಿಸಲು ಈ ಸಿದ್ಧಾಂತದಿಂದ ಸಾಧ್ಯವಾಗಲಿಲ್ಲ. ಇತ್ತೀಚಿನ ಸಿದ್ಧಾಂತಗಳಲ್ಲಿ ಬಹಳ ಹೆಸರುವಾಸಿಯಾದ ಸಿದ್ಧಾಂತವೆಂದರೆ ಜೀನ್ಸ್ ಎಂಬ ವಿಜ್ಞಾನಿಯ ಸಿದ್ಧಾಂತ. ಅನೇಕಾನೇಕ ಲಕ್ಷ ವರ್ಷಗಳ ಹಿಂದೆ ಯಾವುದೋ ಒಂದು ಬೃಹತ್ ನಕ್ಷತ್ರವು ಸೂರ್ಯನ ಸಮೀಪದಲ್ಲಿ ಹಾದುಹೋದಾಗ, ಅದರ ಆಕರ್ಷಣಶಕ್ತಿಯ ಪರಿಣಾಮವಾಗಿ ಸೂರ್ಯನ ಸ್ವಲ್ಪಭಾಗ ಬೇರ್ಪಟ್ಟು ಕಾಲಕ್ರಮೇಣ ಅದರ ಉಷ್ಣತೆ ಕಡಿಮೆಯಾಗುತ್ತಾ ಬಂದು ಘನಾವಸ್ಥೆಯನ್ನು ತಾಳುವ ಕಾಲದಲ್ಲಿ ಅದು ಛಿದ್ರ ಛಿದ್ರವಾಗಿ ಒಡೆದು ಗ್ರಹಗಳಾಯಿತೆಂಬುದೇ ಜೀನ್ಸನ ವಾದ. ಈ ಸಿದ್ಧಾಂತವೂ ದೋಷಯುಕ್ತವಾಗಿದೆಯೆಂಬ ಅಂಶ ಈಗ್ಗೆ ಸುಮಾರು ೨೦ ವರ್ಷಗಳ ಹಿಂದೆ ವ್ಯಕ್ತವಾಯಿತು.

ಸೋವಿಯಟ್ ವಿಜ್ಞಾನಿ ತನ್ನ ಸಿದ್ಧಾಂತವನ್ನು ೧೯೪೩ ರಲ್ಲಿ ಪ್ರಚುರಪಡಿಸಿದನು. ಭೂಮಿ ಮತ್ತು ಗ್ರಹಗಳಿಗೆ ಜನ್ಮವಿತ್ತ ವ್ಯಾಪಕವಸ್ತು ಒಂದು ಅನಿಲ—ಧೂಳು ಮೇಘ ರೂಪವಾಗಿದ್ದಿರಬೇಕು. ಮತ್ತು ಈ ಮೇಘದ ಅಸಂಖ್ಯಾತ ತಂಪು ಕಣಗಳ ಸೇರುವಿಕೆಯಿಂದಲೇ ಗ್ರಹಗಳು, ಉತ್ಪತ್ತಿಯಾದವೆಂಬುದೇ ಷ್ಮಿಡ್ಟ್‌ನ ಮೂಲ ಸಿದ್ಧಾಂತ. ಗುರುತ್ವಾಕರ್ಷಣ ಕ್ರಿಯೆ ಮತ್ತು ಚಲನಶಕ್ತಿ ಉಷ್ಣಶಕ್ತಿಯಾಗಿ ಪರಿವರ್ತನವಾಗುವ ಕ್ರಿಯೆ—ಈ ಎರಡು ಪ್ರಧಾನಕ್ರಿಯೆಗಳಿಂದ ಆದಿ ಅನಿಲ—ಧೂಳು ಮೇಘವು ವಿಕಾಸಕೊಂಡು ಕಾಲಕ್ರಮದಲ್ಲಿ ಭೂಮಿ ಮತ್ತು ಇತರ ಗ್ರಹಗಳು ಮತ್ತು ಅವುಗಳ ಉಪಗ್ರಹಗಳು ಜನ್ಮತಾಳಿದವು. ಈ ದೃಷ್ಟಿಯಿಂದಲೇ ಗ್ರಹ ಮತ್ತು ಉಪಗ್ರಹಗಳ ಚಲನೆಯಲ್ಲಿ ಕಂಡುಬರುವ ನಿಯಮಗಳನ್ನೂ ಮತ್ತು ಗ್ರಹಗಳ ಭೌತ ಹಾಗೂ ರಾಸಾಯನಿಕ ರಚನೆಗಳನ್ನೂ ವಿಶದೀಕರಿಸಲಾಗಿದೆ. ಅಂತೆಯೇ ಕ್ಷುದ್ರಗ್ರಹಗಳು, ಉಲ್ಕೆಗಳು ಮತ್ತು ಧೂಮಕೇತುಗಳು—ಇವುಗಳ ಉತ್ಪತ್ತಿ,

ರಚನೆ ಮತ್ತು ಚಲನೆಗಳನ್ನು ಇದೇ ಸಿದ್ಧಾಂತದ ಆಧಾರದಮೇಲೆ ವಿವರಿಸಲಾಗಿದೆ; ಕಡೆಯದಾಗಿ ಈ ಸಿದ್ಧಾಂತದ ರೀತ್ಯಾ, ಭೂಮಿಯ ಒಳವಿನ್ಯಾಸ ಮತ್ತು ಅದರ ವಯಸ್ಸು—ಈ ಸಮಸ್ಯೆಗಳನ್ನು ಚರ್ಚಿಸಲಾಗಿದೆ.

ವಿಶ್ವದ ರಚನೆ, ವಿಶ್ವದಲ್ಲಿ ಅಡಕವಾಗಿರುವ ಅನೇಕ ಖಗೋಳೀಯ ವಸ್ತುಗಳ ಉತ್ಪತ್ತಿ, ಸೌರವ್ಯೂಹದ ಉತ್ಪತ್ತಿ, ಇತ್ಯಾದಿ ಪ್ರಶ್ನೆಗಳಿಗೆ ಸಮಂಜಸವಾದ ಉತ್ತರ ಒದಗಿಸುವುದು ಸುಲಭ ಕೆಲಸವಲ್ಲ. ಮೇಲಿನ ಹೊಸ ಸಿದ್ಧಾಂತವು ಗ್ರಹಗಳ ಹುಟ್ಟಿನ ವಿಷಯವನ್ನು ಎಷ್ಟರಮಟ್ಟಿಗೆ ಸಮರ್ಪಕವಾಗಿ ವಿವರಿಸಿದೆ ಎಂಬುದನ್ನು ಹೇಳಲು ಇನ್ನೂ ಕೆಲಕಾಲ ಬೇಕು. ಆದರೆ ಹಳೆಯ ಸಿದ್ಧಾಂತಗಳು ವಿವರಿಸಲಾಗದ ಕೆಲವಂಶಗಳನ್ನು ಈ ಸಿದ್ಧಾಂತ ವಿವರಿಸುತ್ತದೆ.

ಪುಸ್ತಕದ ಒಂದೆರಡು ಕಡೆ ಸೋವಿಯಟ್ ವಿಜ್ಞಾನಿಗಳ ಸಂಕುಚಿತ ಮನೋಭಾವದ ಚಿಹ್ನೆ ಕಂಡುಬರುತ್ತದೆ. ಉದಾಹರಣೆ: "ಬಂಡವಾಳಶಾಹಿ ರಾಜ್ಯಗಳಲ್ಲಿ ಆದರ್ಶತೆಗೆ ಸಂಬಂಧಿಸಿದಂತೆ ಪ್ರಪಂಚದ ವಿಷಯವಾಗಿ ಅಭಿಪ್ರಾಯವಿದೆ. ಇದೇ ಅಲ್ಲಿಯ ವಿಶ್ವಸೃಷ್ಟಿವಾದದ ಬೆಳವಣಿಗೆಗೆ ಅಡಚಣೆ" (ಪುಟ. ೩೦). ಪ್ರಾಯಶಃ ವಿಜ್ಞಾನದ ಸಿದ್ಧಾಂತಗಳನ್ನೆಲ್ಲಾ ತಾರ್ಕಿಕ ದ್ರವ್ಯವತಾ ವಾದಕ್ಕೆ (Dialectical Materialism) ಅನುಗುಣವಾದ ರೀತಿಯಲ್ಲಿ ಪ್ರತಿಪಾದಿಸಬೇಕೆಂಬ ಪ್ರಯತ್ನವೇ ಈ ವಿಧವಾದ ಸಂಕುಚಿತ ಮನೋಭಾವಕ್ಕೆ ಕಾರಣವಿರಬೇಕು.

ಪುಸ್ತಕ ಅನೇಕ ಚಿತ್ರಗಳಿಂದೊಡಗೂಡಿ ಅಂದವಾಗಿ ಅಚ್ಚಾಗಿದೆ. ಈಗಾಗಲೇ ಕನ್ನಡದಲ್ಲಿ ಅನೇಕ ಲೇಖನಗಳನ್ನೂ ಪುಸ್ತಕಗಳನ್ನೂ ಬರೆದು ನುರಿತಿರುವ ಶ್ರೀ ಸುಬ್ಬರಾಯಪ್ಪನವರು ಮೂಲಪುಸ್ತಕದಲ್ಲಿರುವ ಕ್ಲಿಷ್ಟ ವಿಷಯಗಳನ್ನು ತಮ್ಮ ಸುಲಭ ಶೈಲಿಯಲ್ಲಿ ಆದಷ್ಟು ಸ್ಪಷ್ಟವಾಗಿ ವಿವರಿಸಲು ಪ್ರಯತ್ನಿಸಿದ್ದಾರೆ. ಆದರೆ ಪುಸ್ತಕದಲ್ಲಿ ಅಡಕವಾಗಿರುವ ವಿಷಯಗಳನ್ನು ಗ್ರಹಿಸಲು ಖಗೋಳಶಾಸ್ತ್ರದ ಪರಿಚಯ ಸ್ವಲ್ಪ ಇರುವವರಿಂದ ಮಾತ್ರ ಸಾಧ್ಯ. ಇದನ್ನು ಸಾಮಾನ್ಯಜನ ಓದಿ ಗ್ರಹಿಸುವುದು ಕಷ್ಟ. ಇಂತಹ ಪುಸ್ತಕಗಳ ಜತೆಗೆ, ವಿಜ್ಞಾನದ ಬಗ್ಗೆ ಸಮಗ್ರ ಮತ್ತು ಸ್ಥೂಲವಾದ ತಿಳುವಳಿಕೆಯನ್ನುಂಟುಮಾಡಿ ಜನಸಾಮಾನ್ಯದಲ್ಲಿ ವೈಜ್ಞಾನಿಕ ಮನೋಭಾವ ಬೆಳೆಯಲು ಸಾಧನವಾಗುವ ಪುಸ್ತಕಗಳನ್ನು ಸುಬ್ಬರಾಯಪ್ಪನವರು ಬರೆದರೆ ಅವರ ಶ್ರಮ ಹೆಚ್ಚು ಫಲಕಾರಿಯಾಗುವುದು.

ಕೆ. ಶ್ರೀನಿವಾಸನ್

# ಸಂಪಾದಕೀಯ

## 'ಪ್ರಬುದ್ಧಕರ್ಣಾಟಕ'ದ ಲೇಖಕ ಮಹಾಶಯರಲ್ಲಿ ವಿಜ್ಞಾಪನೆ

ತಮ್ಮ ಅಮೂಲ್ಯವಾದ ಲೇಖನ ಸಂಪತ್ತಿನಿಂದ ನಮ್ಮ ಪತ್ರಿಕೆಯ ಘನತೆ ಗೌರವಗಳನ್ನು ಪೋಷಿಸಿಕೊಂಡು ಬಂದಿರುವ ಮಾನ್ಯ ಲೇಖಕ ಲೇಖಕಿಯರಿಗೆ ಪ್ರಬುದ್ಧ ಕರ್ಣಾಟಕದ ಸಂಪಾದಕ ಮಂಡಲಿಯು ಅತ್ಯಂತ ಕೃತಜ್ಞವಾಗಿದೆ. ಮುಂದೆ ಅವರಿಂದ ಇನ್ನೂ ಹೆಚ್ಚಿನ ರೀತಿಯ ನೆರವನ್ನು ಬಯಸುತ್ತದೆ.

ಪ್ರಬುದ್ಧ ಕರ್ಣಾಟಕ ಮೂರು ತಿಂಗಳಿಗೊಮ್ಮೆ ಹೊರಡುವ ಪತ್ರಿಕೆ. ಅದಕ್ಕೆಂದು ಬರುವ ಎಲ್ಲ ಲೇಖನಗಳನ್ನೂ ಒಮ್ಮೆಗೇ ಪ್ರಕಟಿಸುವುದು ಸಾಧ್ಯವಿಲ್ಲವಾಗಿ ಕೆಲವು ಲೇಖನಗಳ ಪ್ರಕಟಣೆ ತಡವಾಗುವುದು ಅನಿವಾರ್ಯ. ಆದುದರಿಂದ ಪ್ರಬುದ್ಧ ಕರ್ಣಾಟಕಕ್ಕೆ ಲೇಖನಗಳನ್ನು ಕಳುಹಿಸುವವರು ಈ ಕೆಲವು ಸೂಚನೆಗಳನ್ನು ದಯ ವಿಟ್ಟು ಗ್ರಹಿಸಬೇಕಾಗಿ ವಿನಂತಿ :

೧. ಲೇಖನಗಳನ್ನು ಕಳುಹಿಸುವವರು ತಮ್ಮ ಬಳಿ ಒಂದು ಪ್ರತಿಯನ್ನಿಟ್ಟು ಕೊಳ್ಳುವುದು ಉತ್ತಮ. ಯಾವುದೇ ಕಾರಣಕ್ಕಾಗಿಯಾದರೂ ಲೇಖನಗಳನ್ನು ಹಿಂದಿರುಗಿಸುವುದು ಸಾಧ್ಯವಿಲ್ಲ.

೨. ಲೇಖನ ಸ್ವೀಕೃತವೇ ಅಸ್ವೀಕೃತವೇ ಎಂಬುದನ್ನು ತಿಳಿಯಬಯಸುವವರು ಐದು ನಯಾಪೈಸೆಯ ಅಂಚೆಚೀಟಿಯನ್ನು ತಮ್ಮ ವಿಳಾಸದೊಂದಿಗೆ ಕಳುಹಿಸಬೇಕು.

೩. ಲೇಖಕರ ಬರವಣಿಗೆಯ ಅಸ್ಪಷ್ಟತೆಯಿಂದಾಗಿ ಮುದ್ರಣಕಾರ್ಯ ತಡ ವಾಗುತ್ತಿದೆ. ಆದುದರಿಂದ ಲೇಖಕರು ದಯವಿಟ್ಟು ಕಾಗದದ ಒಂದೇಕಡೆ ಸ್ಪಷ್ಟವಾಗಿ ಬರೆದು ಕಳುಹಿಸಬೇಕು.

ಎಲ್ಲ ಲೇಖಕರೂ ದಯವಿಟ್ಟು ಈ ಸೂಚನೆಗಳನ್ನು ಗ್ರಹಿಸಿ ನಮ್ಮೊಡನೆ ಸಹಕರಿಸ ಬೇಕಾಗಿ ಕೋರುತ್ತೇವೆ.

# ಸಾದರ ಸ್ವೀಕಾರ

೧. ವಿಜಯದಶಮಿ (ಕವನ ಸಂಗ್ರಹ)—ಶ್ರೀ ಜಿ. ವರದರಾಜರಾವ್, ಎಂ. ಎ.; ಪ್ರಕಾಶಕರು: ಉಷಾ ಸಾಹಿತ್ಯಮಾಲೆ, ಮೈಸೂರು; ಪುಟಗಳು ೮೨; ಬೆಲೆ, ರೂ. ೧-೦-೦.

೨. **ಭೂಮಿ ಮತ್ತು ಇತರ ಗ್ರಹಗಳ ಹುಟ್ಟು**—ಮೂಲ: ಬೋರಿಸ್ ಲೆವಿನ್; ಅನುವಾದ: ಶ್ರೀ ಬಿ. ವಿ. ಸುಬ್ಬರಾಯಪ್ಪ; ಪ್ರಕಾಶಕರು: ಪೀಪಲ್ಸ್ ಬುಕ್ ಹೌಸ್ ಮೈಸೂರು; ಪುಟಗಳು ೧೦೫; ಬೆಲೆ, ರೂ. ೧-೮-೦.

೩. **ಮೇಘ-ಸಂದೇಶ**—ಅನುವಾದಕರು: ಶ್ರೀ ಕೆ. ನರಸಿಂಹಶಾಸ್ತ್ರಿ; ಪ್ರಕಾಶಕರು: ಉಷಾ ಸಾಹಿತ್ಯಮಾಲೆ, ಮೈಸೂರು; ಪುಟಗಳು ೩೯; ಬೆಲೆ, ರೂ. ೦-೧೨-೦.

೪. **ಗುಡಿಯ ಹೊಸತಿಲಿನಲ್ಲಿ** (ಖಂಡಕಾವ್ಯ)—ಶ್ರೀ ಹೆರೂರು ಮೆನನ್; ಪ್ರಕಾಶಕರು: ಶ್ರೀ ಕರ್ಣಾಟಕ ಪ್ರಕಟನಾಲಯ, ಹೆರೂರು, ಬಸರೀಕಟ್ಟೆ ಪೋಸ್ಟ್; ಪುಟಗಳು ೩೯; ಬೆಲೆ, ರೂ. ೦-೮-೦.

೫. **ಶಾಲೆಯ ಮಕ್ಕಳು**—ಮೂಲ: ಎನ್. ನೊಸೋವ್; ಅನುವಾದ: ಶ್ರೀಮತಿ ಬಿ. ಎಸ್. ರುಕ್ಕಮ್ಮ, ಎಂ. ಎ.; ಪ್ರಕಾಶಕರು: ಪೀಪಲ್ಸ್ ಬುಕ್ ಹೌಸ್, ಮೈಸೂರು; ಪುಟಗಳು ೨೨೭; ಬೆಲೆ, ರೂ. ೧.೨೫.

೬. **ಸಂಸ್ಕೃತ ಕವಯಿತ್ರಿಯರು**—ಶ್ರೀ ಕೆ. ಬಿ. ಪಾಂಡುರಂಗಿ, ವಿದ್ವಾನ್, ಶಿರೋಮಣಿ, ಎಂ. ಎ.; ಪ್ರಕಾಶಕರು: ಕರ್ಣಾಟಕ ವಿಶ್ವವಿದ್ಯಾಲಯ, ಧಾರವಾಡ; ಪುಟಗಳು ೪೦; ಬೆಲೆ, ರೂ. ೦-೪-೦.

೭. **ಅಳಿವು-ಉಳಿವು** (ಕವನ ಸಂಕಲನ)—ಶ್ರೀ ಜಿ. ಎಂ. ಹಸ್ನೋಗೆ; ಪ್ರಕಾಶಕರು: ಶಾರದಾ ವಿದ್ಯಾರ್ಥಿನಿಲಯ, ಮೈಸೂರು; ಪುಟಗಳು ೭೧; ಬೆಲೆ, ರೂ. ೧-೦-೦.

೮. **ಮಧುರಯಾನ** (ಕವನ ಸಂಕಲನ)—ಶ್ರೀ ಕ. ಮ. ಶಿ. ಚಂದ್ರಶೇಖರಯ್ಯ; ಪ್ರಕಾಶಕರು: ದೇವಿರಾ ಮಂದಿರ, ಚನ್ನಗಿರಿ; ಪುಟಗಳು ೫೦; ಬೆಲೆ, ೨೫ ನ. ಪೈ.

೯. **ತವನಿಧಿ**—ಶ್ರೀ ರಂ. ಶ್ರೀ. ಮುಗಳಿ; ಪ್ರಕಾಶಕರು: ಉಷಾ ಸಾಹಿತ್ಯಮಾಲೆ, ಮೈಸೂರು; ಪುಟಗಳು ೧೯೯; ಬೆಲೆ, ರೂ. ೨-೪-೦.

೧೦. **ಮರೆಯಲಾಗದ ಯಾತ್ರೆ**—ಶ್ರೀ ಎನ್. ಎಸ್. ಗದಗಕರ; ಪ್ರಕಾಶಕರು: ಎನ್. ಎಸ್. ಗದಗಕರ; ಶುಕ್ರವಾರ ಪೇಟೆ, ನವಿಲೂರ ಅಗಸಿ, ಧಾರವಾಡ; ಪುಟಗಳು ೬೭; ಬೆಲೆ, ರೂ. ೦-೧೫-೦.

೧೧. **ರೇಖಾ** (ಭಾಗ ೨)—ಶ್ರೀಮತಿ ಲಲಿತಾಂಬ ಚಂದ್ರಶೇಖರ್, ಪ್ರಕಾಶಕರು: ಉಷಾ ಸಾಹಿತ್ಯಮಾಲೆ; ಪುಟಗಳು ೩೩೪; ಬೆಲೆ, ರೂ. ೨-೮-೦.

೧೨. ವಿಜಯ ದುಂದುಭಿ—ಸಂಪಾದಕರು : ಶ್ರೀ ಬಿ. ಎ. ಸನದಿ ; ಪ್ರಕಾಶಕರು : ಚೇತನ ಪ್ರಕಾಶನ, ಬೆಳಗಾವಿ ; ಪುಟಗಳು ೭೮ ; ಬೆಲೆ, ರೂ. ೦-೧೨-೦.

೧೩. ತಾರ ಕಂಬಗಳು—ಶ್ರೀ ಬಿ. ಆರ್. ವಾಡಪ್ಪಿ ; ಪ್ರಕಾಶಕರು : ಶ್ರೀ ಬಿ. ಆರ್. ವಾಡಪ್ಪಿ, ಮದಿಹಾಳ, ಧಾರವಾಡ ; ಪುಟಗಳು ೯೫ ; ಬೆಲೆ, ರೂ. ೧.೩೨.

೧೪. ಭಗವಾನ್ ಬುದ್ಧ—ಮೂಲ ಲೇಖಕರು : ಶ್ರೀ ಧರ್ಮಾನಂದ ಕೋಸಂಬೀ ; ಅನುವಾದಕರು: ಶ್ರೀ ಆದ್ಯರಂಗಾಚಾರ್ಯ ; ಪ್ರಕಾಶಕರು : ಸಾಹಿತ್ಯ ಅಕಾಡಮಿ, ಹೊಸ ಡೆಲ್ಲಿ ; ಪುಟಗಳು ೪೧೮ ; ಬೆಲೆ, ರೂ. ೩-೦-೦.

೧೫. ಗಮಕಕಾವ್ಯ ಮಂಜರಿ—ಸಂಪಾದಕರು : ಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ; ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು ೨ ; ಪುಟಗಳು ೧೧೨ ; ಬೆಲೆ, ರೂ. ೧-೦-೦.

೧೬. ಆಧುನಿಕ ಗದ್ಯ ಸಾಹಿತ್ಯ—ಸಂಪಾದಕರು : ಶ್ರೀ ಕೆ. ಗೋಪಾಲಕೃಷ್ಣರಾಯರು ; ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು ೨ ; ಪುಟಗಳು ೨೪೮ ; ಬೆಲೆ, ರೂ. ೨.೨೫.

೧೭. ಹರಿದಾಸರ ಕೆಲವು ಹಾಡುಗಳು (ಸೂಚೀಪತ್ರ ಮತ್ತು ಕಠಿಣಪದಗಳ ಅರ್ಥಗಳ ಸಹಿತ)—ಸಂಗ್ರಹಿಸಿದವರು : ಶ್ರೀ ರಾ. ನ. ಮಳಗಿ ; ಪ್ರಕಾಶಕರು : ಮೂರಾಣೆ ಗ್ರಂಥಮಾಲೆ, ಬೆಳಗಾಂವ ಗಲ್ಲಿ, ಹುಬ್ಬಳ್ಳಿ ; ಪುಟಗಳು ಕ್ರಾ. ಅ. ಪ. ೪೧ ; ಬೆಲೆ, ರೂ. ೦-೭-೦.

೧೮. ಚಂದ್ರಕಲಾ (ವೃತ್ತರತ್ನಾಕರ, ಕನ್ನಡ ವ್ಯಾಖ್ಯಾನ)—ಲೇಖಕರು : ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟ ; ಪ್ರಕಾಶಕರು : ವಿದ್ವಾನ್ ಕೆ. ಲಕ್ಷ್ಮೀನೃಸಿಂಹಶಾಸ್ತ್ರಿ, 'ಶಿವಸ್ವಾಮಿ ಭವನ', ವಾಣೀವಿಲಾಸ ರೋಡ್, ಮೈಸೂರು ; ಪುಟಗಳು ಕ್ರಾ. ಅ. ಪ. ೧೦೩ ; ಬೆಲೆ, ರೂ. ೨.೨೫.

೧೯. ಚಂದ್ರಾಲೋಕಃ (ಕನ್ನಡ ಪ್ರಭಾವಾಖ್ಯಾ ಸಮೇತಃ)—ಲೇಖಕರು : ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟ ; ಪ್ರಕಾಶಕರು : ವಿದ್ವಾನ್ ಜಿ. ವಿಷ್ಣುಮೂರ್ತಿಭಟ್ಟ, 'ಶಿವಸ್ವಾಮಿ ಭವನಂ', ವಾಣೀವಿಲಾಸ ರೋಡ್, ಮೈಸೂರು ; ಪುಟಗಳು ೧೨೦ ; ಬೆಲೆ, ರೂ. ೧.೫೦.

೨೦. ಮಗಳ ಮಾಂಗಲ್ಯ—ಶ್ರೀ ಜಿ. ವೆಂಕಟಯ್ಯ ; ಪ್ರಕಾಶಕರು : ಕಾಂತಾವರ್ ಪಬ್ಲಿಕೇಶನ್ಸ್, ೫೮, ನಜರಬಾದ್, ಮೈಸೂರು ; ಪುಟಗಳು ೧೪೪ ; ಬೆಲೆ, ರೂ. ೧.೫೦.

---

# ಪ್ರಬುದ್ಧ ಕರ್ಣಾಟಕ

## (ವಿಜ್ಞಾನ ವಿಶೇಷಾಂಕ)

ಹೇವಿಳಂಬಿ ಸಂವತ್ಸರ ೧೫೪ ಪುಷ್ಯ ಸಂಚಿಕೆ

### ಬ್ರಹ್ಮಾಂಡದ ಬುಗುರಿಗಳು

ಅಣುವಿನಲ್ಲಡಗಿರುವ ಕಣಗಳೆಲ್ಲಕು ಭ್ರಮಣ  
ಭೂ ಭ್ರಮಣ, ಗ್ರಹೋಪಗ್ರಹದ ಪರಿಭ್ರಮಣ  
ರವಿಚಂದ್ರ ತಾರಾಭ್ರಮಣ, ಗಗನ ಗಂಗಾಭ್ರಮಣ  
ನಿಖಿಲತಾರಾಸ್ತೋಮ ನೀಹಾರಿಕಾಭ್ರಮಣ  
ವಿಶ್ವಕರ್ತನ ಬುಗುರಿಯಾಟವೋ ? ಎಂಬಂತೆ  
ವಿಶ್ವದಲಿ ನಿರಂತರದಣುಮಹದ್ಭ್ರಮಣವದು  
ನಾಟ್ಯ ತಾಂಡವದ ವೈಯಾರದಲಿ ಮೈಮರೆತು  
ಅಣಕಿಪುದು ನಟರಾಜನಾಲಾಸ್ಯ ವೈಭವವ.

— ಶೀಲ

# ಹಾರಿತು ರಾಕೆಟ್ಟು !

ಹಾರಿತು ರಾಕೆಟ್ಟು !
ಬಯಲಾಯಿತು ಒಬ್ಬೊಬ್ಬರ ಗುಟ್ಟು—
ಯುಗಯುಗದಿಂದೀ ಮಾನವ ಮತಿಯನು
ಬಂಧಿಸಿದಾ ಕಟ್ಟು !

ವ್ಯೋಮಾಂತರದೊಳಗನಂತವಪಾರ ಸೊಡರಿನ ಸಿರಿಯಿಟ್ಟು
ಸುನೀಲಬಾನಿನ ಮೈಕಟ್ಟು
ಇರೆ, ವಿಚಿತ್ರ ಕಲ್ಪನೆಗೆಡೆಕೊಟ್ಟು
ಬಯಲಾಯಿತು ಒಬ್ಬೊಬ್ಬರ ಗುಟ್ಟು !!

ದೂರದರ್ಶಕ ಯಂತ್ರವನಿಟ್ಟು
ಪ್ರಕೃತಿರಹಸ್ಯವನರಿಯುವ ಪಟ್ಟು
ಗೆದ್ದಿತು-ರಟ್ಟಾಯಿತು ಗುಟ್ಟು !
ಹಾರಿತು ರಾಕೆಟ್ಟು !

ಗ್ರಹ ತಾರಾದಿಗಳೆಲ್ಲವು ಮಿಕಿ ಮಿಕಿ ಕಣ್ಬಿಟ್ಟು
ಎಂದುವು—ಏನೀ ಆಪತ್ತು !
ರವಿಯನು ಸುತ್ತುವ ಗ್ರಹ ಉಪಗ್ರಹಗಳು
ಬರಿ ಗಾಣದ ಎತ್ತು !

ಸ್ವಯಂ ಪ್ರಕಾಶದ ಹೆಮ್ಮೆಯ ಉಡುಗಣ
ಮಾನವ ಸಾಹಸಕೆದೆ ತೆರೆದು
ಮಿರುಮಿರು ಮಿಂಚಿದವಿನ್ನೂ ಇನ್ನೂ
ಚುಕ್ಕೆಗಳೆ ?‍ ಬರಿ ಸೊಡರುಗಳಾವು !

ಆಯಿತು ಇನ್ನೀ ಚಂದ್ರನ ನೋಡು.
ಅವನದದೇನಿದೆ ? ಎರವಲು ಮಾಲು !
ಸುತ್ತುವ ಭೂಮಿಯ ಕೆಳಗೂ ಮೇಲು !

ಹಾರುವರಂತೆ ಅಲ್ಲಿಗು, ತಾಳು !
ಇನ್ನೇನಿದೆಯೋ ? ಭೇದಿಸೆ, ಬಾನು
ದಿನದಿನವಲೆಯುವ ಕಾನು—ಎಮಗಾಗುವುದೋ ತಾನು !

— ಜೀ. ಶಂ. ಪ.

# ನವೀನ ನಾಗರಿಕತೆ ವಸ್ತುವಿಜ್ಞಾನಗಳ ಅಭಿವ್ಯಕ್ತಿಗಾಗಿ ಕನ್ನಡ ಶಬ್ದಸಂಪತ್ತಿನ ನಿರ್ಮಾಣ

## ಶಬ್ದಸಂಪತ್ತನ್ನು ಒದಗಿಸುವ ಆವಶ್ಯಕತೆ

ನಮ್ಮ ದೇಶೀಯ ಭಾಷೆಗಳೂ ಅದರಂತೆ ಕನ್ನಡವೂ ನವನಾಗರಿಕತೆ ವಿಜ್ಞಾನಗಳ ಅಭಿವ್ಯಕ್ತಮಾಡಲು ಸಮರ್ಥವಾಗಿಲ್ಲ. ಅವು ಶಿಕ್ಷಣದ ಮಾಧ್ಯಮವಾಗುವ ಯೋಗ್ಯತೆಯನ್ನು ಪಡೆದಿಲ್ಲ. ಅವುಗಳನ್ನು ಶಿಕ್ಷಣದ ಮಾಧ್ಯಮವನ್ನಾಗಿ ಮಾಡಲು ಮಾಡಿದ ಪ್ರಯತ್ನಗಳು ಸಫಲವಾಗಿಲ್ಲ. ನವೀನ ನಾಗರಿಕತೆ ವಸ್ತು ವಿಜ್ಞಾನಗಳ ಅಭಿವ್ಯಕ್ತಿಗಾಗಿ ಬೇಕಾಗುವ ಶಬ್ದ ಸಂಪತ್ತಿನ ಅಭಾವದ ಮೂಲಕ ಈ ದಿಶೆಯಲ್ಲಿ ಸಾಕಷ್ಟು ಪ್ರಗತಿಯಾಗಿಲ್ಲ. ಎಲ್ಲ ಶಿಕ್ಷಣ ತಜ್ಞರೂ ಭಾಷೇತರ ವಿಷಯ (Non-language Subjects) ಗಳನ್ನು ಆಯಾ ಪ್ರಾದೇಶಿಕ ಭಾಷೆಯಲ್ಲಿ ಕಲಿಸಬೇಕೆಂದು ಒತ್ತಿ ಹೇಳುತ್ತಾರೆ. ಜ್ಞಾನ ವಿಜ್ಞಾನಗಳ ೬೦೦ ರಷ್ಟು ಇರುವ ಶಾಖೋಪಶಾಖೆಗಳಲ್ಲಿರುವ ಜ್ಞಾನ ಭಂಡಾರವನ್ನು ಕನ್ನಡ ಮೊದಲಾದ ದೇಶೀಯ ಭಾಷೆಗಳಲ್ಲಿ ತರದ ಹೊರತು ದೇಶೀಯ ಭಾಷೆಗಳು ಶಿಕ್ಷಣದ ಮಾಧ್ಯಮವಾಗಲಾರವು. ಆದ್ದರಿಂದ ನಮ್ಮ ದೇಶದಲ್ಲಿ ಜ್ಞಾನ ವಿಜ್ಞಾನಗಳು ಸಾಕಷ್ಟು ಪ್ರಸಾರವಾಗಬೇಕಾದರೆ ಯೋಗ್ಯವಾದ ಶಬ್ದಸಂಪತ್ತನ್ನು ಒದಗಿಸುವುದು ಕ್ರಮಪ್ರಾಪ್ತ. ಕನ್ನಡ ಭಾಷೆಗೆ ಶಬ್ದಸಂಪತ್ತನ್ನು ಒದಗಿಸುವ ಪ್ರಶ್ನೆಯು ಭಾರತದ ಎಲ್ಲ ಭಾಷೆಗಳಿಗೂ ಸಾಮಾನ್ಯವಾದ್ದರಿಂದ ಅಖಿಲ ಭಾರತ ದೇಶೀಯ ಭಾಷೆಗಳ ಹಿನ್ನೆಲೆಯಲ್ಲಿ ಅದನ್ನು ಪರಿಶೀಲಿಸುವುದು ಅವಶ್ಯ.

## ಹೊಸ ಸಂಸ್ಕೃತಿಯ ಕೂಡ ಹೊಸ ಶಬ್ದಗಳ ಆವಿರ್ಭಾವ ಅನಿವಾರ್ಯ

ನವನಾಗರಿಕತೆ ವಿಜ್ಞಾನಗಳನ್ನು ಅಭಿವ್ಯಕ್ತಮಾಡಲು ನಮ್ಮ ದೇಶೀಯ ಭಾಷೆಗಳು ಸಮರ್ಥವಿಲ್ಲವೆಂದ ಮಾತ್ರಕ್ಕೆ ಅವು ಹಿಂದುಳಿದ ಭಾಷೆಗಳೆಂದು ಯಾರೂ ತಿಳಿಯಕೂಡದು. ಭಾರತದಲ್ಲಿಯ ಪ್ರತಿಯೊಂದು ಪ್ರಾದೇಶಿಕ ಭಾಷೆಯೂ ತನ್ನ ಸಂಸ್ಕೃತಿಯನ್ನು ಅಭಿವ್ಯಕ್ತಮಾಡಲು ಸಮರ್ಥವಾಗಿರುತ್ತದೆ. ಹೊಸ ಹೊಸ ಆಚಾರ ವಿಚಾರ ಉಚ್ಚಾರಗಳ ಸಂಪರ್ಕದ ಕೂಡ ಹೊಸ ಹೊಸ ಶಬ್ದಗಳು ರೂಢಿಯಲ್ಲಿ ಬರುವುದು ಅನಿವಾರ್ಯ. ಒಂದೇ ಜನಾಂಗದಲ್ಲಿಯೂ ಕೂಡ ಸಾಂಸ್ಕೃತಿಕ

ಮಾದರಿಗಳು ಬದಲಾದಂತೆ ಅನೇಕ ವಿಧದ ಹೊಸ ಶಬ್ದಸಂಪತ್ತು ನಿರ್ಮಾಣವಾದದ್ದನ್ನು ಹಳೆ ಶಬ್ದಗಳು ಅಡಗಿಹೋದದ್ದನ್ನು ನಾವು ಕಾಣಬಹುದು. ಜೀವನದ ಆವಶ್ಯಕತೆಗನುಸರಿಸಿ ಶಬ್ದಸಂಪತ್ತನ್ನು ಹೆಚ್ಚಿಸಿಕೊಳ್ಳುವುದು ಸಜೀವ ಭಾಷೆಯ ಲಕ್ಷಣ. ಇಂಗ್ಲಿಷ್ ಭಾಷೆಯು ಇಂತಹ ಭಾಷೆಗಳಲ್ಲಿ ಅತ್ಯುತ್ತಮ ಉದಾಹರಣೆಯೆಂದು ಹೇಳಬಹುದು.

## ಹೊಸ ಶಬ್ದಗಳನ್ನು ಒದಗಿಸುವ ವಿಧಾನಗಳನ್ನು ನಿರ್ದಿಷ್ಟಪಡಿಸುವುದು ಕಷ್ಟದ ಕೆಲಸ

ಶಿಕ್ಷಕನಾದ ಪ್ರತಿಯೊಬ್ಬನೂ ಹೊಸ ಶಬ್ದಗಳನ್ನು ಒದಗಿಸುವ ಪ್ರಯತ್ನಗಳಲ್ಲಿ ತೊಡಗಿರುತ್ತಾನೆ. ಪ್ರಾದೇಶಿಕ ಭಾಷೆಗಳನ್ನು ಶಿಕ್ಷಣದ ಮಾಧ್ಯಮವಾಗಿ ಸ್ವೀಕರಿಸಿದ ವಿದ್ಯಾಲಯಗಳಲ್ಲಿ ಕೆಲಸಮಾಡುವ ಶಿಕ್ಷಕನಂತೂ, ಹೊಸ ಹೊಸ ಶಬ್ದಗಳನ್ನು—ಪಾರಿಭಾಷಿಕ ಶಬ್ದಗಳನ್ನು—ನಿರ್ಮಿಸುತ್ತಲೇ ಇರಬೇಕಾಗುವುದು. ಪದವೀಧರರ ಜೀವನಶಿಕ್ಷಣಕೇಂದ್ರ G. B. T. C. (ಧಾರವಾಡ) ದಲ್ಲಿ ಕೆಲಸ ಮಾಡುತ್ತಿರುವಾಗ ನನಗೂ ಇಂತಹ ಪ್ರಸಂಗ ಒದಗಿತ್ತು, ಮೇಲೆ ಹೇಳಿದ ಪದವೀಧರರ ಜೀವನಶಿಕ್ಷಣಕೇಂದ್ರದಲ್ಲಿ ಕನ್ನಡವು ಶಿಕ್ಷಣದ ಮಾಧ್ಯಮವಾದ್ದರಿಂದ ಶೈಕ್ಷಣಿಕ ವಿಷಯಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಹೇಳುತ್ತಿದ್ದೆನು. ಅದರಲ್ಲಿ ಉಪಯೋಗಿಸುತ್ತಿರುವ ಕೆಲವು ಪಾರಿಭಾಷಿಕ ಶಬ್ದಗಳನ್ನು ಉದಾಹರಣೆಗಾಗಿ ಇಲ್ಲಿ ತೆಗೆದುಕೊಳ್ಳೋಣ:—

| | | |
|---|---|---|
| Assignment | .... | ನಿರ್ದಿಷ್ಟ ಘಟಕ |
| Supervised Study | .... | ಅಧೀಕ್ಷಿತ ಪಾಠ |
| Home Work | .... | ಗೃಹ ಪಾಠ |
| Additional Secretary | .... | ಅಧಿಕ ಕಾರ್ಯದರ್ಶಿ |

ಇವುಗಳಲ್ಲಿ ಮೊದಲನೆಯದಾದ assignment ಕ್ಕೆ 'ಹಂಚಿಕೆ' ಎಂದೂ Home work ಕ್ಕೆ 'ಮನೆಗೆಲಸ' ಎಂಬೂ ಹೇಳಿನೋಡಿದೆ. ಅವು ಸಾಕಷ್ಟು ಪರಿಣಾಮಕಾರಿಯಾಗಲಿಲ್ಲ. ಪಾರಿಭಾಷಿಕ ಶಬ್ದಗಳಲ್ಲಿರಬೇಕಾದ ಶಕ್ತಿಯು ಅವುಗಳಲ್ಲಿ ಇಲ್ಲವೋ ಏನೋ ! ಆದ್ದರಿಂದ ಅವುಗಳನ್ನು ತತ್ಸಮ ಶಬ್ದಗಳಲ್ಲಿ ಭಾಷಾಂತರಿಸಿ ಹೇಳಿದೆ:—'ನಿರ್ದಿಷ್ಟ ಘಟಕ' 'ಗೃಹಪಾಠ' ವೆಂದು. 'Additional Secretary' ಎಂಬುದನ್ನು 'ಅಧಿಕ ಕಾರ್ಯದರ್ಶಿ' ಎಂದು ಹೇಳಿದೆ. ವ್ಯುತ್ಪತ್ತಿಯ ದೃಷ್ಟಿಯಿಂದ ಇದು ಸಮಂಜಸವಾಗಿದೆ. 'ಅಧಿಕಮಾಸ' (Additional Month) ಎಂದಿರುವಾಗ 'ಅಧಿಕ ಕಾರ್ಯದರ್ಶಿ' (Additional Secretary)

ಎಂದರೆ ತಪ್ಪೇನು ? ನಾನು ನಿರ್ಮಿಸಿದ 'ಅಧಿಕ ಕಾರ್ಯದರ್ಶಿ' 'ನಿರ್ದಿಷ್ಟ ಘಟಕ' 'ಅಧೀಕ್ಷಿತ ಪಾಠ' ಎಂಬ ಪಾರಿಭಾಷಿಕ ಶಬ್ದಗಳು ನನ್ನನ್ನು ಬಿಟ್ಟು ಬೇರೆ ಯಾರಿಗೂ ಅರ್ಥವಾದಂತೆ ಕಾಣಲಿಲ್ಲ. ಅವುಗಳ ಅರ್ಥಗಳನ್ನು ಸ್ಪಷ್ಟಮಾಡಲು ಕೌಂಸಿನಲ್ಲಿ ಇಂಗ್ಲಿಷ್ ಶಬ್ದಗಳನ್ನು ಬರೆಯಲು ಹೇಳಿದೆ. ತತ್ಸಮ ಶಬ್ದಗಳ ಅರ್ಥವಾಗದಿದ್ದರೂ ಕೌಂಸಿನಲ್ಲಿ ಬರೆದ ಇಂಗ್ಲಿಷ್ ಶಬ್ದಗಳಿಂದಾದರೂ ಅರ್ಥವಾಗ ಬಹುದೆಂದು. ಹಾಗಾದರೆ ನಾನು ನಿರ್ಮಿಸಿದ ಪಾರಿಭಾಷಿಕ ಶಬ್ದಗಳಿಂದ ಏನು ಪ್ರಯೋಜನ? ನಾನು ಮಾಡಿದ್ದು ಒಂದು ಅಧಿಕಪ್ರಸಂಗತನವೆಂದು ತಿಳಿದು ಇಂಗ್ಲಿಷ್ ಶಬ್ದವನ್ನು ಕನ್ನಡದ ಲಿಪಿಯಲ್ಲಿ ಬರೆದರಾಯಿತೆಂದು ತೀರ್ಮಾನಿಸಿದೆನು. "ಅಧಿಕ ಕಾರ್ಯದರ್ಶಿ" ಎನ್ನುವುದಕ್ಕಿಂತ—"Additional Secretary"—ಎಂಬುದೂ "ಅಧೀಕ್ಷಿತ ಪಾಠ" ಎನ್ನುವುದಕ್ಕಿಂತ "Supervised Study" ಎನ್ನುವುದೂ ಹೆಚ್ಚು ಪರಿಚಿತವಾಗಿದೆ, ವಿದ್ಯಾರ್ಥಿಗಳಿಗೆ ಹಾಗೂ ಶಿಕ್ಷಕರಿಗೆ. ಪಾರಿಭಾಷಿಕ ಶಬ್ದಗಳನ್ನು ಇದ್ದಕ್ಕಿದ್ದಂತೆ ತೆಗೆದುಕೊಂಡು ಕನ್ನಡದ ಲಿಪಿಯಲ್ಲಿ ಬರೆದು ನನ್ನ ಶಿಕ್ಷಣದ ಕೆಲಸವನ್ನು ಮುಂದೆ ಸಾಗಿಸುತ್ತ ಬಂದೆನು. ಇದು ನನ್ನ ವಿಧಾನ. ನಿಮ್ಮ ವಿಧಾನ ಬೇರೆಯಾಗಿರಬಹುದು. ನಿಜವಾದ ವಿಧಾನ ಮೂರನೆಯದಾಗಿರ ಬಹುದು, ಎಂದುಕೊಂಡೆ.

## ಶಬ್ದಸಂಪತ್ತನ್ನು ಒದಗಿಸುವುದರಲ್ಲಿ ಕೆಲವು ವೈಯಕ್ತಿಕ ಪ್ರಯತ್ನಗಳು

ನಮ್ಮ ಭಾರತದಲ್ಲಿ ಎಲ್ಲ (ಪ್ರಾದೇಶಿಕ ರಾಜ್ಯಗಳಲ್ಲಿ ನೂರಾರು ವರ್ಷಗಳಿಂದ) ಹೊಸ ಶಬ್ದಸಂಪತ್ತನ್ನು ಒದಗಿಸುವಲ್ಲಿ ಅನೇಕ ವೈಯಕ್ತಿಕ ಪ್ರಯತ್ನಗಳು ಸಾಗಿ ಬಂದಿವೆ. ಈ ಪ್ರಯತ್ನಗಳನ್ನು ನಾವೇನೂ ಹೊಸದಾಗಿ ಪ್ರಾರಂಭಿಸಬೇಕಾಗಿಲ್ಲ. ನನ್ನಂತಹ ಶಿಕ್ಷಕರು ಹಾಗೂ ಗ್ರಂಥಕರ್ತರು ತಮ್ಮದೇ ಆದ ರೀತಿಯಲ್ಲಿ (ಅಂದರೆ ಬೇರೆಯವರಿಗೆ ಅರ್ಥವಾಗದ ರೀತಿಯಲ್ಲಿ) ಹೊಸ ಶಬ್ದ ನಿರ್ಮಾಣದಲ್ಲಿ ತೊಡಗಿದ್ದಾರೆ. ರಸಾಯನ ಶಾಸ್ತ್ರ, ಆರೋಗ್ಯಶಾಸ್ತ್ರ, ಗಣಿತಶಾಸ್ತ್ರಗಳ ಮೇಲಿನ ಶಾಲಾ ಪಠ್ಯಪುಸ್ತಕಗಳನ್ನು ತೆಗೆದುಕೊಂಡು ನೋಡಿದರೆ ಗೊತ್ತಾಗುವುದು. ಉತ್ತರ ಕರ್ನಾಟಕದಲ್ಲಿ ಪ್ರಚಾರದಲ್ಲಿರುವ ಮಾಧ್ಯಮಿಕ ಶಾಲೆಗಾಗಿ ಬರೆದ ಅತ್ಯಾಧುನಿಕ ಭೂಮಿತಿಯ ಕೆಲವು ಪಠ್ಯ ಪುಸ್ತಕಗಳನ್ನು ಇಲ್ಲಿ ಉದಾಹರಣೆಗಾಗಿ ತೆಗೆದುಕೊಳ್ಳೋಣ. ಅವುಗಳಲ್ಲಿ ಹಿಂದಿನ ಅದೇ ವಿಷಯದ ಮೇಲಿನ ಪಠ್ಯ ಪುಸ್ತಕಗಳಲ್ಲಿಯ ಪಾರಿಭಾಷಿಕ ಶಬ್ದಗಳ ವಿಷಯದಲ್ಲಿರುವ ಕೆಲವು ಕುಂದುಗಳನ್ನು ತಿದ್ದಿಕೊಂಡಿದ್ದರೂ ಇನ್ನೂ ದೋಷಗಳಿವೆ. ನೂತನ ಭೂಮಿತಿ ಭಾಗ ೧ (ತ. ಅ. ಕುಲಕರ್ಣಿಯವರು ಬರೆದಿದ್ದು—೧೯೫೨) ಹಾಗೂ ಮಾಧ್ಯಮಿಕ ಶಾಲಾ ಭೂಮಿತಿ—ಮೊದಲನೆಯ ಭಾಗ—(ದ. ಮುಜುಮದಾರ ಬರೆದದ್ದು.)—ಭಾಗವತರು ಬರೆದ ಪುಸ್ತಕದ ಕನ್ನಡ

ಭಾಷಾಂತರಗಳಲ್ಲಿ ಪಾರಿಭಾಷಿಕ ಶಬ್ದಗಳ ಪಟ್ಟಿಗಳನ್ನು ಕೊಡಲಾಗಿದೆ. ತುಲನಾತ್ಮಕವಾಗಿ ಅಭ್ಯಾಸಮಾಡಲು ಅನುಕೂಲವಾದ್ದರಿಂದ ಅವುಗಳನ್ನು ಉದಾಹರಣೆಗಾಗಿ ತೆಗೆದುಕೊಳ್ಳಲಾಗಿದೆ. ಕುಲಕರ್ಣಿಯವರ ಪಾರಿಭಾಷಿಕ ಶಬ್ದಗಳನ್ನು ಭಾಗವತರ ಪಾರಿಭಾಷಿಕ ಶಬ್ದ (ಪರಿಶಿಷ್ಟ—೩) ಗಳೊಡನೆ ತುಲನಾತ್ಮಕವಾಗಿ ಅಭ್ಯಾಸಮಾಡಿ ನೋಡಲಾಗಿ ಕೆಳಗಿನ ಅಂಶಗಳು ಒಡೆದು ಕಾಣುವುವು. ಅವುಗಳಲ್ಲಿಯ ಕೆಲವು ವ್ಯತ್ಯಾಸಗಳನ್ನು ಇಲ್ಲಿ ಕೊಡಲಾಗಿದೆ.

| ಇಂಗ್ಲಿಷ್ ಶಬ್ದಗಳು | ಕುಲಕರ್ಣಿಯವರ ಭಾಷಾಂತರ | ಭಾಗವತರ ಭಾಷಾಂತರ |
|---|---|---|
| Solids | ಘನಪದಾರ್ಥಗಳು | ಅವಕಾಶಾಕೃತಿಗಳು |
| Vertically-Opposite angle | ಶಿರಸಾವಿರುದ್ಧಕೋನ | ಎದುರುಬದುರಿನ ಕೋನ |
| Straight angle | ಸರಳಕೋನ (ಗುಪ್ತಕೋನ) | ಸರಳಕೋನ |
| Chord | ಜ್ಯಾ | ಜ್ಯಾರೇಖೆ |
| Radius | ತ್ರಿಜ್ಯ | ತ್ರಿಜ್ಯರೇಖೆ. |

ಭಾಗವತರು ಕುಲಕರ್ಣಿಯವರಂತೆ 'Hypotenuse' ಎಂಬುದನ್ನು ಕರ್ಣವೆಂದು ಹೇಳಿರುವರಲ್ಲದೆ 'Diagonal' ಕ್ಕೂ ಕರ್ಣವೆಂದು ಕರೆದಿದ್ದಾರೆ. ಭಾಗವತರು ಕೃತ್ಯ ಎಂಬುದನ್ನು ಎರಡು ಶಬ್ದಗಳ ಪರವಾಗಿ (Construction, Problem ಪರವಾಗಿ) ಉಪಯೋಗಿಸಿದ್ದಾರೆ. ಶ್ರೀ ಕುಲಕರ್ಣಿ ಹಾಗೂ ಶ್ರೀ ಭಾಗವತರು 'Reflex' Angle' ಎಂಬುದಕ್ಕೆ ಪ್ರವಿಶಾಲಕೋನ, ಬಹಿರ್ವ್ಯಕ್ತ ಕೋನ ಎಂದು ಶಬ್ದಗಳನ್ನು ಕೊಟ್ಟಿದ್ದಾರೆ. ಇನ್ನು ಉಳಿದ ಶಾಲಾ ಪಠ್ಯ ಪುಸ್ತಕಗಳಲ್ಲಿಯೂ ಇದರಂತೆ. ಆರೋಗ್ಯ ಶಾಸ್ತ್ರದಲ್ಲಿ Urinal ಎಂಬುದಕ್ಕೆ ಕೆಲವರು ಮೂತ್ರಿಯೆಂತಲೂ, ಕೆಲವರು ಮೂತ್ರಾಶಯವೆಂತಲೂ ಭಾಷಾಂತರಿಸಿದ್ದಾರೆ. ಆಧುನಿಕ ವೃತ್ತಪತ್ರಗಳಲ್ಲಿ ಇಂತಹ ಅನೇಕ ವ್ಯತ್ಯಯಗಳನ್ನು ಕಾಣಬಹುದು. Ordinance ಎಂಬುದನ್ನು ಮೈಸೂರಿನವರು (ಪ್ರಜಾವಾಣಿ) 'ತುರ್ತುಶಾಸನ' ಎಂದು ಭಾಷಾಂತರಿಸಿದ್ದಾರೆ. ಉತ್ತರ ಕರ್ನಾಟಕದವರು (ಸಂಯುಕ್ತ ಕರ್ನಾಟಕ) 'ಸುಗ್ರೀವಾಜ್ಞೆ' ಎಂದು ಭಾಷಾಂತರಿಸಿದ್ದಾರೆ. ಹೀಗೆ ಪ್ರದೇಶ ಪ್ರದೇಶಗಳಲ್ಲಿ ವ್ಯಕ್ತಿ ವ್ಯಕ್ತಿಗಳಲ್ಲಿ ಅನೇಕ ವ್ಯತ್ಯಾಸಗಳನ್ನು ತೋರಿಸಬಹುದು.

ಈ ವೈಯಕ್ತಿಕ ಪ್ರಯತ್ನಗಳ ಮುಖ್ಯವಾದ ದೋಷಗಳು.

೧. ಅವುಗಳ ವ್ಯಾಪ್ತಿಯು ಪರಿಮಿತವಾಗಿದೆ. (ಆಯಾ ವಿಷಯಕ್ಕೆ ಇಲ್ಲವೆ ಆಯಾ ಪ್ರದೇಶಕ್ಕೆ) ಎಲ್ಲ ವಿಷಯಗಳ ದೃಷ್ಟಿಯಿಂದಾಗಲಿ, ಅಖಿಲ ಹಿಂದೂಸ್ತಾನದ ದೃಷ್ಟಿಯಿಂದಾಗಲಿ ಪುಸ್ತಕಗಳು ಬರೆದವುಗಳಾಗಿಲ್ಲ.

೨. ಅವುಗಳಲ್ಲಿ ಏಕರೂಪತೆಗಳು ಕಂಡು ಬರುವುದಿಲ್ಲ.

೩. ಶಬ್ದಸಂಪತ್ತು ಭಾಷಾಶಾಸ್ತ್ರ ಬಲ್ಲವರಿಂದ ನಿರ್ಮಿತವಾದುದಲ್ಲ. ಒಂದೇ ಒಂದು ಸಂತೋಷದ ಸಂಗತಿಯೆಂದರೆ ಎಲ್ಲ ಗ್ರಂಥಕರ್ತರು ಸಾಮಾನ್ಯವಾಗಿ ಪಾರಿಭಾಷಿಕ ಶಬ್ದಗಳನ್ನು ತಯಾರಿಸುವಾಗ ತತ್ಸಮಶಬ್ದಗಳನ್ನು ಉಪಯೋಗಿಸಿದ್ದಾರೆ.

**ಸುಸಂಘಟಿತ ಆಧುನಿಕ ಪ್ರಯತ್ನಗಳು (ಅಖಿಲ ಭಾರತದ ದೃಷ್ಟಿಯಿಂದ)**

ಈಗ ವೈಯಕ್ತಿಕ ಪ್ರಯತ್ನಗಳು ಭಾರತದ ಎಲ್ಲ ರಾಜ್ಯಗಳಲ್ಲಿ ನೂರಾರು ವರ್ಷಗಳಿಂದ ನಡೆದು ಬಂದರೂ ದೇಶೀಯ ಭಾಷೆಗಳಲ್ಲಿ ಶಬ್ದಸಂಪತ್ತನ್ನು ಒದಗಿಸುವುದರಲ್ಲಿ ನಡೆದ ಮೂರು ಸುಸಂಘಟಿತ, ಪೂರ್ವ-ನಿಯೋಜಿತ ಪ್ರಯತ್ನಗಳು ಗಮನಾರ್ಹವಾಗಿವೆ.

೧. ಉಸ್ಮಾನಿಯಾ ವಿಶ್ವವಿದ್ಯಾಲಯದವರಿಂದ ಉರ್ದುಭಾಷೆಯಲ್ಲಿ ತಯಾರಾದ ಪಠ್ಯಪುಸ್ತಕಗಳು (ಅವುಗಳಲ್ಲಿ ಉಪಯೋಗಿಸಿದ ಪಾರಿಭಾಷಿಕ ಶಬ್ದಗಳು)

೨. ಡಾ|| ರಘುವೀರರವರ ಇಂಗ್ಲಿಷ್-ಹಿಂದೀ ಬೃಹತ್‌ಕೋಶ (The Great English Indian Dictionary)

೩. ಹಿಂದಿಯಲ್ಲಿ ಪಾರಿಭಾಷಿಕ ಶಬ್ದಗಳು ಮಾಧ್ಯಮಿಕ ಶಾಲೆಗಳಿಗಾಗಿ (Technical terms in Hindi for Secondary Schools)

ಇವುಗಳಲ್ಲಿ, ಕೊನೆಯದು ಕೇಂದ್ರ ಸರಕಾರವು ಕೈಕೊಂಡ ಪ್ರಯತ್ನ.

ಉಸ್ಮಾನಿಯ ವಿಶ್ವವಿದ್ಯಾಲಯದ ಪಾರಿಭಾಷಿಕ ಶಬ್ದಗಳನ್ನು ಒದಗಿಸುವ ವಿಧಾನಗಳು ಉರ್ದುಭಾಷೆಗೆ ಮಾತ್ರ ಪರಿಮಿತವಾಗಿವೆ. ಇನ್ನುಳಿದ ಎರಡು ಪ್ರಯತ್ನಗಳು ಅಖಿಲಭಾರತದ ದೃಷ್ಟಿಯಿಂದ ಮಾಡಿದವು ಎಂಬುದು ಆಯಾ ಸಂಪಾದಕ ಮಂಡಲಗಳಲ್ಲಿರುವ ಸದಸ್ಯರಿಂದ ವಿದಿತವಾಗುವದು. ಡಾ|| ರಘುವೀರರವರು ಕೆಲವು ಸಾಮಾನ್ಯ ನಿಯಮಗಳನ್ನು ವಿವರಿಸಿ ಅವುಗಳಿಗನುಗುಣವಾಗಿ ಪಾರಿಭಾಷಿಕ ಶಬ್ದಗಳನ್ನು ನಿರ್ಮಿಸಲು ಪ್ರಯತ್ನಿಸಿದ್ದಾರೆ. ಅನೇಕ ಶಾಸ್ತ್ರೀಯ ವಿಷಯಗಳಿಗೆ ಬೇಕಾಗುವ ಪಾರಿಭಾಷಿಕ ಶಬ್ದಗಳನ್ನು ರಚಿಸಿದ್ದಾರೆ. ಭಾರತದಲ್ಲಿಯ ಯಾವದೇ ಪ್ರಾಂತದಲ್ಲಿಯ (ರಾಜ್ಯದಲ್ಲಿಯ) ೧೫ ವರ್ಷದ ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಗೆ ಸುಲಭವಾಗಿ ಅರ್ಥವಾಗುವ, ಎಲ್ಲ ಪ್ರದೇಶಗಳಿಗೂ ಸಾಮಾನ್ಯವಾಗಿರುವ, ಸುಮಾರು ೬೦೦ ಧಾತುಗಳನ್ನು ಆಧಾರವಾಗಿಟ್ಟುಕೊಂಡು ಶಬ್ದಸೃಷ್ಟಿಯನ್ನು ಮಾಡಿದ್ದಾರೆ. ಕೆಲವು ಹಳೆಯ ಸಂಸ್ಕೃತ ಪಾರಿಭಾಷಿಕ ಶಬ್ದಗಳನ್ನು ಅಂಜನ-ಅಯಸ್ ಮುಂತಾದವುಗಳನ್ನು ಪುನರುಜ್ಜೀವನಗೊಳಿಸಿದ್ದಾರೆ. ಇದು ಒಂದು ಅವರ ಶಬ್ದಕೋಶದ ವೈಶಿಷ್ಟ್ಯ. ಅದು ಒಂದು ಸ್ತುತ್ಯ

ಉಪಕ್ರಮವೆಂದು ಹೇಳಬಹುದು. ಹಳೆಯ ಸಂಸ್ಕೃತ ಪಾರಿಭಾಷಿಕ ಶಬ್ದಗಳು ಉಪಲಬ್ಧವಿಲ್ಲದ ಪಕ್ಷದಲ್ಲಿ ಪಾಶ್ಚಾತ್ಯ ಗ್ರೀಕ, ಲ್ಯಾಟಿನ್ ಶಬ್ದಗಳನ್ನು ಭಾಷಾಂತರಿಸಲು ಹೊರಟಿದ್ದಾರೆ. ಇದು ಎರಡನೆಯ ವೈಶಿಷ್ಟ್ಯವೆಂದು ಹೇಳಬಹುದು. ರಘುವೀರರವರ ಶಬ್ದಕೋಶವು ಒಂದು ಬೃಹತ್ ಶಾಸ್ತ್ರೀಯ ಪಾರಿಭಾಷಿಕ ಶಬ್ದಕೋಶವೆನ್ನಬಹುದು. ಅದು ಸಂಸ್ಕೃತ ಪ್ರಚುರವಾಗಿದೆ. ಉದಾಹರಣೆಗಾಗಿ ಒಂದೆರಡು ಅಂತಹ ಪಾರಿಭಾಷಿಕ ಶಬ್ದಗಳನ್ನು ಇಲ್ಲಿ ಕೊಡಲಾಗಿದೆ.

Voltameter .... ದ್ಯುರುಕ್ಮಮಾನ
Florine .... ತರಸ್ವಿನಿ latin-fluere to flow

ಡಾ|| ರಘುವೀರರ ಶಬ್ದಕೋಶವು ಪಾಣಿನಿಯ ಅಷ್ಟಾಧ್ಯಾಯಿಯಂತೆ ಭವ್ಯವಾಗಿದೆ, ಉದ್‌ಗ್ರಂಥವಾಗಿದೆ. ಕೆಲವು ವಿಚಾರಗಳನ್ನು ಅಭಿವ್ಯಕ್ತ ಪಡಿಸಲು ಹೊಸ ಪ್ರತ್ಯಯಗಳನ್ನು ಕಲ್ಪಿಸಿಕೊಂಡಿದ್ದಾರೆ. ಉದಾಹರಣೆಗಾಗಿ : ಆತು (ಧಾತು ಎಂಬುದರ ಸಂಕ್ಷೇಪರೂಪ) ಧಾತುಗಳನ್ನು ಸೂಚಿಸಲು ಆತಿ (ವಾತಿ ಎಂಬುದರ ಸಂಕ್ಷೇಪ ರೂಪ) ಹವಾಯಿ ಪದಾರ್ಥಗಳನ್ನು ಸೂಚಿಸಲು, ಲಾ (ವಿರಲಾ ಎಂಬುದರ ಸಂಕ್ಷೇಪ ರೂಪ) ವಿರಲತೆಯನ್ನು ಸೂಚಿಸಲು ಇತ್ಯಾದಿ. ಕೆಳಗಿನ ಶಬ್ದಗಳಿಂದ ಇದು ಸ್ಪಷ್ಟವಾಗುವದು.

ಆತು (ಧಾತು) :—
Indium ನೀಲಾತು (ನೀಲ—Indigo+ಧಾತು-Metal)
Alumium ಸ್ಫಟ್ಯಾತು (ಸ್ಫಟ Alumium+ಧಾತು metal)
ಆತಿ (ವಾತಿ) :—
Radon ತೇಜಸಾತಿ (ತೇಜಸ್-Radum+ವಾತಿ gas)
ಲಾ (ವಿರಲಾ :—

Erbium ರಕ್ತಲಾ (ರಕ್ತ—Red+ವಿರಲಾ) ಅದರಂತೆ ದೂರಸಲಾ Samarium. ಪಾಣಿನಿಯ ಪ್ರತ್ಯಾಹಾರದ ಮಾದರಿಯಲ್ಲಿ ಕೆಲವು ಶಬ್ದಗಳನ್ನು ಸಂಕ್ಷೇಪಿಸಿ ಪಾರಿಭಾಷಿಕ ಶಬ್ದಗಳನ್ನು ತಯಾರಿಸಿದ್ದಾರೆ. ಡಾ|| ರಘುವೀರರವರು ಪ್ರತ್ಯಾಹಾರದ ಮಾದರಿಯ ಮೇಲೆ ಪಾರಿಭಾಷಿಕ ಶಬ್ದಗಳನ್ನು ರಚಿಸಿದ್ದರಿಂದ ಕೃತ್ರಿಮವಾಗಿವೆ. ಸಾಮಾನ್ಯ ಜನರಿಗೆ ತಿಳಿಯಲು ಬಹಳ ಗಡಚಾಗಿವೆ. ಸಂಪ್ರದಾಯ (Tradition) ಯಥಾರ್ಥತೆ (Factual Correspondence) ಉಚ್ಚಾರ ಸೌಲಭ್ಯತೆ (Phonetic consideration) ಗಳಿಗೆ ಕೊಟ್ಟಷ್ಟು ಮಹತ್ವವನ್ನು ಸುಜ್ಞೇಯತೆ—(Intelligibility) ಗೆ ಹಾಗೂ ಸಂಕ್ಷಿಪ್ತತೆ (brevity) ಗೆ ಅವರು ಹೊಸ ಶಬ್ದ ನಿರ್ಮಿಸುವಲ್ಲಿ ಕೊಟ್ಟಿಲ್ಲವೆಂದು ಹೇಳಬಹುದು.

ಡಾ॥ ರಘುವೀರರವರ ಶಬ್ದಕೋಶದಲ್ಲಿಯ ಸುದೀರ್ಘ ಹಾಗೂ ಕೃತ್ರಿಮ, ಆದ್ದರಿಂದ ಅರ್ಥ ಸರಿಯಾಗಿ ಆಗದ, ಕೆಲವು ಪರಿವರ್ತನೆಗಳನ್ನು ಇಲ್ಲಿ ಕೊಡಲಾಗಿದೆ. ಸಮಾಹರ್ತಾ (Collector), ಪರಿಚಕ್ರ ನಿವೇಶಕ (Cirle Inspector), ಅಗ್ನಿರಥ ವಿರಾಮಸ್ಥಾನ (Railway Station), ಮೂಲ್ಯ ಪತ್ರಿಕಾ (Ticket), ಅಗ್ನಿರಥ ಗಮನಾಗಮನ ಸೂಚಕ ತಾಮ್ರಪಟ್ಟಿಕಾ (Signal), ಸ್ವಗತಿಮಾನ ರಥ (Motor Car). ಕಂಠ ಲಂಗೋಟ (Neck Tie)' ನೀರಪ್ರೊದಲದ ಕ್ಷಲದಕ್ಷು (Claro-methyl-ethyl-ether) ಮುಂತಾದವುಗಳು.

ಕೇಂದ್ರ ಸರಕಾರದಿಂದ ಪ್ರಸಿದ್ಧಿಸಲ್ಪಟ್ಟ 'ಹಿಂದಿಯಲ್ಲಿ ಪಾರಿಭಾಷಿಕ ಶಬ್ದಗಳು ಮಾಧ್ಯಮಿಕ ಶಾಲೆಗಳಿಗಾಗಿ' ಎಂಬ ಗ್ರಂಥದಲ್ಲಿ ಪಾರಿಭಾಷಿಕ ಶಬ್ದಗಳನ್ನು ಒದಗಿಸುವಾಗ ಪಾಶ್ಚಾತ್ಯ ಪಾರಿಭಾಷಿಕ ಶಬ್ದಗಳನ್ನು ಭಾಷಾಂತರಿಸುವಾಗ ಸಂಸ್ಕೃತವನ್ನು ಮುಖ್ಯವಾಗಿ ಅವಲಂಬಿಸಲಾಗಿದೆ. ಆದರೂ ಹಿಂದುಸ್ತಾನದ ವಿವಿಧ ರಾಜ್ಯಗಳಲ್ಲಿ ಈಗಾಗಲೇ ಪ್ರಚಾರದಲ್ಲಿರುವ ಸಮಂಜಸವಾದ ತತ್ಸಮ ಶಬ್ದಗಳನ್ನು ಆಯ್ದುಕೊಂಡಿದ್ದಾರೆ. ಆದ್ದರಿಂದ ಅಲ್ಲಿ ಅಷ್ಟು ಕೃತ್ರಿಮತೆ ಕಂಡು ಬರುವದಿಲ್ಲ. ಕನ್ನಡ ಪ್ರಾಂತದಲ್ಲಿ ಪ್ರಚಾರದಲ್ಲಿರುವ ವಿಧಾನಾಂಗ (Legislative), ಕಾರ್ಯಾಂಗ (Executive)), ನ್ಯಾಯಾಂಗ (Judicial) ಗಳನ್ನು ಸ್ವೀಕರಿಸಲಾಗಿದೆ. ಸಂಪ್ರದಾಯ, ಸುಜ್ಞೇಯತೆ, ಯಥಾರ್ಥಗಳಿಗೆ ಯೋಗ್ಯವಾದ ಸ್ಥಾನವನ್ನು ಕಲ್ಪಿಸಿಕೊಡಲಾಗಿದೆಯೆಂದು ಸಾಮಾನ್ಯವಾಗಿ ಹೇಳಬಹುದು. ಇನ್ನೊಂದು ಗಮನಾರ್ಹವಾದ ಅಂಶವೆಂದರೆ ಡಾ॥ ರಘುವೀರರಂತೆ ಅದರ ಸಂಪಾದಕರು ಪ್ರತಿಯೊಂದು ಪಾಶ್ಚಾತ್ಯ ಪಾರಿಭಾಷಿಕ ಶಬ್ದವನ್ನು ಭಾಷಾಂತರ ಮಾಡಲಿಕ್ಕೆ ಹೋರಟಿಲ್ಲ. ಕೆಲವು ಇಂಗ್ಲಿಷ್, ಗ್ರೀಕ್, ಲ್ಯಾಟಿನ್ ಶಬ್ದಗಳನ್ನು ಇದ್ದಕ್ಕಿದ್ದಂತೆ ತೆಗೆದುಕೊಂಡಿದ್ದಾರೆ. ಗ್ಯಾರಂಟಿ, ಹಾಯ್ ಕಮೀಶನರ್, ಪ್ರೆಸಿಡೆನ್ಸಿ ವಾರಂಟ, ಕೋಟಾ, ಕೋರಮ್ ಇತ್ಯಾದಿ.

ಶಾಸ್ತ್ರೀಯ ಉಪಕರಣಗಳ ಹೆಸರುಗಳನ್ನು ಹಿಂದೀ ಮಿಶ್ರಮಾಡಿ ಪರಿವರ್ತಿಸಿದ್ದಾರೆ.

Calorimeter .... ಕಲರಿಮಾಪಿ
Thermograph .... ತಾಪಲೇಖ

ಕೆಲವೆಡೆಯಲ್ಲಿ ಇಂಗ್ಲಿಷ ಶಬ್ದಮೊಡನೆ ಹಿಂದೀ ಶಬ್ದವನ್ನು ಕೊಡಲಾಗಿದೆ. ಸಾಮಾಜಿಕ ಶಾಸ್ತ್ರ (Social Sciences) ಗಳು ಎಂಬ ಭಾಗದಲ್ಲಿಯ ಕೆಲವು ಶಬ್ದಗಳನ್ನು ಇಲ್ಲಿ ಪರಿಶೀಲಿಸುವ.

Assembly .... ಸಭಾ, ಅಸೆಂಬ್ಲಿ
Budget .... ಆಯುವ್ಯಯ ಬಜೆಟ್
Chancellor .... ಕುಲಪತಿ, ಚಾನ್ಸಲರ
Civil Court .... ದಿವಾಣೀ, ಸಂಹಿತಾ
Agenda .... ಕಾರ್ಯಸೂಚಿ, ಅಜಂಡಾ

ಒಂದೇ ಶಬ್ದವನ್ನು ಬೇರೆ ಬೇರೆ ಎಡೆಯಲ್ಲಿ ಬೇರೆ ಬೇರೆ ಅರ್ಥದಲ್ಲಿ ಉಪಯೋಗಿಸಲಾಗಿದೆ. Ministry–ರಾಜಮಂಡಳ (Social Science *p.* 24) Board ಮಂಡಳ ಇತ್ಯಾದಿ.

ಮತ್ತೊಂದೆಡೆಯಲ್ಲಿ ಫಾರೇನ್ ಹಾಯಿಟ್ ಸ್ಕೇಲೊಂದು ಇನ್ನೊಂದೆಡೆಯಲ್ಲಿ ಫಾರೆನ್ ಹಾಯಿಟ್ ಮಾಸಕ್ರಮ (*p.* 36 ) ಎಂದು ಕೊಡಲಾಗಿದೆ.

ಪೋಲ್= ವೋಟ ಡಾಲನಾ ಎಂದು ವಿವರಿಸಿದ್ದಾರೆ.

ಮೇಲಿನ ವಿವಚನೆಯಿಂದ ಹಿಂದಿಯಲ್ಲಿ ಪಾರಿಭಾಷಿಕ ಶಬ್ದಗಳು ಎಂಬ ಶಬ್ದ ಸಂಗ್ರಹದಲ್ಲಿ ಪಾರಿಭಾಷಿಕ ಶಬ್ದಗಳಲ್ಲಿ ಇರಬೇಕಾದ ವರ್ಣನೆಯ ಅಚ್ಚುಕಟ್ಟುತನ (Accuracy of definition) ಯೋಜನೆಯ ಸುಸಂಬದ್ಧತೆ (Consistency of organisation) ಗಳು ಸಾಕಷ್ಟು ಇಲ್ಲವೆಂದು ಹೇಳಬಹುದು. ಅಲ್ಲದೆ ಪಾರಿಭಾಷಿಕ ಶಬ್ದಗಳ ವ್ಯಾಪ್ತಿಯು ಮಾಧ್ಯಮಿಕ ಶಾಲೆಯ ೫-೬ ವಿಷಯಗಳಿಗೆ ಮಾತ್ರ ಪರಿಮಿತವಾಗಿದೆ. ಡಾ॥ ರಘುವೀರರ ಶಬ್ದಕೋಶದ ಹಾಗೆ ದೊಡ್ಡ ಪ್ರಮಾಣದ ಮೇಲೆ ಬರೆದ ಗ್ರಂಥವಲ್ಲ. ಹಿಂದೀ ಪಾರಿಭಾಷಿಕ ಶಬ್ದಗಳು ಹಾಗೂ ರಘುವೀರರ ಬೃಹತ್‌ಕೋಶ ಎಂಬ ಗ್ರಂಥಗಳಲ್ಲಿ ಕಂಡು ಬರುವ ಮುಖ್ಯ ಅಂಶಗಳು.

**ಗುಣಗಳು :**

೧. ಅವುಗಳಲ್ಲಿ ಅಖಿಲಭಾರತದ ದೃಷ್ಟಿ ಇದೆ.
೨. ಪೂರ್ವ ನಿಯೋಜಿತ ನಿಯಮಗಳನ್ನು ಅನುಸರಿಸಿ ಬರೆದವುಗಳು.
೩. ಭಾಷಾಶಾಸ್ತ್ರಜ್ಞರಿಂದ ನಿರ್ಮಿತವಾದವುಗಳು.

**ದೋಷಗಳು :**

ಪಾಶ್ಚಾತ್ಯ ಪಾರಿಭಾಷಿಕ ಶಬ್ದಗಳನ್ನು ಭಾಷಾಂತರಿಸಲು ಹೊರಟದ್ದು. ಈ ಅಂಶವು ಡಾ॥ ರಘುವೀರರವರ ಶಬ್ದಕೋಶದಲ್ಲಿ ಹೆಚ್ಚಾಗಿದೆ. ಅವರು ಪ್ರತಿಯೊಂದು ಶಬ್ದವನ್ನು ಸಂಸ್ಕೃತಕ್ಕೆ ಇಳಿಸಿದ್ದಾರೆ. ಹೀಗೆ ಅವರು ಪ್ರಯತ್ನಪಟ್ಟು ಸಂಸ್ಕೃತಕ್ಕೆ ಇಳಿಸಿದ ಶಬ್ದಗಳ ಸಂಖ್ಯೆಯಾದರೂ ಎಷ್ಟು? ಅಗಾಧವಾದ ಶಬ್ದಸಾಗರದೊಡನೆ ತುಲನೆಮಾಡಿ ನೋಡಿದಾಗ ತೀರ ಅಲ್ಪವೆಂದುಹೇಳಬಹುದು. ಈಗಾಗಲೇ ಅಸ್ತಿತ್ವದಲ್ಲಿರುವ ಮುಕ್ಕಾಲು ಕೋಟಿ ಹಾಗೂ ಪ್ರತಿದಿವಸವೂ ನಿರ್ಮಿತವಾಗಿ

ಬೆಳೆಯುತ್ತಿರುವ ಪಾರಿಭಾಷಿಕ ಶಬ್ದಗಳಿಗೆ ಪ್ರತಿ ಸಂಸ್ಕೃತ ಶಬ್ದಗಳನ್ನು ತಯಾರು ಮಾಡುವುದಂತೂ ಅಸಾಧ್ಯವಾದ ಕೆಲಸವೇ ಸರಿ. ಅಂತರ ರಾಷ್ಟ್ರೀಯ ಪಾರಿಭಾಷಿಕ ಶಬ್ದಗಳನ್ನು ಗ್ರೀಕ ಲ್ಯಾಟಿನ್ ಶಬ್ದಗಳ ರೂಪದಲ್ಲಿ (ಇಂಗ್ಲಿಷಿನಲ್ಲಿ ಪ್ರಚಾರದಲ್ಲಿರುವಂತೆ, ಇಂಗ್ಲಿಷಿನ ಪರಿಚಯು ನಮಗೆ ಈಗಾಗಲೇ ಇರುವದರಿಂದ) ಇಲ್ಲವೆ ಸ್ವಲ್ಪ ಉಚ್ಚಾರದ ಬದಲಾವಣೆಯೊಂದಿಗೆ ತೆಗೆದುಕೊಳ್ಳಬೇಕಾಗಿತ್ತು.

### ಪಾರಿಭಾಷಿಕ ಶಬ್ದಗಳನ್ನು ಒದಗಿಸುವ ರಾಜಮಾರ್ಗ

ನಮ್ಮ ಭಾಷೆ ಪರಿಪೂರ್ಣ ಭಾಷೆ, ಅದರ ಪವಿತ್ರತೆಗೆ ಪ್ರತಿಷ್ಠೆಗೆ ಪರಭಾಷೆಗಳಿಂದ ಶಬ್ದಗಳನ್ನು ತೆಗೆದುಕೊಂಡರೆ ಕುಂದು ಉಂಟಾಗುವುದೆಂಬುದು ಒಂದು ತಪ್ಪು ಕಲ್ಪನೆ. ಕೆಲವು ಶಬ್ದಗಳನ್ನು ತೆಗೆದುಕೊಂಡ ಮಾತ್ರದಿಂದ ಭಾಷಾ ಪವಿತ್ರತೆಯು ತೊಳೆದು ಹೋಗುವುದಿಲ್ಲ. ಒಂದು ಭಾಷೆಯು ಇನ್ನೊಂದು ಭಾಷೆಯ ಸಂಪರ್ಕದಿಂದಲೇ ಬೆಳೆದು ಬರುತ್ತದೆ. ಇಂಗ್ಲಿಷ ಭಾಷೆಯು ಅನೇಕ ಪರಭಾಷೆಗಳಿಂದ ಶಬ್ದಸಂಪತ್ತನ್ನು ತೆಗೆದುಕೊಂಡು ಜಗತ್ತಿನಲ್ಲಿ ಅತಿ ಶ್ರೇಷ್ಠ ಭಾಷೆಯಾಗಿ ಪರಿಣಮಿಸಿದೆ. ಸಂಸ್ಕೃತ ಭಾಷೆಯಾದರೂ ಮೊದಲಿನಿಂದ ಪರ ಭಾಷೆಯ ಶಬ್ದಗಳನ್ನು ತೆಗೆದುಕೊಂಡು ತನ್ನದನ್ನಾಗಿ ಮಾಡಿಕೊಂಡಿದೆ. ಶಂಕರ ಬಾಲಕೃಷ್ಣ ದೀಕ್ಷಿತರು 'ಗ್ರೀಕರಿಂದ ತೆಗೆದುಕೊಂಡ ಜ್ಯೋತಿಃಶಾಸ್ತ್ರದ ವಿಚಾರಗಳು' (ಹಾಗೂ ಶಬ್ದಗಳು) ಎಂಬ ವಿಷಯವನ್ನು ಕುರಿತು ತಮ್ಮ 'ಭಾರತೀಯ ಜ್ಯೋತಿಃ ಶಾಸ್ತ್ರ' ಎಂಬ ಗ್ರಂಥದ ಉಪಸಂಹಾರ ಪ್ರಕರಣದಲ್ಲಿ ( *p. 503* ) ಸವಿಸ್ತಾರವಾಗಿ ವಿವರಿಸಿದ್ದಾರೆ. ವರಹಮಿಹರನ ಬೃಹಜ್ಜಾತಕದಲ್ಲಿ ಅನೇಕ ಜ್ಯೋತಿಃಶಾಸ್ತ್ರದ ಗ್ರೀಕ ಪಾರಿಭಾಷಿಕ ಶಬ್ದಗಳು ಬಂದಿರುವುದು ಎಲ್ಲರಿಗೂ ಗೊತ್ತಿದ್ದ ಮಾತು. ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಡಲಾಗಿದೆ.

| | | | | |
|---|---|---|---|---|
| ಕೇಂದ್ರ | ಗ್ರೀಕ್ | Ketron | ಇಂಗ್ಲಿಷ್ | Centre |
| ಕ್ರೀಯ (ಮೇಷ) | ,, | Krois | ,, | Ram |
| ಲೀಯ (ಸಿಂಹ) | ,, | Leon | ,, | Lion |
| ಪಾಥೋನ (ಕನ್ಯಾ) | ,, | Prathenos | ,, | Maiden |
| ಜೂತ (ತುಲಾ) | ,, | Zugon | ,, | Balarice |
| ಚೇತೂಷ (ಮೀನ) | ,, | Ketos | ,, | Fish |

ಮೇಲ್ಕಾಣಿಸಿದ ಗ್ರೀಕ ಶಬ್ದಗಳಿಗೆ ಸಮಾನಾರ್ಥಕ ಸಂಸ್ಕೃತ ಶಬ್ದಗಳಿದ್ದರೂ ಬೃಹಜ್ಜಾತಕಕಾರರು ಗ್ರೀಕ ಪಾರಿಭಾಷಿಕ ಶಬ್ದಗಳನ್ನು ಸ್ವಲ್ಪ ಉಚ್ಚಾರ ಬದಲಾವಣೆಯೊಂದಿಗೆ ಸ್ವೀಕರಿಸಲು ಹಿಂದೆ ಮುಂದೆ ನೋಡಲಿಲ್ಲ. ಒಳ್ಳೇದನ್ನು ಮ್ಲೇಂಛ

ರಿಂದಲೂ ತೆಗೆದುಕೊಳ್ಳಲು ಅಡ್ಡಿ ಇಲ್ಲ ಎಂಬ ಉದಾತ್ತ ವಿಚಾರದವರು ಅವರು. ಜ್ಞಾನ ಸಂಪಾದನೆ ಮಾಡುವಾಗ ಭಾಷಾದುರಭಿಮಾನವು ಉಪಯೋಗದ್ದಲ್ಲ. ಗ್ರೀಕ, ಲ್ಯಾಟಿನ್, ಇಂಗ್ಲಿಷ ಭಾಷೆಗಳು ನಮಗೇನೂ ಒಂದು ದೃಷ್ಟಿಯಿಂದ ಪರಕೀಯ ಭಾಷೆಗಳಾಗಲಾರವು. ಅವುಗಳ ಸಂಬಂಧ ಸಂಸ್ಕೃತಕ್ಕೆ ಇದೆ. ಅಂತರರಾಷ್ಟ್ರೀಯ ಗ್ರೀಕ ಲಾಟಿನ್ ಪಾರಿಭಾಷಿಕಶಬ್ದ (ಇಂಗ್ಲಿಷನಲ್ಲಿ ಪ್ರಚಾರದಲ್ಲಿರುವಂತೆ) ಗಳನ್ನು ಸ್ವೀಕರಿಸುವುದೆಂದರೆ ಸಂಸ್ಕೃತವನ್ನೇ ಗ್ರೀಕ ಲ್ಯಾಟಿನ್-ಇಂಗ್ಲಿಷ ರೂಪದಲ್ಲಿ ಸ್ವೀಕರಿಸಿದಂತೆ, ನಾವು—ಹಿಂದೀ ಪ್ರಚಾರದ ಕಟ್ಟಾ ಪ್ರೇಮಿಗಳೂ ಕೂಡ-ಸಂಸ್ಕೃತ ದೇವನಾಗರಿ ಅಂಕಿಗಳನ್ನು ಅರೆಬಿಕ್ ರೂಪದಲ್ಲಿ ಈಗಾಗಲೇ ಸ್ವೀಕರಿಸಿದಂತೆ.

ಕನ್ನಡ (ದ್ರಾವಿಡ) ಪುರಾತನ ಗ್ರಂಥಕಾರರಂತೂ ಅಖಿಲ ಹಿಂದೂಸ್ತಾನಕ್ಕೆ ಸಮಾನವಾದ ಪಾರಿಭಾಷಿಕ ಶಬ್ದಗಳನ್ನಲ್ಲದೆ ಅವಶ್ಯವಾದ ಸಾಮಾನ್ಯ ಶಬ್ದಗಳನ್ನೂ ಕೂಡ ಸ್ವಲ್ಪ ಉಚ್ಚಾರ ಬದಲಾವಣೆಯೊಂದಿಗೆ ತೆಗೆದುಕೊಂಡು ತಮ್ಮ ಶಬ್ದ ಸಂಗ್ರಹವನ್ನು ಬೆಳಸಿಕೊಂಡಿದ್ದಾರೆ. ವಿಜ್ಞಾನ, ಶಿಲ್ಪ, ಸಾಹಿತ್ಯಗಳ ಮೇಲಿನ ಕನ್ನಡ (ದ್ರಾವಿಡ) ಉದ್ಗ್ರಂಥಗಳು ಆಯಾ ಸಂಸ್ಕೃತ ಭಾಷಾಂತರ ಮಾತ್ರವಾಗಿವೆ. ತೋಳ್ಕಾಪ್ಪಿಯಂದಂತಹ ಪುರಾತನ ದ್ರಾವಿಡ ವ್ಯಾಕರಣ ಗ್ರಂಥದಲ್ಲಿ ಅನೇಕ ತತ್ಸಮ ಹಾಗೂ ತದ್ಭವ ಪಾರಿಭಾಷಿಕ ಶಬ್ದಗಳನ್ನು ಕಾಣಬಹುದು. ಅವುಗಳಲ್ಲಿ ಮುಖ್ಯವಾದವುಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ತೆಯ್‌ವಂ (ದೈವಂ) ಕೌಲಂ ಉಲೋಕಂ (ಲೋಕಂ) ತೂತ (ದೂತ) ಉಪಮಾ, ನಾಟಕಂ ಮಹಾರಾಯಂ (ಮಹಾರಾಯ) ತಾಪಸಂ ಹವಿ ಅಮರ, ಕರ್ಮ, ಮಂತ್ರಂ ಇತ್ಯಾದಿ—ಇವೆಲ್ಲ ಸಾಂಸ್ಕೃತಿಕ ಸಾಮಾಜಿಕ ಧಾರ್ಮಿಕ ಹಾಗೂ ರಾಜಕೀಯ ಪಾರಿಭಾಷಿಕ ಶಬ್ದಗಳು. ಕನ್ನಡದಲ್ಲಿ ಉದ್ಗ್ರಂಥಗಳಾದ ಕವಿರಾಜಮಾರ್ಗ, ಕಾವ್ಯಾವಲೋಕನ, ಛಂದೋಂಬುಧಿ ಮೊದಲಾದವುಗಳಲ್ಲಿಯೂ ಅನೇಕ ಪಾರಿಭಾಷಿಕ ಶಬ್ದಗಳನ್ನೂ ತತ್ಸಮ ತದ್ಭವ ಸಮಸಂಸ್ಕೃತ ರೂಪಗಳಲ್ಲಿ ಸ್ವೀಕರಿಸಲಾಗಿದೆ. ಆಧುನಿಕ ಕನ್ನಡ ಗ್ರಂಥಕಾರರು ಭಾರತದ ಇತರ ಭಾಷೆಯ ಗ್ರಂಥಕಾರರಂತೆ ಹಾಗೂ ರಘುವೀರ ಮೊದಲಾದ ಆಧುನಿಕ ಶಬ್ದಕೋಶಕಾರರೂ ಪಾರಿಭಾಷಿಕ ಶಬ್ದಗಳನ್ನು ನಿರ್ಮಿಸಲು ಸಂಸ್ಕೃತವನ್ನು ಅವಲಂಬಿಸಿರುತ್ತಾರೆ ಅಷ್ಟೇ. ಯಾವ ಭಾಷೆಯಿಂದಾದರೂ ಶಬ್ದವನ್ನು ಆರಿಸಿಕೊಳ್ಳಬೇಕು. ಯಾವ ರೀತಿಯಿಂದಾದರೂ ಶಬ್ದವನ್ನು ಆರಿಸಿಕೊಳ್ಳಬೇಕು. Beg, Borrow or/and Steal ಎಂಬ ತ್ರಿವಿಧ ರೀತಿಯಿಂದಲೂ ಶಬ್ದಗಳನ್ನು ಹೆಚ್ಚಿಸಿಕೊಳ್ಳಲು ಮೊದಲಿನಿಂದಲೂ ಪ್ರಯತ್ನಿಸಿದ್ದಾರೆ.

## ಪಾರಿಭಾಷಿಕ ಶಬ್ದಗಳ ಲಕ್ಷಣಗಳು

ಪ್ರತಿಯೊಂದು ಶಾಸ್ತ್ರವೂ ಒಂದು ತನ್ನದೇ ಆದ ಪಾರಿಭಾಷಿಕ ಶಬ್ದಸಂಗ್ರಹವನ್ನು ನಿರ್ಮಿಸಿಕೊಂಡಿರುತ್ತದೆ. ನ್ಯಾಯಶಾಸ್ತ್ರದ ಭಾಷೆಯು ಸಾಹಿತ್ಯದ ಭಾಷೆ (ಕಾವ್ಯದ ಭಾಷೆ) ಯಿಂದ ತೀರ ಭಿನ್ನವಾಗಿರುತ್ತದೆ. ಗಣಿತಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರ, ಪ್ರಾಣಿಶಾಸ್ತ್ರ, ವೈದ್ಯಶಾಸ್ತ್ರ ವಸ್ತುಶಾಸ್ತ್ರಗಳಿಗೂ ಒಂದು ವಿಶಿಷ್ಟ ಭಾಷೆಯಿದ್ದು ಇದನ್ನು ಆಯಾ ಶಾಸ್ತ್ರಜ್ಞರೇ ಬಲ್ಲರು. ಯಾವನಾವರೂ ಗಣಿತಶಾಸ್ತ್ರದ ಭಾಷೆಯಲ್ಲಿ ಮಾತ ನಾಡ ಹತ್ತಿದರೆ, ಉಳಿದವರಿಗೆ ಅರ್ಥವೇ ಆಗುವುದಿಲ್ಲ. ಡಾ|| ಜಾನಸನ್‌ರ ಬಗ್ಗೆ ಒಂದು ಮಾತು ಹೇಳುತ್ತಾರೆ. ಕುದುರೆಯ ಮೇಲಿಂದ ಮನುಷ್ಯನು ಬಿದ್ದನು ಎಂಬು ದನ್ನು ಅವರು Perpendicularity fell into horizontality ಎಂದು ಹೇಳುತ್ತಿದ್ದರಂತೆ. ನ್ಯಾಯಶಾಸ್ತ್ರದ ಯಾವಚ್ಛಿನ್ನ ಯಾವಚ್ಛೇದಕ ಭಾಷೆಯಲ್ಲಿ ಮಾತ ನಾಡಹತ್ತಿದರೆ ಯಾರಿಗೆ ಅರ್ಥವಾಗುವುದು? ಪ್ರತಿಯೊಂದು ಶಾಸ್ತ್ರವು ತನ್ನದೇ ಆದ ಪಾರಿಭಾಷಿಕ ಶಬ್ದಗಳನ್ನು ಬೆಳಸಿಕೊಂಡು ಬಂದಿರುತ್ತದೆ. ನಮ್ಮ ಪೂರ್ವಜರು ತಮ್ಮ ಗ್ರಂಥಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ತಾವು ಉಪಯೋಗಿಸಿದ ಪಾರಿ ಭಾಷಿಕ ಶಬ್ದಗಳನ್ನು ವಿವರಿಸಿ ತಮ್ಮ ಗ್ರಂಥಗಳನ್ನು ಪ್ರಾರಂಭಿಸುವ ರೂಢಿಯ ನ್ನಿಟ್ಟುಕೊಂಡಿದ್ದರು. "ಇತಿ ಪಾರಿಭಾಷಾ ಪ್ರಕರಣಂ" ಸಿದ್ಧಾಂತ ಕೌಮುದಿ ಎಂಬ ಗ್ರಂಥದಲ್ಲಿ ಇಂತಹ ಒಂದು ಪರಿಭಾಷಾ ಪ್ರಕರಣವಿದೆ. ಮಹಾಭಾಷ್ಯದಲ್ಲಿಯೂ "ಇತೋ ಗುಣಬೃದ್ಧಿತ್ಯಾದಿಕಾ ಪರಿಭಾಷಾ" ಎಂದು ಕೆಲವು ಪರಿಭಾಷೆಗಳನ್ನು ಹೇಳಿದೆ. ವಿಶಿಷ್ಟ ಶಾಸ್ತ್ರಗಳಲ್ಲಿ ವಿಶಿಷ್ಟ ಪಾರಿಭಾಷಿಕ ಶಬ್ದಗಳು ಇರುವುದರಿಂದ ಅವುಗಳನ್ನು ಭಾಷಾಂತರಿಸಿ ಅವುಗಳ ಪೂರ್ಣ ಅರ್ಥವನ್ನು ಅನ್ಯ ಭಾಷೆಗಳಲ್ಲಿ ತರು ವುದು ಸಾಧ್ಯವಿಲ್ಲ. ಇಂಗ್ಲಿಷ ಭಾಷೆಯಲ್ಲಿ ಸಂಸ್ಕೃತ 'ಆತ್ಮಾ' ಶಬ್ದಕ್ಕೆ ಸಮಾನ ವಾದದ್ದು 'Self' ಎಂಬ ಶಬ್ದ ಆಗಲಾರದು. ಮೂಲ ಶಿಕ್ಷಣದಲ್ಲಿ ಪ್ರಚಾರದಲ್ಲಿರುವ 'ಸಮವಾಯ' ಶಬ್ದವನ್ನು 'Correlation' ಎಂದು ಭಾಷಾಂತರಿಸಿದ್ದರಿಂದ ಅನೇಕ ತಪ್ಪು ಕಲ್ಪನೆಗಳ ಉಂಟಾಗಿವೆ. ಹೀಗೆ ಅನೇಕ ಉದಾಹರಣೆಗಳನ್ನು ಕೊಡಬಹುದು. ನಮ್ಮ ವಿಶಿಷ್ಟ ಶಾಸ್ತ್ರಗಳ, ವೇದಾಂತ ಮೊದಲಾದುವುಗಳ. ಅರ್ಥ ಪೂರ್ಣವಾಗಿ ತಿಳಿದುಬರಬೇಕಾದರೆ ಅಲ್ಲಿ ಉಪಯುಕ್ತವಾದ ಪಾರಿಭಾಷಿಕ ಶಬ್ದಗಳನ್ನೆ ಪಾಶ್ಚಾತ್ಯರೂ ಸ್ವೀಕರಿಸುವುದು ಅವಶ್ಯ. ಪಾಶ್ಚಿಮಾತ್ಯರ ಶಾಸ್ತ್ರಗಳ ಅರ್ಥ ಪೂರ್ಣ ವಾಗಿ ತಿಳಿಯಬೇಕಾದರೆ ಅವರ ಪಾರಿಭಾಷಿಕ ಶಬ್ದಗಳನ್ನು ಸ್ವೀಕರಿಸುವುದು ವಿಹಿತ. ಪಾಶ್ಚಿಮಾತ್ಯ ದೇಶದಲ್ಲಿ ನಮ್ಮ ಪೂರ್ವಜರಿಗೆ ಗೊತ್ತಿಲ್ಲದ ಅನೇಕ ಶಾಸ್ತ್ರಗಳು ಹುಟ್ಟಿವೆಯಲ್ಲದೆ ಅವರಿಗೆ ಗೊತ್ತಿದ್ದ ಶಾಸ್ತ್ರಗಳಲ್ಲಿ ಬಹಳ ಪ್ರಗತಿಯಾಗಿದೆಯಷ್ಟೆ. ನಮಗೆ ಅವುಗಳ ಅರ್ಥ ಸರಿಯಾಗಿ ತಿಳಿಯಬೇಕಾದರೆ, ವಿಶಿಷ್ಟಶಾಸ್ತ್ರಗಳಲ್ಲಿಯ

ವಿಶಿಷ್ಟ ಪಾರಿಭಾಷಿಕ ಶಬ್ದಗಳನ್ನು ಸ್ವೀಕರಿಸಬೇಕು. ಡಾ॥ ರಘುವೀರರಂತೆ ಭಾಷಾಂತರಿಸುತ್ತ ಕೂಡಬಾರದು. ಅವುಗಳನ್ನು ಇದ್ದಂತೆ, ಇಲ್ಲವೆ ಸ್ವಲ್ಪ ಉಚ್ಚಾರ ಬದಲಾವಣೆಯೊಂದಿಗೆ ಸ್ವೀಕರಿಸಿ ಅವಶ್ಯವಿದ್ದಲ್ಲಿ ಅವುಗಳ ಅರ್ಥವನ್ನು ಟಿಪ್ಪಣಿ ರೂಪದಲ್ಲಿ ವಿವರಿಸಲು ಅಡ್ಡಿಯಿಲ್ಲ. ಎಲ್ಲ ಪಾಶ್ಚಾತ್ಯ ಪಾರಿಭಾಷಿಕ ಶಬ್ದಗಳನ್ನು ಸಂಸ್ಕೃತಕ್ಕೆ ಇಳಿಸಲು ಪ್ರಯತ್ನಿಸಿದ ಡಾ॥ ರಘುವೀರರವರ ಪ್ರಯತ್ನ ಅದ್ಭುತವಾದದ್ದೆಂಬುದು ನಿಜ. ಡಾ॥ ರಘುವೀರರವರು ಮಾಡಿದ ಕೆಲಸ ರಘುವೀರರಿಗೇ ಸಾಧ್ಯ. ಅವರ ಪಾರಿಭಾಷಿಕ ಶಬ್ದಗಳು ಪಾಂಡಿತ್ಯದ ನಿದರ್ಶನಗಳಾಗಿವೆ. ಅವುಗಳಲ್ಲಿ ಪಾರಿಭಾಷಿಕ ಶಬ್ದಗಳಲ್ಲಿ ಇರಬೇಕಾದ 'ಸಜೀವತೆ' ಇಲ್ಲ. ಹಿಂದಿಯಲ್ಲಿ ಪಾರಿಭಾಷಿಕ ಶಬ್ದಗಳನ್ನು ತಯಾರಿಸುವುದರಲ್ಲಿ ಸ್ವಲ್ಪ ಸಜೀವತೆ ಕಂಡುಬರುತ್ತದೆ. ಜನಜೀವನದಲ್ಲಿ ಪ್ರಚಾರದಲ್ಲಿರುವ ಶಬ್ದಗಳನ್ನು ತೆಗೆದುಕೊಂಡಿದ್ದಾರೆ, ಆ ಶಬ್ದಕೋಶಕಾರರು. ಶಬ್ದಗಳು ಆವಶ್ಯಕತೆಗೆ ಅನುಸರಿಸಿ ಪ್ರಚಾರದಲ್ಲಿ ಬರಬೇಕೇ ಹೊರತು ಕೃತ್ರಿಮ ಶಬ್ದಕೋಶ ನಿರ್ಮಾಣಗಳಿಂದಲ್ಲ. ಮೊದಲು ಶಬ್ದಗಳ ಆವಿರ್ಭಾವ ಜೀವನಾವಶ್ಯಕತೆಗಳಿಗನುಸರಿಸಿ, ಆಮೇಲೆ ಅವುಗಳ ಸಂಗ್ರಹ ಶಬ್ದಕೋಶರೂಪದಲ್ಲಿ. ಇದು ಸರಿಯಾದ ಕ್ರಮ. ಡಾ॥ ರಘುವೀರರವರ ಶಾಸ್ತ್ರೀಯ ದೃಷ್ಟಿ ಹಾಗೂ ಹಿಂದಿಯಲ್ಲಿ ಪಾರಿಭಾಷಿಕ ಶಬ್ದಗಳ ಸಜೀವತೆ ನಮಗೆ ಮಾರ್ಗದರ್ಶಕಗಳಾಗಿವೆ. ಹಾಗಾದರೆ ಪಾರಿಭಾಷಿಕ ಶಬ್ದಗಳಲ್ಲಿ ಇರಬೇಕಾದ ಗುಣಗಳು ಯಾವುವು ಎಂಬುದನ್ನು ತಿಳಿಯಬೇಕಾದುದು ಅವಶ್ಯ. ಪಾರಿಭಾಷಿಕ ಶಬ್ದಗಳಲ್ಲಿ ಸಜೀವತೆಯು ಅತ್ಯವಶ್ಯ. ಜನಜೀವನದಲ್ಲಿ ಪ್ರಚಲಿತವಿರುವ ಶಬ್ದಗಳನ್ನು ಪಾರಿಭಾಷಿಕ ಶಬ್ದಗಳನ್ನಾಗಿ ಸ್ವೀಕರಿಸುವಾಗ ಅಥವಾ ಪಾರಿಭಾಷಿಕ ಶಬ್ದಗಳ ಮಟ್ಟಕ್ಕೆ ಏರಿಸುವಾಗ ಕೆಳಗೆ ಕೊಟ್ಟ ಶ್ಲೋಕವನ್ನು ಅವಶ್ಯವಾಗಿ ಗಮನಿಸಬೇಕು. ಅದರಲ್ಲಿ ಪಾರಿಭಾಷಿಕ ಶಬ್ದಗಳಲ್ಲಿರಬೇಕಾದ ಅಂಶಗಳನ್ನು ಉಪಮಾನ ರೂಪದಲ್ಲಿ ಸ್ಪಷ್ಟಗೊಳಿಸಲಾಗಿದೆ.

> ಪರಿತಃ ಪ್ರಮಿತಾಕ್ಷರಾಣಿ ಸರ್ವಂ ವಿಷಯಂ ಪ್ರಾಪ್ತವತೀ ಗತಾ ಪ್ರತಿಷ್ಠಾಮ್ ।
> ನ ಖಲು ಪ್ರತಿಹನ್ಯಸೇ ಕದಾಚಿತ್ ಪರಿಭಾಷೇವ ಗರೀಯಸೀ ಯದಾಜ್ಞಾ ॥

೧. ಪಾರಿಭಾಷಿಕ ಶಬ್ದಗಳು ಪ್ರಮಿತಾಕರವುಳ್ಳವುಗಳಾಗಿರಬೇಕು. ಅಂದರೆ ಅವು ಚಿಕ್ಕ ಹಾಗೂ ಚೊಕ್ಕಟವಾಗಿರಬೇಕು.

೨. ಅವು ಎಲ್ಲ ಅರ್ಥಗಳನ್ನು ಗ್ರಹಿಸುವಂತಹವುಗಳಿರಬೇಕು—ಅಂದರೆ ಅವು ಅನ್ವರ್ಥಗಳಾಗಿರಬೇಕು.

೩. ಅವುಗಳ ಅರ್ಥಕ್ಕೆ ಚ್ಯುತಿಯು ಎಲ್ಲಿಯೂ ಬರಕೂಡದು.

೪. ಅವು ಪ್ರತಿಷ್ಠಿತವಾಗಿರಬೇಕು. ಅವು ಸಾಮಾನ್ಯ ಶಬ್ದಗಳಿಗಿಂತ ಸ್ವಲ್ಪ

ಹೆಚ್ಚು ಪರಿಣಾಮಕಾರಿಯಾಗುವಂತಹವುಗಳಿರಬೇಕು. ಪಾರಿಭಾಷಿಕ ಶಬ್ದಗಳು ನಾಮಪದಗಳೂ, ವಿಶೇಷಣಗಳೂ, ಕ್ರಿಯಾಪದಗಳೂ ಆಗಿರಬಹುದು. ಪಾರಿಭಾಷಿಕ ಶಬ್ದಗಳನ್ನು ನಿರ್ಮಿಸುವಾಗ ಶಕ್ಯವಿದ್ದಷ್ಟು ವ್ಯಾಕರಣ ನಿಯಮಗಳನ್ನು ಪಾಲಿಸಬೇಕು. ಅಲ್ಲದೆ ಅಚ್ಚುಕಟ್ಟುತನ, ಸಂಕ್ಷಿಪ್ತತೆ, ಉಚ್ಚಾರ ಸೌಲಭ್ಯತೆಗಳನ್ನು ಗಮನಿಸಬೇಕಲ್ಲದೆ ಅಂತರ್‌ರಾಜ್ಯ ಅಂತರ್‌ರಾಷ್ಟ್ರೀಯ ದೃಷ್ಟಿಯನ್ನು ನಮ್ಮ ಮುಂದೆ ಇಟ್ಟುಕೊಳ್ಳಬೇಕು. ಕರ್ನಾಟಕವು ಭಾರತದ ಒಂದು ಅಂಗ. ಭಾರತದ ಪ್ರತಿಯೊಂದು ರಾಜ್ಯದ ಕೂಡ ಅದು ಸಂಪರ್ಕವನ್ನಿಟ್ಟುಕೊಳ್ಳುವುದು ಅವಶ್ಯ. ಉಳಿದ ಭಾರತದ ರಾಜ್ಯಗಳು ಪಾರಿಭಾಷಿಕ ಶಬ್ದಗಳನ್ನು ಸ್ವೀಕರಿಸುವಾಗ ಸಂಸ್ಕೃತವನ್ನು ಅವಲಂಬಿಸುವಂತೆ ಕರ್ನಾಟಕವೂ ಕೂಡ ತನ್ನ ಶಬ್ದ ಸಂಪತ್ತನ್ನು ಹೆಚ್ಚಿಸಿಕೊಳ್ಳುವಾಗ ಸಂಸ್ಕೃತವನ್ನು ಅವಲಂಬಿಸುವುದು ವಿಹಿತ. ಅಂತರ್‌ರಾಷ್ಟ್ರೀಯ ದೃಷ್ಟಿಯನ್ನು ಇಟ್ಟುಕೊಂಡು ಅಂತರ್‌ರಾಷ್ಟ್ರೀಯ ಪಾರಿಭಾಷಿಕ ಶಬ್ದಗಳನ್ನು ತೆಗೆದುಕೊಂಡು ಅಂತರ್‌ರಾಷ್ಟ್ರೀಯ ಸಂಪರ್ಕವನ್ನು ಬೆಳಸಿಕೊಳ್ಳುವುದು ಅಷ್ಟೇ ಅವಶ್ಯ. ಕರ್ನಾಟಕವು ಅಂತರ್‌ರಾಷ್ಟ್ರೀಯ ಪಾರಿಭಾಷಿಕ ಶಬ್ದವನ್ನುಪಯೋಗಿಸಿ ತನ್ನ ಸಂಶೋಧನೆಯನ್ನು ನಡಸಿದ್ದಾದರೆ ತಾನು ಮಾಡಿದ ಸಂಶೋಧನೆಯ ಫಲಗಳನ್ನು ಇಡೀ ಜಗತ್ತಿಗೆ ಕಾಣಿಕೆಯಾಗಿ ಸಲ್ಲಿಸಬಹುದು. ಅಖಿಲ ಮಾನವ ಕುಲದ ಜ್ಞಾನಪ್ರಸಾರ ಕಾರ್ಯದಲ್ಲಿ ತನ್ನ ಪಾತ್ರವನ್ನು ಯೋಗ್ಯ ರೀತಿಯಿಂದ ವಹಿಸಲು ಸಮರ್ಥವಾಗುವುದು.

## ಸಿದ್ಧಾಂತಗಳು

ಮೇಲಿನ ವಿವೇಚನೆಯಿಂದ ಕನ್ನಡ ಭಾಷೆಗೆ ಪಾರಿಭಾಷಿಕ ಶಬ್ದಗಳನ್ನು ಒದಗಿಸುವ ಕೆಳಗಿನ ವಿಧಾನಗಳನ್ನು ಸಿದ್ಧಾಂತರೂಪವಾಗಿ ಹೇಳಬಹುದು.

i. ಅಂತರ್‌ರಾಷ್ಟ್ರೀಯ ಪಾರಿಭಾಷಿಕ ಶಬ್ದಗಳನ್ನು ಇದ್ದಕ್ಕಿದ್ದಂತೆ, ಅಂದರೆ ಗ್ರೀಕ ಲ್ಯಾಟಿನ್ ರೂಪದಲ್ಲಿ (ಇಂಗ್ಲಿಷದಲ್ಲಿ ಪ್ರಚಾರದಲ್ಲಿರುವಂತೆ) ಇಲ್ಲವೆ ಸ್ವಲ್ಪ ಉಚ್ಚಾರ ಬದಲಾವಣೆಯೊಂದಿಗೆ ಕನ್ನಡದಲ್ಲಿ ಸ್ವೀಕರಿಸಬೇಕು; ಭಾಷಾಂತರಿಸುತ್ತ ಕೂಡಬಾರದು. ಭಾಷಾಂತರಿಸುವುದು ವ್ಯರ್ಥ ಶ್ರಮ. ಏಕೆಂದರೆ ಭಾಷಾಂತರ ಮಾಡಿದ ಶಬ್ದಗಳ ಅರ್ಥ ಜನರಿಗೆ ಸರಿಯಾಗಿ ಆಗುವುದಿಲ್ಲ. ಅಸಂಖ್ಯಾತ ಶಬ್ದಗಳನ್ನು ಭಾಷಾಂತರಿಸುವುದು ಸಾಧ್ಯವಿಲ್ಲ. ಶಬ್ದಗಳನ್ನು ಗ್ರೀಕ ಲ್ಯಾಟಿನ್ ರೂಪದಲ್ಲಿ ಸ್ವೀಕರಿಸುವುದೆಂದರೆ ಸಂಸ್ಕೃತವನ್ನು ಗ್ರೀಕ ಲ್ಯಾಟಿನ್ ರೂಪದಲ್ಲಿ ಸ್ವೀಕರಿಸಿದಂತೆ. ಗ್ರೀಕ ಲ್ಯಾಟಿನ್ ಪಾರಿಭಾಷಿಕ ಶಬ್ದಗಳನ್ನು ಸ್ವೀಕರಿಸಿ ಅರ್ಥ ಸ್ಪಷ್ಟತೆಗಾಗಿ ಟಿಪ್ಪಣಿಯನ್ನು ಅವಶ್ಯ ಬಿದ್ದಲ್ಲಿ ಕೊಡಲು ಅಡ್ಡಿಯಿಲ್ಲ.

ii. ಹಳೆಯ ಶಾಸ್ತ್ರೀಯ ಪಾರಿಭಾಷಿಕ ಶಬ್ದಗಳು ಕನ್ನಡದ ಉದ್ಗ್ರಂಥ ಗಳಲ್ಲಿ ಉಪಲಬ್ಧವಿದ್ದರೆ ಅವು ಯಾವ ರೂಪದಲ್ಲೇ ಇರಲಿ—ತತ್ಸಮ ರೂಪದಲ್ಲಾ ಗಲೀ ದೇಶೀಯ ರೂಪದಲ್ಲಾಗಲೀ—ಅವುಗಳನ್ನು ಪುನರುಜ್ಜೀವನಗೊಳಿಸಿ ಪ್ರಚಾರ ದಲ್ಲಿ ತರಬೇಕು. ಕನ್ನಡ ಪುರಾತನ ಗ್ರಂಥಗಳಲ್ಲಿ ಇಂತಹ ಅನೇಕ ಶಬ್ದಗಳು ಉಪ ಲಬ್ಧವಿವೆ. ದೇಶೀಯ ರೂಪದಲ್ಲಿರುವ ಪಾರಿಭಾಷಿಕ ಶಬ್ದಗಳಲ್ಲಿ ಸಹಜತೆ ಹಾಗೂ ಸರಳತೆ ಇರುವುದು.

iii. ಕರ್ನಾಟಕದ ವಿವಿಧ ಕ್ಷೇತ್ರಗಳಲ್ಲಿ—ಶಿಕ್ಷಣ, ವೃತ್ತಪತ್ರ, ರಾಜಕೀಯ ಮೊದಲಾದ ರಂಗಗಳಲ್ಲಿ—ಬಳಕೆಯಲ್ಲಿರುವ ಶಬ್ದಗಳನ್ನು ಒಂದೆಡೆಗೆ ಕೂಡಿಸಿ ಅವು ಗಳಲ್ಲಿ ಹೆಚ್ಚು ಸಮಂಜಸವಾದವುಗಳನ್ನು ಆರಿಸಿ ಪ್ರಚಾರದಲ್ಲಿ ತರಬೇಕು.

iv. ಹಿಂದುಸ್ತಾನದ ಬೇರೆ ಬೇರೆ ರಾಜ್ಯಗಳಲ್ಲಿ ಈಗಾಗಲೇ ಪ್ರಚಾರದಲ್ಲಿ ಬಂದಿರುವ ಸಂಸ್ಕೃತ ಶಬ್ದಗಳಿಂದ ನಿರ್ಮಿತವಾದ ಪಾರಿಭಾಷಿಕ ಶಬ್ದಗಳನ್ನು ಪರಿ ಶೀಲಿಸಿ ಹೆಚ್ಚು ಅರ್ಥವತ್ತಾದವುಗಳನ್ನು ಕನ್ನಡದಲ್ಲಿ ಸ್ವೀಕರಿಸಿ ಪ್ರಚಾರದಲ್ಲಿ ತರಬೇಕು.

v. ಹೊಸ ಪಾರಿಭಾಷಿಕ ಶಬ್ದವನ್ನು ನಿರ್ಮಿಸುವುದಾದರೆ ಅಖಿಲ ಭಾರತ ದಲ್ಲಿ ಸಾಮಾನ್ಯವಾಗಿರುವ ತತ್ಸಮ ಶಬ್ದಗಳಿಂದ ಸಿದ್ಧಪಡಿಸಬೇಕು. ಅಂತಹ ಪಾರಿಭಾಷಿಕ ಶಬ್ದಗಳಿಗೆ ಸಮ ಸಂಸ್ಕೃತ ರೂಪಗಳನ್ನು ಕೊಡಬಹುದು. “ ಸಮ ಸಂಸ್ಕೃತೋಕ್ತಿಯಿಂದರಿದಲ್ತೆ ಕನ್ನಡಂ ”. ಮೇಲ್ಕಾಣಿಸಿದ ವಿಧಾನಗಳಿಂದ ತಯಾರಿ ಸಿದ ಶಬ್ದಗಳು ಕನ್ನಡ ಭಾಷೆಯ ಪಾರಿಭಾಷಿಕ ಶಬ್ದಗಳೂ ಅಹುದು, ಅಖಿಲ ಭಾರತದ ಎಲ್ಲ ಭಾಷೆಗಳ ಪಾರಿಭಾಷಿಕ ಶಬ್ದಗಳೂ ಆಗಬಹುದು. ಈ ಒಂದು ಅಂಶದಲ್ಲಿ “ ಹಿಂದಿಯಲ್ಲಿ ಪಾರಿಭಾಷಿಕ ಶಬ್ದಗಳು ” ಎಂಬುದನ್ನು ತಯಾರಿಸುವಾಗ ಕೇಂದ್ರ ಸರಕಾರವು ನಿಯಮಿಸಿದ ಸಮಿತಿಯು ಅನುಸರಿಸಿದ ಮಾರ್ಗ ಅನುಕರ ಣೀಯವಾಗಿದೆ.

— ಡಾ|| ವರದರಾಜ ಉಮರ್ಜಿ.

———

# ವಿಜ್ಞಾನದಲ್ಲಿ ಫೋಟೋಗ್ರಫಿ

ಬಿಂಬಗ್ರಾಹಕ ಕಾರ್ಯವನ್ನು ರೂಢಿಗೆ ತಂದುದು ಒಂದು ದೊಡ್ಡ ಕಥೆಯಾಗುತ್ತದೆ. ಬಿಂಬಗ್ರಾಹಕ ದ್ರಾವಣಗಳು, ವಿಕಾಸಕಗಳು, ಸ್ಥಿರಕಾರಿಗಳು, ಕ್ಯಾಮರಾಗಳು, ಇವೆಲ್ಲವೂ ಕಾಲಕ್ರಮೇಣ ಅಭಿವೃದ್ಧಿಹೊಂದಿವೆ. ಕ್ಯಾಮರಾ ತಯಾರಿಸುವವರು ಈಗ "ಗುಂಡಿಯನ್ನು ಒತ್ತಿ ಉಳಿದದ್ದನ್ನು ನಮಗೆ ಬಿಡಿ" ಎಂದು ಹೇಳಿಕೊಳ್ಳುವಷ್ಟು ಮುನ್ನಡೆಯನ್ನು ನಾವು ಕಾಣಬಹುದು. ನಿಶ್ಚಲ ಚಿತ್ರಗಳ ರೂಪದಲ್ಲಿಯೇ ಆಗಲಿ, ಚಲನಚಿತ್ರಗಳ ರೂಪದಲ್ಲಿಯೇ ಆಗಲಿ, ಸಾರ್ವಜನಿಕರಿಗೆ ಜ್ಞಾನ ಹಾಗೂ ಮನೋರಂಜನೆಗಳನ್ನು ಒದಗಿಸುತ್ತಿರುವ ಜನಪ್ರಿಯ ಸಾಧನ ಫೋಟೋಗ್ರಫಿ. ಇಷ್ಟೇ ಅಲ್ಲದೆ, ವಿಜ್ಞಾನಿಯ ವೀಕ್ಷಣೆಯ ಸಾಧನವಾಗಿ ಫೋಟೋಗ್ರಫಿಯು ಬಹು ಮುಖ್ಯ ಪಾತ್ರವನ್ನು ವಹಿಸುತ್ತದೆ. ವಿಜ್ಞಾನದಲ್ಲಿ, ಸೂಕ್ಷ್ಮವಾದ ವೀಕ್ಷಣೆಯ ಆವಶ್ಯಕತೆಯನ್ನು ನಾವು ಅರಿತರೆ, ವಿಜ್ಞಾನದಲ್ಲಿ ಫೋಟೋಗ್ರಫಿಯ ಮಹತ್ವವನ್ನು ಸುಲಭವಾಗಿ ಊಹಿಸಬಹುದು.

ಫೋಟೋಗ್ರಫಿಯ ಮೂಲಕಾರ್ಯಗಳಾದ ಬಿಂಬಗ್ರಹಣ, ವಿಕಾಸನ, ಸ್ಥಿರಪಡಿಸುವಿಕೆ, ಮುದ್ರಣ ಇವುಗಳ ವಿಷಯಗಳನ್ನು ಹೆಚ್ಚು ಪರಿಶೀಲಿಸದಿದ್ದರೂ, ಫೋಟೋಗ್ರಫಿಗೂ, ನಮ್ಮ ಕಣ್ಣಿನ ವೀಕ್ಷಣೆಗೂ ಇರುವ ಒಂದು ಮುಖ್ಯವಾದ ಅಂತರವನ್ನು ಗಮನಿಸುವುದು ಅಗತ್ಯ. ಬಿಂಬಗ್ರಾಹಕ ಕಾರ್ಯಕ್ಕೆ ದೃಗ್ಗೋಚರವಾದ ಬೆಳಕನ್ನೇ ಬಳಸಬೇಕೆಂಬ ಅಡ್ಡಿಯೇನಿಲ್ಲ. ಉಳಿದ ಅಗೋಚರವಾದ ಕಿರಣಗಳೂ (ಉದಾ: ಕ್ಷ-ಕಿರಣಗಳು, ನೀಲಾತೀತ ಬೆಳಕು, ರಕ್ತಾತೀತ ಬೆಳಕು, ಇತ್ಯಾದಿ) ಪಟಲದ ಮೇಲೆ ಗುಪ್ತ ಪ್ರತಿಬಿಂಬವನ್ನು ಉಂಟುಮಾಡಬಲ್ಲವು. " ಕಣ್ಣು ಕಾಣದ್ದನ್ನು ಕ್ಯಾಮರಾ ಕಂಡಿತು " ಎಂದು ಬೇಕಾದರೂ ಹೇಳಬಹುದು.

## ವಿಜ್ಞಾನದಲ್ಲಿ ಫೋಟೋಗ್ರಫಿಯ ಬಳಕೆ

ವಿಜ್ಞಾನದ ವಿವಿಧ ಶಾಖೆಗಳಲ್ಲಿ ಫೋಟೋಗ್ರಫಿಯ ಬಳಕೆಗಳೆಲ್ಲವನ್ನೂ ಪರಿಶೀಲಿಸುವುದು ಸಾಧ್ಯವಲ್ಲದಿದ್ದರೂ, ಈ ಬಳಕೆಯ ಒಂದು ಸ್ಥೂಲ ಚಿತ್ರವನ್ನು ನಾವು ಕಾಣಬಹುದು.

ಬೆಳಕು ಒಂದು ಪಟ್ಟಕದ ಮೂಲಕ ಹಾದುಹೋದರೆ, ಪಟಲವೊಂದರ ಮೇಲೆ ವರ್ಣಪಟಲವನ್ನು (ಕಾಮನಬಿಲ್ಲಿನಲ್ಲಿರುವ ಬಣ್ಣಗಳ ಸಾಲು) ಉಂಟು

ಮಾಡುತ್ತದೆ ಎಂದು ನಮಗೆ ತಿಳಿದಿದೆ. (ಚಿತ್ರ ೧.) ಬೆಳಕಿನ ಆಕಾರವು ಬದಲಾದಂತೆಲ್ಲಾ ವರ್ಣಪಟಲದ ಸ್ವರೂಪವೂ ಬದಲಾಗುತ್ತದೆ. ಮೊದಲಿನಿಂದಲೂ ವಿಜ್ಞಾನಿಗಳು ಈ ತೆರನಾದ ವರ್ಣಪಟಲಗಳ ವೀಕ್ಷಣೆಗಾಗಿ, ಫೋಟೋಗ್ರಫಿಯನ್ನು ಬಳಸುತ್ತ ಬಂದಿದ್ದಾರೆ. ಈ ವರ್ಣ ಪಟಲಗಳನ್ನು ಪರಿಶೀಲಿಸಿ, ಇವುಗಳನ್ನು ಉತ್ಪತ್ತಿ




ಚಿತ್ರ ೧.

ಮಾಡಿದ ಪದಾರ್ಥಗಳ ರಾಸಾಯನಿಕ ಸ್ವರೂಪವನ್ನು ಪತ್ತೆಹಚ್ಚುವ ಶಾಸ್ತ್ರವೇ ವರ್ಣ ಪಟಲ ಶಾಸ್ತ್ರ. ಈ ವಿಧವಾದ ಸಂಶೋಧನೆಗಳಲ್ಲಿ ನಮಗೆ ಮೊದಲು ಫ್ರಾನ್ ಹಾಫರ್ ಎಂಬಾತನ ಹೆಸರು ಕೇಳಿ ಬರುತ್ತದೆ. ಸೂರ್ಯನ ಬೆಳಕಿನಿಂದ ಉಂಟಾದ ವರ್ಣಪಟಲದಲ್ಲಿ ಹಲವು ಕಪ್ಪು ರೇಖೆಗಳನ್ನು ಆತ ಕಂಡ. ಆ ರೇಖೆಗಳನ್ನು ಈಗ 'ಫ್ರಾನ್ ಹಾಫರ್ ರೇಖೆಗಳು' ಎಂದು ಕರೆಯುತ್ತಾರೆ. ಈ ಕಪ್ಪು ರೇಖೆಗಳಿಗೂ ಭೂಮಿಯ ಮೇಲಿನ ಹಲವು ಧಾತುಗಳಿಂದ ಉಂಟಾದ ಪ್ರಕಾಶಮಾನವಾದ ರೇಖೆಗಳಿಗೂ ಹೋಲಿಕೆಯಿರುವುದನ್ನು ಆತ ತೋರಿಸಿದ. ಕಿರ್ಛಾಫ್ ಎಂಬ ಮತ್ತೊಬ್ಬ ವಿಜ್ಞಾನಿ, ಈ ಕಪ್ಪು ರೇಖೆಗಳು ಕಂಡುಬರುವುದಕ್ಕೆ ಕಾರಣವನ್ನು ಹೀಗೆ ವಿವರಿಸಿದ; ಸೂರ್ಯನ ಸುತ್ತಲಿನ ಆವರಣದಲ್ಲಿ ಅನೇಕ ಅನಿಲಗಳಿರಬೇಕು. ಪ್ರತಿಯೊಂದು ಅನಿಲವೂ ಸೂರ್ಯನಿಂದ ಹೊರಟ ಬೆಳಕಿನಿಂದ ತನಗೆ ವಿಶಿಷ್ಟವಾದ ಬೆಳಕನ್ನು ಹೀರಿಕೊಂಡಿರಬೇಕು. ಇದರ ಪರಿಣಾಮವಾಗಿ ಸೌರ ವರ್ಣಪಟಲದಲ್ಲಿ ಆ ಕಿರಣಗಳು ಮೂಡಬೇಕಾಗಿದ್ದ ಸ್ಥಾನದಲ್ಲಿ ಈಗ ಕಪ್ಪು ರೇಖೆಗಳು ಕಂಡುಬರುತ್ತವೆ. ಈ ರೀತಿ ಸೂರ್ಯನ ಆವರಣದಲ್ಲಿರಬಹುದಾದ ವಸ್ತುಗಳನ್ನು ವಿಜ್ಞಾನಿಗಳು ಪಟ್ಟಿ ಮಾಡಿದ್ದಾರೆ.

ಖಗೋಳಶಾಸ್ತ್ರ ಹಾಗೂ ಭೌತಶಾಸ್ತ್ರಗಳ ಮಧುರ ಮಿಳನದಿಂದ ವಿಜ್ಞಾನದ ಒಂದು ಹೊಸ ಶಾಖೆಯೇ ಹುಟ್ಟಿಕೊಂಡಿದೆ. ಇದನ್ನು ಖಭೌತಶಾಸ್ತ್ರ ಎನ್ನುತ್ತಾರೆ. ಈ ಶಾಖೆಯಲ್ಲಿನ ಪ್ರಖ್ಯಾತ ವಿಜ್ಞಾನಿಗಳಲ್ಲಿ ಭಾರತದ ಡಾ. ಚಂದ್ರಶೇಖರ್ ಅವರೂ ಒಬ್ಬರು. ಈ ಶಾಖೆಯಲ್ಲಿ ಪ್ರಸ್ತುತ ನಮ್ಮ ಆಸಕ್ತಿ ಇರುವುದಕ್ಕೆ ಕಾರಣ ಈ ಶಾಖೆ, ತನ್ನ ಬೆಳವಣಿಗೆಗೆ, ಬಹು ಭಾಗ, ಫೋಟೋಗ್ರಫಿಯನ್ನೇ ನಂಬಿಕೊಂಡಿರುವುದು. ಉದಾಹರಣೆಗೆ, ಮೇಘನಾದ್ ಸಹ ಅವರ ಸಂಶೋಧನೆಗಳನ್ನು ನಾವು ಪರಿಶೀಲಿಸ

ಬಹುದು. ಅವರ ವಾದವನ್ನು "ಸಹರವರ ಔಷ್ಣಿಕ ಅಯೋಣೀಕರಣವಾದ" ಎಂದು ಕರೆಯುತ್ತಾರೆ. ಎಲ್ಲಾ ಪರಮಾಣುಗಳಲ್ಲೂ ಹೆಚ್ಚೋ ಕಡಮೆಯೋ ಎಲೆಕ್ಟ್ರಾನ್‌ಗಳು ಹೊರವಲಯದಲ್ಲಿ ಪರಮಾಣುವಿನ ಬೀಜದ ಸುತ್ತಲೂ ತಿರುಗುವುವು ಎಂಬುದನ್ನು ನಾವು ಅರಿತಿದ್ದೇವೆ. ಕೆಲವು ಪರಮಾಣುಗಳು ತಮ್ಮಲ್ಲಿರುವ ಎಲೆಕ್ಟ್ರಾನ್‌ಗಳನ್ನು ಸುಲಭವಾಗಿ ಬಿಟ್ಟುಕೊಡುತ್ತವೆ. ಆದರೆ, ಮತ್ತೆ ಕೆಲವು ಪರಮಾಣುಗಳಿಗೋ ತಮ್ಮ ಎಲೆಕ್ಟ್ರಾನ್‌ಗಳ ಮೇಲೆ ತುಂಬ ಪ್ರೀತಿ. ಬಹಳ ಪ್ರಯಾಸದಿಂದ ಅವುಗಳನ್ನು ಕಳುಹಿಸುತ್ತವೆ. ಪರಮಾಣುಗಳು ಎಲೆಕ್ಟ್ರಾನ್‌ಗಳನ್ನು ಸುಲಭವಾಗಿ ಕಳುಹಿಸುತ್ತವೆಯೋ ಇಲ್ಲವೋ ಎಂಬುದನ್ನು ಒಂದು ಅಂಕ ತಿಳಿಸುತ್ತದೆ. ಇದನ್ನು ಅಯೋಣೀಕರಣ ಮಟ್ಟ ಎನ್ನೋಣವೇ? ಸಹ ಅವರು ನಡಸಿದ ಸಂಶೋಧನ ಈ ಅಯೋಣೀಕರಣ ಮಟ್ಟವನ್ನು ಕುರಿತದ್ದು. ಇದರಲ್ಲಿ ಫೋಟೋಗ್ರಫಿಗೆ ಪ್ರವೇಶವೆಲ್ಲಿ ಎಂದು ಸಂದೇಹ ಬರಬಹುದು. ಸೂರ್ಯನ ವರ್ಣಪಟಲದಲ್ಲಿ, ಅಯೋಣು ಸ್ಥಿತಿಯಲ್ಲಿರುವ ಪರಮಾಣುಗಳಿಂದ ಉಂಟಾದ ರೇಖೆಗಳ ಸ್ವರೂಪಕ್ಕೂ, ಭದ್ರಸ್ಥಿತಿಯಲ್ಲಿರುವ ಪರಮಾಣುಗಳಿಂದ ಉಂಟಾದ ರೇಖೆಗಳ ಸ್ವರೂಪಕ್ಕೂ ಒಂದು ನಿರ್ದಿಷ್ಟ ವ್ಯತ್ಯಾಸವಿದೆ. ಈ ರೇಖೆಗಳ ಸಾಪೇಕ್ಷ ಪ್ರಕಾಶವನ್ನು ಅಳೆದರೆ, ಆ ಅನಿಲದ ಅಯೋಣೀಕರಣ ಮಟ್ಟವನ್ನು ಗುಣಿಸುವುದು (Calculate) ಸಾಧ್ಯ. ಈ ಫಲಿತಾಂಶವನ್ನು ಬಳಸಿ, ಸೂರ್ಯನ ಅಥವಾ ತಾರೆಯ ಮೇಲ್ಮೈಯ ಉಷ್ಣಾಂಶವನ್ನು ನಿರ್ಧರಿಸಬಹುದು. ಈ ರೀತಿ ನಿರ್ಧರಿಸಲಾದ ಸೂರ್ಯನ ಉಷ್ಣಾಂಶ ಸುಮಾರು 6000° ಸೆಂಟಿಗ್ರೇಡ್. ಇಷ್ಟೇ ಅಲ್ಲದೆ, ಫ್ರಾನ್ ಹಾಫರ್ ರೇಖೆಗಳಲ್ಲಿನ ಕೆಲವು ವಿವರಿಸಲಸಾಧ್ಯವೆಂದು ಪರಗಣಿಸಲ್ಪಟ್ಟಿದ್ದ ವಿಷಯಗಳನ್ನು ಸಹ ಅವರ ವಾದವು ವಿವರಿಸುತ್ತದೆ.

ವರ್ಣಪಟಲಶಾಸ್ತ್ರದ ಪ್ರಯೋಗಗಳು ಇನ್ನೂ ಅನೇಕವಿವೆ. ಉದಾಹರಣೆಗೆ, ಒಂದು ಆಕರದಿಂದ ಹೊರಟ ಬೆಳಕು, ಕಾಂತ ಕ್ಷೇತ್ರವೊಂದರ ಮೂಲಕ ಹಾದು ಹೋದರೆ, ನಮಗೆ ದೊರಕುವ ವರ್ಣಪಟಲ ಎಂಥಮ ಎಂಬುದನ್ನು ಜೀಮನ್ ಎಂಬ ವಿಜ್ಞಾನಿ ತೋರಿಸಿದ್ದಾನೆ. ನಾವು ಇಂದು ಪರಮಾಣು ರಚನೆಯ ಬಗ್ಗೆ ಹೊಂದಿರುವ ಅಭಿಪ್ರಾಯಗಳು ಸ್ಫುಟಗೊಳ್ಳುವುದಕ್ಕೆ ಈ ಸಂಶೋಧನೆಗಳೇ ಕಾರಣವೆಂದು ಹೇಳಬಹುದು. ವಿಶ್ವದ ಎಲ್ಲ ಧಾತುಗಳ ಪರಮಾಣುರಚನಾಸ್ವರೂಪವನ್ನು ಹೊಕ್ಕು ನೋಡುವುದಕ್ಕೆ, ವರ್ಣಪಟಲಶಾಸ್ತ್ರ ಬೀಗದ ಕೈಯಂತೆ ಎಂದು ಹೇಳಬಹುದು.

## ಸೂರ್ಯಗ್ರಹಣಗಳು

ಸೂರ್ಯನ ಪೂರ್ಣಗ್ರಹಣವಾಗುವ ಕಾಲ ಬಹಳ ಕಡಿಮೆ. ಈ ಕಾಲದಲ್ಲಿಯೇ ಸೂರ್ಯನ ಮಧ್ಯಭಾಗವಾದ "ಕಿರೀಟ" ನಮಗೆ ಕಾಣಬರುತ್ತದೆ.

ಬರಿಯ ಕಣ್ಣಿನಿಂದ ನೋಡುವ ಬದಲು, ಈ "ಕಿರೀಟ" ದ ಚಿತ್ರವನ್ನು ತೆಗೆದು, ಪರಿಶೀಲಿಸಿದರೆ, ನಮಗೆ ಅನೇಕ ವಿಷಯಗಳು ತಿಳಿದು ಬರುತ್ತವೆ.

1919 ರಲ್ಲಿ ವಿಜ್ಞಾನಿಗಳು ಸೂರ್ಯಗ್ರಹಣವನ್ನು ಬಹಳ ಕುತೂಹಲದಿಂದ ಇದಿರು ನೋಡುತ್ತಿದ್ದರು. ಕಾರಣವಿಷ್ಟೆ, ಆ ವೇಳೆಗೆ ಐನ್‌ಸ್ಟೈನನು ತನ್ನ ಗುರುತ್ವವಾದವನ್ನು ಪ್ರತಿಪಾದಿಸಿದ್ದನು. ಈ ವಾದದ ಪ್ರಕಾರ, ಸೂರ್ಯನ ಹತ್ತಿರ ಹಾದು ಹೋಗುವ ಒಂದು ಬೆಳಕಿನ ಕಿರಣವು, ತನಗೆ ಜಡತ್ವವಿದ್ದಿದ್ದರೆ ಹೇಗೆ ಸೂರ್ಯನ ಕಡೆಗೆ ಬಾಗುತ್ತಿತ್ತೋ, ಅದೇ ರೀತಿ ಈಗಲೂ ಬಾಗಬೇಕು. ಸೂರ್ಯಗ್ರಹಣ ಕಾಲದಲ್ಲಿ ಸೂರ್ಯನ ಸಮೀಪದಲ್ಲಿರುವ ತಾರೆಗಳ ಚಿತ್ರವನ್ನು ಯಾವ ಆತಂಕವೂ ಇಲ್ಲದೆ ತೆಗೆಯಬಹುದು. ಈ ರೀತಿ ತೆಗೆದ ಚಿತ್ರಗಳನ್ನು, ಸೂರ್ಯನು ದೂರ ಹೋದನಂತರ ತೆಗೆದ ಅದೇ ಭಾಗದ ಚಿತ್ರದೊಡನೆ ಹೋಲಿಸಿದರೆ, ಗ್ರಹಣಕಾಲದಲ್ಲಿ ತೆಗೆದ ಚಿತ್ರಗಳಲ್ಲಿ, ಸೂರ್ಯನ ಬಳಿ ಇರುವ ತಾರೆಗಳು, ಸೂರ್ಯನಿಂದ ದೂರವಿರುವ ತಾರೆಗಳಿಗಿಂತ ಹೆಚ್ಚು ಸ್ಥಾನ ಪಲ್ಲಟವನ್ನು ಹೊಂದಿರುವುದು ಕಂಡುಬರುತ್ತದೆ. 1919 ರ ಗ್ರಹಣದ ಕಾಲದಲ್ಲಿ ಮಾಡಿದ ಪ್ರಯೋಗಗಳು ಐನ್‌ಸ್ಟೈನನ ವಾದವನ್ನು ಸಮರ್ಥಿಸಿವೆ. ಅಲ್ಲಿಂದ ಈಚಿನ ಗ್ರಹಣಗಳಲ್ಲಿ ಇನ್ನೂ ಉತ್ತಮವಾದ ಪ್ರಯೋಗಸಾಧನಗಳನ್ನು ಬಳಸಲಾಗಿದೆ.

## ರಕ್ತಾತೀತ ಕಿರಣಗಳ ಬಳಕೆ

ಬರಿಯ ಕಣ್ಣಿನಿಂದ ಕಾಣಲಾರದ್ದನ್ನು, ಛಾಯಾ ಚಿತ್ರ ಫಲಕದ ಸಹಾಯದಿಂದ ವೀಕ್ಷಿಸಲು ಸಾಧ್ಯ ಎಂದು ಈ ಮೊದಲೇ ತಿಳಿದಿದ್ದೇವೆ. ನಾವು ಕಣ್ಣಿನಿಂದ ಕಾಣಬಹುದಾದ ಬೆಳಕು ನೀಲಿ, ಹಸಿರು, ಹಳದಿ, ಕೆಂಪು ಇವುಗಳ ಮಿಶ್ರಣವಾಗಿರುತ್ತದೆ. ಪಾರಿಭಾಷಿಕ ಭಾಷೆಯಲ್ಲಿ ಹೇಳುವುದಾದರೆ, ಬೆಳಕಿನ ತರಂಗ+ದೂರವು ಸುಮಾರು 4000 Å (ನೀಲಿ) ಯಿಂದ ಸುಮಾರು 7000 Å (ಕೆಂಪು) ವರೆಗೆ ಇದ್ದರೆ ಮಾತ್ರ ನಾವು ಅದನ್ನು ನೋಡಲು ಸಾಧ್ಯ. [ $1 Å - 10^{-8}$ ಸೆಂ. ಮೀ. ] 7000 Å ತರಂಗ ದೂರದಿಂದ ಆಚೆಗೆ ಇರುವ ಬೆಳಕನ್ನು ರಕ್ತಾತೀತ ಬೆಳಕು ಎಂದು ಹೇಳುತ್ತಾರೆ. ಇವುಗಳಿಗೂ ಉಷ್ಣ ಕಿರಣಗಳಿಗೂ ವ್ಯತ್ಯಾಸವೇನಿಲ್ಲ. ಅದೇ ರೀತಿ 4000 Å ಗಿಂತ ಕಡಿಮೆ ತರಂಗ+ದೂರದಿಂದ ಹೊರಟು ಅತಿ ಸಣ್ಣ ತರಂಗ ದೂರವುಳ್ಳ ಕ್ಷ-ಕಿರಣಗಳ ವರೆಗೆ ಛಾಯಾಚಿತ್ರ ಫಲಕವು ಪತ್ತೆಹಚ್ಚಬಲ್ಲದು. ಒಂದು ಆಶ್ಚರ್ಯಕರವಾದ ಸಂಗತಿ: ಪೂರ್ಣವಾಗಿ ಕತ್ತಲೆಗೊಳಿಸಿದ ಒಂದು ಕೊಠಡಿಯಲ್ಲಿ, ಒಂದು ಕಾದ ವಸ್ತುವನ್ನು ಇಟ್ಟು ಅದರಿಂದ ಹೊರಡುವ ಉಷ್ಣ ಕಿರಣಗಳ ಸಹಾಯದಿಂದಲೇ, ಆ ವಸ್ತುವಿನ ಚಿತ್ರವನ್ನು ತೆಗೆಯುವುದು ಸಾಧ್ಯವಾಗಿದೆ.

ರಕ್ತಾತೀತ ಬೆಳಕನ್ನು ಬಳಸಿದಾಗ ಒಂದು ಹೊಸ ನಮೂನೆಯ ಫಲಕವನ್ನು ಬಳಸಬೇಕಾಗುತ್ತದೆ. ಅಲ್ಲದೆ, ಬೆಳಕಿಗೆ ಅಡ್ಡವಾಗಿ ಒಂದು ಕೆಂಪು ಶೋಧಕವನ್ನು ಉಪಯೋಗಿಸುವುದರಿಂದ, ರಕ್ತಾತೀತ ಬೆಳಕು ಹೊರತು ಉಳಿದೆಲ್ಲ ಬೆಳಕೂ ಹೀರಲ್ಪಡುತ್ತದೆ.

ವರ್ಣಪಟಲ ಶಾಸ್ತ್ರದಲ್ಲಿ ರಕ್ತಾತೀತ ಬೆಳಕನ್ನು ಅನೇಕ ಕಾರ್ಯಗಳಿಗೆ ಬಳಸುತ್ತಾರೆ. ಆದರೆ, ನಮ್ಮನ್ನು ಕುತೂಹಲಗೊಳಿಸುವ ಸಂಗತಿಯೆಂದರೆ, ಗ್ರಹಗಳ ಆವರಣಕ್ಕೆ ಸಂಬಂಧಪಟ್ಟ ಅನ್ವೇಷಣೆಗಳು. ಶುಕ್ರ ಗ್ರಹದ ಆವರಣದಲ್ಲಿ ಇಂಗಾಲಾಮ್ಲ, ಗುರು ಹಾಗೂ ಶನಿ ಗ್ರಹಗಳ ಆವರಣಗಳಲ್ಲಿ ಅಮೋನಿಯಾ, ಹಾಗೂ ಯುರೇನಸ್ ಮತ್ತು ನೆಪ್ಚ್ಯೂನ್ ಗ್ರಹಗಳ ಆವರಣಗಳಲ್ಲಿ ಮಿಥೇನ್ ಅನಿಲವೂ ಇರುತ್ತವೆಂದು ವಿಜ್ಞಾನಿಗಳು ತೋರಿಸಿದ್ದಾರೆ.

ಅನೇಕ ವೇಳೆ, ಆಕಾಶದಲ್ಲಿ ಅತಿ ಪ್ರಕಾಶದಿಂದ ವೀಕ್ಷಣೆಗೆ ತೊಂದರೆಯಾಗುತ್ತದೆ. ಆದರೆ ರಕ್ತಾತೀತ ಬೆಳಕು ಪ್ರಕಾಶಮಯವಾದ ಆವರಣವನ್ನು ಹಾದು ಹೋಗಬಲ್ಲದು. ನೀಹಾರಿಕೆಗಳಿಂದ ಉಂಟಾದ ಈ ಉಜ್ವಲ ಆವರಣದ ಆಚೆಗೆ ಇರುವ ತಾರೆಗಳನ್ನು ಚಿತ್ರಿಸಲು ಖಗೋಳ ಶಾಸ್ತ್ರಜ್ಞರು ರಕ್ತಾತೀತ ಬೆಳಕನ್ನು ಬಳಸಿದ್ದಾರೆ. ಅವರು ಬಳಸುವ ಫಲಕದ ಮೇಲೆ ನೀಹಾರಿಕೆಗಳು ಕಾಣುವುದಿಲ್ಲ. ಅದಕ್ಕೆ ಬದಲಾಗಿ, ಸಾಮಾನ್ಯ ಫಲಕಗಳಲ್ಲಿ ಕಾಣದಿದ್ದ ತಾರೆಗಳು ಈಗ ಕಂಡು ಬರುತ್ತವೆ.

## ವಸ್ತು ಸ್ವರೂಪದ ಪರಿಶೀಲನೆ

ಒಂದು ಪರಮಾಣುವಿನ ಗಾತ್ರ ಸುಮಾರು 1/100,000,000 ಸೆಂ. ಮೀ. ಇರುತ್ತದೆ. ಪರಮಾಣುವಿನ ಬೀಜದ ಗಾತ್ರ ಇದರ 1/10,000 ಭಾಗವಾಗಿರುತ್ತದೆ. ಪರಮಾಣುಗಳನ್ನು ಪಕ್ಕ ಪಕ್ಕದಲ್ಲಿ ಜೋಡಿಸುವುದು ಸಾಧ್ಯವೆಂದುಕೊಂಡರೆ 1 ಸೆಂ. ಮೀ. ನಷ್ಟು ಸಣ್ಣ ಜಾಗದಲ್ಲಿ ಹತ್ತು ಕೋಟಿ ಪರಮಾಣುಗಳನ್ನು ಇಡಬಹುದು ಎಂದಂತಾಯಿತು. ಎಂದರೆ, ಪರಮಾಣುವಿನ ಗಾತ್ರ ನಮ್ಮ ಊಹೆಗೆ ನಿಲುಕಲಾರದಷ್ಟು ಅಲ್ಪವಾಗಿದೆ ಎಂದು ಕಾಣಬಹುದು. ಆದರೂ, ಇಷ್ಟು ಸಣ್ಣ ಬೀಜಗಳ ಹಾಗೂ ಎಲೆಕ್ಟ್ರಾನ್‌ಗಳ ಚಲನ ವಲನಗಳನ್ನು ಪತ್ತೆ ಹಚ್ಚಿ, ಚಿತ್ರಿಸುವ ಸಾಹಸಕಾರ್ಯವನ್ನು ವಿಜ್ಞಾನಿಗಳು ಸಾಧಿಸಿದ್ದಾರೆ.

## ವಿಲ್ಸನ್ನನ ಮೇಘಾಗಾರ

ಭದ್ರವಾಗಿ ಮುಚ್ಚಿರುವ ಒಂದು ಗಾಜಿನ ಪಾತ್ರೆ ಇದೆ ಎಂದುಕೊಳ್ಳೋಣ. ಈ ಪಾತ್ರೆಯಲ್ಲಿ ನೀರಿನ ಆವಿಯಿಂದ ಪರಿತೃಪ್ತವಾದ ಆವರಣವಿರುತ್ತದೆ. ಈಗ ಈ

ಪಾತ್ರೆಯ ಗಾತ್ರವನ್ನು ಯಾವುದಾದರೂ ಒಂದು ವಿಧಾನದಿಂದ ಶೀಘ್ರವಾಗಿ ಹೆಚ್ಚಿಸಿದರೆ, ಆವರಣದ ಉಷ್ಣಾಂಶ ಕಡಿಮೆಯಾಗುತ್ತದೆ. ಇದರ ಪರಿಣಾಮವಾಗಿ ಆವರಣವು ಇನ್ನೂ ಹೆಚ್ಚಿನ ನೀರಿನ ಆವಿಯನ್ನು ಸೆಳೆದುಕೊಳ್ಳುತ್ತದೆ. ಎಂದರೆ, ಆವರಣವು ಅತಿ ಪರಿತೃಪ್ತವಾಗುತ್ತದೆ. ಈಗ ವಿಕಿರಣ ವಸ್ತುಗಳಿಂದ ಉತ್ಪತ್ತಿಯಾದ ಆಲ್ಫ ಕಿರಣಗಳಾಗಲೀ ಕ್ಷ-ಕಿರಣಗಳಾಗಲೀ ಈ ಆವರಣದ ಮೂಲಕ ಹಾಯು ಹೋದರೆ, ಅಯೋಣೀಕರಣವುಂಟಾಗುತ್ತದೆ. ಆವರಣದಲ್ಲೆಲ್ಲಾ ಅನಿಲದ ಅಯೋಣುಗಳು ತುಂಬಿಕೊಳ್ಳುತ್ತವೆ. ನೀರಿನ ಆವಿಯು ನೆಲಸಲು ಈ ಅಯೋಣುಗಳು ಅನುಕೂಲವಾದ ವಾಹನಗಳಾಗುತ್ತವೆ. ಆದ್ದರಿಂದ ಈಗ ಪಾತ್ರೆಯಲ್ಲಿನ ಚಿತ್ರ ಹೇಗಿರುತ್ತದೆಂದರೆ, ಆಲ್ಫ, ಬೀಟ ಅಥವಾ ಕ್ಷ-ಕಿರಣಗಳು ಯಾವ ಹಾದಿಯಲ್ಲಿ ಹೋಮವೋ ಆ ಹಾದಿಯಲ್ಲಿ ನೀರಿನ ಆವಿಯ ಕಣಗಳ ರೇಖೆ ಕಾಣುತ್ತದೆ. ಇಂತಹ ರೇಖೆಗಳನ್ನು ಸುಲಭವಾಗಿ ಚಿತ್ರಿಸಬಹುದು. ವಿಲ್ಸನ್ನನು ಈ ಪ್ರಯೋಗವನ್ನು ನಡಸಿದ ಕಾಲದಲ್ಲಿ ಭೌತವಿಜ್ಞಾನಿಗಳು ಪರಮಾಣು ಸ್ವರೂಪದ ಬಗ್ಗೆ ಕತ್ತಲಲ್ಲೇ ಹುಡುಕಾಡುತ್ತಿದ್ದರು. ಈ ಪ್ರಯೋಗದ ಪರಿಣಾಮವಾಗಿ, ಪರಮಾಣುವಿನ ಸ್ವರೂಪವನ್ನು ಕುರಿತು ರುಥರ್‌ಫರ್ಡ್ ಮೊದಲಾದ ವಿಜ್ಞಾನಿಗಳು ಹೆಚ್ಚು ಹೆಚ್ಚು ಅನ್ವೇಷಣೆಗಳನ್ನು ನಡಸುವುದೂ, ಬೋಹರ್ ಮೊದಲಾದ ವಿಜ್ಞಾನಿಗಳು ಹೊಸ ವಾದಗಳನ್ನು ಪ್ರತಿಪಾದಿಸುವುದೂ ಸಾಧ್ಯವಾಯಿತು.

ವಿಲ್ಸನ್ನನ ಈ ಸಲಕರಣೆಯನ್ನು ವಿಶ್ವಕಿರಣಗಳನ್ನು ಪತ್ತೆ ಹಚ್ಚುವುದಕ್ಕೂ ಬಳಸುತ್ತಾರೆ. ಈ ಕಿರಣಗಳು ಆಕಾಶದಿಂದ ಸತತವಾಗಿ ಸುರಿಯುತ್ತಿರುವ ವಿದ್ಯುತ್‌ಸಹಿತ ಕಣಗಳು. ಈ ವಿಶ್ವಕಿರಣಗಳು ಸಲಕರಣೆಯಲ್ಲಿ ಹಾದುಹೋಗುವುದು ಆಗೊಮ್ಮೆ, ಈಗೊಮ್ಮೆ. ಈ ಪರಿಸ್ಥಿತಿಯಲ್ಲಿ, ವಿಶ್ವಕಿರಣಗಳು ಹಾದು ಹೋದ ಕೂಡಲೇ ಚಿತ್ರ ತೆಗೆಯುವಂತೆ, ಸ್ವಯಂ ಚಾಲಕ ಸಾಧನಗಳನ್ನು ಬಳಸುತ್ತಾರೆ. ಈ ಚಿತ್ರಗಳ ಸಹಾಯದಿಂದ ವಿಶ್ವಕಿರಣವಲ್ಲಿನ ಕಣಗಳ ಗಾತ್ರ ಹಾಗೂ ವಿದ್ಯುತ್ತುಗಳನ್ನು ಗುಣಿಸಬಹುದು.

**ನೇರವಾದ ವಿಧಾನ :— ವಿದ್ಯುತ್ ಸಹಿತ ಕಣಗಳು ಬಿಂಬಗ್ರಾಹಕ ದ್ರಾವಣದ ಮೂಲಕ ಹಾದುಹೋಗುವಿಕೆ.**

ವಿದ್ಯುತ್‌ಸಹಿತ ಕಣಗಳನ್ನು ಚಿತ್ರಿಸುವ ಒಂದು ನೇರವಾದ ವಿಧಾನವಿದೆ; ಈ ಕಣಗಳು ಛಾಯಾಚಿತ್ರ ಫಲಕದ ಮೇಲೆಯೇ ಹಾದು ಹೋಗುವಂತೆ ಮಾಡುವುದು. ಈ ವಿಧಾನಕ್ಕೆ ಬೇಕಾದ ವಿಶಿಷ್ಟವಾದ ದ್ರಾವಣಗಳನ್ನು ಬಳಸಿ, ಪ್ರಯೋಗಗಳನ್ನು ನಡಸಿದವರಲ್ಲಿ ಮೊದಲಿಗರು ಪೊವೆಲ್ ಮತ್ತು ಒಕಿಯಾಲಿನಿ

ಎಂಬ ವಿಜ್ಞಾನಿಗಳು. ಅವರು ಮಾಡಿದ ಕಾರ್ಯದ ಸೂಕ್ಷ್ಮ ಪರಿಚಯವನ್ನು ಇಲ್ಲಿ ಕೊಡಲಾಗಿದೆ.

ಯುರೇನಿಯಂ, ರೇಡಿಯಂ ಮೊದಲಾದ ಭಾರಧಾತುಗಳ ಅಭದ್ರತೆಯ ಕಾರಣದಿಂದ, ಅವುಗಳು ತಮ್ಮಷ್ಟಕ್ಕೆ ತಾವೇ ಸಿಡಿಯುತ್ತವೆ. ಈ ಕ್ರಿಯೆಯನ್ನೇ ವಿಕಿರಣಕ್ರಿಯೆ ಎನ್ನುವುದು. ಇಂತಹ ಒಂದು ಕ್ರಿಯೆಯಲ್ಲಿ ಆಲ್ಫಕಣಗಳು ಹೊರ ಬೀಳುತ್ತವೆ. (ಈ ಕಣಗಳು ಹೀಲಿಯಂ ಪರಮಾಣುವಿನ ಬೀಜಗಳೇ ಎಂದು ತೋರಿಸಲಾಗಿದೆ). ಈ ಕಣಗಳ ವೇಗವು ಬೆಳಕಿನ ವೇಗವನ್ನು ಮುಟ್ಟಬಹುದು. (ಸೆಕೆಂಡಿಗೆ 186,000 ಮೈಲಿಗಳು). ಇಷ್ಟು ವೇಗದಿಂದ ಚಲಿಸುವ ಈ ಕಣಗಳಿಗೆ ವ್ಯಾಪಕದ ಅಣುಗಳಿಂದ ಹೊರವಲಯದ ಎಲೆಕ್ಟ್ರಾನ್‌ಗಳನ್ನು ಹೊಡೆದೋಡಿಸುವ ಶಕ್ತಿಯಿರುತ್ತದೆ. ಇದರ ಪರಿಣಾಮವಾಗಿ, ಈ ಕಣಗಳ ವೇಗ ಕಡಿಮೆಯಾಗು ತ್ತದೆ. ಒಂದು ಅನಿಲದಲ್ಲೂ ಕೂಡ, ಸಣ್ಣ ಗಾತ್ರದಲ್ಲಿ ಅಸಂಖ್ಯಾತ ಪರ ಮಾಣುಗಳಿರುವುದರಿಂದ, ಈ ಆಲ್ಫಕಣಗಳು ಹೆಚ್ಚು ದೂರ ಚಲಿಸಲಾರವು.



**ಚಿತ್ರ ೨.**

ರೇಡಿಯಂನಿಂದ ಹೊರಟ ಒಂದು ಆಲ್ಫಕಿರಣವು ಗಾಳಿಯಲ್ಲಿ 2-3 ಸೆಂ. ಮೀ. ಗಳಿಗಿಂತ ಹೆಚ್ಚು ದೂರ ಹೋಗಲಾರದು.

ಈ ತೆರನಾದ ಸಂಶೋಧನೆಗಳಿಗಾಗಿ ಒಂದು ಹೊಸ ನಮೂನೆಯ ಬಿಂಬ ಗ್ರಾಹಕ ದ್ರಾವಣವನ್ನು ಬಳಸುತ್ತಾರೆ. ಒಂದು ನಿರ್ದಿಷ್ಟವಾದ ಜೆಲಾಟಿನ್ ತೂಕಕ್ಕೆ, ಸಾಧಾರಣ ದ್ರಾವಣದಲ್ಲಿ ಎಷ್ಟು ಬೆಳ್ಳಿಯ ಸಂಯುಕ್ತ ವಸ್ತುವನ್ನು

ಬಳಸುತ್ತಾರೋ, ಅದರ ಹತ್ತರಷ್ಟು ತೂಕವನ್ನು ಈ ಹೊಸ ದ್ರಾವಣದಲ್ಲಿ ಬಳಸುತ್ತಾರೆ. ಅಲ್ಲದೆ, ಫಲಕದ ಮೇಲಿನ ದ್ರಾವಣದ ಗಾತ್ರವೂ ಹೆಚ್ಚಾಗಿಯೇ ಇರುತ್ತದೆ.

ಆಲ್ಫಕಿರಣಗಳು ಈ ಬಿಂಬಗ್ರಾಹಕ ದ್ರಾವಣದ ಮೂಲಕ ಹಾದುಹೋದರೆ, ಜಿಲಾಟಿನ್‌ನಲ್ಲಿ ಹುದುಗಿಕೊಂಡಿರುವ ಬೆಳ್ಳಿಯ ಸಂಯುಕ್ತ ವಸ್ತುವಿನ ಕಣಗಳನ್ನು ಸಂಧಿಸುತ್ತದೆ. ಆದರೆ, ಘನ ಪದಾರ್ಥದಲ್ಲಿ ಅಣುಗಳು ಬಹಳ ಒತ್ತೊತ್ತಾಗಿ ಇರುವುದರಿಂದ, ಆಲ್ಫಕಣಗಳು ಗಾಳಿಯಲ್ಲಿ ಹೋಗಬಲ್ಲ ದೂರದ 1/2000 ರಷ್ಟು ಭಾಗ ಮಾತ್ರ ಈಗ ಹೋಗಬಲ್ಲವು. ಪ್ರದರ್ಶನ ಮುಗಿದ ನಂತರ, ಫಲಕವನ್ನು ವಿಕಾಸಗೊಳಿಸಿ ಸ್ಥಿರಪಡಿಸಿದರೆ, ಯಾವ ಕಣಗಳನ್ನು ಆಲ್ಫಕಿರಣಗಳು ತಾಗಿದುವೋ ಅವು ಮಾತ್ರ ಬೆಳ್ಳಿಯಾಗಿ ಮಾರ್ಪಡುತ್ತವೆ. ಇದರ ಪರಿಣಾಮವಾಗಿ, ಸೂಕ್ಷ್ಮದರ್ಶಕದ ಮೂಲಕ ನಾವು ಫಲಕವನ್ನು ಪರಿಶೀಲಿಸಿದರೆ, ಆಲ್ಫಕಣಗಳ ಮಾರ್ಗವು ಕಪ್ಪುರೇಖೆಯಂತೆ ಕಂಡುಬರುತ್ತದೆ. ಕಣಗಳೂ ಒತ್ತೊತ್ತಾಗಿ ಇರುವುದರಿಂದ, ಈ ರೇಖೆಗಳು ಸುಲಭವಾಗಿ ಗೋಚರವಾಗುತ್ತವೆ.

ವಿಲ್ಸನ್ನಿನ ಮೇಘಾಗಾರಕ್ಕೂ, ಈ ವಿಧಾನಕ್ಕೂ ಹೆಚ್ಚು ವ್ಯತ್ಯಾಸವೇನಿಲ್ಲ. ಆದರೆ, ಇಲ್ಲಿ ಫಲಕವನ್ನು ಬಳಸುವುದು ಬಹಳ ಸುಲಭ. ಈ ವಿಧಾನದಿಂದ ತೀವ್ರ ವೇಗದ ಎಲೆಕ್ಟ್ರಾನ್‌ಗಳ ಹಾದಿಯನ್ನು ಗ್ರಹಿಸಲು ಸಾಧ್ಯವಿಲ್ಲ. ಕಾರಣ, ಈ ಎಲೆಕ್ಟ್ರಾನ್‌ಗಳು ಅತಿ ಸಣ್ಣ ರೇಖೆಗಳನ್ನು ಮೂಡಿಸುತ್ತವೆ. ವಿಕಿರಣ ವಸ್ತುವನ್ನು ಫಲಕದ ಮೇಲೆ ಹರಡಲು ಅನೇಕ ವಿಧಾನಗಳಿವೆ. ಉದಾ: ಫಲಕವನ್ನು ಥೋರಿಯಂ ಅಸಿಟೇಟ್ ದ್ರಾವಣದಲ್ಲಿ ಅದ್ದಬಹುದು.

ಬೀಜವಿದಳನದ ಫಲವಾಗಿ ಹೊರಡುವ ಕಣಗಳ ಹಾದಿಗಳನ್ನು ಪರಿಶೀಲಿಸಲು, ಬಿಂಬಗ್ರಾಹಕ ವಿಧಾನವು ಬಹಳ ಸೂಕ್ತವಾಗಿದೆ. ಸಾಧಾರಣವಾದ ದ್ರಾವಣದಲ್ಲಿ ನಿರ್ದಿಷ್ಟವಾದ ಹಲವು ಧಾತುಗಳಿರುತ್ತವೆ. (ಇಂಗಾಲ, ಜಲಜನಕ, ಸಾರಜನಕ, ಬ್ರೋಮೀನ್, ಬೆಳ್ಳಿ, ಅಯೊಡಿನ್). ಸಾಧಾರಣ ಫಲಕವನ್ನು ಬಳಸಿದಲ್ಲಿ ಈ ಪರಮಾಣುಗಳ ವಿದಳನವನ್ನು ಕಾಣಬಹುದು. ಆದರೆ ಅಪೂರ್ವ ಬಳಕೆಗಾಗಿ ಇತರ ವಸ್ತುಗಳನ್ನು ಫಲಕದ ಮೇಲೆ ಹರಡುವುದು ಸಾಧ್ಯ. ಇಂತಹ ಪರಮಾಣುವಿನಲ್ಲಿಯೇ ಇಂತಹ ಕ್ರಿಯೆ ನಡೆದಿದೆ ಎಂದು ನಿರ್ವಿವಾದವಾಗಿ ಹೇಳುವುದು ಸಾಧ್ಯವಿಲ್ಲದಿರಬಹುದು. ಆದರೆ, ವೀಕ್ಷಣೆಗಳ ಫಲವಾಗಿ, ಈ ತೆರನಾದ ಕ್ರಿಯೆ ನಡೆದಿರಬಹುದು ಎಂದು ಊಹಿಸುವುದು ಸಾಧ್ಯ.

## ಎಲೆಕ್ಟ್ರಾನ್ ಸೂಕ್ಷ್ಮದರ್ಶಕ

ಸೂಕ್ಷ್ಮದರ್ಶಕಗಳ ಪರಿಚಯ ನಮಗೆಲ್ಲರಿಗೂ ಇದೆ. ಕಣ್ಣಿಗೆ ಕಾಣದಷ್ಟು ಸಣ್ಣ ವಸ್ತುಗಳನ್ನೂ ವಿಸ್ತೃತಗೊಳಿಸುವ ಸಾಧನವಿದು. ಈ ಸೂಕ್ಷ್ಮದರ್ಶಕದಲ್ಲಿ ಮುಖ್ಯವಾಗಿ ಎರಡು ಯವಗಳಿರುತ್ತವೆ. ವಸ್ತುವಿನಿಂದ ಹೊರಟ ಬೆಳಕಿನ ಕಿರಣಗಳ ಹಾದಿಯನ್ನು ಈ ಯವಗಳು ಬದಲಿಸುತ್ತವೆ. ಇದರ ಪರಿಣಾಮವಾಗಿ ನಮಗೆ ವಿಸ್ತೃತ ಪ್ರತಿಬಿಂಬ ಕಾಣುತ್ತದೆ. ಇದೇ ರೀತಿ, ವಿದ್ಯುತ್ ಹಾಗೂ ಕಾಂತಕ್ಷೇತ್ರಗಳನ್ನು ಬಳಸಿ, ವಿದ್ಯುತ್‌ಸಹಿತ ಕಣಗಳ (ಉದಾ: ಎಲೆಕ್ಟ್ರಾನ್‌ಗಳು) ಹಾದಿಯನ್ನು ಸೂಕ್ತವಾಗಿ ಬದಲಿಸುವುದು ಸಾಧ್ಯ.

ಈ ರೀತಿ, ಬೆಳಕಿಗೆ ಬದಲಾಗಿ, ಎಲೆಕ್ಟ್ರಾನ್‌ಗಳನ್ನು ಬಳಸುವ ಸೂಕ್ಷ್ಮದರ್ಶಕಗಳ ಸಹಾಯದಿಂದ ಅತಿ ಹೆಚ್ಚಾದ ಬೃಂಹಣವನ್ನು ಪಡೆಯಬಹುದು. ತೀವ್ರ



ಚಿತ್ರ ೩.

ವೇಗದ ಎಲೆಕ್ಟ್ರಾನ್‌ಗಳು ಸೂಕ್ತ ರೀತಿಯಲ್ಲಿ ಚಲಿಸುವಂತೆ ಮಾಡಲು ಕಾಂತಕ್ಷೇತ್ರ ಹಾಗೂ ವಿದ್ಯುತ್ ಕ್ಷೇತ್ರಗಳನ್ನು ಬಳಸುತ್ತಾರೆ. ಬೆಳಕಿಗೆ ಯವಗಳು ಹೇಗೋ ಹಾಗೆ, ಈ ಎಲೆಕ್ಟ್ರಾನ್‌ಗಳಿಗೆ ವಿದ್ಯುತ್ ಹಾಗೂ ಕಾಂತಕ್ಷೇತ್ರಗಳು.

ಎಲೆಕ್ಟ್ರಾನ್ ಸೂಕ್ಷ್ಮದರ್ಶಕದ ಒಂದು ಸಾಮಾನ್ಯ ರೇಖಾ ಚಿತ್ರವನ್ನು ತೋರಿಸಿದೆ (ಚಿತ್ರ. 3). ಸಮಾನಾಂತರವಾದ ಎಲೆಕ್ಟ್ರಾನ್ ಪುಂಖವು ವಸ್ತುವಿನ ಮೇಲೆ ಬೀಳುತ್ತದೆ. ಈ ವಸ್ತುವಿನ ಮೂಲಕ ಹಾದುಹೋಗುವ ಎಲೆಕ್ಟ್ರಾನ್‌ಗಳು, ಕಾಂತಯವವೊಂದರ ಸಹಾಯದಿಂದ ವಸ್ತುವಿನ ವಿಸ್ತೃತಪ್ರತಿಬಿಂಬವನ್ನು ಪಟಲ

ವೊಂದರ ಮೇಲೆ ಬೀಳಿಸುತ್ತವೆ. ಮತ್ತೊಂದು ಕಾಂತಯವವು ಈ ಪಟಲದ ಮೇಲಿರುವ ಒಂದು ಸಣ್ಣ ಭಾಗವನ್ನು ವಿಸ್ತೃತಗೊಳಿಸಿ, ಕೊನೆಯ ಪಟಲ ಅಥವಾ ಬಿಂಬಗ್ರಾಹಕ ಪಟಲದ ಮೇಲೆ ಮೂಡಿಸುತ್ತವೆ. ಬಿಂಬಗ್ರಾಹಕ ಪಟಲವನ್ನು ವಿಸ್ತೃತಗೊಳಿಸುವುದರಿಂದ ಮತ್ತಷ್ಟು ಬೃಂಹಣವನ್ನು ಪಡೆಯಬಹುದು. ಇತ್ತೀಚಿನ ಎಲೆಕ್ಟ್ರಾನ್ ಸೂಕ್ಷ್ಮದರ್ಶಕಗಳಲ್ಲಿನ ಒಟ್ಟು ಬೃಂಹಣ 350,000 ದ ವರೆಗೂ ಇರುತ್ತವೆ. ಈ ಸಾಧನದಲ್ಲಿ ಎಲೆಕ್ಟ್ರಾನ್‌ಗಳು ತೂರಿಕೊಂಡು ಹೋಗಬಹುದಾದಷ್ಟು ಸಣ್ಣ ವಸ್ತುಗಳನ್ನು ಮಾತ್ರವೇ ಬಳಸಬೇಕು. ಆದ್ದರಿಂದ ವಸ್ತುವು ಸಣ್ಣ ಪಟಲದ ರೂಪದಲ್ಲಿರಬೇಕು. ಇಲ್ಲದಿದ್ದರೆ ಸಣ್ಣ ಪಟಲವೊಂದರ ಮೇಲೆ ಹರಡಲ್ಪಟ್ಟಿರಬೇಕು. ಅಲ್ಲದೆ ತೀವ್ರವೇಗದ ಎಲೆಕ್ಟ್ರಾನ್‌ಗಳ ಧಾಳಿಯನ್ನು ತಡೆಯುವಷ್ಟು ದಾರ್ಢ್ಯವೂ ಈ ಪಟಲಗಳಿಗೆ ಇರಬೇಕು. ಸಾಮಾನ್ಯ ಸೂಕ್ಷ್ಮದರ್ಶಕಗಳಲ್ಲಿ ನಾವು ಪಡೆಯಬಹುದಾದ ಬೃಂಹಣಕ್ಕಿಂತಲೂ ಅತಿ ಹೆಚ್ಚಾದ ಬೃಂಹಣವನ್ನು ಈ ಸಾಧನದ ಸಹಾಯದಿಂದ ಪಡೆಯುವುದು ಸಾಧ್ಯ ಎಂದು ನೋಡಿದ್ದೇವೆ. ಆದ್ದರಿಂದಲೇ, ಅನೇಕ ವಿಧವಾದ ವೈಜ್ಞಾನಿಕ ಸಂಶೋಧನೆಗಳಿಗೆ, ಎಲೆಕ್ಟ್ರಾನ್ ಸೂಕ್ಷ್ಮದರ್ಶಕವು ಬಳಕೆಯ ಸಾಧನವಾಗಿದೆ. ಹರಳುಗಳ ರಚನೆ, ವೈರಸ್ ಬ್ಯಾಕ್ಟೀರಿಯಾ, ಮುಂತಾದುವು ಇಂತಹ ಸಂಶೋಧನೆಗಳ ಉದಾಹರಣೆಗಳು.

## ಕ್ಷ-ಕಿರಣ ಫೋಟೋಗ್ರಫಿ

ಕ್ಷ–ಕಿರಣಗಳ ಪರಿಚಯ ಒಂದಲ್ಲ ಒಂದು ರೀತಿ ನಮಗೆಲ್ಲರಿಗೂ ಇದ್ದೇ ಇರುತ್ತದೆ. ಈ ಕಿರಣಗಳನ್ನು ಮೊದಲು ಕಂಡುಹಿಡಿದವನು ರಂಟ್ಜೈನ್ ಎಂಬ ವಿಜ್ಞಾನಿ. ಇವುಗಳನ್ನು ಉತ್ಪತ್ತಿಮಾಡುವ ವಿಧಾನವನ್ನು ಹೀಗೆ ವಿವರಿಸಬಹುದು. ಅನಿಲ ರಹಿತವಾದ ಕೊಳವಿಯ ಒಂದು ತುದಿಯಲ್ಲಿ ಬಹು ತೆಳ್ಳನೆಯ ಟಂಗ್ಸ್ಟನ್ ತಂತಿಯ ಸುರುಳಿಯನ್ನೂ, ಇನ್ನೊಂದು ತುದಿಯಲ್ಲಿ ತಾಮ್ರದ ಅಥವಾ ಇತರ ಭಾರ ಲೋಹದ ತುಂಡನ್ನೂ ಇಡುತ್ತಾರೆ. ಈ ಟಂಗ್ಸ್ಟನ್ ಸುರುಳಿಯ ಮೂಲಕ ವಿದ್ಯುತ್ ಪ್ರವಾಹವನ್ನು ಕಳುಹಿಸಿದರೆ, ತಂತಿಯು ಕಾದು ಎಲೆಕ್ಟ್ರಾನ್‌ಗಳನ್ನು ಹೊರಚಿಮ್ಮುತ್ತದೆ. ಈಗ ಈ ಟಂಗ್ಸ್ಟನ್ ಸುರುಳಿಗೆ ಸಾಪೇಕ್ಷವಾಗಿ ತಾಮ್ರದ ತುಂಡನ್ನು 10,000 ವೋಲ್ಟುಗಳಿಗಿಂತ ಹೆಚ್ಚಾದ ವಿದ್ಯುತ್ ಚಾಲಕ ಶಕ್ತಿಗೆ ಏರಿಸಿದರೆ, ಪ್ರಬಲ ವಿದ್ಯುತ್ ಕ್ಷೇತ್ರದ ಫಲವಾಗಿ ಎಲೆಕ್ಟ್ರಾನ್‌ಗಳು ತೀವ್ರವೇಗದಿಂದ ತಾಮ್ರದ ತುಂಡನ್ನು ಹೊಡೆಯುತ್ತವೆ. ಈ ತಾಮ್ರದ ತುಂಡಿನಿಂದ ಕ್ಷ-ಕಿರಣಗಳು ಹೊರಬೀಳುತ್ತವೆ. ಈ ಕಿರಣಗಳು ಬೆಳಕಿನ ಕಿರಣಗಳಂತೆಯೇ ಅಲೆಗಳು. ಆದರೆ ರಂಟ್ಜೈನ್ ಕಿರಣಗಳ ತರಂಗದೂರ ಬಹು ಕಡಿಮೆ. ಅಲ್ಲದೆ, ಬೆಳಕು ವಸ್ತುಗಳ ಮೂಲಕ ಹಾದುಹೋಗಲಾರದು ಎಂದು ನಮಗೆ ತಿಳಿದಿದೆ. ಈ ಕ್ಷ-ಕಿರಣ

ಗಳಾದರೋ, ವಸ್ತುವಿನ ಮೂಲಕ ಹಾದುಹೋಗಬಲ್ಲವು. ಅಲ್ಲದೆ, ಬಿಂಬಗ್ರಾಹಕ ಪಟಲದ ಸಹಾಯದಿಂದ ಇವುಗಳನ್ನು ಪತ್ತೆ ಮಾಡಬಹುದು. ಕ್ಷ-ಕಿರಣಗಳ ಇಂದಿನ ಬಳಕೆಗಳು ಅನೇಕವಿವೆ. ಇವುಗಳಲ್ಲಿ ಅತಿ ಮುಖ್ಯವಾದದ್ದು, ವೈದ್ಯಕೀಯ ಚಿಕಿತ್ಸೆಗಾಗಿ ಮಾನವ ಶರೀರದ ಪರೀಕ್ಷೆ. ಶರೀರದ ಮಾಂಸಖಂಡಗಳನ್ನು ಹಾದು, ಎಲುಬುಗಳ ಪ್ರತಿಬಿಂಬವನ್ನು ಈ ಕಿರಣಗಳು ಮೂಡಿಸುತ್ತವೆ. ಎಂದರೆ, ಎಲುಬುಗಳಿಗೆ ಉಂಟಾಗಿರುವ ಅಪಾಯಗಳನ್ನಾಗಲೀ, ಎಲುಬು ಗೂಡಿನಲ್ಲಿ ಸೇರಿಕೊಂಡಿರುವ ಅನ್ಯ ಪದಾರ್ಥಗಳನ್ನಾಗಲೀ, (ಉದಾ. ಗುಂಡುಗಳು), ಈ ಚಿತ್ರಗಳ ಸಹಾಯದಿಂದ ಗುರುತಿಸುವುದು ಸಾಧ್ಯ ಎಂದಂತಾಯಿತು.

ಕೈಗಾರಿಕಾ ಕ್ಷೇತ್ರದಲ್ಲಿ ಲೋಹದ ಎರಕ ಹೊಯ್ದು ವಸ್ತುಗಳಲ್ಲಿ ಹುಳುಕುಗಳು ಇವೆಯೋ ಎಂದು ಪರಿಶೀಲಿಸಲು ಕ್ಷ-ಕಿರಣಗಳನ್ನು ಬಳಸುತ್ತಾರೆ. ಲೋಹದ ತುಂಡಿನಲ್ಲಿ ಹುಳುಕುಗಳಿಲ್ಲದಿದ್ದರೆ, ಬಿಂಬಗ್ರಾಹಕ ಪಟಲವು ಎಲ್ಲ ಕಡೆಯೂ ಒಂದೇ ಸಮನಾಗಿ ಕಪ್ಪಗಿರುತ್ತದೆ. ಆದರೆ ಲೋಹದ ತುಂಡು ಆಂತರಿಕ ರಂಧ್ರಗಳನ್ನು ಹೊಂದಿದ್ದರೆ, ಈ ರಂಧ್ರಗಳಿರುವೆಡೆಯಲ್ಲಿ, ಹೆಚ್ಚು ಕ್ಷ-ಕಿರಣಗಳು ಹಾದುಹೋಗುವುದು ಸಾಧ್ಯ. ಎಂದರೆ, ಪಟಲದ ಮೇಲೆ ಒಂದು ನಿರ್ದಿಷ್ಟ ಭಾಗವು ಉಳಿದ ಭಾಗಗಳಿಗಿಂತ ಹೆಚ್ಚು ಕಪ್ಪಾಗಿ ಕಾಣಿಸುತ್ತದೆ. ಕೈಗಾರಿಕಾ ಕ್ಷೇತ್ರದಲ್ಲಿ, ಈ ತೆರನಾದ ಪರೀಕ್ಷೆಗಳನ್ನೇ ನಂಬಿ, ಈ ಲೋಹದ ತುಂಡುಗಳನ್ನು ಸೂಕ್ಷ್ಮವಾದ ಅನೇಕ ಕಾರ್ಯಗಳಿಗೆ ಬಳಸುತ್ತಾರೆ.

## ಹರಳುಗಳ ಸ್ವರೂಪ

ಹರಳುಗಳೆಂದರೆ ಎಲ್ಲರಿಗೂ ಆಸಕ್ತಿಯಿರುತ್ತದೆ. ಹರಳಿನಲ್ಲಿ ಏನಿದೆ? ವಜ್ರವು ಗಾಜನ್ನು ಕತ್ತರಿಸುವಷ್ಟು ಕಠಿನವಾಗಿರಲು ಕಾರಣವೇನು? ಉಪ್ಪು ಹಾಗೂ



ಚಿತ್ರ೪

ಸಕ್ಕರೆಯ ಹರಳುಗಳು ನೀರಿನಲ್ಲಿ ಕರಗಿದರೆ ಏನಾಗುತ್ತವೆ? ಗಾಜು ಒಂದು ಹರಳೇ? ಇಂತಹ ಅನೇಕ ಪ್ರಶ್ನೆಗಳು ಏಳುತ್ತವೆ. ಈ ಲೇಖನದ ವ್ಯಾಪ್ತಿಯಲ್ಲಿ ಹರಳುಗಳನ್ನು ಕುರಿತ ದೀರ್ಘ ಚರ್ಚೆ ಸಾಧ್ಯವಿಲ್ಲವಾದರೂ, ಕ್ಷ-ಕಿರಣಗಳನ್ನು

ಹರಳುಗಳ ಸಂಶೋಧನೆಗಳಲ್ಲಿ ಹೇಗೆ ಬಳಸುತ್ತಾರೆ ಎಂದು ಸೂಚಿಸಬಹುದು. ಯಾವ ವಸ್ತುವಿನಲ್ಲಿ ಅಣುಗಳೂ, ಪರಮಾಣುಗಳೂ ಒಂದು ನಿರ್ದಿಷ್ಟ ಮಾದರಿಯಲ್ಲಿ ಪುನರಾವೃತ್ತಿಗೊಳ್ಳುತ್ತವೋ, ಅಂತಹ ವಸ್ತುವನ್ನು ಹರಳು ಎಂದು ಕರೆಯುತ್ತಾರೆ. ಈ ಹರಳುಗಳ ಮೂಲಕ ಕ್ಷ-ಕಿರಣಗಳು ಹಾದುಹೋದರೆ ವಕ್ರ ವಿಯೋಜನೆಯಾಗುತ್ತದೆ. ಇದರ ಪರಿಣಾಮವಾಗಿ, ಹರಳುಗಳ ಮೂಲಕ ಹಾದು ಬಂದ ಕ್ಷ-ಕಿರಣಗಳು ಬಿಂಬಗ್ರಾಹಕ ಪಟಲದ ಮೇಲೆ ಒಂದು ತೆರನಾದ ಚಿತ್ರವನ್ನು ಉಂಟುಮಾಡುತ್ತವೆ. ಈ ಚಿತ್ರದ ಸಹಾಯದಿಂದ, ಈ ಹರಳಿನಲ್ಲಿ ಅಣುಗಳು ಹೇಗೆ ಜೋಡಿಸಲ್ಪಟ್ಟವೆಯೆಂದು ಊಹಿಸಬಹುದು. ಆದರೆ ಇದಕ್ಕೆ ಮೊದಲು ಕ್ಷ-ಕಿರಣಗಳ ತರಂಗದೂರವು ತಿಳಿದಿರಬೇಕಾದದ್ದು ಆವಶ್ಯಕ. ಈ ತೆರನಾಗಿ ಹರಳುಗಳ ಸ್ವರೂಪವನ್ನು ಕಂಡುಹಿಡಿಯಲು ಅನೇಕ ವಿಧಾನಗಳಿವೆ. ಉದಾ : ಬ್ರಾಗ್ ವಿಧಾನ, ಲೋವೆ ವಿಧಾನ ಇತ್ಯಾದಿ. ಒಂದೊಂದು ವಿಧಾನದಿಂದ ಪಡೆದ ಪಟಲದ ಚಿತ್ರವನ್ನು ಒಂದು ನಿರ್ದಿಷ್ಟ ರೀತಿಯಲ್ಲಿ ಪರಿಶೀಲಿಸುತ್ತಾರೆ. ಹರಳುಗಳಿಗೆ ಸಂಬಂಧಿಸಿದ ಸಂಶೋಧನೆಗಳು ಭೌತಶಾಸ್ತ್ರದ ಒಂದು ಮುಖ್ಯ ಶಾಖೆಗೆ ಸೇರಿವೆ. ಈ ಸಂಶೋಧನೆಗಳಲ್ಲಿ ಫೋಟೋಗ್ರಫಿಯದು ಎಂತಹ ಮುಖ್ಯ ಪಾತ್ರ ಎಂದು ಸುಲಭವಾಗಿ ಊಹಿಸಬಹುದು.



ಚಿತ್ರ ೫.

## ಫೋಟೋ ಸೂಕ್ಷ್ಮದರ್ಶಕ ಶಾಸ್ತ್ರ

ಸಾಮಾನ್ಯ ಸೂಕ್ಷ್ಮ ದರ್ಶಕದಲ್ಲಿ ಕೊನೆಗೆ ನಾವು ಕಾಣುವ ಪ್ರತಿಬಿಂಬವು ಮಿಥ್ಯಾ ಪ್ರತಿಬಿಂಬ. ಯವಗಳ ದೂರಗಳನ್ನು ಸೂಕ್ತವಾಗಿ ಬದಲಿಸುವುದರಿಂದ

ನೈಜ ಪ್ರತಿಬಿಂಬವನ್ನು ಪಡೆಯುವುದು ಸಾಧ್ಯ. ಈ ನೈಜ ಪ್ರತಿಬಿಂಬವನ್ನು ಬಿಂಬ ಗ್ರಾಹಕ ಪಟಲದ ಮೇಲೆ ಗ್ರಹಿಸಬಹುದು. ಆದ್ದರಿಂದ, ಎಲ್ಲೆಲ್ಲಿ ಸೂಕ್ಷ್ಮದರ್ಶಕ ವನ್ನು ಬಳಸಬಹುದೋ, ಅಲ್ಲೆಲ್ಲ, ಬಿಂಬಗ್ರಾಹಕ ವಿಧಾನವನ್ನು ಬಳಸುವುದರಿಂದ ಹೆಚ್ಚು ಸೌಕರ್ಯ ಉಂಟಾಗುತ್ತದೆ. ವೀಕ್ಷಣೆಯು ಮತ್ತಷ್ಟು ಸೂಕ್ಷ್ಮವಾಗುತ್ತದೆ. ಈ ತೆರನಾದ ಸಂಶೋಧನೆಗಳಿಗೆ ಒಳಗಾಗುವ ವಸ್ತುಗಳಿಗೆ ಮಿತಿಯೇ ಇಲ್ಲ. ಉದಾ: ಬ್ಯಾಕ್ಟೀರಿಯಾ, ರಕ್ತದಲ್ಲಿನ ಪರೋಪಜೀವಿಗಳು, ಪಳೆಯುಳಿಕೆಗಳು, ಸಸ್ಯ ಹಾಗೂ ಪ್ರಾಣಿ ಸಂಬಂಧವಾದ ವಸ್ತುಗಳು, ಸೂಕ್ಷ್ಮಜೀವಿಗಳು, ಇತ್ಯಾದಿ. ಇಲ್ಲಿಯೂ ಕೂಡ, ರಕ್ತಾತೀತ ಬೆಳಕನ್ನು ಬಳಸಿದಲ್ಲಿ ಪರಿಶೀಲನೆಗೊಳಗಾಗಿರುವ ವಸ್ತುವಿನ ಅನೇಕ ಆಂತರಿಕ ವಿವರಗಳನ್ನು ಗುರುತಿಸಬಹುದು.

## ತೀವ್ರ ವೇಗದ ಕಾರ್ಯಗಳ ಫೋಟೋಗ್ರಫಿ

ಕುದುರೆ ಜೂಜಿನಲ್ಲಾಗಲೀ, ಓಟದ ಪಂದ್ಯಗಳಲ್ಲಾಗಲೀ, ಮೊದಲನೆಯ ಸ್ಥಾನವನ್ನು ನಿರ್ವಿವಾದವಾಗಿ ನಿರ್ಧರಿಸಲು "ಫೋಟೋ ಫಿನಿಷ್" ಗಳನ್ನು ಬಳ ಸುತ್ತಾರೆ ಎಂದು ನಮಗೆ ತಿಳಿದಿದೆ. ಈ ತೆರನಾದ ತೀವ್ರವೇಗದ ಚಲನೆಗಳನ್ನು ಚಿತ್ರಿಸುವ ಪ್ರಯತ್ನದಲ್ಲಿ ಕಂಡುಬರುವ ಸಮಸ್ಯೆ ಎಂದರೆ—ಅತ್ಯಲ್ಪ ಪ್ರದರ್ಶನ ಕಾಲವನ್ನು ಪಡೆಯುವುದು. ಕುದುರೆ ಜೂಜು ಮೊದಲಾದ ಪಂದ್ಯಗಳ ಕ್ಷಣಿಕ ಫೋಟೋಗಳನ್ನು ತೆಗೆಯಲು ಬಳಸುವ ಕ್ಯಾಮರಾಗಳ ಪ್ರದರ್ಶನಕಾಲ— ಸುಮಾರು 1/1000 ಸೆಕೆಂಡು. ವಿಜ್ಞಾನ ಕ್ಷೇತ್ರದಲ್ಲಿ ಇನ್ನೂ ತೀವ್ರವೇಗದ ಚಲನೆ ಗಳನ್ನು ವೀಕ್ಷಿಸಬೇಕಾದ್ದರಿಂದ, ಇದಕ್ಕಿಂತಲೂ ಕಡಿಮೆಯಾದ ಪ್ರದರ್ಶನಕಾಲ ಗಳನ್ನು ಬಳಸಬೇಕಾಗುತ್ತದೆ.

ಚಲನಚಿತ್ರಗಳ ಫಿಲ್ಮುಗಳನ್ನು ನಾವೆಲ್ಲರೂ ನೋಡಿದ್ದೇವಷ್ಟೇ ಇವುಗಳನ್ನು ತಯಾರಿಸುವುದು ಹೀಗೆ. ಅನೇಕ ಸ್ಥಿರ ಚಿತ್ರಗಳು ಒಂದಾದ ಮೇಲೊಂದು, ಒಂದು ನಿರ್ದಿಷ್ಟ ವೇಗದಲ್ಲಿ ನಮ್ಮ ಕಣ್ಣಮುಂದೆ ಸುಳಿದು ಹೋದರೆ, ಚಲನೆಯ ಭ್ರಮೆ ನಮಗುಂಟಾಗುತ್ತದೆ. ಚಲನ ಚಿತ್ರವನ್ನು ತೆಗೆಯುವಾಗ ಈ ಫಿಲ್ಮು ನಿಂತು ನಿಂತು ಚಲಿಸುತ್ತದೆ. ಫಿಲ್ಮು ಚಲಿಸಿದಾಗ ಕ್ಯಾಮರಾದ ಕಿಟಕಿಯು ಮುಚ್ಚಿರುತ್ತದೆ. ಫಿಲ್ಮು ನಿಂತ ಕ್ಷಣವೇ ಕಿಟಕಿಯು ತೆರೆದು ಫಿಲ್ಮಿನ ಮೇಲೆ ಪ್ರದರ್ಶನ ಉಂಟಾಗುತ್ತದೆ. ಈ ತೆರನಾದ ಫಿಲ್ಮನ್ನು ಪ್ರದರ್ಶಿಸಿದ ವೇಗದಲ್ಲೇ ಚಿತ್ರಮಂದಿರದಲ್ಲಿಯೂ ಚಲಿಸುವಂತೆ ಮಾಡುವುದರಿಂದ, ಚಲನೆಯ ಭ್ರಮೆಯನ್ನು ಉಂಟುಮಾಡಬಹುದು.

## ಅತ್ಯಲ್ಪ ಪ್ರದರ್ಶನ ಕಾಲ

ಅತ್ಯಲ್ಪ ಪ್ರದರ್ಶನಗಳಿಗೆ ಕ್ಯಾಮರಾ ಕಿಟಕಿಗಳನ್ನು ಬಳಸುವುದು ಸಾಧ್ಯವೇ ಇಲ್ಲ. ಕತ್ತಲು ಕೋಣೆಯಲ್ಲಿ, ಕ್ಷಣಿಕವಾದ ಬೆಳಕಿನ ಪ್ರಭೆಯನ್ನು ಉತ್ಪತ್ತಿ ಮಾಡುವುದರಿಂದ ಮಾತ್ರ ಇಷ್ಟು ಅಲ್ಪ ಪ್ರದರ್ಶನ ಕಾಲಗಳನ್ನು ಪಡೆಯಬಹುದು.

ರೋಲ್ ಫಿಲ್ಮುಗಳನ್ನು ಮೊದಲಬಾರಿಗೆ ತಯಾರಿಸಿದವನು ಜಾರ್ಜ್ ಈಸ್ಟ್ಮನ್ ಎಂಬಾತ. ಈ ತೆರನಾದ ರೋಲ್ ಫಿಲ್ಮುಗಳಿಲ್ಲದಿದ್ದಲ್ಲಿ, ನಾವು ಇಂದು ಅನುಭವಿಸುತ್ತಿರುವ ಚಲನ ಚಿತ್ರ ತಯಾರಿಕೆ ಸಾಧ್ಯವಾಗುತ್ತಿರಲಿಲ್ಲವೆಂದೇ ಹೇಳಬಹುದು.

ತೀವ್ರವೇಗದ ಫೋಟೋಗ್ರಫಿಯನ್ನು ಬಳಸಲು ವಿಜ್ಞಾನದಲ್ಲಿ ಅನೇಕ ಅವಕಾಶಗಳಿವೆ. ಉದಾ: ಘನಪದಾರ್ಥಗಳಲ್ಲಿ ತರಂಗಚಲನೆ, ಕೊಠಡಿಗಳ ಶಬ್ದವಿಶೇಷಗಳು, ದ್ರವಗಳ ಚಲನೆ, ಗುಂಡುಗಳ ಚಲನೆ, ನೀರಿನೊಳಗಿನ ಸಿಡಿತಗಳು, ಇತ್ಯಾದಿ.

## ಫೋಟೋಗ್ರಫಿಯ ಇನ್ನೂ ಕೆಲವು ಉಪಯೋಗಗಳು

ಪ್ರಭಾವಿದ್ಯುತ್ ಪರಿಣಾಮದ ಅನ್ವೇಷಣೆಯ ಫಲವಾಗಿ, ಅನೇಕ ಸಂವಿಧಾನಗಳ ಉತ್ಪತ್ತಿ ಸಾಧ್ಯವಾಯಿತು. ಇಂತಹ ಒಂದೆರಡು ಸಂವಿಧಾನಗಳನ್ನು ಈ ಕೆಳಗೆ ಹೆಸರಿಸಿದೆ.

## ಪಟಲದ ಮೇಲೆ ಶಬ್ದವನ್ನು ಮುದ್ರಿಸುವಿಕೆ ಹಾಗೂ ಪುನರುತ್ಪಾದನೆ

ಶಬ್ದವನ್ನು ವಿದ್ಯುತ್‌ಪ್ರವಾಹದ ಆಂದೋಳನಗಳನ್ನಾಗಿ ಪರಿವರ್ತಿಸುವುದು ಇಲ್ಲಿನ ಮೊದಲನೆಯ ಹಂತ. ಈ ಕಾರ್ಯಕ್ಕಾಗಿ ಬಳಸುವ ಸಲಕರಣೆಯನ್ನು "ಮೈಕ್ರೋಫೋನ್" ಅಥವಾ "ಮೈಕ್" ಎಂದು ಕರೆಯುತ್ತಾರೆ. ಈ ವಿದ್ಯುತ್ ಪ್ರವಾಹದ ಆಂದೋಳನಗಳನ್ನು ಒಂದೊಂದು ವಿಧಾನದಲ್ಲಿ ಒಂದೊಂದು ಕಾರ್ಯಕ್ಕೆ ಬಳಸುತ್ತಾರೆ.

ಪಟಲದ ಮೇಲೆ ಶಬ್ದವನ್ನು ಮುದ್ರಿಸಲು ಹಲವು ವಿಧಾನಗಳಿವೆ. ಚಲ ವಿಸ್ತಾರ (variable area) ವಿಧಾನದಲ್ಲಿ ಈ ವಿದ್ಯುತ್‌ಪ್ರವಾಹವು, ಕಾಂತ ಕ್ಷೇತ್ರವೊಂದರಲ್ಲಿರುವ ತಂತಿಯು ಕಂಪಿಸುವಂತೆ ಮಾಡುತ್ತದೆ. ಈ ತಂತಿಗೆ ಸೇರಿದಂತಿರುವ ಒಂದು ದರ್ಪಣವು ಈ ಚಲನೆಯನ್ನು ಅನುಸರಿಸುತ್ತದೆ. ದೀಪವೊಂದರಿಂದ ಹೊರಟ ಬೆಳಕು, ಈ ದರ್ಪಣದಿಂದ ಪ್ರತಿಫಲಿತವಾಗಿ ಹಿಂದಕ್ಕೂ ಮುಂದಕ್ಕೂ ಚಲಿಸುತ್ತದೆ. ಈ ಬೆಳಕು ಚಲಿಸುತ್ತಿರುವ ಪಟಲದ ಮೇಲೆ ಬಿದ್ದರೆ, ಪಟಲದ ಮೇಲಿರುವ ಪ್ರದರ್ಶನವು ಕ್ರಮವಿಲ್ಲದೆ ಕೊಯ್ದ ಗರಗಸದ ಹಲ್ಲುಗಳಂತೆ ಇರುತ್ತದೆ.

ಇನ್ನೊಂದು ವಿಧಾನವಾದ ಚಲಸಾಂದ್ರತಾವಿಧಾನದಲ್ಲಿ (variable density) ವಿದ್ಯುತ್ ಪ್ರವಾಹವು ದ್ಯುತಿರಂಧ್ರವೊಂದರ ಅಗಲವನ್ನು ಹತೋಟಿಯಲ್ಲಿಡುತ್ತದೆ. ಈ ದ್ಯುತಿರಂಧ್ರವು ಎರಡು ರಿಬ್ಬನ್‌ಗಳಿಂದ ಉಂಟಾಗಿ, ಈ ರಿಬ್ಬನ್‌ಗಳು ಒಂದು ಕಾಂತಕ್ಷೇತ್ರದಲ್ಲಿರುತ್ತವೆ. ಈ ದ್ಯುತಿರಂಧ್ರದ ಮೂಲಕ ಹಾದುಹೋದ ಬೆಳಕು ಪಟಲದ ಮೇಲೆ ಮುದ್ರಿತವಾಗುತ್ತದೆ. ಪಟಲದ ಮೇಲಿನ ಶಬ್ದಹಾದಿಯು ಅನೇಕ ರೇಖೆಗಳ ಪಂಕ್ತಿಗಳಂತೆ ಕಂಡುಬರುತ್ತದೆ. ಈ ರೇಖೆಗಳ ಪಾರದರ್ಶಕತ್ವ ಹಾಗೂ ಕಪ್ಪಗಿರುವಿಕೆ, ಇವು ಮೂಲಶಬ್ದದ ಘೋಷ ಹಾಗೂ ಆವರ್ತಸಂಖ್ಯೆಗಳನ್ನು ಅನುಸರಿಸುತ್ತವೆ. ಹೀಗೆ ಲಭಿಸಿದ ಋಣಪಟಲವನ್ನು ವಿಕಾಸಗೊಳಿಸಿ ಧನಪಟಲವನ್ನು ಪಡೆಯಬಹುದು.

## ಪುನರುತ್ಪಾದನೆ

ರಂಧ್ರವೊಂದರ ಮೂಲಕ ಹಾದು ಬಂದ ಬೆಳಕು ಚಲಿಸುತ್ತಿರುವ ಧನ ಪಟಲದ ಮೂಲಕ ಹಾದು, ಪ್ರಭಾವಿದ್ಯುತ್‌ಕೋಶವೊಂದನ್ನು ತಾಗುತ್ತದೆ. ಪಟಲದ ಮೂಲಕ ಹಾದುಬಂದು, ಪ್ರಭಾವಿದ್ಯುತ್‌ಕೋಶವನ್ನು ತಾಗುವ ಬೆಳಕಿನ ಅಂಶಕ್ಕೆ ಅನುಗುಣವಾಗಿ ಪ್ರಭಾವಿದ್ಯುತ್ ಕೋಶದಿಂದ ವಿದ್ಯುತ್ ಪ್ರವಾಹ ಉತ್ಪತ್ತಿಯಾಗುತ್ತದೆ. ಈ ವಿದ್ಯುತ್ ಪ್ರವಾಹವನ್ನು ವೃದ್ಧಿಗೊಳಿಸಿ, ನಂತರ ಧ್ವನಿವರ್ಧಕದ ಸಹಾಯದಿಂದ ಶಬ್ದಶಕ್ತಿಯನ್ನಾಗಿ ಪರಿವರ್ತಿಸಬಹುದು. ಚಲನಚಿತ್ರಗಳಲ್ಲಿ ಚಿತ್ರಕ್ಕೂ ಶಬ್ದಕ್ಕೂ ಸಮಕಾಲೀನತೆಯನ್ನು ಒದಗಿಸಲು ಈ ವಿಧಾನ ಬಹಳ ಸೌಕರ್ಯವಾಗಿದೆ. ಚಿತ್ರದಲ್ಲಿನ ಪಾತ್ರಗಳು ಸ್ವತಃ ಮಾತನಾಡಿದಂತಹ ಭ್ರಮೆ ಚಿತ್ರದ ಪ್ರೇಕ್ಷಕರಲ್ಲಿ ಉಂಟಾಗುವುದರಿಂದ, ಈ ವಿಧಾನದ ಪರಿಪೂರ್ಣತೆ ಎಷ್ಟೆಂಬುದನ್ನು ಸುಲಭವಾಗಿ ಊಹಿಸಬಹುದು.

## ರೇಡಿಯೋ ಫೋಟೋಗಳು

ವೃತ್ತ ಪತ್ರಿಕೆಗಳಲ್ಲಿ ನಾವು ಅನೇಕಬಾರಿ, ಅಷ್ಟೇನೂ ಸ್ಫುಟವಾಗಿರದ ಹಲವು ಚಿತ್ರಗಳನ್ನು ನೋಡುತ್ತೇವೆ. ಈ ಚಿತ್ರಗಳು ಕಾರ್ಯ ನಡೆದ ಸ್ಥಳದಲ್ಲಿ ತೆಗೆಯಲ್ಪಟ್ಟು, ಬೇರೆಡೆಗೆ ರವಾನಿಸಿದಂತಹುವಲ್ಲ. ನಡೆದ ಸ್ಥಳದಿಂದಲೇ ಪ್ರಸಾರವಾದಂತಹವು. ಪ್ರಸಾರಕೇಂದ್ರದಲ್ಲಿ, ಬೆಳಕಿನ ಪುಂಖವೊಂದು ಪ್ರಸರಿಸಬೇಕಾಗಿರುವ ಚಿತ್ರವನ್ನು ಸ್ಕ್ಯಾನ್ (scan) ಮಾಡುತ್ತದೆ. ಎಂದರೆ, ನಾವು ಓದುವಾಗ ಎಡದಿಂದ ಬಲಕ್ಕೆ ಹೊರಟು, ಒಂದೊಂದು ಸಾಲು ಮುಗಿದ ನಂತರವೂ ಕಣ್ಣನ್ನು ಕೆಳಗೆ ಹೊರಳಿಸಿ, ಮತ್ತೆ ಎಡದಿಂದ ಬಲಕ್ಕೆ ಕಣ್ಣನ್ನು ಓಡಿಸುತ್ತೇವಲ್ಲವೆ? ಅದೇ ರೀತಿ, ಬೆಳಕಿನ ಪುಂಖವು ಚಿತ್ರದ ಮೇಲೆ ಓಡಾಡುತ್ತದೆ. ಈ ಚಿತ್ರದಿಂದ

ಹರಡಲ್ಪಟ್ಟ ಬೆಳಕು ದ್ಯುತಿವಿದ್ಯುತ್‌ಕೋಶವೊಂದನ್ನು ತಾಗಿ ವಿದ್ಯುತ್ ಪ್ರವಾಹದ ತುಣುಕುಗಳನ್ನು ಉತ್ಪತ್ತಿ ಮಾಡುತ್ತದೆ. ಈ ವಿದ್ಯುತ್ ಪ್ರವಾಹವನ್ನು ಯಾವುದಾದರೂ ಒಂದು ರೀತಿಯಲ್ಲಿ (ಎಂದರೆ, ತಂತಿಯ ಮೂಲಕವಾಗಲಿ, ಅಥವಾ ವಿದ್ಯುತ್ಕಾಂತ ಅಲೆಗಳ ರೂಪದಲ್ಲಿಯೇ ಆಗಲಿ) ಎಷ್ಟು ದೂರ ಬೇಕಾದರೂ ಪ್ರಸಾರ ಮಾಡಬಹುದು.

ಗ್ರಾಹಕಕೇಂದ್ರದಲ್ಲಿ ಈ ವಿದ್ಯುತ್‌ಪ್ರವಾಹದ ತುಣುಕುಗಳನ್ನು ಮತ್ತೆ ಬೆಳಕಿನ ಅಂಶಗಳಾಗಿ ಮಾರ್ಪಡಿಸುತ್ತಾರೆ. ಈ ಬೆಳಕಿನ ಪುಂಖವು ರಂಧ್ರವೊಂದರ ಮೂಲಕ ಹಾದು ಬಿಂಬಗ್ರಾಹಕಪಟಲವನ್ನು ತಾಗುತ್ತದೆ. ಹೀಗೆ ದೊರೆತ ಬಿಂಬಗ್ರಾಹಕಋಣಪಟಲದಿಂದ ಧನಪಟಲವನ್ನು ಪಡೆಯಬಹುದು.

ಇನ್ನೊಂದು ಮಾತು. ಟೆಲಿವಿಷನ್ ಕಾರ್ಯಕ್ರಮಗಳಲ್ಲಿ ಜೀವಂತ ವ್ಯಕ್ತಿಗಳ ಚಲನವಲನಗಳನ್ನು ನೇರವಾಗಿ ಪ್ರಸರಿಸುವುದೇನೋ ಸಾಧ್ಯ. ಆದರೆ ಅನುಕೂಲತೆಯ ದೃಷ್ಟಿಯಿಂದ, ಈ ಚಲನ ವಲನಗಳನ್ನು ಮೊದಲು ಚಲನಚಿತ್ರ ವಾಗಿಮಾಡಿ, ನಂತರ ಈ ಚಿತ್ರಗಳನ್ನು ಟೆಲಿವಿಷನ್‌ಸ್ಟುಡಿಯೋಗಳಲ್ಲಿ ಬಳಸು ವುದು ಮೇಲು ಎಂದು ತಿಳಿದು ಬಂದಿದೆ. ಈ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ನಟನಟಿಯರ ದೃಷ್ಟಿಯಿಂದಂತೂ ಇದು ಒಳ್ಳೆಯದೇ. ಕಾರಣ, ಟೆಲಿವಿಷನ್ ಸ್ಟುಡಿಯೋಗಳ ಕಣ್ಣು ಕೋರೈಸುವ ಬೆಳಕನ್ನು ಅವರು ಎದುರಿಸಬೇಕಾಗಿಲ್ಲ!

## ಉಪಸಂಹಾರ

ಫೋಟೋಗ್ರಫಿಯ ಹಲವಾರು ಉಪಯೋಗಗಳ ಬಗ್ಗೆ ಹೇಳಿದ್ದಾಗಿದೆ. ಅಷ್ಟು ಮುಖ್ಯವಲ್ಲದ ಉಪಯೋಗಗಳನ್ನೂ ತೀರ ತಾಂತ್ರಿಕವಾದ ಉಪಯೋಗ ಗಳನ್ನೂ ವಿವರಿಸುವ ಗೋಜಿಗೆ ಹೋಗಿಲ್ಲ. ಉತ್ಸಾಹಿ ಫೋಟೋಗ್ರಾಫರನಿಗೆ ಫೋಟೋಗ್ರಫಿಯು ಎಷ್ಟು ಉಲ್ಲಾಸಕಾರಿಯೋ, ವಿಜ್ಞಾನಿಗೆ ಅದು ಅಷ್ಟೇ ಪ್ರಯೋಜನಕಾರಿ. ಫೋಟೋಗ್ರಫಿಯ ಅಗ್ರಗಾಮಿಗಳ ಕನಸು ನನಸಾಗಿದೆ. ದಿನದಿನವೂ ಫೋಟೋಗ್ರಫಿಯು ಹೆಚ್ಚು ಹೆಚ್ಚು ಪೂರ್ಣತೆಯನ್ನು ಪಡೆಯುತ್ತಿದೆ. ಈ ಸಾಧನದ ಬಳಕೆಯಿಂದ ವಿಜ್ಞಾನದ ಎಲ್ಲಾ ಶಾಖೆಗಳೂ ಪ್ರಕೃತಿಯ ರಹಸ್ಯ ವನ್ನು ಬಯಲುಮಾಡುವ ಗುರಿಯತ್ತ ತ್ವರಿತವಾಗಿ ಸಾಗುತ್ತಿವೆ. ಇಲ್ಲಿ ಉದಾ ಹರಿಸಿರುವ ಹಲವು ಉಪಯೋಗಗಳಿಂದ ವಿಜ್ಞಾನದಲ್ಲಿ ಫೋಟೋಗ್ರಫಿಯ ಮಹತ್ವವು ಓದುಗರಿಗೆ ಮನದಟ್ಟಾದೀತು.

— ಟಿ. ಕೆ. ರಾಮಸ್ವಾಮಿ

## ಪಾರಿಭಾಷಿಕ ಪದಗಳು

( ತೀರ ಅಪರಿಚಿತವಾದ ಪದಗಳನ್ನು ಮಾತ್ರ ಕೊಟ್ಟಿದೆ )

ಅಯೋಣು - Ion
ಅಯೋಣೀಕರಣ ಮಟ್ಟ - Degree of Ionisation
ಕ್ಷ ಕಿರಣ - X-Ray
ಗುಪ್ತ ಪ್ರತಿಬಿಂಬ - Latent Image
ಗುರುತ್ವವಾದ - Theory of Gravitation
ದ್ಯುತಿರಂಧ್ರ - Light Valve
ಪಟಲ - Film, Screen
ಪಟ್ಟಕ - Prism
ಪ್ರದರ್ಶನ - Exposure
ಪ್ರಸಾರ ಕೇಂದ್ರ - Transmitting Station
ಕಿರೀಟ - Corona
ಬೀಜ ವಿದಳನ - Nuclear Fission
ಬೃಂಹಣ - Magnification
ಪ್ರಾಪಕ - Medium
ಮೇಘಾಗಾರ - Cloud Chamber
ವಿಕಾಸಕ - Developer
ವರ್ಣಪಟಲ - Spectrum
ವಿಶ್ವಕಿರಣ - Cosmic Rays
ವಕ್ರ ವಿಯೋಜನೆ - Diffraction
ಶೋಧಕ - Filter
ಅಯೋಣೀಕರಣ - Ionisation
ಎಲೆಕ್ಟ್ರಾನ್ ಸೂಕ್ಷ್ಮದರ್ಶಕ - Electron Microscope
ಖ ಭೌತ ಶಾಸ್ತ್ರ - Astrophysics
ಗ್ರಾಹಕ ಕೇಂದ್ರ - Receiving Station
ಪ್ರಭಾವಿದ್ಯುತ್‌ಪರಿಣಾಮ - Photo-Electric Effect
ನೀಲಾತೀತ ಬೆಳಕು - Ultra-Violet Light
ಅತಿ ಪರಿತೃಪ್ತ - Supersaturated
ಪಳೆಯುಳಿಕೆ - Fossil
ಫಲಕ - Plate
ಫೋಟೋ ಸೂಕ್ಷ್ಮದರ್ಶಕಶಾಸ್ತ್ರ - Photo-micrography
ಬಿಂಬ ಗ್ರಾಹಕ ದ್ರಾವಣ - Photographic Emulsion
ಮಾದರಿ - Pattern
ಕಾಂತಯವ - Magnetic Lens
ರಕ್ತಾತೀತ ಬೆಳಕು - Infra-Red Light
ವರ್ಣ ಪಟಲ ಶಾಸ್ತ್ರ - Spectroscopy
ಶಬ್ದಹಾದಿ - Sound Track
ಸ್ಥಿರಕಾರಿ - Fixer
ಸೂಕ್ಷ್ಮ ಜೀವಿ - Micro Organism

## ಚಿತ್ರಗಳು

# ವಿಜ್ಞಾನ ಮತ್ತು ಧರ್ಮ*

"ವಿಜ್ಞಾನ ಮತ್ತು ಧರ್ಮ ಇವುಗಳು ಬೇರೆಬೇರೆಯಾಗಿದ್ದರೂ, ಅವುಗಳ ಫಲವನ್ನು ಪಡೆಯುವ ಮಾರ್ಗ ಭಿನ್ನಭಿನ್ನವಾಗಿದ್ದರೂ, ಮಾನವನ ಪೂರ್ಣ ವಿಕಾಸಕ್ಕೆ ಎರಡೂ ಅತ್ಯಾವಶ್ಯಕವಾದವುಗಳು. ಇವೆರಡನ್ನು ಸಮನ್ವಯಗೊಳಿಸುವುದರಿಂದ ಮಾತ್ರ ಮಾನವ ಸುಖವಾಗಿ ಬಾಳಬಲ್ಲ; ಒಂದನ್ನು ತೊರೆದು ಮತ್ತೊಂದನ್ನು ಅನುಸರಿಸಿದಲ್ಲಿ ಅವನ ಬಾಳು ಅರೆಬಾಳಾಗುತ್ತದೆ. ಸಮನ್ವಯ ದೃಷ್ಟಿಯಿಂದ ನೋಡುವವನಿಗೆ ಧರ್ಮ ಮತ್ತು ವಿಜ್ಞಾನಗಳು ಒಂದಕ್ಕೊಂದು ಪೂರಕವಾಗಿ ಬಾಳನ್ನು ಪೂರ್ಣಗೊಳಿಸುತ್ತವೆ.

"ಧರ್ಮ ಮತ್ತು ವಿಜ್ಞಾನ—ಇವುಗಳ ಆಧಿಪತ್ಯಗಳು ಬೇರೆಯಾಗಿದ್ದರೂ ಕೂಡ ಅವುಗಳ ನಡುವೆ ಅತ್ಯಂತ ನಿಕಟವಾದ ಸಂಬಂಧವಿದೆ....ಸತ್ಯವನ್ನರಿಯಬೇಕೆಂಬ ಉತ್ಕಟೇಚ್ಛೆಯಿದ್ದವರು ಮಾತ್ರ ವಿಜ್ಞಾನವನ್ನು ಸೃಜಿಸಬಲ್ಲರು....ವಿಶ್ವದ ಇರುವಿಕೆಗೆ ಕಾರಣಗಳಾದ ನೀತಿ-ನಿಯಮಗಳನ್ನು ನಮ್ಮ ವಿಚಾರದಿಂದ ಗ್ರಹಿಸಬಹುದು ಎಂಬ ವಿಶ್ವಾಸಕ್ಕೆ ಆಧಾರವಾಗಿರುವುದು ಧಾರ್ಮಿಕ ಭಾವನೆಯೇ. ಇಂಥ ವಿಶ್ವಾಸವನ್ನು ಹೊಂದದಿರುವ ಯಾವ ವೈಜ್ಞಾನಿಕನಾದರೂ ಇರುವನೇ ಎಂಬುದನ್ನು ನಾನು ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ಧರ್ಮದಿಂದ ಸ್ಫೂರ್ತಿ ಪಡೆಯದ ವಿಜ್ಞಾನ ಕುಂಟು; ವಿಜ್ಞಾನದಿಂದ ಬೆಳಕು ಪಡೆಯದ ಧರ್ಮ ಕುರುಡು."

—ಆಲ್ಬರ್ಟ್ ಐನ್‌ಸ್ಟೈನ್.

---

* ಶ್ರೀ ಹೆಚ್. ವಿ. ಶ್ರೀರಂಗರಾಜ್ ಅವರ 'ಆಲ್ಬರ್ಟ್ ಐನ್‌ಸ್ಟೈನ್' ಎಂಬ ಪುಸ್ತಕದಿಂದ (ಪು. ೧೭೦-೧೭೧)

# ಕೃತಕ ಉಪಗ್ರಹಗಳು

1957 ನೆ ಇಸವಿ ಅಕ್ಟೋಬರ್ 4 ನೆ ತಾರೀಕಿನ ದಿನ ರಷ್ಯಾದೇಶದ ವಿಜ್ಞಾನಿಗಳು ಭೂಮಿಗೆ ಒಂದು ಉಪಗ್ರಹವನ್ನು ಜಯಪ್ರದವಾಗಿ ಹಾರಿಸಿ, ಅಂತರ ರಾಷ್ಟ್ರೀಯ ಮಟ್ಟದಲ್ಲಿ ಸ್ವಲ್ಪ ಅಸೂಯೆಯನ್ನೂ ಆಶ್ಚರ್ಯವನ್ನೂ ಉಂಟುಮಾಡಿದರೂ, ವಿಜ್ಞಾನವಲಯದಲ್ಲಿ ಚಿರಸ್ಥಾಯಿಯಾದ ಮಹತ್ಕಾರ್ಯವನ್ನು ಸಾಧಿಸಿದ್ದಾರೆ. ಭೂಭೌತವರ್ಷದ ಸಂಶೋಧನಾಸ್ಪರ್ಧೆಯಲ್ಲಿ ಸೋವಿಯಟ್ ರಷ್ಯವು ವಿಜ್ಞಾನದ ಮುನ್ನಡೆಯಲ್ಲಿ ಇದರಿಂದ ಅಗ್ರಸ್ಥಾನಕ್ಕೆ ಏರಿದಂತಾಯಿತು. ಬಹು ಹಿಂದುಳಿದಿದ್ದ ಈ ದೇಶದ ಜನರು ಕೇವಲ 50 ವರ್ಷಗಳ ಅವಧಿಯಲ್ಲಿ ವಿಜ್ಞಾನದ ಶಿಖರಕ್ಕೇರಿರುವುದು ನಮ್ಮ ಭಾರತ ದೇಶಕ್ಕೆ ನವಚೇತನವನ್ನು ನೀಡಿ, ಮಾರ್ಗದರ್ಶನಮಾಡಬಲ್ಲದು. ಗುರುತ್ವಾಕರ್ಷಣ ನಿಯಮವನ್ನು ಮೂರು ಶತಮಾನಗಳ ಹಿಂದೆ ಕಂಡುಹಿಡಿದ ನ್ಯೂಟನ್ನಿನ ಕಾಲದಿಂದ ಭೌತಪ್ರಾಧ್ಯಾಪಕರು ಇಂತಹ ಉಪಗ್ರಹದ ವೇಗವನ್ನೂ ಭೂಪ್ರದಕ್ಷಿಣಾ ಕಾಲವನ್ನೂ ಲೆಕ್ಕಹಾಕುತ್ತಾ ವಿದ್ಯಾರ್ಥಿಗಳಿಗೆ ವಿಜ್ಞಾನಬೋಧೆಯನ್ನು ಮಾಡುತ್ತಲೇ ಇದ್ದಾರೆ. ಈಗ ತಾನೆ ಪ್ರಾಯೋಗಿಕವಾಗಿ ಸಾಧಿಸಲ್ಪಟ್ಟಿರುವ "ಸ್ಪುಟ್ನಿಕ್" ನಾಮಕ ರಷ್ಯ ಉಪಗ್ರಹವು ವರ್ಷಾಂತರಗಳ ಗಣಿತಫಲಕ್ಕೆ ಅನುಸಾರವಾಗಿ ನಭೋಮಂಡಲದಲ್ಲಿ ಭೂಮಿಗೆ ಅನತಿದೂರದಲ್ಲಿ 'ಮರಿ ಚಂದ್ರ' ನಂತೆ ಇಂದೂ ಭೂಪ್ರದಕ್ಷಿಣೆ ಮಾಡುತ್ತಿದೆ. ಸುಮಾರು 350 ಮೈಲಿಗಳ ಸರಾಸರಿ ಎತ್ತರದಲ್ಲಿ ಭೂಮಿಯನ್ನು ಸುತ್ತುತ್ತಿರುವ ಈ ಕೃತಕ ಉಪಗ್ರಹವು ಅಲ್ಯೂಮಿನಿಯಂ ಮಿಶ್ರಿತ ಲೋಹದ ತಗಡಿನಿಂದ ಗೋಳಾಕಾರವಾಗಿ ಮಾಡಲ್ಪಟ್ಟಿದೆ. ಇದರ ವ್ಯಾಸವು ಎರಡು ಅಡಿಗಳು; ತೂಕ ಸುಮಾರು 200 ಪೌಂಡುಗಳು. ಇದು ಸುಮಾರು 96 ನಿಮಿಷಗಳಿಗೆ ಒಂದಾವೃತ್ತಿ ಭೂಪ್ರದಕ್ಷಿಣೆಮಾಡುತ್ತಲೇ ಇದೆ. ಗೋಳದ ಹೊರಭಾಗದಲ್ಲಿ ರೇಡಿಯೋ ಅಲೆಗಳನ್ನು ಪ್ರಸಾರಮಾಡಲೂ, ಗ್ರಹಣಮಾಡಲೂ ಸಾಧಕವಾಗುವ ನಾಲ್ಕು "ಆಂಟೆನಾ" ಗಳೆಂಬ ಲೋಹದ ಸರಳುಗಳು ಸಿಕ್ಕಲ್ಪಟ್ಟಿವೆ. ಗೋಳದೊಳಗಡೆ ಸುತ್ತಲಿನ ವಾತಾವರಣದಲ್ಲಿನ ಭೌತಸ್ಥಿತಿಗತಿಗಳನ್ನು ಪ್ರಸಾರಮಾಡಬಲ್ಲ ಎರಡು ರೇಡಿಯೋ ಟ್ರಾನ್ಸ್ಮಿಟರ್ ಯಂತ್ರಗಳಿವೆ. ಇವುಗಳನ್ನು ಪ್ರೇರೇಪಿಸುವ ವಿದ್ಯುತ್ಕೋಶಗಳ ಆಯುಃಪರಿಮಿತಿಯು ಇವುಗಳ ಕಾರ್ಯದಕ್ಷತೆಯನ್ನು ನಿರ್ದೇಶಿಸುತ್ತದೆ. ಇವನ್ನೆಲ್ಲಾ ಹೊತ್ತಿರುವ ಈ ಪ್ರಥಮ ರಷ್ಯನ್ ಉಪಗ್ರಹವು ಸೆಕೆಂಡಿಗೆ ಸುಮಾರು 5 ಮೈಲಿಯಂತೆ ನಭೋಮಂಡಲದಲ್ಲಿ ಧಾವಿಸುತ್ತಿರುವುದು.

ಪುನಃ ನವೆಂಬರ್ 3 ನೆ ತಾರೀಕಿನಲ್ಲಿ ರಷ್ಯವು ಮತ್ತೊಂದು ಸ್ಪುಟ್ನಿಕನ್ನು ಹಾರಿಸಿಯೇ ಬಿಟ್ಟಿತು. ಸರಾಸರಿ 600 ಮೈಲಿಗಳ ಎತ್ತರದಲ್ಲಿ 102 ನಿಮಿಷಗಳಿಗೊಮ್ಮೆ ಭೂಪ್ರದಕ್ಷಿಣೆ ಮಾಡುತ್ತಿರುವ ಈ ಎರಡನೆಯ ಕೃತಕ ಉಪಗ್ರಹವು ಅರ್ಧ ಟನ್ ತೂಕವಿರುವುದಾಗಿ ತಿಳಿದುಬಂದಿದೆ. ಇದರಲ್ಲಿ, ತರಪೇತಾದ ಒಂದು ನಾಯಿಯನ್ನು ಇಡಲಾಗಿತ್ತು; ಅದರ ಶ್ವಾಸೋಚ್ಛ್ವಾಸ, ಹೃದಯಕ್ರಿಯೆ, ರಕ್ತದ ಒತ್ತಡ—ಇವುಗಳ ರೇಡಿಯೋ ಪ್ರಸಾರವು ನಾಯಿ ಬದುಕಿದ್ದ ಹಲವಾರು ದಿನಗಳು ನಡೆಯುತ್ತಿತ್ತು. ಈ ತೆರನಾದ ವಿಷಯಗಳ ಸಂಗ್ರಹಣದಿಂದ ಮುಂದೆ ಮಾನವನನ್ನು ಗ್ರಹಾಂತರಗಳಿಗೆ ಕಳುಹಿಸುವ ಸಾಧಕಬಾಧಕಗಳ ಪರಿಶೀಲನೆ ನಡೆಯುತ್ತಿರುವುದೆಂದು ಭಾವಿಸಬೇಕಾಗಿದೆ.

ಸೃಷ್ಟಿಯ ಆದಿಕಾಲದಿಂದಲೂ ಇರುವ ಗ್ರಹೋಪಗ್ರಹಗಳಂತೆಯೇ, ಕೃತಕ ಉಪಗ್ರಹಗಳ ಪಥವೂ ಅಂಡಾಕಾರವಾಗಿಯಾಗಲೀ ವೃತ್ತಾಕಾರವಾಗಿಯಾಗಲೀ ಇರುತ್ತವೆ. ಭೂಮಿಗೆ ಅನತಿದೂರದಲ್ಲಿ ವೃತ್ತಾಕಾರದ ಪಥವೊಂದರಲ್ಲಿ ಸುತ್ತುತ್ತಿರುವ ಕೃತಕ ಉಪಗ್ರಹದ ಚಲನೆಯನ್ನು ಪರಿಶೀಲಿಸೋಣ. E ಜಡಮಾನ




(R ತ್ರಿಜ್ಯವುಳ್ಳ ಭೂಮಿಯ ಜಡಮಾನ E;S ಜಡಮಾನವಿರುವ ಉಪಗ್ರಹ h ಎತ್ತರದಲ್ಲಿ ಭೂಪ್ರದಕ್ಷಿಣೆ ಮಾಡುತ್ತಿದೆ.)

(mass) ಇರುವ ಭೂಮಿಯ ತ್ರಿಜ್ಯವು R ಇರಲಿ; ಭೂಮಟ್ಟದಿಂದ h ಎತ್ತರದಲ್ಲಿ S ಜಡಮಾನವಿರುವ ಉಪಗ್ರಹವು ಭೂ ಪ್ರದಕ್ಷಿಣೆ ಮಾಡುತ್ತಿರಲಿ. ನ್ಯೂಟನ್ನಿನ

ಗುರುತ್ವಾಕರ್ಷಣ ನಿಯಮದ ಪ್ರಕಾರ ಭೂಮಿಗೂ ಉಪಗ್ರಹಕ್ಕೂ ಇರುವ ಪರಸ್ಪರಾಕರ್ಷಣೆಯು $\frac{GES}{(R+h)^2}$ ಆಗುವುದು; ಇಲ್ಲಿ $G = 6.67 \times 10^{-8}$ C.G.S. ಮೂಲಮಾನ; ಇದು ಗುರುತ್ವಾಕರ್ಷಣದ ವಿಶ್ವನಿಯತಾಂಕ. (Universal Constant of Gravitation). ಉಪಗ್ರಹಕ್ಕೆ ಭೂಪ್ರದಕ್ಷಿಣೆ ಮಾಡುವ ಚಲನೆಯೇ ಇಲ್ಲದಿದ್ದರೆ, ಈ ಆಕರ್ಷಣೆಯ ಫಲವಾಗಿ ಅದು ನೇರವಾಗಿ ಭೂಮಿಗೆ ಬೀಳುತ್ತಿತ್ತು. ಆದರೆ ಅದು ವೇಗವಾಗಿ ಭೂಮಿಯನ್ನು ಸುತ್ತುತ್ತಿದೆ; ಅದರ ಪಥದ ಪರಿಧಿ $2\pi(R+h)$; ಈ ಪಥದಲ್ಲಿ ಒಂದು ಬಾರಿ ಸುತ್ತಿ ಬರಲು T ಸೆಕೆಂಡುಗಳ ಕಾಲ ಬೇಕಾದರೆ,

$$\text{ಉಪಗ್ರಹದ ವೇಗ} = \frac{2\pi(R+h)}{T}.$$

ವೃತ್ತಾಕಾರದ ಪಥದಲ್ಲಿ ಉಪಗ್ರಹವು ಚಲಿಸುತ್ತಿರುವ ಕಾರಣ ಅದರ ಮೇಲೆ ಕೇಂದ್ರ ವಿಮುಖವಾದ (Centrifugal) ಬಲವೊಂದು ಪ್ರಯೋಗವಾಗುತ್ತಿರುತ್ತದೆ. ಇದರ ಪ್ರಮಾಣ $S\left(\frac{2\pi}{T}\right)^2(R+h)$. ಕೇಂದ್ರ ವಿಮುಖವಾದ ಈ ಬಲವೂ, ಕೇಂದ್ರೋನ್ಮುಖವಾದ ಆಕರ್ಷಣೆಯೂ ಒಂದಕ್ಕೊಂದು ಸಮವಾದರೆ, ಉಪಗ್ರಹದ ದೂರ ವ್ಯತ್ಯಾಸವಾಗದಂತೆ ಚಲನೆ ಒಂದೇ ಸಮನಾಗಿ ನಡೆಯುವುದು; ಆದಕಾರಣ

$$S\left(\frac{2\pi}{T}\right)^2 (R+h) = \frac{GES}{(R+h)^2}$$

$$\text{ಅಥವಾ } T^2 = \frac{4\pi^2}{GE}(R+h)^3$$

ಉಪಗ್ರಹವು ಭೂಮಿಗೆ ಅನತಿದೂರದಲ್ಲಿದ್ದರೆ, h ದೂರವು R ಗೆ ಹೋಲಿಸಿದರೆ ಬಹು ಕಡಿಮೆ ಇರುವುದರಿಂದ

$$T = \sqrt{\frac{4\pi^2 R^3}{GE}}\left(1 + \frac{h}{R}\right)^{3/2}$$

$$= \sqrt{\frac{3\pi}{G\Delta}}\left(1 + \frac{3}{2}\frac{h}{R}\right)$$

ಇಲ್ಲಿ $\Delta$ ಎಂಬುದು ಭೂಮಿಯ ಸರಾಸರಿ ಸಾಂದ್ರತೆ; ಇದು 5.527 gms/c. c. ಮೇಲಿನ ಸಮೀಕರಣವನ್ನು ಲೆಕ್ಕ ಹಾಕಿದರೆ

$$T = 84.3 \left(1 + \frac{3}{2}\frac{h}{R}\right)$$ ನಿಮಿಷಗಳು.

ಉಪಗ್ರಹವು ಭೂಮಟ್ಟಕ್ಕೆ 350 ಮೈಲಿಗಳ ಮೇಲೆ ಚಲಿಸಿದರೆ, ಭೂ ತ್ರಿಜ್ಯವು 4000 ಮೈಲಿಗಳಾದುದರಿಂದ, ಉಪಗ್ರಹದ ಪ್ರದಕ್ಷಿಣಾ ಕಾಲವು

$$84.3 \left(1 + \frac{3}{2} \times \frac{350}{4000}\right)$$ ಅಥವಾ 95.5 ನಿಮಿಷಗಳಾಗುವುದು.

ಹಾಗೆಯೇ ಉಪಗ್ರಹದ ಎತ್ತರವು 600 ಮೈಲಿಗಳಾದರೆ ಪ್ರದಕ್ಷಿಣಾಕಾಲವು 103 ನಿಮಿಷಗಳಾಗುವುದು. ಹೀಗೆ ಗಣಿತದ ಸಹಾಯದಿಂದ ಕೃತಕ ಉಪಗ್ರಹಗಳ ಸಂಚಾರದಲ್ಲಿ ಅಡಗಿರುವ ಭೌತ ನಿಯಮಗಳ ಸೂಕ್ಷ್ಮ ಪರಿಚಯಮಾಡಿಕೊಳ್ಳಬಹುದು.

ಭೂಮಿಗೂ ಚಂದ್ರನಿಗೂ ಮಧ್ಯೆ P ಎಂಬ ಒಂದು ಬಿಂದುವಿನಲ್ಲಿ ಭೂಮಿಯ ಆಕರ್ಷಣೆಯೂ ಚಂದ್ರನ ಆಕರ್ಷಣೆಯೂ ಸಮವಾಗಿರಬಹುದು; ಅಂದರೆ ಆ ಬಿಂದುವಿನ ಸ್ಥಾನ ನಿರ್ದೇಶವು $\frac{E}{D^2} = \frac{M}{d}$ ಎಂಬ ಸಮೀಕರಣದಿಂದ ಆಗುವುದು. ಆದಕಾರಣ ಭೂಮಿಯಿಂದ ಹಾರಿಸಲ್ಪಟ್ಟ ಕ್ಷಿಪಣಿಯು ಈ P ಬಿಂದುವನ್ನು ದಾಟಿದರೆ, ಚಂದ್ರನ ಗುರುತ್ವಾಕರ್ಷಣೆಗೆ ಒಳಗಾಗಿ ಚಂದ್ರನಿಗೆ ಉಪಗ್ರಹವಾಗಬಹುದು; ಅಥವಾ ಚಂದ್ರನ ಮೇಲೆಯೇ ಬೀಳಬಹುದು.




ಇಂಗ್ಲಿಷಿನಲ್ಲಿ "ಚಂದ್ರಲೋಕದ ಮನುಷ್ಯ" ನೆಂದರೆ ಹುಚ್ಚನೆಂದು ಅರ್ಥವಾಗುವುದು. ಆದರೆ ವಿಜ್ಞಾನದಲ್ಲಿ ಮೇಧಾವಿಗಳೆನಿಸಿದ ಅನೇಕರು ಚಂದ್ರಲೋಕಕ್ಕೆ ಮಾನವನು ತಲುಪಬಹುದೆಂಬ ಹೊಂಗನಸನ್ನು ಕಾಣುತ್ತಿದ್ದಾರೆ; ಇನ್ನು ಹತ್ತಾರು ವರ್ಷಗಳಲ್ಲಿ ಗುರು ಶುಕ್ರಾದಿ ಗ್ರಹಗಳಿಗೂ ಹೋಗಿ ಬರಬಹುದೆಂದು ವಾದಿಸುತ್ತಿರುವರು!

ಭೂಮಿಯನ್ನು ಆವರಿಸಿರುವ ವಾಯುಮಂಡಲವು ಅನೇಕ ಅನುಕೂಲತೆಗಳನ್ನು ಮಾನವನಿಗೆ ಕಲ್ಪಿಸಿದೆ. ಸೂರ್ಯನಿಂದ ಹೊರಹೊಮ್ಮುವ ಅತಿನೇರಳೆ (Ultra-Violet) ಬೆಳಕನ್ನು ತಡೆಗಟ್ಟಿ, ಅದರ ತಾಪದಿಂದ ಅವನಿಗೆ ಒದಗಬಹುದಾದ ತೊಂದರೆಯನ್ನು ತಪ್ಪಿಸಿರುವುದು. ಈ ವಾಯುಮಂಡಲವು ಸಾಕಷ್ಟು ಸಾಂದ್ರತೆಯಲ್ಲಿ ಭೂಮಿಯಿಂದ ಐದಾರು ಮೈಲಿಗಳ ಎತ್ತರದವರೆಗೆ ಮಾತ್ರ ಇದ್ದು, ಅದರಲ್ಲಿ ವಿಮಾನಗಳ ಸಂಚಾರಕ್ಕೆ ಸಹಾಯನೀಡಿರುವುದು. ಹಾಗೆಯೇ ಭೂಮಟ್ಟದಿಂದ ನೂರು ಮೈಲಿಗಳಾಚೆ ಹೋದರೆ ವಾಯುಮಂಡಲದ ಸಾಂದ್ರತೆ ತೀರ ಕಡಿಮೆಯಾಗಿ ಶೂನ್ಯ ಪ್ರದೇಶದಂತಿರುತ್ತದೆ. ಈ ಸ್ಥಳದಲ್ಲಿ ಮನುಷ್ಯನಿಗೂ, ಪ್ರಾಣಿಗಳಿಗೂ ಅತ್ಯವಶ್ಯಕವಾದ ವಾಯುವಿಲ್ಲದೆ, ದೇಹದ ಅತಿನೇರಳೆಯ ಉಗ್ರ ಪ್ರಭೆಗೆ ಒಳಗಾಗಿ, ವಿಶ್ವಕಿರಣಗಳ ಪ್ರಕೋಪಕ್ಕೂ, ಉಲ್ಕೆಗಳ ಹೊಡೆತಕ್ಕೂ ತುತ್ತಾಗಬೇಕಾಗುವುದು. ಆಳವಾದ ಸಮುದ್ರ ತಳದಲ್ಲಿ ವಾಸಿಸುವ ಮೀನನ್ನು ಮೇಲೆತ್ತಿದರೆ, ಒಮ್ಮೆಲೇ ಒತ್ತಡವು ಕಡಿಮೆಯಾಗುವುದರಿಂದ ಮೀನು ಉಬ್ಬಿ ಒಡೆದುಹೋಗುವುದು. ಅಂತೆಯೇ ಮನುಷ್ಯನನ್ನಾಗಲೀ ಪ್ರಾಣಿಗಳನ್ನಾಗಲೀ ಭೂಮಿಯ ಮೇಲಿನ ವಾಯುಮಂಡಲದ ಒತ್ತಡದಿಂದ ವಿಶ್ವದಂತರಾಳದ ಶೂನ್ಯ ಪ್ರದೇಶಕ್ಕೆ ಕೊಂಡೊಯ್ದರೆ ದೇಹದ ನೀರು ಆವಿಯಾಗಿ ಮೀನಿಗೆ ಒದಗಿದ ದುಃಸ್ಥಿತಿ ಏರ್ಪಡುವುದು. ಇಂತಹ ಸನ್ನಿವೇಶವನ್ನು ತಡೆಗಟ್ಟಲು ಹೊರವಾತಾವರಣದ ಸಂಬಂಧವೇ ಇಲ್ಲದ ಲೋಹದ ಕೋಣೆಗಳಲ್ಲಿ ತನಗೆ ಆವಶ್ಯಕವಾದ ವಾಯುಮಂಡಲವನ್ನು ಇಟ್ಟುಕೊಂಡೇ ಮನುಷ್ಯ, ಗ್ರಹಾಂತರಯಾನಕ್ಕೆ ಪ್ರಾರಂಭಮಾಡಬೇಕಾಗಿದೆ. ಇಷ್ಟು ಬಗೆಯ ಕಷ್ಟನಿಷ್ಠುರಗಳನ್ನನುಭವಿಸಿ, ದೂರದ ಗ್ರಹೋಪಗ್ರಹಗಳನ್ನು ತಲುಪಿ ಬರುವ ಯತ್ನವನ್ನು ಮಾನವನು ಇಂದು ಮಾಡಲು ಯತ್ನಿಸುತ್ತಿದ್ದಾನೆ. ಪ್ರಾಯಶಃ ಮೊದಲು ಸತ್ತು ತಲುಪುವನು; ಅನಂತರ ತಲುಪಿ ಸಾಯುವನು; ವಿಜ್ಞಾನದ ಮುನ್ನಡೆಯ ಫಲವಾಗಿ ಕಟ್ಟಕಡೆಗೆ ತಲುಪಿ ಹಿಂತಿರುಗಿಯೂ ಬರಬಹುದು! ಹಾಗೆಯೇ ನಕ್ಷತ್ರ ನೀಹಾರಿಕೆಗಳೆಡೆಗೂ ಪ್ರಯಾಣೋನ್ಮುಖನಾದಾನು!!

ನೀರಿನಲ್ಲಿ ಈಜುವ ಮನುಷ್ಯನಂತೆ ವಿಮಾನವು ವಾಯುಮಂಡಲದಲ್ಲಿ ಸಂಚರಿಸುವುದೆಂದು ಸಾಮಾನ್ಯವಾಗಿ ಭಾವಿಸಿಕೊಳ್ಳಬಹುದು. ಈಜುಗಾರನು ನೀರನ್ನು ಬಗೆದು ಹಿಂದೂಡಿ, ತಾನು ಮುಂದಕ್ಕೆ ಧಾವಿಸುವನು; ವಿಮಾನವೂ ಗಾಳಿಯನ್ನು ಹಿಂದೂಡಿ ತಾನು ಮುಂದೋಡುವುದು. ಇಲ್ಲಿ ನ್ಯೂಟನ್ನಿನ ಚಲನಶಾಸ್ತ್ರದ ಮೂರನೆ ನಿಯಮವಾದ 'ಕ್ರಿಯೆ+ಪ್ರತಿಕ್ರಿಯೆಗಳು ಸಮ ಮತ್ತು ವಿಮುಖ' (Action and reaction are equal and opposite) ಎಂಬುದರ ವ್ಯಾಪನೆಯನ್ನು ಕಾಣ

ಬಹುದು. ಶೂನ್ಯಪ್ರದೇಶದಲ್ಲಿ ವಿಮಾನ ಸಂಚಾರದ ಅಸಾಧ್ಯತೆಯ ಕಾರಣವೂ ಅರ್ಥವಾಗುವುದು. ಆದಕಾರಣ ಭೂಮಿಯನ್ನಾವರಿಸಿರುವ ವಾಯುಮಂಡಲ ವನ್ನು ಬಿಟ್ಟು ನೂರಾರು ಮೈಲಿಗಳಾಚಿನ ಶೂನ್ಯಪ್ರದೇಶದಲ್ಲಿ ಪ್ರಯಾಣಮಾಡ ಬೇಕಾದರೆ "ರಾಕೆಟ್" ಗಳನ್ನು ಉಪಯೋಗಿಸಬೇಕು. ಸಾಮಾನ್ಯವಾಗಿ ರಾಕೆಟ್ಟು ಒಂದು ಬಲಯುತವಾದ ಲೋಹದ ಕೊಳವಿಯಿಂದೊಡಗೂಡಿ, ಅದರ ಮುಂದಿನ ಕೊನೆಯು ಮುಚ್ಚಲ್ಪಟ್ಟಿರುತ್ತದೆ; ಅದರಲ್ಲಡಗಿರುವ ಘನ ಅಥವಾ ದ್ರವರೂಪಿಗಳಾದ ಇಂಧನಗಳು ಒಮ್ಮೆಲೇ ಅನಿಲರೂಪ ತಾಳಿ ಅಧಿಕ ಒತ್ತಡದಿಂದ ಹಿಂಭಾಗದಲ್ಲಿ ಹೊರಬಿದ್ದರೆ, ಇದರ ಪ್ರತಿಕ್ರಿಯೆಯಿಂದ ಕೊಳವೆಯು ಮುಂದಕ್ಕೆ ಧಾವಿಸುವುದು. ಈ ತೆರನಾದ ನಾಲ್ಕಾರು ರಾಕೆಟ್ಟುಗಳನ್ನು ಒಂದರ ಹಿಂದೆ ಮತ್ತೊಂದನ್ನು ಜೋಡಿಸಿ, ಒಂದಾದ ಮೇಲೊಂದು ಕೆಲಸಮಾಡುವಂತೆ ಬಹು ಸಂಶೋಧನೆಗಳ ಫಲವಾಗಿ ಏರ್ಪಡಿಸಿರುವರು. ಹೀಗೆ ಅನೇಕ ಘಟ್ಟಗಳಲ್ಲಿ ಕೆಲಸ ಮಾಡಬಲ್ಲ ರಾಕೆಟ್ಟುಗಳ ವಿಚಾರವನ್ನು ಬಹು ಉತ್ಸಾಹದಿಂದ ಸಂಶೋಧನೆ ನಡೆ ಸಿರುವ ರಷ್ಯನ್ ವಿಜ್ಞಾನಿಗಳಲ್ಲಿ ಸಿಯೋಲ್ಕೋವ್‌ಸ್ಕಿ, ಪೋಲೊಸ್ಕಾಫ್, ಮಿರ್ ಟಾಫ್, ಸೇಡಾಫ್ ಮುಂತಾದವರು ಅಗ್ರಗಣ್ಯರು. ಅಮೆರಿಕನ್ ವಿಜ್ಞಾನಿಗಳೂ ರಾಕೆಟ್ಟುಗಳ ಸಂಶೋಧನಾ ಕಾರ್ಯಗಳಲ್ಲಿ ತೊಡಗಿದ್ದರೂ, ರಷ್ಯನರಷ್ಟು ಅವರು ಮುಂದುವರಿದಿಲ್ಲವೆಂದು ಈಗ ಧಾರಾಳವಾಗಿ ಹೇಳಬಹುದು. ಅಮೆರಿಕನ್ನರು ಉಪಗ್ರಹಗಳನ್ನು ಹಾರಿಸಲು ಈವರೆಗೆ ಅನೇಕ ಪ್ರಯತ್ನಗಳನ್ನು ಮಾಡಿ ಸಾಧ್ಯ ವಾಗದೆ ಸೋತಿದ್ದಾರೆ. ಅಂತು ವಿಜ್ಞಾನದ ಮುನ್ನೋಟದಲ್ಲಿ ರಷ್ಯನ್ ವಿಜ್ಞಾನಿ ಗಳು ಇಂದು ಅಪೂರ್ವ ಜಯಗಳಿಸಿದ್ದಾರೆ. ಪರಮಾಣುಸ್ಫೋಟಕಗಳಿಂದ ಸುಸಜ್ಜಿತ ವಾದ ರಾಕೆಟ್ಟಿನ ಸಹಾಯದಿಂದ ದೈವದತ್ತವಾದ ಚಂದ್ರನನ್ನು ಧೂಳೀಪಟಲ ಮಾಡಲೂಬಹುದು. ಸುಮಾರು ೨೦೦೦ ಮೈಲಿಗಳ ವ್ಯಾಸವುಳ್ಳ ಚಂದ್ರನೆಂಬ ಮಣ್ಣುಂಡೆಯನ್ನು ಒಡೆದು ಧೂಳೆಬ್ಬಿಸುವುದೂ ಅಷ್ಟು ಕಷ್ಟವಾಗಲಾರದು. ಆಗ ಅಮಾವಾಸ್ಯೆ, ಪೌರ್ಣಿಮೆಗಳು ಇಲ್ಲ; ಕವಿಗಳು ವರ್ಣಿಸುವ, ಪ್ರೇಮಿಗಳು ಆಶಿಸುವ ಬೆಳುದಿಂಗಳೂ ಇಲ್ಲದಾಗುವುದು. ವಿಜ್ಞಾನದ ಮುಂದೋಟದಲ್ಲಿ ಏನೇನು ವಿಚಿತ್ರಗಳು ಸಂಭವಿಸುವುವೊ!

ಇಂದು ಮಾನವನು ಸಮುದ್ರಗಳ ಮೇಲೂ ಒಳಗೂ ಸಂಚರಿಸಬಲ್ಲ; ನೀರಿ ನಲ್ಲಿ ಮೀನಿನಂತೆ ನುಸುಳಬಲ್ಲ; ವಾಯುಮಂಡಲದಲ್ಲಿ ಹಕ್ಕಿಯಂತೆ ಹಾರಬಲ್ಲ; ಶೂನ್ಯಾಕಾಶದಲ್ಲಿ ರಾಕೆಟ್‌ಯಾನ ಮಾಡಿ ಒಂದು ದಿನ ಗ್ರಹೋಪಗ್ರಹಗಳಿಗೆ ವಲಸೆ ಹೋಗಲೂ ಬಲ್ಲ. ಆದರೆ ಮಾತ್ರ ಭೂಮಿಯ ಮೇಲೆ ತನ್ನಂತೆಯೇ ಇರುವ ಇನ್ನಿತರ ಮಾನವರನ್ನು ತನ್ನ ಅಣ್ಣತಮ್ಮಂದಿರೆಂಬೇ ಭಾವಿಸಿ ಬದುಕಿ ಬಾಳಲಾರ.

ಶಾಂತಿಯುತ ವಾತಾವರಣದಲ್ಲಿ ಸಹಕಾರದಿಂದ ಬಾಳಲಾರದ ಮಾನವನಿಗೆ, ವಿಜ್ಞಾನ ಪ್ರಗತಿಯಲ್ಲಿ ಪ್ರತಿಯೊಂದು ಹೆಜ್ಜೆಯೂ ಶತ್ರುರೂಪಿಯಾಗಬಹುದು; ಮಾನವನನ್ನು ಕಬಳಿಸುವ ಉಗ್ರಕಾಳಿಯಾಗಬಹುದು. ಆದರೆ ಮಾನವನು ಇಂದು ಎಚ್ಚೆತ್ತು, ಅವನಲ್ಲಿ ಮಾನವೀಯತೆಯು ಅಂಕುರಿಸಿ ವಿಕಸಿತವಾಗಿ ಅವನು ಶಾಂತಿಯುತ ಸಹಬಾಳ್ವೆ ನಡಸಲು ನಿರ್ಧರಿಸಿದರೆ ವಿಜ್ಞಾನವು ಅವನ ಅಡಿಯಾಳಾಗಿ ಅವನ ಆಶೋತ್ತರಗಳನ್ನು ನೆರವೇರಿಸಿ, ಅವನಿಗೆ ಸುಖಸಂಪತ್ತನ್ನು ನೀಡುವುದರಲ್ಲಿ ಸಂಶಯವಿಲ್ಲ.

—ಡಾ॥ ಸೀಬಯ್ಯ

# ವೈಜ್ಞಾನಿಕ ದೃಷ್ಟಿ*

ನಮ್ಮ ದೇಶದ ಜನತೆಯನ್ನೂ ಸಾಹಿತ್ಯವನ್ನೂ ಪರಸ್ಪರ ಹತ್ತಿರ ತರಬೇಕೆಂಬುದು ಪರಿಷತ್ತಿನ ಮುಖ್ಯ ಉದ್ದೇಶವಾಗಿದೆ. ಈ ತೆರದ ಸಾಹಿತ್ಯೋತ್ಸವಗಳಿಂದ ನಮ್ಮ ಸಾಹಿತ್ಯದಲ್ಲಿ ಹೊಸ ಶಕ್ತಿಯೂ ಕಾಂತಿಯೂ ಉಂಟಾಗಿ, ಆ ಮೂಲಕ ನಮ್ಮ ಜನದ ಜೀವನದಲ್ಲಿ ಒಂದು ಹೊಸ ವೀರ್ಯವೂ ಸೌಂದರ್ಯವೂ ಉಂಟಾದೀತೆಂಬುದು ಪರಿಷತ್ತಿನ ನಿರೀಕ್ಷಣೆಯಾಗಿದೆ. ನಮ್ಮಲ್ಲಿ ಒಂದು ಹೊಸ ದೃಷ್ಟಿ ವಿಶಾಲತೆ ನೆಲಸಬೇಕಾಗಿದೆ. ಅದಕ್ಕೆ ನಮ್ಮ ಮನಸ್ಸಿನ ಪ್ರವೃತ್ತಿ ಹೊಸದಾಗಬೇಕು. ವಿವೇಕಾನಂದರವರು ಹೇಳಿದಂತೆ, ನಮ್ಮ ಜನರು ಈಗ ಭೂಮಿಗೆ ಗುಲಾಮರೂ, ಸ್ವರ್ಗಕ್ಕೆ ಉಮೇದುವಾರರೂ ಆಗಿದ್ದಾರೆ. ಈ ಸ್ಥಿತಿಯಿಂದ ನಾವು ಪಾರಾಗಬೇಕಾದರೆ,—"ನಮಗೂ ಈ ಪ್ರಪಂಚದಲ್ಲಿ ಬದುಕಲು ಹಕ್ಕಿದೆ; ನಮಗೂ ಬದುಕಲು ಸಾಮರ್ಥ್ಯವಿದೆ; ನಮಗೂ ಜೀವನದಲ್ಲಿ ಒಂದು ಕರ್ತವ್ಯವಿದೆ"— ಎಂಬ ತಿಳಿವಳಿಕೆ ನಮ್ಮಲ್ಲಿ ಪ್ರತಿಯೊಬ್ಬನಿಗೂ ಬರಬೇಕು. ಅಸಾಧ್ಯವಾದ ವೈರಾಗ್ಯದ ಸೋಗಿಗಿಂತ ಸಾಧ್ಯವಾದ ಭೋಗದ ಸಾಧನೆ ಮೇಲೆಂದು ನಾವೆಲ್ಲ ಸ್ಪಷ್ಟವಾಗಿ ಅಂಗೀಕರಿಸಬೇಕು. ನಾವು ಮಾಡುವ ಕೆಲಸದಲ್ಲಿ ಒಂದು ಉತ್ಸಾಹ, ನಿಜವಾದ ಧರ್ಮದಲ್ಲಿ ಒಂದು ಆಸಕ್ತಿ — ಇವು ನಮಗೆ ಆವಶ್ಯಕ. ಇವುಗಳ ಜೊತೆಗೆ ನಿಜವಾದ ಧರ್ಮ ಯಾವುದು ಎಂಬುದನ್ನು ಹುಡುಕಿ ತಿಳಿಯುವ ಶ್ರದ್ಧೆಯೂ ಇರಬೇಕು. ಇದಕ್ಕಾಗಿ ನಮ್ಮ ಬುದ್ಧಿ ಸ್ವತಂತ್ರವಾಗಿ ಸಂಚರಿಸಬೇಕು. ಇದು ಉಂಟಾಗಬೇಕಾದರೆ ಇತರ ದೇಶಗಳವರು ಏನು ಮಾಡುತ್ತಿದ್ದಾರೆಂಬುದನ್ನು ನಾವು ಪರೀಕ್ಷಿಸಿ ತಿಳಿಯಬೇಕು. ಎಂದರೆ ಪಾಶ್ಚಾತ್ಯರು ಹೇಳುವುದನ್ನೆಲ್ಲ ನಾವು ನಂಬಬೇಕೆಂದಲ್ಲ. ಅವರು ಹೇಳುವುದನ್ನು ವಿಚಾರಮಾಡಿ ನಿಜವನ್ನು ತಿಳಿದುಕೊಳ್ಳಬೇಕು.

"ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾಕುರು"

ಇದಕ್ಕೆ ಸಹಾಯಕವಾಗುವುದು ವಿಜ್ಞಾನ.

---

* ಶ್ರೀ ಡಿ. ವಿ. ಜಿ. ಅವರ 'ಸಾಹಿತ್ಯ ಶಕ್ತಿ' ಎಂಬ ಪುಸ್ತಕದಿಂದ (ಪುಟ ೬೭-೬೮)

# ಅಂತರರಾಷ್ಟ್ರೀಯ ಭೂಭೌತ ಸಂವತ್ಸರ

ಈಗ ನಡೆದು ಮುಗಿಯುತ್ತಿರುವ ಕ್ರಿ, ಶ. 1957 ನೇ ಸಂವತ್ಸರವು ಅನೇಕ ದೃಷ್ಟಿಗಳಿಂದ ಮಹತ್ವಪೂರಿತವಾದುದು. ನಮ್ಮ ಭಾರತದೇಶದ ಚರಿತ್ರೆಯಲ್ಲಿ ಘಟನಾತ್ಮಕವಾದ ಪರದಾಸ್ಯ ವಿಮೋಚನೆಗೆ ಅಂಕುರಾರ್ಪಣೆಯ ರೂಪದಲ್ಲಿ ನಡೆದ ಸನ್ನಿವೇಶವು ನೂರು ವರ್ಷಗಳ ಹಿಂದೆ ಒದಗಿತು. ಇದೇ ಸಂದರ್ಭದಲ್ಲಿ ಆಚರಿಸಲ್ಪಟ್ಟ ಸ್ವಾತಂತ್ರ್ಯ ಸಮರದ ಶತಮಾನೋತ್ಸವದ ವೈಭವವು ನಮ್ಮೆಲ್ಲರ ನೆನಪಿನಲ್ಲಿಯೂ ಉಳಿದಿದೆ. ಇವೇ ಅಲ್ಲದೆ ಅಂತರರಾಷ್ಟ್ರೀಯ ದೃಷ್ಟಿಯಿಂದಲೂ ಮಾನವನ ಇತಿಹಾಸದ ದೃಷ್ಟಿಯಿಂದಲೂ ಸಹ, ಈ ವರ್ಷವು ಬಹಳ ಗಮನಾರ್ಹವಾದುದು. ಈಗ ಮಾನವನು ವಿದ್ಯುಚ್ಛಕ್ತಿಯುಗದಿಂದಲೂ, ಅಣುಯುಗದಿಂದಲೂ ಮುಂದಕ್ಕೆ ಸಾಗಿ ರಾಕೆಟ್ ಯುಗವನ್ನು ಮುಟ್ಟಿದ್ದಾನೆ. ತಾನು ವಾಸಿಸುತ್ತಿರುವ ಜಗತ್ತಿನ ವಿದ್ಯಮಾನಗಳಲ್ಲಿ ಮಾತ್ರ ಉತ್ಸಾಹಗೊಳ್ಳದೆ, ವಿಶ್ವದ ಕಡೆಗೆ ತನ್ನ ದೃಷ್ಟಿಯನ್ನು ಇಟ್ಟು ಇತರ ಗ್ರಹಗಳಲ್ಲಿಯೂ ತನ್ನ ಪ್ರಭಾವವನ್ನು ಬೀರಲು ಸಾಹಸಪಡುತ್ತಿದ್ದಾನೆ. ಈ ಸಾಹಸಕ್ಕೆ ತಳಹದಿಯಾಗಿ ಈಗ ಪ್ರಪಂಚದ ಎಲ್ಲ ರಾಷ್ಟ್ರಗಳ ವಿಜ್ಞಾನಿಗಳೂ ಸಹಕರಿಸಿ, ಅಂತರರಾಷ್ಟ್ರೀಯ ಭೌತ ಸಂವತ್ಸರವನ್ನು ಕ್ರಿ. ಶ. 1957 ನೇ ವರ್ಷ ಜೂಲೈ 1 ರಿಂದ ಕ್ರಿ. ಶ. 1958 ನೇ ವರ್ಷ ಡಿಸೆಂಬರ್ 31 ರ ವರೆಗೆ ಆಚರಿಸಲು ನಿರ್ಧರಿಸಿದ್ದಾರೆ. ಈ ಸಂವತ್ಸರಕ್ಕೆ ಸಂಕೇತ ರೂಪವಾಗಿರುವ I.G.Y. ಸಂಸ್ಥೆಯ ಧ್ಯೇಯ, ವಿಧಾನ ಮತ್ತು ಫಲಿತಾಂಶಗಳ ವಿಚಾರವಾಗಿ ಕೆಲವು ವಿಷಯಗಳನ್ನು ತಿಳಿಸುವುದೇ ಈ ಸಣ್ಣ ಲೇಖನದ ಉದ್ದೇಶವಾಗಿದೆ.

ಭೂಭೌತ ಪ್ರಯೋಗಗಳಲ್ಲಿ ಮೊದಲಿನ ಸ್ಥಾನವು ಭೂಮಿಯನ್ನು ಅಳತೆ ಮಾಡಿದ ಇರಾಟೋಸ್ಥೆನಿಸ್‌ಗೂ, ಅದರ ತೂಕದ ಪ್ರಮಾಣವನ್ನು ಕಂಡುಹಿಡಿದ ಕ್ಯಾವೆಂಡಿಷ್‌ಗೂ ಸಲ್ಲತಕ್ಕುದಾಗಿದೆ. ಇವುಗಳನಂತರ ನಡೆದ ಪ್ರಯೋಗಗಳಿಂದ ನಮಗೆ ಮುಖ್ಯವಾಗಿ ತಿಳಿದುಬಂದಿರುವ ವಿಚಾರಗಳು ಯಾವುವೆಂದರೆ, ಭೂಮಿಯು ಒಂದು ದೊಡ್ಡ ಅಯಸ್ಕಾಂತದಂತೆ ವರ್ತಿಸುವುದು, ವಾಯುಮಂಡಲದ ರಚನೆ, ಮಾರುತಗಳ ಸಂಚಾರ, ವಾಯುಮಂಡಲದ ಮೇಲ್ಮಟ್ಟದಲ್ಲಿ ಕಂಡುಬರುವ ಅಯನೋಸ್ಫಿಯರ್ ಮಂಡಲದ ಲಕ್ಷಣಗಳು, ಸೂರ್ಯನಿಂದ ಸತತವಾಗಿ ಹೊರಬೀಳುತ್ತಿರುವ ವಿದ್ಯುತ್ ಕಣಗಳು—ಇವೇ ಮೊದಲಾದುವು. ನಮ್ಮ ಭೂಮಿಯ ವಿಷಯವಾಗಿ ಇನ್ನೂ ಹೆಚ್ಚಾಗಿ ಸಂಶೋಧನೆಗಳನ್ನು ನಡೆಸಿ ನಮ್ಮ ಜ್ಞಾನವನ್ನು ಹೆಚ್ಚಿ

ಸುವ ಉದ್ದೇಶದಿಂದ ಈಗ ಸುಮಾರು 70 ರಾಷ್ಟ್ರಗಳ ವಿಜ್ಞಾನಿಗಳು ಒಂದು ಯೋಜನೆಯನ್ನು ಹಾಕಿಕೊಂಡು ಪ್ರಯೋಗಗಳನ್ನು ಮುಂದುವರಿಸುತ್ತಿದ್ದಾರೆ. ಈ ವಿಧವಾದ ಪ್ರಯತ್ನಗಳು ಈಗಾಗಲೇ ಕ್ರಿ. ಶ. 1882 ರಲ್ಲೂ ಮತ್ತು ಕ್ರಿ. ಶ. 1932 ರಲ್ಲೂ ನಡೆದಿವೆ. ಆಗಿನ ಪ್ರಯೋಗಗಳು ಕೇವಲ ಧ್ರುವಗಳ ಪ್ರದೇಶ ಗಳನ್ನು ಮಾತ್ರ ಅವಲಂಬಿಸಿದ್ದುವು. ಈಗಲಾದರೋ, ಬಹಳ ಅಗಾಧಪ್ರಮಾಣದ ವ್ಯಾಪ್ತಿಯುಳ್ಳ ಪ್ರಯೋಗಗಳನ್ನು ನಡೆಸಲು ನಿರ್ಧಾರಮಾಡಿದ್ದಾರೆ. ಇವುಗಳಲ್ಲಿ, ಭೂ ಮತ್ತು ಜಲಪ್ರದೇಶಗಳನ್ನು ಒಳಗೊಂಡ ಇಡೀ ಭೂಮಂಡಲದ ವಿವಿಧ ಲಕ್ಷಣಗಳನ್ನು ಕಂಡುಹಿಡಿಯುವುದು ಮುಖ್ಯ ಉದ್ದೇಶವಾಗಿದೆ. ಇಷ್ಟೇ ಅಲ್ಲದೆ, ಸಮಗ್ರ ವಾಯುಮಂಡಲದ ವಿವಿಧ ಮಟ್ಟಗಳಲ್ಲಿ ನಡೆಯುತ್ತಿರುವ ವಿದ್ಯಮಾನ ಗಳನ್ನು ತಿಳಿಯುವುದು ಮತ್ತೊಂದು ಗುರಿಯಾಗಿದೆ. ಈ ವರ್ಷದಲ್ಲಿ ಸೂರ್ಯ ಮಂಡಲದಲ್ಲಿ ಆಂದೋಳನ ರೂಪದಲ್ಲಿ ನಡೆಯಬಹುದಾದ ವಿಶೇಷ ಚಟುವಟಿಕೆಗಳ (Sun-spot activity) ನಿರೀಕ್ಷೆಯಿದೆ. ಇವುಗಳ ಪರಿಣಾಮವು ನಮ್ಮ ವಾಯು ಮಂಡಲದ ಮೇಲೆಯೂ ನಮ್ಮಗಳ ನಿತ್ಯಜೀವನದಲ್ಲಿಯೂ ಯಾವ ರೀತಿ ಆಗ ಬಹುದು. ಎಂಬುದನ್ನು ನಿರ್ದೇಶಿಸುವುದು ಪ್ರಯೋಗಗಳ ಮತ್ತೊಂದು ಅಂಗ ವಾಗಿದೆ. ಆದುದರಿಂದ ಈ ಪ್ರಯೋಗಗಳಿಗೆ ನಾನಾಮುಖವಾದ ಕ್ಷೇತ್ರಗಳಿಂದ ಸಹಕಾರ ದೊರೆಯಬೇಕಾಗಿದೆ. ಇವುಗಳಲ್ಲಿ ಮುಖ್ಯವಾದುವು ವಾಯುಮಂಡಲದ ಶಾಸ್ತ್ರ (Meteorology), ಹಿಮವರ್ಷ ಶಾಸ್ತ್ರ (Glaciology), ಸಾಗರಶಾಸ್ತ್ರ (Oceanology), ಭೂಕಂಪಶಾಸ್ತ್ರ (Seismology), ಗುರುತ್ವಾಕರ್ಷಣೆ ಶಾಸ್ತ್ರ (Gravimetry) ಸೂರ್ಯನ ಚಟುವಟಿಕೆ, ಅರೋರಾ ಹೊಳಪುಗಳು (Auroral displays) ಭೂ ಅಯಸ್ಕಾಂತಶಾಸ್ತ್ರ (Geomagnetism) ಮತ್ತು ವಿಶ್ವಕಿರಣಗಳ ಸಂಬಂಧವಾದ ಭೌತಶಾಸ್ತ್ರ (Cosmic Ray Physics) ಇವೇ ಮೊದಲಾದುವು.

ಮೇಲೆ ಹೇಳಿದ ನಾನಾವಿಧವಾದ ಪ್ರಯೋಗಗಳ ಅಂಗಗಳನ್ನೆಲ್ಲಾ ಸಂಶೋ ಧನೆಮಾಡಿ ಅವುಗಳನ್ನು ಕ್ರೋಢೀಕರಿಸುವುದು ಎಲ್ಲಕ್ಕಿಂತ ಮುಖ್ಯವಾದ ಕೆಲಸ. ಇದನ್ನು ನಿರ್ವಹಿಸಲು ಹಲವಾರು ನಿಪುಣರ ಸಮಿತಿಗಳು ಏರ್ಪಟ್ಟಿವೆ. ಸುಮಾರು 2000 ಗೊತ್ತಾದ ಸ್ಥಾನಗಳಲ್ಲಿ ಪ್ರಯೋಗ ಶಾಲೆಗಳು ನಿರ್ಮಿತವಾಗಿವೆ. ಸಾವಿರ ಕ್ಕಿಂತ ಹೆಚ್ಚಾದ ಸಂಶೋಧನಾಕೇಂದ್ರಗಳು ಆರಿಸಲ್ಪಟ್ಟಿವೆ. ಭೂಮಧ್ಯರೇಖೆ, ಉಷ್ಣ ಮತ್ತು ಶೀತವಲಯಗಳು, ಉತ್ತರ ಮತ್ತು ದಕ್ಷಿಣ ಧ್ರುವಗಳ ಎಡೆಗಳಲ್ಲಿರುವ ಪ್ರದೇಶಗಳು ಇವುಗಳು ಪ್ರಮುಖಸ್ಥಾನವನ್ನು ಪಡೆದಿವೆ—ಈ ಸಂವತ್ಸರದ ಅವಧಿ ಯಲ್ಲಿ 60 ನಿಯತವಾದ ಪ್ರಪಂಚದ ದಿನಗಳಲ್ಲಿಯೂ (Regular World

Days) ವಿಶೇಷವಾದ ಪ್ರಯೋಗಗಳು ನಡೆಯುತ್ತವೆ. ವಾತಾವರಣ ಬದಲಾವಣೆಗಳ ದೃಷ್ಟಿಯಿಂದ ಮುಖ್ಯವಾದ ಹತ್ತು ದಿನಗಳ ಅವಧಿಯುಳ್ಳ ಆರು ಕ್ಲಿಪ್ತಕಾಲಗಳಲ್ಲಿ ವೀಕ್ಷಣೆಗಳ ಸಂಗ್ರಹಣೆ ನಡೆಯುವುದು. ಇಷ್ಟೇ ಅಲ್ಲದೆ, ಹಠಾತ್ತನೆ ಸಂಭವಿಸಬಹುದಾದ ವಿಶೇಷ ಘಟನೆಗಳ ಸಂದರ್ಭಗಳಲ್ಲಿ ಬಹಳ ನಾಜೂಕಾದ ಪ್ರಯೋಗಗಳು ನಡೆಯುತ್ತವೆ.

ಇದುವರೆವಿಗೂ, ಪ್ರಪಂಚದ ನಾನಾ ರಾಷ್ಟ್ರಗಳ ವಿಜ್ಞಾನಿಗಳು ಒಟ್ಟುಗೂಡಿ ಹಾಕಿಕೊಂಡಿರುವ ಯೋಜನೆಯ ವಿಷಯವನ್ನು ಪ್ರಸ್ತಾಪಮಾಡಲಾಯಿತು. ಈಗ ವಿವಿಧ ಶಾಖೆಗಳಿಗೆ ಸಂಬಂಧಪಟ್ಟ ಕೆಲವು ಮೂಲ ಸಂಶೋಧನಗಳ ಸ್ವರೂಪವನ್ನು ಪರಿಚಯಮಾಡಿಕೊಡಲಾಗುವುದು.

## ವಾತಾವರಣಶಾಸ್ತ್ರ (Meteorology)

ವಾಯುಮಂಡಲದಲ್ಲಿ ನಾವು ಮೇಲಕ್ಕೆ ಹೋದಂತೆಲ್ಲ ವಾಯುವಿನ ಒತ್ತಡವೂ, ಉಷ್ಣತೆಯೂ ಇಳಿಯುತ್ತಾ ಹೋಗುತ್ತವೆ. ವಾಯುಮಂಡಲದಲ್ಲಿ ಟ್ರೋಪೋಸ್ಫಿಯರ್, ಸ್ಟ್ರಾಟೋಸ್ಫಿಯರ್, ಅಯನೋಸ್ಫಿಯರ್ ಮುಂತಾದ ಹಲವು ಮಟ್ಟಗಳಿವೆ. ಇವುಗಳಲ್ಲಿರುವ ವಾಯು ಒತ್ತಡ, ಉಷ್ಣತೆ, ಮೊದಲಾದ ಲಕ್ಷಣಗಳ ವಿಚಾರವಾಗಿ ಈಗಾಗಲೇ ಹಲವಾರು ಅಂಶಗಳು ತಿಳಿದಿವೆ. ವಾಯುಮಂಡಲದ ಅತ್ಯುಚ್ಚಮಟ್ಟಗಳು ಸುಮಾರು 500-600 ಮೈಲಿಗಳವರೆಗೆ ಪ್ರಸರಿಸಬಹುದೆಂದು ಎಣಿಸಲಾಗಿದೆ. ಆದರೆ ಸುಮಾರು 60 ಮೈಲಿಗಳ ಎತ್ತರದಲ್ಲಿರುವ ವಾಯುವಿನ ಒತ್ತಡವು ಸಮುದ್ರಮಟ್ಟದಲ್ಲಿರುವುದರ ಪ್ರಮಾಣದ ಹತ್ತು ಲಕ್ಷದ ಒಂದು ($10^{-6}$) ಪಾಲಷ್ಟು ಇರುವುದು. ಇನ್ನೂ ಸುಮಾರು 300 ಮೈಲಿಗಳಷ್ಟು ಎತ್ತರದಲ್ಲಿ ಮೇಲೆ ಹೇಳಿದ ಪ್ರಮಾಣಕ್ಕಿಂತ ಹತ್ತು ಲಕ್ಷದ ಒಂದು ಪಾಲಿಗೆ ಇಳಿಯುತ್ತದೆ. ಆದರೂ, ಇಷ್ಟು ಅತ್ಯಲ್ಪ ಪ್ರಮಾಣದಲ್ಲಿರುವ ಅನಿಲಗಳೂ ಪ್ರಾಣಧಾರಣೆಗೆ ಅವಶ್ಯಕವಾಗಿರುವುವು. ಈ ಎತ್ತರವಾದ ಮಟ್ಟಗಳಲ್ಲಿ ಹಲವಾರು ಕ್ಲಿಷ್ಟವಾದ ಭೂರಾಸಾಯನಿಕ ಕ್ರಿಯೆಗಳು ನಡೆಯಬಹುದು. ಮತ್ತು ಸೂರ್ಯನ ಕಿರಣಗಳೂ ವಿಶ್ವಕಿರಣಗಳೂ ಇತರ ಸೂಕ್ಷ್ಮಕಣಗಳೂ ಇವುಗಳ ಮೂಲಕ ಹಾಯುವಾಗ ಬಹಳ ಪರಿಣಾಮಕಾರಿಯಾದ ಪ್ರಭಾವಕ್ಕೆ ಒಳಗಾಗಿ, ನಮ್ಮ ಭೂಮಿಯ ಮಟ್ಟಕ್ಕೆ ಬರುವಾಗ ಬದಲಾವಣೆಯನ್ನು ಹೊಂದುವ ಸಂಭವವಿರುತ್ತದೆ. ಸೂರ್ಯಕಿರಣಗಳು ಕೆಳಗಿನ ಮಟ್ಟದ ವಾಯುಮಂಡಲದ ಮೂಲಕ ಪ್ರಸರಿಸುವುದರಿಂದ, ಬಿರುಗಾಳಿಗಳು, ಸಮುದ್ರದ ಮತ್ತು ಸಾಗರಗಳ ನೀರಿನ ಮಟ್ಟದ ಬದಲಾವಣೆಗಳು ಮುಂತಾದುವುಗಳ ದೆಸೆಯಿಂದ ನಮ್ಮ ಭೂಗ್ರಹದ

ಭೌತಸ್ವರೂಪವೇ ಬದಲಾಗುವುದು—ವಿದ್ಯುದಯಸ್ಕಾಂತಸ್ವರೂಪದ ಚಟುವಟಿಕೆಗಳ (Electromagnetic Processes) ಪರಿಣಾಮವಾಗಿ ಅಯಸ್ಕಾಂತಿಕ ಬಿರುಗಾಳಿಗಳೂ ಸಂಭವಿಸುವುವು. ಉತ್ತರವಲಯಗಳಲ್ಲಿ ಆಕಾಶದಲ್ಲಿ ಕಂಡುಬರುವ ಜ್ಯೋತಿಯ ಹೊಳಪಿಗೂ (Aurora Borealis) ಕಾರಣವಾಗುತ್ತವೆ. ಶಾಖದ ವಿನಿಮಯದ ಸಮಸ್ಯೆಗಳು ರೇಡಿಯೋ ಆಕ್ಟಿವಿಟಿಗೂ (Radio-activity) ಮಳೆಗೂ ಇರುವ ಸಂಬಂಧ, ಹಿಮಪರ್ವತಗಳ ಕರಗುವಿಕೆಯಿಂದ ಭೂಜಲಪ್ರದೇಶಗಳ ವ್ಯತ್ಯಾಸಗಳು, ಮುಂತಾದುವುಗಳೆಲ್ಲ ಸಂಶೋಧನೆಗಳಲ್ಲಿ ಅಡಗಿವೆ. ಇವುಗಳೆಲ್ಲದರ ಪರಿಣಾಮ ಜಗತ್ತಿನ ವಾಯುಗುಣದ ಮೇಲೆ ಹೇಗೆ ಇರುತ್ತದೆ ಎಂಬುದನ್ನು ವ್ಯಕ್ತಪಡಿಸುವುದು ಮುಖ್ಯಧ್ಯೇಯವಾಗಿರುತ್ತದೆ.

## ಗುರುತ್ವಾಕರ್ಷಣೆ ಮತ್ತು ಭೂಕಂಪ ವಿಜ್ಞಾನ

ಘನ ಸ್ವರೂಪದ ಭೂಮಿಯೂ ಕೂಡ ಸಮುದ್ರದಂತೆಯೇ, ಚಂದ್ರ ಮತ್ತು ಸೂರ್ಯ ಇವುಗಳ ಗುರುತ್ವಾಕರ್ಷಣಾಶಕ್ತಿಗೆ ಒಳಗಾಗಿ, ಉಬ್ಬರವಿಳಿತಗಳಿಗೆ ಒಳಗಾಗುವ ವಿಚಾರದ ವಿಷಯವಾಗಿ ಸಂಶೋಧನೆಗಳು ನಡೆಯಬೇಕಾಗಿದೆ. ಇದಕ್ಕೆ ಭೂಮಿಯ ಗರ್ಭದ ಒಳರಚನೆಯನ್ನು ತಿಳಿಯಬೇಕಾಗುತ್ತದೆ. ಇವುಗಳಿಗಾಗಿ ಹಲವಾರು ಸಂಶೋಧನಾಕೇಂದ್ರಗಳಿರುತ್ತವೆ. ಸುಮಾರು 40 ನಕ್ಷತ್ರವೀಕ್ಷಕ ಶಾಲೆಗಳಲ್ಲಿ (Observatories) ಯಂತ್ರಸಾಧನಗಳನ್ನು ಅಳವಡಿಸಿ ಭೂಭ್ರಮಣದ ವಿಚಾರವನ್ನು ವಿಸ್ತಾರವಾಗಿ ತಿಳಿಯಬೇಕಾಗಿದೆ.

## ಸೂರ್ಯನಿಗೆ ಸಂಬಂಧಪಟ್ಟ ಸಂಶೋಧನೆ

ಸೂರ್ಯಮಂಡಲದಲ್ಲಿ ಆಗಾಗ ಸಂಭವಿಸುವ ವಿಶೇಷ ಚಳುವಳಿಗಳನ್ನು ತಿಳಿಯಲು ಹಲವಾರು ವೇಧಶಾಲೆಗಳು ಈಗಾಗಲೇ ಸಹಕರಿಸುತ್ತಿವೆ. ಸೂರ್ಯನಿಗೆ ಸಂಬಂಧಿಸಿದಂತೆ ಉದ್ಭವಿಸುವ ಅಯಸ್ಕಾಂತಕ್ಷೇತ್ರ (Magnetic Field) ದ ಶಕ್ತಿಯ ಅಳತೆ, ಸೂರ್ಯಜ್ವಾಲೆಗಳು, ಮುಂತಾದವುಗಳ ವಿಷಯವಾಗಿ ಉಪಯುಕ್ತ ಅಂಶಗಳನ್ನು ಸಂಗ್ರಹಿಸಬೇಕಾಗಿದೆ. ಸೂರ್ಯನಿಂದ ಹೊರಬೀಳುವ ಅತಿನೀಲರಶ್ಮಿ ಪ್ರಸಾರ (Ultraviolet Radiations) ದಿಂದ ವಾಯುಮಂಡಲದಲ್ಲಿರುವ ಆಮ್ಲಜನಕವು ಓಜೋನಾಗಿ ಪರಿವರ್ತಿತವಾಗುತ್ತದೆ. ಇದರ ವಿಚಾರವಾಗಿಯೂ ಸಂಶೋಧನೆಗಳು ನಡೆಯಬೇಕು. ರಾತ್ರಿಯ ವೇಳೆಯಲ್ಲಿಯೂ, ಮೇಲುಗಡೆ ವಾಯುಮಂಡಲದಲ್ಲಿ ಒಂದು ವಿಧವಾದ ಹೊಳಪು (Airglow) ಕಂಡುಬರುತ್ತದೆ. ಇದರ ಸ್ವರೂಪ ಲಕ್ಷಣಗಳು ಇವುಗಳನ್ನೂ ಶಾಸ್ತ್ರೀಯವಾಗಿ ತಿಳಿಯಬೇಕಾಗಿದೆ. ವಿಶ್ವಕಿರಣಗಳ ವಿಚಾರವಾಗಿಯೂ ನಮಗೆ ತಿಳಿದುಬಂದಿರುವ

ಜ್ಞಾನವು ಅತ್ಯಲ್ಪವಾದುದು. ಇದನ್ನೂ ವಿಸ್ತರಿಸಲು ಪ್ರಯತ್ನಿಸಲಾಗಿದೆ. ಸೂರ್ಯ ಮಂಡಲದಲ್ಲಿ ಸಂಭವಿಸಬಹುದಾದ ತೀಕ್ಷ್ಣಜ್ವಾಲೆಗಳ ದೆಸೆಯಿಂದ ಭೂಮಿಯ ಆಯಸ್ಕಾಂತ ಶಕ್ತಿಯು ಬದಲಾವಣೆ ಹೊಂದುತ್ತದೆ. ಮತ್ತು ರೇಡಿಯೋ ಅಲೆಗಳ ಪ್ರಸಾರಕ್ಕೆ ಅಡಚಣೆಯುಂಟಾಗಿ ತಾತ್ಕಾಲಿಕವಾಗಿ ರೇಡಿಯೋ ವಾರ್ತೆಗಳು ಶಕ್ತಿಹೀನವಾಗುತ್ತವೆ. ಸುಮಾರು 27 ಘಂಟೆಗಳ ನಂತರ ಪ್ರಕಾಶಯುತವಾದ ಅರೋರಾ (Aurora) ಹೊಳಪು ಆಕಾಶದಲ್ಲಿ ಕಂಡುಬರುತ್ತದೆ. ಇವುಗಳ ವಿಚಾರವಾಗಿಯೂ ಸಂಶೋಧನೆಗಳು ನಡೆಯಬೇಕು. ಇವುಗಳನ್ನು ನಡೆಸಲು ಸುಮಾರು 100 ಹೊಸ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ರೇಡಿಯೋ ಅಲೆಗಳ ಪ್ರಸಾರ ಮತ್ತು ವಿಶ್ವಕಿರಣಗಳ ವಿಜ್ಞಾನ ಇವುಗಳ ಮೇಲೆ ಬಹಳ ಪರಿಣಾಮಕಾರಿಯಾದ ಪ್ರಭಾವವಿರುತ್ತದೆ.

ಮೇಲೆ ತಿಳಿಸಿದ ವಿವಿಧ ಸಂಶೋಧನೆಗಳನ್ನು ನಡೆಸಲು ಮುಖ್ಯವಾಗಿ ಸಹಾಯಕವಾಗಿರುವಂತೆ ರಾಕೆಟ್‌ಗಳನ್ನೂ ಉಪಗ್ರಹಗಳನ್ನೂ (Satellites) ಹಾರಿಸುವುದು ಬಹಳ ಪ್ರಧಾನ ವಿಧಾನಗಳಾಗಿವೆ. ಅಮೇರಿಕ ಮತ್ತು ರಷ್ಯದೇಶಗಳು ಈ ಯೋಜನೆಯಲ್ಲಿ ಮುಖ್ಯ ಪಾತ್ರವನ್ನು ವಹಿಸಿವೆ. ಇಂಗ್ಲೆಂಡ್, ಫ್ರಾನ್ಸ್, ಜರ್ಮ ಮತ್ತು ಆಸ್ಟ್ರೇಲಿಯಾ ದೇಶಗಳೂ ತಮ್ಮ ಸಹಾಯವನ್ನು ನೀಡುತ್ತವೆ.

ಉಪಗ್ರಹದ ನಿರ್ಮಾಣದಲ್ಲಿ ಈಗಾಗಲೇ ರಷ್ಯಾದೇಶವು ಅಮೆರಿಕಕ್ಕಿಂತ ಮುಂದಿರುವುದು ಎಲ್ಲರಿಗೂ ತಿಳಿದೇ ಇದೆ. ಈ ವರ್ಷ ಅಕ್ಟೋಬರ್ 4 ನೇ ತಾರೀಖಿನಲ್ಲಿ ರಾಕೆಟ್‌ಗಳ ಮೂಲಕ ರಷ್ಯದ ವಿಜ್ಞಾನಿಗಳು ಮೊಟ್ಟಮೊದಲನೇ ಭೂಮಿಯ ಕೃತಕ ಉಪಗ್ರಹವನ್ನು ಹಾರಿಸಿದರು. ಇದನ್ನು Sputnik I ಎಂದು ಕರೆಯಲಾಗಿದೆ. ವಿಜ್ಞಾನದ ಇತಿಹಾಸದಲ್ಲಿಯೇ ಚರಿತ್ರಾರ್ಹವಾದ ಘಟನೆಯೆಂದು ಹೇಳಬಹುದು. ಕೇವಲ 86 ಪೌಂಡ್- ತೂಕವುಳ್ಳದ್ದಾಗಿಯೂ, ಸುಮಾರು ಎರಡು ಅಡಿ ವ್ಯಾಸವುಳ್ಳ ಗೋಳಾಕೃತಿಯುಳ್ಳದ್ದಾಗಿಯೂ ಇರುವ ಈ ವಸ್ತುವು ಸುಮಾರು 600 ಮೈಲಿಗಳ ಎತ್ತರದಲ್ಲಿ ವಿಸರ್ಜಿತವಾಗಿ, 96 ನಿಮಿಷಗಳಲ್ಲಿ ಒಂದು ಆವರ್ತಿ ಭೂಪ್ರದಕ್ಷಿಣೆಯನ್ನು ಮಾಡುತ್ತಿದೆ. ಈಗಾಗಲೇ ಸುಮಾರು ಸಾವಿರ ಆವರ್ತಿ ಪ್ರದಕ್ಷಿಣೆಮಾಡಿ ಇನ್ನೂ ತನ್ನ ಪಥದಲ್ಲಿಯೇ ಕೃತಕ ಚಂದ್ರನಂತೆ ತಿರುಗುತ್ತಿದೆ. ಕೆಲವು ಪ್ರದೇಶಗಳಲ್ಲಿ ಇದನ್ನು ಆಕಾಶದಲ್ಲಿ ಗುರ್ತಿಸಿರುತ್ತಾರೆ. ಇದರ ಪಥದಲ್ಲಿ ಸುತ್ತುವಾಗ ಇದರ ವೇಗ ಒಂದು ಸೆಕೆಂಡಿಗೆ 5 ಮೈಲಿಗಳಷ್ಟು ಇರುತ್ತಿದೆ.

ಮೊದಲಿನ ಸಾಹಸಕ್ಕೆ ತೃಪ್ತರಾಗದೆ, ರಷ್ಯ್ ಶಾಸ್ತ್ರಜ್ಞರು ನವೆಂಬರ್ 3 ನೇ ತಾರೀಖಿನ ದಿವಸ, ಮತ್ತೊಂದು ದೊಡ್ಡ ಉಪಗ್ರಹವನ್ನು ಹಾರ ಬಿಟ್ಟಿದ್ದಾರೆ. ಇದೂ ಕೂಡ ಸುಮಾರು 1900 ಮೈಲಿಗಳ ಎತ್ತರದಲ್ಲಿ ಒಂದು ಘಂಟೆಗೆ ಸುಮಾರು 26,000 ಮೈಲಿಗಳ ವೇಗದಲ್ಲಿ ವಿಸರ್ಜಿತವಾಯಿತು. ಇದರ ತೂಕ 1/2 ಟನ್ ಅಷ್ಟು ಇರುತ್ತದೆ. ಮತ್ತು ಇದರ ಆವರ್ತಕಾಲ 102 ನಿಮಿಷಗಳು. ಇದೂ ಕೂಡ ನೂರಾರು ಪ್ರದಕ್ಷಿಣೆಗಳನ್ನು ಮಾಡಿ ಇನ್ನೂ ಸುತ್ತುತ್ತಿದೆ. ಇದರ ಒಂದು ಮುಖ್ಯ ವಿಶೇಷವೇನೆಂದರೆ, ಅದರಲ್ಲಿ ಒಂದು ಜೀವಂತ ನಾಯಿಯನ್ನು ಇಡಲಾಗಿತ್ತು. ಇದು ಕೆಲವು ದಿವಸಗಳು ಬದುಕಿದ್ದು ನಂತರ ಸತ್ತುಹೋಯಿತು. ನಾಯಿಯ ಶವವೂ ಕೂಡ ಈ ಎರಡನೇ (Sputnik II) ಉಪಗ್ರಹದಲ್ಲಿ ಸುತ್ತುತ್ತಿರುವುದು.

ಈ ಉಪಗ್ರಹಗಳಿಂದ ಅಂತರ ರಾಷ್ಟ್ರೀಯ ಸಮಸ್ಯೆಗಳಿಗೆ ಯಾವ ಪರಿಣಾಮ ವಾಗುತ್ತದೆಯೆಂಬುದನ್ನು ನಾವು ಈಗ ಪ್ರಸ್ತಾಪಮಾಡಬೇಕಾಗಿಲ್ಲ. ರಷ್ಯಾದೇಶದ ವೈಜ್ಞಾನಿಕ ಮುನ್ನಡೆಯಿಂದ ಅಮೆರಿಕಾದೇಶವು ಈಗಾಗಲೇ ಬೆರಗುಗೊಂಡಿದೆ. ವಿಜ್ಞಾನದ ದೃಷ್ಟಿಯಿಂದ ನೋಡಿದರೆ, ಈ ಉಪಗ್ರಹಗಳು ಆಕಾಶದಲ್ಲಿ ಹಾರಾಡು ತ್ತಿರುವ ಪ್ರಯೋಗಶಾಲೆಗಳಂತಿವೆ. ಅವುಗಳೊಳಗೆ ಹಲವಾರು ಯಂತ್ರಸಾಧನೆಗಳು ಅಡಕವಾಗಿವೆ. ಕ್ಷಣಕ್ಷಣಕ್ಕೂ ಬದಲಾವಣೆ ಹೊಂದುತ್ತಿರುವ ವಾತಾವರಣದ ಹಲವಾರು ಅಂಶಗಳು ಉಲ್ಲೇಖವಾಗಿ ಅವುಗಳನ್ನು ವಿಶೇಷ ರೇಡಿಯೋ ಸಾಧನ ಗಳಿಂದ ಸಂಕೇತಗಳನ್ನು ಹೊರಗೆಡಹುವಂತೆ ಮಾಡಲಾಗಿದೆ. ಈ ಸಂಕೇತ ಗಳು ಒಂದು ಗೊತ್ತಾದ ತರಂಗ ದೂರದಲ್ಲಿರುವುದರಿಂದ (Wave-length) ನಾನಾ ಕೇಂದ್ರಗಳಲ್ಲಿ ಗ್ರಹಣಮಾಡುವುದರ ಮೂಲಕ ವಿಷಯಗಳೆಲ್ಲವೂ ಸಂಗ್ರಹ ವಾಗುತ್ತಿವೆ. ಟೆಲಿವಿಷನ್ ಯಂತ್ರಗಳನ್ನು ಇಡುವುದರ ಮೂಲಕ ರೇಡಿಯೋ ಸಂಕೇತಗಳನ್ನು ಕೇಳುವುದರ ಜೊತೆಗೆ ಉಪಗ್ರಹದಲ್ಲಿರುವ ಯಂತ್ರಗಳ ಸೂಜಿ ಗಳನ್ನು ನೋಡಲು ಕೂಡ ಅವಕಾಶವಿರುತ್ತದೆ.

ಈಗ ನಡೆಯುತ್ತಿರುವ I.G.Y. ಸಂಸ್ಥೆಯ ಕಾರ್ಯಪಟ್ಟಿಯಲ್ಲಿ ನಮ್ಮ ಭಾರತದೇಶವೂ ಕೂಡ ಸಾಕಷ್ಟು ಪಾತ್ರವನ್ನು ವಹಿಸುತ್ತಿದೆ. 12 ರೇಡಿಯೋ ಮಾರುತ ಕೇಂದ್ರಗಳೂ, ಮೇಲ್ಮಟ್ಟಗಳಲ್ಲಿ ಗಾಳಿಗಳ ಸಂಚಲನಕ್ಕೆ ಸಂಬಂಧಪಟ್ಟ ವಿಷಯಗಳನ್ನು ತಿಳಿಯಲು 50 ಬೆಲೂನ್ ಕೇಂದ್ರಗಳೂ, ಬಿರುಗಾಳಿಗಳಿಗೆ ಸಂಬಂಧ ಪಟ್ಟ ಶೋಧನೆಗಳಿಗಾಗಿ ಮೂರು ಕೇಂದ್ರಗಳೂ ಸ್ಥಾಪಿತವಾಗಿವೆ. ಶಾಖವಿನಿಮಯದ ಲಕ್ಷಣಗಳನ್ನು ತಿಳಿಯಲು ಭೂಮಿಯ ಅಯಸ್ಕಾಂತ ಶಕ್ತಿಯನ್ನು ಪರೀಕ್ಷೆ ಮಾಡಲು ಸಹಕರಿಸುವಂತೆ ಹಲವು ವೀಕ್ಷಕಕೇಂದ್ರಗಳು ಏರ್ಪಟ್ಟಿವೆ. ಕೊಡೈಕ

ನಾಲ್‌ನಲ್ಲಿರುವ ವೇಧಶಾಲೆಯಲ್ಲಿ ಸೂರ್ಯನಿಗೆ ಸಂಬಂಧಪಟ್ಟ ಸಂಶೋಧನೆಗಳು ನಡೆಯುತ್ತಿವೆ. ಚಂದ್ರವೀಕ್ಷಕ (Moon-watch) ಕೇಂದ್ರವನ್ನಾಗಿ ನೈನಿತಾಲ್ ಆರಿಸಲ್ಪಟ್ಟಿದೆ. ಈ ರೀತಿಯಾಗಿ ನಮ್ಮ ರಾಷ್ಟ್ರದ ವಿಜ್ಞಾನಿಗಳೂ ಕೂಡ ಪೂರ್ಣವಾಗಿ ಸಹಕರಿಸುತ್ತಿದ್ದಾರೆ.

ಉಪಗ್ರಹದ ನಿರ್ಮಾಣವು ಕೇವಲ ವಿಜ್ಞಾನ ಸಂಶೋಧನೆಗಳ ಒಂದು ಅಂಗವಾಗಿದ್ದರೂ, ಅದರ ಸಂಬಂಧವಾದ ಜ್ಞಾನವನ್ನು ಕೆಟ್ಟ ಮಾರ್ಗಗಳಲ್ಲಿ ಉಪಯೋಗಿಸಲು ಬೇಕಾದಷ್ಟು ಅವಕಾಶವಿದೆ. ಈಗಾಗಲೇ ರಷ್ಯಾದೇಶವು ರಾಕೆಟ್ ಪ್ರಯೋಗಗಳಲ್ಲಿ ಬಹಳ ಮುಂದುವರಿದು ಅಂತರರಾಷ್ಟ್ರೀಯ ಕ್ಷಿಪಣಿ (I.C.B.M.) ಗಳನ್ನು ಫಲಕಾರಿಯಾಗಿ ಮಾಡುತ್ತಿರುವುದಾಗಿಯೂ, ಒಂದು ಸಂಪೂರ್ಣಶಸ್ತ್ರ (Perfect-weapon) ವನ್ನು ಸಿದ್ಧಗೊಳಿಸಿರುವುದಾಗಿಯೂ ವರದಿಗಳು ಕೇಳಿಬರುತ್ತಿವೆ. ಈಗಾಗಲೇ, ಪ್ರಪಂಚದ ಯಾವುದಾದರೂ ಒಂದು ಮೂಲೆಯಲ್ಲಿ ಒಂದು ಗುಂಡಿಯನ್ನು ಅದುಮಿದರೆ, ದೂರ ನಿಯಂತ್ರಣದಿಂದ ಒಂದು ದೊಡ್ಡ ಕ್ಷಿಪಣಿಯು ಗೊತ್ತಾದ ಮಾರ್ಗದಲ್ಲಿ ಒಂದು ನಿರ್ದಿಷ್ಟವಾದ ವೇಗದಿಂದ ಹೊರಡಲು ಸಾಧ್ಯವಿದೆ. ಹಾಗೆ ಸಂಚರಿಸುವ ಕ್ಷಿಪಣಿಯ ಕೊನೆಯಲ್ಲಿ A ಅಥವಾ H ಬಾಂಬುಗಳನ್ನಿಟ್ಟರೆ, ಅದು ಕೆಲವೇ ನಿಮಿಷಗಳಲ್ಲಿ ಗೊತ್ತಾದ ಗುರಿಯ ಮೇಲೆ ಬಿದ್ದು ಆ ಪ್ರದೇಶವು ಬಾಂಬು ಸಿಡಿತದಿಂದ ನಿರ್ನಾಮವಾಗಬಹುದು. ಪ್ರಬಲ ರಾಷ್ಟ್ರಗಳು ಈ ದುರ್ಮಾರ್ಗದಲ್ಲಿ ಪ್ರವರ್ತಿಸಿದರೆ, ನಮ್ಮ ನಾಗರಿಕತೆಯೇ ಅಳಿಸಿ ಹೋಗುವುದು. ಇಷ್ಟೊಂದು ಕೀರ್ತಿಯನ್ನು ಗಳಿಸಿರುವ ಮಾನವನಿಗೆ ದೊಡ್ಡ ಕಳಂಕ ಬರುವುದು. ತಾನು ವಾಸಿಸುತ್ತಿರುವ ಭೂಮಿಯನ್ನು ಬಿಟ್ಟು ಮಾನವನು ತನ್ನ ಪ್ರಭಾವವನ್ನು ಚಂದ್ರ, ಅಂಗಾರಕ ಮೊದಲಾದ ಪ್ರದೇಶಗಳ ಮೇಲೆ ಬೀರಲು ಯತ್ನಿಸುತ್ತಿದ್ದಾನೆ. ಆ ಗ್ರಹಗಳಲ್ಲಿ ಕಾಣಬರುವ ಸ್ಥಿತಿಗತಿಗಳು ಅನುಕೂಲವಾಗಿದ್ದರೆ, ಅಲ್ಲಿಯೇ ವಾಸಮಾಡಲು ಕೂಡ ಸಿದ್ಧನಿದ್ದಾನೆ. ಇಷ್ಟು ಸಾಹಸಪೂರಿತವಾದ ಮನುಷ್ಯನಿಗೆ ಸದ್ಬುದ್ಧಿ ಉಳಿದು ನಮ್ಮ ಭೂಮಿಯಲ್ಲಿ ಈಗ ಕಾಣಬರುವ ನಾಗರಿಕತೆಯನ್ನು ಉಳಿಸಿ ಪ್ರಗತಿಯ ಹಾದಿಯಲ್ಲಿ ಮುಂದುವರೆಸುತ್ತಾನೆಂದು ನಾವು ನಿರೀಕ್ಷಿಸಿದ್ದೇವೆ.

ಈಗ ನಡೆಯುತ್ತಿರುವ I.G.Y. ಸಂಸ್ಥೆಯ ಕಾರ್ಯಕಲಾಪಗಳಲ್ಲಿ ಕಾಣಬರುತ್ತಿರುವ ಸಮಗ್ರ ರಾಷ್ಟ್ರಗಳ ಸಹಕಾರವು ಮಾನವನ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಕಂಡುಬರಬೇಕು. ವಿಜ್ಞಾನದ ಪ್ರಯೋಗಗಳ ಫಲಿತಾಂಶಗಳನ್ನು ನಾಶಕಾರಕ ಮಾರ್ಗಗಳಲ್ಲಿ ಪ್ರವರ್ತಿಸದೆ, ಮಾನವನ ಸುಖಶಾಂತಿಗಳಿಗಾಗಿಯೇ ಉಪಯೋಗಿಸುವ ವಿವೇಕವು ಬರಬೇಕು.

ಸದ್ಯದ ಪರಿಸ್ಥಿತಿಯಲ್ಲಿ ರಾಕೆಟ್ ಮತ್ತು ಉಪಗ್ರಹಗಳ ಉದ್ಯಮಗಳಲ್ಲಿ ಪ್ರಬಲ ರಾಷ್ಟ್ರಗಳ ಗಮನವು ಸೆಳೆದು ಅವರಲ್ಲಿ ತೀವ್ರ ಸ್ಪರ್ಧೆ ಏರ್ಪಟ್ಟಿವೆ. ಹೀಗಾಗಿ ಪರಮಾಣು ಬಾಂಬುಗಳ ಪರೀಕ್ಷೆಯ ಪ್ರಯೋಗಗಳು ಸ್ವಲ್ಪ ಹಿಂದಕ್ಕೆ ಹೋದರೆ, ಯುದ್ಧದ ಭಯವು ದೂರವಾದಂತೆ ಕಾಣಬರುತ್ತದೆ. ಇದೇ ಮನೋಭಾವದಿಂದ ರಾಷ್ಟ್ರಗಳು ಮುಂದುವರಿದರೆ, ಶಾಂತಿಸ್ಥಾಪನೆಯ ಸೂಚನೆಗಳು ಸ್ಥಿರವಾಗುವುವು. ಇಡೀ ಮಾನವನ ಸಂಸಾರದಲ್ಲಿ ಸೌಹಾರ್ದವು ನೆಲಸುವುದು.

ಈಗ ನಡೆಯುತ್ತಿರುವ I.G.Y. ಸಂಸ್ಥೆಯ ವಿದ್ಯಮಾನಗಳಲ್ಲಿ ಕಾಣಬರುವ ಸಹಕಾರ ಬುದ್ಧಿಯು ವೃದ್ಧಿಹೊಂದಿದರೆ ಜನಾಂಗಗಳ ಸಹ ಜೀವನದ ಜೊತೆಯಲ್ಲಿ ಮಾನವನಿಗೂ ಪ್ರಕೃತಿಗೂ ನಿಜವಾದ ಸಹ ಜೀವನವು ಸಾಧ್ಯವಾಗಲು ಅವಕಾಶವಿರುತ್ತದೆ. ಹೀಗಾದರೆ, ವಿಜ್ಞಾನ ದೃಷ್ಟಿಯಿಂದ ನಡೆಯುತ್ತಿರುವ ಪ್ರಯೋಗಗಳು ನಿಜವಾಗಿಯೂ ಫಲಕಾರಿಯಾಗುವುವು.

ಕೆ. ಶೇಷಾದ್ರಿ ಐಯ್ಯಂಗಾರ್.

# ನಿಕೊಲಾಸ್ ಕೊಪರ್ನಿಕಸ್

" The reasonable man adapts himself to the world: the unreasonable one persists in trying to adapt the world to himself. Therefore all progress depends on the unreasonable man."

— *George Bernard Shaw*

ವಿಜ್ಞಾನವಾಗಲಿ, ಸಾಹಿತ್ಯವಾಗಲಿ ಅಥವಾ ಮತ್ತಾವುದೇ ಕಲೆಯಾಗಲಿ ಒಂದು ಕಾಲದ ಜನಸಾಮಾನ್ಯರ ಪ್ರೋತ್ಸಾಹದಿಂದ ಪುರಸ್ಕೃತವಾದಲ್ಲಿ ಅದರ ಪುರೋಭಿವೃದ್ಧಿ ಸಾಧ್ಯವಾದೀತು. ಒಂದು ಸಮಾಜದ, ಒಂದು ಕಾಲದ ಜನ ಸಮುದಾಯದ ಭಾವನೆಯು ಆ ಸಮಾಜದ ಪ್ರಗತಿ, ಪ್ರತಿಗತಿಗೆ ಕಾರಣ ವಾಗುತ್ತದೆ. ಅಂದರೆ ಯಾವುದಾದರೊಂದು ಸಮಾಜದಲ್ಲಿ ನಡೆ-ನುಡಿ, ರೀತಿ-ನೀತಿ, ಕಟ್ಟು ಕಟ್ಟಳೆ, ಶಿಷ್ಟಾಚಾರ, ಮೂಢ ನಂಬಿಕೆ — ಇವುಗಳ ಪ್ರಭಾವವು ಕಡಿಮೆ ಪರಿಮಾಣದಲ್ಲಿದ್ದುದೇ ಆದರೆ ಅದರಿಂದ ಆಗುವ ಪರಿಣಾಮ ಆ ಸಮಾಜದ ಪ್ರಗತಿ. ಯಾವ ಸಮಾಜವಾದರೂ ಮೇಲೆ ಹೇಳಿದ ಕಂದಾಚಾರಗಳ ಪ್ರಬಲ ಪ್ರಭಾವಕ್ಕೆ ಒಳಗಾಗಿದ್ದರೆ ಅದರ ಪರಿಣಾಮ ಆ ಸಮಾಜದ ಜಡ ಸ್ಥಿತಿ ಅಥವಾ ಪ್ರತಿಗತಿ. ಮೊದಲನೆಯ ರೀತಿಯ ಸಮಾಜದಲ್ಲಿ ಹಲವು ಪ್ರತಿಭಾವಂತ ಹಾಗೂ ಪ್ರಭಾವಶಾಲಿ ವ್ಯಕ್ತಿಗಳ ವಿಚಾರಶಕ್ತಿ, ಅನುಭವ, ಪ್ರಗತಿ ಮನೋಭಾವದ ದೆಸೆ ಯಿಂದಾಗಿ ಆ ಸಮಾಜದ ಔನ್ನತ್ಯವುಂಟಾಗುತ್ತದೆ; ಈ ಒಂದು ಸಮಾಜದ ಅಥವಾ ಜನಾಂಗದ ಔನ್ನತ್ಯ ಮುಂದೆ ಲೋಕ ಕಲ್ಯಾಣಕ್ಕೆ ಕಾರಣವಾಗಲೂ ಬಹುದು. ಆದರೆ ಮತ್ತೊಂದು ಬಗೆಯ ಸಮಾಜದಲ್ಲಿ ಕೆಲವು ವ್ಯಕ್ತಿಗಳು ಎಷ್ಟೇ ವಿಚಾರವಂತರಾಗಿದ್ದರೂ ಎಷ್ಟೇ ಅನುಭವಶಾಲಿಗಳಾಗಿದ್ದರೂ ಎಷ್ಟೇ ಪ್ರಗತಿ ಗಾಮಿಗಳಾಗಿದ್ದರೂ ಎಷ್ಟೇ ಪ್ರತಿಭಾನ್ವಿತರಾಗಿದ್ದರೂ ಅವರ ಭಾವ ಮತ್ತು ಭಾವನೆಗಳನ್ನು ಆ ಸುತ್ತಲಿನ ಸಮಾಜದ ಅಂಧಅಭಿಪ್ರಾಯಗಳು ತಮ್ಮ ಕಾರ್ಮುಗಿಲುಗಳಿಂದ ಮುಸುಕುತ್ತವೆ. ಅಂತಹ ಸಮಾಜವು ಪುರೋಗಾಮಿ ಯಾಗದೇ ಇರುವುದು ಮಾತ್ರವಲ್ಲ, ತನ್ನ ಸೆಳೆತಕ್ಕೆ ಸಿಕ್ಕ ಇತರ ವ್ಯಕ್ತಿ, ಸಮಾಜ ಗಳನ್ನು ಕೂಡ ತನ್ನ ಮಡುವಿನತ್ತ ಎಳೆಯುತ್ತದೆ. ಅಂತಹ ಸಮಾಜವು ಉಪ ಕಾರಕ್ಕಿಂತ ಮಿಗಿಲಾಗಿ ಅಪಕಾರಿಯಾಗಿಯೂ ಅಪಾಯಕಾರಿಯಾಗಿಯೂ ಇರುತ್ತದೆ.

ಈ ಎರಡು ಬಗೆಯ ಸಮಾಜಗಳಲ್ಲಿ ಮೇಲುಗೈ ಪಡೆಯುವ ಉದ್ದೇಶದಿಂದ ನಡೆದ ಹೊಯ್ದಾಟವನ್ನು ನಾವು ಯೂರೋಪ್ ದೇಶದ ಮಧ್ಯ ಯುಗದಲ್ಲಿ ಕಾಣಬಹುದಾಗಿದೆ. ಅಲ್ಲಿ ಹದಿನೈದನೆಯ ಶತಮಾನದಲ್ಲಿ ಲಿಯೊನಾರ್ಡೊ ಡ ವಿಂಚಿಯಿಂದ ಪ್ರಾರಂಭವಾಯಿತೆಂದು ಹೇಳಬಹುದಾದ ಪುನರುಜ್ಜೀವನ ಕಾರ್ಯಗಳು ಮುಂದೆ ವಿಜ್ಞಾನದ ಪ್ರಗತಿಗೆ ಸಹಾಯವಾಗಲು ಸಾಧ್ಯವಾಯಿತು. ವಿಜ್ಞಾನದ ಪ್ರತಿಯೊಂದು ಭಾಗದಲ್ಲೂ ಪ್ರಗತಿದಾಯಕ ಪ್ರಯತ್ನಗಳು ಕಂಡುಬಂದಿತ್ತಾದರೂ ಮೂಲತಃ ಅದು ಖಗೋಳ ಶಾಸ್ತ್ರದಲ್ಲಿ ಹೆಚ್ಚು ಪ್ರಭಾವಯುತವಾಗಿತ್ತೆನ್ನಬಹುದು. ರಾಜಕೀಯ, ಮತೀಯ ಮತ್ತು ಸಾಮಾಜಿಕ ವಿಷಯಗಳಲ್ಲಿ ಆಗತಾನೇ ಸುಧಾರಣೆಗಳು ಬರತೊಡಗಿದ್ದುವು. ನಂಬಿಕೆಗಳನ್ನು ನಂಬುತ್ತಿದ್ದ ಕಾಲ ಹೋಗಿ ಪ್ರತಿ ವಿಷಯವನ್ನೂ ವಿಚಾರಮಾಡಿ, ಸಾಧ್ಯವಾದಷ್ಟೂ ಪ್ರತ್ಯಕ್ಷವಾಗಿ ಪರಾಮರ್ಶಿಸಿ, ಹೊಸ ಶೋಧನೆಗಳತ್ತ ಮನಸ್ಸುಮಾಡುತ್ತಿದ್ದ ಕಾಲವದು. ಈ ಸಾಮಾಜಿಕ ಸುಧಾರಣೆ, ಜ್ಞಾನ ಪುನರುಜ್ಜೀವನದ ಕಾಲ ನಿಜಕ್ಕೂ ಸತ್ಯಾನ್ವೇಷಣೆಯ ಕಾಲವಾಗಿತ್ತು.

ಹೊಸ ನೀರು ಬಂದು ಹಳೆಯ ನೀರನ್ನು ಕೊಚ್ಚಿ ಹೋದಂತೆ ಹೊಸಹೊಸ ಅಭಿಪ್ರಾಯ, ಭಾವನೆಗಳು ಹಳೆಯ ಕೆಸರನ್ನು ಕೊಚ್ಚಿ ಹೋಗಿತ್ತಾದರೂ ಈ ಕ್ರಿಯೆಯಲ್ಲಿ ಹೊಸನೀರಿನಂತೆ, ತಾನೇ ಬಣ್ಣ ತಳೆದಿತ್ತು. ವರ್ಣ ಸಹಿತವಾದ ಹೊಸ ನೀರನ್ನು ಕುಡಿಯಲು ಜನ ಹೇಗೆ ಹಿಂಜರಿಯುವರೋ ಹಾಗೆಯೇ ಆ ಕಾಲದ ಸಮಾಜವೂ ಕೂಡ ಆ ಹೊಸ ಭಾವನೆಗಳನ್ನೂ ಅಭಿಪ್ರಾಯಗಳನ್ನೂ ಕುಡಿಯಲು ಹಿಂಜರಿಯಿತು. ಅಷ್ಟು ಮಾತ್ರವೇ ಅಲ್ಲ; ಹೊಸ ಭಾವನೆಗೂ ಹಳೆಯ ಭಾವನೆಗೂ ಸಂಘರ್ಷಣೆಯುಂಟಾಯಿತು. ಹಳೆಯ ಭಾವನೆಗಳನ್ನೇ ಪ್ರತಿಪಾದಿಸುತ್ತಿದ್ದವರು ಮುಖ್ಯವಾಗಿ ಕ್ರೈಸ್ತ ಧರ್ಮದ ನೆರಳಿನಲ್ಲಿದ್ದ ಮತಾಂಧರು ಮತ್ತು ಅವರ ಪಂಗಡ. ಈ ಪಂಗಡದವರ ಪ್ರಮಾಣಗ್ರಂಥ ಬೈಬಲ್; ಅವಿಚಾರಿ ಅಧಿಕಾರಿಯ ಪ್ರಭಾವಯುತ ನುಡಿಯೇ ಇವರ ಪಾಲಿಗೆ ಸತ್ಯ. ಈ ಅಧಿಕಾರದ ಅಸತ್ಯತೆಯನ್ನು ತಳ್ಳಿ ವಿಚಾರಯುತ ವಿಷಯ ಪರಿಶೀಲನೆಯತ್ತ ಕ್ರಮಿಸಿದ ಪಂಗಡ ಯಾವುದೂ ಇಲ್ಲವಾಗಿದ್ದರೂ ಆಗೊಮ್ಮೆ ಈಗೊಮ್ಮೆ ಹೊಸ ಭಾವನೆಗಳನ್ನು ಹುಟ್ಟು ಹಾಕುತ್ತಿದ್ದ ವ್ಯಕ್ತಿಗಳೇನೂ ಇಲ್ಲದಿರಲಿಲ್ಲ.

ಖಗೋಳ ಶಾಸ್ತ್ರದಲ್ಲಿ ಈ ಹೊಸ-ಹಳೆ ಭಾವನೆಗಳನ್ನೇ ಮುಂದಿಟ್ಟು, ಧರ್ಮದ ಹೆಸರಿನಲ್ಲಿ, ಹಲವು ವ್ಯಕ್ತಿಗಳನ್ನು ನಿರ್ನಾಮಮಾಡಿರುವುದೂ ಉಂಟು. ಏಕೆಂದರೆ, ಕ್ರೈಸ್ತ ಧರ್ಮದ ಪ್ರಕಾರ ಏಸುಕ್ರಿಸ್ತ ಜನಿಸಿದ ಈ ಭೂಮಿ ಸ್ಥಿರವಾದುದು; ಅದು ಚಲಿಸುವುದು ಅಸಾಧ್ಯ. ಈ ಅವತಾರ ಪುರುಷ ಜನ್ಮ ತಾಳಿದ

ನಾಡನ್ನು ಸ್ತುತಿಸುತ್ತಿರುವುವೋ ಎಂಬಂತೆ ಉಳಿದ ಗ್ರಹಾದಿಗಳು ಇದರ ಸುತ್ತ ಚಲಿಸುತ್ತಿವೆ. ಈ ತರ್ಕದ ಧಾಟಿಯಲ್ಲಿಯೇ ಅವರು ಭೂಮಿಯನ್ನು ವಿಶ್ವದ ಕೇಂದ್ರವೆಂದು ಕರೆದುದು. ಪ್ರಾಚೀನ ಧರ್ಮಗ್ರಂಥಗಳಲ್ಲಿ ಸೂಚಿತವಾಗಿರುವ ಅಭಿಪ್ರಾಯಗಳಿಗೆ ತಕ್ಕಂತೆ ಖಗೋಳಶಾಸ್ತ್ರವನ್ನು ಹೊಂದಿಸಿದ ಗ್ರೀಕ್ ತತ್ವಜ್ಞ ಅರಿಸ್ಟಾಟಲ್ (Aristotle) ತಿಳಿಸುವುದು ಈ ವಿಷಯಗಳನ್ನೇ.

ಅದೇ ಕಾಲದಲ್ಲಿ ಮತ್ತು ಅನಂತರ ಅನೇಕ ವ್ಯಕ್ತಿಗಳು ತಮ್ಮದೇ ಆದ ಬೇರೆ ಅಭಿಪ್ರಾಯಗಳನ್ನು ಹೊಂದಿದ್ದರಾದರೂ ಮತಾಂಧರಿಂದ ಆಗಬಹುದಾದ ಅಪಾಯ ಗಳಿಗೆ ಹೆದರಿದ್ದುದರಿಂದ ಅವು ಅವ್ಯಕ್ತವಾಗಿಯೇ ಉಳಿದಿದ್ದುವು. ಹಾಗಾದರೂ ಕೆಲವು ಸಾಹಸ ವ್ಯಕ್ತಿಗಳು ಹೊಸ ಅಭಿಪ್ರಾಯಗಳನ್ನರುಹಿ ಕ್ರಾಂತಿ ಪುರುಷರೆನಿಸಿ ಕೊಂಡುದುಂಟು; ಸಮಾಜದ ಭಾವನೆಗಳನ್ನು ತಮ್ಮ ಜ್ಞಾನದಿಂದ ಕದಡಿ ದುದುಂಟು. ಈ ದೃಷ್ಟಿಯಿಂದ, ಯೂರೋಪ್ ದೇಶದ ಹದಿನೈದು-ಹದಿನಾರನೆಯ ಶತಮಾನಗಳನ್ನು ಧರ್ಮ ಮತ್ತು ಜ್ಞಾನಗಳ ಸಂಗ್ರಾಮ ಕಾಲವೆಂದು ಕರೆಯ ಬಹುದಾಗಿದೆ. ಮುಖ್ಯವಾಗಿ ಧರ್ಮದ ತಳಪಾಯದ ಮೇಲೆ ನಿಂತಿದ್ದ ಅನೇಕ ನಂಬಿಕೆಗಳು, ಕಟ್ಟಳೆಗಳು ಜ್ಞಾನದ ಬಿರುಗಾಳಿಯಿಂದ ಕಳಚಿ ಕೆಳಗುರುಳಿದುದು ಈ ಕಾಲದಲ್ಲೇ. ಮತಾಂಧರ ಬೆಂಬಲದಿಂದ ಬೆಳೆದು ಬಂದಿದ್ದ ಮೂಢನಂಬಿಕೆಗಳನ್ನು ಅಂಧಶ್ರದ್ಧೆಗಳನ್ನು ತೊಡೆದುಹಾಕುವುದು ಅಸಾಧ್ಯ ಕೆಲಸವಾಗಿತ್ತು. ಈ ಅಸಾಧ್ಯತೆಯನ್ನು ಸಾಧಿಸಲು ಒಬ್ಬ ವ್ಯಕ್ತಿಯಿಂದ ಸಾಧ್ಯವಿರಲಿಲ್ಲ. ಹಲವರ ಸತತ ಪ್ರಯತ್ನಗಳ ಫಲದಿಂದ ಅದು ಸಾಧ್ಯವಾಗಬೇಕಾಯಿತು. ಅಂತಹ ಸಾಹಸ ಪ್ರಯತ್ನಗಳನ್ನು ಮಾಡಿದವರಲ್ಲಿ **ನಿಕೊಲಾಸ್ ಕೋಪರ್ನಿಕಸ್**ನೂ ಒಬ್ಬ. ಹೀಗೆ, ಪ್ರಾಚೀನ ಖಗೋಳಶಾಸ್ತ್ರವು ಅರ್ವಾಚೀನ ಖಗೋಳಶಾಸ್ತ್ರವಾಗಿ ಪರಿವರ್ತನೆ ಹೊಂದಲಣಿಸುತ್ತಿದ್ದ ಕಾಲದಲ್ಲಿಯೇ ಕೋಪರ್ನಿಕಸ್ ಜನ್ಮ ತಳೆದುದು.

ಕೋಪರ್ನಿಕಸನನ್ನು ಕುರಿತು ಹೆಚ್ಚಾಗಿ ಸಾಹಿತ್ಯವಿಲ್ಲ. ಕೋಪರ್ನಿಕಸನು ತನ್ನ ಜೀವನ ಚರಿತ್ರೆಯನ್ನೂ ಬರೆದಿಡಲಿಲ್ಲ. ಆತನ ಜೀವನ ಚಿತ್ರ ಪಡೆಯ ಬೇಕಾದರೆ ನಾವು ಅವನ ಮಿತ್ರರ, ಶಿಷ್ಯರ, ಸಹಪಾಠಿಗಳ ಜೀವನವನ್ನು ಓದಬೇಕು. ಅವನ ಜೀವನದ ಬಹು ಮುಖ್ಯ ಅಂಶಗಳನ್ನು ತಿಳಿಯಲು ನಮಗೆ ಸಹಾಯಕ ವಾಗಿರುವುದು ಅವನ ಸಮಕಾಲೀನನಾದ ಮತ್ತು ವಿಜ್ಞಾನ ಜೀವನದಲ್ಲಿ ಅವನಿಗೆ ವಿರುದ್ಧ ಭಾವಗಳನ್ನು ಹೊಂದಿದ್ದ ಟೈಕೋ ಬ್ರಾಹೆ ಎಂಬಾತನ ಚರಿತ್ರೆ!

ಕೋಪರ್‌ನಿಕಸ್ ಕ್ರಿ. ಶ. 1473 ನೇ ಇಸವಿ ಫೆಬ್ರುವರಿ ಹತ್ತೊಂಬತ್ತರಂದು ಪೋಲೆಂಡ್ ದೇಶದ ಟೋರನ್ (Torun) ಎಂಬ ಪಟ್ಟಣದಲ್ಲಿ ಜನ್ಮತಾಳಿದ. ಕೋಪರ್‌ನಿಕಸನ ತಾಯಿಯ ಬಗ್ಗೆ ಹೆಚ್ಚು ತಿಳಿದಿಲ್ಲ; ಆಕೆ ಈ ಪ್ರತಿಭಾವಂತ

ವಿಜ್ಞಾನಿಯ ಅಜ್ಞಾತ ಮಾತೆಯಾಗಿ ಉಳಿದಿದ್ದಾಳೆ. ಆದರೆ ಆಕೆಯ ಸಹೋದರನೂ, ಕೋಪರ್‌ನಿಕಸನ ಸೋದರ ಮಾವನೂ ಆದ ಮರ್ವಿಯಾದ ಎರ್ಮ್‌ಲಾಂಡ್ (Ermland) ನ ಪಾದ್ರಿ ಲೂಕಸ್‌ವಾಜಲ್‌ರೋಡ್ (Lukas Watzelrode) ಚರಿತ್ರೆಯಲ್ಲಿ ಹೆಸರಾಂತ ವ್ಯಕ್ತಿ. ಕೋಪರ್‌ನಿಕಸನ ತಂದೆ ತಾಮ್ರದ ವ್ಯಾಪಾರಿ. ಆತನನ್ನು ರೈತನೆಂದೂ ರೊಟ್ಟಿ ಮಾರುವವನೆಂದೂ ಕಮ್ಮಾರನೆಂದೂ ತಿಳಿದಿದ್ದ ಕಾಲವುಂಟು. ಆತನು ಪಡೆದಿದ್ದ ನಾಲ್ಕು ಮಕ್ಕಳಲ್ಲಿ ವಿಶ್ವವಿಖ್ಯಾತ ವಿಜ್ಞಾನಿಗಳ ವಿರಳ ಪಂಕ್ತಿಗೆ ಸೇರಿದ ಕೋಪರ್‌ನಿಕಸನೂ ಒಬ್ಬ.

ಕೋಪರ್ನಿಕಸನ ಬಾಲ್ಯ ಟೋರನ್ ಪಟ್ಟಣದಲ್ಲಿ ಕಳೆದಿರಬೇಕು. ಆದರೆ ಅವನು ಸೇಂಟ್ ಜಾನ್ ಚರ್ಚಿನ ಶಾಲೆಗೆ ಸೇರಿದನೋ ಅಥವಾ ಕೆಥೆಡ್ರಲ್ ಶಾಲೆಗೆ ಸೇರಿದನೋ ಎಂಬುದು ಇನ್ನೂ ಚರ್ಚಾಸ್ಪದ ವಿಷಯವಾಗಿಯೇ ಉಳಿದಿದೆ. ಅವನ ಬಾಲ್ಯ ಜೀವನ ಅತ್ಯುತ್ತಮ ಸ್ಥಿತಿಯಲ್ಲಿಲ್ಲದಿದ್ದರೂ ಬಡತನದ ಬೇಗೆಯಿಂದೇನೂ ಆತ ನರಳಲಿಲ್ಲ. ಹತ್ತನೆಯ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡ ಕೋಪರ್‌ನಿಕಸ್ ತನ್ನ ಹತ್ತೊಂಬತ್ತನೆಯ ವಯಸ್ಸಿನಲ್ಲಿ ಕ್ರಾಕೋವ್ (Cracow) ವಿಶ್ವವಿದ್ಯಾನಿಲಯವನ್ನು ಸೇರಿದ. ಕೋಪರ್ನಿಕಸನ ತಂದೆ ತನ್ನ ಮಗನನ್ನು ವ್ಯಾಪಾರೋದ್ಯಮಕ್ಕೆ ಇಳಿಸಲು ಬಯಸಿದ್ದ. ಆದರೆ ಆತನ ತಾಯಿ ತನ್ನ ಮಗನನ್ನು ತನ್ನ ಸಹೋದರನಂತೆ ಪ್ರಖ್ಯಾತಗೊಳಿಸಲು ಬಯಸಿ ಕ್ರಾಕೋವ್‌ಗೆ ಕಳುಹಿಸಿದ್ದಳು. ಕೋಪರ್ನಿಕಸ್ ಕ್ರಾಕೋವ್ ವಿಶ್ವವಿದ್ಯಾನಿಲಯವನ್ನು ಸೇರಿ ವೈದ್ಯಶಾಸ್ತ್ರವನ್ನು ಅಭ್ಯಾಸಮಾಡಲುಪಕ್ರಮಿಸಿದ. ವೈದ್ಯಪದವಿಯನ್ನೂ ಪಡೆದ (?). ಆದರೆ ಅವನು ತನ್ನ ಪ್ರತಿಭೆಯನ್ನು ಗಣಿತಶಾಸ್ತ್ರದಲ್ಲಿ ಹರಿಯಬಿಡಲು ಬಯಸಿದ್ದ. ಆ ಕಾರಣದಿಂದಲೇ ಇರಬಹುದು, ಆತ ಗಣಿತ ಶಾಸ್ತ್ರವನ್ನು ವಿದ್ಯಾರ್ಥಿಗಳಿಗೆ ಬೋಧಿಸಲು ಸಮ್ಮತಿಸಿದುದು.

ಇದೇ ಸಮಯದಲ್ಲಿ ಬಲೋನ (Bologna) ದ ಪ್ರೊಫೆಸರೊಬ್ಬರು ಗಣಿತ ಶಾಸ್ತ್ರದಲ್ಲಿನ ಇವನ ಪ್ರತಿಭೆಯನ್ನು ನೋಡಿ ತಮ್ಮ ನಗರಕ್ಕೆ ಆಹ್ವಾನಿಸಿದರು. ಕ್ರಿ. ಶ. 1496 ರಲ್ಲಿ ಕೋಪರ್ನಿಕಸ್ ಬಲೋನಕ್ಕೆ ತೆರಳಿದ. ಅಲ್ಲಿ ನೊವರಾ (Novarra) ಎಂಬ ಖಗೋಳ ಶಾಸ್ತ್ರಜ್ಞನ ಪರಿಚಯವಾಗಿ ಅವನ ಬಳಿ ಕೆಲಸ ಮಾಡುತ್ತಿದ್ದ. ನೊವರಾ ಭೂಮಿ ಗೋಳಾಕಾರವಾಗಿದೆಯೆಂದು ನಂಬಿದ್ದವನು; ಭೂಮಿಯೇ ವಿಶ್ವದ ಕೇಂದ್ರವೆಂದು ತಿಳಿದಿದ್ದವನು. ಆತನು ಮಾಡುತ್ತಿದ್ದ ಭಾಷಣಗಳೆಲ್ಲವೂ ಲ್ಯಾಟಿನ್ ಭಾಷೆಯಲ್ಲಿ. ಕೋಪರ್ನಿಕಸ್ ಅವೆಲ್ಲವನ್ನೂ ಆಸಕ್ತಿಯಿಂದ ಆಲಿಸಿದ್ದ. ಅನೇಕ ರಾತ್ರಿ ಅವನೊಡನೆ ನಕ್ಷತ್ರಗಳನ್ನು ನೋಡಿ ವಿಷಯ ಸಂಗ್ರಹಣೆ ಮಾಡುತ್ತಿದ್ದ. ಆಗಲೇ ಅವನಿಗೆ ಹೊಳೆದದ್ದು: ಈ ಸಂಗ್ರಹಿತ ಅಂಶಗಳಿಂದ,

ಗಣಿತಶಾಸ್ತ್ರದ ಸಹಾಯದಿಂದ, ಒಂದು ಸಿದ್ಧಾಂತ ಸಾಧನೆಯಾಗಬಾರದೇಕೆ ಎಂದು. ನಕ್ಷತ್ರಾದಿಗಳ ಚಲನೆಯನ್ನು ಒಂದು ಗಣಿತದ ಪದ್ಧತಿಗೆ ತರಲು ಸಾಧ್ಯ ವೆಂದು ಅವನು ಯೋಚಿಸಿದ. ಅವನು ನಂಬಿದುದು ಗಣಿತ ಶಾಸ್ತ್ರವನ್ನು; ಅದೇ ಅವನ ಸಾಧನೆಗೆ ಸಹಾಯವಾದುದು.

ಕೋಪರ್ನಿಕಸ್ ಗಣಿತ ಶಾಸ್ತ್ರದ ಸಹಾಯದಿಂದ ರೂಪಿಸಿದ ಸಿದ್ಧಾಂತವನ್ನು ತಿಳಿಯಬೇಕಾದರೆ ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಖಗೋಳಶಾಸ್ತ್ರೀಯ ಹಾಗೂ ತಾತ್ವಿಕ ಭಾವನೆಗಳನ್ನು ಅವಲೋಕಿಸುವುದು ಸೂಕ್ತ. ಈ ಭಾವನೆಗಳು ಅರಿಸ್ಟಾಟಲನಿಂದ ಜನ್ಯವಾಗಿದ್ದುವು. ಅರಿಸ್ಟಾಟಲನ ವಿಶ್ವರಚನಾ ಪದ್ಧತಿಯಲ್ಲಿ ಭೂಮಿಯೇ ಕೇಂದ್ರವೆಂದೂ ಅದು ಅಚಲವೆಂದೂ ಉಳಿದ ವಸ್ತುಗಳು ಭೌತ ಗೋಳಗಳಿಗೆ ಸೇರಿದಂತಿದ್ದು ಇದರ ಸುತ್ತ ಏಕಪ್ರಕಾರ ಚಲನೆಯಿಂದ ಸುತ್ತುತ್ತಿರು ವುವೆಂದೂ ಭಾವಿಸಲಾಗಿತ್ತು. ಯಾವುದಾದರೊಂದು ಗೋಳದ ಚಲನೆಯು ಹಲವಾರು ಗೋಳಗಳ ಚಲನೆಯ ಪರಿಣಾಮವಾಗಿದ್ದಿರಬಹುದು; ಏಕೆಂದರೆ ಈ ಗೋಳಗಳು ತಮ್ಮ ಚಲನೆಗಳನ್ನು ಮತ್ತೊಂದು ಗೋಳಕ್ಕೆ ಒಯ್ಯಬಹುದು. ಸ್ಥಿರ ನಕ್ಷತ್ರಗಳು ತೀರ ಹೊರಗಿನ ಗೋಳಕ್ಕೆ ಸೇರಿರುವುದಲ್ಲದೆ ಅವುಗಳ ಚಲನೆಯು ಏಕಪ್ರಕಾರವಾಗಿಯೂ ಸುಲಭವಾಗಿಯೂ ಇರುವುದರಿಂದ ಮತ್ತಾವ ಗೋಳದ ಸಂಪರ್ಕವೂ ಇದಕ್ಕೆ ಅವಶ್ಯವಿಲ್ಲ. ಆದರೆ ಸೂರ್ಯ, ಚಂದ್ರ, ಗ್ರಹ — ಇವುಗಳು ಅವ್ಯವಸ್ಥ ರೀತಿಯಲ್ಲಿ ಚಲಿಸುವುದರಿಂದ ಅವುಗಳ ಪಥವನ್ನು ಏಕಪ್ರಕಾರದ ವರ್ತುಲಾಕಾರದ ಚಲನೆಗಳ ಸಂಯೋಜನೆಯಿಂದ ಸೂಚಿಸಬೇಕಾಗುತ್ತದೆ. ಅರಿಸ್ಟಾಟಲನ ಕಾಲದಲ್ಲಿ ಈ ಚಲನೆಗಳ ಸಂಯೋಜನೆಯನ್ನು ಐವತ್ತೈದು ಗೋಳ ಗಳಿಂದ ಸೂಚಿಸಬಹುದೆಂದು ತಿಳಿಯಲಾಗಿತ್ತು.

ಕ್ರಿ. ಶ. ಎರಡನೆಯ ಶತಮಾನದಲ್ಲಿ ಟಾಲೆಮಿ (Ptolemy) ಯ ಕಾಲಕ್ಕೆ ಈ ವಿಶ್ವರೂಪದ ಅಭಿಪ್ರಾಯಗಳೆಲ್ಲ ಬದಲಿಸಿದ್ದುವು. ವಿಶ್ವದ ಹೊರ ಎಲ್ಲೆಯಲ್ಲಿ ಸ್ಥಿರ ನಕ್ಷತ್ರಗಳಿಂದಾದ ಗೋಳಗಳನ್ನು ಬಿಟ್ಟರೆ ಉಳಿದೆಲ್ಲ ಭೌತಗೋಳಗಳೂ ವೃತ್ತ ಗಳಿಗೆ ಸ್ಥಾನವಿತ್ತಿದ್ದುವು. ಪ್ರತಿಯೊಂದು ಗ್ರಹವೂ ಒಂದು ವೃತ್ತದಲ್ಲಿ ಚಲಿಸುತ್ತಿರು ತ್ತದೆಂದು ಭಾವಿಸಲಾಗಿತ್ತು. ಈ ವೃತ್ತದ ಕೇಂದ್ರವು ಮತ್ತೊಂದು ವೃತ್ತದಲ್ಲಿ ಸುತ್ತುತ್ತಿರುತ್ತದೆ. ಹೀಗೆಯೇ ಕೊನೆಗೆ ದೊರಕುವ ವೃತ್ತದ ಕೇಂದ್ರವು, ಭೂಮಿಗೆ ಸಂಬಂಧಿಸಿದಂತೆ, ಸ್ಥಿರವಾಗಿರುತ್ತದೆ. ಈ ಕೊನೆಯ ವೃತ್ತವನ್ನು ಡೆಫರೆಂಟ್ (Deferent) ಎಂದೂ ಉಳಿದೆಲ್ಲ ವೃತ್ತಗಳನ್ನು ಉಪರಿವೃತ್ತ (Epicycle) ಗಳೆಂದೂ ಕರೆಯಲಾಯಿತು. ಈ ಉಪರಿವೃತ್ತಗಳ ಬಳಕೆಯಿಂದ ಗ್ರಹಗಳ ಚಲನ ಪದ್ಧತಿಯನ್ನು ರಚಿಸುವ ಭಾರ ನಮ್ಮ ಪ್ರಾಚೀನರಿಗೆ ಬಿದ್ದಿತ್ತು. ಅವರ ಈ

ಕಾರ್ಯಗಳ ಫಲವನ್ನೇ ನಾವು ಟಾಲೆಮಿಯ "Syntaxis" ಅಥವಾ "Almagest" ಎಂಬ ಗ್ರಂಥದಲ್ಲಿ ಕಾಣಬಹುದು. ಖಗೋಳ ಶಾಸ್ತ್ರದಲ್ಲಿ ಈ ಅಭಿಪ್ರಾಯಗಳು ಮುಂದಿನ 1400 ವರ್ಷಗಳ ವರೆಗೆ ಆಳಿದುವು.

ಟಾಲೆಮಿಯು ಅರಿಸ್ಟಾಟಲನ ಗೋಳಗಳನ್ನು ನಿರ್ಲಕ್ಷಿಸಿದ್ದರೂ ತನ್ನ ವೃತ್ತಗಳಲ್ಲಿ ಹೆಚ್ಚಿನ ಆಸಕ್ತಿಯೇನೂ ತೋರಲಿಲ್ಲ. ಒಂದು ವಿಷಯದಲ್ಲಿ ಮಾತ್ರ ಅರಿಸ್ಟಾಟಲ್ ಪ್ರಾಜ್ಞನೆನಿಸಿಕೊಂಡಿದ್ದ. ಅದು ಅವನ ಭೌತಶಾಸ್ತ್ರಜ್ಞಾನವಾಗಿದ್ದಿತು. ಮುಂದೆ, ವೀಕ್ಷಣಕಾರ್ಯ ಹೆಚ್ಚುತ್ತ ಹೋದಂತೆ, ವಿಶ್ವದ ಸ್ವರೂಪವನ್ನು ವಿವರಿಸುವುದು ಮತ್ತೂ ಜಟಿಲವಾಗುತ್ತ ಬಂದಿತು. ಆಗಲೇ ಪುನರುಜ್ಜೀವನದ ಹುಮ್ಮಸ್ಸಿನಿಂದಿದ್ದ ಕೋಪರ್ನಿಕಸ್ ಈ ಜಟಿಲ ಪ್ರಶ್ನೆಯತ್ತ ಮನಸ್ಸು ಮಾಡಿದುದು. ಇದರಲ್ಲಿ ನೊವರಾನ ಪ್ರಭಾವವೂ ಇಲ್ಲದಿರಲಿಲ್ಲವೆಂದು ಹೇಳಲಾಗುವುದಿಲ್ಲ. ಕೋಪರ್ನಿಕಸ್ ಅರಿಸ್ಟಾಟಲನ ಆಧ್ಯಾತ್ಮಿಕ ಅಂಶಗಳನ್ನೂ ಟಾಲೆಮಿಯ ಉಪರಿವೃತ್ತ ಮೊದಲಾದುವನ್ನೂ ಒಪ್ಪಿದ್ದ. ಅವನಿಗೆ ಅರ್ಥವಾಗದಿದ್ದುದೆಂದರೆ ಒಂದು ಚಲಿಸುತ್ತಿರುವ ವಸ್ತುವಿನ ಕೇಂದ್ರವು ಒಂದು ವೃತ್ತದ ಕೇಂದ್ರವಾಗಿರದೆ, ಅದರ ಕೋನಯುತ ವೇಗವು (Angular Velocity) ಏಕಪ್ರಕಾರವಾಗಿದ್ದರೆ ಆ ವಸ್ತುವೂ ಏಕಪ್ರಕಾರವಾಗಿ ಚಲಿಸುತ್ತಿರುತ್ತದೆಂಬ ಟಾಲೆಮಿಯ ಭಾವನೆ.

ಈ ಸಮಸ್ಯೆಯನ್ನು ಕೋಪರ್ನಿಕಸ್ ಬಿಡಿಸಿದ ರೀತಿಯೇ ಒಂದು ಬಗೆ. ಸೂರ್ಯ ಚಲಿಸುತ್ತಿರುವನೆಂಬ ಅಂಶದ ಮೇಲೆ ರಚಿತವಾದ ಅಭಿಪ್ರಾಯಗಳನ್ನು ಕೋಪರ್ನಿಕಸ್ ಬದಲಿಸಲು ಯತ್ನಿಸಿದ್ದ. ಅವನಿಗೆ ಹೊಳೆದ ಭಾವನೆಯಿದು: ಭೂಮಿ ಅಚಲವೆಂದು ನಂಬಲಾಗಿದೆ. ಅದರ ಬದಲು ಸೂರ್ಯನನ್ನು ಅಚಲನೆಂದು ತಿಳಿದು, ಗ್ರಹ-ನಕ್ಷತ್ರಾದಿಗಳು ಚಲಿಸುತ್ತಿರುವಂತೆ ತೋರುವುದರಿಂದ ಅದಕ್ಕನುಗುಣವಾದ ಚಲನೆಯನ್ನು ಭೂಮಿಗೂ ಕೊಟ್ಟರೆ ಆಗ ಏಕಪ್ರಕಾರದ ಸ್ಪಷ್ಟ ಚಲನೆಯೂ, ಸಮಸ್ಯೆಯನ್ನು ಸುಲಭದಲ್ಲಿ ಬಗೆಹರಿಸುವ ಹಾಗೂ ವಿವರಿಸುವ ಒಂದು ವಿಧಾನವೂ ದೊರೆಯುತ್ತದೆ. ಅಲ್ಲದೆ ಈ ವಿಧಾನವು ಮೊದಲಿನ ವೃತ್ತಗಳ ಅವ್ಯವಸ್ಥ ಚಲನೆಯನ್ನೂ ಸರಿಪಡಿಸುತ್ತದೆ. ಎಲ್ಲ ವೃತ್ತಗಳೂ ಒಂದೇ ದಿಕ್ಕಿನಲ್ಲಿ ಏಕಪ್ರಕಾರ ಚಲನೆಯಲ್ಲಿರುತ್ತವೆ. ಹೀಗೆ, ಸ್ಥಿರಸ್ಥಾನವನ್ನು ಭೂಮಿಯಿಂದ ಸೂರ್ಯನಿಗೆ ಬದಲಾಯಿಸಿದಾಗ ವಿಶ್ವದ ವಿವರಣೆಗೆ ಬೇಕಿದ್ದ ಸುಮಾರು ಎಂಬತ್ತಕ್ಕೂ ಮಿಗಿಲಾದ ಆವರ್ತಗಳ ಸಂಖ್ಯೆಯು ಮೂವತ್ನಾಲ್ಕಕ್ಕೆ ಇಳಿಯಿತು.

ಈ ಹೊಸ ಪದ್ಧತಿಯಲ್ಲಿ ಭೂಮಿಗೆ ಕೊಟ್ಟ ಚಲನಗಳೆಂದರೆ: (೧) ಆಕಾಶಸ್ಥಕಾಯಗಳ ಉದಯಾಸ್ತಮಾನಗಳನ್ನು ವಿವರಿಸುವ ಸಲುವಾಗಿ ಭೂಮಿ ತನ್ನ ಅಕ್ಷದ ಮೇಲೆಯೇ ಸುತ್ತುತ್ತಿರುವ ಒಂದು ದೈನಂದಿನಚಲನೆ; (೨) ಗ್ರಹಗಳ ವಕ್ರ

ಗತಿ ಮತ್ತು ಕ್ರಾಂತಿವೃತ್ತ (Ecliptic) ವನ್ನು ಸುತ್ತುತ್ತಿರುವಂತೆ ತೋರುವ ಸೂರ್ಯಚಲನೆಯನ್ನು ವಿವರಿಸುವ ಸಲುವಾಗಿ ಸೂರ್ಯನ ಸುತ್ತ ಸುತ್ತುವ ಭೂಮಿಯ ಒಂದು ವಾರ್ಷಿಕಚಲನೆ ಮತ್ತು (೩) ಭೂಮಿಯ ಅಕ್ಷದ ಶಂಕು ವಿನ್ಯಾಕಾರದ ಚಲನೆ; ವಿಷವದ್ವೃತ್ತದ ಅಯನಾಂಶ (Precession ef Equinoxes.) ಮತ್ತು ಆಗ ನಂಬಿದ್ದ ಕೆಲವು ವಿಷಯಗಳನ್ನು ವಿವರಿಸುವ ಸಲುವಾಗಿ. ಭೂಮಿಯ ಈ ಮೂರು ಬಗೆಯ ಚಲನೆಗಳನ್ನು ಗಣಿತಶಾಸ್ತ್ರದ ಸಹಾಯದಿಂದ ಗೊತ್ತುಮಾಡಿ ತನ್ನ ಸಿದ್ಧಾಂತವನ್ನು ರೂಪಿಸಿದ ಕೋಪರ್ನಿಕಸ್ ಅವುಗಳನ್ನು ತನ್ನ ಮಹದ್ಗ್ರಂಥದಲ್ಲಿ ವಿವರಿಸಿದ್ದಾನೆ.

ಈ ಮಹತ್ಕಾರ್ಯ ಸಾಧನೆಯಲ್ಲಿ ಅಸಮ್ಮತಿಗಳೂ, ಆಕ್ಷೇಪಣೆಗಳೂ, ಅಡಿ ಆತಂಕಗಳೂ ಬರದಿರಲಿಲ್ಲ. ಭೂಮಿ ಸುತ್ತುತ್ತಿದ್ದರೆ ಮೋಡ ಮತ್ತು ಆಕಾಶಕ್ಕೆಸೆದ ವಸ್ತುಗಳು ಪಶ್ಚಿಮ ದಿಕ್ಕಿನಲ್ಲಿ ದೂರದಲ್ಲಿ ಹಿಂದೆ ಬೀಳುತ್ತವೆಂದು ಅವರು ವಾದಿಸಿದರು. ಮರದಿಂದ ಬಿದ್ದ ಎಲೆಗಳು ನೇರವಾಗಿ ಕೆಳಗೆ ಬೀಳದೆ ದೂರದಲ್ಲಿ ಬೀಳುತ್ತದೆಂದೂ, ಕಲ್ಲು ಮೊದಲಾದ ವಸ್ತುಗಳೂ ಕೂಡ ಹೀಗೆಯೇ ಎಸೆದ ಸ್ಥಳದಿಂದ ದೂರ ಬೀಳುತ್ತವೆಂದೂ ಅವರು ವಾದಿಸಿದರು. ಇವುಗಳಿಗೆ ಕೋಪರ್-ನಿಕಸ್ ಪೂರ್ಣ ಉತ್ತರ ಕೊಡಲು ಶಕ್ತನಿರಲಿಲ್ಲ. ಆಗಿನ್ನೂ ಚಲಶಕ್ತಿ ಅಥವಾ ಗುರುತ್ವಾಕರ್ಷಣ ಶಕ್ತಿಯ ಪರಿಚಯ ಅವರಿಗಿರಲಿಲ್ಲ.

ಬಹುಮಟ್ಟಿಗೆ ಸಾಮಾನ್ಯ ಜನ ಶಾಸನಬದ್ಧರು. ಈ ಮಾತು ಸರ್ವಕಾಲದಲ್ಲಿಯೂ ಸತ್ಯ. ಕೋಪರ್ನಿಕಸನ ಕಾಲದಲ್ಲಿ ಕೂಡ, ಎಲ್ಲ ಕಾಲದಂತೆ, ಕ್ರಿಸ್ತೀ ಚರ್ಚುಗಳ ಶಾಸನಗಳನ್ನು ಆಚರಿಸುತ್ತಿದ್ದ ಜನ ವಿಚಾರವಂತರಾಗಿರಲಿಲ್ಲ. ಅಜ್ಞಾನ, ಅಂಧಶ್ರದ್ಧೆ, ಮೂಢನಂಬಿಕೆಗಳ ಆಗರದಂತಿದ್ದ ಆ ಜನಸಮುದಾಯಕ್ಕೆ ಕ್ರಿಸ್ತೀ ಚರ್ಚುಗಳು ತೀರಪ್ರದೇಶದಂತಿದ್ದುವು. ಮೊದಲ ಹತ್ತು ಶತಮಾನಗಳಲ್ಲಿ ಕ್ರಿಸ್ತೀ ಚರ್ಚುಗಳ ಪ್ರಭಾವ ಆ ಜನದ ಮೇಲೆ ಅಪರಿಮಿತವಾಗಿತ್ತು. ಆ ಸಮಯದಲ್ಲೂ ಸಹ ವಿಶ್ವಸೃಷ್ಟಿಯಲ್ಲಿ ಭೂಮಿಯ ಸ್ಥಾನದ ಬಗೆಗೆ ಅನೇಕ ತರ್ಕ-ವಿತರ್ಕಗಳು ನಡೆದಿದ್ದುವು. ಕ್ರಿಸ್ತೀ ಚರ್ಚುಗಳು ಮಾತ್ರ ತಮ್ಮ ಹಳೆಯ ಸಿದ್ಧಾಂತವನ್ನೇ ಹಿಡಿದುಕೊಂಡಿದ್ದುವು. ಈ ಸಿದ್ಧಾಂತವನ್ನು ವಿರೋಧಿಸಿದವರನ್ನು ದೈವನಿಂದಕರೆಂದೋ, ದೈವದ್ರೋಹಿಗಳೆಂದೋ, ನಾಸ್ತಿಕರೆಂದೋ, ಮಾಂತ್ರಿಕರೆಂದೋ ಹೆಸರಿಟ್ಟು ಗಲ್ಲಿಗೇರಿಸುತ್ತಿದ್ದುದು ಆ ಕಾಲದಲ್ಲಿನ ಸಾಮಾನ್ಯ ನೋಟವಾಗಿತ್ತು. ಧರ್ಮದ ಸೋಗಿನಲ್ಲಿ ಸ್ವಾರ್ಥವನ್ನು ಸಾಧಿಸಹೊರಟಿದ್ದ ಕ್ರಿಸ್ತಪಾದ್ರಿಗಳಿಗೆ ವಿರೋಧಿಗಳನ್ನು ಬಾಧಿಸುವುದು, ಸದೆಬಡಿಯುವುದು ನಿತ್ಯದ ನಡತೆಯಾಗಿತ್ತು. ಎತ್ತಲೂ ಚಿತ್ತದಾಸ್ಯ ತಾಂಡವವಾಡುತ್ತಿತ್ತು. ಈ ಬೌದ್ಧಿಕ ದಾಸ್ಯವನ್ನು ವಿಮೋಚನೆ

ಮಾಡಹೊರಟ ಮೇಧಾವಿಗಳೇನಕರು ಮರಣವನ್ನಪ್ಪಬೇಕಾದ ಪ್ರಸಂಗಗಳು ಅನೇಕ.

ಬಲೋನದಲ್ಲಿದ್ದ ಕೋಪರ್ನಿಕಸ್ ಖಗೋಳಶಾಸ್ತ್ರವನ್ನು ಬೋಧಿಸುತ್ತಿದ್ದ ಕ್ರಮವನ್ನು ತೀರ ಖಂಡಿಸುತ್ತಿದ್ದ. ಖಗೋಳಶಾಸ್ತ್ರವನ್ನು ಜ್ಯೋತಿಶ್ಯಾಸ್ತ್ರದಲ್ಲಿ ಬೆರಸಿ ಬೋಧಿಸುತ್ತಿದ್ದ ಕ್ರಮ ಅವನಿಗೆ ಹಿಡಿಸದಾಯಿತು. ಅಲ್ಲದೆ ಆಗಿನ ಕಾಲದ ಖಗೋಳಶಾಸ್ತ್ರ ಸಂಘಗಳೆಲ್ಲದರಲ್ಲೂ ಜ್ಯೋತಿಶ್ಯಾಸ್ತ್ರಜ್ಞರೇ ಪ್ರಮುಖರಾಗಿದ್ದರು. ಕೋಪರ್ನಿಕಸನಿಗೆ ಜ್ಯೋತಿಷದಲ್ಲಾಗಲೀ, ಜೋತಿಶ್ಯಾಸ್ತ್ರಜ್ಞರಲ್ಲಿಯಾಗಲೀ ನಂಬಿಕೆ ಯಿರಲಿಲ್ಲ. ಕೋಪರ್ನಿಕಸ್ ಬಲೋನದಲ್ಲಿ ಖಗೋಳಶಾಸ್ತ್ರ ಸಂಘಗಳಿಂದ ಜ್ಯೋತಿ ಶ್ಯಾಸ್ತ್ರಜ್ಞರನ್ನು ಹೊರದೂಡುವಷ್ಟು ದಿನ ನೆಲೆಸಿದ್ದ.

ಬಲೋನದಿಂದ ಹೊರಟ ಕೋಪರ್ನಿಕಸ್ ಪಡುವಾ (Padua) ದಲ್ಲಿ ಎರಡು ವರ್ಷಗಳಿದ್ದ. ಆ ಕಾಲದಲ್ಲಿ ತನ್ನ ವೇಳೆಯನ್ನು ರಸಾಯನ ಶಾಸ್ತ್ರಕ್ಕೆ ವಿನಿಯೋಗಿಸುತ್ತಿದ್ದ. ಆ ಬಳಿಕ ರೋಂ ನಗರದಲ್ಲಿ ಗಣಿತ ಪ್ರಾಧ್ಯಾಪಕ ಸ್ಥಾನ ಪಡೆದು ಅಲ್ಲಿ ರಸಾಯನ ಶಾಸ್ತ್ರದ ಮೇಲೂ ಉಪನ್ಯಾಸ ಕೊಡುತ್ತಿದ್ದ. ಅವನ ಉಪನ್ಯಾಸಗಳೆಲ್ಲವೂ ವಿದ್ಯಾವಂತರಿಗೆ ಮಾತ್ರ. ಸಾಮಾನ್ಯರಿಗೆ ಅದು ಕಬ್ಬಿಣದ ಕಡಲೆಯಾಗಿತ್ತು. ಅವನ ಈ ಉಪನ್ಯಾಸಗಳಲ್ಲೇ ಆತ ಭೂಮಿ ಗೋಳಾಕೃತಿ ಯಲ್ಲಿದೆ ಎಂದು ವಾದಿಸುತ್ತಿದ್ದುದು. ಕೋಪರ್ನಿಕಸನು ಪಡುವಾದಲ್ಲಿದ್ದಾಗ ಗ್ರೀಕ್ ಭಾಷೆಯನ್ನು ಅಭ್ಯಾಸಮಾಡಿದ್ದ. ಪೈಥಾಗೊರಸ್, ಹಿಪ್ಪಾರ್ಕಸ್, ಪ್ಲೇಟೋ, ಅರಿಸ್ಟಾಟಲ್ ಮತ್ತಿತರರನ್ನು ಅಭ್ಯಸಿಸಿದ್ದ. ಅವರ ಮಾತುಗಳನ್ನು ಬಳಸಿ ತನ್ನ ವಾದಕ್ಕೆ ಪುಷ್ಟಿಕೊಡುತ್ತಿದ್ದ. ಅದೇ ಸಮಯದಲ್ಲಿ ಕೊಲಂಬಸ್ ತನ್ನ ಸಮುದ್ರ ಯಾನದಲ್ಲಿ ಅಮೆರಿಕಾ ದೇಶವನ್ನು ಕಂಡುಹಿಡಿದುದು. ಕೋಪರ್ನಿಕಸನ ಹತ್ತೊಂ ಬತ್ತನೆಯ ವಯಸ್ಸಿನಲ್ಲಿ ಕೊಲಂಬಸ್ ಅಮೆರಿಕಾವನ್ನು ಕಂಡುಹಿಡಿದುದು. ಆದರೆ ಆ ಸುದ್ದಿ ಕೋಪರ್ನಿಕಸನನ್ನು ಮುಟ್ಟಿದುದು ಕ್ರಿ. ಶ. 1495 ರಲ್ಲಿ, ಅವನು ಬಲೋನಾದಲ್ಲಿದ್ದಾಗ! ಜನ ತಿಳಿದಿದ್ದಂತೆ ಮತ್ತು ಸೂಚಿಸಿದ್ದಂತೆ ಕೊಲಂಬಸ್ ತನ್ನ ಸಮುದ್ರಯಾನದಲ್ಲಿ ಭೂಮಿಯ ಅಂಚಿಗೆ ಹೋಗಿ ಬಿದ್ದು ನರಕವನ್ನು ಸೇರದೆ ಮರಳಿ ಬಂದ ಅಂಶವನ್ನು ಕೋಪರ್ನಿಕಸ್ ತಿಳಿಸಿ ತನ್ನ ವಾದವನ್ನು ಸಮರ್ಥಿ ಸುತ್ತಿದ್ದ.

ವಿಶ್ವದ ಕೇಂದ್ರ ಸೂರ್ಯನೆಂಬುದನ್ನು ಹೇಳುವುದರಲ್ಲಿ ಕೋಪರ್ನಿಕಸನೇನೂ ಮೊದಲಿಗನಲ್ಲ. "ಕೋಪರ್ನಿಕಸನಿಗಿಂತ ನೂರು ವರ್ಷಗಳ ಮೊದಲು ಆಗಿ ಹೋದ 'ಡಿ ಕೂಸಾ' ಎಂಬ ಕ್ರಿಸ್ತ ಪಾದ್ರಿಯು ಭೂಮಿ ವಿಶ್ವದ ಕೇಂದ್ರವೆಂಬ ಸಿದ್ಧಾಂತನಮ್ಮ ನಿರೋಧಿಸಿದ್ದನು. ಅದರ ಬದಲಾಗಿ ಪೈಥಾಗೊರಸನ ವಾದವನ್ನು

ಪುಷ್ಟೀಕರಿಸಿದ್ದನು. ಪೈಥಾಗೊರಸನು ಭೂಮಿ ವಿಶ್ವದ ಕೇಂದ್ರವಲ್ಲವೆಂದು ಸಾರಿದವರಲ್ಲಿ ಮೊದಲಿಗನು. ಅವನ ಕಾಲಾನಂತರದಲ್ಲಿ ಅಲಿಯಕಸ್ ಎಂಬ ಕ್ರಿಸ್ತ ಪಾದ್ರಿಯು ಅವನ ವಾದಕ್ಕೆ ತುಂಬ ಬೆಂಬಲ ಕೊಟ್ಟನು. **ಚೀನಾ**ವನ್ನು ಸೇರುವ ಸುಲಭೋಪಾಯ ಕೊಲಂಬಸನಿಗೆ ಹೊಳೆದುದು ಅಲಿಯಕಸನ Image of the World ಎಂಬ ಪುಸ್ತಕಾವಲೋಕನದಿಂದಲೇ!" (ಜೀವನ, ಡಿಸೆಂಬರ್ 1953, ಪುಟ 329). ಕೋಪರ್ನಿಕಸ್ ಕೂಡ ಪ್ಲೇಟೋ, ಪೈಥಾಗೊರಸ್, ಪ್ಲುಟಾರ್ಕ್, ಸಿಸಿರೋ, ಮತ್ತಿತರರ ಗ್ರಂಥಗಳನ್ನು ಅಭ್ಯಾಸಿಸಿದ್ದ. ಆದರೆ ಅವರಲ್ಲಿ ಯಾರೂ ತಮ್ಮ ಪೂರ್ಣ ಜ್ಞಾನವನ್ನು ಪ್ರಚುರಪಡಿಸಿರಲಿಲ್ಲ. ಎಲ್ಲರೂ ಸಿದ್ಧಾಂತದ ಭಾವವನ್ನು ಕುರಿತು ಅರ್ಧ ಸಮ್ಮತಿಯನ್ನೂ ಅರ್ಧ ವಿರೋಧವನ್ನೂ ಸೂಚಿಸಿದ್ದರು. ಜೀವ ಭಯ ಅವರನ್ನು ಹೀಗೆ ಮಾಡಿಸಿದ್ದಿರಬೇಕು.!

ಕೋಪರ್ನಿಕಸನ ಪ್ರತಿಭೆಯನ್ನು ನಾವು ಅವನ ಕಾರ್ಯದಕ್ಷತೆಯಲ್ಲಿ ಕಾಣ ಬಯಸಿದರೆ ಅದು ತಪ್ಪಾದೀತು. ಏಕೆಂದರೆ ಕೋಪರ್ನಿಕಸ್ ಅಂತಹ ನಿಷ್ಕೃಷ್ಟ ವೀಕ್ಷಣಕಾರ್ಯಗಳೇನನ್ನೂ ಮಾಡಿಲ್ಲ. ಆತನೇ ತಯಾರಿಸಿದ ಹಲವು ಉಪ ಕರಣಗಳು ಅಷ್ಟೇನೂ ಸೂಕ್ಷ್ಮವಾಗಿರಲಿಲ್ಲ. ಅಲ್ಲದೆ ಸೂಕ್ಷ್ಮತಾ ದೃಷ್ಟಿಗೆ ಆತ ಹೆಚ್ಚಿನ ಗಮನವಿತ್ತಂತೆಯೂ ಕಾಣಬರುವುದಿಲ್ಲ. ಆತನ ಶಿಷ್ಯ ರೆಟಿಕಸ್ ಒಮ್ಮೆ ವೀಕ್ಷಣಾಕಾರ್ಯದಲ್ಲಿ ಹೆಚ್ಚಿನ ನಿಷ್ಕೃಷ್ಟತೆ ಮತ್ತು ಸೂಕ್ಷ್ಮತೆ ಬೇಕೆಂದಾಗ ಕೋಪರ್ನಿಕಸ್ ಸಧ್ಯದಲ್ಲಿ ಹೆಚ್ಚಿನ ಸೂಕ್ಷ್ಮತೆಯ ಅವಶ್ಯಕತೆಯಿಲ್ಲವೆಂದೂ, ತಾತ್ವಿಕ ಹಾಗೂ ಸಮೀಕ್ಷಾ ಅಂಶಗಳಲ್ಲಿ ಹೆಚ್ಚಿನ ವ್ಯತ್ಯಾಸವಿರದೆ ಸಮಂಜಸ ಬೆಲೆ ದೊರೆತರೆ ಸಾಕೆಂದೂ ತಿಳಿಸಿದ ಸಂಗತಿಯುಂಟು. ಹಾಗೆಂದ ಮಾತ್ರಕ್ಕೆ ಕೋಪರ್ನಿಕಸನ ಬೆಲೆಗಳು ಕೀಳಾಗಿದ್ದುವೆಂದಲ್ಲ. ನಿಜಕ್ಕೂ ಅವನ ಬೆಲೆಗಳು ಹಿಂದಿನ ಬೆಲೆಗಳಿಗಿಂತ ಹೆಚ್ಚು ಸಂಬದ್ಧವಾಗಿದ್ದುವು. ವಸ್ತುತಃ, ಕೋಪರ್ನಿಕಸ್ ಒಳ್ಳೆಯ ವೀಕ್ಷಣಕಾರನೆನ್ನುವುದಕ್ಕಿಂತಲೂ ಒಳ್ಳೆಯ ವಿಚಾರ ಪುರುಷನೆಂದರೆ ತಡೆದೀತು.

ಒಮ್ಮೆ ರೋಂನಲ್ಲಿ ಉಪನ್ಯಾಸ ಮಾಡುತ್ತಿದ್ದ ಕೋಪರ್ನಿಕಸನಿಗೆ ಚರ್ಚು ಅಧಿಕಾರಿಯೊಬ್ಬ ಎಚ್ಚರಿಕೆ ಕೊಟ್ಟ. ತಾನು ನಂಬಿದ್ದರೂ ಅನಧಿಕಾರಯುತವಾಗಿ ಇತರರಿಗೆ ಅದನ್ನು ತಿಳಿಸಲು ಅವನಿಗೆ ಹಕ್ಕಿಲ್ಲವೆಂದು ಹೇಳಿದ. ಅವನ ಮಾತಿನಂತೆ ಕೆಲಕಾಲ ಕೋಪರ್ನಿಸ್ ಉಪನ್ಯಾಸಗಳನ್ನು ನಿಲ್ಲಿಸಿದ. ಆದರೂ ಕೆಲವು ಜ್ಯೋತಿಶ್ಯಾಸ್ತ್ರಜ್ಞರು ಅವನ ಬಳಿಗೆ ವೈಯಕ್ತಿಕವಾಗಿ ಬರುತ್ತಿದ್ದರು. ಅವನು ಹೇಳಿದುದನ್ನು ಹೊರಗಡೆ ಸಾರುತ್ತಿದ್ದರು. ಕಡೆಗೊಮ್ಮೆ ಜ್ಯೋತಿಶ್ಯಾಸ್ತ್ರಜ್ಞರು ಅವನನ್ನು ಪ್ರಶ್ನಿಸಿದರು. "ಗ್ರಹಣ ದಿನವನ್ನೂ ಇನ್ನೂ ನೂರು ವರ್ಷಗಳ ಬಳಿಕ ನಕ್ಷತ್ರವೊಂದರ ಸ್ಥಾನವನ್ನೂ ನೀನು ಈ ಮೊದಲೇ ತಿಳಿಸುವೆ. ಗ್ರಹಗಳ ಗ್ರಹಣಗಳ

ಭವಿಷ್ಯವನ್ನು ನೀನು ತಿಳಿಸುವುದಾದರೆ, ಮನುಷ್ಯನ ಭವಿಷ್ಯವನ್ನು ನಾವು ತಿಳಿಸ ಬಾರದೇಕೆ?" ಅವರ ಮೂಢತ್ವಕ್ಕೆ ಕೋಪರ್ನಿಕಸನ ಬಳಿ ಉತ್ತರವಾವುದೂ ಇರಲಿಲ್ಲ. ತನ್ನ ಧ್ಯೇಯ ಸತ್ಯಾನ್ವೇಷಣೆಯೇ ಹೊರತು ಮತ್ತೇನೂ ಅಲ್ಲವೆಂದು ಅವನು ಹೇಳಿ ಸುಮ್ಮನಾಗಬೇಕಾಯಿತು.

ಈ ವೇಳೆಗಾಗಲೇ ಪಾದ್ರಿಗಳನೇಕರು ಪೋಪರ ಬಳಿ ದೂರನ್ನಿತ್ತಿದ್ದರು. ಅವನ ಭಾವನೆಗಳನ್ನು ಅನೇಕರು ಖಂಡಿಸಿದ್ದರು. ಪೋಪರು ಇನ್ನು ಸುಮ್ಮನಿರಲು ಸಾಧ್ಯ ವಿರಲಿಲ್ಲ. ಕೋಪರ್ನಿಕಸನನ್ನು ತಮ್ಮ ಬಳಿಗೆ ಕರೆಸಿಕೊಂಡು, ಅತನಿಗೆ ಸ್ವಲ್ಪ ಹಣವನ್ನು ಕೊಟ್ಟು ತನ್ನ ಊರಿಗೆ ಮರಳುವಂತೆ ಹಿತವಚನವಿತ್ತು, ಅಲ್ಲಿ ಅವನಿಗೆ ಅದೃಷ್ಟಕಾದಿದೆಯೆಂದು ತಿಳಿಸಿದರು. ಕೋಪರ್ನಿಕಸ್ ತನ್ನ ಪಟ್ಟಣವಾದ ಟೋರನ್‌ಗೆ ಹಿಂದಿರುಗಿದ. ಊರಿನವರು ಅವನನ್ನು ಅತ್ಯಾದರದಿಂದ ಬರಮಾಡಿ ಕೊಂಡರು. ಕೋಪರ್ನಿಕಸನ ಸೋದರ ಮಾವನಿಗೂ ಸಹ ಈ ವಿಷಯದ ರಹಸ್ಯ ತಿಳಿದಿರಲಿಲ್ಲ. ಸ್ವಲ್ಪ ದಿನಗಳಲ್ಲೇ ಕೋಪರ್ನಿಕಸ್‌ಗೆ ಚರ್ಚಿನಲ್ಲಿ ಒಂದು ಹುದ್ದೆ ಯನ್ನು ಕೊಡಲಾಯಿತು. ಇವೆಲ್ಲ ಸಾಧ್ಯವಾದುದು ಪೋಪರು ಕೋಪರ್ನಿಕಸ್‌ನ ಸ್ನೇಹಿತರಾದುದರಿಂದ. ಇಲ್ಲವಾಗಿದ್ದರೆ ಕೋಪರ್ನಿಕಸ್ ಎಂದೋ ತನ್ನ ಜೀವನ ಯಾತ್ರೆಯನ್ನು ಮುಗಿಸಿದ್ದಿರಬೇಕಿತ್ತು! ಹೊರ ಪ್ರಪಂಚದಲ್ಲಿ ಖಗೋಳಶಾಸ್ತ್ರಜ್ಞ, ಗಣಿತಶಾಸ್ತ್ರಜ್ಞ, ವೈದ್ಯ-ಹೀಗೆ ಅನೇಕ ಬಗೆಯಲ್ಲಿ ಕೀರ್ತಿ ಪಡೆದಿದ್ದ ಕೋಪರ್ನಿಕಸ್ ಅವನ ಸ್ವಂತ ಊರಿನವರಿಗೆ "ಪಾದ್ರಿಯ ಸೋದರಳಿಯ" ನಾಗಿಯೇ ಉಳಿದಿದ್ದ!

ಕೋಪರ್ನಿಕಸ್ ತನ್ನನ್ನು ಕೆಲವರು ಸಂಶಯ ದೃಷ್ಟಿಯಿಂದ ನೋಡುತ್ತಿರು ವುದನ್ನು ತಿಳಿದು ಎಚ್ಚರದಿಂದ ವರ್ತಿಸತೊಡಗಿದ. ತಾನಾಯಿತು, ತನ್ನ ನಕ್ಷತ್ರ ವೀಕ್ಷಣೆಯಾಯಿತು. ಆಗೊಮ್ಮೆ, "ವಿಖ್ಯಾತರೊಡನೆ ನಾನು ಮಾತಾಡುವುದನ್ನು ನಿಷೇಧಿಸಲಾಗಿದೆ. ಆದರೆ ದೇವರು ನನಗಾಗಿ ಮೆರವಣಿಗೆಯೊಂದನ್ನು ಕಳು ಹಿಸುತ್ತಾನೆ" ಎಂದು ನಕ್ಷತ್ರಗಳನ್ನು ಕುರಿತು ಹೇಳಿದ್ದುಂಟು. ತನ್ನ ಕೆಲಸ ಕಾರ್ಯಗಳಲ್ಲಿ ಯಾರ ಅಡ್ಡಿಯೂ ಆತಂಕವೂ ಇರಲಿಲ್ಲ. ತನಗೆ ತಾನೇ ಆಗಿದ್ದ ಕೋಪರ್ನಿಕಸ್ ಹೇಳಿದ: "ದೇವರು ನನ್ನನ್ನು ಪ್ರತ್ಯೇಕಿಸಿದ್ದಾನೆ. ಕಾರಣ, ನಾನು ಆತನ ಕಾರ್ಯವನ್ನು ಅಭ್ಯಸಿಸಿ, ಸುಲಭ ಗ್ರಹಿಕೆಗೆ ಸಾಧ್ಯಮಾಡುವಂತಾಗಲು" ಎಂದು. ಹಗಲೆಲ್ಲ ತನ್ನ ಚರ್ಚಿಗೆ ಸಂಬಂಧಿಸಿದ ಕೆಲಸಗಳನ್ನು ನೋಡಿಕೊಳ್ಳುತ್ತಿದ್ದ. ಬಡವರಿಗೆ ಉಚಿತ ವೈದ್ಯ ಸಲಹೆ, ಸಹಾಯಗಳನ್ನು ನೀಡುತ್ತಿದ್ದ. ತನ್ನ ಪುರು ಸೊತ್ತಿನ ವೇಳೆಯಲ್ಲಿ ಲ್ಯಾಟಿನ್ ಪದ್ಯಗಳನ್ನೂ ರಚಿಸಿದ್ದಾನೆ. ಆತನ ಮೂವತ್ತಾರು ವರ್ಷಗಳ ಸತತ ಪ್ರಯತ್ನದ ಫಲ ಕೋಪರ್ನಿಕಸ್ ಸಿದ್ಧಾಂತಕ್ಕೆ ಕಾರಣವಾಯಿತು. ಅಲ್ಲದೆ ಈ ಭೂಮಿಯನ್ನು ತಿಳಿಯಲು 34 ಆವರ್ತಗಳು ಸಾಕೆಂದು ಕಂಡುಹಿಡಿದ.

( ಕೋಪರ್ನಿಕಸನ ಬಳಿಕ ಅವನ ಶಿಷ್ಯ ಕೆಪ್ಲರ್ ಆ 34 ಆವರ್ತಗಳು 34 ಗ್ರಹಣ ಗಳೆಂದು ತಿಳಿಸಿದ ). ತನ್ನ ವಿಚಾರಶಕ್ತಿಯ ಮಂಥನದಿಂದ ಮತ್ತು ಅನೇಕ ಅಂಶ ಸಂಗ್ರಹಗಳಿಂದ ಕೋಪರ್ನಿಕಸ್ ತನ್ನ ಸಿದ್ಧಾಂತವನ್ನು ನಿರೂಪಿಸಲು ಸಾಧ್ಯ ವಾಯಿತು. ಆತನ ಪರಿಶ್ರಮದ ಫಲ ಭೂಮಿಯ ಚಲನ-ವಲನವನ್ನು ತಿಳಿಯುವ ಸುಲಭ ವಿಧಾನದ ಒಂದು ಪ್ರಕಟಣೆ.

ಹಣದ ವಿಷಯದಲ್ಲೂ ಸಹ ಕೋಪರ್ನಿಕಸ್ ಆಳವಾಗಿ ವಿಚಾರಮಾಡು ತ್ತಿದ್ದ. ಹಣದ ಅವಶ್ಯಕತೆ ಹೆಚ್ಚಿದಂತೆ ಅದರ ಉಪಯುಕ್ತತೆಯ ಅರಿವುಂಟಾಗಿ ಅದನ್ನು ಗಳಿಸುವ ಬಯಕೆಯುಂಟಾಯಿತು. ಖಡ್ಗಕ್ಕಿಂತ ಲೇಖನಿಯಲ್ಲಿ ಹೆಚ್ಚು ಪ್ರವೀಣತೆ ಪಡೆದಿದ್ದ ಅವನು "ಹಣ ಮತ್ತು ನಾಣ್ಯದ ಅಭಿವೃದ್ಧಿ" ಎಂಬ ವಿಷಯವನ್ನು ಕುರಿತು ಜರ್ಮನ್ ಭಾಷೆಯಲ್ಲಿ ಒಂದು ಪ್ರಬಂಧವನ್ನು ರಚಿಸಿದ. ಆದರೆ ಅದರಿಂದ ಅವನಿಗೆ ಏನೂ ಉಪಯೋಗವಾಗದೆ ಅದನ್ನು ಪ್ರಷ್ಯದ ಪ್ರಭುಗಳಿಗೆ ಪುಕ್ಕಟೆಯಾಗಿ ಕೊಟ್ಟುಬಿಟ್ಟ. ಹಾಗೆ ಅದನ್ನು ಅವರಿಗೆ ಕೊಡಲು ಕಾರಣವೂ ಇತ್ತು. ಆಗತಾನೆ ಪೋಲೆಂಡಿನ ದೊರೆ ಪ್ರಷ್ಯ ಹಾಗೂ ಪೋಲೆಂಡಿನಲ್ಲಿ ಏಕರೀತಿಯ ನಾಣ್ಯಗಳಿರಬೇಕೆಂದು ಪ್ರಕಟಿಸಿದ್ದ. ಹೊಸ ನಾಣ್ಯಗಳು ಹಳೆಯ ನಾಣ್ಯಗಳಿಗಿಂತ ಮೌಲ್ಯದಲ್ಲಿ ಕಡಿಮೆಯಾದರೂ ಅದಕ್ಕೆ ಸಮನೆಂದು ಭಾವಿಸಿ ಚಲಾವಣೆಗೆ ತರಲು ತಯಾರಿಕೆ ನಡೆಯುತ್ತಿತ್ತು. ಚಿನ್ನ, ಬೆಳ್ಳಿಯ ನಾಣ್ಯಗಳಿಗೆ ತಾಮ್ರದ ನಾಣ್ಯ ಸರಿ ಹೋದೀತೇ! ಸಾಮಾನ್ಯ ಜ್ಞಾನ ತಿಳಿಸುತ್ತದೆ ಇದು ಮೌಢ್ಯದ ಪರಮಾವಧಿ ಯೆಂದು! ಅಕ್ಕಸಾಲಿಗರಿಗೆ ಮಾತ್ರ ಉಪಯೋಗವಾಗುತ್ತಲಿದ್ದ ಈ ಪದ್ಧತಿಯನ್ನು ಖಂಡಿಸಿ ಬರೆದ ಈ ಪ್ರಬಂಧವನ್ನು ಪ್ರಷ್ಯದ ದೊರೆಗಳಿಗೆ ಕಳುಹಿಸಿದುದರಲ್ಲಿ ಅರ್ಥ ವಿಲ್ಲದಿರಲಿಲ್ಲ. ಈ ನಕ್ಷತ್ರ ವೀಕ್ಷಕನು ಅರ್ಥಶಾಸ್ತ್ರ ನಿಪುಣನೂ ಆಗಿದ್ದನೆಂಬುದನ್ನು ಈ ನಿದರ್ಶನ ಸೂಚಿಸುತ್ತದೆ.

ಕೋಪರ್ನಿಕಸ್ ಎಲ್ಲ ದಾರ್ಶನಿಕರ, ಗಣಿತಜ್ಞರ ಹಾಗೂ ಶಾಸ್ತ್ರ ಪಂಡಿತರ ಪುಸ್ತಕಗಳನ್ನು ಓದಿದ್ದ. ಎಲ್ಲ ಓದುಗರಂತೆಯೇ ಆತನಿಗೆ ಮೊದಲಲ್ಲಿ ನಿರಾಸೆಯೇ ಆಯಿತು. ನಂತರ ತಾನು ಬಯಸಿದ್ದ ಸಂಗತಿಗಳು ಅಲ್ಲಲ್ಲಿ ಸಿಕ್ಕವು. ಅಲ್ಲಲ್ಲಿ ತನ್ನ ಭಾವನೆ, ವಿಚಾರಗಳನ್ನು ಹೋಲುತ್ತಿದ್ದ ಅಭಿಪ್ರಾಯಗಳು ಕಂಡು ಬಂದುವು. ಕೊನೆಗೆ ಆತ ಪುಸ್ತಕದಲ್ಲಿರದಿರುವ ಅಂಶಗಳನ್ನು ತಿಳಿಯುವ ಇಚ್ಛೆಯಿಂದ ಓದ ತೊಡಗಿದ! ತನ್ನಲ್ಲಿದ್ದುದು ಕೇವಲ ಕೆಲವೇ ಪುಸ್ತಕಗಳಾದರೂ ಅವನಿಗೆ ಅವನ ಮಿತ್ರರ, ಕ್ರೈಸ್ತ ಚರ್ಚುಗಳ ಹಾಗೂ ಮಠಗಳ ಪುಸ್ತಕ ಭಂಡಾರಗಳಲ್ಲಿ ಹೇರಳವಾಗಿ ಪುಸ್ತಕಗಳು ದೊರಕುತ್ತಿದ್ದುವು. ಅಲ್ಲದೆ ಯಾವೊಬ್ಬನೂ ಎಲ್ಲ ಪುಸ್ತಕಗಳನ್ನೂ ಓದಬೇಕಿಲ್ಲ; ಅದು ಸಾಧ್ಯವೂ ಅಲ್ಲ. ಉತ್ತಮ ಗ್ರಂಥಗಳ ಪಠಣ, ಪರಿಚಯ

ಇದ್ದರೆ ಸಾಕು. ಕ್ರಿ. ಶ. 1539 ರಲ್ಲಿ ರೆಟಿಕಸ್ (Rheticus) ನು ಕೋಪರ್ ನಿಕಸನನ್ನು ಭೇಟಿಮಾಡಿದಾಗ ತನ್ನ ಪ್ರೀತಿಯ ಕುರುಹಾಗಿ ಐದು ಪುಸ್ತಕಗಳನ್ನು ಬಹುಮಾನವಾಗಿತ್ತನು. ಅವುಗಳೊಂದರಲ್ಲಿ ಕೋಪರ್ನಿಕಸನ ಜಾತಕವಿದೆ, ಅದು ರೆಟಿಕಸನ ಕೆಲಸವೇ ಇರಬಹುದೆಂದು ಊಹಿಸಲಾಗಿದೆ.

ಪೋಲೆಂಡಿನ ರಾಜನ ಆಸ್ಥಾನದಲ್ಲಿದ್ದವರಲ್ಲಿ ಡಾಂಟಿಸ್ಕಸ್‌ನೂ (Danti-scus) ಒಬ್ಬ. ಈತ ಒಳ್ಳೆಯ ರಾಜಕಾರಿಣಿ, ಸ್ವಲ್ಪಮಟ್ಟಿಗೆ ಕವಿ; ಕುಡುಕ, ವಿಷಯ ಲಂಪಟ, ಮೇಲಾಗಿ ಸಮಯ ಸಾಧಕ. ಇವನು ಚರ್ಚುಗಳಲ್ಲಿ ಕೋಪರ್ನಿಕಸ್ಸಿಗಿಂತ ಉನ್ನತ ಸ್ಥಾನವನ್ನು ಸಂಪಾದಿಸಿದ್ದ. ಕೋಪರ್ನಿಕಸ್ ತನ್ನ ವೃದ್ಧಾಪ್ಯದಲ್ಲಿ (ಆಗ ಆತನಿಗೆ ಅರವತ್ತಾರು ವರ್ಷ ವಯಸ್ಸು) ಮನೆ ಕೆಲಸವನ್ನು ನೋಡಿಕೊಳ್ಳಲೆಂದು ಅನ್ನಾ ಶಿಲ್ಲಿಂಗ್ಸ್ ಎಂಬಾಕೆಯನ್ನು ನಿಯಮಿಸಿದ್ದ. ನಿಜವಾಗಿಯೂ ಶುದ್ಧ ಮನಸ್ಕನಾದ ಕೋಪರ್ನಿಕಸ್ ಶಿಲ್ಲಿಂಗ್ಸ್‌ಳನ್ನು ಅನ್ಯಥಾ ಭಾವಿಸಿರಲಿಲ್ಲ. ಆದರೆ ಸಮಾಜದ ಕೆಟ್ಟ ನೋಟ, ಮೇಲಾಗಿ ಡಾಂಟಿಸ್ಕಸ್‌ನ ಈರ್ಷ್ಯೆ ಇವರ ಮೇಲೆ ಬಿದ್ದಿತು. ಕ್ರಿಸ್ತ ಪಾದ್ರಿಯೊಬ್ಬ ತರುಣಿಯೊಬ್ಬಳನ್ನು ಮನೆಗೆಲಸಕ್ಕಿಟ್ಟುಕೊಂಡಿರುವುದನ್ನು ಸೂಕ್ಷ್ಮವಾಗಿ ಸೂಚಿಸಿ ಅದು ಹೇಯವಾದ ಕೆಲಸವೆಂದು ಅಲ್ಲಗಳೆದ. ಆಕೆಯನ್ನು ಬಿಟ್ಟುಬಿಡಬೇಕೆಂದು ಆತನ ಮಿತ್ರರ ಮೂಲಕ ಹೇಳಿ ಕಳುಹಿಸಿದ. ಕೋಪರ್ನಿಕಸ್ ಮೊದಲಲ್ಲಿ ಒಪ್ಪಲಿಲ್ಲ. ಡಾಂಟಿಸ್ಕಸನ ಬಲವಂತ ಬಲವಾಗಲು ಕೋಪರ್ನಿಕಸ್ ಅವನ ಮಾತಿಗೆ ಒಪ್ಪಬೇಕಾಯಿತು. ಅಂತೆಯೇ ಶಿಲ್ಲಿಂಗ್ಸ್‌ಳನ್ನು ತನ್ನ ಮನೆಗೆಲಸದಿಂದ ವಜಾ ಮಾಡಿದ. ಕೋಪರ್ನಿಕಸ್‌ಗೆ ತನ್ನ ಕೊನೆಯ ದಿನಗಳಲ್ಲಿ ಆದ ಅನುಭವಗಳಲ್ಲಿ ಇದೂ ಒಂದು. ಈ ಘಟನೆ ಕೋಪರ್ ನಿಕಸನನ್ನು ಸಾಕಷ್ಟು ಕುಗ್ಗಿಸಿರಬೇಕು.

ರೆಟಿಕಸ್ ಕೋಪರ್ನಿಕಸನ ಅಸಾಮಾನ್ಯ ಶಿಷ್ಯ; ಆತನ ಪರಮ ಮಿತ್ರ. ರೆಟಿಕಸ್ ಆತನ ಜೀವನ ಚರಿತ್ರೆಯನ್ನೂ ಸಹ ಬರೆದ. ಆದರೆ ಅದು ಎಲ್ಲಿಯೋ ಕಳೆದು ಹೋಗಿದೆ. ಕೋಪರ್ನಿಕಸನ ಕೊನೆಯವರೆವಿಗೂ ನೆರವಾಗಿ ನಿಂತವ ರೆಟಿಕಸ್. ಕೋಪರ್ನಿಕಸನ ಬಲ ಕುಗ್ಗಿತು; ಕಣ್ಣುಗಳು ನಕ್ಷತ್ರ ವೀಕ್ಷಣೆಯಿಂದ ಮಂದವಾದುವು; ದೇಹಸ್ಥಿತಿ ಕೆಡುತ್ತಾ ಬಂದಿತು. ಆಗಲೇ ರೆಟಿಕಸ್ ಮತ್ತಿತರ ಮಿತ್ರರ ಮಾತಿನಂತೆ ಕೋಪರ್ನಿಕಸ್, ಮೂವತ್ತುಮೂರು ವರ್ಷಗಳ ನಂತರ, ತನ್ನ ವಿಷಯ ಸಂಗ್ರಹಣೆಗಳ ಸಂಪಾದನೆಯಿಂದ ಖಗೋಳಾವರ್ತವನ್ನು ಕುರಿತು ರಚಿಸಿದ್ದ ಗ್ರಂಥ "De Revolutionibus Orbium Coelestium" ಅನ್ನು ಪ್ರಕಟಿಸಲು ಒಪ್ಪಿದ್ದು. ಆದರೆ ಅದನ್ನು ರೋಂ ದೇಶದಲ್ಲಿ ಪ್ರಕಟಿಸುವಂತಿರಲಿಲ್ಲ. ಹಾಗೆ ಮಾಡಿದ್ದಾದರೆ ತನ್ನ ಮೃತ್ಯುವನ್ನು ತಾನೇ ಆಲಿಂಗಿಸಿದಂತೆ

ಎಂದು ಅವನು ತಿಳಿದಿದ್ದ. ಚರ್ಚಿನ ಅಧಿಕಾರಿಗಳ ಅಪ್ಪಣೆ ಪಡೆಯದೆ ತನ್ನ ಊರಿನಲ್ಲೇ ಪ್ರಕಟಿಸುವುದು ಅಷ್ಟೇ ಕಷ್ಟವಾದುದೆಂದೂ ಆತ ತಿಳಿದಿದ್ದ. ಕಡೆಗೆ ಅದನ್ನು ಸ್ವತಂತ್ರ ನಗರವಾದ, ವಿಜ್ಞಾನ, ಕಲೆಗಳತೌರೆನಿಸಿದ ನರೆಂಬರ್ಗ್ (Nuremberg) ನಲ್ಲಿ ಪ್ರಕಟಿಸುವುದೆಂದು ತೀರ್ಮಾನಿಸಿದ.

ಆ ಹಸ್ತಪ್ರತಿಯೊಡನೆ ತಾನು ಆವರೆಗೂ ದುಡಿದು ಗಳಿಸಿದ್ದ ಹಣವನ್ನು ಕಳುಹಿಸಿದ. ತನ್ನ ರಕ್ಷಣೆಗಾಗಿ ಆ ಗ್ರಂಥಕ್ಕೆ ಮುನ್ನುಡಿಯೊಂದನ್ನು ಬರೆದು ಆ ಗ್ರಂಥವನ್ನು ಪೋಪರಾದ ಮೂರನೆಯ ಪಾಲ್‌ರವರಿಗೆ ಅರ್ಪಿಸಿ ಅವರ ಕೃಪಾಪಾತ್ರನಾಗಲು ಎಣಿಸಿದ. ಆ ಗ್ರಂಥವನ್ನು ಅನಾಮಿಕ ಗ್ರಂಥವನ್ನಾಗಿಸದೆ ತನ್ನ ಹೆಸರನ್ನೂ ಸೂಚಿಸಿದ. ಆ ಗ್ರಂಥವನ್ನು ಸಂಪಾದಿಸುವ ಭಾರವು ಮಾರ್ಟಿನ್ ಲೂತರನ ಅನುಯಾಯಿಯೂ, ಮತಧರ್ಮಶಾಸ್ತ್ರಜ್ಞನೂ ಸ್ವಲ್ಪ ಮಟ್ಟಿಗೆ ಖಗೋಳ ಶಾಸ್ತ್ರಜ್ಞನೂ ಆಗಿದ್ದ ಆಂಡ್ರಿಯಸ್ ಓಸಿಯಾಂಡರ್ (Andreas Osiander) ಎಂಬಾತನ ಪಾಲಿಗೆ ಬಿದ್ದಿತು. ಓಸಿಯಾಂಡರನು ಕೋಪರ್ನಿಕಸನ ಮೂಲ ಮುನ್ನುಡಿಯನ್ನು ತೆಗೆದುಹಾಕಿ ಅದರ ಬದಲು ತಾನೇ ಬರೆದ ಒಂದು ಅನಾಮಿಕ ಮುನ್ನುಡಿಯನ್ನು ಪ್ರಕಟಿಸಿ ಅದರಲ್ಲಿ ಕೋಪರ್ನಿಕಸನು ಸೂಚಿಸಿರುವ ಅಭಿಪ್ರಾಯಗಳು ಕೇವಲ ಆಧಾರಕಲ್ಪನೆಗಳೆಂದೂ ಅವು ಭೌತಪ್ರಮಾಣದಿಂದ ನಿರ್ಧರವಾಗಿಲ್ಲವೆಂದೂ ತಿಳಿಸಿದ್ದನು. ಈ ಅನಾಮಿಕ ಮುನ್ನುಡಿಯನ್ನು ಪ್ರಕಟಿಸುವ ಉದ್ದೇಶವೇನೇ ಇದ್ದರೂ ಓಸಿಯಾಂಡರನು ಕೋಪರ್ನಿಕಸನ ಕ್ರಿಯೆ ಮತ್ತು ಕೃತಿಗೆ ಅಪಾಯ ಒದಗದಿರಲೆಂಬ ಒಳ್ಳೆಯ ದೃಷ್ಟಿಯಿಂದ ಹಾಗೆ ಮಾಡಿದ್ದಿರಲೂಬಹುದು. ಅವಿಚಾರಾಭಿಪ್ರಾಯಗಳು, ಮೇಲಾಗಿ ಅಧರ್ಮ ಭೀತಿ ಆಗಿನ ಜನರನ್ನು ಇನ್ನೂ ಬಿಟ್ಟಿರಲಿಲ್ಲ. ಅದೆಂತೇ ಇರಲಿ, ಕೋಪರ್ನಿಕಸನ ದೃಷ್ಟಿಯಿಂದ ಹೇಳುವುದಾದರೆ, ಅದು ಅವನಿಗೆ ಒಳ್ಳೆಯದಕ್ಕಿಂತ ಕೆಡುಕನ್ನೇ ಉಂಟುಮಾಡಿತೆಂದು ಹೇಳಬಹುದು. ಏಕೆಂದರೆ ಅವನ ಸಿದ್ಧಾಂತವು ಸತ್ಯವಾಗಿರದೆ ಖಗೋಳ ವಸ್ತುಗಳ ಚಲನೆಯನ್ನು ಸುಲಭವಾಗಿ ವಿವರಿಸುವ ಕೇವಲ ಒಂದು ಗಣಿತಶಾಸ್ತ್ರ ತಂತ್ರವೆಂಬ ಅರ್ಥವನ್ನು ಈ ಹೊಸ ಮುನ್ನುಡಿ ಸೂಚಿಸುತ್ತಿತ್ತು. ನಿಜಕ್ಕೂ ಕೋಪರ್ನಿಕಸ್ ತನ್ನ ಮೊದಲಿನ ಮುನ್ನುಡಿಯನ್ನು ಪೋಪರಿಗೆ ನಿವೇದಿಸುತ್ತ ಭೂಮಿ ಅಚಲವೆಂಬ ಮತ್ತು ವಿಶ್ವದ ಕೇಂದ್ರವೆಂಬ ಅವಿವೇಕ ಹಾಗೂ ಅಸಂಗತ ಅಭಿಪ್ರಾಯಗಳನ್ನು ಒಪ್ಪದಿದ್ದುದೇ ಈ ಗ್ರಂಥಪ್ರಕಟಣೆಗೆ ಕಾರಣವೆಂದು ತಿಳಿಸಿದ್ದ. ಪವಿತ್ರ ಧರ್ಮ ಗ್ರಂಥಗಳ ವಿಕೃತ ವಿವರಣೆ ಹಾಗೂ ಅಪಾರ್ಥಗಳನ್ನು ಖಂಡಿಸಿ ಅಂತಹವರ ಮೌಢ್ಯವನ್ನು ಅಲ್ಲಗಳೆದಿದ್ದಾನೆ. ಈ ಸಂಗತಿಗಳನ್ನು ನೋಡಿದರೆ ಕೋಪರ್ನಿಕಸ್ ಕ್ರಿಸ್ತೀ ಚರ್ಚಿನಿಂದ ಒದಗಬಹುದಾದ ತೊಂದರೆಗಳನ್ನು ನಿರ್ಲಕ್ಷಿಸಿದ್ದನೆಂದೂ ಆ ಗ್ರಂಥ ಪ್ರಕಟಣೆ

ಅಷ್ಟು ವಿಳಂಬವಾಗಲು ಮತ್ತಾವುದೋ ಕಾರಣವಿರಬೇಕೆಂದೂ ತಿಳಿದುಬರುತ್ತದೆ. ಮುಂದೆ, 1616 ರಲ್ಲಿ, ಗ್ರಂಥ ಪ್ರಕಟವಾಗ ಎಪ್ಪತ್ತಮೂರು ವರ್ಷಗಳನಂತರ, ಅದನ್ನು 'ನಿಷಿದ್ಧ ಗ್ರಂಥ' ವೆಂದು ಕರೆಯಲಾಯಿತು. ಆದರೆ ಆ ಸ್ಥಿತಿಯನ್ನು ನೋಡುವ 'ಪುಣ್ಯ' ಕೋಪರ್ನಿಕಸನಿಗೆ ಇರಲಿಲ್ಲ.

ರೋಂ ಆ ಮಹಾಗ್ರಂಥವನ್ನು ಹೇಗೆ ಸ್ವಾಗತಿಸುತ್ತದೆಂಬುದನ್ನು ಕೋಪರ್ನಿಕಸ್ ಊಹಿಸಲು ಯತ್ನಿಸುತ್ತಿದ್ದ. ತಿಂಗಳುಗಳುರುಳಿದುವು : ಭಯ, ಕುತೂಹಲ, ಸಂದಿಗ್ಧಸ್ಥಿತಿ— ಇವು ಮೇಲ್‌ಗೈ ಪಡೆದುವು. ಆರೋಗ್ಯಸ್ಥಿತಿ ಕೆಡುತ್ತಾ ಬಂದಿತ್ತು. ಜ್ವರದ ತಾಪಕ್ಕೆ ಚಿತ್ತಭ್ರಮೆಯಾಗಿತ್ತು. ಆಗೊಮ್ಮೆ ಕೋಪರ್ನಿಕಸ್ ಕನವರಿಸಿದ, "ಪುಸ್ತಕ—ನನ್ನ ಪುಸ್ತಕ—ಹೇಳಿ, ಅದನ್ನು ಸುಟ್ಟಿಲ್ಲವಷ್ಟೆ? ಸತ್ಯದ ಹೊರತಾಗಿ ಒಂದು ಪದವನ್ನೂ ಬರೆದಿಲ್ಲ—ಹೇಗೆ ಸುಟ್ಟಾರು ಆ ಪುಸ್ತಕವನ್ನು !?"

ಮೇ 24, 1543. ನರೆಂಬರ್ಗ್‌ನಿಂದ ದೂತನೊಬ್ಬ ಫ್ರಾನ್‌ಬರ್ಗ್‌ಗೆ (Frauenburg) ಬಂದ; ಅಚ್ಚಾದ ಗ್ರಂಥವೊಂದನ್ನು ಕೈಯಲ್ಲಿ ಹಿಡಿದು ತಂದ. ಅವನನ್ನು ರೋಗಗ್ರಸ್ತ ಕೋಪರ್ನಿಕಸನ ಕೋಣೆಯೊಳಕ್ಕೆ ಬಿಡಲಾಯಿತು. ಆತ ಆ ಪುಸ್ತಕವನ್ನು ಕೋಪರ್ನಿಕಸ್‌ಗೆ ಕೊಟ್ಟ. ಕೋಪರ್ನಿಕಸ್ ಮುಗುಳ್ನಗೆ ನಕ್ಕ; ಕೈಯಲ್ಲಿದ್ದ ಗ್ರಂಥವನ್ನು ದೃಷ್ಟಿಸಿ ನೋಡಿದ; ಅದನ್ನು ಸವರಿಸಿ, ಹಾಳೆ ಎರಡನ್ನು ತಿರುವಿಹಾಕಿದ. ಅನಂತರ ಅದನ್ನು ಮಡಿಸಿ ತನ್ನ ಎದೆಯ ಮೇಲಿಟ್ಟುಕೊಂಡು ಕಣ್ಣು ಮುಚ್ಚಿದ. ದೀರ್ಘ ನಿದ್ರೆ ಅವನನ್ನಾವರಿಸಿತು. ಸಾಮಾನ್ಯ ಸಂಸ್ಕಾರದೊಡನೆ ಅವನನ್ನು ಸಮಾಧಿಮಾಡಲಾಯಿತು. ಅವನ ಸಮಾಧಿಯ ಮೇಲೆ ಅವನ ಮಹತ್ಕಾರ್ಯವನ್ನು ಸೂಚಿಸಲಿಲ್ಲ; ಅವನ ಗ್ರಂಥದ ಪರಿಚಯವಾದಮೇಲೆ ಅವನ ಸಮಾಧಿಯನ್ನು ಈ ಜನ ಸುಮ್ಮನೆ ಬಿಡಲಾರರೆಂದು ಹಾಗೆ ಮಾಡಲಾಯಿತು. ಹೀಗೆ, ಮಹಾಜೀವವೊಂದು ಇಹಲೋಕದಿಂದ ಮರೆಯಾಯಿತು.

ಒಂದು ದೃಷ್ಟಿಯಿಂದ ಕೋಪರ್ನಿಕಸ್ ಅದೃಷ್ಟವಂತನೆಂದೇ ಹೇಳಬಹುದು. ಅವನ ಸಾವಿನ ರೀತಿಯನ್ನು ಕುರಿತು ನಾವು ಈ ಮಾತುಗಳನ್ನು ಹೇಳಬಹುದಾಗಿದೆ. ದೇಶಭ್ರಷ್ಟನಾದ ಟೈಕೊಬ್ರಾಹೆ ತನ್ನ ನಿರರ್ಥಕ ಬಾಳಿನ ಬಗ್ಗೆ ಹಲುಬಿದ; ಕೆಪ್ಲರ್ ಈ ಜಗತ್ತಿಗೆ ಗ್ರಹಗಳ ಚಲನವನ್ನು ಕುರಿತಾದ ಮೂರು ಸೂತ್ರಗಳನ್ನಿತ್ತ; ಅದರ ಪರಿಣಾಮ ಜನತೆ ಅವನಿಗಿತ್ತ ಕಿರುಕುಳ! ಬ್ರೂನೋ ಶಿಲುಬೆಯೇರಿದ; ಗೆಲಿಲಿಯೋ ತನ್ನ ವೃದ್ಧಾಪ್ಯದಲ್ಲಿ ಪಾಷಂಡ ವಿಚಾರಣಾಧಿಕಾರಿಯ ಬಂದಿಯಾಗಿದ್ದ; ಸೊಕ್ರಟೀಸ್ ಗರಳವನ್ನು ಗುಟುಕರಿಸಿದ. ಯೆಹೂದ್ಯರು ಸ್ಪಿನೋಸನನ್ನು ತಮ್ಮ ಮತದಿಂದ ಹೊರದೂಡಿದರು. ಅಂತೆಯೇ ಜರ್ಮನ್ ಜನಾಂಗ ಐನ್‌ಸ್ಟೈನನ್ನು

ಹೊರಹಾಕಿತು. ಸ್ಪೈಯಿನ್ ದೇಶದ ಕ್ಯಾಥೊಲಿಕ್ ದೊರೆಗಳಿಗೆ ಹೊಸ ಜಗತ್ತನ್ನು ತೋರಿಸಿಕೊಟ್ಟ ಕೊಲಂಬಸ್‌ನನ್ನು ಅಮೆರಿಕದಿಂದ ಕೈಬೇಡಿ ಹಾಕಿ ತರಲಾಯಿತು. ಕೊಲಂಬಸ್ ಬಡತನ ನಿರಾಶೆಗಳಿಂದ ತನ್ನ ಅಂತ್ಯ ದಿನಗಳನ್ನು ಕಳೆದ. ಹೀಗೆಯೇ ಇನ್ನೂ ಅನೇಕ ಮಹಾವ್ಯಕ್ತಿಗಳ ಜೀವನವನ್ನು ನೋಡಿದರೆ ಅವರಲ್ಲಿ ಬಹುಮಟ್ಟಿಗೆ ಬಾಳಿನಲ್ಲಿ ಸಿಹಿಗಿಂತ ಕಹಿಯೇ ಮೇಲಾಗಿರುವುದನ್ನು ನಾವು ಕಾಣಬಹುದು. ಆ ದೃಷ್ಟಿಯಿಂದ ಕೋಪರ್ನಿಕಸ್ ನಿಜಕ್ಕೂ ಭಾಗ್ಯಶಾಲಿಯಲ್ಲದೆ ಮತ್ತೇನು?

ಅದೆಂತೇ ಇರಲಿ, ಇಷ್ಟು ಮಾತ್ರ ಸತ್ಯ: ಕೋಪರ್ನಿಕಸ್ ಆಗಸದಲ್ಲಿನ ಅರುಣ ನಿದ್ದಂತೆ. ಅವನಾನಂತರ ಎಲ್ಲವೂ ಬೆಳಕು; ಅದಕ್ಕೆ ಮೊದಲು ಎಲ್ಲವೂ ಕತ್ತಲು ಇಲ್ಲವೇ ಮಬ್ಬು.

—ಸೂ. ಸುಬ್ರಹ್ಮಣ್ಯಂ.

# ವಸ್ತುಗಳ ದಹನ ( Combustion )

( ಚಾರಿತ್ರಿಕ ಸಮೀಕ್ಷಣ )

ವಸ್ತು ಎಂದರೇನು ? ಅದರ ಸ್ವರೂಪ, ಸ್ವಭಾವಗಳಾವುವು ? ಎಂಬ ವಿಷಯವಾಗಿ ಬಹಳ ಹಿಂದೆಯೂ ಚಿಂತನೆ ನಡೆದಿದೆ. ವೈಜ್ಞಾನಿಕ ಮನೋಭಾವದ ಮೂಲ ಪುರುಷರೆನಿಸಿರುವ ಗ್ರೀಕರು, ಇಂದ್ರಿಯಾನುಭವವಾಗುವ ಎಲ್ಲ ವಸ್ತುಗಳೂ ಕೆಲವು 'ಪ್ರಾಥಮಿಕ ಮೂಲ ವಸ್ತುಗಳಿಂದ' ರೂಪುಗೊಂಡಿವೆಯೆಂದು ಭಾವಿಸಿದ್ದರು. ಸಿಸಿಲಿಯ ತತ್ವಜ್ಞ ಎಂಪಿಡಾಕ್ಲಿಸ್ (ಕ್ರಿ. ಪೂ. 450) ಎಲ್ಲವೂ **ಅಪ್, ತೇಜಸ್, ವಾಯು** ಮತ್ತು **ಪೃಥ್ವಿ**–ಈ ನಾಲ್ಕು ಮೂಲಭೂತ ವಸ್ತುಗಳಿಂದಾಗಿವೆ, ವಿಶ್ವದಲ್ಲಿ ಯಾವ ವ್ಯತ್ಯಾಸ ಅಥವಾ ಪರಿವರ್ತನೆ ಆಗಲಿ, ಈ ವಸ್ತುಗಳು ನಶಿಸಲಾರವು ಎಂದು ನಂಬಿದ್ದನು. ಅಲ್ಲದೆ ಈ ಮೂಲಭೂತ ವಸ್ತುಗಳಿಗೆ ಶಾಖ, ಶೈತ್ಯ ನೀರಸ




ಮತ್ತು ತೇವ ಎಂಬ ನಾಲ್ಕು ಪ್ರಾಥಮಿಕ ಗುಣಗಳಿವೆ; ಈ ಗುಣಗಳು ಪರಸ್ಪರ

ಆಕರ್ಷಣೆ ಅಥವಾ ವಿಕರ್ಷಣೆಯಿಂದ ವಿವಿಧ ವಸ್ತುಗಳನ್ನುಂಟುಮಾಡುತ್ತವೆ ಎಂದು ಭಾವಿಸಿದ್ದನು.

ಈ ಭಾವನೆಗಳಿಗೆ ಬೆಂಕಿಯಿಂದ ವಸ್ತು ಹೇಗೆ ವಿರೂಪಗೊಳ್ಳುತ್ತದೆ ಎಂಬುದು ಕಾರಣವಾಗಿದ್ದಿತು. ಬೆಂಕಿಯಿಂದ ಹತ್ತಿಕೊಂಡು ದಹನವಾಗುವಾಗ ವಸ್ತು ಮೂಲ ಭೂತ ವಸ್ತುಗಳಾಗಿ ವಿಭಜನೆ ಹೊಂದಲೇಬೇಕು ಎಂದು ಆಗಿನ ಜನರ ನಂಬಿಕೆ. ಮರದ ತುಂಡನ್ನು ಉರಿಸಿದಾಗ ತೇಜಸ್ಸು ಹೊರಬಿದ್ದು, ಹೊಗೆಯು ವಾಯುವಿನಲ್ಲಿ ವಿಲೀನವಾಗಿ, ನೀರು (ಅಪ್) ಆವಿಯಂತೆ ಕಾಣಿಸಿಕೊಂಡು ಬೂದಿಯು ಭೂಮಿಯ (ಪೃಥ್ವಿ) ಮೇಲೆ ಉಳಿಯುತ್ತದೆಯಲ್ಲವೆ? ಇದೇ ರೀತಿಯಲ್ಲಿ ಈ ನಾಲ್ಕು ಅಂಶಗಳು ಇತರ ವಸ್ತುಗಳನ್ನು ದಹಿಸಿದಾಗ ಹೊರ ಬೀಳುತ್ತವೆ ಎಂದು ಅವರ ಅಭಿಪ್ರಾಯವಾಗಿದ್ದಿತು. ಎಂದಮೇಲೆ ಈ ಅಂಶಗಳು ಎಲ್ಲ ವಸ್ತುಗಳಲ್ಲೂ ಇರಬೇಕು.

ಮೊತ್ತಮೊದಲು ಮನುಷ್ಯನ ಜೀವನದಲ್ಲಿ ಬಳಕೆಗೆ ಬಂದ ಶಕ್ತಿ ಬೆಂಕಿ. ಅದು ದೈವದತ್ತವಾದದ್ದೆಂದು ಮನುಷ್ಯನಿಗೆ ಅದರಲ್ಲಿ ಪೂಜ್ಯ ಭಾವನೆ. ನಮ್ಮಲ್ಲಿ ಈಗಲೂ ಅಗ್ನಿಸಾಕ್ಷಾತ್ಕಾರವಾಗಿ ಎಲ್ಲ ವಿಧಿಗಳೂ ನಡೆಯುತ್ತಿವೆ. ದೇವತೆಗಳಿಗೂ ಮನುಷ್ಯರಿಗೂ ಸಂಸರ್ಗವು ಏರ್ಪಡುವುದು ಅಗ್ನಿಯಿಂದ ಎಂದು ನಮ್ಮ ಭಾವನೆ. ಈ ಮನೋಭಾವದಿಂದ ಬೆಂಕಿಯ ಸ್ವರೂಪವನ್ನು ತಿಳಿದುಕೊಳ್ಳಲು ಮನುಷ್ಯನು ಬಹಳ ಕಾಲದವರೆಗೂ ಪ್ರಯತ್ನಪಡಲಿಲ್ಲ. ವಸ್ತು ದಹನವಾಗುವಾಗ ಅಥವಾ ಹತ್ತಿಕೊಂಡು ಉರಿಯುವಾಗ ಏನಾಗುತ್ತದೆ? ಎಂಬ ಪ್ರಶ್ನೆ ಅವನನ್ನು ಎಂದೂ ಕಾಡಲಿಲ್ಲ. ಆದರೆ ಹದಿನೆಂಟನೆಯ ಶತಮಾನದಲ್ಲಿ, ತೇಜಸ್ಸು - ಬೆಂಕಿ - ಒಂದು ಮೂಲವಸ್ತು ಎಂಬ ಪ್ರಾಚೀನ ಭಾವನೆಯನ್ನನುಸರಿಸಿ ಜರ್ಮನಿ ದೇಶದ ಅರ್‌ನ್ಸ್ಟ ಸ್ಟಾಲ್ ಎಂಬುವನು ವಸ್ತುಗಳು ಹೇಗೆ ದಹನವಾಗುವುವೆಂದು ವಿವರಿಸಲು ಒಂದು ಸಿದ್ಧಾಂತವನ್ನು ನಿರೂಪಿಸಿದನು. ಇದಕ್ಕೆ 'ದಹನತತ್ವಸಿದ್ಧಾಂತ' (Phlogiston Theory) ಎಂದು ಹೆಸರು.

## ದಹನತತ್ವ ಸಿದ್ಧಾಂತ

ದಹನವಾಗುವ ಎಲ್ಲ ವಸ್ತುಗಳಲ್ಲಿಯೂ ಉರಿಯುವ ವಸ್ತು ವಿಶೇಷವೊಂದು ಇದೆ. ಇದನ್ನು 'ದಹನ ತತ್ವ' (Phlogiston) ಎಂದು ಕರೆಯಬಹುದು. ಈ ತತ್ವವು ನಮ್ಮ ಇಂದ್ರಿಯಗಳಿಗೆ ಅನುಭವವಾಗಲಾರದು. ಆದರೆ ಅದು ವಾಸಿಸುವ ವಸ್ತುವನ್ನು ತ್ಯಜಿಸಿದಾಗ ಶಾಖ ಮತ್ತು ಬೆಳಕಿನ ರೂಪದಲ್ಲಿ ಗೋಚರವಾಗುತ್ತದೆ. ಪ್ರತಿಯೊಂದು ವಸ್ತುವಿನಲ್ಲೂ ದಹನತತ್ವ ಮತ್ತು ಶೇಷ ಎಂಬೆರಡು ಭಾಗಗಳಿವೆ. ಶೇಷವು ಮಾತ್ರ ವಸ್ತು, ವಸ್ತುವಿಗೂ ಬೇರೆಯಾಗಿದ್ದು ದಹನ ತತ್ವವು ಎಲ್ಲದರಲ್ಲೂ

ಇರುತ್ತದೆ. ಆದರೂ ಈ ತತ್ವವು ಬೇರೆ ಬೇರೆ ವಸ್ತುಗಳಲ್ಲಿ ಬೇರೆ ಬೇರೆ ಪ್ರಮಾಣ ದಲ್ಲಿರುತ್ತದೆ. ಹೆಚ್ಚು ಪ್ರಮಾಣದಲ್ಲಿ ದಹನ ತತ್ವವನ್ನು ಒಳಗೊಂಡಿರುವ ವಸ್ತು ಬೇಗ ದಹನವಾಗುತ್ತದೆ; ಅಷ್ಟೇ ಅಲ್ಲದೆ, ಕಡಿಮೆ ಪ್ರಮಾಣದಲ್ಲಿರುವ ವಸ್ತುಗಳಿಗೆ ದಹನ ತತ್ವವನ್ನು ಬಿಟ್ಟುಕೊಡುತ್ತದೆ. ವಸ್ತು ದಹನವಾಗುತ್ತದೆ ಎಂದರೆ ದಹನ ತತ್ವವನ್ನು ಬಿಟ್ಟುಕೊಡುವುದು ಅಥವಾ ಹೊರಬೀಳಿಸುವುದು ಎಂದು ಅರ್ಥ. ಇವು ದಹನ ತತ್ವ ಸಿದ್ಧಾಂತದ ಮುಖ್ಯಾಂಶಗಳು.

ಈ ಸಿದ್ಧಾಂತದಿಂದ ಕೆಲವು ರಾಸಾಯನಿಕ ಕ್ರಿಯೆಗಳನ್ನು ಸ್ಟಾಲ್ ಒಳ್ಳೆಯ ವಾದಸರಣಿಯಿಂದ ವಿವರಿಸಿದನು. ಲೋಹಗಳನ್ನು ಚೆನ್ನಾಗಿ ಕಾಯಿಸಿ ಭಸ್ಮ ರೂಪಕ್ಕೆ ತರಬಹುದು. ಇದೂ ಒಂದು ರೀತಿಯ ದಹನಕ್ರಿಯೆ. ಈ ಭಸ್ಮೀಕರಣ ದಲ್ಲಿ ಲೋಹದಲ್ಲಿರುವ ದಹನ ತತ್ವವು ಹೊರಬೀಳುತ್ತದೆ. ಅಂದರೆ ಸ್ಟಾಲನ ಅಭಿಪ್ರಾಯದಂತೆ, ಲೋಹದಲ್ಲಿ ಭಸ್ಮ ಮತ್ತು ದಹನ ತತ್ವ ಎಂಬೆರಡು ಭಾಗ ಗಳಿವೆ, ಬೇರೆ ಬೇರೆ ಲೋಹಗಳಲ್ಲಿ ಬೇರೆ ಬೇರೆ ಭಸ್ಮಗಳಿರುತ್ತವೆ, ಆದರೆ ಎಲ್ಲ ಲೋಹಗಳಲ್ಲೂ ದಹನ ತತ್ವ ಇದ್ದೇ ಇದೆ, ಇದು ಹೊರಬಿದ್ದರೆ ಭಸ್ಮ ಉಂಟಾಗುತ್ತದೆ.

ಆದುದರಿಂದ,

ಲೋಹ (ಗಾಳಿಯಲ್ಲಿ ಕಾಯಿಸಿದಾಗ) ⟶ ಭಸ್ಮ + ದಹನತತ್ವ (ಗಾಳಿಗೆ)

ಬೇಗನೆ ಹತ್ತಿಕೊಂಡು ಉರಿಯುವ ಎಣ್ಣೆ, ಇದ್ದಿಲು ಮುಂತಾದುವುಗಳಲ್ಲಿ ದಹನ ತತ್ವವು ಅತ್ಯಧಿಕ ಪ್ರಮಾಣದಲ್ಲಿರಬೇಕೆಂದು ಸ್ಟಾಲನ ನಂಬಿಕೆ. ಲೋಹದ ಭಸ್ಮವನ್ನು (ದಹನ ತತ್ವ ರಹಿತ) ಇದ್ದಲಿನ ಪುಡಿಯೊಡನೆ ಕಾಯಿಸಿದಾಗ, ಇದ್ದಿಲಿ ನಲ್ಲಿ ಹೆಚ್ಚಾಗಿರುವ ಹೆಚ್ಚು ದಹನ ತತ್ವವು ಭಸ್ಮದೊಳಗೆ ಅಡಕವಾಗಿ, ಅದನ್ನು ಲೋಹವನ್ನಾಗಿ ರೂಪಿಸುತ್ತದೆ. ಕಬ್ಬಿಣದ ಭಸ್ಮದಿಂದ ಕಬ್ಬಿಣವನ್ನು ಹೀಗೆ ಪಡೆಯಬಹುದು:

ಭಸ್ಮ + ದಹನ ತತ್ವ (ಇದ್ದಿಲಿನಿಂದ) ⟶ ಲೋಹ

## ದಹನ ತತ್ವದ ಸ್ವರೂಪ

ಹೀಗೆ ಈ ಹೊಸ ಸಿದ್ಧಾಂತದಿಂದ ವಸ್ತುಗಳ ದಹನವನ್ನು ವಿವರಿಸಿದರೂ, ದಹನ ತತ್ವವನ್ನು ಬೇರ್ಪಡಿಸುವ ವಿಧಾನದ ಗೊಡವೆಗೆ ಯಾರೂ ಹೋಗಲಿಲ್ಲ. ಅವರಿಗೆ ಅದು ಸಿಕ್ಕುವುದಾದರೂ ಹೇಗೆ? ದಹನ ತತ್ವವು ಪರಿಶುದ್ಧವಾದ ಬೆಂಕಿಯ ಸ್ವರೂಪ ಎಂಬ ಭಾವನೆಯೂ ಕೆಲವರಿಗಿದ್ದಿತು. ಒಣಗಿದ ಸೌದೆಯನ್ನು ಉರಿಸಿ ದಾಗ ಬೆಂಕಿಯು ತೇಜಸ್ಸಿನಂತೆ ಹೊರಬಿದ್ದು ಸೌದೆಯು ಭಸ್ಮವಾಗುವುದಿಲ್ಲವೇ? ಎಂದು ತಮ್ಮ ಭಾವನೆಯನ್ನು ಪ್ರಚಾರಮಾಡಿದರು.

ಆಗಿನ ಕಾಲದಲ್ಲಿ ಜಲಜನಕ ಅನಿಲದ ವಿಚಾರ ಅಷ್ಟು ಹೆಚ್ಚಾಗಿ ತಿಳಿದಿರಲಿಲ್ಲ. ಈ ಅನಿಲವು ದಾಹ್ಯವಸ್ತು, ಅಂದರೆ ಹತ್ತಿಸಿದರೆ ಉರಿಯುತ್ತದೆ. ಸತುವಿನ ಚೂರುಗಳನ್ನು ಗಂಧಕಾಮ್ಲ (ದುರ್ಬಲ) ದಲ್ಲಿ ಹಾಕಿದರೆ, ರಾಸಾಯನಿಕ ಕ್ರಿಯೆಯಿಂದ ಜಲಜನಕದ ಅನಿಲವು ಹೊರಗೆ ಬರುತ್ತದೆ. ಸತುವಿನ ಸಲ್ಫೇಟ್ ಎಂಬ ದ್ರಾವಣವು ಉಳಿಯುತ್ತದೆ. ಹತ್ತಿಕೊಂಡು ಉರಿಯುವ ಜಲಜನಕವೇ ಪರಿಶುದ್ಧವಾದ ದಹನತತ್ತ್ವ ಎಂದು ಕೆಲವರು ನಿಶ್ಚಯಿಸಿದರು. ಅವರು ಈ ರಾಸಾಯನಿಕ ಕ್ರಿಯೆಯನ್ನು ಹೀಗೆ ವಿವರಿಸಿದರು: ಆಮ್ಲವು ಸತುಲೋಹವನ್ನು ದಹನತತ್ತ್ವ ಮತ್ತು ಸತುವಿನ ಭಸ್ಮ ಎಂಬೆರಡು ಭಾಗಗಳಾಗಿ ವಿಭಜಿಸುತ್ತದೆ. ಸತುವಿನ ಭಸ್ಮವು ಆಮ್ಲದೊಡನೆ ಹೊಂದಿಕೊಂಡು ಸತುವಿನ ಲವಣ (ಸಲ್ಫೇಟ್) ದ್ರಾವಣವಾಗುತ್ತದೆ. ಈ ವಿವರಣೆಯು ಸಮಂಜಸವಾಗಿದೆ ಎಂದು ಸಾಧಿಸಲು ಅವರು ಹೀಗೆ ವಾದಿಸಿದರು. ಸತುವನ್ನು ಚೆನ್ನಾಗಿ ಕಾಯಿಸಿದರೆ ಅದರಲ್ಲಿರುವ ದಹನತತ್ತ್ವವು ಹೊರಟು ಹೋಗುತ್ತದೆ. ಉಳಿದ ಸತುವಿನ ಭಸ್ಮವನ್ನು (ಅಂದರೆ ದಹನತತ್ತ್ವ ರಹಿತವಾಗಿರುವ ವಸ್ತು) ಆಮ್ಲದೊಳಗೆ ಹಾಕಿದರೆ ದಹನತತ್ತ್ವ ರೂಪದ ಜಲಜನಕವು ಮೇಲೇಳುವುದೇ ಇಲ್ಲ. ಈ ರಾಸಾಯನಿಕ ಕ್ರಿಯೆಯೂ ಸರಿ.*

ಸತು (ದಹನತತ್ತ್ವ+ಭಸ್ಮ)ಆಮ್ಲ ⟶ ದಹನತತ್ತ್ವ ↑ + (ಭಸ್ಮ+ಆಮ್ಲ)

ಸತುವಿನ ಭಸ್ಮ+ಆಮ್ಲ ⟶ ಸತುವಿನ ಲವಣ ದ್ರಾವಣ.

ಅಂತೂ ಹದಿನೆಂಟನೆಯ ಶತಮಾನದ ಮೊದಲಲ್ಲಿ ವಸ್ತುಗಳು ದಹನವಾಗುವ ಬಗೆ ಹಾಗೂ ಕೆಲವು ರಾಸಾಯನಿಕ ಕ್ರಿಯೆಗಳ ವಿವರಣೆಗಳಿಗೆ ದಹನತತ್ತ್ವ ಸಿದ್ಧಾಂತವು ತಳಹದಿಯಾಗಿದ್ದಿತು. ಆದರೆ ಕ್ರಮೇಣ ಈ ಸಿದ್ಧಾಂತದ ವ್ಯಾಖ್ಯಾನ, ನಿರೂಪಣೆ ಹಾಗೂ ವ್ಯಾಪ್ತಿಗಳು ವ್ಯತ್ಯಾಸವಾಗುತ್ತಾ ಬಂದುವು.

ವಸ್ತುವನ್ನು ದಹಿಸಿದಾಗ ಅದು ವಿಭಜನೆ ಹೊಂದಿ ಕ್ಷೀಣಿಸುತ್ತದೆ ಎಂಬ ಹಳೆಯ ಅಭಿಪ್ರಾಯದಲ್ಲಿ ಅರ್ನ್ಸ್ಟ ಸ್ಟಾಲ್‌ನಿಗೆ ನಂಬಿಕೆ ಇದ್ದಿತು. ಆದರೆ ಲೋಹ

---

*ದಹನತತ್ತ್ವವನ್ನು ಆಮ್ಲಜನಕ ಭಾಗ ಎಂದು ಭಾವಿಸೋಣ.

ಸತು —ಗಾಳಿಯಲ್ಲಿ→ ಸತುವಿನ ಆಕ್ಸೈಡ್ —ಗಂಧಕಾಮ್ಲ→ ಸತುವಿನ ಸಲ್ಫೇಟ್.

ಸತು+ಗಂಧಕಾಮ್ಲ ⟶ ಸತುವಿನ ಸಲ್ಫೇಟ್+ಜಲಜನಕ ↑

$$Z + H_2SO_4 \longrightarrow ZnSO_4 + H_2 \uparrow$$

ಗಾಳಿಯು 'ಎರಡು ಅಂಶ' ಗಳಿಂದ ಕೂಡಿದೆ. ಇವೆರಡಕ್ಕೂ ವ್ಯತ್ಯಾಸವಿದೆ. ಮೊದಲನೆಯದು 'ಬೆಂಕಿ ಗಾಳಿ'; ಇದು ದಹನ ತತ್ವವನ್ನು ಆಕರ್ಷಿಸುವುದಿಲ್ಲ. ಎರಡನೆಯದು 'ಮಲಿನ ಗಾಳಿ', ಇದು ದಹನ ತತ್ವವನ್ನು ಆಕರ್ಷಿಸುತ್ತದೆ ಎಂದು ಶೀಲೆ ಭಾವಿಸಿದನು.

ಈ 'ಬೆಂಕಿ ಗಾಳಿ' ಯನ್ನು ಶೀಲೆಯು ರಸಸಿಂಧೂರ (ಪಾದರಸದ ಭಸ್ಮ)* ವನ್ನು ಕಾಯಿಸಿ ಪಡೆದನು. ಈ ಕ್ರಿಯೆಯಲ್ಲಿ ರಸಸಿಂಧೂರವು ಪಾದರಸವಾಯಿತು. ಭಸ್ಮವು ಶಾಖದಲ್ಲಿನ ದಹನ ತತ್ವವನ್ನು ಹೀರಿಕೊಂಡು 'ಬೆಂಕಿ ಗಾಳಿ' ಯನ್ನು ಕೊಡುವುದೆಂದು ಭಾವಿಸಿದನು :

ಪಾದರಸದ ಭಸ್ಮ+ಶಾಖ (ದಹನತತ್ವ+ಬೆಂಕಿಗಾಳಿ) ———→ (ಭಸ್ಮ+ದಹನತತ್ವ)

ಪಾದರಸ
+ ಬೆಂಕಿಗಾಳಿ

'ಬೆಂಕಿ ಗಾಳಿ' ಯಲ್ಲಿ ಉರಿಯುತ್ತಿರುವ ಮೇಣದ ಬತ್ತಿಯು ಜ್ವಾಜ್ವಲ್ಯಮಾನದಿಂದ ಉರಿಯುತ್ತದೆ ಎಂದೂ ಶೀಲೆ ತೋರಿಸಿದನು. ಇಷ್ಟಾದರೂ ಈ 'ಬೆಂಕಿ ಗಾಳಿ' ಯ ಗುಣಲಕ್ಷಣಗಳನ್ನು ಸ್ಥಿರೀಕರಿಸಲು ಅವನು ಪ್ರಯತ್ನಪಡದೆ, ದಹನತತ್ವ ಸಿದ್ಧಾಂತ ದಲ್ಲೇ ನಂಬಿಕೆಯನ್ನಿಟ್ಟುಕೊಂಡಿದ್ದನು.

## ಪ್ರೀಸ್ಟ್ಲಿಯು ನಡಸಿದ ಪ್ರಯೋಗ

ಇಂಗ್ಲೆಂಡಿನ ಜೋಸೆಫ್ ಪ್ರೀಸ್ಟ್ಲಿಯು ಕೆಲವು ಅನಿಲಗಳ ಸ್ವಭಾವವನ್ನು ಪ್ರಯೋಗಗಳ ಮೂಲಕ ಪರಿಶೀಲಿಸಿದನು. ಒಂದು ಮಧ್ಯಾಹ್ನ, ಅವನು ಗಾಜಿನ ಪಾತ್ರೆಯೊಂದರಲ್ಲಿ ಸ್ವಲ್ಪ ರಸಸಿಂಧೂರವನ್ನು ಪಾದರಸದ ಮೇಲಿಟ್ಟು ಒಂದು ಅಡಿ ವ್ಯಾಸವುಳ್ಳ ದೊಡ್ಡ ಭೂತಗನ್ನಡಿಯ ಸಹಾಯದಿಂದ ಸೂರ್ಯನ ಕಿರಣಗಳನ್ನು ರಸಸಿಂಧೂರದ ಮೇಲೆ ಒಟ್ಟುಗೂಡಿಸಿ ಕಾಯಿಸಿದನು. ಆಗ ಒಂದು ಅನಿಲವು ಉತ್ಪತ್ತಿಯಾಯಿತು. ಅನಿಲವು ಸ್ವಲ್ಪ ಶೇಖರವಾದ ಮೇಲೆ ಪಾತ್ರೆಯನ್ನು ನೀರಿ ನೊಳಗೆ ಅದ್ದಿ ಅದರಲ್ಲಿರುವ ಪಾದರಸವನ್ನು ನಿಧಾನವಾಗಿ ಬಗ್ಗಿಸಿದನು. ಆದರೆ ಅನಿಲವು ನೀರಿನಲ್ಲಿ ವಿಲೀನವಾಗದೆ ಹಾಗೆಯೇ ಉಳಿಯಿತು. ಅಲ್ಲದೆ ಈ ಅನಿಲ ದಲ್ಲಿ ಉರಿಯುವ ಮೇಣದ ಬತ್ತಿಯು ಪ್ರಕಾಶಮಯವಾಗಿ ಉರಿಯುವುದನ್ನೂ

*ರಸಸಿಂಧೂರ= ಮರ್‌ಕ್ಯುರಿಕ್ ಆಕ್ಸೈಡ್ (HgO)

ಪ್ರೀಸ್ಟ್ಲಿಯು ಗಮನಿಸಿದನು. ಅದನ್ನು ಕಂಡು, ಅಚ್ಚರಿಗೊಂಡು, ಅವಾಕ್ಕಾದ ಪ್ರೀಸ್ಟ್ಲಿಯು ಅದರ ಕಾರಣವನ್ನು ಊಹಿಸಲಾಗದೆ ಹೋದನು.



ಈ ಕ್ರಿಯೆಯಲ್ಲಿ ರಸಸಿಂಧೂರವು ಪಾದರಸವಾಗಿ ಪರಿವರ್ತನೆಯಾಗಿದ್ದಿತು. ಆದುದರಿಂದ ರಸಸಿಂಧೂರ ಅಥವಾ ಪಾದರಸ ಭಸ್ಮವನ್ನು ಕಾಯಿಸಿದಾಗ ದಹನ ಕಾರಿಯಾದ ಅನಿಲವೊಂದು ಹೊರಬಿದ್ದು ಭಸ್ಮವು ಲೋಹವಾಗಿದೆ ಎಂದು ಅವನು ನಿರ್ಧರಿಸಿದನು. ದಹನತತ್ವಸಿದ್ಧಾಂತದಂತೆ, ಭಸ್ಮವು ಲೋಹವಾಗಬೇಕಾದರೆ ಅದು ದಹನತತ್ವವನ್ನು ಆಕರ್ಷಿಸಿ ಹೀರಿಕೊಂಡಿರಲೇಬೇಕು. ಆದರೆ ಪ್ರೀಸ್ಟ್ಲಿಯು ತನ್ನ ಉಪಕರಣದೊಳಗೆ ದಹನತತ್ವವು ಹೆಚ್ಚಾಗಿ ಇರುವ ಇದ್ದಿಲು ಅಥವಾ ಎಣ್ಣೆ ಯೊಡನೆ ಪಾದರಸ ಭಸ್ಮವನ್ನು ಮಿಶ್ರಮಾಡಿರಲಿಲ್ಲ. ಹೀಗಾಗಿ ಈ ದಹನ ತತ್ವವು ಎಲ್ಲಿಂದ ಬಂದಿರಬಹುದು? ಎಂಬ ಪ್ರಶ್ನೆಯು ಅವನನ್ನು ಕಾಡಿತು.

ವಸ್ತುಗಳು ದಹನವಾಗುವಾಗ ದಹನ ತತ್ವವು ಗಾಳಿಗೆ ಹೋಗುತ್ತದೆ ಯಲ್ಲವೇ? ಆದುದರಿಂದ ಸರ್ವವ್ಯಾಪಿಯಾದ ಗಾಳಿಯಲ್ಲಿ ದಹನತತ್ವವು ಇರಲೇ ಬೇಕು. ಪ್ರಯೋಗ ಮಾಡಿದ ಉಪಕರಣದಲ್ಲಿ ಗಾಳಿಯು ಇದ್ದುದರಿಂದ, ಅದರಲ್ಲಿ ಅಡಕವಾಗಿದ್ದ ದಹನತತ್ವವು ರಸಸಿಂಧೂರದೊಡನೆ ಮಿಲನವಾಗಿ ಪಾದರಸವು ಉಂಟಾಗಿರಬೇಕು ಎಂದು ಪ್ರೀಸ್ಟ್ಲಿ ಅಭಿಪ್ರಾಯ ಪಟ್ಟನು.

ರಸಸಿಂಧೂರ ( ಪಾದರಸ ಭಸ್ಮ ) $\xrightarrow[\text{ದಹನತತ್ವ}]{\text{ಗಾಳಿಯಲ್ಲಿರುವ}}$ ಪಾದರಸ + ದಹನತತ್ವ ರಹಿತಗಾಳಿ
( ಕಾಯಿಸಿದಾಗ )

ಹೀಗಾಗಿ ಪಾತ್ರೆಯಲ್ಲಿ ಉಳಿದ ಗಾಳಿಯು ದಹನತತ್ವ ರಹಿತವಾಗಿರಲೇಬೇಕು. ಆದುದರಿಂದ ರಸಸಿಂಧೂರವನ್ನು ಕಾಯಿಸಿದಾಗ ಉತ್ಪತ್ತಿಯಾದ ಅನಿಲಕ್ಕೆ "ದಹನತತ್ವರಹಿತ ಗಾಳಿ" ಎಂದು ನಾಮಕರಣ ಮಾಡಿದನು. ಈ ಅನಿಲಕ್ಕೆ ದಹನತತ್ವವನ್ನು ಹೀರಿಕೊಳ್ಳುವ ಶಕ್ತಿಯು ಗಾಳಿಗಿಂತಲೂ ಹೆಚ್ಚಾಗಿದೆ. ಆದುದ ರಿಂದ, ಉರಿಯುವ ವಸ್ತುಗಳು, ಅಂದರೆ ದಹನತತ್ವವನ್ನು ಬಿಟ್ಟು ಕೊಡುವ ವಸ್ತುಗಳು, ಇಂತಹ ಅನಿಲದಲ್ಲಿ ಪ್ರಕಾಶಮಯವಾಗಿ ಉರಿಯಲೇಬೇಕು. ಈ ವಿವರಣೆಯು ಪ್ರೀಸ್ಟ್ಲಿಯು ಪ್ರಾಯೋಗಿಕವಾಗಿ ಕಂಡಿದ್ದುದಕ್ಕೆ ಸಮಂಜಸವಾ ಗಿದ್ದಿತು. ಈ ಪ್ರಯೋಗವು ಸಧ್ಯದಲ್ಲಿ ಯಾವ ವಿಧವಾದ ಹೊಸಬೆಳಕನ್ನೂ ಬೀರ ಲಿಲ್ಲ. ಆದರೆ ಇದೇ ಪ್ರಯೋಗದಿಂದ ವಸ್ತುಗಳ ದಹನದ ವಿಚಾರವಾಗಿ ನೂತನ ಭಾವನೆಗಳನ್ನು ಫ್ರಾನ್ಸ್ ದೇಶದ ಲೆವಾಸಿಯೆ ಎಂಬ ವಿಜ್ಞಾನಿಯು ಹೊರಗೆಡ ಹಲು ಸಾಧ್ಯವಾಯಿತು.

ಇದುವರೆಗೂ ವಸ್ತುಗಳನ್ನು ತೂಕಮಾಡಿ ರಾಸಾಯನಿಕ ಕ್ರಿಯೆಗಳನ್ನು ಅಭ್ಯಾಸ ಮಾಡುವ ಪ್ರಯೋಗಗಳನ್ನು ಯಾರೂ ಕೈಗೊಂಡಿರಲಿಲ್ಲ. ತುಲನ ಯಂತ್ರದಲ್ಲಿ ವಸ್ತುಗಳನ್ನು ತೂಕಮಾಡಿ ಅವುಗಳ ಪರಿಮಾಣಗಳನ್ನು ಗೊತ್ತು ಮಾಡಿಕೊಳ್ಳುವ ಒಂದು ಅಪೂರ್ವ ಸ್ವಭಾವ ಲೇವಾಸಿಯೆಗೆ ಇದ್ದಿತು.

## ಲೆವಾಸಿಯೆ ಆಮ್ಲಜನಕವನ್ನು ಕಂಡುಹಿಡಿದ ಬಗೆ

ಕ್ರಿ. ಶ. 1776 ರಲ್ಲಿ ಪ್ರೀಸ್ಟ್ಲಿಯು ಕೈಗೊಂಡಿದ್ದ ಪ್ರಯೋಗಗಳನ್ನು ಲೆವಾಸಿಯೆ ಮುಂದುವರಿಸಿದನು. ಭಟ್ಟಿ ಇಳಿಸುವ ಪಾತ್ರೆಯೊಂದರಲ್ಲಿ 4 ಔನ್ಸ್ ತೂಕ ಪಾದರಸವನ್ನು ಕಾಯಿಸಿದನು. ಪಾತ್ರೆಯ ತುದಿಯು ಪಾದರಸವಿರುವ ತೊಟ್ಟಿಯೊಂದರೊಳಗೆ ಬೋರಲು ಬಿಟ್ಟಿದ್ದ ಗಂಟಾಪಾತ್ರೆಯೊಳಗೆ ಸೇರಿರುವಂತೆ ಉಪಕರಣಗಳನ್ನು ಜೋಡಿಸಿದನು. ಗಂಟಾಪಾತ್ರೆ ಹಾಗೂ ಭಟ್ಟಿ ಇಳಿಸುವ ಪಾತ್ರೆ ಯಲ್ಲಿ ಒಟ್ಟು 50 ಘನ ಅಂಗುಲಗಳಷ್ಟು ಗಾಳಿ ಇದ್ದಿತು. ಸ್ವಲ್ಪ ಹೊತ್ತಾದ ಮೇಲೆ, ಕೆಂಪು ಕಣಗಳ ಕರೆಯು ಪಾದರಸದ ಮೇಲೆ ಭಟ್ಟಿ ಇಳಿಸುವ ಪಾತ್ರೆಯಲ್ಲಿ ಗೋಚರವಾಯಿತು. ಕಾಲಕ್ರಮೇಣ ಅದರ ಪರಿಮಾಣವು ಹೆಚ್ಚಾಗುತ್ತಾ ಬಂದಿತು. ಹನ್ನೆರಡು ದಿನಗಳಾದ ಮೇಲೆ ಅದರ ಬೆಳವಣಿಗೆಯು ಕಾಣಬರಲಿಲ್ಲ. ಈ ಕಾಲದಲ್ಲಿ ಗಂಟಾಪಾತ್ರೆಯಲ್ಲಿ ಪಾದರಸದ ಮಟ್ಟವು ಏರಿದ್ದಿತು ಮತ್ತು 42 ಘನ

ಅಂಗುಲದಷ್ಟು ಗಾಳಿಯು ಉಳಿದಿದ್ದಿತು. ಅಂದರೆ 8 ಘನ ಅಂಗುಲ ಗಾಳಿಯು ಉಪಯೋಗವಾಗಿದ್ದಿತು. ಉಳಿದ ಗಾಳಿಯನ್ನು ಲೇವಾಸಿಯೆ 'ದುರ್ವಾಯು' ಎಂದು ಮೊದಲು ಕರೆದು, ಅನಂತರ 'ಅಜೋಟ್' ಎಂದು ಕರೆದನು (ಕ್ರಿ ಶ. 1790 ರಲ್ಲಿ ಫಾಪ್ಟಾಲ್ ಎಂಬುವನು ಇದಕ್ಕೆ 'ಸಾರಜನಕ' ಎಂದು ಹೆಸರಿಟ್ಟನು).



ಈ ಪ್ರಯೋಗದಿಂದ ಉತ್ಪತ್ತಿಯೂದ ಪಾದರಸ–ಕೆಂಪು ಭಸ್ಮದ ಕರೆಯನ್ನು ಲೇವಾಸಿಯೆ ತೂಕ ಮಾಡಿದನು. ಅದರ ತೂಕವು 45 ಗ್ರೇನಿನಷ್ಟು ಇದ್ದಿತು. ಈ ಭಸ್ಮವನ್ನು ಮತ್ತೊಂದು ಪಾತ್ರೆಯೊಳಗೆ ಇಟ್ಟು ಕಾಯಿಸಿದಾಗ 8 ಘನ ಅಂಗುಲ ದಷ್ಟು ಗಾಳಿಯು ಹೊರಬಿದ್ದಿತು ಮತ್ತು ಪಾದರಸವು ಉತ್ಪತ್ತಿಯಾಯಿತು. ಲೇವಾಸಿಯೆ ಈ ಗಾಳಿಗೆ 'ಪಟುಗಾಳಿ' ಎಂದು ಹೆಸರಿಟ್ಟನು. 'ಪಟುಗಾಳಿ' ಯನ್ನು 'ಅಜೋಟ್' ನೊಡನೆ ಸೇರಿಸಿದರೆ ಗಾಳಿಯಂತಾಗುವುದು ಎಂದೂ ಅವನು ತಿಳಿಸಿದನು. ಆದಕಾರಣ, ಗಾಳಿಯು ಇವೆರಡರ ಮಿಶ್ರಣ ಎಂದು ಅವನು ನಿರ್ಧರಿಸಿದನು.

ಪಟು ಅಥವಾ ಶುದ್ಧ ಗಾಳಿಯಲ್ಲಿ ವಸ್ತುಗಳು ಹೇಗೆ ದಹನವಾಗುತ್ತವೆ ಎಂದು ತಿಳಿಯುವ ಕುತೂಹಲ ಅವನ ಮನಸ್ಸನ್ನು ಕೆರಳಿಸಿತು. ಹಲವಾರು ಪ್ರಯೋಗಗಳನ್ನು ನಡಸಿ ಲೇವಾಸಿಯೆ ಹೀಗೆ ನಿರ್ಧರಿಸಿದನು :

(1) ವಸ್ತುಗಳು ಈ ಶುದ್ಧ ಗಾಳಿಯಲ್ಲಿಯೇ ಉರಿಯುತ್ತವೆ.

(2) ಅಲೋಹ ವಸ್ತುಗಳಾದ ಗಂಧಕ, ರಂಜಕ, ಇಂಗಾಲ ಮುಂತಾದವು ಇದರಲ್ಲಿ ದಹನವಾಗಿ ಆಮ್ಲಗಳನ್ನು ಕೊಡುತ್ತವೆ. ಆದುದರಿಂದ ಈ ಅನಿಲವನ್ನು '**ಆಮ್ಲಜನಕ**' ಎಂದು ಕರೆಯಬಹುದು.

(3) ಲೋಹಗಳು ಈ ಗಾಳಿಯನ್ನು ಹೀರಿಕೊಂಡು ಭಸ್ಮಗಳನ್ನು ಉತ್ಪತ್ತಿ ಮಾಡುತ್ತವೆ.

(4) ದಹನಕ್ರಿಯೆಯಲ್ಲಿ ಯಾವ ದಹನತತ್ವವೂ ಹೊರಬೀಳುವುದಿಲ್ಲ. ವಸ್ತುಗಳು ಆಮ್ಲಜನಕದೊಡನೆ ರಾಸಾಯನಿಕವಾಗಿ ಸಂಯೋಗವಾಗುವುದೇ ದಹನ.

ಲೆವಾಸಿಯೆ ಈ ತತ್ವಗಳನ್ನು ದಹನತತ್ವ ಸಿದ್ಧಾಂತಕ್ಕೆ ಪ್ರತಿಯಾಗಿ ಮೊದಲು ಸೂಚಿಸಿದನು. ಕೊನೆಗೆ ಇನ್ನೂ ಕೆಲವು ಪ್ರಯೋಗಗಳನ್ನು ಕೈಗೊಂಡು, ಕ್ರಿ. ಶ. ೧೭೮೩ ರಲ್ಲಿ, ದಹನತತ್ವ ಸಿದ್ಧಾಂತವು ನೈಜವಲ್ಲವೆಂದೂ ಕೇವಲ ಕಾಲ್ಪನಿಕವಾದುದೆಂದೂ ಅವನು ಪ್ರತಿಪಾದಿಸಿದನು.

ಈಗ ವಸ್ತುಗಳ ದಹನ ವಿಷಯವಾಗಿ ಖಚಿತ ಅಭಿಪ್ರಾಯಗಳಿವೆ. ಈ ರಾಸಾಯನಿಕ ಕ್ರಿಯೆಯಲ್ಲಿ ಆಮ್ಲಜನಕವು ಉಪಯೋಗವಾಗಿ ಶಕ್ತಿಯು ಹೊರಬೀಳುತ್ತದೆ. ಹೀಗೆ ಹೊರಬಿದ್ದ ಶಕ್ತಿಯು ನಾನಾರೂಪಗಳಲ್ಲಿರಬಹುದು. ಇದ್ದಿಲು ಗಾಳಿಯಲ್ಲಿ ಉರಿಯುವಾಗ ಅದರಲ್ಲಿನ ಇಂಗಾಲ ಎಂಬ ಮೂಲವಸ್ತು ಗಾಳಿಯಲ್ಲಿರುವ ಆಮ್ಲಜನಕದೊಂದಿಗೆ ಸಂಯೋಗ ಹೊಂದಿ ಇಂಗಾಲದ ಡೈ ಆಕ್ಸೈಡ್ ಅನಿಲವನ್ನು ಉತ್ಪತ್ತಿಮಾಡಿ ಶಾಖ ಮತ್ತು ಬೆಳಕನ್ನು ಹೊರಸೂಸುತ್ತದೆ.

ಇಂಗಾಲ+ಆಮ್ಲಜನಕ ⟶ ಇಂಗಾಲದ ಡೈ ಆಕ್ಸೈಡ್ +ಶಕ್ತಿ
(ಇದ್ದಿಲು) (ಗಾಳಿ)

ಇದೇ ರೀತಿಯಾಗಿ ತವರ ಅಥವಾ ಪಾದರಸ ಲೋಹವನ್ನು ಗಾಳಿಯಲ್ಲಿ ಅತಿ ಶಾಖದಿಂದ ಕಾಯಿಸಿದರೆ, ಅದು ಕರಗಿ, ಅದರ ಮೇಲ್ಮೈಯಲ್ಲಿ ಒಂದು ಬಗೆಯ ಭಸ್ಮವು ಶೇಖರವಾಗುತ್ತದೆ. ಲೋಹವು ಆಮ್ಲಜನಕದೊಂದಿಗೆ ಸಂಯೋಗವಾಗಿ ಲೋಹದ ಆಕ್ಸೈಡಿನಂತೆ ಭಸ್ಮರೂಪದಲ್ಲಿರುತ್ತದೆ. ಇದೂ ಒಂದು ದಹನಕ್ರಿಯೆ.

ಲೋಹ + ಆಮ್ಲಜನಕ(ಗಾಳಿ) ⟶ ಲೋಹದ ಆಕ್ಸೈಡ್.

ಹಾಗೆಯೇ, ಪೆಟ್ರೋಲ್ ಮತ್ತು ಸೀಮೆಯಣ್ಣೆಗಳು ಗಾಳಿಯೊಡನೆ ಮಿಶ್ರವಾಗಿ (ಎಂದರೆ ಆಮ್ಲಜನಕದೊಡನೆ) ಉರಿದಾಗ ಅವುಗಳಲ್ಲಿರುವ ಇಂಗಾಲದ ಭಾಗವು ಡೈಆಕ್ಸೈಡ್ ಆಗಿಯೂ ಜಲಜನಕದ ಭಾಗವು ನೀರಿನ ಆವಿಯಾಗಿಯೂ ಮಾರ್ಪಟ್ಟು ಶಕ್ತಿಯು ಹೊರಬೀಳುತ್ತದೆ. ಗಂಧಕ, ತುಪಾಕಿ ಮತ್ತು ಬೆಂಕಿಕಡ್ಡಿ ಮುಂತಾದವು ಉರಿಯುವಾಗ ಅಥವಾ ದಹನವಾಗುವಾಗ ಆಮ್ಲಜನಕವು ಅವು

ಗಳೊಡನೆ ರಾಸಾಯನಿಕ ಕ್ರಿಯೆಯಲ್ಲಿ ಭಾಗವಹಿಸುತ್ತದೆ ಎಂದು ತಿಳಿಯಬೇಕು.

ನಮ್ಮ ದೇಹವು ಒಂದು ಯಂತ್ರದಂತಿದೆ ಎಂದೂ ನಾವು ಸೇವಿಸುವ ಆಹಾರವು 'ಉರಿದು' ಅಥವಾ ದಗ್ಧವಾಗಿ ನಮಗೆ ಬೇಕಾದ ಶಕ್ತಿಯನ್ನು ಕೊಡುತ್ತದೆ ಎಂದೂ ಅನೇಕ ವೇಳೆ ಮಾತನಾಡಿಕೊಳ್ಳುತ್ತೇವೆ. ನಾವು ಸೇವಿಸುವ ಶರ್ಕರ ಪಿಷ್ಟಾದಿಗಳು ಜೀರ್ಣಾಂಗಗಳಲ್ಲಿನ ರಸವಿಶೇಷಗಳ ಪ್ರಭಾವದಿಂದ 'ಗ್ಲೂಕೋಸ್' ಸಕ್ಕರೆಯಾಗಿ ಮಾರ್ಪಡುತ್ತದೆ. ಗ್ಲೂಕೋಸ್ ರಕ್ತಗತವಾಗಿ, ಜೀವಕಣಗಳನ್ನು ಸೇರಿ, ನಾವು ಉಚ್ಛ್ವಾಸಿಸುವ ಆಮ್ಲಜನಕದೊಡನೆ ಕ್ರಿಯೆಹೊಂದಿ ದಗ್ಧವಾಗುತ್ತದೆ; ಅಂತೆಯೇ ಶಕ್ತಿಯನ್ನು ಹೊರಬೀಳಿಸುತ್ತದೆ.

ಗ್ಲೂಕೋಸ್ + ಆಮ್ಲಜನಕ (ಉಚ್ಛ್ವಾಸಿಸುವ ಗಾಳಿ) ——→ ಇಂಗಾಲದ ಡೈಆಕ್ಸೈಡ್ (ನಿಶ್ವಾಸದ ಗಾಳಿ) + ನೀರು + ಶಕ್ತಿ

ಇದೇ ನಮ್ಮ ಕಾರ್ಯ ಚಟುವಟಿಕೆಗಳ ಪ್ರಚೋದಕ ಶಕ್ತಿ. ಈ ಕ್ರಿಯೆಯೂ ದಹನ ಕ್ರಿಯೆ.

ಈಗ ವಸ್ತುಗಳ ದಹನದ ವಿಷಯವಾಗಿ ನಿರ್ದಿಷ್ಟವಾಗಿರುವ ವೈಜ್ಞಾನಿಕ ಅಭಿಪ್ರಾಯಗಳಿಂದ ಬೆಂಕಿಯ ಗುಣ ಹಾಗೂ ಪರಿಮಾಣಗಳನ್ನು ತಿಳಿಯಲು ಸಾಧ್ಯವಾಗಿದೆ. ಇವೆಲ್ಲಕ್ಕೂ ಆಮ್ಲಜನಕಕ್ಕೆ ಸಂಬಂಧಿಸಿದ ಜ್ಞಾನವೇ ಮೂಲ.

ವಿಜ್ಞಾನದ ಚರಿತ್ರೆಯಲ್ಲಿ ವಸ್ತುಗಳ ದಹನ ಸಮಸ್ಯೆಯನ್ನು ಎರಡು ದೃಷ್ಟಿಗಳಿಂದ ವಿಚಾರಮಾಡಬೇಕು. ಒಂದು, ಹದಿನೇಳು-ಹದಿನೆಂಟನೆಯ ಶತಮಾನಗಳಲ್ಲಿ ಗೆಲಿಲಿಯೊ, ಡೆಕಾರ್ಟೆ, ಸ್ಪಿನೋಜ, ನ್ಯೂಟನ್ ಮುಂತಾದ ಮಹನೀಯರು ಹೊಸ ದೃಷ್ಟಿಯಿಂದ ವಿಚಾರಪರರಾಗಿದ್ದರೂ, ಕೈಗಾರಿಕಾ ಕ್ರಾಂತಿಯಿಂದ ಇಂಗ್ಲೆಂಡ್ ದೇಶವು ನೂತನ ಮನೋದಾರ್ಢ್ಯವನ್ನು ಪ್ರತಿಬಿಂಬಿಸುತ್ತಿದ್ದರೂ, ಪ್ರಕೃತಿ ಜ್ಞಾನದಿಂದ ದೇವ ಸಂಬಂಧ ಭಾವನೆಗಳು ಮಾಯವಾಗುತ್ತಿದ್ದರೂ, ವಸ್ತು ಉರಿಯುವಾಗ ಅಥವಾ ದಹನವಾಗುವಾಗ ಏನಾಗುತ್ತದೆ ಎಂಬುದನ್ನು ವೈಜ್ಞಾನಿಕವಾಗಿ ತಿಳಿದುಕೊಳ್ಳಲು ಯಾರೂ ಪ್ರಯತ್ನಿಸಲಿಲ್ಲ. ಈ ಭೂಮಿಯ ಮೇಲೆ ವಾಸಿಸುವ ಸಮಸ್ತ ಜೀವಿಗಳಿಗೂ ಆಧಾರವಾಗಿರುವ ಅನಿಲ-ಆಮ್ಲಜನಕದ ಇರುವಿಕೆಯೇ ಆಗ ಗೊತ್ತಿರಲಿಲ್ಲ.

ಎರಡನೆಯದು, ಪ್ರಾಚೀನ ಕಲ್ಪನೆಗನುಗುಣವಾಗಿದ್ದ ದಹನ ತತ್ವ ಸಿದ್ಧಾಂತದಲ್ಲಿ ಅಚಲ ನಂಬಿಕೆಯನ್ನು ಇಟ್ಟು ಕೆಲವರು ವಿಜ್ಞಾನಿಗಳು ತಮ್ಮ ಪ್ರಯೋಗ ಫಲಿತಾಂಶಗಳನ್ನು ಅದಕ್ಕೆ ಅನ್ವಯಿಸುವಂತೆ ವಿವರಿಸುತ್ತಿದ್ದುದು. ರಸಸಿಂಧೂರವನ್ನು ಕಾಯಿಸಿ, ಪ್ರೀಸ್ಟ್ಲಿಯು ಆಮ್ಲಜನಕವನ್ನು ಪಡೆದಿದ್ದರೂ ಈ ಅನಿಲವು

ದಹನಾನುಕೂಲಿಯಾಗಿ ವ್ಯಕ್ತಗೊಂಡಿದ್ದರೂ ದಹನ ತತ್ವ ಸಿದ್ಧಾಂತರೀತ್ಯ ಈ ಅನಿಲವು 'ದಹನ ತತ್ವ ರಹಿತ ಗಾಳಿ' ಯಾಯಿತು. ಪ್ರೀಸ್ಟ್ಲಿ ಅಸಾಧಾರಣ ಮೇಧಾವಿ; ಹೊಸತನ್ನು ಕಾಣಬೇಕೆಂಬ ಪ್ರಬಲಾಕಾಂಕ್ಷೆ ಅವನಿಗಿದ್ದಿತು. ಆದರೂ ಯಾವುದೊ ಒಂದು ಕಲ್ಪನೆಯಲ್ಲಿ ನಂಬಿಕೆಯನ್ನಿಟ್ಟು ಮುಚ್ಚಿದ ಮನಸ್ಸಿನಿಂದ ಪ್ರಯೋಗಗಳನ್ನು ನಡಸಿದುದರಿಂದ ಅವನಿಗೆ ನೂತನ ಅನುಭವ ಅಸಾಧ್ಯವಾಯಿತು. ವಿಜ್ಞಾನದ ಚರಿತ್ರೆಯಲ್ಲಿ ಇಂತಹ ನಿದರ್ಶನಗಳು ಅನೇಕವಾಗಿವೆ.

—ಬಿ. ವಿ. ಸುಬ್ಬರಾಯಪ್ಪ

# ಪ್ರಕೃತಿಯ ಇಟ್ಟಿಗೆಗಳು

ಪ್ರಕೃತಿಯಲ್ಲಿರುವ ವಸ್ತುಗಳನ್ನೆಲ್ಲಾ ಪ್ರಾಣಿವರ್ಗ, ಸಸ್ಯವರ್ಗ ಮತ್ತು ಖನಿಜ ವರ್ಗಗಳೆಂದು ಮೂರು ವರ್ಗಗಳಾಗಿ ವಿಂಗಡಿಸಬಹುದು. ಪ್ರಾಣಿಜನ್ಯವಾದ ಒಂದು ವಸ್ತುವು ಸಜೀವವಾಗಿರಲಿ, ನಿರ್ಜೀವವಾಗಿರಲಿ ಅದನ್ನು ಪ್ರಾಣಿವರ್ಗಕ್ಕೆ ಸೇರಿದ ವಸ್ತುವೆಂದೇ ಪರಿಗಣಿಸಲಾಗುವುದು. ಒಂದು ಎಲುಬಿನ ಚೂರು ನಿರ್ಜೀವ ವಸ್ತುವಾಗಿರಬಹುದು. ಆದರೆ ಯಾವುದೊ ಒಂದು ಪ್ರಾಣಿಯ ಅಂಗಾಂಗಗಳಲ್ಲಿ ಜೀವನಾಡಿಯು ಮಿಡಿಯುತ್ತಿದ್ದಾಗ ಅದರ ಭಾಗವಾಗಿತ್ತು ಆ ಎಲುಬು. ಹಾಗೆಯೇ ಒಂದು ಮರ ಸತ್ತು ಒಣಗಿ ಹೋಗಿರಬಹುದು. ಆದರೂ ಅದು ಸಸ್ಯವರ್ಗಕ್ಕೆ ಸೇರಿದ ವಸ್ತು. ಆ ಮರದಲ್ಲಿ ಜೀವರಸ ತುಂಬಿ ಹರಿಯುತ್ತಿದ್ದಾಗ ಅದು ರಚಿತವಾದದ್ದು. ಜೀವ ಜನ್ಯವಾದ ವಸ್ತುಗಳ ರಚನೆಗೆ ಜೀವಶಕ್ತಿಯು ಆವಶ್ಯಕವೆಂದೂ, ಅವನ್ನು ಪ್ರಯೋಗಶಾಲೆಯಲ್ಲಿ ತಯಾರಿಸಲು ಸಾಧ್ಯವಿಲ್ಲವೆಂದೂ ರಸಾಯನ ಶಾಸ್ತ್ರಜ್ಞರು ಬಹುಕಾಲ ನಂಬಿದ್ದರು. ಆದ್ದರಿಂದ ಜೀವಜನ್ಯವಾದ ವಸ್ತುಗಳೆಲ್ಲವನ್ನೂ ಒಂದು ವರ್ಗಮಾಡಿ, ಅವುಗಳನ್ನು 'ಸಾವಯವ' ವಸ್ತುಗಳೆಂದೂ, ಉಳಿದ ವಸ್ತುಗಳೆಲ್ಲವನ್ನೂ ಒಂದು ವರ್ಗಮಾಡಿ ಅವುಗಳನ್ನು 'ನಿರವಯವ' ವಸ್ತುಗಳೆಂದೂ ಕರೆಯುತ್ತಿದ್ದರು. ಆದರೆ ರಸಾಯನ ಶಾಸ್ತ್ರಜ್ಞರ ಸಂತತವಾದ ದುಡಿಮೆಯ ಫಲವಾಗಿ ಹಿಂದೆ ಸಾವಯವ ವಸ್ತುಗಳೆಂದು ಪರಿಗಣಿತವಾಗಿದ್ದ ಅನೇಕ ವಸ್ತುಗಳನ್ನು ಈಗ ಪ್ರಯೋಗಶಾಲೆಯಲ್ಲಿ ತಯಾರಿಸುವುದು ಸಾಧ್ಯವಾಗಿದೆ. ಇಷ್ಟಾದರೂ ರಸಾಯನ ಶಾಸ್ತ್ರಜ್ಞರ ಪ್ರಯತ್ನವು ಒಂದು ವಿಚಾರದಲ್ಲಿ ಇದುವರೆಗೂ ಸಂಪೂರ್ಣ ವಿಫಲವಾಗಿದೆ. ಹತ್ತಾರು ಸಾವಿರ ಜೀವಜನ್ಯ ವಸ್ತುವನ್ನು ಪ್ರಯೋಗಶಾಲೆಯಲ್ಲಿ ಸಂಶ್ಲೇಷಿಸಿದ್ದರೂ ಸಹ ಒಂದೇ ಒಂದು ಕೋಶವೇ ಶರೀರವಾಗಿರುವ ಅತಿ ಸೂಕ್ಷ್ಮವಾದ ಒಂದು ಜೀವಿಯನ್ನೂ ಸಹ ನಿರ್ಮಿಸುವ ವಿಷಯದಲ್ಲಿ ಪೂರ್ಣ ಅಪಜಯ ಹೊಂದಿರುತ್ತಾರೆ. ಜೀವಜನ್ಯವಾದ ಅನೇಕ ಜಟಿಲ ಸಂಯುಕ್ತಗಳನ್ನು ಪ್ರಯೋಗಶಾಲೆಯಲ್ಲಿ ಸಂಶ್ಲೇಷಿಸಬಹುದು. ಆದರೆ ಅಜೀವ ಜನ್ಯವಸ್ತುವಿಗೆ ಜೀವಕೊಡಲು ಆಗುವುದಿಲ್ಲ. ಜೀವದ ಸ್ವರೂಪ ಏನೆಂಬುದು ಇದುವರೆಗೂ ಮಾನವನ ಜ್ಞಾನದ ಮೇರೆಯನ್ನು ಮೀರಿರುವುದಾಗಿದೆ. ಇದರ ಉತ್ಪತ್ತಿಸ್ಥಾನ ಪ್ರಾಯಶಃ ಮಾನವಾತೀತವಾದುದಿರಬಹುದು.

ಈ ನಮ್ಮ ಪ್ರಪಂಚದ ರಚನೆಯಲ್ಲಿ ಎಷ್ಟೊಂದು ಬಗೆಯ ವಸ್ತುಗಳು- ಸಾವಯವ ವಸ್ತುಗಳು ಮತ್ತು ನಿರವಯವ ವಸ್ತುಗಳು-ಉಪಯೋಗಿಸಲ್ಪಟ್ಟಿವೆ ಎಂಬುದು

ಸ್ವಲ್ಪ ಯೋಚಿಸಿದರೆ ಸಾಕು, ಗೊತ್ತಾಗುವುದು. ಭೂಮಿಯ ಮೇಲೆ ಸಿಗುವ ಮತ್ತು ಬೆಳೆಯುವ ವಸ್ತುಗಳು, ಭೂಗರ್ಭದಿಂದ ಅಗೆದು ತೆಗೆಯುವ ಖನಿಜಗಳು, ಕಲ್ಲಿದ್ದಲು, ಪೆಟ್ರೋಲಿಯಂ ಮುಂತಾದ ವಸ್ತುಗಳು ಮತ್ತು ಭೂಮಿಯ ಈ ಕೊನೆಯಿಂದ ಆ ಕೊನೆಯವರೆಗೆ ಮಾನವನು ತಯಾರಿಸುತ್ತಿರುವ ವಸ್ತುಗಳು ಇವೆಲ್ಲವೂ ಸೇರಿ ಈ ಪ್ರಪಂಚದ ವಸ್ತುಗಳ ವೈವಿಧ್ಯವನ್ನು ಅಗಾಧವನ್ನಾಗಿ ಮಾಡಿರುವುವು. ಈ ಅಸಂಖ್ಯಾತ ವಸ್ತುಗಳ ಸ್ವರೂಪವನ್ನು ತಿಳಿಯುವುದು ಎಷ್ಟು ಜಟಿಲವೆಂದು ಸ್ವಲ್ಪ ಊಹಿಸಿದರೆ ಗೊತ್ತಾಗುವುದು. ಆದರೆ ರಸಾಯನ ಶಾಸ್ತ್ರಜ್ಞರ ನೂರಾರು ವರ್ಷಗಳ ನಿರಂತರದ ದುಡಿಮೆಯ ಫಲವಾಗಿ ಈ ಸಮಸ್ಯೆಯ ಜಟಿಲತೆಯು ಕಡಿಮೆಯಾಗಿ ಇವುಗಳ ವ್ಯಾಸಂಗವು ತಕ್ಕಮಟ್ಟಿಗೆ ಸರಳವಾಗಿ ಪರಿಣಮಿಸಿದೆ. ಪ್ರಪಂಚದಲ್ಲಿ ನಮಗೆ ಕಾಣುವ ಲಕ್ಷಾಂತರ ವಸ್ತುಗಳಲ್ಲಿ ಬಹುಭಾಗ ವಸ್ತುಗಳು ಸರಳ ವಸ್ತುಗಳಲ್ಲ. ಅವುಗಳನ್ನು ಶಾಖ, ವಿದ್ಯುಚ್ಛಕ್ತಿ, ರಸಾಯನಿಕ ವಸ್ತುಗಳು ಮುಂತಾದುವುಗಳ ಸಹಾಯದಿಂದ ವಿಭಜಿಸಿ, ಇವುಗಳಿಂದ ಹೆಚ್ಚುಸರಳವಾದ ಎರಡು ಅಥವಾ ಇನ್ನೂ ಹೆಚ್ಚು ವಸ್ತುಗಳನ್ನು ಪಡೆಯಬಹುದು. ಹೀಗೆ ಮಾಡುತ್ತಾ ಪ್ರಪಂಚದ ವಸ್ತುಗಳೆಲ್ಲವನ್ನೂ ವಿಭಜಿಸಿದರೆ ಸುಮಾರು ನೂರು ವಸ್ತುಗಳು ಅವುಗಳಿಂದ ಉಂಟಾಗುವುವು. ಈ ನೂರು ವಸ್ತುಗಳನ್ನು ಎಷ್ಟೇ ಪ್ರಯತ್ನಪಟ್ಟರೂ ವಿಭಜಿಸಿ ಇವುಗಳಿಂದ ಸರಳತರವಾದ ಎರಡು ವಸ್ತುಗಳನ್ನು ಹೊಂದಲು ಸಾಧ್ಯವಿಲ್ಲ. ಆದ್ದರಿಂದ ಈ ನೂರು ವಸ್ತುಗಳನ್ನು ರಸಾಯನ ಶಾಸ್ತ್ರಜ್ಞರು ಮೂಲ ವಸ್ತುಗಳೆಂದು ಕರೆದಿದ್ದಾರೆ. ಪ್ರತಿಯೊಂದು ಮೂಲ ವಸ್ತುವಿನಲ್ಲಿಯೂ ಒಂದೇ ಒಂದು ವಸ್ತುವಿದೆ. ಇದರಿಂದ ಎರಡು ಬೇರೆ ಬೇರೆ ವಸ್ತುಗಳನ್ನು ಪಡೆಯಲು ಸಾಧ್ಯವಿಲ್ಲ. ಈ ಪ್ರಪಂಚದ ವಸ್ತುಗಳೆಲ್ಲವೂ ಈ ನೂರು ಮೂಲ ವಸ್ತುಗಳಿಂದ ರಚಿತವಾಗಿವೆ.

ಈ ಮೂಲ ವಸ್ತುಗಳೇ ಪ್ರಕೃತಿಯ ಇಟ್ಟಿಗೆಗಳು. ಈ ಇಟ್ಟಿಗೆಗಳಿಂದಲೇ ಪ್ರಕೃತಿಯು ಪ್ರಪಂಚದಲ್ಲಿರುವ ಸಮಸ್ತ ವಸ್ತುಗಳನ್ನೂ ರಚಿಸಿರುವುದು. ಈ ಇಟ್ಟಿಗೆಗಳಲ್ಲಿ ಪ್ರತಿಯೊಂದು ಇಟ್ಟಿಗೆಯೂ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿರುವುದು. ಯಾವೆರಡು ಇಟ್ಟಿಗೆಗಳೂ ಒಂದೇ ತರಹದವುಗಳಲ್ಲ. ಒಂದೊಂದೂ ಒಂದೊಂದು ತರಹ ತನ್ನದೇ ಆದ ಗುಣಗಳನ್ನು ಹೊಂದಿರುವುದು. ಈ ನೂರು ಮೂಲ ವಸ್ತುಗಳನ್ನು ಬಿಟ್ಟು ಪ್ರಪಂಚದ ಉಳಿದೆಲ್ಲಾ ವಸ್ತುಗಳೂ ಪ್ರಕೃತಿಯ ಈ ಇಟ್ಟಿಗೆಗಳ ಪೈಕಿ ಎರಡು ಅಥವಾ ಅದಕ್ಕಿಂತ ಹೆಚ್ಚಿನ ತರಹದ ಇಟ್ಟಿಗೆಗಳಿಂದ ರಚಿತವಾಗಿವೆ. ಮೂಲ ವಸ್ತುವಲ್ಲದ ಪ್ರತಿಯೊಂದು ವಸ್ತುವಿನಲ್ಲಿಯೂ ಈ ಇಟ್ಟಿಗೆಗಳ ಪೈಕಿ ಕೊನೆಯ ಪಕ್ಷ ಎರಡು ತರಹ ಇಟ್ಟಿಗೆಗಳು ಇದ್ದೇ ಇರಬೇಕು. ಈ ನೂರು

ಇಟ್ಟಿಗೆಗಳ ಪೈಕಿ ಯಾವೆರಡು ಬೇರೆ ಬೇರೆ ಇಟ್ಟಿಗೆಗಳಾದರೂ ಸರಿಯೆ. ಒಂದು ವಸ್ತುವಿನ ರಚನೆಯಲ್ಲಿ ಈ ಬೇರೆ ಬೇರೆ ತರಹದ ಇಟ್ಟಿಗೆಗಳು ಒಂದೊಂದೂ ಎಷ್ಟು ಸಂಖ್ಯೆ ಬೇಕಾದರೂ ಇರಬಹುದು. ಈ ಮೇಲಿನ ವಿಷಯಗಳನ್ನೆಲ್ಲಾ ಗಣನೆಗೆ ತೆಗೆದುಕೊಂಡರೆ, ಈ ನೂರು ತರಹದ ಇಟ್ಟಿಗೆಗಳಿಂದ ಎಷ್ಟು ವಿಧವಾದ ಕಟ್ಟಡಗಳನ್ನು ಕಟ್ಟಬಹುದು ನೀವೇ ಯೋಚಿಸಿ. ಆದ್ದರಿಂದ ಪ್ರಕೃತಿಯಲ್ಲಿರುವ ಅಸಂಖ್ಯಾತ ವಸ್ತುಗಳು ನೂರು ಇಟ್ಟಿಗೆಗಳಿಂದಾಗಿವೆ ಎನ್ನುವುದರಲ್ಲಿ ಆಶ್ಚರ್ಯವೇನಿಲ್ಲ.

ಸಮಸ್ತ ವಸ್ತುಗಳ ರಚನೆಗೂ ಆಧಾರಭೂತವಾದ ಈ ಮೂಲ ವಸ್ತುಗಳು ಯಾವುವು? ಇವುಗಳಲ್ಲಿ ಕೆಲವು ವಾಚಕರಿಗೆ ಪರಿಚಯವಾದ ವಸ್ತುಗಳು. ಇನ್ನು ಕೆಲವು ಅಷ್ಟು ಪರಿಚಯವಿಲ್ಲದಿದ್ದರೂ, ಅವುಗಳ ಹೆಸರುಗಳನ್ನಾದರೂ ಕೇಳಿರಬಹುದು. ನಮಗೆ ಗೊತ್ತಿರುವ ಅನೇಕ ಲೋಹಗಳು - ಚಿನ್ನ, ಬೆಳ್ಳಿ, ತಾಮ್ರ, ತವರ, ಕಬ್ಬಿಣ, ಸೀಸ, ಸತು, ಪಾದರಸ- ಮೂಲ ವಸ್ತುಗಳು. ಆಮ್ಲಜನಕ, ಜಲಜನಕ, ಸಾರಜನಕ, ಕ್ಲೋರೀನ್, ಇಂಗಾಲ, ಗಂಧಕ, ರಂಜಕ, ಅಯೊಡಿನ್- ಇವುಗಳೂ ವಾಚಕರಿಗೆ ಗೊತ್ತಿರಬಹುದು. ಒಟ್ಟು ಮೂಲ ವಸ್ತುಗಳ ಪೈಕಿ ಅರ್ಧ ಭಾಗದಷ್ಟು ಮೂಲ ವಸ್ತುಗಳ ಹೆಸರನ್ನೂ ಸಹ ಜನ ಸಾಮಾನ್ಯವು ಕೇಳಿರುವುದಿಲ್ಲ. ರಸಾಯನ ಶಾಸ್ತ್ರಜ್ಞರಿಗೂ ಸಹ, ಇವುಗಳ ಹೆಸರುಗಳು ಬಿಟ್ಟು ಅದಕ್ಕಿಂತ ಹೆಚ್ಚೇನೂ ಅವುಗಳ ವಿಷಯ ತಿಳಿದಿರುವುದಿಲ್ಲ. ಇವುಗಳ ವಿಷಯವಾಗಿ ಸಂಶೋಧನೆಯನ್ನು ನಡೆಸುತ್ತಿರುವ ಕೆಲವರಿಗೆ ಮಾತ್ರ ಅವರ ಸಂಶೋಧನೆಯ ವಿಷಯವಾದ ಅಪರಿಚಿತ ಮೂಲ ವಸ್ತುವಿನ ವಿಷಯ ತಿಳಿದಿರುವುದು, ಅಷ್ಟೆ. ಇದೇನೂ ಅಚ್ಚರಿಯಲ್ಲ. ಒಂದು ಮೂಲ ವಸ್ತುವಿನ ಪ್ರಾಮುಖ್ಯತೆಯು ಅದು ಪ್ರಪಂಚದ ರಚನೆಯಲ್ಲಿ ಮತ್ತು ಮಾನವನ ಉಪಯೋಗಗಳಲ್ಲಿ ಏನು ಪಾತ್ರವನ್ನು ಅವಲಂಬಿಸಿರುವುದು ಎನ್ನುವುದರಿಂದ ನಿರ್ಧರಿಸಲ್ಪಡುವುದು. ಸ್ಕ್ಯಾಂಡಿಯಂ, ಇಟ್ರಿಯಂ, ಇಂಡಿಯಂ ಮುಂತಾದ ಅವಿದಿತ ಮೂಲ ವಸ್ತುಗಳು ಮೂಲ ವಸ್ತುಗಳ ಶ್ರೇಣಿಯಲ್ಲಿ ಇಲ್ಲದಂತಾದರೂ ಅದರಿಂದ ಭಾದಕವುಂಟಾಗುವುದಿಲ್ಲ.

ಪ್ರಕೃತಿಯಲ್ಲಿ ಪ್ರಸರಿಸಿರುವ ಅಸಂಖ್ಯಾತ ವಿಧವಾದ ವಸ್ತುಗಳ ರಚನೆಯಲ್ಲಿ ಮೂಲ ವಸ್ತುಗಳು ವಹಿಸಿರುವ ಪಾತ್ರವು ಅತ್ಯಂತ ಆಕರ್ಷಣೀಯವಾಗಿರುವುದು. ಈ ಮೂಲ ವಸ್ತುಗಳಲ್ಲಿ ಕೆಲವು ಅನಿಲಗಳು. ಆಮ್ಲಜನಕ, ಜಲಜನಕ, ಸಾರಜನಕ, ಕ್ಲೋರೀನ್ ಇವುಗಳು ಅನಿಲಗಳು. ಪಾದರಸವನ್ನು ಬಿಟ್ಟು ಉಳಿದೆಲ್ಲ ಲೋಹಗಳೂ, ಗಂಧಕ, ರಂಜಕ, ಇಂಗಾಲ, ಅಯೊಡಿನ್ ಇವುಗಳು ಘನ ವಸ್ತುಗಳು. ಲೋಹಗಳ ಪೈಕಿ ಪಾದರಸವೂ, ಅಲೋಹಗಳ ಪೈಕಿ ಬ್ರೋಮೀನ್

ಎಂಬ ಮೂಲ ವಸ್ತುವೂ ದ್ರವಗಳು. ಘನ, ದ್ರವ ಮತ್ತು ಅನಿಲಗಳೆಂಬ ಮೂರು ವರ್ಗಗಳಾಗಿ ಮೂಲ ವಸ್ತುಗಳನ್ನು ವಿಂಗಡಿಸಿರುವುದು ನಮ್ಮ ಭೂಮಿಯ ಸನ್ನಿವೇಶಗಳಿಗೆ ಅನುಗುಣವಾಗಿರುವುದು. ಈ ನಮ್ಮ ಗ್ರಹಕ್ಕಿಂತ ಅತಿ ಹೆಚ್ಚಿನ ಶಾಖದಲ್ಲಿರುವ ನಕ್ಷತ್ರ ಮಂಡಲಗಳಲ್ಲಿ ನಮಗೆ ಘನ ಸ್ಥಿತಿಯಲ್ಲಿ ಪರಿಚಿತವಾದ ಅನೇಕ ಮೂಲ ವಸ್ತುಗಳು ಅನಿಲರೂಪದಲ್ಲಿರುವುವು. ಸೂರ್ಯನ ಅತ್ಯುನ್ನತ ಶಾಖದಲ್ಲಿ ಕಬ್ಬಿಣವು ಸಹ ಆವಿಯ ರೂಪದಲ್ಲಿರುವುದು.

ಪ್ರಕೃತಿಯಲ್ಲಿ ಮೂಲ ವಸ್ತುಗಳು ಸಾಮಾನ್ಯವಾಗಿ ಇತರ ಮೂಲ ವಸ್ತುಗಳ ಜೊತೆಯಲ್ಲಿ ಸಂಯುಕ್ತರೂಪದಲ್ಲಿರುವುದೇ ಜಾಸ್ತಿ. ಎಲ್ಲಿಯೋ ಕೆಲವು ಮೂಲ ವಸ್ತುಗಳು ಶುದ್ಧರೂಪದಲ್ಲಿ ಅಂದರೆ, ಮೂಲ ವಸ್ತುವಿನ ರೂಪದಲ್ಲಿ ದೊರೆಯುವುವು. ಚಿನ್ನ, ಬೆಳ್ಳಿ, ತಾಮ್ರ, ಗಂಧಕ, ಆಕ್ಸಿಜನ್, ಹೈಡ್ರೊಜನ್ ಮೊದಲಾದ ಮೂಲ ವಸ್ತುಗಳು ಶುದ್ಧ ಸ್ಥಿತಿಯಲ್ಲಿ ದೊರಕುವುವು. ಆದರೆ ಭೂಮಿಯ ಮೇಲ್ಪದರವನ್ನು ರಚಿಸಿರುವ ವಸ್ತುಗಳಲ್ಲಿ ಬಹುಭಾಗ ಸಂಯುಕ್ತಗಳು. ಈ ಸಂಯುಕ್ತಗಳಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿರುವ ಮೂಲ ವಸ್ತು ಆಕ್ಸಿಜನ್ (ಆಮ್ಲಜನಕ). ಇದು ಶೇಕಡ ಐವತ್ತು ಭಾಗವಿರುವುದು. ಆಧಿಕ್ಯದಲ್ಲಿ ಆಕ್ಸಿಜನ್ ಅನಂತರದ ಮೂಲ ವಸ್ತು ಸಿಲಿಕಾನ್. ಸಿಲಿಕಾನ್ ಮತ್ತು ಆಮ್ಲಜನಕಗಳ ಸಂಯುಕ್ತವೇ ಮಳಲು. ಬಂಡೆಗಳು ಶಿಥಿಲವಾಗಿ ಮಳಲು ಆದುದು. ಆದ್ದರಿಂದ ಎಲ್ಲಾ ಬಂಡೆಗಳಲ್ಲಿಯೂ ಈ ಎರಡು ಮೂಲ ವಸ್ತುಗಳು ಇದ್ದೇ ಇರಬೇಕು. ಅಲ್ಯೂಮಿನಿಯಂ, ಸೋಡಿಯಂ, ಪೊಟ್ಯಾಸಿಯಂ, ಕ್ಯಾಲ್ಸಿಯಂ, ಮೆಗ್ನೀಸಿಯಂ ಮತ್ತು ಕಬ್ಬಿಣಗಳು ಗಣನೀಯ ಪ್ರಮಾಣದಲ್ಲಿ ಭೂಮಿಯ ಮೇಲ್ಪದರದ ಸಂಯುಕ್ತಗಳಲ್ಲಿರುವ ವಸ್ತುಗಳು. ಜೀವ ಪ್ರಪಂಚದ ದೃಷ್ಟಿಯಿಂದ ಇಂಗಾಲ, ಆಮ್ಲಜನಕ, ಜಲಜನಕ, ಸಾರಜನಕ, ರಂಜಕ, ಕ್ಯಾಲ್ಸಿಯಂ, ಮೆಗ್ನೀಷಿಯಂ ಮತ್ತು ಕಬ್ಬಿಣ ಮುಖ್ಯವಾದುವು. ಇವುಗಳಲ್ಲಿ ಮೆಗ್ನೀಷಿಯಂ ಸಸ್ಯಪ್ರಪಂಚಕ್ಕೂ, ಕಬ್ಬಿಣವು ಪ್ರಾಣಿವರ್ಗಕ್ಕೂ ಅತಿ ಮುಖ್ಯವಾದುವು. ಉಳಿದವುಗಳು ಸಸ್ಯ ಮತ್ತು ಪ್ರಾಣಿಗಳೆರಡಕ್ಕೂ ಆವಶ್ಯಕವಾದುವು.

ಮೂಲ ವಸ್ತುಗಳ ಗುಣಗಳನ್ನು ಪರಿಶೀಲಿಸಿದರೆ ಅವು ಶುದ್ಧರೂಪದಲ್ಲಿ ದೊರೆಯದೆ ಇರುವುದರಲ್ಲಿ ಆಶ್ಚರ್ಯವೇನಿಲ್ಲ. ಈಗ ಉದಾಹರಣೆಗಾಗಿ ರಂಜಕವನ್ನು ತೆಗೆದುಕೊಳ್ಳೋಣ. ರಸಾಯನ ಶಾಸ್ತ್ರಜ್ಞರು ಕೆಲವು ಸೂಕ್ಷ್ಮ ವಿಧಾನಗಳಿಂದ ಎಲುಬಿನ ಭಸ್ಮದಿಂದ ಈ ಮೂಲವಸ್ತುವನ್ನು ತೆಗೆದಿದ್ದಾರೆ. ಈ ಮೂಲ ವಸ್ತುವಿಗೆ ಒಂಟಿತನದ ಆನಂದವು ಸ್ವಲ್ಪವೂ ಇಷ್ಟವಿಲ್ಲವೆಂದು ತೋರುವುದು. ಗಾಳಿಯ ಸಂಪರ್ಕವಿಲ್ಲದಂತೆ ಅದನ್ನಿಡಲು ಸರಿಯಾದ ಮುನ್ನೆಚ್ಚರಿಕೆಯನ್ನು ತೆಗೆದುಕೊಳ

ದಿದ್ದರೆ, ಅದು ಗಾಳಿಯ ಆಮ್ಲಜನಕದೊಡನೆ ಸಂಯೋಜಿಸಿ, ಸಂಯುಕ್ತ ಸ್ಥಿತಿಗೆ ಪುನಃ ತಿರುಗುವುದು. ಇದರಿಂದ ರಂಜಕವು ಶುದ್ಧ ಸ್ಥಿತಿಯಲ್ಲಿ ಯಾಕೆ ಸಿಕ್ಕುವುದಿಲ್ಲವೆಂದು ತಿಳಿಯುವುದು. ಇದೇ ರೀತಿಯ ಕಾರಣಗಳು ಇತರ ಮೂಲ ವಸ್ತುಗಳಿಗೂ ಅನ್ವಯಿಸುವುವು.

ವಾಚಕರ ಮನಸ್ಸಿನಲ್ಲಿ ಒಂದು ಸಂದೇಹ ತಲೆದೋರಬಹುದು. ಪ್ರಕೃತಿ ಪ್ರಪಂಚವನ್ನು ರಚಿಸಿರುವ ಈ ಮೂಲ ವಸ್ತುಗಳು ಶುಟ್ಟಿತುದಿಯ ಶುದ್ಧವಸ್ತುಗಳೆಂದು ಹೇಗೆ ಹೇಳಲು ಸಾಧ್ಯ? ಈಗ ಮೂಲ ವಸ್ತುಗಳೆಂದು ಪರಿಗಣಿಸಿರುವ ಕೆಲವು ವಸ್ತುಗಳಾದರೂ ಇತರ ಮೂಲ ವಸ್ತುಗಳ ಸಂಯುಕ್ತಗಳಾಗಿರುವುದು ಸಾಧ್ಯವಲ್ಲವೇ? ಖಂಡಿತವಾಗಿಯೂ ಸಾಧ್ಯ, ಆದರೆ ಅದು ಸಂಭವವಾಗಿ ತೋರುವುದಿಲ್ಲ. ನಿಜ, ಈಗ ನೂರು ನೂರಿಪ್ಪತ್ತು ವರ್ಷಗಳ ಹಿಂದೆ ನೀರು, ಸೋಡ, ಸುಣ್ಣ ಇವುಗಳನ್ನೂ ಮೂಲ ವಸ್ತುಗಳೆಂದು ಪರಿಗಣಿಸಿದ್ದರು. ಆಮೇಲೆ ಅದುವರೆಗೂ ಮಾಡದೆ ಇದ್ದ ಕೆಲವು ಪ್ರಯೋಗಗಳಿಂದ ಇವುಗಳು ಸಂಯುಕ್ತಗಳೆಂದು ತಿಳಿಯಿತು. ಈಗ ನಾವು ಮೂಲವಸ್ತುಗಳೆಂದು ಭಾವಿಸಿರುವ ಕೆಲವು ವಸ್ತುಗಳ ವಿಷಯದಲ್ಲಿ ಒಂದೆ ಆದದ್ದು ಪುನಃ ಸಂಭವಿಸಬಹುದೆಂಬ ಯೋಚನೆ ಅಸಹಜವಲ್ಲ. ಆದರೆ ಈಗ ಹಾಗಾಗುವ ಸಂಭವ ಕಡಿಮೆ. ರಸಾಯನ ಶಾಸ್ತ್ರಜ್ಞನ ಆಧುನಿಕ ವಿಧಾನಗಳ ಹೊಡೆತಗಳ ನಡುವೆ ಶುದ್ಧ ಮೂಲವಸ್ತುವಲ್ಲದ ಇನ್ಯಾವ ವಸ್ತುವೂ ಅವುಗಳ ಹೊಡೆತವನ್ನು ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲ. ಅಲ್ಲದೆ ಈಗ ರಸಾಯನ ಶಾಸ್ತ್ರಜ್ಞನ ಹತ್ತಿರ ಒಂದು ವಸ್ತುವು ಮೂಲವಸ್ತುವೇ ಅಥವಾ ಅಲ್ಲವೇ ಎಂದು ಕಂಡು ಹಿಡಿಯುವ ಕೆಲವು ಅಸ್ತ್ರಗಳಿವೆ. ಇವುಗಳಿಂದ ಒಂದು ವಸ್ತುವು ಮೂಲವಸ್ತುವೇ ಅಥವಾ ಅಲ್ಲವೇ ಎಂದು ನಿರ್ಧರಿಸಬಹುದು.

ಇಂತಹ ಒಂದು ಅಸ್ತ್ರವನ್ನು ನೋಡೋಣ. ಒಂದು ಬಿಸಿಲು ಕೋಲನ್ನು ಒಂದು ಸಣ್ಣ ಕಿಂಡಿಯ ಮೂಲಕ ಒಂದು ತ್ರಿಪಟ್ಟಕದ ಮೇಲೆ — ತ್ರಿಪಟ್ಟಕ ವೆಂದರೆ ಮುಮ್ಮುಖಿಯ ದಪ್ಪನೆ ಗಾಜಿನ ಬಿಲ್ಲೆ — ಬೀಳುವಂತೆ ಮಾಡಿದರೆ, ಸೂರ್ಯನ ಬೆಳಕು ವಿಭಜಿಸಿ ಏಳು ಬಣ್ಣಗಳುಳ್ಳ ಒಂದು ವರ್ಣಪಟ್ಟಿಕೆಯಾಗುವುದು. ಈ ವರ್ಣಪಟ್ಟಿಕೆಯನ್ನುಂಟುಮಾಡುವ ಸಾಧನಕ್ಕೆ ಸ್ಪೆಕ್ಟ್ರಾಸ್ಕೋಪ್ ಎನ್ನುತ್ತಾರೆ. ಈ ವರ್ಣಪಟ್ಟಿಕೆಯು ಅಖಂಡವಾಗಿದ್ದು ಕೆಂಪು, ಕಿತ್ತಳೆ, ಹಳದಿ, ಹಸುರು, ನೀಲಿ, ಬಟ್ಟನೀಲಿ, ಮತ್ತು ಊದ ಬಣ್ಣಗಳು ಕ್ರಮವಾಗಿ ಒಂದು ಅಂಚಿನಿಂದ ಇನ್ನೊಂದು ಅಂಚಿನವರೆಗೆ ವಿಚ್ಛಿತ್ತಿಯಿಲ್ಲದೆ ಪರಸ್ಪರ ಮಿಳನವಾಗಿರುತ್ತವೆ. ಕಾಮನ ಬಿಲ್ಲನ್ನು ನೀವೆಲ್ಲರೂ ನೋಡಿದ್ದೀರಿ. ಇದು ಪ್ರಕೃತಿಯು ನೀರಿನ ಹನಿಗಳ ಸಹಾಯದಿಂದ ರಚಿಸಿದ ವರ್ಣಪಟ್ಟಿಕೆ. ಸೂರ್ಯನ ಬೆಳಕಿಗೆ ಬದಲಾಗಿ, ಒಂದು ಮೂಲ

ವಸ್ತುವಿನ ಆವಿಯನ್ನು ಉನ್ನತ ಶಾಖಕ್ಕೆ ಕಾಯಿಸಿ ಅದರ ಬೆಳಕನ್ನು ತ್ರಿಪಟ್ಟಿಕಪ ಮೂಲಕ ಕಳುಹಿಸಿದರೆ, ಸೂರ್ಯನ ಬೆಳಕಿನಿಂದುಂಟಾದ ಅಖಂಡವಾದ ವರ್ಣ ಪಟ್ಟಿಕೆಗೆ ಬದಲಾಗಿ ಅಲ್ಲೊಂದು ಇಲ್ಲೊಂದು ಬಣ್ಣದ ಗೆರೆಗಳು ಕಾಣುವುವು. ಇದು ಮೂಲ ವಸ್ತುವಿನ ಸ್ಪೆಕ್ಟ್ರಂ. ಪ್ರತಿಯೊಂದು ಮೂಲ ವಸ್ತುವೂ ತನ್ನದೇ ಆದ



ಸೂರ್ಯನ ವರ್ಣ ರಂಜಿತ ರಶ್ಮಿ ಪಟ್ಟಿಕೆಯಲ್ಲಿ ಕಾಣುವ ಕರಿ ಗೆರೆಗಳು.

ಸೋಡಿಯಂ ರಶ್ಮಿ ಪಟ್ಟಿಕೆ.

ಬೇರಿಯಂ ರಶ್ಮಿ ಪಟ್ಟಿಕೆ.

ಸ್ಟ್ರಾನ್ಷಿಯಂ ರಶ್ಮಿ ಪಟ್ಟಿಕೆ.

ಹೈಡ್ರಜಿನ್ ರಶ್ಮಿ ಪಟ್ಟಿಕೆ.

ಸ್ಪೆಕ್ಟ್ರಂ ಹೊಂದಿರುವುದು. ಒಂದು ಸಂಯುಕ್ತದ ವರ್ಣಪಟ್ಟಿಕೆಯು ಅದರಲ್ಲಿರುವ ಮೂಲವಸ್ತುಗಳ ವರ್ಣಪಟ್ಟಿಕೆಗಳ ಸಂಕಲನವಾಗಿರುವುದು. ಯಾವುದಾದರೊಂದು ಬೆಳಕಿನ ವರ್ಣಪಟ್ಟಿಕೆಯನ್ನು ಸ್ಪೆಕ್ಟ್ರಾಸ್ಕೋಪ್ ಸಹಾಯದಿಂದ ಪರೀಕ್ಷಿಸಿದರೆ, ಅದರಲ್ಲಿ ಕಾಣುವ ಗೆರೆಗಳಿಂದ ಆ ಬೆಳಕು ಕೊಡುವ ಆವಿಯಲ್ಲಿ ಯಾವ ಯಾವ ಮೂಲ ವಸ್ತುಗಳಿವೆ ಎಂದು ಹೇಳಬಹುದು. ಆದ್ದರಿಂದ ಮೂಲವಸ್ತುವೆಂದು ಪರಿಗಣಿಸಲಾಗಿರುವ ಯಾವುದೇ ವಸ್ತುವು, ನಮಗೆ ತಿಳಿದ ಬೇರೆ ಎರಡು ಮೂಲವಸ್ತುಗಳಿಂದ ಆಗಿದ್ದಲ್ಲಿ, ಅದರ ಸ್ಪೆಕ್ಟ್ರಂನಿಂದ ಈ ವಿಷಯವು ತಕ್ಷಣವೇ ಗೊತ್ತಾಗುವುದು. ಸ್ಪೆಕ್ಟ್ರಂ ಸಹಾಯದಿಂದ ಮೂಲವಸ್ತುಗಳನ್ನು ಗುರುತಿಸುವ ವಿಧಾನವು, ಅತ್ಯಂತ ಖಚಿತವಾದ ಅಸ್ಖಲಿತವಾದ ಪರೀಕ್ಷೆ. ಅನೇಕ ಹೊಸ ಮೂಲವಸ್ತುಗಳನ್ನು ಇದರ ಸಹಾಯದಿಂದ ಕಂಡು ಹಿಡಿದಿದ್ದಾರೆ. ಅಷ್ಟೇ ಅಲ್ಲ. ನಕ್ಷತ್ರಮಂಡಲಗಳಲ್ಲಿ ಯಾವ ಯಾವ ಮೂಲವಸ್ತುಗಳಿವೆಯೆಂದು ಅವುಗಳ ಬೆಳಕಿನ ಸ್ಪೆಕ್ಟ್ರಂನಿಂದ

ತಿಳಿಯಬಹುದು. ಭೂಮಿಯ ಮೇಲೆ ಕಂಡು ಹಿಡಿಯದ ಒಂದುಮೂಲ ವಸ್ತುವನ್ನು ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ವಿಜ್ಞಾನಿಗಳು ಸೂರ್ಯನಲ್ಲಿ ಕಂಡು ಹಿಡಿದರು. ಅದಕ್ಕೆ ಹೀಲಿಯಂ ಎಂಬ ನಾಮಕರಣವನ್ನು ಮಾಡಿದರು. ಹೀಲಿ ಯೋಸ್ ಎಂದರೆ ಗ್ರೀಕ್ ಭಾಷೆಯಲ್ಲಿ ಸೂರ್ಯ ಎಂದರ್ಥ. ಸೂರ್ಯನಲ್ಲಿ ಇದನ್ನು ಕಂಡು ಹಿಡಿದುದರಿಂದ ಅದಕ್ಕೆ ಈ ಹೆಸರನ್ನು ಕೊಟ್ಟರು. ಈ ಮೂಲ ವಸ್ತುವನ್ನು ಈಚೆಗೆ ಭೂಮಿಯಲ್ಲಿಯೂ ಕಂಡುಹಿಡಿದಿದ್ದಾರೆ. ಈ ಸಂಶೋಧನೆ ಗಳಿಂದ ಇಡೀ ವಿಶ್ವವೇ ಈ ನೂರು ಮೂಲವಸ್ತುಗಳಿಂದಾಗಿದೆಯೆಂದು ತಿಳಿದು ಬಂದಿದೆ.

ಇದರ ಜೊತೆಗೆ ಇನ್ನೊಂದು ಮಹಾಸ್ತ್ರವಿದೆ. ಎಕ್ಸ್‌ರೇ ಹೆಸರನ್ನು ನೀವು ಕೇಳಿರಬಹುದು. ಇದೂ ಸಹ ಬೆಳಕಿನಂತೆಯೇ ಅಲೆಗಳಿಂದ ಆಗಿದೆ. ಎಕ್ಸ್‌ರೇ ಅಲೆಗಳ ಉದ್ದವು ಬೆಳಕಿನ ಅಲೆಗಳ ಉದ್ದಕ್ಕಿಂತ ಬಹಳ ಕಡಿಮೆ. ಬೆಳಕಿಗೂ ಎಕ್ಸ್‌ರೇಗೂ ಇಷ್ಟೇ ವ್ಯತ್ಯಾಸ. ಕೆಲವು ಸನ್ನಿವೇಶಗಳಲ್ಲಿ ಪ್ರತಿಯೊಂದು ಮೂಲ ವಸ್ತುವೂ ಎಕ್ಸ್‌ರೇಯನ್ನು ಸೂಸುವಂತೆ ಮಾಡಬಹುದು. ಮೂಲವಸ್ತುಗಳ ಎಕ್ಸ್‌ರೇಯನ್ನೂ ವರ್ಣಪಟ್ಟಿಕೆಯಾಗಿ ವಿಭಜಿಸಬಹುದು. ಪ್ರತಿಯೊಂದು ಮೂಲ ವಸ್ತುವೂ ಅತಿ ಸರಳವಾದ ತನ್ನದೇ ಆದ ಎಕ್ಸ್‌ರೇ ಸ್ಪೆಕ್ಟ್ರಂ ಹೊಂದಿರುವುದು. ಇದ ರಿಂದಲೂ ಸಹ ಒಂದು ವಸ್ತು ಮೂಲವಸ್ತುವೇ, ಸಂಯುಕ್ತವಾಗಿದ್ದರೆ ಅದರಲ್ಲಿ ಯಾವ ಮೂಲವಸ್ತುಗಳಿವೆ ಎಂದು ಕಂಡು ಹಿಡಿಯಬಹುದು. ಹೀಗೆ ಈಗ ಮೂಲವಸ್ತುಗಳೆಂದು ಭಾವಿಸಿರುವ ನೂರು ವಸ್ತುಗಳು ಮೂಲವಸ್ತುಗಳೆಂದು ನಿಸ್ಸಂದೇಹವಾಗಿ ನಿರ್ಧರಿಸಲ್ಪಟ್ಟಿದೆ.

ಅನೇಕ ಮೂಲವಸ್ತುಗಳು ಸಂಯುಕ್ತರೂಪದಲ್ಲಿ ದೊರೆಯುವುದೆಂದು ಹೇಳಿ ದುದು ವಾಚಕರ ಜ್ಞಾಪಕದಲ್ಲಿರಬಹುದು. ಸಂಯುಕ್ತವೆಂದರೇನು? ಎರಡು ಅಥವಾ ಹೆಚ್ಚಿನ ಮೂಲವಸ್ತುಗಳು ಒಂದರೊಡನೊಂದು ಬೆರೆತಿರುವುದು ಎಂದರ್ಥವೆ — ಅಕ್ಕಿಯಲ್ಲಿ ಕಲ್ಲು ಬೆರತಂತೆ? ಖಂಡಿತ ಅಲ್ಲ. ಎರಡು ಮೂಲ ವಸ್ತುಗಳು ಸಂಯೋಜಿಸಿದಾಗ ಅವುಗಳು ತಮ್ಮ ಬೇರೆ ಬೇರೆ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ಕಳೆದುಕೊಂಡು ಬೇರೆ ವೈಶಿಷ್ಟ್ಯ ಗುಣಗಳುಳ್ಳ ಒಂದು ಹೊಸ ವ್ಯಕ್ತಿಯಾಗುವಷ್ಟು ನಿಕಟವಾಗಿ, ಸಂಪೂರ್ಣವಾಗಿ ಸಂಯೋಜಿಸುವುವು. ಎರಡು ಬೇರೆ ಬೇರೆ ಇಟ್ಟಿಗೆಗಳನ್ನು ಪಕ್ಕದಲ್ಲಿ ಜೋಡಿಸಿದ್ದು ಒಂದನ್ನು ಇನ್ನೊಂದರಿಂದ ಬೇರೆ ಮಾಡಿ ಎತ್ತಿಡುವಂತಹುದಲ್ಲ ಅವುಗಳ ಸೇರಿಕೆ. ಯಾವುದೋ ಒಂದು ಗಹನ ರೀತಿಯಲ್ಲಿ ಅವೆರಡೂ ಏಕೀಭವಿಸಿ ಇದರ ರಚನೆಯಲ್ಲಿ ಉಪಯೋಗಿಸಿದ ಯಾವೊಂದು ಇಟ್ಟಿಗೆಯ ಬಣ್ಣ, ಆಕೃತಿ ಮತ್ತು ಇತರ ಗುಣಗಳನ್ನು ಈ ಹೊಸ

ಕಟ್ಟಡ ಹೊಂದಿರದೆ, ತನ್ನದೇ ಆದುದೊಂದು ಹೊಸರೂಪ, ಬಣ್ಣ ಮತ್ತು ಇತರ ಗುಣಗಳನ್ನು ಹೊಂದಿದ ಬೇರೊಂದು ಹೊಸ ಇಟ್ಟಿಗೆಯಾಗಿರುವುದು. ಮೊದಲಿನ ಇಟ್ಟಿಗೆಗಳ ಗುಣಗಳ ಸಹಾಯದಿಂದ ಈ ಹೊಸ ಇಟ್ಟಿಗೆಯ ವಿಷಯವಾಗಿ ನಾವು ಹೇಳಬಹುದಾದ್ದು ಒಂದೇ ಒಂದು ವಿಷಯ ಮಾತ್ರ. ಇದರ ರಚನೆಯಲ್ಲಿ ಭಾಗ ವಹಿಸಿರುವ ಎಲ್ಲಾ ಇಟ್ಟಿಗೆಗಳ ಒಟ್ಟು ತೂಕವು ಈ ಹೊಸ ಇಟ್ಟಿಗೆಯ ತೂಕಕ್ಕೆ ಸಮನಾಗಿರುವುದು. ರಸಾಯನಿಕ ಸಂಯೋಜನೆಯಾದಾಗ ವಸ್ತುವಿನ ಉತ್ಪತ್ತಿ ಯಾಗಲೀ ನಾಶವಾಗಲೀ ಆಗುವುದಿಲ್ಲ. ಇದನ್ನು ವಿಜ್ಞಾನಿಗಳು ವಸ್ತು ನಿತ್ಯತ್ವ ನಿಯಮವೆನ್ನುತ್ತಾರೆ. ಇದೊಂದು ಅನುಲ್ಲಂಘನೀಯ ನಿಯಮ.

ರಸಾಯನಿಕ ಸಂಯೋಜನೆಗಳಲ್ಲಿ ಸಂಯೋಜಿಸುವ ಮೂಲವಸ್ತುಗಳ ತೂಕಕ್ಕೆ ಸಂಬಂಧಿಸಿದ ಸ್ವಾರಸ್ಯವಾದ ಇನ್ನೂ ಕೆಲವು ವಿಷಯಗಳನ್ನು ರಸಾಯನ ಶಾಸ್ತ್ರಜ್ಞರು ಕಂಡುಹಿಡಿದಿರುತ್ತಾರೆ. ಎರಡು ಮೂಲವಸ್ತುಗಳು ಸಂಯೋಜಿಸಿ ದಾಗ ಪ್ರತಿಯೊಂದು ಮೂಲವಸ್ತುವೂ ಇತರ ಮೂಲವಸ್ತುಗಳ ಸ್ನೇಹ ಹಸ್ತವನ್ನು ಸ್ವೀಕರಿಸಲು ಕೆಲವು ದೂರ ಮಾತ್ರ ಹೋಗುವುದು. ಈ ವಿಷಯದಲ್ಲಿ ಅವು ದೃಢ ಸಂಕಲ್ಪವನ್ನು ಹೊಂದಿದಂತೆ ಕಾಣುವುದು. ಎಷ್ಟೇ ಪ್ರಚೋದಿಸಿದರೂ ಅವು ಹಾಕಿಕೊಂಡ ಗೆರೆಯನ್ನು ತಿಲಾಂಶವೂ ಮೀರಿಹೋಗುವುದಿಲ್ಲ. ಕಬ್ಬಿಣ ಮತ್ತು ಗಂಧಕಗಳು ಸಂಯೋಜಿಸಿದಾಗ ಏಳು ಭಾಗ ಕಬ್ಬಿಣವು ನಾಲ್ಕು ಭಾಗ ಗಂಧಕ ದೊಂದಿಗೆ ಸಂಯೋಜಿಸುತ್ತದೆ. ಎಂಟು ತೊಲ ಕಬ್ಬಿಣ ನಾಲ್ಕು ತೊಲ ಗಂಧಕ ವನ್ನು ಮಿಶ್ರ ಮಾಡಿ ಕಾಯಿಸಿದರೆ, ಹೆಚ್ಚಿನ ಒಂದು ತೊಲ ಕಬ್ಬಿಣವನ್ನು ಗಂಧಕ ದೊಡನೆ ಸಂಯೋಜಿಸುವಂತೆ ಮಾಡಲು ಸಾಧ್ಯವೇ ಇಲ್ಲ. ಹಾಗೆಯೇ ಏಳು ಔನ್ಸ್ ಕಬ್ಬಿಣದ ಜೊತೆಗೆ ಐದು ಔನ್ಸ್ ಗಂಧಕವನ್ನು ಕಾಯಿಸಿದರೆ ಹೆಚ್ಚಿನ ಒಂದು ಔನ್ಸ್ ಗಂಧಕವು ಕಬ್ಬಿಣದೊಡನೆ ಸಂಯೋಜಿಸಲು ನಿರಾಕರಿಸುವುದು. ಹೀಗೆ ಮೂಲವಸ್ತುಗಳು ಒಂದು ನಿಯತ ಪ್ರಮಾಣದಲ್ಲಿ ಪರಸ್ಪರ ಸಂಯೋಜಿಸು ವುವು. ಇದಕ್ಕೆ ನಿಯತಪ್ರಮಾಣ ನಿಯಮವೆಂದು ಹೆಸರು. ಒಂದು ಸಂಯುಕ್ತ ವನ್ನು ಎಲ್ಲಿಬೇಕಾದರೂ ತಯಾರಿಸಬಹುದು. ಪ್ರಯೋಗ ಶಾಲೆಯಲ್ಲಿ ರಸಾಯನ ಶಾಸ್ತ್ರಜ್ಞನು ಸಂಶ್ಲೇಷಿಸಬಹುದು. ಪ್ರಕೃತಿಯು ತನ್ನದೇ ರೀತಿಯಲ್ಲಿ ಅದನ್ನು ತಯಾರಿಸಬಹುದು. ತಯಾರಿಸಿದ ವಿಧಾನವು ಯಾವುದೇ ಆಗಿರಬಹುದು. ಒಂದೇ ಸಂಯುಕ್ತವನ್ನು ಬೇರೆ ಬೇರೆ ವಿಧಾನಗಳಲ್ಲಿ ತಯಾರಿಸಲು ಸಾಧ್ಯ — ಆದರೂ ಒಂದು ನಿರ್ದಿಷ್ಟ ಸಂಯುಕ್ತದಲ್ಲಿರುವ ಮೂಲವಸ್ತುಗಳೂ, ಅವುಗಳ ಪ್ರಮಾಣವೂ ಯಾವಾಗಲೂ ಒಂದೇ ಆಗಿರುವುದು.

ಕೆಲವು ಸಂದರ್ಭಗಳಲ್ಲಿ ಎರಡು ಮೂಲ ವಸ್ತುಗಳು ಒಂದಕ್ಕಿಂತ ಹೆಚ್ಚಿನ

ಸಂಯುಕ್ತಗಳನ್ನು ಕೊಡುವವು. ತಾಮ್ರ ಆಮ್ಲಜನಕದೊಡನೆ ಸಂಯೋಜಿಸಿ ಎರಡು ವಿಧವಾದ ತಾಮ್ರದ ಸಂಯುಕ್ತಗಳನ್ನು ಕೊಡುವುದು. ಒಂದನ್ನು ಕ್ಯುಪ್ರಿಕ್ ಆಕ್ಸೈಡ್ ಎಂದೂ ಇನ್ನೊಂದನ್ನು ಕ್ಯುಪ್ರಸ್ ಆಕ್ಸೈಡೆಂದೂ ಕರೆಯುವರು. ಕ್ಯುಪ್ರಿಕ್ ಆಕ್ಸೈಡಿನಲ್ಲಿ ಎಂಟುಪಾಲು ತೂಕ ತಾಮ್ರದೊಡನೆ ಎರಡು ಪಾಲು ತೂಕ ಆಮ್ಲಜನಕವು ಸಂಯೋಜಿಸಿರುವುದು. ಕ್ಯುಪ್ರಸ್ ಆಕ್ಸೈಡಿನಲ್ಲಿ ಎಂಟು ಪಾಲು ತೂಕ ತಾಮ್ರದೊಡನೆ ಒಂದು ಪಾಲು ತೂಕ ಆಮ್ಲ ಜನಕ ಸೇರಿರುವುದು. ಈಗ ನೋಡಿ, ಈ ಎರಡು ಸಂಯುಕ್ತಗಳಲ್ಲಿಯೂ ಎಂಟು ಪಾಲು ತೂಕ ತಾಮ್ರ ತೆಗೆದುಕೊಂಡಿದ್ದೇವೆ. ಅಂದರೆ ನಾವು ತೆಗೆದುಕೊಂಡ ತಾಮ್ರದ ತೂಕ ಎರಡು ಸಂಯುಕ್ತಗಳಲ್ಲಿಯೂ ಒಂದೇ ಆಗಿರುತ್ತದೆ. ಈ ಸಮತೂಕ ತಾಮ್ರದೊಡನೆ ಬೇರೆ ಬೇರೆ ಸಂಯುಕ್ತಗಳಲ್ಲಿ ಸಂಯೋಜಿಸಿರುವ ಆಮ್ಲಜನಕದ ತೂಕಗಳು ಒಂದು ಮತ್ತು ಎರಡುಪಾಲುಗಳ ಪ್ರಮಾಣದಲ್ಲಿವೆ. ಈ ತೂಕಗಳು ಪರಸ್ಪರ ಅತಿ ಸರಳವಾದ ಸಂಬಂಧವನ್ನು ಹೊಂದಿವೆ. ಇದು ಈ ಎರಡು ಸಂಯುಕ್ತಗಳ ವೈಶಿಷ್ಟ್ಯ ಮಾತ್ರವಲ್ಲ. ಈ ರೀತಿಯಲ್ಲಿ ಎರಡು ಮೂಲವಸ್ತುಗಳು ಸಂಯೋಜಿಸಿ ಎರಡು ಅಥವಾ ಹೆಚ್ಚಿನ ಸಂಯುಕ್ತಗಳಾದಾಗಲೆಲ್ಲ ಈ ವೈಶಿಷ್ಟ್ಯವು ಕಂಡುಬರುವುದು. ಒಂದು ಮೂಲವಸ್ತುವು ಇನ್ನೊಂದು ಮೂಲವಸ್ತುವಿನೊಡನೆ ಸಂಯೋಜಿಸಿ ಒಂದಕ್ಕಿಂತ ಹೆಚ್ಚಾಗಿ ಸಂಯುಕ್ತಗಳುಂಟಾದಾಗ, ಒಂದು ನಿರ್ದಿಷ್ಟ ತೂಕ ಮೊದಲನೆಯ ಮೂಲವಸ್ತುವಿನೊಡನೆ ಬೇರೆ ಬೇರೆ ಸಂಯುಕ್ತಗಳಲ್ಲಿ ಸಂಯೋಜಿಸಿರುವ ಎರಡನೆಯ ಮೂಲವಸ್ತುವಿನ ತೂಕಗಳು, ಒಂದು ಮತ್ತು ಎರಡು, ಎರಡು ಮತ್ತು ಮೂರು, ಇತ್ಯಾದಿಯಾಗಿ ಸರಳ ಸಂಬಂಧವನ್ನು ಹೊಂದಿರುವುವು. ಇದನ್ನು ರಸಾಯನ ಶಾಸ್ತ್ರಜ್ಞರು ಅಪವರ್ತ್ಯ ನಿಯಮವೆಂದು ಕರೆಯುತ್ತಾರೆ.

ಮೂಲವಸ್ತುಗಳು ಸಂಯೋಜಿಸಿದಾಗ ಅವುಗಳ ಪರಸ್ಪರ ತೂಕಗಳಲ್ಲಿ ಕಂಡುಬರುವ ಈ ಅಸಾಧಾರಣ ವಿಷಯಗಳು ಪ್ರಯೋಗಶಾಲೆಯಲ್ಲಿ ತಕ್ಕಡಿಯು ಬಳಕೆಗೆ ಬಂದ ಕೆಲವು ಕಾಲದ ಮೇಲೆ ಕಂಡು ಹಿಡಿಯಲ್ಪಟ್ಟಿತು. ಈ ರೀತಿಯಲ್ಲಿ ಕ್ರಮಬದ್ಧವಾಗಿ ತೂಕಗಳ ವಿಷಯದಲ್ಲಿ ಕೆಲವು ನಿಯಮಗಳಿಗೆ ಅನುಸಾರವಾಗಿ ಮೂಲವಸ್ತುಗಳು ಸಂಯೋಜಿಸಲು ಕಾರಣವೇನಿರಬೇಕೆಂಬ ತರ್ಕವು ಪ್ರಾರಂಭವಾಯಿತು. ಇದರ ಪರಿಣಾಮವಾಗಿ ವಸ್ತುಗಳ ರಚನೆಯ ವಿಷಯವಾಗಿ ಒಂದು ವಾದ ಪ್ರಚಾರಕ್ಕೆ ಬಂದಿತು. ವಸ್ತುವು ಅತಿ ಸೂಕ್ಷ್ಮವಾದ ಅಣುಗಳೆಂಬ ಬೇರೆ ಬೇರೆ ಕಣಗಳಿಂದಾಗಿದೆಯೆಂಬುದೇ ಆ ವಾದದ ತಿರುಳು. ಒಂದು ತುಂಡು ಕಬ್ಬಿಣವನ್ನು ತೆಗೆದುಕೊಂಡು ಅದನ್ನು ಅತಿ ದೊಡ್ಡದಾಗಿ ಕಾಣುವಂತೆ ಮಾಡಿದರೆ ಕಬ್ಬಿಣದ ತುಂಡು ಗೋಲಿಗಳ ರಾಶಿಯಂತೆ ಕಾಣುವುದು. ಪ್ರತಿಯೊಂದು ಗೋಲಿಯೂ

ಒಂದೊಂದು ಅಣುವನ್ನು ಸೂಚಿಸುವುದು. ಆದರೆ ಒಂದು ವಿಷಯವನ್ನು ಜ್ಞಾಪಕ ದಲ್ಲಿಡಬೇಕು. ಇದು ಒಂದು ವಾದ ಅಷ್ಟೆ. ಹೀಗಿರಬಹುದು ಎಂಬ ಒಂದು ಊಹೆ, ಮನೋಚಿತ್ರ. ಯಾರೂ ಸಹ ವಸ್ತುವನ್ನು ಅಣುಗಳಾಗಿ ವಿಭಾಗಿಸಿಲ್ಲ. ಅಣುಗಳನ್ನು ಕಣ್ಣಿಂದ ನೋಡಿಲ್ಲ. ಅತ್ಯಂತ ಹೆಚ್ಚಿನ ಸಾಮರ್ಥ್ಯವುಳ್ಳ ಸೂಕ್ಷ್ಮ ದರ್ಶಿಯಲ್ಲಿಯೂ ಸಹ ಈ ಅಣುಗಳು ಕಾಣುವುದಿಲ್ಲ.

ಒಂದು ವಸ್ತುವಿನ ವಿಶಿಷ್ಟ ಗುಣಗಳನ್ನು ಹೊಂದಿರುವ ಅತ್ಯಂತ ಚಿಕ್ಕ ಕಣವೇ ಅಣು. ಅಣುವನ್ನು ರಸಾಯನಿಕವಾಗಿ ವಿಭಜಿಸುವುದು ಸಾಧ್ಯ. ಈ ವಿಚಾರದಲ್ಲಿ ನಡೆಸಿದ ಪ್ರಯೋಗಗಳಿಂದ ಅಣುಗಳು ಪರಮಾಣುಗಳೆಂಬ ಇನ್ನೂ ಚಿಕ್ಕ ಕಣಗಳಾಗಿವೆಯೆಂದು ತಿಳಿದುಬಂದಿದೆ. ಅಣುಗಳ ರಚನೆಯಲ್ಲಿ ಭಾಗವಹಿ ಸಿರುವ ಕಣಗಳನ್ನು ಪರಮಾಣುಗಳೆಂದು ಕರೆಯುತ್ತಾರೆ. ಕೆಲವು ಮೂಲ ವಸ್ತು ಗಳ ಅಣುಗಳಲ್ಲಿ ಮಾತ್ರ ಒಂದೇ ಒಂದು ಪರಮಾಣುವಿರುವುದು. ಉಳಿದೆಲ್ಲ ವಸ್ತು ಗಳ ಅಣುಗಳಲ್ಲಿಯೂ ಒಂದಕ್ಕಿಂತ ಹೆಚ್ಚು ಪರಮಾಣುಗಳು ಇರುವುವು. ಅಣುವಿ ನಲ್ಲಿರುವ ಪರಮಾಣುಗಳು ಒಂದೇ ತರಹ ಪರಮಾಣುಗಳಾಗಿದ್ದರೆ ಆ ವಸ್ತು ಮೂಲವಸ್ತು. ಅಣುವಿನಲ್ಲಿರುವ ಪರಮಾಣುಗಳು ಬೇರೆ ಬೇರೆ ತರಹ ಪರಮಾಣು ಗಳಾಗಿದ್ದರೆ ಅದು ಸಂಯುಕ್ತ. ಪರಮಾಣು ಅವಿಭಾಜ್ಯವಾದ ಕಣ. ರಸಾಯನಿಕ ಕ್ರಿಯೆಗಳಲ್ಲಿ ಇದಕ್ಕಿಂತ ಕಮ್ಮಿ ಪ್ರಮಾಣದಲ್ಲಿ ವಸ್ತುವನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲ.

ಮೇಲಿನ ವಾದವು ಅಣುಗಳನ್ನೂ, ಪರಮಾಣುಗಳನ್ನೂ, ರಸಾಯನಿಕ ಸಂಯೋಜನೆಗಳನ್ನೂ ಚಿತ್ರಿಸಲು ವಿಶೇಷ ಸಹಕಾರಿಯಾಗಿದೆ. ಒಂದು ಮೂಲ ವಸ್ತುವಿನ ಪರಮಾಣುವನ್ನು A ಎಂದೂ, ಇನ್ನೊಂದು ಮೂಲವಸ್ತುವಿನ ಪರ ಮಾಣುವನ್ನು B ಎಂದೂ ಸೂಚಿಸಿದರೆ ಈ ಎರಡು ಪರಮಾಣುಗಳೂ ಒಂದೊಂದು ಇರುವ ಸಂಯುಕ್ತದ ಅಣುವನ್ನು A B ಎಂದು ಸೂಚಿಸಬಹುದು. ಹಾಗೆಯೆ C D ಎಂಬುದು C ಎಂಬ ಒಂದು ಪರಮಾಣು ಮತ್ತು D ಎಂಬ ಒಂದು ಪರ ಮಾಣುವಿನಿಂದಾದ ಸಂಯುಕ್ತದ ಅಣುವನ್ನು ಸೂಚಿಸುವುದು. ಕೆಲವು ವೇಳೆ ಇಂತಹ ಎರಡು ಅಣುಗಳು, ಪರಮಾಣುಗಳನ್ನು ವಿನಿಮಯ ಮಾಡಿಕೊಳ್ಳುವುವು. A B ಮತ್ತು C D ಅಣುಗಳು ಪರಸ್ಪರ ವರ್ತಿಸಿ A D ಮತ್ತು B C ಅಣು ಗಳಾಗಬಹುದು. ಇದನ್ನು AB+CD=AD+BC ಎಂಬ ಚಿತ್ರದಿಂದ ಸೂಚಿಸ ಬಹುದು. ಹೀಗೆ ರಸಾಯನಿಕ ಕ್ರಿಯೆಗಳನ್ನು ಚಿತ್ರಿಸಬಹುದು. ರಸಾಯನ ಶಾಸ್ತ್ರ ಜ್ಞರು ಮೂಲ ವಸ್ತುವಿನ ಪರಮಾಣುಗಳನ್ನೂ ಆಯಾಯ ಮೂಲ ವಸ್ತುವಿನ ಹೆಸರಿನ, ಮೊದಲನೆಯ ಅಕ್ಷರದಿಂದ ಸೂಚಿಸುವರು. ಅನೇಕ ಮೂಲವಸ್ತುಗಳ

ಮೊದಲನೆಯ ಅಕ್ಷರ ಒಂದೇ ಆಗಿರುವುದರಿಂದ ಇಂಥ ಸಂದರ್ಭಗಳಲ್ಲಿ ಮೊದಲ ನೆಯ ಅಕ್ಷರದ ಜೊತೆಗೆ ಎರಡನೆಯ ಅಥವಾ ಬೇರೊಂದು ಅಕ್ಷರವನ್ನು ಸೇರಿಸಿ ಬರೆಯುವರು. ಈ ರೀತಿಯ ಚಿತ್ರಗಳಿಂದ ಅಣುಗಳ ರಚನೆಯ ಮತ್ತು ರಾಸಾ ಯನಿಕ ಕ್ರಿಯೆಗಳ ವಿಷಯದಲ್ಲಿ ಹೆಚ್ಚು ಸ್ಪಷ್ಟವಾದ ಭಾವನೆಗಳನ್ನು ಹೊಂದಲು ಅವಕಾಶವಾಯಿತು.

ಪರಮಾಣುವಾದದಿಂದ ಮೂಲವಸ್ತುಗಳು ಸಂಯೋಜಿಸಿದಾಗ ಅವುಗಳು ಕೆಲವು ನಿಯಮಗಳಿಗೆ ಅನುಸಾರವಾಗಿ ಏಕೆ ಆಗುವುದೆಂದು ತಿಳಿಯಲು ಸಾಧ್ಯ ವಾಗಿದೆ. ನಾವು ಹಿಂದೆ ಉದಾಹರಣೆಯಾಗಿ ತೆಗೆದುಕೊಂಡ ತಾಮ್ರದ ಆಕ್ಸೈಡನ್ನು ತೆಗೆದುಕೊಳ್ಳೋಣ. ತಾಮ್ರದ ಪರಮಾಣುವು ಆಮ್ಲಜನಕದ ಪರಮಾಣುವಿನ ನಾಲ್ಕರಷ್ಟು ತೂಕವಾಗಿರುವುದೆಂದು ಕೆಲವು ಪ್ರಯೋಗಗಳಿಂದ ನಿರ್ಣಯಿಸಿರುವರು. ತಾಮ್ರದ ಪರಮಾಣುವನ್ನು Cu ಎಂದೂ ಆಮ್ಲಜನಕದ ಪರಮಾಣುವನ್ನು O ಎಂದೂ ಚಿತ್ರಿಸಿದರೆ, ಇವುಗಳಿಂದಾದ ಅತ್ಯಂತ ಸರಳವಾದ ಸಂಯುಕ್ತದ ಅಣುವಿ ನಲ್ಲಿ ಒಂದು ತಾಮ್ರದ ಪರಮಾಣುವೂ, ಒಂದು ಆಮ್ಲಜನಕದ ಪರಮಾಣುವೂ ಇರುವುದು. ಇದನ್ನು CuO ಎಂದು ಸೂಚಿಸಬಹುದು. ತಾಮ್ರದ ಪರಮಾಣುವು ಆಮ್ಲಜನಕದ ಪರಮಾಣುವಿನ ನಾಲ್ಕರಷ್ಟು ತೂಗುವುದರಿಂದ, ಈ ಅಣುವಿನಲ್ಲಿ ತಾಮ್ರದ ತೂಕ ಎಂಟು ಪಾಲಾದರೆ, ಆಮ್ಲಜನಕದ ತೂಕ ಎರಡು ಪಾಲಿರಬೇಕು. ನಾವು ಎಷ್ಟೇ ತೂಕ ಈ ತಾಮ್ರದ ಆಕ್ಸೈಡನ್ನು ತೆಗೆದುಕೊಂಡರೂ ಅದು ಒಂದೇ ರೀತಿಯ ಅಣುಗಳ ಗುಂಪಾಗಿರುವುದರಿಂದ ಅದರಲ್ಲಿ ಪ್ರತಿ ಎಂಟು ಪಾಲು ತೂಕ ತಾಮ್ರದೊಡನೆ ಸೇರಿರುವ ಆಮ್ಲಜನಕದ ತೂಕ ಎರಡು ಪಾಲಾಗಿರಬೇಕು. ಮೂಲ ವಸ್ತುಗಳು ಸಂಯೋಜಿಸಿದಾಗ ನಿಯತಪ್ರಮಾಣ ನಿಯಮವನ್ನು ಏಕೆ ಅನುಸರಿಸು ವುವು ಎಂದು ಇದರಿಂದ ಸ್ಪಷ್ಟವಾಗುವುದು.

ಪರಮಾಣುಗಳನ್ನು ವಿಭಜಿಸಲು ಸಾಧ್ಯವಿಲ್ಲವೆಂಬುದನ್ನು ನಾವು ಗಮನಕ್ಕೆ ತಂದುಕೊಂಡರೆ ತಾಮ್ರ ಮತ್ತು ಆಮ್ಲಜನಕಗಳು ಮತ್ತೊಂದು ಅತ್ಯಂತ ಸರಳ ರೀತಿಯಲ್ಲಿ ಸಂಯೋಜಿಸಿ ಆದ ಸಂಯುಕ್ತದ ಅಣುವಿನಲ್ಲಿ ತಾಮ್ರದ ಎರಡು ಪರ ಮಾಣುವಿನೊಡನೆ ಆಮ್ಲಜನಕದ ಒಂದು ಪರಮಾಣು ಸಂಯೋಜಿಸಿರಬೇಕು. (ಅಥವಾ ತಾಮ್ರದ ಒಂದು ಪರಮಾಣುವಿನೊಡನೆ ಆಮ್ಲಜನಕದ ಎರಡು ಪರ ಮಾಣುಗಳು ಸಂಯೋಜಿಸಿರಬೇಕು.) ಎರಡನೆಯ ಸಂಯುಕ್ತದ ಅಣುವಿನಲ್ಲಿ ತಾಮ್ರದ ಎರಡು ಪರಮಾಣುಗಳೂ ಆಮ್ಲಜನಕದ ಒಂದು ಪರಮಾಣುವೂ ಇದೆ ಎಂದು ಇಟ್ಟುಕೊಳ್ಳೋಣ. ತಾಮ್ರದ ಪರಮಾಣುವು ಆಮ್ಲಜನಕದ ನಾಲ್ಕರಷ್ಟು ತೂಗುವುದರಿಂದ ಈ ಸಂಯುಕ್ತದ ಅಣುವಿನಲ್ಲಿ ಎಂಟು ಪಾಲು ತಾಮ್ರದೊಡನೆ

ಒಂದು ಪಾಲು ಆಮ್ಲಜನಕ ಸಂಯೋಜಿಸಿರುವುದೆಂದು ವ್ಯಕ್ತವಾಗುವುದು. ಹೀಗೆ ಮೊದಲನೆಯ ಸಂಯುಕ್ತದಲ್ಲಿ ಎಂಟು ಪಾಲು ತಾಮ್ರದೊಡನೆ ಎರಡು ಪಾಲು ಆಮ್ಲಜನಕವೂ, ಎರಡನೆಯದರಲ್ಲಿ ಎಂಟು ಪಾಲು ತಾಮ್ರದೊಡನೆ ಒಂದು ಪಾಲು ಆಮ್ಲಜನಕವೂ ಸಂಯೋಜಿಸಿರುವುದರ ರಹಸ್ಯ ಇದರಿಂದ ಸ್ಪಷ್ಟವಾಗುವುದು.

ಸುಮಾರು ಒಂದೂವರೆ ಶತಮಾನಗಳ ಕಾಲ, ಈ ಪರಮಾಣುವಾದವು ಒಂದು ಅಚಲವಾದ ಸಿದ್ಧಾಂತವೆಂಬ ನಂಬಿಕೆ ವಿಜ್ಞಾನಿಗಳಲ್ಲಿ ಬೇರೂರಿತ್ತು. ಪರಮಾಣುವಾದವೂ, ಇದರಿಂದ ನಾವು ಮಾಡಿಕೊಳ್ಳಬಹುದಾದ ರಾಸಾಯನಿಕ ಸಂಯೋಜನೆಯ ಚಿತ್ರಗಳೂ, ರಸಾಯನ ಶಾಸ್ತ್ರದ ಪ್ರಗತಿಗೆ ಅತ್ಯಂತ ಹೆಚ್ಚಿನ ಬೆಂಬಲ ನೀಡಿದವು. ಆದರೆ ಈಗ್ಗೆ ಸುಮಾರು ಐವತ್ತು, ಅರವತ್ತು ವರುಷಗಳಿಂದ ನಡೆಸಿದ ಸಂಶೋಧನೆಗಳು ಮೂಲವಸ್ತುಗಳ ವಿಷಯದಲ್ಲಿಯೂ, ಪರಮಾಣುಗಳ ವಿಷಯದಲ್ಲಿಯೂ ರಸಾಯನ ಪ್ರಪಂಚದಲ್ಲಿ ಮೂಡಿದ್ದ ಆಧಾರಭೂತವಾದ ಭಾವನೆಗಳಲ್ಲಿ ಕ್ರಾಂತಿಕಾರಕವಾದ ಮಾರ್ಪಾಡುಗಳನ್ನು ತಂದಿವೆ.

ಹತ್ತೊಂಭತ್ತನೆಯ ಶತಮಾನದ ಕೊನೆಯಲ್ಲಿ ಹೆನ್ರಿ ಬೆಕ್ವೆರಲ್ ಎಂಬ ಫ್ರೆಂಚ್ ವಿಜ್ಞಾನಿಯು ಯುರ್‍ಯಾನಿಯಂ ಎಂಬ ಲೋಹವೂ, ಅದರ ಸಂಯುಕ್ತಗಳೂ, ಕಪ್ಪು ಕಾಗದವನ್ನು ಭೇದಿಸಿಕೊಂಡುಹೋಗಿ ಫೋಟೋಗ್ರಾಫಿಕ್ ಪ್ಲೇಟಿನ ಮೇಲೆ ಪರಿಣಾಮವನ್ನುಂಟುಮಾಡುವ ಒಂದು ತರಹದ ಕಿರಣಗಳನ್ನು ಸಂತತವಾಗಿ ಸೂಸುತ್ತಿರುವುವೆಂದು ಕಂಡುಹಿಡಿದನು. ಇದರ ಸಂಶೋಧನೆಯನ್ನು ಮ್ಯಾಡಂ ಕ್ಯೂರಿಯು ಮುಂದುವರಿಸಿ ಈ ರೀತಿಯಾಗಿ ವರ್ತಿಸುವ ಪೊಲೋನಿಯಂ, ಥೋರಿಯಂ ಮತ್ತು ರೇಡಿಯಂ ಎಂಬ ಇನ್ನು ಮೂರು ಮೂಲವಸ್ತುಗಳನ್ನು ಕಂಡುಹಿಡಿದಳು. ಈ ರೀತಿಯಾದ ಕಿರಣಗಳನ್ನು ಸೂಸುವ ವಸ್ತುಗಳಿಗೆ ರೇಡಿಯೋ ಆಕ್ಟಿವ್ ವಸ್ತುಗಳೆಂದು ಹೆಸರು. ಈ ವಿಶೇಷ ರೀತಿಯ ಕಿರಣಗಳನ್ನು ಸೂಸುವ ಗುಣಕ್ಕೆ ರೇಡಿಯೋ ಆ್ಯಕ್ಟಿವಿಟಿ ಎಂದು ಹೆಸರು. ಮ್ಯಾಡಂ ಕ್ಯೂರಿಯು ಕಂಡುಹಿಡಿದ ಈ ಮೂರು ರೇಡಿಯೋ ಆ್ಯಕ್ಟಿವ್ ಮೂಲವಸ್ತುಗಳಲ್ಲಿ ರೇಡಿಯಂ ಬಹಳ ಮುಖ್ಯವಾದುದು. ಇದರ ರೇಡಿಯೋ ಆ್ಯಕ್ಟಿವಿಟಿಯ ತೀಕ್ಷ್ಣತೆಯು ಯುರ್‍ಯಾನಿಯಂ ರೇಡಿಯೋ ಆ್ಯಕ್ಟಿವಿಟಿಯ ತೀಕ್ಷ್ಣತೆಗಿಂತ ಕೋಟಿಪಾಲು ಅಧಿಕವಾಗಿರುವುದು. ಮ್ಯಾಡಂ ಕ್ಯೂರಿಯು ಈ ರೇಡಿಯಮ್ಮಿನ ವಿಷಯದಲ್ಲಿ ಇನ್ನೊಂದು ಅತ್ಯಂತ ಸೋಜಿಗವಾದ ವಿಷಯವನ್ನು ಕಂಡುಹಿಡಿದಳು. ರೇಡಿಯಮ್ಮಿನ ಹತ್ತಿರದಲ್ಲಿ ಯಾವಾಗಲೂ ಹೀಲಿಯಂ ಮತ್ತು ರೇಡಾನ್ ಎಂಬ ಎರಡು ಮೂಲವಸ್ತುಗಳು ಸದಾ ಇರುವುವು. ಇವೆರಡೂ ಅನಿಲಗಳು. ಆದ್ದರಿಂದ ಇವುಗಳನ್ನು ಊದಿ

ತೆಗೆದುಹಾಕಬಹುದು. ಆದರೆ ಸ್ವಲ್ಪ ಹೊತ್ತಿನ ಮೇಲೆ ಈ ಎರಡು ಮೂಲವಸ್ತುಗಳು ಪುನಃ ಅಲ್ಲಿ ಶೇಖರಿಸುವುವು. ಇದರ ಅರ್ಥವೇನು? ಅವು ಹೇಗೆ ಅಲ್ಲಿ ಶೇಖರಿಸುವುವು? ರೇಡಿಯಮ್ಮಿನಿಂದ ಈ ಎರಡು ಮೂಲವಸ್ತುಗಳು ಉತ್ಪನ್ನವಾಗುವುವೆಂಬ ವಿವರಣೆಯಲ್ಲದೆ ಬೇರೆ ಯಾವ ವಿವರಣೆಯನ್ನೂ ಕೊಡಲು ಸಾಧ್ಯವಿಲ್ಲ. ಹಾಗಾದರೆ ರೇಡಿಯಂ ಮೂಲವಸ್ತುವಲ್ಲವೆ? ರೇಡಿಯಂ ಮೂಲವಸ್ತು ಎನ್ನುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಇದು ತನ್ನದೇ ಆದ ಸ್ಪೆಕ್ಟ್ರಮ್ಮನ್ನು ಹೊಂದಿದೆ. ಇದು ಸಂಯುಕ್ತವಾಗಿದ್ದಲ್ಲಿ ಇದರ ಸ್ಪೆಕ್ಟ್ರಂನಲ್ಲಿ ಹೀಲಿಯಂ ಮತ್ತು ರೇಡಾನುಗಳ ಸ್ಪೆಕ್ಟ್ರಂನಲ್ಲಿರುವ ಗೆರೆಗಳು ಕಾಣಬೇಕು. ರೇಡಿಯಂ ಸ್ಪೆಕ್ಟ್ರಂನ ಗೆರೆಗಳೇ ಬೇರೆ. ಹೀಲಿಯಂ ಮತ್ತು ರೇಡಾನ್‌ಗಳ ಸ್ಪೆಕ್ಟ್ರಂ ಗೆರೆಗಳೇ ಬೇರೆ. ರೇಡಿಯಂ ತನ್ನದೇ ಆದ ಎಕ್ಸ್‌ರೇ ಸ್ಪೆಕ್ಟ್ರಂನ್ನು ಕೊಡುವುದು. ರೇಡಿಯಂ ಮೂಲವಸ್ತುವಲ್ಲದಿದ್ದರೆ ಇದು ಹೇಗೆ ಸಾಧ್ಯ? ಇದು ರೇಡಾನ್ ಮತ್ತು ಹೀಲಿಯಂಗಳ ಸಂಯುಕ್ತವಾಗಿದ್ದರೆ, ರೇಡಾನ್ ಮತ್ತು ಹೀಲಿಯಂಗಳನ್ನು ಸಂಯೋಜಿಸಿ ರೇಡಿಯಮ್ಮನ್ನು ತಯಾರಿಸುವುದು ಸಾಧ್ಯವಾಗಬೇಕಲ್ಲವೆ? ಹೀಲಿಯಂ ಮತ್ತು ರೇಡಾನುಗಳು ಪರಸ್ಪರ ಸಂಯೋಜಿಸುವುದಿರಲಿ, ಅವು ಯಾವ ಮೂಲವಸ್ತುವಿನೊಡನೆಯೂ ಸಂಯೋಜಿಸುವುದೇ ಇಲ್ಲ. ಸಂಯೋಜನೆ ಎಂದರೆ ಏನೆಂದು ಅವುಗಳಿಗೆ ಗೊತ್ತೇ ಇಲ್ಲ. ಅದೂ ಅಲ್ಲದೆ ರೇಡಿಯೋ ಆ್ಯಕ್ಟಿವಿಟಿಯು ರಸಾಯನ ಕ್ರಿಯೆಗಳಂತೆ ಇಲ್ಲವೇ ಇಲ್ಲ. ಶಾಖ ಕಮ್ಮಿಯಾದಷ್ಟೂ ಇದರ ರಭಸ ಕುಗ್ಗುವುದು. ರೇಡಿಯೋ ಆ್ಯಕ್ಟಿವಿಟಿಯ ಬಿರುಸು ಕರಗಿದ ಕಬ್ಬಿಣದ ಶಾಖದಲ್ಲಿಯೂ ಕೊರೆಯುವ ಮಂಜಿನ ಶೈತ್ಯದಲ್ಲಿಯೂ ಒಂದೇ ಆಗಿರುತ್ತದೆ. ರಾಸಾಯನಿಕ ಕ್ರಿಯೆಗಳಲ್ಲಿ ಇದು ಸಾಧ್ಯವೇ ಇಲ್ಲ. ಹಾಗಾದರೆ ಈ ಸಮಸ್ಯೆ ಬಗೆಹರಿಯುವುದು ಹೇಗೆ? ಮೂಲವಸ್ತುಗಳು ಸರಳವಸ್ತುಗಳು, ಅವುಗಳಿಂದ ಎರಡು ಬೇರೆ ಬೇರೆ ವಸ್ತುಗಳನ್ನು ಪಡೆಯಲು ಸಾಧ್ಯವಿಲ್ಲ ಎನ್ನುತ್ತೇವೆ. ರೇಡಿಯಂ ಸಂಯುಕ್ತವಲ್ಲ ಎನ್ನುತ್ತೇವೆ. ಆದರೆ ಅದರಿಂದ ಎರಡು ಮೂಲ ವಸ್ತುಗಳು ಉತ್ಪನ್ನವಾಗುವುವೆಂಬುದು ನಿರ್ವಿವಾದವಾದುದು. ಈ ಪರಸ್ಪರ ವಿರೋಧ ವಿಷಯಗಳನ್ನು ಸರಿಹೊಂದಿಸುವುದು ಹೇಗೆ?

ಈಚಿನ ಸಂಶೋಧನೆಗಳ ಫಲವಾಗಿ ಈ ಪ್ರಶ್ನೆಗಳಿಗೆಲ್ಲ ಸಮರ್ಪಕವಾದ ಉತ್ತರ ದೊರೆತಿದೆ. ಹತ್ತೊಂಬತ್ತನೆಯ ಶತಮಾನದ ಅಂತ್ಯದವರೆಗೂ ಪರಮಾಣುವು ಅಭೇದ್ಯವೂ, ಅವಿಭಾಜ್ಯವೂ, ನಾಶರಹಿತವೂ ಆದ ಸೂಕ್ಷ್ಮಕಣವೆಂದು ವಿಜ್ಞಾನಿಗಳ ಅಚಲವಾದ ನಂಬಿಕೆಯಾಗಿತ್ತು. ಆದರೆ ಇಪ್ಪತ್ತನೇ ಶತಮಾನದ ಪ್ರಾರಂಭದಿಂದ ನಡೆಸಿದ ಸಂಶೋಧನೆಗಳ ಫಲವಾಗಿ ಈ ಭಾವನೆಗಳಲ್ಲಿ ಕ್ರಾಂತಿಕಾರಕವಾದ ಬದಲಾವಣೆಗಳುಂಟಾಗಿವೆ. ಸಂಶೋಧನೆಯ ವಿವರಗಳನ್ನು ಇಲ್ಲಿ

ತಿಳಿಸಲು ಸಾಧ್ಯವಿಲ್ಲ. ಅದೇ ಒಂದು ದೊಡ್ಡ ಕಥೆ. ಅದೇ ಒಂದು ಪುಸ್ತಕವಾಗುವುದು. ಇಲ್ಲಿ ಹಿಂದಿನ ಭಾವನೆಗಳಲ್ಲಿ ಆದ ಕೆಲವು ಮುಖ್ಯವಾದ ಬದಲಾವಣೆಗಳನ್ನು ಮಾತ್ರ ತಿಳಿಸಲು ಸಾಧ್ಯ. ಪರಮಾಣುವಿನ ವಿಷಯದಲ್ಲಿ ವಿಜ್ಞಾನಿಗಳು ಹೊಂದಿದ್ದ ಭಾವನೆಗಳು ಪೂರ್ತಿಯಾಗಿ ಬದಲಾವಣೆ ಹೊಂದಿವೆ. ಪರಮಾಣುವಿನ ಆಧುನಿಕ ಚಿತ್ರವು ಸ್ಥೂಲವಾಗಿ ಕೆಳಗೆ ವಿವರಿಸಿದಂತೆ ಇರುವುದು.

ಪರಮಾಣುವು ಒಂದು ಚಿಕ್ಕ ಸೌರವ್ಯೂಹದಂತಿದೆ. ಅಂದರೆ ಸೂರ್ಯ ಮತ್ತು ಗ್ರಹಗಳು ಯಾವ ರೀತಿ ಇರುವುವೋ ಹಾಗಿದೆ.

ಪರಮಾಣುವಿನ ಮಧ್ಯದಲ್ಲಿ ನ್ಯೂಕ್ಲಿಯಸ್ ಎಂಬ ಕಣವಿದೆ. ಸೌರವ್ಯೂಹದಲ್ಲಿ ಸೂರ್ಯನಿಗಿರುವ ಸ್ಥಾನವು ಪರಮಾಣುವಿನಲ್ಲಿ ನ್ಯೂಕ್ಲಿಯಸ್ಸಿಗೆ ಇರುವುದು.

ಎಲೆಕ್ಟ್ರಾನ್ ಎಂಬ ಕಣಗಳು, ಸೂರ್ಯನ ಸುತ್ತಲೂ ಗ್ರಹಗಳು ಸುತ್ತುವಂತೆ ನ್ಯೂಕ್ಲಿಯಸ್ ಸುತ್ತಲೂ ಸುತ್ತುತ್ತಿರುವುವು. ಸೂರ್ಯನ ಆಕರ್ಷಣ ಶಕ್ತಿಯಿಂದ ಗ್ರಹಗಳು ತಮ್ಮ ಪಥವನ್ನು ಬಿಡದೆ ಚಲಿಸುವುವು. ನ್ಯೂಕ್ಲಿಯಸ್ ಮತ್ತು ಎಲೆಕ್ಟ್ರಾನುಗಳು ವಿದ್ಯುದಂಶವನ್ನು ಹೊಂದಿರುವುವು. ಆದ್ದರಿಂದ ಅವು ಪರಸ್ಪರ ಆಕರ್ಷಿತವಾಗಿ, ಎಲೆಕ್ಟ್ರಾನುಗಳು ನ್ಯೂಕ್ಲಿಯಸ್ ಸುತ್ತಲೂ ನಿರ್ದಿಷ್ಟಪಥದಲ್ಲಿ ಸುತ್ತುತ್ತಿರುವುವು.

ಸೌರವ್ಯೂಹವಿರುವ ಒಟ್ಟು ಪ್ರದೇಶವನ್ನು ಗಣನೆಗೆ ತೆಗೆದುಕೊಂಡರೆ ಸೂರ್ಯನೂ ಮತ್ತು ಗ್ರಹಗಳೂ ಅತಿ ಸ್ವಲ್ಪ ಪ್ರದೇಶವನ್ನು ಆಕ್ರಮಿಸಿರುವುವು. ಉಳಿದ ಪ್ರದೇಶವೆಲ್ಲವೂ ಶೂನ್ಯ ಪ್ರದೇಶ. ಪರಮಾಣುವಿನಲ್ಲಿಯೂ ಅಷ್ಟೆ. ಪರಮಾಣು ಒಟ್ಟು ಆಕ್ರಮಿಸಿರುವ ಪ್ರದೇಶದೊಡನೆ ಹೋಲಿಸಿದರೆ, ನ್ಯೂಕ್ಲಿಯಸ್ ಮತ್ತು ಎಲೆಕ್ಟ್ರಾನುಗಳು ಆಕ್ರಮಿಸಿರುವ ಪ್ರದೇಶ ಅತಿ ಸ್ವಲ್ಪ. ಒಂದು ಪರಮಾಣುವನ್ನು ಎರಡು ಮೈಲಿ ವ್ಯಾಸವಿರುವ ಒಂದು ಗೋಳದಷ್ಟು ದೊಡ್ಡದು ಮಾಡಿದರೆ, ನ್ಯೂಕ್ಲಿಯಸ್ಸು ಅದರ ಮಧ್ಯದಲ್ಲಿ ಒಂದಡಿ ವ್ಯಾಸದ ಚಂಡಿನಂತೆ ಕಾಣುವುದು. ಸ್ವಲ್ಪ ಹೆಚ್ಚು ಕಮ್ಮಿ ಅದೇ ಗಾತ್ರದ ಎಲೆಕ್ಟ್ರಾನುಗಳು ಅಲ್ಲೊಂದು ಇಲ್ಲೊಂದು ಆಟದ ಬೆಲೂನುಗಳಂತೆ ಆ ಎರಡು ಮೈಲಿಯ ಅಂತರದಲ್ಲಿ ಚಲಿಸುತ್ತಿರುವುವು. ಉಳಿದ ಪ್ರದೇಶವೆಲ್ಲ ಬರಿದು.

ಪರಮಾಣುಗಳ ನ್ಯೂಕ್ಲಿಯಸ್ಸುಗಳಲ್ಲಿ ಎರಡು ಜಾತಿಯ ಕಣಗಳಿರುವುವು. ಒಂದು ತರಹದ ಕಣಗಳಿಗೆ ಪ್ರೋಟಾನ್ ಎಂದು ಹೆಸರು. ಇದರ ತೂಕ ಒಂದು. ಅಂದರೆ ಒಂದು ಜಲಜನಕದ ಪರಮಾಣುವಿನ ತೂಕದಷ್ಟೇ ಇರುವುದು. ಇದು ಒಂದು ಮಾನ ಧನ (positive) ವಿದ್ಯುದಂಶವನ್ನು ಹೊಂದಿರುವುದು. ಇನ್ನೊಂದು ತರಹದ ಕಣಗಳಿಗೆ ನ್ಯೂಟ್ರಾನ್ ಎಂದು ಹೆಸರು. ಇದರ ತೂಕವೂ

ಒಂದು. ಅಂದರೆ ಒಂದು ಪ್ರೋಟಾನು ತೂಗಿದಷ್ಟೇ ತೂಗುವುದು. ಆದರೆ ಇದು ವಿದ್ಯುದಂಶವನ್ನು ಹೊಂದಿಲ್ಲ.

ಎಲೆಕ್ಟ್ರಾನುಗಳ ತೂಕ ಬಹಳ ಕಡಿಮೆ. ಸುಮಾರು ಎರಡುಸಾವಿರ ಎಲೆಕ್ಟ್ರಾನುಗಳ ತೂಕವು ಒಂದು ಪ್ರೋಟಾನಿನ ತೂಕಕ್ಕೆ ಸಮವಾಗಿರುವುದು. ಇದು ಒಂದು ಮಾನ ಋಣ (negative) ವಿದ್ಯುದಂಶವನ್ನು ಹೊಂದಿದೆ. ಇದರ ವಿದ್ಯುದಂಶವೂ, ಪ್ರೋಟಾನಿನ ವಿದ್ಯುದಂಶವೂ ಪ್ರಮಾಣದಲ್ಲಿ ಸಮವಾದರೂ, ವಿರುದ್ಧ ವಿದ್ಯುತ್ತುಗಳು. ಆದ್ದರಿಂದಲೇ ಪರಸ್ಪರ ಆಕರ್ಷಿತವಾಗಿ ಎಲೆಕ್ಟ್ರಾನು ನೂಕ್ಲಿಯಸ್ ಸುತ್ತಲೂ ತಿರುಗುವುದು. ಈ ವಿಷಯವನ್ನು ಆಗಲೇ ಮೇಲೆ ಹೇಳಿದೆ.

ಬೇರೆ ಬೇರೆ ಮೂಲವಸ್ತುಗಳ ಪರಮಾಣುಗಳ ರಚನೆಯು ಕೆಲವು ವಿಷಯಗಳಲ್ಲಿ ಬೇರೆ ಬೇರೆಯಾಗಿರುವುದು. ಬೇರೆ ಬೇರೆ ಮೂಲವಸ್ತುಗಳ ಪರಮಾಣುಗಳ ನ್ಯೂಕ್ಲಿಯಸ್ಸುಗಳಲ್ಲಿರುವ ಪ್ರೋಟಾನುಗಳ ಸಂಖ್ಯೆಯೂ ಮತ್ತೂ ನ್ಯೂಟ್ರಾನುಗಳ ಸಂಖ್ಯೆಯೂ ಸಾಮಾನ್ಯವಾಗಿ ಬೇರೆ ಬೇರೆಯಾಗಿರುವುವು. ಕೆಲವು ಸಂದರ್ಭಗಳಲ್ಲಿ ಬೇರೆ ಮೂಲವಸ್ತುಗಳ ಪರಮಾಣುಗಳಲ್ಲಿರುವ ನ್ಯೂಟ್ರಾನುಗಳ ಸಂಖ್ಯೆಯು ಒಂದೇ ಆಗಿರಬಹುದು. ಆದರೆ ಪ್ರೋಟಾನುಗಳ ಸಂಖ್ಯೆ ಮಾತ್ರ ಯಾವೆರಡು ಮೂಲವಸ್ತುಗಳ ಪರಮಾಣುಗಳಲ್ಲಿಯೂ ಸಮನಾಗಿರುವುದಿಲ್ಲ. ಪ್ರತಿಯೊಂದು ಮೂಲವಸ್ತುವಿನ ಪರಮಾಣುವಿನಲ್ಲಿಯೂ ಪ್ರೋಟಾನುಗಳ ಸಂಖ್ಯೆಯು ನಿಯತವಾಗಿರುವುದು. ಒಂದು ಮೂಲವಸ್ತುವಿನ ಪರಮಾಣುವಿನಲ್ಲಿರುವ ಪ್ರೋಟಾನುಗಳ ಸಂಖ್ಯೆಗೆ ಪರಮಾಣು ಸಂಖ್ಯೆ ಎಂದು ಹೆಸರು. ಪರಮಾಣು ಸಂಖ್ಯೆ ಮೂಲವಸ್ತುವಿನ ಒಂದು ವೈಶಿಷ್ಟ್ಯ. ಒಂದು ಮೂಲವಸ್ತುವಿನ ಪರಮಾಣು ಸಂಖ್ಯೆ ಗೊತ್ತಾದರೆ, ಅದು ಯಾವ ಮೂಲವಸ್ತುವೆಂದು ಹೇಳಬಹುದು. ಒಂದು ಪರಮಾಣುವಿನಲ್ಲಿ ಎಷ್ಟು ಪ್ರೋಟಾನುಗಳಿವೆಯೋ ಅಷ್ಟೇ ಎಲೆಕ್ಟ್ರಾನುಗಳಿರುವುವು.



1. ಹೈಡ್ರೊಜಿನ್ ಪರಮಾಣು



2. ಹೀಲಿಯಂ ಪರಮಾಣು



3. ಲಿಥಿಯಂ ಪರಮಾಣು



4. ಬೆರಿಲಿಯಂ
ಪರಮಾಣು



5. ಬೋರಾನ್
ಪರಮಾಣು



6. ಇಂಗಾಲದ
ಪರಮಾಣು

● ನ್ಯೂಕ್ಲಿಯಸ್

ಎಲೆಕ್ಟ್ರಾನ್ ಪಥಗಳು. ಎಲೆಕ್ಟ್ರಾನುಗಳು ನ್ಯೂಕ್ಲಿಯಸ್ ಸುತ್ತ ತಿರುಗುವ ಮಾರ್ಗ

ಹೈಡ್ರೊಜಿನ್‌ನಿಂದ ಇಂಗಾಲದ ವರೆಗೂ ನ್ಯೂಕ್ಲಿಯಸ್ ಸುತ್ತಲೂ ಸುತ್ತುವ ಎಲೆಕ್ಟ್ರಾನ್‌ಗಳ ಸಂಖ್ಯೆ ಒಂದರಿಂದ ಆರರವರೆಗೆ ಕ್ರಮವಾಗಿ ಜಾಸ್ತಿಯಾಗುತ್ತಾ ಹೋಗಿದೆ. ಹೀಗೆಯೇ ಜಾಸ್ತಿಯಾಗುತ್ತಾ ಹೋಗಿ, 100 ನೆಯ ಮೂಲವಸ್ತುವಿನಲ್ಲಿ ಎಲೆಕ್ಟ್ರಾನುಗಳ ಸಂಖ್ಯೆ 100 ಆಗುವುದು.




ಸೌರವ್ಯೂಹ

1. ಸೂರ್ಯ, 2. ಬುಧ, 3. ಶುಕ್ರ, 4. ಭೂಮಿ, 5. ಅಂಗಾರಕ, 6. ಗುರು, 7. ಶನಿ.

**ವಿ. ಸೂ.** : ಇದರಲ್ಲಿ ಕೊಟ್ಟಿರುವ ಚಿತ್ರಗಳು ಹೆಚ್ಚು ಕಷ್ಟವಿಲ್ಲದೆ ವಿಷಯವನ್ನು ಗ್ರಹಿಸಲು ಬರೆದ ಚಿತ್ರಗಳು. ಇವು ಸ್ಥೂಲವಾಗಿರುವ ಚಿತ್ರಗಳು ಅಷ್ಟೆ.

ಎಲೆಕ್ಟ್ರಾನುಗಳ ತೂಕ ಅತ್ಯಲ್ಪ. ಅದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೇ ಹೋದರೆ ಒಂದು ಪರಮಾಣುವಿನ ತೂಕ ಅದರಲ್ಲಿರುವ ಪ್ರೋಟಾನ್ ಮತ್ತು ನ್ಯೂಟ್ರಾನುಗಳ ಒಟ್ಟು ತೂಕಕ್ಕೆ ಸಮವಾಗಿರುವುದು. ಪ್ರತಿ ಪ್ರೋಟಾನಿನ ತೂಕವೂ ಮತ್ತು ಪ್ರತಿ ನ್ಯೂಟ್ರಾನಿನ ತೂಕವೂ ಒಂದು. ಆದ್ದರಿಂದ ಪರಮಾಣುವಿನಲ್ಲಿರುವ ಪ್ರೋಟಾನ್ ಮತ್ತು ನ್ಯೂಟ್ರಾನುಗಳ ಒಟ್ಟು ಸಂಖ್ಯೆ ಪರಮಾಣು ತೂಕಕ್ಕೆ ಸಮವಾಗಿರುವುದು. ಈ ವಿಷಯುಗಳನ್ನು ವಿಶದಪಡಿಸಲು ಕೆಲವು ಉದಾಹರಣೆಗಳನ್ನು ಕೆಳಗೆ ಕೊಟ್ಟಿದೆ. ಪ್ರತಿಯೊಂದು ಮೂಲವಸ್ತುವಿನ ವಿಷಯದಲ್ಲಿಯೂ ಪರಮಾಣುವಿನ ನ್ಯೂಕ್ಲಿಯಸ್ ರಚನೆಯನ್ನು ಮಾತ್ರ ಕೊಟ್ಟಿದೆ. ಪ್ರತಿ ಸಂದರ್ಭದಲ್ಲಿಯೂ, ಎಲೆಕ್ಟ್ರಾನುಗಳ ಸಂಖ್ಯೆ ಪ್ರೋಟಾನುಗಳ ಸಂಖ್ಯೆಗೆ ಸಮವಾಗಿರುವುದೆಂದು ತಿಳಿಯಬೇಕು. ಇವುಗಳು ನ್ಯೂಕ್ಲಿಯಸ್ ಸುತ್ತ ಸುತ್ತುತ್ತಿರುವುವು. ಇದನ್ನು ಚಿತ್ರದಲ್ಲಿ ತೋರಿಸಿಲ್ಲ.



1. ಹೀಲಿಯಂ ನ್ಯೂಕ್ಲಿಯಸ್

○ = ಪ್ರೋಟಾನ್

● = ನ್ಯೂಟ್ರಾನ್

| | | |
|---|---|---|
| ಪ್ರೋಟಾನುಗಳ ಸಂಖ್ಯೆ ಅಥವಾ ಪರಮಾಣು ಸಂಖ್ಯೆ | = | 2 |
| ನ್ಯೂಟ್ರಾನುಗಳ ,, | = | 2 |
| ಪರಮಾಣು ತೂಕ | = | 4 |



ಇಂಗಾಲದ ನ್ಯೂಕ್ಲಿಯಸ್

| | | |
|---|---|---|
| ಪರಮಾಣು ಸಂಖ್ಯೆ | = | 6 |
| ನ್ಯೂಟ್ರಾನುಗಳ ,, | = | 6 |
| ಪರಮಾಣು ತೂಕ | = | 12 |



ಆಮ್ಲಜನಕದ ನ್ಯೂಕ್ಲಿಯಸ್

| | | |
|---|---|---|
| ಪರಮಾಣು ಸಂಖ್ಯೆ | = | 8 |
| ನ್ಯೂಟ್ರಾನುಗಳ ,, | = | 8 |
| ಪರಮಾಣು ತೂಕ | = | 16 |



ಸೋಡಿಯಂ ನ್ಯೂಕ್ಲಿಯಸ್

| | | |
|---|---|---|
| ಪರಮಾಣು ಸಂಖ್ಯೆ | = | 11 |
| ನ್ಯೂಟ್ರಾನ್ ,, | = | 12 |
| ಪರಮಾಣು ತೂಕ | = | 23 |



**ರೇಡಿಯಂ ನ್ಯೂಕ್ಲಿಯಸ್**

ರೇಡಿಯಂ ನ್ಯೂಕ್ಲಿಯಸ್

| | | |
|---|---|---|
| ಪರಮಾಣು ಸಂಖ್ಯೆ | = | 88 |
| ನ್ಯೂಟ್ರಾನ್ ,, | = | 138 |
| ಪರಮಾಣು ತೂಕ | = | 226 |

ಪರಮಾಣು ರಚನೆಯ ವಿಷಯದಲ್ಲಿ ತಿಳಿಯಬೇಕಾದ ಇನ್ನೊಂದು ಮುಖ್ಯ ಅಂಶವಿದೆ. ಒಂದು ಮೂಲವಸ್ತುವಿನ ಪರಮಾಣು ತೂಕ ನಿಯತವಾಗಿದೆಯೆಂದು ಹಿಂದಿನ ಭಾವನೆಯಾಗಿತ್ತು. ಜಲಜನಕ (ಹೈಡ್ರೊಜನ್) ವನ್ನು ತೆಗೆದು ಕೊಳ್ಳೋಣ. ಇದರ ಪರಮಾಣು ತೂಕ ಒಂದು. ಅಂದರೆ ಹೈಡ್ರೊಜನ್ನಿನ ಯಾವ ಪರಮಾಣುವನ್ನೇ ತೆಗೆದುಕೊಳ್ಳಲಿ, ಅದರ ತೂಕ ಒಂದು ಎಂದು ಭಾವಿಸಿತ್ತು. ಹಾಗೆಯೇ ಪ್ರತಿಯೊಂದು ಆಮ್ಲಜನಕದ ಪರಮಾಣುತೂಕವೂ 16. ಅದು ವ್ಯತ್ಯಾಸವಾಗಲು ಸಾಧ್ಯವಿಲ್ಲವೆಂದು ಭಾವಿಸಿತ್ತು. ಆದರೆ ಆಧುನಿಕ ಭಾವನೆಗಳ ಪ್ರಕಾರ, ಪರಮಾಣು ಸಂಖ್ಯೆಯು ಅಂದರೆ ಒಂದು ಪರಮಾಣುವಿನಲ್ಲಿರುವ ಪ್ರೋಟಾನುಗಳ ಸಂಖ್ಯೆ ನಿಯತ. ಇದು ಅಚಲ. ಆದರೆ ಒಂದು ಮೂಲವಸ್ತುವು ಬೇರೆ ಬೇರೆ ತೂಕಗಳುಳ್ಳ ಪರಮಾಣುಗಳನ್ನು ಹೊಂದಿರಬಹುದು. ಜಲಜನಕವನ್ನು ತೆಗೆದುಕೊಳ್ಳೋಣ. ಇದರಲ್ಲಿ ಎರಡು ತರಹ ಪರಮಾಣುಗಳಿವೆ. ಒಂದು ತರಹದ ಪರಮಾಣುವಿನ ನ್ಯೂಕ್ಲಿಯಸ್ಸಿನಲ್ಲಿ ಒಂದೇ ಒಂದು ಪ್ರೋಟಾನಿದೆ. ಇದರ ನ್ಯೂಕ್ಲಿಯಸ್ಸಿನಲ್ಲಿ ನ್ಯೂಟ್ರಾನ್ ಇಲ್ಲ. ಆದ್ದರಿಂದ ಇದರ ಪರಮಾಣು ಸಂಖ್ಯೆ ಒಂದು. ಪರಮಾಣು ತೂಕವೂ ಒಂದು. ಇನ್ನೊಂದು ತರಹದ ಹೈಡ್ರೊಜಿನ್ ಪರಮಾಣುವಿನ ನ್ಯೂಕ್ಲಿಯಸ್ಸಿನಲ್ಲಿ ಒಂದು ಪ್ರೋಟಾನೂ ಮತ್ತು ಒಂದು ನ್ಯೂಟ್ರಾನೂ ಇದೆ. ಒಂದು ಪ್ರೋಟಾನು ಇರುವುದರಿಂದ ಇದರ ಪರಮಾಣು ಸಂಖ್ಯೆ ಒಂದು. ಪರಮಾಣು ತೂಕವು ಪ್ರೋಟಾನ್ ಮತ್ತು ನ್ಯೂಟ್ರಾನುಗಳ ಒಟ್ಟು ಸಂಖ್ಯೆಗೆ ಸಮವಾದ್ದರಿಂದ ಇದರ ಪರಮಾಣು ತೂಕ ಎರಡು. ಆದರೆ ಎರಡು ತರಹದ ಪರಮಾಣುಗಳು ಜಲಜನಕದ ಪರಮಾಣುಗಳೇ. ಏಕೆಂದರೆ ಇವೆರಡರಲ್ಲಿಯೂ ಪರಮಾಣುಗಳ ಸಂಖ್ಯೆ ಒಂದು. ಈ ಎರಡು ತರಹದ ಪರಮಾಣುಗಳನ್ನು ಹೈಡ್ರೊಜನ್ನಿನ ಐಸೋಟೋಪುಗಳೆಂದು ಕರೆಯುವರು. ಈ ಎರಡು ಪರಮಾಣುಗಳ ಚಿತ್ರವನ್ನು ಕೆಳಗೆ ಕೊಟ್ಟದೆ.



ಹಾಗೆಯೇ ಆಕ್ಸಿಜನ್ನಿನಲ್ಲಿ ಮೂರು ಐಸೋಟೋಪುಗಳಿವೆ. ಈ ಮೂರು ಐಸೋಟೋಪುಗಳ ಪರಮಾಣುಗಳಲ್ಲಿಯೂ ಎಂಟು ಪ್ರೋಟಾನುಗಳಿವೆ. ಆದ್ದರಿಂದ ಇವೆಲ್ಲದರ ಪರಮಾಣು ಸಂಖ್ಯೆ ಎಂಟು. ಆದರೆ ಒಂದು ಐಸೋಟೋಪಿನಲ್ಲಿ ಎಂಟು, ಎರಡನೆಯದರಲ್ಲಿ ಒಂಬತ್ತು, ಮೂರನೆಯದರಲ್ಲಿ ಹತ್ತು ನ್ಯೂಟ್ರಾನುಗಳಿವೆ. ಆದ್ದರಿಂದ ಈ ಐಸೋಟೋಪುಗಳ ಪರಮಾಣು ತೂಕಗಳು 16, 17 ಮತ್ತು 18 ಆಗಿರುತ್ತೆ. ಈ ಮೂರು ಐಸೊಟೋಪುಗಳ ನ್ಯೂಕ್ಲಿಯಸ್ಸುಗಳ ಚಿತ್ರವನ್ನು ಕೆಳಗೆ ಕೊಟ್ಟಿದೆ.



| | | | |
|---|---|---|---|
| ಪ.ಸಂ. | 8 | 8 | 8 |
| ಪ. ತೂ. | 16 | 17 | 18 |

ಆಕ್ಸಿಜನ್ ಐಸೋಟೋಪುಗಳು

ಹಾಗಾದರೆ ಹಳೆಯ ಭಾವನೆಗಳಲ್ಲಿ ಉಳಿದಿರುವುದೇನು? ಹಳೆಯ ಭಾವನೆಗಳಲ್ಲಿ ಒಂದು ವಿಷಯ ಮಾತ್ರ ವ್ಯತ್ಯಾಸವಾಗಿಲ್ಲ. ಪರಮಾಣುವು ರಾಸಾಯನಿಕ ಸಂಯೋಜನೆಯಲ್ಲಿ ಭಾಗವಹಿಸುವ ಮೂಲವಸ್ತುವಿನ ಅತ್ಯಂತ ಚಿಕ್ಕ ಕಣ. ಪರಮಾಣುವು ನ್ಯೂಟ್ರಾನ್ ಪ್ರೋಟಾನ್ ಮತ್ತು ಎಲೆಕ್ಟ್ರಾನುಗಳಿಂದಾಗಿರಬಹುದು. ಇದು ವಿಭಾಜ್ಯವಾಗಿರಬಹುದು, ಭೇದ್ಯವಾಗಿರಬಹುದು. ಆದರೆ ರಾಸಾಯನಿಕ ಕ್ರಿಯೆಗಳಲ್ಲಿ ಒಂದು ಪರಮಾಣುವಿಗಿಂತ ಚಿಕ್ಕ ಕಣವು ಭಾಗ ವಹಿಸಲು ಸಾಧ್ಯವಿಲ್ಲ. ನಮ್ಮ ಇಟ್ಟಿಗೆಯ ಒಳರಚನೆಯು ಜಟಿಲವಾಗಿರಬಹುದು. ಪರಮಾಣುಗಳು ಸಂಯುಕ್ತಗಳ ಕಟ್ಟಡಕ್ಕೆ ಆಧಾರಭೂತಗಳಾದ ಇಟ್ಟಿಗೆಗಳಾಗಿರುವುವು.

ವಾಚಕರಿಗೆ ತೋರಬಹುದು; ಸೀಸದ ಗುಂಡುಗಳ ಹಾಗೆ ದುಂಡಗೆ, ನಯವಾಗಿ, ಅಭೇದ್ಯವಾಗಿ, ಅವಿಭಾಜ್ಯವಾಗಿದ್ದ ಪರಮಾಣುವಿನ ಚಿತ್ರವು ಎಷ್ಟು ಸರಳವಾಗಿತ್ತು. ಅದರ ಬದಲು ಇಷ್ಟೊಂದು ಜಟಿಲವಾದ ಚಿತ್ರವನ್ನು ರಚಿಸಿದ್ದಾರಲ್ಲ, ಅದೇಕೆ? ಪರಮಾಣುಗಳನ್ನು ನೋಡಬಹುದಾದಂಥ ಸಾಧನವನ್ನೇನಾದರೂ ವಿಜ್ಞಾನಿಗಳು ಕಂಡುಹಿಡಿದಿದ್ದಾರೆಯೇ? ಈ ಪ್ರೋಟಾನುಗಳು, ಈ ನ್ಯೂಟ್ರಾನುಗಳು, ಈ ಎಲೆಕ್ಟ್ರಾನುಗಳು ಇವನ್ನೆಲ್ಲಾ ವಿಜ್ಞಾನಿಗಳು ನೋಡಿದ್ದಾರೆಯೆ? ಇಲ್ಲದಿದ್ದರೆ ಇಷ್ಟೊಂದು ಜಟಿಲವಾದ ಚಿತ್ರ ಏಕೆ? ಈ ಯೋಚನೆಯು ಸಹಜವಾದುದೇ.

ವಿಜ್ಞಾನಿಗಳು ಪರಮಾಣುವನ್ನು ನೋಡಿಯೂ ಇಲ್ಲ, ನೋಡುವ ಸಾಧನವನ್ನು ಕಂಡುಹಿಡಿದೂ ಇಲ್ಲ. ಕಂಡುಹಿಡಿಯುವ ಸಂಭವವೂ ಇಲ್ಲ. ಆದರೆ ಎಲ್ಲಿಯ ವರೆಗೆ ಪ್ರಯೋಗ ಫಲಿತಾಂಶಗಳನ್ನು ಒಂದು ವಾದವು, ಒಂದು ಮನೋಚಿತ್ರವು, ಸಮರ್ಪಕವಾಗಿ ವಿವರಿಸುವುದೋ ಅಲ್ಲಿಯವರೆಗೆ ಆ ಮನೋಚಿತ್ರವು ಸರಿಯಾಗಿದೆ ಎಂದು ನಂಬುತ್ತೇವೆ. ಯಾವಾಗ ಪ್ರಯೋಗ ಫಲಿತಾಂಶಗಳನ್ನು ಸಮರ್ಪಕವಾಗಿ ಒಂದು ವಾದದಿಂದ ವಿವರಿಸಲು ಸಾಧ್ಯವಿಲ್ಲವೋ, ಆಗ ಆ ವಾದದಲ್ಲಿ ಏನೋ ನ್ಯೂನತೆ ಇರಬೇಕೆಂದು ಮನಗಾಣುತ್ತೇವೆ. ಆಗ ಪ್ರಯೋಗದ ಫಲಿತಾಂಶಗಳೆಲ್ಲ ವನ್ನೂ ಸಮರ್ಪಕವಾಗಿ ವಿವರಿಸತಕ್ಕ ಬದಲಾವಣೆಗಳನ್ನು ನಮ್ಮ ವಾದದಲ್ಲಿ ಮಾಡುತ್ತೇವೆ. ವಾದ ಒಂದು ಊಹೆ. ಈ ಊಹೆ ಇವತ್ತು ನಮಗೆ ತಿಳಿದಿರುವ ವಿಷಯಗಳನ್ನು ವಿವರಿಸಬಹುದು. ನಾಳೆ ಕಂಡುಹಿಡಿದ ಹೊಸದೊಂದು ವಿಷಯ ವನ್ನು ಈ ನಮ್ಮ ವಾದ ವಿವರಿಸಲಾರದೇ ಹೋದರೆ ನಮ್ಮ ಊಹೆಯಲ್ಲಿ ಏನೋ ಕುಂದಿರಬೇಕಲ್ಲವೆ? ಈ ಕುಂದನ್ನು ಹೋಗಲಾಡಿಸುವುದಕ್ಕೇ ನಮ್ಮ ವಾದವನ್ನು ಮಾರ್ಪಡಿಸುವುದು. ವಿಜ್ಞಾನದ ಪ್ರಗತಿಯು ಈ ರೀತಿಯಲ್ಲಿಯೇ ಆಗುವುದು. ರೇಡಿಯೋ ಆ್ಯಕ್ಟಿವ್ ಸಮಸ್ಯೆಯನ್ನು ಸಮರ್ಪಕವಾಗಿ ವಿವರಿಸಲು ಹಳೆಯ ಪರ ಮಾಣು ಚಿತ್ರದಿಂದ ಸಾದ್ಯವಿಲ್ಲವೆಂದು ಆಗಲೇ ನೋಡಿದ್ದೇವೆ. ಈ ಲೇಖನದ ಪರಿಮಿತಿಗೆ ಮೀರಿದ ಇತ್ತೀಚಿಗೆ ಕಂಡುಹಿಡಿದ ಇನ್ನೂ ಎಷ್ಟೋ ಹೊಸವಿಷಯ ಗಳನ್ನು ಹಳೆಯ ಪರಮಾಣು ಚಿತ್ರದಿಂದ ವಿವರಿಸಲು ಸಾಧ್ಯವಿಲ್ಲ. ಈ ಹೊಸ ಪರಮಾಣು ಚಿತ್ರವು ಈ ವಿಷಯಗಳನ್ನೆಲ್ಲಾ ಸರಿಯಾಗಿ ವಿವರಿಸುತ್ತದೆ. ಆದ್ದ ರಿಂದ ಪರಮಾಣು ಚಿತ್ರದಲ್ಲಿ ಈ ಬದಲಾವಣೆ.

ಈಗ ಈ ಹೊಸ ಪರಮಾಣು ಚಿತ್ರವು ರೇಡಿಯೋ ಆ್ಯಕ್ಟಿವಿಟಿಯನ್ನು ಹೇಗೆ ವಿವರಿಸುವುದು ಎಂದು ನೋಡೋಣ. ರೇಡಿಯೋ ಆ್ಯಕ್ಟಿವಿಟಿಯನ್ನು ಪ್ರದರ್ಶಿ ಸುವ ಮೂಲ ವಸ್ತುಗಳೆಲ್ಲ ಹೆಚ್ಚು ಪರಮಾಣು ತೂಕ ಉಳ್ಳವು. ಯುರೇನಿಯಂ ಪರಮಾಣು ತೂಕ 238. ಥೋರಿಯಂ ಪರಮಾಣು ತೂಕ 232. ರೇಡಿಯಂ ಪರಮಾಣು ತೂಕ 226. ಆದ್ದರಿಂದ ಇವುಗಳ ಪರಮಾಣುಗಳ ನ್ಯೂಕ್ಲಿಯಸ್ಸಿ ನಲ್ಲಿ ಪ್ರೋಟಾನ್ ಮತ್ತು ನ್ಯೂಟ್ರಾನ್ ಕಣಗಳು ಬಹಳ ದಟ್ಟವಾಗಿ ಇಡುಕ ಲ್ಪಟ್ಟಿವೆ. ಇಂತಹ ನ್ಯೂಕ್ಲಿಯಸ್ಸುಗಳು ಅಸ್ಥಿರವಾಗಿರುವುದು ಅಸಹಜವಲ್ಲ. ಆದಕಾರಣ ಇವುಗಳ ಕೆಲವು ಪರಮಾಣುಗಳು ತಾವಾಗಿಯೇ ಸಿಡಿದು, ಅವುಗಳ ನ್ಯೂಕ್ಲಿಯಸ್ಸಿನಿಂದ ಎರಡು ಪ್ರೋಟಾನ್ ಮತ್ತು ಎರಡು ನ್ಯೂಟ್ರಾನುಗಳುಳ್ಳ ಹೀಲಿಯಂ ಕಣವು ಭಿನ್ನವಾಗಿ ಚಿಗಿದು ಈಚೆಗೆ ಹಾರುವುದು. ರೇಡಿಯಂ ಪರ ಮಾಣು ಸಂಖ್ಯೆ 88, ಪರಮಾಣು ತೂಕ 226. ಇದರಿಂದ ಎರಡು ಪ್ರೋಟಾನು

ಗಳು ಮತ್ತು ಎರಡು ನ್ಯೂಟ್ರಾನುಗಳು ಭಿನ್ನವಾಗಿ ಈಚೆಗೆ ಬಂದ ಮೇಲೆ ನ್ಯೂಕ್ಲಿಯಸ್ಸಿನಲ್ಲಿ 86 ಪ್ರೋಟಾನುಗಳು ಮಾತ್ರ ಉಳಿಯುವುವು. ಮತ್ತು ಇದರ ತೂಕ 222 ಆಗಿರುವುದು. ಪ್ರೋಟಾನುಗಳ ಸಂಖ್ಯೆ (ಪರಮಾಣು ಸಂಖ್ಯೆ) ಒಂದು ಮೂಲವಸ್ತುವಿನ ವೈಶಿಷ್ಟ್ಯ. ರೇಡಿಯಮ್ಮಿನ ಪರಮಾಣು ಸಂಖ್ಯೆ 88. ಉಳಿದ ಈ ನ್ಯೂಕ್ಲಿಯಸ್ಸಿನಲ್ಲಿ 86 ಪ್ರೋಟಾನುಗಳು ಮಾತ್ರ ಇರುವುವು. ಆದ್ದರಿಂದ ಇದು ರೇಡಿಯಂ ಆಗಿರಲು ಸಾಧ್ಯವಿಲ್ಲ. ಇದೊಂದು ಹೊಸ ಮೂಲ ವಸ್ತು. ಇದೇ ರೇಡಾನ್. ಇದರ ಪರಮಾಣು ಸಂಖ್ಯೆ 86 ಮತ್ತು ಪರಮಾಣು ತೂಕ 222. ಹೀಗೆ ರೇಡಿಯಂ ಪರಮಾಣುವು ಶಿಥಿಲವಾಗಿ ಬೇರೆರಡು ಮೂಲ ವಸ್ತುಗಳ ಪರಮಾಣುಗಳು ಉಂಟಾಗುವುವು. ಆದರೆ ಜನ್ಯವಸ್ತುಗಳಾದ ಹೀಲಿಯಂ ಮತ್ತು ರೇಡಾನುಗಳ ಪರಮಾಣು ಸಂಖ್ಯೆಗಳ ಮೊತ್ತವೂ ಮತ್ತು ಪರಮಾಣು ತೂಕಗಳ ಮೊತ್ತವೂ, ರೇಡಿಯಮ್ಮಿನ ಪರಮಾಣು ಸಂಖ್ಯೆ ಮತ್ತು ತೂಕಗಳಿಗೆ ಸಮನಾಗಿರುವುವು. ಹೀಗೆ ರೇಡಿಯೋ ಆ್ಯಕ್ಟಿವಿಟಿಯನ್ನು ಹೊಸ ಪರಮಾಣು ಚಿತ್ರದಿಂದ ವಿವರಿಸಬಹುದು. ರೇಡಿಯಂ ನ್ಯೂಕ್ಲಿಯಸ್ ಸಿಡಿದಾಗ ಆಗುವ ಬದಲಾವಣೆಯನ್ನು ಕೆಳಗಿನ ಚಿತ್ರದಲ್ಲಿ ತೋರಿಸಿದೆ.




ರೇಡಿಯಂ ಶಿಥಿಲವಾಗಿ ಸಿಡಿದು ರೇಡಾನ್ ಮತ್ತು ಹೀಲಿಯಂ ಉತ್ಪನ್ನವಾದಾಗ ಸಿಡಿದು ನಾಶವಾದ ರೇಡಿಯಮ್ಮಿನ ತೂಕವು, ಉತ್ಪನ್ನ ವಸ್ತುಗಳಾದ ರೇಡಾನ್ ಮತ್ತು ಹೀಲಿಯಂಗಳ ಒಟ್ಟು ತೂಕಕ್ಕೆ ಸಮವಾಗಿರುವುವೆಂದು ಹಿಂದೆ ಹೇಳಿವೆಯಷ್ಟೆ. ಇದು ಸ್ಥೂಲವಾಗಿ ಸರಿಯಾದರೂ, ಅತಿ ಸೂಕ್ಷ್ಮವಾದ ಸಾಧನಗಳ

ಸಹಾಯದಿಂದ ತೂಕಗಳನ್ನು ಕಂಡುಹಿಡಿದರೆ, ಉತ್ಪನ್ನ ವಸ್ತುಗಳ ತೂಕವು ಸಿಡಿದುಹೋದ ರೇಡಿಯಂ ತೂಕಕ್ಕಿಂತ ಸ್ವಲ್ಪ ಭಾಗ ಕಡಿಮೆಯಾಗಿದೆಯೆಂದು ಕಂಡುಬರುವುದು. ಕಡಿಮೆಯಾದ ಅಂಶ ಬಹಳ ಸ್ವಲ್ಪ. ಆದರೂ ಕಡಿಮೆಯಾಗುವುದು ನಿಜ. ಹಾಗಾದರೆ ತೂಕ ಕಮ್ಮಿಯಾಗಲು ಕಾರಣವೇನು? ಕಮ್ಮಿಯಾದ ತೂಕದ ವಸ್ತು ಏನಾಯಿತು? ಇದಕ್ಕೂ ಉತ್ತರ ದೊರೆತಿದೆ. ಇಲ್ಲಿಯವರೆಗೆ ಶಾಖ, ಬೆಳಕು, ವಿದ್ಯುಚ್ಛಕ್ತಿ ಮುಂತಾದುವುಗಳನ್ನು ಶಕ್ತಿಯೆಂದೂ ಇವುಗಳು ವಸ್ತುಗಳಿಂದ ಬೇರೆಯಾದುವೆಂದೂ ಪರಿಗಣಿಸಲಾಗುತ್ತಿತ್ತು. ಐನ್‌ಸ್ಟೀನ್ ಎಂಬ ವಿಜ್ಞಾನಿಯು ಕೆಲವು ತತ್ವಗಳ ಆಧಾರದ ಮೇಲೆ ವಸ್ತುವನ್ನು ಶಕ್ತಿಯಾಗಿ ಮಾರ್ಪಡಿಸಬಹುದೆಂದೂ, ಹೀಗೆ ಮಾರ್ಪಡಿಸಲ್ಪಟ್ಟ ಒಂದು ನಿರ್ದಿಷ್ಟ ತೂಕ ವಸ್ತುವಿನಿಂದ ಒಂದು ನಿರ್ದಿಷ್ಟ ಪ್ರಮಾಣ ಶಕ್ತಿಯಾಗುವುದೆಂದೂ ನಿರ್ಣಯಕ್ಕೆ ಬಂದನು. ಇದಾದ ಕೆಲವು ವರ್ಷಗಳ ಮೇಲೆ ಈ ಭಾವನೆಯು ಪ್ರಯೋಗದಿಂದ ಸಮರ್ಥಿಸಲ್ಪಟ್ಟಿತು. ಒಂದು ಗ್ರಾಂ (ಅಂದರೆ 1 ಆಣೆ ತೂಕ, $\frac{1}{16}$ ತೊಲದಷ್ಟು) ತೂಕ ವಸ್ತು ನಾಶವಾದಾಗ ಉತ್ಪತ್ತಿಯಾಗುವ ಶಕ್ತಿಯೆಲ್ಲಾ ಉಷ್ಣರೂಪದಲ್ಲಿ ಹೊರಬಿದ್ದರೆ, ಆ ಶಕ್ತಿಯ ಪ್ರಮಾಣವು ಸುಮಾರು ಮುನ್ನೂರು ಟನ್ ಕಲ್ಲಿದ್ದಲನ್ನು ಸುಟ್ಟರೆ ಉಂಟಾಗುವ ಉಷ್ಣದ ಪ್ರಮಾಣಕ್ಕೆ ಸಮನಾಗಿರುವುದು.

ಈಚೆಗೆ ಕೆಲವು ವಿದ್ಯುದ್ಯಂತ್ರಗಳ ಸಹಾಯದಿಂದ ಅತಿ ವೇಗದಿಂದ ಚಲಿಸುತ್ತಿರುವ ಪ್ರೋಟಾನ್, ನ್ಯೂಟ್ರಾನ್ ಮುಂತಾದ ಕಣಗಳ ಪ್ರವಾಹಗಳನ್ನು ಉಂಟುಮಾಡಿರುವರು. ಮೂಲ ವಸ್ತುಗಳನ್ನು ಅತಿ ವೇಗದಿಂದ ಚಲಿಸುತ್ತಿರುವ ಈ ಕಣಗಳ ಸಂತತವಾದ ಹೊಡೆತಕ್ಕೆ ಈಡುಮಾಡಿದರೆ, ಇವು ಪರಮಾಣುಗಳ ನ್ಯೂಕ್ಲಿಯಸ್ಸಿಗೆ ಹೊಡೆದು, ನ್ಯೂಕ್ಲಿಯಸ್ಸಿನಲ್ಲಿರುವ ನ್ಯೂಟ್ರಾನ್ ಮತ್ತು ಪ್ರೋಟಾನುಗಳ ಸಮಸ್ಥಿತಿಯನ್ನು ಭಂಗಗೊಳಿಸುವುವು. ಅವು ಪುನಃ ಸಮಸ್ಥಿತಿಗೆ ಬರುವ ಯತ್ನದಲ್ಲಿ ನ್ಯೂಕ್ಲಿಯಸ್ಸಿನಿಂದ ಒಂದು ನ್ಯೂಟ್ರಾನ್ ಅಥವಾ ಪ್ರೋಟಾನ್ ಅಥವಾ ಹೀಲಿಯಂ ನ್ಯೂಕ್ಲಿಯಸ್ ಸಿಡಿದು, ಉಳಿದ ನ್ಯೂಕ್ಲಿಯಸ್ಸಿನಲ್ಲಿ ಪ್ರೋಟಾನ್ ಸಂಖ್ಯೆಯು ವ್ಯತ್ಯಾಸವಾಗುವುದು. ಅಂದರೆ ಪರಮಾಣು ಸಂಖ್ಯೆಯು ವ್ಯತ್ಯಾಸವಾಗುವುದು. ಪರಮಾಣು ಸಂಖ್ಯೆ ವ್ಯತ್ಯಾಸವಾದರೆ ಮೂಲ ವಸ್ತುವೇ ಬೇರೆಯಾಗುವುದು. ಹೀಗೆ ಪ್ರಯೋಗಶಾಲೆಯಲ್ಲಿ ಒಂದು ಮೂಲ ವಸ್ತುವನ್ನು ಇನ್ನೊಂದು ಮೂಲ ವಸ್ತುವನ್ನಾಗಿ ಪರಿವರ್ತಿಸುವುದನ್ನು ಕಂಡುಹಿಡಿದಿರುವರು.

ವೇಗದಿಂದ ಚಲಿಸುವ ನ್ಯೂಟ್ರಾನ್ ಕಣಗಳು ಅಲ್ಯೂಮಿನಿಯಮ್ಮನ್ನು ಸಂಘಟ್ಟಿಸುವಂತೆ ಮಾಡಿದರೆ, ಅದರಿಂದ ಮೆಗ್ನೀಸಿಯಂ ಆಗುವುದು. ಇದರ

ಚಿತ್ರವನ್ನು ಕೆಳಗೆ ಕೊಟ್ಟಿದೆ.




ಇದಲ್ಲದೆ ಇನ್ನೂ ಅನೇಕ ಪರಿವರ್ತನೆಗಳನ್ನು ಪ್ರಯೋಗಶಾಲೆಯಲ್ಲಿ ಸಾಧಿಸಲಾಗಿದೆ. ಈ ರೀತಿಯಾಗಿ ಪರಿವರ್ತನೆ ಹೊಂದುವ ಮೂಲ ವಸ್ತುವಿನ ಪರಮಾಣು ಸಂಖ್ಯೆ ಮತ್ತು ಪರಮಾಣು ತೂಕಕ್ಕೂ ಇದರಿಂದುಂಟಾದ ಮೂಲ ವಸ್ತುವಿನ ಪರಮಾಣು ಸಂಖ್ಯೆ ಮತ್ತು ಪರಮಾಣು ತೂಕಕ್ಕೂ ಹೆಚ್ಚು ವ್ಯತ್ಯಾಸವಿರುವುದಿಲ್ಲ. ಇದು ಮೇಲಿನ ಉದಾಹರಣೆಯಿಂದ ಸ್ಪಷ್ಟವಾಗುವುದು. ಕೆಲವು ಸಂದರ್ಭಗಳಲ್ಲಿ ಈ ರೀತಿಯ ಪರಿವರ್ತನೆಯಿಂದಾದ ಮೂಲ ವಸ್ತುವು ರೇಡಿಯೋ ಆ್ಯಕ್ಟಿವ್ ಆಗಿರುವುದು. ಈ ಕೃತಕ ರೇಡಿಯೋ ಆ್ಯಕ್ಟಿವ್ ಮೂಲ ವಸ್ತುಗಳನ್ನು ಸಂಶೋಧನೆಗೂ ಆಸ್ಪತ್ರೆಗಳಲ್ಲಿ ಕ್ಯಾನ್ಸರ್ ಮೊದಲಾದ ರೋಗಗಳನ್ನು ವಾಸಿಮಾಡಲೂ ಉಪಯೋಗಿಸುವರು.

1939 ರಲ್ಲಿ ಓಟೋಹಾನ್ ಎಂಬ ಜರ್ಮನ್ ವಿಜ್ಞಾನಿಯು ಯುರೇನಿಯಂ ಪರಮಾಣುವಿನ ನ್ಯೂಕ್ಲಿಯಸ್ಸನ್ನು ನ್ಯೂಟ್ರಾನುಗಳ ಹೊಡೆತಕ್ಕೆ ಈಡುಮಾಡಿದರೆ, ಇದರ ನ್ಯೂಕ್ಲಿಯಸ್ಸು ವಿದಳನ ಹೊಂದುವುದು, ಅಂದರೆ ಎರಡು ಹೋಳಾಗುವುದು ಎಂದು ತೋರಿಸಿದನು. ಹೀಗೆ ಯುರೇನಿಯಮ್ಮನ್ನು ವಿದಳನ ಮಾಡಿದಾಗ ಈ ವಿದಳನದಿಂದಾದ ಮುಖ್ಯ ಮೂಲ ವಸ್ತುಗಳ ಜೊತೆಗೆ ಕೆಲವು ನ್ಯೂಟ್ರಾನುಗಳೂ ಇರುವುವು. ಅಲ್ಲದೆ ಒಂದು ಸ್ವಲ್ಪ ಭಾಗ ವಸ್ತು ನಾಶವಾಗಿ ಅದರಿಂದ ಶಕ್ತಿ ಉತ್ಪನ್ನವಾಗುವುದು. ಪರಮಾಣು ವಿದಳನದಿಂದುಂಟಾದ ನ್ಯೂಟ್ರಾನುಗಳು ಇನ್ನಷ್ಟು ಯುರೇನಿಯಂ ಪರಮಾಣುಗಳನ್ನು ವಿದಳನ ಮಾಡುವುವು. ಇದರಿಂದ ಇನ್ನೂ ಹೆಚ್ಚಿನ ಶಕ್ತಿಯೂ ಮತ್ತು ಇನ್ನೂ ಅಧಿಕ ಸಂಖ್ಯೆಯಲ್ಲಿ ನ್ಯೂಟ್ರಾನುಗಳೂ ಉತ್ಪನ್ನವಾಗುವುವು. ಹೀಗೆ ವಿದಳನ ಪರಂಪರೆಯು ಪ್ರಾರಂಭವಾಗಿ ಅತ್ಯದ್ಭುತ ಪ್ರಮಾಣದಲ್ಲಿ ಶಕ್ತಿ ಉತ್ಪನ್ನವಾಗುವುದು. ಪರಮಾಣು ಬಾಂಬನ್ನು ಈ ತತ್ವದ

ಮೇಲೆಯೇ ರಚಿಸಿರುವುದು. ಯುರೇನಿಯಂ ವಿದಳನದ ಒಂದು ಚಿತ್ರವನ್ನು ಕೆಳಗೆ ಕೊಟ್ಟಿದೆ.




ಮೇಲೆ ವಿವರಿಸಿದ ರೀತಿಯಲ್ಲಿ ವಸ್ತುವಿನಿಂದ ಶಕ್ತಿಯನ್ನು ಉತ್ಪನ್ನಮಾಡಿದರೆ ಅತ್ಯದ್ಭುತ ಪ್ರಮಾಣದಲ್ಲಿ ಶಕ್ತಿ ಉತ್ಪನ್ನವಾಗುವುದು. ಇದನ್ನು ಹಿಡಿತಕ್ಕೆ ತರಲು ಸಾಧ್ಯವಿಲ್ಲ, ಇದು ವಿನಾಶಕಾರಿ. ಸುತ್ತಮುತ್ತಲೂ ಇರುವ ನಾಲ್ಕಾರು ಮೈಲಿ ಪ್ರದೇಶಗಳಲಿರುವ ಎಲ್ಲ ವಸ್ತುಗಳನ್ನು ಅಟಾಮಿಕ್ ಬಾಂಬ್ ಆಸ್ಫೋಟನೆಯಿಂದಾದ ಜ್ವಾಲೆಯು ದಹಿಸಿ ಭಸ್ಮಮಾಡುವುದು, ಅಲ್ಲದೆ, ಇದರಿಂದ ಉತ್ಪನ್ನವಾದ ರೇಡಿಯೋ ಆ್ಯಕ್ಟಿವ್ ಧೂಳು ವಾಯು ಮಂಡಲವನ್ನು ಸೇರಿ, ವಾಯುವನ್ನು ಅತಿ ಕಲುಷಿತವನ್ನಾಗಿ ಮಾಡುವುದು. ನೂರಾರು ಮೈಲಿಗಳವರೆಗೆ ಈ ಧೂಳು ಹರಡುವುದು. ಈ ಧೂಳು ಜೀವಿಗಳ ಮೈ ಮೇಲೆ ಬಿದ್ದರೆ, ಅನೇಕ ಕೆಟ್ಟ ಪರಿಣಾಮಗಳಾಗುವುದು, ಪ್ರಾಣಕ್ಕೂ ಸಹ ಅಪಾಯ. ಒಂದು ವೇಳೆ ಪ್ರಾಣ ಹೋಗದಿದ್ದರೂ ಸಹ ಅದರಿಂದುಂಟಾದ ಪರಿಣಾಮವು ಅದರ ಸಂಪರ್ಕವನ್ನು ಹೊಂದಿದ ಜೀವಿಗಳಿಗೇ ಅಲ್ಲದೆ, ಆ ಜೀವಿಗಳಿಂದ ಉತ್ಪನ್ನವಾದ ಸಂತತಿಯ ಮೇಲೂ ಮಹತ್ತಾದ ದುಷ್ಪರಿಣಾಮವನ್ನುಂಟುಮಾಡುವುದು.

ಆ್ಯಟಂ ಬಾಂಬಿನ ವಿನಾಶಕಾರಿತ್ವವು ಕೆಳಗಿನ ಉಪಮಾನದಿಂದ ಮನದಟ್ಟಾಗುವುದು. ಒಂದು ನದಿಗೆ ಅಣೆಕಟ್ಟು ಕಟ್ಟಿದೆ ಎಂದೆನ್ನಿ. ಅಣೆಕಟ್ಟಿನ ಹಿಂದೆ

ಅಗಾಧವಾದ ಪ್ರಮಾಣದಲ್ಲಿ ನೀರಿದೆ. ಅಣೆಕಟ್ಟಿನ ಮೇಲೆ ಒಂದು ಬಾಂಬನ್ನು ಹಾಕಿ ಕಟ್ಟೆಯನ್ನು ಒಡೆದರೆ, ನೀರು ಬೃಹತ್ಪ್ರಮಾಣದಲ್ಲಿ ಹರಿದು ಅದರ ಮಾರ್ಗ ದಲ್ಲಿದ್ದುದನ್ನೆಲ್ಲಾ ನಾಶಮಾಡುವುದು. ಅಟಾಮಿಕ್ ಬಾಂಬು ಸಿಡಿದಾಗ ಆಗುವ ಶಕ್ತಿಯ ಉತ್ಪಾದನೆಯೂ ಇದಕ್ಕೆ ಸದೃಶವಾದುದು. ಹೀಗೆ ಮಾಡುವ ಬದಲು ಕಟ್ಟೆಯಲ್ಲಿ ಒಂದು ನೀರ್ಗಂಡಿಯನ್ನು ಮಾಡಿ ಅಲ್ಲಿ ಸರಿಯಾದ ಕವಾಟಗಳನ್ನಿಟ್ಟು ಅದರ ಮೂಲಕ ಕಾಲುವೆಗಳಲ್ಲಿ ನೀರನ್ನು ಹರಿಸಿದರೆ ನಂದನವನವನ್ನು ಸೃಜಿಸ ಬಹುದು. ಹಾಗೆಯೇ ಪರಮಾಣುಗಳಲ್ಲಿ ಗುಪ್ತವಾಗಿರುವ ಶಕ್ತಿಯನ್ನು ಹಿಡಿತಕ್ಕೆ ಸಿಕ್ಕುವ ರೀತಿಯಲ್ಲಿ ಉತ್ಪನ್ನಮಾಡಬೇಕು. ಈ ದಿಕ್ಕಿನಲ್ಲಿಯೂ ವಿಶೇಷ ಸಂಶೋ ಧನೆಗಳು ನಡೆಯುತ್ತಿವೆ. ಅತಿ ವೇಗವಾಗಿ ಚಲಿಸುವ ನ್ಯೂಟ್ರಾನುಗಳ ಬದಲು, ಮಂದವಾಗಿ ಚಲಿಸುವ ನ್ಯೂಟ್ರಾನುಗಳನ್ನು ಉಪಯೋಗಿಸಿದರೆ, ಇದು ಯುರೇ ನಿಯಂ ಲೋಹವನ್ನು ಪ್ಲುಟೋನಿಯಂ ಎಂಬ ಇನ್ನೊಂದು ಲೋಹವನ್ನಾಗಿ ಮಾಡುವುದು. ಈ ಪರಿವರ್ತನೆಯಲ್ಲಿಯೂ ಉಷ್ಣವು ಉತ್ಪನ್ನವಾಗುವುದು. ಆದರೆ ಹಿಡಿತಕ್ಕೆ ಸಿಕ್ಕದ ರೀತಿಯಲ್ಲಿ ಉತ್ಪನ್ನವಾಗುವುದಿಲ್ಲ. ಈ ಉಷ್ಣದಿಂದ ನೀರಿನ ಹಬೆಗಳನ್ನು ಮಾಡಿ, ಅದರಿಂದ ಡೈನಮೋಗಳನ್ನು ತಿರುಗಿಸಿ ವಿದ್ಯುಚ್ಛಕ್ತಿ ಯನ್ನು ಮಾಡಬಹುದು. ಈ ರೀತಿಯಾಗಿ ಪರಮಾಣು ಶಕ್ತಿಯನ್ನು ಪಡೆಯುವ ಸಾಧನಕ್ಕೆ ಅಟಾಮಿಕ್ ರಿಯಾಕ್ಟರ್ ಎಂದು ಹೆಸರು. ಪರಮಾಣು ಶಕ್ತಿಯನ್ನು ಹೀಗೆ ವಿದ್ಯುಚ್ಛಕ್ತಿಯನ್ನಾಗಿ ಮಾಡಬಹುದಾದರೆ, ಕಲ್ಲಿದ್ದಲು, ಪೆಟ್ರೋಲುಗಳ ಬದಲಾಗಿ ಇದನ್ನೇಕೆ ಅಮೇರಿಕ, ಇಂಗ್ಲೆಂಡ್ ಮುಂತಾದ ದೇಶದವರೂ ಉಪಯೋ ಗಿಸುವುದಿಲ್ಲ ಎಂದು ವಾಚಕರು ಯೋಚಿಸಬಹುದು. ಆ ಕಾಲವೂ ದೂರವೇನಿಲ್ಲ, ಸದ್ಯಕ್ಕೆ ಅದು ಇನ್ನೂ ಪ್ರಯೋಗದ ಹಂತದಲ್ಲಿಯೇ ಇದೆ. ಮೊದಲನೆಯದಾಗಿ ಇದಕ್ಕೆ ಬೇಕಾದ ಕಚ್ಚಾ ಪದಾರ್ಥ ಯುರೇನಿಯಂಲೋಹ ಬಾಕಿ ಲೋಹಗಳಷ್ಟು ಹೇರಳವಾಗಿ ಸಿಕ್ಕುವುದಿಲ್ಲ. ಇದರ ಬೆಲೆ ಜಾಸ್ತಿ. ಅಲ್ಲದೆ ಎರಡು ಮಹಾರಾಷ್ಟ್ರ ಗಳು ಪರಸ್ಪರ ಸಂಶಯದಿಂದ ವಿನಾಶಕಾರಿ ಅಸ್ತ್ರಗಳ ತಯಾರಿಕೆಗೆ ಪೈಪೋಟಿಯಿಂದ ದುಡಿಯುತ್ತಿರುವಾಗ ಯುರೇನಿಯಂನ ಬಹುಭಾಗ ಈ ಅಸ್ತ್ರಗಳ ತಯಾರಿಕೆಗೆ ಮೀಸಲಾಗಿರುವುದು. ಅಲ್ಲದೆ ನ್ಯೂಟ್ರಾನ್ ವೇಗವನ್ನು ಮಂದವಾಗಿ ಮಾಡಲು ಭಾರವಾದ ಹೈಡ್ರೋಜನ್, ಬೆರಿಲಿಯಂ ಮುಂತಾದ ಬೆಲೆಬಾಳುವ ಮೂಲ ವಸ್ತು ಗಳು ಅವಶ್ಯಕ. ( ಭಾರವಾದ ಹೈಡ್ರೋಜನ್ ಅಂದರೆ ಪರಮಾಣು ತೂಕ ಎರಡು ಇರುವ ಹೈಡ್ರೋಜನ್ ). ಇದರಿಂದುಂಟಾದ ರೇಡಿಯೋ ಆ್ಯಕ್ಟಿವ್ ಕಿರಣಗಳು ಕೆಲಸಗಾರರಿಗೆ ದುಷ್ಪರಿಣಾಮವನ್ನುಂಟುಮಾಡದೆ ಇರಲು ದಪ್ಪನಾದ ಕಾಂಕ್ರೀಟ್ ಗೋಡೆಯನ್ನು ಇದರ ಸುತ್ತಲೂ ರಚಿಸಬೇಕು. ಆದ್ದರಿಂದ ಅಟಾಮಿಕ್ ರಿಯಾ

ಕ್ಟರ್ ಗಾತ್ರದಲ್ಲಿ ಬಹಳ ದೊಡ್ಡದಾಗಿದ್ದು ಅವುಗಳನ್ನು ಹಡಗುಗಳಲ್ಲಿ ಉಪಯೋಗಿಸುವುದು ಸಹ ಸಾಧ್ಯವಲ್ಲ. ಆದರೂ ರಷ್ಯದಲ್ಲಿ, ಅಮೇರಿಕದಲ್ಲಿ, ಇಂಗ್ಲೆಂಡಿನಲ್ಲಿ ಮತ್ತು ಇಂಡಿಯಾದಲ್ಲಿಯೂ ಸಹ ಕೆಲವೆಡೆಗಳಲ್ಲಿ ದೊಡ್ಡ ದೊಡ್ಡ ಅಟಾಮಿಕ್ ರಿಯಾಕ್ಟರುಗಳನ್ನು ಸ್ಥಾಪಿಸಿ ಅದರಿಂದ ವಿದ್ಯುಚ್ಛಕ್ತಿಯನ್ನು ಉತ್ಪಾದನೆ ಮಾಡುತ್ತಿದ್ದಾರೆ. ಪರಮಾಣು ಶಕ್ತಿಯನ್ನು ವಿನಾಶಕಾರ್ಯಕ್ಕಾಗಿ ಬೆಳೆಸುತ್ತಾ ಹೋದರೆ ಮಾನವನು ಭೂಮಿಯ ಮೇಲೆ ಹೆಚ್ಚು ಕಾಲವಿರುವುದಿಲ್ಲ. ಆದರೆ ಅದನ್ನು ಮಾನವನ ಸೌಖ್ಯಕ್ಕಾಗಿ ತಿರುಗಿಸಿ, ಬೆಳೆಸಿ, ಹೆಚ್ಚಿಸಿದರೆ, ಭೂಮಿಯು ಸ್ವರ್ಗವಾಗುವ ದಿನ ದೂರವಿಲ್ಲ. ಇದೇನು ಸೈತಾನನ ನರಕವಾಗುವುದೋ ಅಥವಾ ಭಗವಂತನ ದೇವಲೋಕವಾಗುವುದೋ ಅದು ಮಾನವನ ಕೈಯ್ಯಲ್ಲಿದೆ.

ನಾವು ಪ್ರಾರಂಭಿಸಿದುದೆಲ್ಲಿ ? ಬಂದುದೆಲ್ಲಿಗೆ ? ದಾರಿತಪ್ಪಿದೇವೆಯೇ ? ಇಲ್ಲ. ನಾವು ಬಿಡಿಸಲು ಹೋದ ಸಮಸ್ಯೆ ಅಷ್ಟು ಗಹನವಾದುದಾಗಿ ಜಟಿಲವಾಗಿ ಪರಿಣಮಿಸಿತು. ಮೂಲ ವಸ್ತುಗಳು, ಸಮಸ್ತ ವಸ್ತುಗಳಿಗೂ ಆಧಾರ ಭೂತ ವಸ್ತುಗಳೆಂದು ಬಗೆದೆವು. ಅದೇನೋ ಸರಿ. ಈಗಲೂ ಸಹ ಈ ಅಭಿಪ್ರಾಯಕ್ಕೇನೂ ಚ್ಯುತಿ ಬಂದಿಲ್ಲ. ಅನಂತರ ಮೂಲ ವಸ್ತುಗಳೆಲ್ಲವೂ ಪರಮಾಣುಗಳೆಂಬ ಇಟ್ಟಿಗೆಗಳಿಂದಾಗಿವೆ, ಈ ಇಟ್ಟಿಗೆಗಳಿಂದ ಎಲ್ಲಾ ವಸ್ತುಗಳೂ ಆಗಿದೆ ಎಂಬ ಸಿದ್ಧಾಂತಕ್ಕೆ ಬಂದೆವು. ಇದೂ ಸಹ ಸರಿ. ಇದು ಮೊದಲನೆಯ ಅಭಿಪ್ರಾಯಕ್ಕೆ ವಿರೋಧವಾದುದೇನೂ ಅಲ್ಲ. ಅದರ ವಿಷಯವಾದ ಹೆಚ್ಚು ವಿವರ ಇದು ಅಷ್ಟೇ. ಅನಂತರ ಈ ಪರಮಾಣುಗಳೇ ಅನೇಕ ಇಟ್ಟಿಗೆಗಳಿಂದಾಗಿವೆ ಎಂಬ ಅಭಿಪ್ರಾಯಕ್ಕೆ ಬಂದೆವು. ಈ ಹೊಸ ಅಭಿಪ್ರಾಯವೂ ಸಹ ನಮ್ಮ ಮೊದಲಿನ ಅಭಿಪ್ರಾಯವನ್ನು ಅಂದರೆ ಮೂಲ ವಸ್ತುಗಳು ವಿಶ್ವದ ಇಟ್ಟಿಗೆ ಎನ್ನುವುದನ್ನು ಸ್ವಲ್ಪವೂ ಬದಲಾಯಿಸಿಲ್ಲ. ಮೂಲ ವಸ್ತು ಮತ್ತು ಪರಮಾಣುಗಳ ಸ್ವರೂಪದ ವಿಷಯವಾಗಿ ಇನ್ನೂ ಹೆಚ್ಚು ವಿವರ ಇದರಿಂದ ದೊರೆತಿದೆ. ಪರಮಾಣುವಿನಲ್ಲಿರುವ ಕಣಗಳೂ ಮಾಯವಾಗಿ ಎಲ್ಲವೂ ಶಕ್ತಿಯ ರೂಪಗಳು ಎಂಬ ಕೊನೆ ಮುಟ್ಟಿದ್ದೇವೆ. ನಮ್ಮ ಪೂರ್ವಿಕರು ಅಣು ರೇಣು ತೃಣ ಕಾಷ್ಠಗಳಲ್ಲಿ ಪರಮಾತ್ಮನು ಶಕ್ತಿ ಸ್ವರೂಪನಾಗಿದ್ದಾನೆಂದು ಹೇಳುತ್ತಿದ್ದರು. ಈ ನಮ್ಮ ಪೂರ್ವಿಕರ ವೇದಾಂತವನ್ನು ಆಧುನಿಕ ವಿಜ್ಞಾನವೂ ಸಮರ್ಥಿಸುವುದೆ ?

— ಕೆ. ಸುಬ್ಬಾಭಟ್ಟ

# ವಿಜ್ಞಾನ-ಆನಂದ

ಕಲೆಗಿರುವಂತೆಯೇ ವಿಜ್ಞಾನಕ್ಕೂ ಸೃಷ್ಟಿ ಸಾಮರ್ಥ್ಯವು ಇದೆ. ಒಂದು ಮಹಾಕಾವ್ಯದ ರಚನೆಯಿಂದ ಉಂಟಾಗುವ ಆನಂದಕ್ಕೆ ಸದೃಶವಾದ ಮತ್ತು ಸಮಾನವಾದ ಆನಂದವನ್ನು ವಿಜ್ಞಾನ ಸಂಶೋಧನೆಯಲ್ಲೂ ಪಡೆಯಬಹುದು. ಸ್ವಾರ್ಥದ ಸೋಂಕೇ ಇಲ್ಲದ, ಪರಿಶುದ್ಧವಾದ ಕುತೂಹಲವೇ ವಿಜ್ಞಾನದ ಹಾದಿಯಲ್ಲಿ ಮನಸ್ಸನ್ನು ಪ್ರಚೋದಿಸುತ್ತದೆ. ಎಂದಿಗೂ ಅಜ್ಞಾತವಾಗಿಯೇ ಉಳಿಯಬಹುದಾಗಿದ್ದ ಪ್ರಕೃತಿ ರಹಸ್ಯಗಳನ್ನು ಭೇದಿಸಿದಾಗ, ಅವರ್ಣನೀಯವಾದ ವಿಸ್ಮಯ ಮತ್ತು ಆನಂದಗಳು ಉಂಟಾಗುತ್ತವೆ. ವೈಯಕ್ತಿಕ ಜೀವನದ ಪರಿಮಿತಿಯನ್ನು ದಾಟಿ,—ಅಷ್ಟು ಮಾತ್ರವೇಕೆ, ಜನನ ಮರಣಗಳಿಂದ ಬದ್ಧವಾದ ಇಹಜೀವನವನ್ನೇ ಮರೆತು, ಹಿರಿದಾದ ಮತ್ತು ವಿಶಾಲವಾದ ಮನೋ ರಾಜ್ಯದಲ್ಲಿ ವಿಹರಿಸುತ್ತಾ, ರಾಗದ್ವೇಷಗಳಿಂದ ಕಳಂಕಿತವಾಗದಿರುವ ಸ್ವಚ್ಛವಾದ ಮತ್ತು ವಿಶಾಲವಾದ ದೃಷ್ಟಿಯನ್ನು ಬೆಳೆಸಿಕೊಳ್ಳಲು ವಿಜ್ಞಾನದ ಅಭ್ಯಾಸಕ್ಕಿಂತ ಮಿಗಿಲಾದ ಸಾಧನೆಯಿಲ್ಲ. ಅಷ್ಟೇ ಅಲ್ಲದೆ ವಿಜ್ಞಾನದಿಂದ ಮಾನವ ಕೋಟಿಯ ಸುಖಸಂಪತ್ತುಗಳ ಅಭಿವೃದ್ಧಿಗೆ ಆಗಿರುವ ಸಹಾಯವನ್ನೂ, ಮಹತ್ತಾದ ಪ್ರಯೋಜನವನ್ನೂ ನೆನಪಿನಲ್ಲಿಡಬೇಕು. ವಿಜ್ಞಾನಕ್ಕಾಗಿ ಮೀಸಲಾಗಿಟ್ಟ ಜೀವನವು ನಿಜವಾಗಿಯೂ ಶ್ರೇಷ್ಠವಾದ ಮತ್ತು ಆನಂದಮಯವಾದ ಜೀವನ.

—ಬರ್ಟ್ರೆಂಡ್ ರಸೆಲ್.

# ಕಾಲದ ಅಳತೆ

ಪ್ರಕೃತಿ ವ್ಯಾಪಾರಗಳನ್ನು ನಿರೂಪಿಸಲು ಮತ್ತು ತಿಳಿದುಕೊಳ್ಳಲು ಅತ್ಯವಶ್ಯಕವಾದ ಭೌತ ಪರಿಮಾಣಗಳಲ್ಲಿ ಕಾಲವೂ ಒಂದು. ವಸ್ತು ಅಥವಾ ಶಕ್ತಿ, ಆಕಾಶ ಮತ್ತು ಕಾಲ ಇವುಗಳಿಗೆ ಸಂಬಂಧಿಸಿದ ನಿಯಮ ಮತ್ತು ಸಮೀಕರಣಗಳಿಂದಲೇ ಪ್ರಕೃತಿಯ ಎಲ್ಲಾ ಕ್ರಿಯೆಗಳನ್ನೂ ವಿವರಿಸುವುದು ವಿಜ್ಞಾನದ ಉದ್ದೇಶ. ಆದರೆ, ಕಾಲದ ಸ್ವರೂಪವೇನು, ಅದು ಕಲ್ಪನೆಯೇ ಅಥವಾ ಸತ್ಯವೇ, ಮುಂತಾದ ಜಿಜ್ಞಾಸೆಯು ವಿಜ್ಞಾನದ ಪರಿಮಿತಿಯನ್ನು ಮೀರಿದೆ. ಈ ವಿಷಯಗಳು ತತ್ವಶಾಸ್ತ್ರದ ಸಮಸ್ಯೆಗಳು. ಅವುಗಳ ವಿಚಾರವು ಸದ್ಯಕ್ಕೆ ನಮಗೆ ಅಪ್ರಕೃತ. ಬಾಹ್ಯಕ್ರಿಯೆಗಳಿಂದ ಕಾಲವನ್ನು ಅಳೆಯಲು ಮನುಷ್ಯನು ಉಪಯೋಗಿಸಿರುವ ಮತ್ತು ಕಲ್ಪಿಸಿರುವ ಸಾಧನಗಳ ಒಂದು ಸಂಕ್ಷಿಪ್ತ ಪರಿಶೀಲನೆಯು ಮಾತ್ರ ಈ ಲೇಖನದ ವಿಷಯ.

ಪ್ರಾಚೀನಕಾಲದಿಂದಲೂ ಮನುಷ್ಯನು ಕಾಲವನ್ನು ಅಳೆಯಲು ಅನೇಕ ಸಾಧನಗಳನ್ನು ಉಪಯೋಗಿಸುತ್ತಲೇ ಇದ್ದಾನೆ. ಕಾಲದ ಅಳತೆಗೆ ಅವಶ್ಯಕವಾದುದು ಏನೆಂದರೆ ಕ್ರಮವಾದ, ಒಂದು ನಿರ್ದಿಷ್ಟವಾದ ಅವಧಿಯಲ್ಲಿ ಪುನರಾವರ್ತಿಯಾಗುವ ಚಲನೆ. ಸೂರ್ಯನ ಸುತ್ತಲೂ ಭೂಮಿಯ ಚಲನೆ, ಭೂಮಿಯ ಸುತ್ತಲೂ ಚಂದ್ರನ ಚಲನೆ, ಭೂಮಿಯ ದೈನಂದಿನ ಭ್ರಮಣ, ಸಾಮಾನ್ಯ ಲೋಲಕದ ಆವರ್ತನ, ಸಮವೇಗದಿಂದ ತಿರುಗುವ ಚಕ್ರದ ಭ್ರಮಣ, ಕ್ವಾರ್ಟ್ಸ್ ಹರಳಿನ ಕಂಪನ ಇತ್ಯಾದಿಯಾಗಿ ಹಲವಾರು ಬಗೆಯ ಪುನರಾವರ್ತಿ ಚಲನೆಯನ್ನು ಆಧಾರವನ್ನಾಗಿ ಇಟ್ಟುಕೊಂಡು, ಕಾಲದ ಅಳತೆಯ ವಿಧಾನಗಳನ್ನು ಕಲ್ಪಿಸಲಾಗಿದೆ.

ಇವುಗಳಲ್ಲಿ ಸ್ವಾಭಾವಿಕವಾಗಿಯೇ, ಮನುಷ್ಯನು ಬಹಳ ಹಿಂದಿನ ಕಾಲದಿಂದಲೂ ಮತ್ತು ಪ್ರಪಂಚದ ನಾನಾ ಭಾಗಗಳಲ್ಲೂ, ಭೂಮಿಯ ದೈನಂದಿನ ಚಲನೆಯ (ಎಂದರೆ ಭೂಮಿಯ ಸುತ್ತಲೂ ಸೂರ್ಯನ ಸಾಪೇಕ್ಷಚಲನೆಯ) ಆಧಾರದ ಮೇಲೆ ಕಾಲಗಣನೆ ಮಾಡುತ್ತಿದ್ದನೆನ್ನುವುದಕ್ಕೆ ಸಾಕಷ್ಟು ಆಧಾರಗಳಿವೆ. ಈ ಚಲನೆಯಿಂದಲೇ ಹಗಲು-ರಾತ್ರಿಗಳಾಗುವುದರಿಂದ, ಕಾಲಗತಿಯ ಅರಿವು ಮೊದಲು ಉಂಟಾಗಲು ಇದೇ ಕಾರಣ. ಇದರಿಂದ ಒಂದು ದಿನದ ವ್ಯಾಪ್ತಿ ನಿರ್ಣಯವಾಯಿತು. ಇದಲ್ಲದೆ, ಸೂರ್ಯನ ಸುತ್ತಲೂ ಭೂಮಿಯು ವರ್ಷ

ಕ್ಕೊಮ್ಮೆ ಸುತ್ತುವುದರಿಂದ, ಋತುಗಳ ಬದಲಾವಣೆಯಾಗಿ, ತನ್ಮೂಲಕ ವರ್ಷದ ನಿರ್ಣಯವೂ ಸಾಧ್ಯವಾಯಿತು. ಈ ಪದ್ಧತಿಯೇ ಎಲ್ಲ ದೇಶಗಳಲ್ಲೂ, ಪ್ರಾಚೀನ ಕಾಲದಿಂದಲೂ ಜಾರಿಯಲ್ಲಿರುವುದರಿಂದ, ಇದರಲ್ಲಿ ಕೆಲವು ದೋಷಗಳಿವೆಯೆಂದು ನಾವು ತಿಳಿದುಕೊಂಡಿದ್ದರೂ, ವ್ಯವಹಾರದಲ್ಲಿ ಈ ಪದ್ಧತಿಯನ್ನು ಮುಂದುವರಿಸುವುದು ಅನಿವಾರ್ಯವಾಗಿದೆ.

ಬಹಳ ಹಿಂದಿನ ಕಾಲದಲ್ಲಿ, (ಮತ್ತು ಈಚಿನ ಕಾಲದಲ್ಲೂ ಬಹಳ ರಭಸದಿಂದ ಚಲಿಸುವ ಯಾಂತ್ರಿಕ ಯುಗದ ಜೀವನಕ್ಕೆ ಸಿಕ್ಕದೆ ತಮ್ಮ ಪಾಡಿಗೆ ತಾವು ಬಾಳುವ ಅನಕ್ಷರಸ್ಥ ಜನರಿಗೆ) ಕಾಲವನ್ನು ನಿಷ್ಕೃಷ್ಟವಾಗಿ ಅಳೆಯಲು ಉಪಕರಣಗಳಿರಲಿಲ್ಲ ಮತ್ತು ಅವುಗಳ ಅವಶ್ಯಕತೆಯೂ ಇರಲಿಲ್ಲ. ಆಕಾಶದಲ್ಲಿ ಸೂರ್ಯನ ಸ್ಥಾನವನ್ನು ಗಮನಿಸಿ, ಕಾಲದ ಅಂದಾಜು ಮಾಡುವುದು ಅವರ ಅವಶ್ಯಕತೆಯನ್ನು ಪೂರೈಸುತ್ತಿತ್ತು. ಅನಂತರ, ದಿನದ ಭಾಗಗಳನ್ನು ಅಳೆಯಲು ಸೌರಗಡಿಯಾರಗಳು [Sun-dial] ರಚಿಸಲ್ಪಟ್ಟುವು. ಬಯಲಿನಲ್ಲಿ ಒಂದು ಕಂಬವನ್ನು ನೆಟ್ಟು, ಅದರ ನೆರಳಿನ ಸ್ಥಾನದಿಂದ ಕಾಲನಿರ್ಣಯ ಮಾಡುವುದು ಇದರ ತತ್ತ್ವ. ಇದು ಪಾಶ್ಚಾತ್ಯ ದೇಶಗಳಲ್ಲೂ ನಮ್ಮ ದೇಶದಲ್ಲೂ ರೂಢಿಯಲ್ಲಿತ್ತು. ಈಗಲೂ ದೆಹಲಿ, ಜಯಪುರ ಮುಂತಾದ ಊರುಗಳಲ್ಲಿರುವ ಪ್ರಾಚೀನ ಖಗೋಳವಿಜ್ಞಾನಮಂದಿರಗಳ ಅವಶೇಷಗಳಲ್ಲಿ ಈ ವಿಧವಾದ ವ್ಯವಸ್ಥೆಯನ್ನು ನಾವು ನೋಡಬಹುದು. ನಮ್ಮ ದೇಶದಲ್ಲಿ ಜ್ಯೋತಿಷ್ಯಶಾಸ್ತ್ರವು ವಿಶೇಷವಾಗಿ ಅಭಿವೃದ್ಧಿ ಹೊಂದುತ್ತಾ, ಅದಕ್ಕೆ ಕಾಲದ ನಿಖರವಾದ ನಿರ್ಣಯವು ಅತ್ಯವಶ್ಯಕವಾಗಿತ್ತು.

ಒಂದು ದಿನವನ್ನು ಗಂಟೆ-ನಿಮಿಷಗಳಿಗೋ, ಅಥವಾ ಘಳಿಗೆ-ವಿಘಳಿಗೆಗಳಿಗೋ ವಿಭಾಗಿಸಿ, ಈ ಸಣ್ಣ ಅಂತರಗಳನ್ನು ಅಳೆಯಲು ಮರಳಿನ ಮತ್ತು ನೀರಿನ ಯಂತ್ರಗಳನ್ನು ಕೆಲವು ದೇಶಗಳಲ್ಲಿ ಉಪಯೋಗಿಸುತ್ತಿದ್ದರು. ಒಂದು ಸಣ್ಣ ರಂಧ್ರವಿರುವ ಪಾತ್ರೆಯಲ್ಲಿ ಮರಳು ಅಥವಾ ನೀರನ್ನು ತುಂಬಿ, ಅದರ ಎತ್ತರವು ಒಂದೇ ಇರುವಂತೆ ಅಳವಡಿಸಿದರೆ, ಮರಳಿನ ಕಣಗಳಾಗಲಿ, ನೀರಿನ ತೊಟ್ಟುಗಳಾಗಲಿ ಕ್ರಮವಾಗಿ, ಒಂದು ನಿರ್ದಿಷ್ಟ ಕಾಲಾವಧಿಗೆ ಸರಿಯಾಗಿ, ಹೊರಬೀಳುತ್ತವೆ. ಇವುಗಳನ್ನು ಎಣಿಸಿ ಕಾಲನಿರ್ಣಯ ಮಾಡಬಹುದು. ಇದು ಸರಳವಾಗಿದ್ದರೂ, ನಂಬಿಕೆಗೆ ಅರ್ಹವಲ್ಲ. ಒತ್ತಡದ ವ್ಯತ್ಯಾಸ ಅಥವಾ ಬೇರೆ ಕಾರಣಗಳಿಂದ ಇದರ ಗತಿ ಬದಲಾಗಬಹುದು. ಅಲ್ಲಿ ಕಣಗಳನ್ನು ಅಥವಾ ತೊಟ್ಟುಗಳನ್ನು ಎಣಿಸಲು ಸದಾ ಒಬ್ಬರಿದ್ದೇ ಇರಬೇಕು. ಇದರ ವಿಷಯವಾಗಿ ಒಂದು ಸಣ್ಣ ಕಥೆ ಇದೆ. ಸುಪ್ರಸಿದ್ಧ ಗಣಿತ ಶಾಸ್ತ್ರಜ್ಞರೂ, ಜ್ಯೋತಿಷ್ಕರೂ ಆಗಿದ್ದ ಭಾಸ್ಕರಾಚಾರ್ಯರ ಹೆಸರು ಎಲ್ಲರಿಗೂ ತಿಳಿದಿದೆ. ಇವರಿಗೆ ಲೀಲಾವತಿ ಎಂಬ

ಮಗಳಿದ್ದಳು. ಅವಳ ಜಾತಕದಲ್ಲಿ ವಿಧವಾಯೋಗವು ಸ್ಪಷ್ಟವಾಗಿ ಕಂಡು ಬಂದಿತು. ಭಾಸ್ಕರಾಚಾರ್ಯರು ತಮ್ಮ ಪಾಂಡಿತ್ಯವನ್ನೆಲ್ಲಾ ಪ್ರಯೋಗಿಸಿ, ಈ ಯೋಗವನ್ನು ತಪ್ಪಿಸಬಲ್ಲ ಒಂದು ಶುಭ ಮುಹೂರ್ತವನ್ನು ಕಂಡುಹಿಡಿದು, ಅದರಲ್ಲಿ ಮಗಳ ಲಗ್ನಮಾಡಲು ಏರ್ಪಾಡು ಮಾಡಿದರು. ಕಾಲವನ್ನು ನಿಖರವಾಗಿ ಅಳೆಯಲು ಮೇಲೆ ಹೇಳಿದಂತೆ ಒಂದು ಜಲಯಂತ್ರವನ್ನು ನಿರ್ಮಿಸಿ, ನೀರಿನ ತೊಟ್ಟುಗಳನ್ನು ಎಣಿಸಲು ಒಬ್ಬರನ್ನಿಟ್ಟಿದ್ದರು. ವಧುವಾದ ಲೀಲಾವತಿಯು ವಸ್ತ್ರಾಭರಣ ಭೂಷಿತೆಯಾಗಿ ಮುಹೂರ್ತಕ್ಕೆ ತುಸುಕಾಲ ಮುಂಚೆ ಈ ಯಂತ್ರದೊಳಗೆ ಕುತೂಹಲದಿಂದ ಬಗ್ಗಿ ನೋಡಿದಳು. ಆಗ ಯಾರಿಗೂ ಗೋಚರವಾಗದಂತೆ ಒಂದು ಸಣ್ಣ ಮುತ್ತು ಅವಳ ಹಾರದಿಂದ ಪಾತ್ರೆಯೊಳಗೆ ಉದುರಿ, ನೀರು ಹೊರಬೀಳುವ ರಂಧ್ರವನ್ನು ಸ್ವಲ್ಪ ಭಾಗ ಮುಚ್ಚಿತು. ತತ್ಪರಿಣಾಮವಾಗಿ ತೊಟ್ಟುಗಳು ಬೀಳುವ ವೇಗ ಸ್ವಲ್ಪ ಕಡಿಮೆಯಾಯಿತು. ಈ ಎಣಿಕೆಯ ಆಧಾರದ ಮೇಲೆ ಗುಣಿಸಿದ ಮುಹೂರ್ತದಲ್ಲಿ ಲೀಲಾವತಿಯ ಲಗ್ನವಾಯಿತು. ಜಾತಕದ ಪ್ರಕಾರ, ಶೀಘ್ರದಲ್ಲೇ ಅವಳು ವಿಧವೆಯಾದಳು. ಭಾಸ್ಕರಾಚಾರ್ಯರು ಅವಳನ್ನು ಶಿಷ್ಯೆಯನ್ನಾಗಿ ಮಾಡಿಕೊಂಡು ಗಣಿತವನ್ನು ಬೋಧಿಸಿದರು. ಈ ಕಥೆಯಲ್ಲಿ ಸತ್ಯಾಂಶವೆಷ್ಟೋ, ಹೇಳುವುದು ಕಷ್ಟ. ಆದರೆ ಭಾಸ್ಕರಾಚಾರ್ಯರು ತಮ್ಮ ಮಗಳಿನ ಹೆಸರಿನಲ್ಲೇ **'ಲೀಲಾವತಿ'** ಎಂಬ ಗಣಿತದ ಗ್ರಂಥವನ್ನು ಬರೆದಿದ್ದಾರೆ.

ಆಧುನಿಕ ವಿಜ್ಞಾನದ ಸ್ಥಾಪಕರಲ್ಲೊಬ್ಬನಾದ ಗೆಲಿಲಿಯೋ 17 ನೆಯ ಶತಮಾನದಲ್ಲಿ ಸಾಮಾನ್ಯ ಲೋಲಕದ ತತ್ತ್ವವನ್ನು ಕಂಡುಹಿಡಿದನು. L ಉದ್ದವಿರುವ ಸಾಮಾನ್ಯ ಲೋಲಕವು ಪ್ರತಿ ಆವರ್ತನಕ್ಕೂ ತೆಗೆದುಕೊಳ್ಳುವ ಕಾಲ,

$T = 2\pi\sqrt{\frac{L}{g}}$. (ಇಲ್ಲಿ $g$= ಗುರುತ್ವವೇಗೋತ್ಕರ್ಷ ಮತ್ತು $\pi = 3.1416$ ಒಂದು ನಿಯತಾಂಕ). ಅನಂತರ ಪೆಂಡ್ಯುಲಂ ಗಡಿಯಾರಗಳು ರಚಿಸಲ್ಪಟ್ಟುವು. ಮೇಲಿನ ಸಮೀಕರಣದಲ್ಲಿ ವ್ಯಕ್ತವಾಗುವಂತೆ, $g$ ಯ ಬೆಲೆ ಬೇರೆ ಇರುವ ಸ್ಥಳಗಳಲ್ಲಿ ಆವರ್ತನ ಕಾಲವೂ ಸ್ವಲ್ಪ ವ್ಯತ್ಯಾಸ ಹೊಂದುತ್ತದೆ. ಉಷ್ಣತೆಯ ಬದಲಾವಣೆಯಿಂದ ಉದ್ದ ವ್ಯತ್ಯಾಸವಾಗಿ, ಲೋಲಕದ ಆವರ್ತನ ಕಾಲವು ಸ್ವಲ್ಪ ಬದಲಾಗುತ್ತದೆ. ಇದನ್ನು ಸರಿಪಡಿಸಲು ಬೇರೆ ಬೇರೆ ವಿಧದ ಸಮೀಕೃತಲೋಲಕಗಳನ್ನು (Compensated Pendulum) ರಚಿಸಿದ್ದಾರೆ.

ಆಧುನಿಕ ವಿಜ್ಞಾನವು ಚೆನ್ನಾಗಿ ಬೇರೂರಲು, ಮೂಲಭೌತ ಪರಿಮಾಣಗಳಿಗೆ ಆದರ್ಶಮಾನಗಳನ್ನು ನಿಖರವಾಗಿ ನಿರೂಪಿಸುವ ಆವಶ್ಯಕತೆ ಕಂಡು ಬಂದಿತು. ಒಂದು ಸ್ಥಳದಲ್ಲಿ ಸೂರ್ಯನು ಮಧ್ಯಾಹ್ನ ರೇಖೆಯನ್ನು ದಾಟಿದ

ಮೇಲೆ, ಪುನಃ ಮುಂದಿನ ಬಾರಿ ದಾಟುವ ವರೆಗೆ ಇರುವ ಕಾಲದ ಅಂತರವನ್ನು ಒಂದು ಸೌರದಿನವೆಂದು ಕರೆಯಬಹುದು. ವರ್ಷದಲ್ಲಿ ಈ ದಿನದ ಪ್ರಮಾಣವು ಒಂದೇ ಇರದೆ ವ್ಯತ್ಯಾಸಹೊಂದುತ್ತದೆ. ಆದುದರಿಂದ ಒಂದು ವರ್ಷದಲ್ಲಿನ ಎಲ್ಲಾ ಸೌರ ದಿನಗಳ ಸರಾಸರಿಯನ್ನು ತೆಗೆದುಕೊಳ್ಳಬೇಕು. ಇದಕ್ಕೆ ಸರಾಸರಿ ಸೌರದಿನ (Mean solar day) ಎಂದು ಹೆಸರು. ಈ ದಿನದಲ್ಲಿ 86400 ನೆಯ 1 ಭಾಗಕ್ಕೆ ಸರಾಸರಿ ಸೌರ ಸೆಕೆಂಡ್ ಎಂದು ಹೆಸರು. ಇದು ಕಾಲದ ಮೂಲಮಾನ.

ಒಂದು ದೇಶದಲ್ಲಿ ಮಧ್ಯಾಹ್ನವಾದಾಗ, ಪ್ರಪಂಚದಲ್ಲೆಲ್ಲಾ ಮಧ್ಯಾಹ್ನವಿರುವುದಿಲ್ಲ. ಇಂಡಿಯಾದಲ್ಲಿ ಮಧ್ಯಾಹ್ನ 12 ಗಂಟೆಯಾದರೆ, ಇಂಗ್ಲೆಂಡಿನಲ್ಲಿ ಆಗ ಬೆಳಗ್ಗೆ 6-30 ಗಂಟೆ ಮತ್ತು ಆಸ್ಟ್ರೇಲಿಯಾದಲ್ಲಿ ಸಂಜೆಯೂ, ಅಮೆರಿಕಾದಲ್ಲಿ ರಾತ್ರಿಯೂ ಆಗಿರುತ್ತದೆ. ರೈಲಿನಲ್ಲಿ ವೇಗವಾಗಿ ಪ್ರಯಾಣ ಮಾಡುವುದು ಪ್ರಾರಂಭವಾದಾಗ, ಈ ತೊಂದರೆ ಗಮನಕ್ಕೆ ಬಂದಿತು. ಭೂಮಿಯು ಒಂದು ಸಲ ತನ್ನ ಅಕ್ಷದ ಸುತ್ತಲು ತಿರುಗಲು ಒಂದು ದಿನ ಬೇಕು. ಆದುದರಿಂದ ಭೂಮಿಯನ್ನು ಧ್ರುವಗಳ ಮೂಲಕ ಹಾದುಹೋಗುವ ವೃತ್ತಗಳಿಂದ 360 ಸಮಾನವಾದ ವಲಯಗಳಿಗೆ ವಿಭಾಗಿಸಿದರೆ, ಒಂದೊಂದು ವಲಯವೂ 1° ಕೋನದ ಭೂಭ್ರಮಣವನ್ನು ಸೂಚಿಸುತ್ತದೆ. ಈ ರೇಖೆಗಳಿಗೆ ರೇಖಾಂಶಗಳೆಂದು ಹೆಸರು. 360° ರೇಖಾಂಶಗಳು 24 ಗಂಟೆಗೆ ಸಮ. ಆದುದರಿಂದ 1° ರೇಖಾಂಶ ವ್ಯತ್ಯಾಸವಿರುವ ಸ್ಥಳಗಳಲ್ಲಿ ಕಾಲ ವ್ಯತ್ಯಾಸವು 4 ನಿಮಿಷಗಳು. ಇಂಗ್ಲೆಂಡಿನ ಬಳಿ ಇರುವ ಗ್ರೀನ್‌ವಿಚ್ ಎಂಬ ಸ್ಥಳದ ಮೂಲಕ ಹಾಯುವ ರೇಖಾಂಶವನ್ನು 0 ಎಂದು ಪರಿಗಣಿಸುವ ವಾಡಿಕೆ. ಗ್ರೀನ್‌ವಿಚ್‌ನಲ್ಲಿ, ಏಪ್ರಿಲ್ 16 ನೇ ತಾರೀಕು, ಸೂರ್ಯನು ನೆತ್ತಿಯ ಮೇಲೆ ಬಂದಾಗ ಗ್ರೀನ್‌ವಿಚ್ ಮೀನ್‌ಟೈಮ್ (G.M.T.) ಪ್ರಕಾರ 12 ಗಂಟೆ. ನಮ್ಮ ರೇಖಾಂಶದ ಪ್ರಕಾರ ನಾವು ಇದರಿಂದ ಕೆಲವು ಕಾಲವನ್ನು ಕೂಡಿಯೋ ಕಳೆದೋ ನಮ್ಮ ಕಾಲವನ್ನು ಪಡೆಯಬಹುದು. ಅಮೆರಿಕದ ಫ್ಲೆಮಿಂಗ್ ಮತ್ತು ಡೌಡ್, 1880 ರಲ್ಲಿ ಸಲಹೆ ಮಾಡಿದ ಪ್ರಕಾರ, ಭೂಮಿಯನ್ನು 24 ಗಂಟೆಗಳ ವಲಯಗಳನ್ನಾಗಿ ಭಾಗಿಸಿ, ಪ್ರತಿ ವಲಯದಲ್ಲೂ ಒಂದೇ ಕಾಲವನ್ನಿಟ್ಟು, ಮುಂದಿನ ವಲಯಕ್ಕೆ ಹೋದಾಗ 1 ಗಂಟೆ ಗಡಿಯಾರವನ್ನು ತಿರುಗಿಸುವ ಸಂಪ್ರದಾಯವು ಬಳಕೆಗೆ ಬಂತು. ಈಗಂತೂ, ವಿಮಾನಯಾನ ಮಾಡುವಾಗ ಈ ಸೋಜಿಗವು ಅನೇಕರ ಅನುಭವಕ್ಕೆ ಬರುತ್ತಿದೆ. ನೂರಾರು ಮೈಲಿ ಪಶ್ಚಿಮಕ್ಕೆ ಪ್ರಯಾಣ ಮಾಡಿದರೆ, ನಡುಹಗಲಿನಲ್ಲಿಯೇ ನಮಗೆ ಅತಿಶಯವಾದ ಆಯಾಸ, ನಿದ್ರೆ ಉಂಟಾಗುತ್ತದೆ. ನಾವು ಹೊರಟು ಎಷ್ಟೋ ಗಂಟೆಗಳಾಗಿದ್ದರೂ, ಗಡಿಯಾರ

ವನ್ನು ಹಿಂದೆ ಹಾಕುತ್ತಾ ಇರುವುದರಿಂದ, ಇನ್ನೂ ರಾತ್ರಿಯಾಗಿಲ್ಲದಿರುವುದರಿಂದ, ಕಾಲದ ಗಣನೆ ನಮ್ಮ ಮನಸ್ಸಿನಿಂದ ಮರೆಯಾಗಬಹುದು. ಆದರೆ ನಮ್ಮ ದೇಹವು ಈ ಜಿಜ್ಞಾಸೆಯನ್ನು ಕೇಳುವುದಿಲ್ಲ.

ಪೆಂಡ್ಯುಲಂ ಗಡಿಯಾರಗಳು ನಿರಂತರವಾಗಿ ನಡೆಯುತ್ತಿರಲಿಲ್ಲ ಮತ್ತು ಅನೇಕ ದೋಷಗಳಿಂದ ಕೂಡಿದ್ದುವು. ಆಗ ನೌಕಾಯಾನ ಮಾಡಲು, ರೇಖಾಂಶದ ನಿರ್ಣಯಕ್ಕೆ ನಿಖರವಾದ ಕಾಲದ ಅಳತೆ ಬಹಳ ಅವಶ್ಯಕವಾಗಿತ್ತು. ತಮ್ಮ ಆವಶ್ಯಕತೆಯನ್ನು ಪೂರೈಸುವಂತಹ ಗಡಿಯಾರವನ್ನು ಕಂಡು ಹಿಡಿದವರಿಗೆ ಭಾರಿ ಬಹುಮಾನ ಕೊಡುವುದಾಗಿ (2 ಲಕ್ಷ ರೂ.) ಇಂಗ್ಲೆಂಡಿನ ನೌಕಾ ಕಂಪೆನಿಯವರು ಕ್ರಿ. ಶ. 1714 ರಲ್ಲಿ ಪ್ರಕಟಿಸಿದರು. ಸ್ಥಳದಿಂದ ಸ್ಥಳಕ್ಕೆ ಗುರುತ್ವ ವೇಗೋತ್ಕರ್ಷವು ಬದಲಾಗುವುದರಿಂದ, ಪೆಂಡ್ಯುಲಂ ಗಡಿಯಾರಗಳಿಂದ ಈ ನಿಷ್ಕೃಷ್ಟವಾದ ಅಳತೆ ಸಾಧ್ಯವಿಲ್ಲವೆಂದು ಮನಗಂಡು, ವಿಜ್ಞಾನಿಗಳು ಮತ್ತು ಯಾಂತ್ರಿಕರು ಹೊಸ ತತ್ತ್ವಗಳ ಆಧಾರದ ಮೇಲೆ ಗಡಿಯಾರಗಳನ್ನು ರಚಿಸಲು ಯತ್ನಿಸಿದರು. 1761 ರಲ್ಲಿ ಸ್ಪ್ರಿಂಗಿನ ತತ್ತ್ವವನ್ನುಪಯೋಗಿಸಿ ಹ್ಯಾರಿಸನ್ ನೌಕಾಯಾನಕ್ಕೆ ಸಹಾಯ ಮಾಡುವ ಗಡಿಯಾರವನ್ನು ರಚಿಸಿದನು. ಈಗ ಹೆಚ್ಚಾಗಿ ಬಳಕೆಯಲ್ಲಿರುವುದು ಸ್ಪ್ರಿಂಗ್ ಗಡಿಯಾರಗಳೇ. ಸುತ್ತಿರುವ ಸ್ಪ್ರಿಂಗು ನಿಧಾನವಾಗಿ, ಸಮಗತಿಯಲ್ಲಿ, ಹಿಂದಕ್ಕೆ ಬಿಡಿಸಿಕೊಳ್ಳುತ್ತಾ ಒಂದು ಚಕ್ರವನ್ನು ತಿರುಗಿಸುತ್ತದೆ. ಇದು ಗಡಿಯಾರದ ಮುಳ್ಳುಗಳು ಸುತ್ತುವಂತೆ ಮಾಡುತ್ತದೆ. ಇಲ್ಲಿಯೂ ಕೂಡ, ಉಷ್ಣತೆಯ ವ್ಯತ್ಯಾಸದಿಂದ ಸ್ಪ್ರಿಂಗು ಹೆಚ್ಚಿನ ಉದ್ದ ವ್ಯತ್ಯಾಸ ಹೊಂದದೆ ಇರಲು, ಇನ್‌ವಾರ್ ಸ್ಟೀಲ್ (Invar steel) ಮೊದಲಾದ ಲೋಹಗಳನ್ನೂ ಉಪಯೋಗಿಸುವುದಲ್ಲದೆ, ಗತಿಯು ಒಂದೇ ರೀತಿ ಇರಲು ಕೆಲವು ಜೋಡಣೆಗಳನ್ನು ಮಾಡುತ್ತಾರೆ.

ಇದೇ ಕಾಲದಲ್ಲಿ ಕ್ರೋನೋಮೀಟರ್ ಎಂಬ ಗಡಿಯಾರಗಳೂ ರಚಿಸಲ್ಪಟ್ಟವು. ಒಲಿಂಪಿಕ್ ಪಂದ್ಯಗಳಲ್ಲಿ, ಕುದುರೆ ಜೂಜುಗಳಲ್ಲಿ, ಕಾಲವನ್ನು ನಿಖರವಾಗಿ ಅಳೆಯಲು ಇವುಗಳನ್ನು ಉಪಯೋಗಿಸುತ್ತಾರೆ. ಸುಮಾರು 1/100 ಸೆಕೆಂಡ್‌ವರೆಗೂ ಅಳೆಯಬಲ್ಲ ಸಾಧನಗಳಿವೆ.

ವಿದ್ಯುಚ್ಛಕ್ತಿಯ ನಿಯಮಗಳನ್ನು ತಿಳಿದುಕೊಂಡ ಮೇಲೆ, ಅದರ ಸಹಾಯದಿಂದ ಉತ್ಕೃಷ್ಟವಾದ ಕಾಲಮಾಪಕಗಳನ್ನು ರಚಿಸಲು ಸಾಧ್ಯವಾಯಿತು. ಒಂದು ಸೆಕೆಂಡಿನಲ್ಲಿ ಅನೇಕ ಬಾರಿ ತಾನು ಹರಿಯುವ ದಿಕ್ಕನ್ನು ಬದಲಾಯಿಸುವ ವಿದ್ಯುತ್ಪ್ರವಾಹಕ್ಕೆ ಆವರ್ತನ ವಿದ್ಯುತ್ಪ್ರವಾಹ (A.C) ಎಂದು ಹೆಸರು. ಒಂದು ಸೆಕೆಂಡಿನಲ್ಲಿ ಅದು ಎಷ್ಟು ಬಾರಿ ದಿಕ್ಕನ್ನು ಬದಲಾಯಿಸುವುದೋ, ಆ ಸಂಖ್ಯೆಗೆ ಪ್ರವಾಹದ ಆವರ್ತನ ಸಂಖ್ಯೆ (Frequency) ಎಂದು ಹೆಸರು.

ಒಂದು ಕಬ್ಬಿಣದ ತುಂಡಿನ ಸುತ್ತಲೂ ಇರುವ ತಂತಿಯ ಮೂಲಕ, ಇಂತಹ ವಿದ್ಯುತ್ಪ್ರವಾಹವಾದರೆ, ತತ್ಕಾಲಕ್ಕೆ ಅದು ಅಯಸ್ಕಾಂತವಾಗಿ, ಇತರ ಕಬ್ಬಿಣದ ತುಂಡುಗಳನ್ನು ಆಕರ್ಷಿಸಬಲ್ಲದು. ಇಂತಹ ಒಂದು ವಿದ್ಯುದಯಸ್ಕಾಂತದ ಧ್ರುವಗಳ ನಡುವೆ ಒಂದು ಕಾಂತದ ಸೂಜಿಯನ್ನಿಟ್ಟು ತಿರುಗಿಸಿದರೆ, ಅದು ಸಮ ವೇಗದಿಂದ ತಿರುಗುತ್ತದೆ. ವಿದ್ಯುತ್ಪ್ರವಾಹದ ಆವರ್ತನ ಸಂಖ್ಯೆಯಿಂದ, ಈ ಸೂಜಿಯ ಭ್ರಮಣ ವೇಗವು ನಿರ್ಧರಿಸಲ್ಪಡುತ್ತದೆ. ಒಂದು ಸೂಜಿಗೆ ಬದಲು, ಅನೇಕ ಹಲ್ಲುಗಳನ್ನುಳ್ಳ ಚಕ್ರವನ್ನು ಜೋಡಿಸಿದರೆ, ಈ ಚಕ್ರವೂ ಸಮವೇಗದಿಂದ ತಿರುಗುತ್ತದೆ. ಇದರ ವೇಗವನ್ನು ಆವರ್ತನ ಸಂಖ್ಯೆ ಮತ್ತು ಹಲ್ಲುಗಳ ಸಂಖ್ಯೆಯಿಂದ ತಿಳಿಯಬಹುದು. ಹೀಗೆ ಸುತ್ತುವ ಚಕ್ರದ ಸಹಾಯದಿಂದ ಗಡಿಯಾರವನ್ನು ನಡೆಸಬಹುದು. ಈ ವಿಧವಾದ ಗಡಿಯಾರಗಳು ಸಾಧಾರಣ ಗಡಿಯಾರ ಗಳಿಗಿಂತ ನಂಬಿಕೆಗೆ ಅರ್ಹವಾದರೂ, ಅತಿ ಸಣ್ಣ ಕಾಲದ ಅಂತರಗಳನ್ನು ನಿಖರ ವಾಗಿ ಅಳೆಯಲು ಇವುಗಳಿಂದ ಸಾಧ್ಯವಿಲ್ಲ. ಏಕೆಂದರೆ, ವಿದ್ಯುತ್ಪ್ರವಾಹದ ಆವರ್ತನ ಸಂಖ್ಯೆ ಸ್ಥಿರವಾಗಿರುವುದಿಲ್ಲ. ಹಾಗೆ ನಿಯತವಾದ ಆವರ್ತನ ಸಂಖ್ಯೆಯುಳ್ಳ ವಿದ್ಯುತ್ಪ್ರವಾಹವನ್ನು ಪಡೆಯಲು ವಿಜ್ಞಾನಿಗಳು ಅನೇಕ ಯತ್ನಗಳನ್ನು ಮಾಡಿದ್ದಾರೆ.

ರೇಡಿಯೋದಲ್ಲಿ ವಾಲ್ವ್, ಕಂಡೆನ್ಸರ್ ಮುಂತಾದ ಉಪಕರಣಗಳು ಅನೇಕ ರಿಗೆ ಪರಿಚಯವಿದೆ. ಒಂದು ಕಂಡೆನ್ಸರ್ ಮತ್ತು ತಂತಿಯ ಸುರುಳಿಯನ್ನೊಳ ಗೊಂಡ ಮಂಡಲದಲ್ಲಿ ವಿದ್ಯುತ್ತು ಪ್ರವಹಿಸಿದರೆ, ಒಂದು ನಿಯತವಾದ ಆವರ್ತನ ಪ್ರವಾಹ ಉಂಟಾಗುವುದು. ಈ ಸಂಖ್ಯೆಯು ತಂತಿ ಸುರುಳಿಯ ಮತ್ತು ಕಂಡೆ ನ್ಸರ್‌ನ ಸ್ವರೂಪ ಮತ್ತು ಆಕಾರಗಳನ್ನವಲಂಬಿಸಿದೆ. ಎಷ್ಟು ಜಾಗರೂಕತೆ ಯಿಂದ ಸಿದ್ಧತೆಮಾಡಿ ಉಪಕರಣವನ್ನು ಜೋಡಿಸಿದರೂ ಆವರ್ತನ ಸಂಖ್ಯೆಯಲ್ಲಿ ಬದಲಾವಣೆಯನ್ನು ತಪ್ಪಿಸುವುದು ಅಸಾಧ್ಯ. ಆದರೆ ಅಲ್ಪ ಪ್ರಮಾಣದಿಂದ ಸೆಕೆಂಡಿಗೆ 30000000 ವರೆಗೂ ಆವರ್ತನ ಸಂಖ್ಯೆಯುಳ್ಳ ವಿದ್ಯುತ್ಪ್ರವಾಹವನ್ನು ಉಂಟುಮಾಡಬಹುದು. ಶಬ್ದವನ್ನು ಉತ್ಪಾದನೆ ಮಾಡುವ ಶ್ರುತಿಕವಲು (Tuning Fork) ಎಂಬುದನ್ನು ಅನೇಕರು ನೋಡಿರಬಹುದು. ಇದನ್ನು ಕಂಪಿಸು ವಂತೆ ಮಾಡಿದರೆ ಒಂದೇ ಶ್ರುತಿಯ ಶಬ್ದವನ್ನು ಉತ್ಪತ್ತಿಮಾಡುತ್ತದೆ. ಇದರ ಆವರ್ತನ ಸಂಖ್ಯೆಯು ಸ್ಥಿರವಾಗಿದ್ದು, ಅದರ ಆಕಾರ ಮತ್ತು ಲೋಹದ ಗುಣ ಗಳನ್ನವಲಂಬಿಸಿರುತ್ತದೆ. ಹಿಂದೆ ಹೇಳಿದ ವಾಲ್ವ್, ಕಂಡೆನ್ಸರ್‌ಗಳ ಸಹಾಯದಿಂದ, ಟ್ಯೂನಿಂಗ್ ಫೋರ್ಕಿನ ಆವರ್ತನ ಸಂಖ್ಯೆಯಷ್ಟೇ ಆವರ್ತನ ಸಂಖ್ಯೆಯುಳ್ಳ ವಿದ್ಯುತ್ಪ್ರವಾಹವನ್ನು ಉಂಟುಮಾಡಿ, ತನ್ಮೂಲಕ ಫೋರ್ಕ್ ನಿರಂತರವಾಗಿ ಕಂಪಿಸು

ವಂತೆ ಮಾಡಬಹುದು. ಇದರಿಂದ ಪ್ರವಾಹದ ಆವರ್ತನ ಸಂಖ್ಯೆಯು ಸ್ವಲ್ಪ ಮಟ್ಟಿಗೆ ಸ್ಥಿರವಾಗುತ್ತದೆ. ನಾವು ಎರಡು ಕೈಗಳಿಂದಲೂ ತಾಳ ಹಾಕಲು ಪ್ರಾರಂಭಿಸಿದರೆ, ಕ್ಷಿಪ್ರದಲ್ಲೇ, ಎರಡು ಅಂತರಗಳೂ ಹೊಂದಿಕೊಂಡು, ತಾಳಗಳು ಏಕಕಾಲದಲ್ಲಿ ಬೀಳುತ್ತವೆ. ಇದೇ ರೀತಿ, ಸುಮಾರು ಒಂದೇ ಗತಿಯಲ್ಲಿ ಕಂಪಿಸುವ ಎರಡು ವ್ಯವಸ್ಥೆಗಳನ್ನು ಒಟ್ಟಿಗೆ ಜೋಡಿಸಿದರೆ, ಅವೆರಡರ ಆವರ್ತನ ಸಂಖ್ಯೆಯು ಒಂದೇ ಆಗುವುದು ಮಾತ್ರವಲ್ಲದೆ, ವ್ಯತ್ಯಾಸವಾಗುವ ಪ್ರವೃತ್ತಿಯು ಕಡಿಮೆಯಾಗುತ್ತದೆ. ಆದರೂ ಸಹ, ಟ್ಯೂನಿಂಗ್ ಫೋರ್ಕಿನೊಡನೆ ಜೋಡಿಸಿದ ವಿದ್ಯುತ್-ಗಡಿಯಾರವು ಒಂದು ದಿನದಲ್ಲಿ ಒಂದು ನಿಮಿಷದವರೆಗೆ ಕಾಲ ವ್ಯತ್ಯಾಸ ಹೊಂದುವುದು ಸಾಧ್ಯ. ಅಂದರೆ, ಇದಕ್ಕಿಂತ ಸಾಮಾನ್ಯವಾದ ಗಡಿಯಾರಗಳೇ ಮೇಲಾಯಿತು.

ಕ್ರಿ. ಶ. 1881 ರಲ್ಲಿಯೇ ಕ್ಯೂರಿ ಸಹೋದರರು ಪೀಸೋ ಎಲೆಕ್ಟ್ರಿಸಿಟಿ ಎಂಬ ಕ್ರಿಯೆಯನ್ನು ಕಂಡುಹಿಡಿದರು. ಕ್ವಾರ್ಟ್ಸ್ ಎಂಬ ಹರಳಿನ ಮುಖಗಳ ಮೇಲೆ ಒತ್ತಡವನ್ನುಂಟುಮಾಡಿದಾಗ ಅವುಗಳಲ್ಲಿ ವಿದ್ಯುತ್ತು ಉಂಟಾಗುತ್ತದೆ; ಮತ್ತು ಕ್ವಾರ್ಟ್ಸ್ ಹರಳಿನ ಮುಖಗಳ ಮೇಲೆ, ಒಂದು ಕಡೆ ಧನ ವಿದ್ಯುತ್ತು ಮತ್ತು ಇನ್ನೊಂದು ಕಡೆ ಋಣ ವಿದ್ಯುತ್ತು ಇದ್ದರೆ, ಆಗ ಇದರ ಪರಿಣಾಮವಾಗಿ ಒಂದು ಒತ್ತಡವು ಸೃಷ್ಟಿಯಾಗಿ ಹರಳಿನ ಆಕಾರದಲ್ಲಿ ಅಲ್ಪ ವ್ಯತ್ಯಾಸವಾಗುತ್ತದೆ. ಈ ಗುಣವನ್ನು ಉಪಯೋಗಿಸಿ ಕ್ಯಾಡಿ ಎಂಬ ವಿಜ್ಞಾನಿಯು ಒಂದು ಕ್ವಾರ್ಟ್ಸ್ ಹರಳನ್ನು ಆವರ್ತನ ವಿದ್ಯುತ್ಪ್ರವಾಹವಿರುವ ಮಂಡಲದಲ್ಲಿ ಜೋಡಿಸಿದನು. ಆಗ ಈ ಹರಳು ಬಹಳ ನಿಯತವಾದ ಕಂಪನ ವೇಗವನ್ನು ಹೊಂದಿದೆಯೆಂದು ತಿಳಿದುಬಂದಿತು. ಇದರ ಆವರ್ತನ ಸಂಖ್ಯೆಯು ಹರಳಿನ ಆಕಾರ ಮತ್ತು ಗಾತ್ರವನ್ನು ಮಾತ್ರ ಅವಲಂಬಿಸಿದೆ. ವಿದ್ಯುತ್ಪ್ರವಾಹದಲ್ಲಿ ಆಗುವ ವ್ಯತ್ಯಾಸಗಳಿಂದ ಇದು ಬದಲಾಗುವುದಿಲ್ಲ. 1935 ರಲ್ಲಿ ಇಂಗ್ಲೆಂಡಿನಲ್ಲಿ, ಕ್ವಾರ್ಟ್ಸ್ ಹರಳು ಜೋಡಿಸಿರುವ ವಿದ್ಯುತ್ ವ್ಯವಸ್ಥೆಯಲ್ಲಿ 8 ತಿಂಗಳ ಕಾಲ ನಿರಂತರವಾಗಿ ವಿದ್ಯುತ್ಪ್ರವಾಹವನ್ನು ಹರಿಸಲಾಯಿತು. ಇದರ ಆವರ್ತನ ಸಂಖ್ಯೆಯು ಬಹಳ ನಿಯತವಾಗಿತ್ತು. 5 ಕೋಟಿಯಲ್ಲಿ 1 ಭಾಗ ಮಾತ್ರ ವ್ಯತ್ಯಾಸವಾಗಿರಬಹುದು. ಈ ಪ್ರವಾಹದ ಸಹಾಯದಿಂದ ನಡೆಸಿದ ಗಡಿಯಾರದ ಕಾಲವು ಒಂದು ವರ್ಷಕ್ಕೆ ಸುಮಾರು ಅರ್ಧ ಸೆಕೆಂಡ್ ವ್ಯತ್ಯಾಸವಾಗಬಹುದು. ಈಚೆಗೆ, 40 ವರ್ಷಗಳಲ್ಲಿ 1 ಸೆಕೆಂಡಿಗೂ ಕಡಿಮೆಯಷ್ಟು ವ್ಯತ್ಯಾಸವುಳ್ಳ ನಿಯತವಾದ ಆವರ್ತನ ಪ್ರವಾಹವನ್ನು ಪಡೆಯುವುದು ಸಾಧ್ಯವಾಗಿದೆ.

ಇಷ್ಟು ನಿಷ್ಕೃಷ್ಟವಾದ ಅಳತೆ ಯಾವ ಉಪಯೋಗಕ್ಕೆ ಬರುತ್ತದೆ ಎಂದು ಕೆಲವರ ಮನಸ್ಸಿನಲ್ಲಿ ಪ್ರಶ್ನೆ ಮೂಡಬಹುದು. ವಿಜ್ಞಾನದಲ್ಲಿ ಕಾಲದ ಅಳತೆ ಬಹಳ ಮುಖ್ಯವಾದುದು. ಬೆಳಕಿನ ವೇಗವನ್ನು (ಸೆಕೆಂಡಿಗೆ 186000 ಮೈಲಿ) ಕಂಡು

ಹಿಡಿಯಬೇಕಾದರೆ ಅತ್ಯಲ್ಪ ಕಾಲಪ್ರಮಾಣದಲ್ಲಿ ಬೆಳಕು ಚಲಿಸುವ ದೂರವನ್ನು ಅಳೆಯಬೇಕು. ಕೆಲವು ಮೈಲಿಗಳಿಗಿಂತ ಹೆಚ್ಚು ದೂರವನ್ನು ತೆಗೆದುಕೊಳ್ಳುವುದು ಸಾಧ್ಯವಿಲ್ಲ. ಇಷ್ಟು ಅಲ್ಪ ಪ್ರಮಾಣದ ಕಾಲವನ್ನು ನಿಖರವಾಗಿ ಅಳೆಯಲು ಮೈಕೆಲ್‌ಸನ್ ತಿರುಗುವ ಚಕ್ರದ ವಿಧಾನವನ್ನು ಉಪಯೋಗಿಸಿದನು. ಮನುಷ್ಯನ ಮತ್ತು ಪ್ರಾಣಿಗಳ ಎದೆಯ ಬಡಿತವನ್ನು ನಿಷ್ಕೃಷ್ಟವಾಗಿ ಅಳೆಯಲು ಕಾರ್ಡಿಯೋಗ್ರಾಮ್ ಎಂಬ ಉಪಕರಣವನ್ನು ಉಪಯೋಗಿಸುತ್ತಾರೆ. ಇದರಲ್ಲೂ ಸಮಗತಿಯಿಂದ ತಿರುಗುವ ಚಕ್ರದ ತತ್ತ್ವವೇ ಉಪಯೋಗಿಸಲ್ಪಟ್ಟಿದೆ. ಆದರೆ ಈಚೆಗೆ ರೇಡಾರ್ ಎಂಬ ಸಾಧನದಲ್ಲಿ ಈ ಅವಶ್ಯಕತೆ ಬಹಳವಾಗಿದೆ. ಅಂತರಿಕ್ಷದಲ್ಲಿ ದೂರದಲ್ಲಿ ಬರುತ್ತಿರುವ ವಿಮಾನಗಳನ್ನು ಗುರುತಿಸಿ, ಅವುಗಳ ವೇಗವನ್ನು ಅಳೆಯಬಲ್ಲ ಉಪಕರಣ ರೇಡಾರ್. ಒಂದು ಕೇಂದ್ರದಿಂದ ವಿದ್ಯುತ್ಕಾಂತ ತರಂಗಗಳನ್ನು (ವೇಗವು ಬೆಳಕಿನ ವೇಗವೇ) ಕಳುಹಿಸಿ, ಇದು ವಿಮಾನದಿಂದ ಪ್ರತಿಫಲಿತವಾಗಿ ಬರಲು ಎಷ್ಟು ಕಾಲವಾಗುತ್ತದೆ ಎಂಬುದನ್ನು ಅಳೆದರೆ, ಆ ವಿಮಾನವಿರುವ ದೂರವು ತಿಳಿಯುತ್ತದೆ. 100 ಮೈಲಿ ದೂರದಲ್ಲಿ ವಿಮಾನವಿದ್ದರೆ, ಈ ಕಾಲವು ಸುಮಾರು 1/1000 ಸೆಕಂಡ್ ಆಗುತ್ತದೆ. ಅದನ್ನು ಬಹಳ ನಿಖರವಾಗಿ ಅಳೆಯಬೇಕು. ಸುಮಾರು 200 ಮೈಲಿ ದೂರದಲ್ಲಿನ ಸ್ಥಳದ ಮೇಲೆ ಒಂದು ವಿಮಾನವು ಬಾಂಬ್ ಹಾಕಿ ಬರಬೇಕಾದರೆ, ರೇಡಾರಿನಿಂದಲೇ ಇದರ ವೇಗ, ದಿಕ್ಕುಗಳನ್ನು ನಿಯಂತ್ರಿಸಬೇಕಾಗುತ್ತದೆ. ಸರಿಯಾಗಿ ಸ್ಥಾನ ನಿರ್ದೇಶ ಮಾಡಲು 1/100000 ಸೆಕೆಂಡಿನಷ್ಟು ವ್ಯತ್ಯಾಸವಿಲ್ಲದೆ ಕಾಲದ ಅಳತೆಯನ್ನು ಮಾಡಬೇಕು ಮತ್ತು ಮಾಡಿದ್ದಾರೆ. ಈಗ ನೌಕಾಯಾನ ಮತ್ತು ವಿಮಾನಯಾನಗಳಲ್ಲಿ ರೇಡಾರ್ ಅವಶ್ಯಕವಾಗಿದೆ. 40000 ಗಜ ದೂರದೊಳಗಿರುವ ಇತರ ಹಡಗುಗಳ ಸ್ಥಾನಗಳನ್ನು 40 ಗಜಕ್ಕಿಂತ ತಪ್ಪಾಗದೆ ತಿಳಿಯಬೇಕಾದರೆ, ರೇಡಾರ್ 1/5000 ಸೆಕೆಂಡ್ ಕಾಲವನ್ನು ಅಳೆಯಬೇಕು. ಈ ಅಳತೆಯಲ್ಲಿ 1/5000000 ಸೆಕೆಂಡಿನಷ್ಟೂ ವ್ಯತ್ಯಾಸವಾಗಬಾರದು. ಈ ನಿಖರತೆಯನ್ನು ಊಹಿಸುವುದೂ ಕಷ್ಟ. ಅಂತಹ ಉಪಕರಣಗಳು ಇವೆ ಇವುಗಳಲ್ಲಿ ಅತಿ ನಿಯತವಾದ ಆವರ್ತನಸಂಖ್ಯೆಯುಳ್ಳ ವಿದ್ಯುತ್ಕಾಂತತರಂಗವನ್ನು ಪ್ರಸಾರ ಮಾಡುವ ವ್ಯವಸ್ಥೆ ಅವಶ್ಯಕ. ಇಲ್ಲಿ, ಹಿಂದೆ ಹೇಳಿದ ಕ್ವಾರ್ಟ್ಸ್ ಹರಳು ಜೋಡಿಸಿರುವ ವ್ಯವಸ್ಥೆಗಳನ್ನು ಉಪಯೋಗಿಸುವರು. ಈ ತರಂಗಗಳು ನೇರವಾಗಿ ಗ್ರಾಹಕಕ್ಕೆ ಬರುವುದಕ್ಕೂ, ಮೇಲೆ ಹೋಗಿ, ವಿಮಾನ ಅಥವಾ ಇತರ ಪ್ರತಿಬಂಧಕದಿಂದ ಪ್ರತಿಫಲಿತವಾಗಿ, ಗ್ರಾಹಕಕ್ಕೆ ಬರುವುದಕ್ಕೂ ಇರುವ ಕಾಲದ ಅಂತರವನ್ನು ಅಳೆಯಲು ಎಲೆಕ್ಟ್ರಾನ್ ಆವರ್ತ ಲೇಖಕವನ್ನು (Cathode Ray Oscillograph)ಉಪಯೋಗಿಸುತ್ತಾರೆ. ವಿಸ್ತಾರಭಯದಿಂದ ಇದರ ರಚನೆಯನ್ನು

ಇಲ್ಲಿ ವಿವರಿಸುವುದಿಲ್ಲ. ಶ್ರೀ ಆರ್. ಎಲ್. ನರಸಿಂಹಯ್ಯನವರ " ರೇಡಾರ್ " ಎಂಬ ಪುಸ್ತಕದಲ್ಲಿ ಈ ವಿಷಯಗಳು ವಿಸ್ತಾರವಾಗಿಯೂ ಸ್ಪಷ್ಟವಾಗಿಯೂ ವಿವರಿಸಲ್ಪಟ್ಟಿವೆ. ಈಗ ರಷ್ಯಾದೇಶದ ವಿಜ್ಞಾನಿಗಳು ಸ್ಪೂಟ್ನಿಕ್ ಉಪಗ್ರಹವನ್ನು ತಮ್ಮ ಯೋಜನೆಗೆ ಅನುಸಾರವಾಗಿ, ಪೂರ್ವ ನಿಶ್ಚಯಿಸಿದ ಸ್ಥಳ ಮತ್ತು ಕಾಲದಲ್ಲಿ ಬಿಡಲು ಎಷ್ಟು ನಿಖರವಾದ ಅಳತೆಯ ಉಪಕರಣಗಳು ಅವಶ್ಯಕವಾಗಿರಬೇಕು! ಮನುಷ್ಯನು ಬೇರೆ ಗ್ರಹಗಳಿಗೆ ಹೋಗಿ ಹಿಂದಿರುಗಬೇಕಾದರೆ, ಹಿಂದೆ ವಿವರಿಸಿದ ರೇಡಾರ್‌ಗಳಿಗಿಂತ ನೂರುಮಡಿ, ಸಾವಿರಮಡಿ ನಿಖರವಾದ ಉಪಕರಣಗಳಿಲ್ಲದೆ ಸಾಧ್ಯವೇ ಇಲ್ಲ.

ಹಿಂದೆ ವರ್ಣಿಸಿದ ಪೆಂಡ್ಯುಲಂ, ಸ್ಪ್ರಿಂಗ್ ಗಡಿಯಾರಗಳೆಲ್ಲಾ ಭೂಮಿಯ ಚಲನೆಯನ್ನೇ ಪ್ರಮಾಣವನ್ನಾಗಿ ಹೊಂದಿದೆ. ಒಂದು ಸರಾಸರಿ ಸೌರದಿನದ ಸೆಕೆಂಡುಗಳನ್ನು ಅಳೆಯುತ್ತವೆ. ಆದರೆ ಈ ಪ್ರಮಾಣವೇ ಸರಿಯಾದುದಲ್ಲ. ಎಂದರೆ ನಮ್ಮ ಅಳತೆಯ ಪದ್ಧತಿಯು ಒಂದು ತಪ್ಪು ತಳಹದಿಯ ಮೇಲೆ ರಚಿತವಾಗಿದೆ. ಭೂಮಿಯು ಸೂರ್ಯನ ಸುತ್ತಲೂ ವೃತ್ತಾಕಾರದ ಪಥದಲ್ಲಿ ಚಲಿಸುವುದಿಲ್ಲ; ಇದರ ಪಥವು ಒಂದು ದೀರ್ಘವೃತ್ತ (Ellipse). ಇದು ಸಮ ವೇಗದಿಂದ ಚಲಿಸುವುದಿಲ್ಲ. ಆದರೆ ಸರಾಸರಿ ಸೌರ ದಿನವನ್ನು ತೆಗೆದುಕೊಳ್ಳುವುದರಿಂದ ಈ ದೋಷಗಳನ್ನು ಅಷ್ಟು ಗಣಿಸಬೇಕಾಗಿಲ್ಲ. ಸೂರ್ಯನ ಸ್ಥಾನದಿಂದ ನಿರ್ಣಯಿಸುವ ಕಾಲಕ್ಕೂ, ಸರಾಸರಿ ದಿನದ ಪ್ರಕಾರ ನಿರ್ಣಯಿಸುವ ಕಾಲಕ್ಕೂ, ವರ್ಷದಲ್ಲಿ ನಾಲ್ಕು ದಿನಗಳ ವಿನಾ ಉಳಿದ ದಿನಗಳಲ್ಲೆಲ್ಲಾ ವ್ಯತ್ಯಾಸವಿರುವುದು. ನಮ್ಮ ಗಡಿಯಾರಗಳು ಸರಿಯಾಗಿವೆಯೋ, ಇಲ್ಲವೋ ಎಂಬುದನ್ನು ಈ ನಾಲ್ಕು ದಿನಗಳು ಮಾತ್ರ (ಏಪ್ರಿಲ್ 16, ಜೂನ್ 15, ಸೆಪ್ಟೆಂಬರ್ 1 ಮತ್ತು ಡಿಸೆಂಬರ್ 25) ಪರಿಶೋಧಿಸಬೇಕೆಂದರೆ ಖಗೋಳ ಶಾಸ್ತ್ರಜ್ಞರಿಗೆ ಬಹಳ ತೊಂದರೆ. ಇದಲ್ಲದೆ ಸೂರ್ಯನ ಸುತ್ತಲೂ ಭೂಮಿಯ ಚಲನೆಯನ್ನು ಆಧಾರವನ್ನಾಗಿ ಇಟ್ಟುಕೊಳ್ಳುವುದು ಇನ್ನೂ ಕೆಲವು ಕಾರಣಗಳಿಂದ ಸಾಧುವಲ್ಲ. ಇದಕ್ಕೆ ಬದಲು ನಕ್ಷತ್ರದ ಸಾಪೇಕ್ಷ ಚಲನೆಯನ್ನು ಗಮನಿಸಿದರೆ, ಒಂದು ನಕ್ಷತ್ರವು ಒಂದು ಸ್ಥಾನವನ್ನು ದಾಟಿದ ಮೇಲೆ ಪುನಃ ಅಲ್ಲಿ ಕಾಣುವ ಅಂತರವು ಸೌರದಿನಕ್ಕಿಂತಲೂ ಸ್ಥಿರವಾದ ಪ್ರಮಾಣವನ್ನು ಹೊಂದಿದೆ. ಇದಕ್ಕೆ ನಕ್ಷತ್ರ ದಿನ (Sidereal day) ಎನ್ನುತ್ತಾರೆ. ಒಂದು ವರ್ಷಕ್ಕೆ ಸುಮಾರು 365¼ ಸೌರದಿನಗಳಾದರೆ, 366¼ ನಕ್ಷತ್ರ ದಿನಗಳಿವೆ. ಭೂಮಿಯು ವರ್ಷದಲ್ಲಿ 365¼ ಸಲ ತನ್ನ ಸುತ್ತಲೂ ತಿರುಗಿಕೊಳ್ಳುತ್ತದೆ. ಇದಲ್ಲದೆ, 1 ಸಲ ಸೂರ್ಯನ ಸುತ್ತಲೂ ತಿರುಗುತ್ತದೆ. ನಕ್ಷತ್ರವನ್ನು ಆಧಾರವನ್ನಾಗಿ ಪರಿಗಣಿಸಿದರೆ, ಸೂರ್ಯನ ಸುತ್ತ ತಿರುಗುವುದು 1 ಭೂಭ್ರಮಣಕ್ಕೆ ಸಮ

ವಾಗಿ ಒಟ್ಟು 366¼ ಭ್ರಮಣಗಳಾಗುತ್ತವೆ. ಆದುದರಿಂದ ಒಂದು ನಕ್ಷತ್ರ ದಿನವು ಸರಾಸರಿ ಸೌರದಿನಕ್ಕಿಂತ ಸುಮಾರು 4 ನಿಮಿಷ ಕಡಿಮೆ. ಸರಾಸರಿ ಸೌರ ದಿನಕ್ಕೆ 86400 ಸೆಕೆಂಡ್ ಆದರೆ ನಕ್ಷತ್ರ ದಿನದಲ್ಲಿ 86164 ಸೆಕೆಂಡುಗಳು ಮಾತ್ರ ಇವೆಯೆಂದು ಗಣಿಸಬೇಕು. ಈ ಆಧಾರವನ್ನು ಖಗೋಳ ಶಾಸ್ತ್ರದಲ್ಲಿ ಮಾತ್ರ ಉಪಯೋಗಿಸುತ್ತಾರೆ. ನಮ್ಮ ನಿತ್ಯವ್ಯವಹಾರದಲ್ಲಿ ಬಹಳ ದಿನದ ಬಳಕೆ ಯಾಗಿರುವುದರಿಂದ, ಸೌರದಿನವನ್ನು ಬಿಡಲಾಗುವುದಿಲ್ಲ.

ವಿಜ್ಞಾನದ ದೃಷ್ಟಿಯಿಂದ ಸರಾಸರಿ ಸೌರದಿನವು ಸರಿಯಾದ ಆದರ್ಶಮಾನ ವಲ್ಲ. ಹಾಗೆ ನೋಡಿದರೆ, ನಕ್ಷತ್ರ ದಿನವೂ ಅತ್ಯಂತ ಸಮಂಜಸವಾದ ಆದರ್ಶವಲ್ಲ. ಬೆಳಕಿನ ವೇಗ, ರಶ್ಮಿಭಂಗ, ಭೂಮಿಯ ಪಥದಲ್ಲಿ ಆಗುವ ವ್ಯತ್ಯಾಸಗಳು ಇಂತಹ ಅನೇಕ ವಿಷಯಗಳನ್ನು ಪರಿಗಣಿಸಿ, ನಿಖರವಾಗಿ ನಕ್ಷತ್ರ ದಿನದ ವ್ಯಾಪ್ತಿಯನ್ನು ನಿರ್ಣಯಿಸುವುದು ಬಹಳ ಕಷ್ಟ. ಈ ದೃಷ್ಟಿಯಿಂದ ನಾವು ಬೇರೆ ವಿಧವಾದ ಆದರ್ಶಮಾನವನ್ನೇ ಹುಡುಕಬೇಕು. ನಕ್ಷತ್ರ ಮತ್ತು ಗ್ರಹಗಳ ಚಲನೆಗೆ ಬದ ಲಾಗಿ ಪರಮಾಣುವಿನಲ್ಲಾಗುವ ಕ್ರಿಯೆಗಳನ್ನು ಆಧಾರವನ್ನಾಗಿ ಮಾಡಿಕೊಳ್ಳ ಬೇಕೆಂದು ಮೊದಲು ಮಿಲ್ನೆ (E. A. Milne) ಎಂಬ ವಿಜ್ಞಾನಿ ವಾದಿಸಿದನು. ಉದಾಹರಣೆಗೆ ರೇಡಿಯಂ ಅಥವಾ ಇನ್ನು ಯಾವುದಾದರೂ ರೇಡಿಯೋ-ಆಕ್ಟಿವ್ ವಸ್ತುವನ್ನು ತೆಗೆದುಕೊಳ್ಳೋಣ. ನಿರಂತರವಾಗಿ ಇದು ಕೆಲವು ಕಣಗಳನ್ನು ಹೊರದೂಡುತ್ತಿರುತ್ತದೆ. ಒಂದು ಗೊತ್ತಾದ ಕಾಲದಲ್ಲಿ ವಿಭಜನೆ ಹೊಂದುವ ಅಣುಗಳ ಸಂಖ್ಯೆಯು ನಿರ್ದಿಷ್ಟವಾಗಿರುತ್ತದೆ. ಇದರ ಆಧಾರದ ಮೇಲೆ ಕಾಲ ವನ್ನು ಗಣನೆ ಮಾಡಬಹುದು.

ಪ್ರತಿ ವಸ್ತುವೂ ಪ್ರಕಾಶಮಾನವಾದಾಗ ಕೆಲವು ವಿಶಿಷ್ಟ ಆವರ್ತನ ಸಂಖ್ಯೆ ಗಳುಳ್ಳ ಬೆಳಕಿನ ತರಂಗಗಳನ್ನು ಪ್ರಸಾರ ಮಾಡುತ್ತದೆ. ವರ್ಣಮಾಪಕದಲ್ಲಿ (Spectrometer) ಇದನ್ನು ವೀಕ್ಷಿಸಬಹುದು. ಈ ಬೆಳಕಿನ ತರಂಗಗಳ ಆವರ್ತನ ಸಂಖ್ಯೆಯು ಬಹಳ ಖಚಿತವಾದ ಪ್ರಮಾಣವುಳ್ಳದ್ದು. ಅಮೋನಿಯ ಅನಿಲದ ಮುಖಾಂತರ ತರಂಗಗಳನ್ನು ಹಾಯಿಸಿದರೆ, ಅದು ತನ್ನ ವಿಶಿಷ್ಟ ಆವರ್ತನ ಸಂಖ್ಯೆಯ ತರಂಗಗಳನ್ನು ಹೀರಿಕೊಂಡು ಉಳಿದ ತರಂಗಗಳನ್ನು ಪ್ರಸಾರ ಮಾಡು ತ್ತದೆ. ಈ ಆವರ್ತನ ಸಂಖ್ಯೆಯನ್ನು ಖಚಿತವಾಗಿ ನಿರೂಪಿಸಿ, ಅದರ ಆಧಾರದ ಮೇಲೆ ಕಾಲದ ಅಳತೆ ಮಾಡಬಹುದು.

ನಾವು ಕಾಲದ ಗಣನೆಗೆ ಭೂಮಿಯ ಚಲನೆಯನ್ನೇ ಯಾವಾಗಲೂ ಆಧಾರ ವನ್ನಾಗಿ ಎಣಿಸಲಾಗುವುದಿಲ್ಲ. ಪರಮಾಣು ಗಡಿಯಾರಗಳನ್ನೇ ಆಧಾರವನ್ನಾಗಿ ಇಟ್ಟುಕೊಳ್ಳಬೇಕಾಗುತ್ತದೆ. ಅಥವಾ ಒಂದು ನಿರ್ದಿಷ್ಟವಾದ ಗಾತ್ರವುಳ್ಳ ಕ್ವಾರ್ಟ್ಸ್

ಹರಳನ್ನು ಜೋಡಿಸಿರುವ ವಿದ್ಯುನ್ಮಂಡಲದ ಆವರ್ತನಸಂಖ್ಯೆಯನ್ನು ಬೇಕಾದರೆ ಆದರ್ಶವನ್ನಾಗಿಟ್ಟುಕೊಳ್ಳಬಹುದು. ಕಾಲದ ಅಳತೆಯ ವಿಷಯವನ್ನು ಇಷ್ಟು ಪರಿಶೀಲನೆ ಮಾಡಿದ ಮೇಲೆ, ಈ ಅಳತೆ ಎಲ್ಲ ಸಂದರ್ಭಗಳಲ್ಲೂ ಒಂದೇ ಆಗಿರುತ್ತದೆಯೇ ಎಂಬ ಪ್ರಶ್ನೆ ಏಳುತ್ತದೆ. ಹಿಂದಿನ ಶತಮಾನದ ಕೊನೆಯವರೆಗೂ, ಕಾಲದ ಗತಿ ಎಲ್ಲರಿಗೂ ಒಂದೇ ವಿಧವಾಗಿದೆ, ಇದು ಯಾವ ಬಾಹ್ಯ ಸ್ಥಿತಿಯನ್ನೂ ಅವಲಂಬಿಸಿಲ್ಲ ಎಂಬ ಸಿದ್ಧಾಂತವಿತ್ತು. ಆದರೆ ಐನ್‌ಸ್ಟೈನ್ ತನ್ನ ಸಾಪೇಕ್ಷತಾ ಸಿದ್ಧಾಂತವನ್ನು ಮಂಡಿಸಿದನಂತರ ಕಾಲದ ವಿಷಯವಾಗಿ ಇದ್ದ ಅಭಿಪ್ರಾಯಗಳಲ್ಲಿ ವಿಶೇಷವಾಗಿ ಬದಲಾವಣೆಗಳಾಗಬೇಕಾಯಿತು. ಈ ಸಿದ್ಧಾಂತದ ಪ್ರಕಾರ "ನಿರಪೇಕ್ಷವಾದ ಕಾಲ" ವೆನ್ನುವುದಕ್ಕೆ ಅರ್ಥವೇ ಇಲ್ಲ. ಕಾಲವೂ ಒಂದು ಸಾಪೇಕ್ಷ ಪರಿಮಾಣ, ಎಂದರೆ ಅಳೆಯುವವರ ವ್ಯವಸ್ಥೆಯನ್ನು ಅವಲಂಬಿಸಿದೆ. ನಾವು ಮಾಡುವ ಕಾಲದ ಅಳತೆಯು ನಮ್ಮ ಚಲನೆಯ ಸ್ಥಿತಿಯನ್ನವಲಂಬಿಸಿದೆ. ಪರಸ್ಪರವಾಗಿ ಚಲಿಸುತ್ತಿರುವ ಇಬ್ಬರ ಅಳತೆಗಳು ಬೇರೆ ಬೇರೆಯಾಗಿರುತ್ತವೆ. ಅತಿ ವೇಗದಿಂದ ಚಲಿಸುವವನು ಅಲ್ಪವೆಂದು ಗಣಿಸುವ ಕಾಲವು, ಚಲಿಸದೆ ಇರುವವನ ಅಳತೆಯಲ್ಲಿ ಬಹಳ ಹೆಚ್ಚಿನ ಕಾಲವಾಗಿರಬಹುದು. ಮುಂದೆ ಗ್ರಹಾಂತರ ಯಾತ್ರೆ ಸಾಧ್ಯವಾದರೆ ಮತ್ತು ಯಾತ್ರೆಯಿಂದ ಯಾರಾದರೂ ಹಿಂದಿರುಗಿ ಭೂಮಿಗೆ ಬಂದರೆ, ಅವರ ಅಳತೆಯಲ್ಲಿ ಕೆಲವೇ ವರ್ಷಗಳಾಗಿದ್ದರೂ, ಇಲ್ಲಿ ಅನೇಕ ವರ್ಷಗಳಾಗಿದ್ದು, ಅನೇಕ ಜಟಿಲವಾದ ಸಮಸ್ಯೆಗಳು ಉದ್ಭವಿಸಬಹುದು. ಅಂತೂ, ಕಾಲದ ವಿಷಯವನ್ನು ವಿಚಾರಮಾಡಲು ಹೊರಟರೆ ಅದಕ್ಕೆ ಕೊನೆ ಮೊದಲೇ ಇಲ್ಲ. ಕ್ಲಿಷ್ಟವಾದ ತಾತ್ವಿಕ ಸಮಸ್ಯೆಗಳು ಎದುರಾಗುತ್ತವೆ. ಕಾಲಕ್ಕೆ ಅತೀತರಾದಾಗಲೇ ಈ ಸಮಸ್ಯೆಗಳ ಉತ್ತರ ದೊರೆಯುವುದೇನೋ!

—ಎ. ವೆಂಕಟರಾವ್.

# ಪ್ರಾಣಿಗಳು ಎಷ್ಟು ವೇಗವಾಗಿ ಓಡಬಲ್ಲವು ?

ಮನುಷ್ಯ ಬಹಳ ಪ್ರಯಾಸಪಟ್ಟು ಗಂಟೆಗೆ ಸುಮಾರು 23 ಮೈಲಿಗಳ ವೇಗದಲ್ಲಿ ಓಡಬಲ್ಲ. ಆದರೆ ಇತರ ಎಷ್ಟೋ ಪ್ರಾಣಿಗಳು ಇದರ ಎರಡು–ಮೂರರಷ್ಟು ವೇಗದಲ್ಲಿ ಲೀಲಾಜಾಲವಾಗಿ ಓಡಬಲ್ಲವು. ಅಷ್ಟೇ ಅಲ್ಲ; ಬಿಲದಲ್ಲಿ ವಾಸಿಸುವ ಗೋಫರ್ ಪ್ರಾಣಿಯು ಬಿಲದೊಳಗೆ ಎಷ್ಟು ವೇಗವಾಗಿ ಪ್ರವೇಶಿಸಬಲ್ಲದೋ ಅಷ್ಟೇ ವೇಗದಿಂದ ಹಿಮ್ಮುಖವಾಗಿ ಹೊರಬೀಳಬಲ್ಲದು! ಯುದ್ಧಗಳಲ್ಲಿ ಉಪಯೋಗಿಸುವ ಟ್ಯಾಂಕಿನಂತೆ ಶರೀರಕಟ್ಟುಳ್ಳ ರ್‍ಹಿನೊಸರಸ್ 25–28 ಮೈಲಿಗಳ ವೇಗದಲ್ಲಿ ಪ್ರಪಾತ

**ಕೆಲವು ಪ್ರಾಣಿಗಳ ವೇಗ ಮಿತಿ** (ಒಂದು ಗಂಟೆಗೆ)

| | | | | | |
|---|---|---|---|---|---|
| ಒಂಟೆ ............ | 10 | ಮೈಲಿಗಳು | ಎಮ್ಮೆ ............ | 35 | ಮೈಲಿಗಳು |
| ಹಂದಿ ............ | 11 | ,, | ಜೀಬ್ರ ............ | 40 | ,, |
| ಅಳಿಲು ............ | 12 | ,, | ನರಿ ............ | 42 | ,, |
| ಕುರಿ ............ | 15 | ,, | ಮೊಲ ............ | 45 | ,, |
| ಆನೆ ............ | 25 | ,, | ಜೂಜು ಕುದುರೆ.... | 48 | ,, |
| ರ್‍ಹಿನೊಸರಸ್ ........ | 28 | ,, | ಸಿಂಹ ............ | 50 | ,, |
| ಜಿರಾಫೆ ........ | 32 | ,, | ಚಿರತೆ ............ | 70 | ,, |

ಗಳನ್ನೂ ನುಗ್ಗಿ ತೆರಳುತ್ತದೆ. ಮೊಲವು ಓಡುವ ಮೊದಲಲ್ಲೇ ಅಧಿಕ ವೇಗವನ್ನು ಪಡೆದಿರುತ್ತದೆ. ಅಲ್ಲದೆ, ಹಠಾತ್ತನೆ ಹಿಂದಿರುಗಿ ಅದೇ ವೇಗದಲ್ಲೂ ಹಿಮ್ಮೆಟ್ಟಬಲ್ಲದು. ಕೇಸರಿಯು ಗಂಟೆಗೆ 50 ಮೈಲಿಗಳಷ್ಟು ವೇಗದಲ್ಲಿ ಮುನ್ನುಗ್ಗಿ, ತನ್ನ ಇಚ್ಛಾನುಸಾರವಾಗಿ, ಒಂದು ಗಜ ದೂರದಷ್ಟೂ ಪೋಲು ಮಾಡಿಕೊಳ್ಳದೆ ಹಿಂದಿರುಗಿ ಓಡುತ್ತದೆಯಂತೆ! ಪ್ರಾಣಿಗಳಲ್ಲೆಲ್ಲ ಚಿರತೆಯೇ ಅತ್ಯಧಿಕವೇಗದಲ್ಲಿ ಓಡುತ್ತದೆ. ಓಡಲಾರಂಭಿಸಿದ ಕೇವಲ ಎರಡು ಸೆಕೆಂಡುಗಳ ಅವಧಿಯಲ್ಲಿ ಅದು ಗಂಟೆಗೆ 45 ಮೈಲಿಗಳಷ್ಟು ವೇಗವನ್ನು ಪಡೆಯುತ್ತದೆಯಂತೆ.

ಈ ಪ್ರಾಣಿಗಳಲ್ಲಿ ಒಂದು ಪ್ರಕೃತಿ ನಿಯಮವಿರುವಂತೆ ಕಾಣುತ್ತದೆ: ಇವುಗಳ ಮುಂಗಾಲು, ಹಿಂಗಾಲುಗಳು ಪರಸ್ಪರವಾಗಿ ದಾಟಬಲ್ಲವು ಮತ್ತು ಯಾವಾಗಲೂ ಹಿಂಗಾಲು ಮುಂದೆ ಬಂದು ಮುಂಗಾಲನ್ನು ದಾಟುವಂತೆ ನಿಯೋಜಿತವಾಗಿರುತ್ತದೆ. ಕುದುರೆ, ಬೇಟೆ ನಾಯಿಗಳು ಓಡುವಾಗ ಇದನ್ನು ನಾವು ಕಾಣಬಹುದು. ಇವು ಓಡುವ ಕಾಲದಲ್ಲಿ ಬಹಳ ಹೊತ್ತು ಗಾಳಿಯಲ್ಲೇ ಪ್ರಯಾಣ ಮಾಡುವಂತಿರುತ್ತವೆ.

—"ಸೈನ್ಸ್ ಡೈಜೆಸ್ಟ್" ನವೆಂಬರ್, 1945.

# ಅವಿಚ್ಛಿನ್ನ ಜಗತ್ತುಗಳು

"The time has come," the Walrus said,
"To talk of many things..."

— *Louis Carrol*

## ಅವಿಚ್ಛಿನ್ನ ಸಂಖ್ಯೆಗಳು

ಸೃಷ್ಟಿ ಬೃಹತ್ತಾದುದು; ಅವಿಚ್ಛಿನ್ನವಾದುದು. ಈ ಅವಿಚ್ಛಿನ್ನತೆಯ ಅನುಭವ ನಮಗೆ ಉಂಟಾದುದು ಸಂಖ್ಯೆಗಳ ಜ್ಞಾನೋದಯವಾದಮೇಲೆ. ಅತಿ ದೊಡ್ಡ ಸಂಖ್ಯೆಗಳನ್ನು ತೋರಿಸುವುದು, ಅರೇಬಿಯ ಸಂಖ್ಯಾ ವಿಧಾನ ಬಳಕೆಗೆ ಬಂದ ಮೇಲೆ ಸುಲಭವಾಯಿತು. ವಿಜ್ಞಾನ ಬೆಳದಂತೆಲ್ಲ, ಸ್ಪಷ್ಟವಾಗಿ ಗೋಚರಿಸುತ್ತ ಬಂದ ಸೃಷ್ಟಿ, ಸೌರವ್ಯೂಹ, ಬ್ರಹ್ಮಾಂಡ- ಇವುಗಳ ಸೂಕ್ಷ್ಮ ಪರಿಚಯ ಆಗ ತೊಡಗಿತು. ಈ ಪರಿಚಯದೊಡನೆಯೇ ಭೂಮಿಯ ಸಣ್ಣತನ, ಅದರ ಅಣುರೂಪ ಗೋಚರಿಸಿತು. ಗ್ರಹ ಪರಿಮಾಣದ ಈ ಜ್ಞಾನೋದಯದೊಡನೆಯೇ ದೂರಗಳ, ಬ್ರಹ್ಮಾಂಡಗಳ ನಡುವೆ ಇರುವ ಮಹಾಂತರಾಳಗಳ ಪರಿಚಯವೂ ಆಯಿತು. ಈ ವೇಳೆಗೆ ವಿಶ್ವದ, ಖಗೋಳದ ನೂರಾರು ವಿಷಯಗಳು ವಿಜ್ಞಾನಿಗಳ, ಜನತೆಯ ಕುತೂಹಲವನ್ನು ಕೆರಳಿಸಿದ್ದುವು. ಈ ವೇಳೆಗೆ ಲಾಪ್ಲಾಸನ ವಿಶ್ವ ಸೃಷ್ಟಿವಾದ, ಕಾಂಟನ ಸೌರರಚನಾ ವಾದ ಇವು ಬೆಳಕಿಗೆ ಬರತೊಡಗಿದುವು. ಚರ್ಚೆಗಳೂ ವಿಮರ್ಶೆಗಳೂ ಭರಪೂರ್ತಿ ನಡೆದುಹೋದುವು.

ಒಂದಂಶ ಮಾತ್ರ ಇವೆಲ್ಲ ಚರ್ಚೆಗಳ, ವಿಮರ್ಶೆಗಳ ಫಲವಾಗಿ ದೃಢವಾಗ ತೊಡಗಿತು. 'ವಿಶ್ವ ಮಹತ್ತಾದುದು. ಕೋಟಿ ಬ್ರಹ್ಮಾಂಡಗಳನ್ನುಳ್ಳ ಈ ವಿಶ್ವ ಸಂಕುಚಿತವಾಗಿದ್ದು, ಯುಗಗಳುರುಳಿದಂತೆ ವಿಕಾಸವಾಗತೊಡಗಿತು. ಈಗ ಅವುಗಳ ನಡುವೆ ಇರುವ ಅಂತರ ಮಾನವನ ಎಣಿಕೆಗೆ ನಿಲುಕದಂತಹುದು. ಈ ಅಂತರ ದಿನೇ ದಿನೇ, ಯುಗೇ ಯುಗೇ ಹೆಚ್ಚುತ್ತಲೇ ಇದೆ' ಎಂಬ ವಾದ ತತ್ತ್ವವಾಗಿ ಬೇರೂರ ತೊಡಗಿತು. ಇದೇ ಭೌತ ವಿಶ್ವ ವಿಕಾಸ ವಾದ.

ಇಂತಹ ಅಸಾಧ್ಯ ಅಂತರಗಳನ್ನು ವರ್ಣಿಸಿ, ಆದಷ್ಟು ಬುದ್ಧಿಗೆ ಗೋಚರವಾಗುವಂತೆ ಮಾಡುವ ಪ್ರಯತ್ನ ನಡೆಯುತ್ತಿತ್ತು; ಈಗಲೂ ನಡೆಯುತ್ತಲೇ ಇದೆ.

ವಿಶ್ವದ ಅನಂತತೆಯನ್ನು ಕಂಡುಕೊಳ್ಳುವುದು ಒಂದು ಸಮಸ್ಯೆಯಾದರೆ,

ಅವನ್ನು ಇತರರಿಗೆ ವ್ಯಕ್ತಪಡಿಸುವುದು ಮತ್ತೊಂದು ಸಮಸ್ಯೆಯಾಯಿತು. ಸಂಖ್ಯಾ ಜ್ಞಾನವಿಲ್ಲದವನಿಗೆ ಜಗತ್ತುಗಳ ದೂರವನ್ನು ಶ್ರುತಪಡಿಸುವುದು ಅಸಾಧ್ಯವಾಯಿತು. ಆದರೂ ಇವುಗಳನ್ನು ವಾಚಾ, ಲಿಖಿತ ಮೂಲಕ ಶ್ರುತಪಡಿಸುವುದು ಖಗೋಳ ವಿಜ್ಞಾನಿಗಳಿಗೆ ಮುಖ್ಯ ಕಾರ್ಯವಾಯಿತು.

ಈ ಕಾರ್ಯದಲ್ಲಿ ಆರ್ಕಿಮಿಡೀಸನ ಪ್ರಯತ್ನ ಮಹತ್ವ ಉಳ್ಳದ್ದು. ಈಗಿನ ಕಾಲದಲ್ಲಿ ಅವಿಚ್ಛಿನ್ನ ಸಂಖ್ಯೆಗಳನ್ನು ರೂಪಿಸುವ ವಿಧಾನವನ್ನು ಹಿಂದೆಯೇ ಆರ್ಕಿಮಿಡೀಸನು ಪ್ರತಿಪಾದಿಸಿದ್ದ. ಪ್ರಾಚೀನ ಗ್ರೀಕರಿಗೆ ತಿಳಿದಿದ್ದ ತೀರ ಮಹತ್ತರ ಸಂಖ್ಯೆ 10,000 (myriad). ಈ ಕ್ರಮ ಸಂಖ್ಯೆಯ ಮುಂದೆ ಆರ್ಕಿಮಿಡೀಸನು ಮೂರು ಕ್ರಮ ಸಂಖ್ಯೆಗಳನ್ನು ರೂಪಿಸಿದ. ಎರಡನೆಯದು ನೂರು ದಶ ಲಕ್ಷಗಳ (myriad myriad) ವರೆಗೆ ಪ್ರಸರಿಸಿರುವ ಸಂಖ್ಯಾ ರೂಪ. ಈ ಕ್ರಮವನ್ನು ಆಕ್ಟೇಡ್ (Octade) ಎಂದು ಕರೆದ; ಗ್ರೀಕರಿಗೆ ಆ ಮೊದಲೇ ತಿಳಿದಿದ್ದ 'myriad' ಕ್ರಮವನ್ನು ಮೊದಲನೆಯದೆಂದು ಪರಿಗಣಿಸಿ, Octade ಕ್ರಮ ಸಂಖ್ಯೆಗೆ ಎರಡನೆಯ ಸ್ಥಾನವನ್ನು ಕೊಟ್ಟ. ಮೂರನೆಯ ಕ್ರಮ ಸಂಖ್ಯೆ 'Octade Octades' ಎಂಬುವು (ಹತ್ತು ದಶ ಲಕ್ಷಗಳ ದಶ ಕೋಟಿಗಳು!). ಹೀಗೇ ನಾಲ್ಕನೆಯ ಕ್ರಮದ ಸಂಖ್ಯೆಗಳೂ ರೂಪಿತವಾದುವು - ಇವು 'Octade, Octade Octades.'

ಇಂದಿನ ಯುಗದಲ್ಲಿ ಅವಿಚ್ಛಿನ್ನ ಸಂಖ್ಯೆಗಳ ರಚನೆ ಅಲ್ಪವಾಗಿ ಕಂಡು ಬಂದರೂ ಆರ್ಕಿಮಿಡೀಸನ ಕಾಲದಲ್ಲಿ ಅವು ಕುತೂಹಲಕಾರಿಗಳಾಗಿಯೂ ಪ್ರತಿಭಾನ್ವಿತವಾಗಿಯೂ ಇದ್ದುವು.

ವಿಶ್ವದ ಅವಿಚ್ಛಿನ್ನತೆಯನ್ನು ಪ್ರಖರಗೊಳಿಸುವ ಪ್ರಥಮ ಪ್ರಯತ್ನವೂ ಆರ್ಕಿಮಿಡೀಸನ ಕಾಲದಲ್ಲೇ ನಡೆಯಿತು; ಆದರೆ ಈ ಪ್ರಯತ್ನ ಸಫಲವಾದುದು ಅವಿಚ್ಛಿನ್ನ ಸಂಖ್ಯೆಗಳು ರೂಪಿತವಾದ ಮೇಲೆ. ವಿಶ್ವದ ಒಂದೊಂದು ನಕ್ಷತ್ರವನ್ನೂ ನಕ್ಷತ್ರ ಗುಚ್ಛವನ್ನೂ ಅವುಗಳೊಡನಿರುವ ಅಂತರವನ್ನೂ ಸೂಚಿಸಲು, ಬೇರೆ ಬೇರೆ ಪ್ರಮಾಣಗಳನ್ನುಳ್ಳ ಮರಳ ಕಣಗಳನ್ನೂ ರಾಶಿಗಳನ್ನೂ, ಹೋಲಿಕೆಗಾಗಿ, ಆತ ತೆಗೆದುಕೊಂಡ; ಆದರೆ ವಿಶ್ವದ ವಿವರ ಸತ್ವಪೂರಿತವಾಗಲು ಅವಿಚ್ಛಿನ್ನ ಜಗತ್ತಿನ ಪೂರ್ಣ ಜ್ಞಾನ ಬೇಕಾಗಿತ್ತು. ನೂರಾರು ಭಿನ್ನಾಭಿಪ್ರಾಯಗಳಿದ್ದ ಕಾಲ ಅದು. ಆರ್ಕಿಮಿಡೀಸನ ತತ್ತ್ವಗಳಿಗೆ ವಿರುದ್ಧವಾಗಿ ಸಮೋವಾಸಿನ ಅರಿಸ್ಟಾರ್ಕಸ್ಸನು ಇಡಿಯ ವಿಶ್ವ ಒಂದು ಭಾವಣಿಯೆಂದೂ, ಈ ಭಾವಣಿಗೆ ಸೃಷ್ಟಿಕಾರಕನು ನಕ್ಷತ್ರಗಳನ್ನು ನೇತುಹಾಕಿದ್ದನೆಂದೂ ಈ ಭಾವಣಿಯ ಪರಿಧಿ (Periphery)

ಭೂಮಿಯಿಂದ 10,000,000,000 ಸ್ಟೇಡಿಯಂಗಳ[1] ದೂರ ಇರುವುದೆಂದೂ ಪ್ರಚುರಪಡಿಸಿದನು.

ಇದು ಎಷ್ಟರಮಟ್ಟಿಗೆ ಅಸತ್ಯ ಎಂಬುದು ನಮಗೆ ಇಂದಿನ ಶೋಧನೆಗಳಿಂದ ತಿಳಿದುಬರುತ್ತದೆ. ಬಹುಶಃ ಅರಿಸ್ಟಾರ್ಕಸ್ಸನ ಈ ಪ್ರಚಾರಕ್ಕೆ ಕ್ರಿಶ್ಚಿಯನ್ ಮತಾಚಾರ್ಯರ ತಪ್ಪು ಅಭಿಪ್ರಾಯಗಳು, ಬೋಧನೆಗಳು ಹಿನ್ನೆಲೆಯಾಗಿದ್ದಿರಬಹುದು. ಆದರೆ ಅರಿಸ್ಟಾರ್ಕಸ್ಸನ ಪ್ರಚಾರದಲ್ಲಿದ್ದ ಒಂದೇ ಒಂದು ಸತ್ಯಾಂಶವನ್ನು ತೆಗೆದುಕೊಂಡು, ಆರ್ಕಿಮಿಡೀಸನು ಈ ಸಿದ್ಧಾಂತವನ್ನು ರೂಪಿಸಿದ.

"ಅರಿಸ್ಟಾರ್ಕಸ್ಸನು ಹೇಳುವ ಅಂತರಿಕ್ಷದ ಭಾವಣಿಯ ಪರಿಧಿಯಲ್ಲಿ ಎಂಟನೆಯ ಕ್ರಮದ ಒಂದು ಸಾವಿರ ಮಿರಿಯಡ್ ಕಣಗಳನ್ನು ಅಡಗಿಸಿದರೂ ಅವು ತೃಣಮಾತ್ರವಾಗುತ್ತವೆ" ಎಂಬುದು ಆ ಸಿದ್ಧಾಂತ.

ಆರ್ಕಿಮಿಡೀಸನ ಈ ಲಕ್ಷಣ ನಿರೂಪಣೆ ಅವಿಚ್ಛಿನ್ನ ವಿಶ್ವದ ಪರಿಚಯವನ್ನು ಸ್ವಲ್ಪಮಟ್ಟಿಗಾದರೂ ಮಾಡಿಕೊಡುತ್ತದೆ. ಆದರೆ, ಅವನಿಗೂ ವಿಶ್ವದ ತ್ರಿಜ್ಯ ವೃತ್ತಕ್ಷೇತ್ರದ (radius) ಬಗ್ಗೆ ಪರಿಮಿತಜ್ಞಾನವಿತ್ತೆಂದೇ ಹೇಳಬೇಕು. ಏಕೆಂದರೆ, ಅವನು ಸೂಚಿಸಿರುವ ವ್ಯಾಸದಷ್ಟು ತ್ರಿಜ್ಯವೃತ್ತವನ್ನು ರಚಿಸಿದರೆ, ಸೂರ್ಯನಿಗೂ ಶನಿಗ್ರಹಕ್ಕೂ ಇರುವ ಅಂತರ ಮಾತ್ರ ಆ ವೃತ್ತದಲ್ಲಿ ಬರುತ್ತದೆ. ಅದರ ಆಚೆ ಇರುವುದೆಲ್ಲ ವೃತ್ತದ ಹೊರಗಾಗುತ್ತದೆ. ಅತ್ಯಾಧುನಿಕ ದೂರದರ್ಶಿಗಳಲ್ಲಿ ಇಂದು ನಮಗೆ ಗೋಚರಿಸುವ ವಿಶ್ವ ವಿಭಾಗ 5,000,000,000,000,000,000 ಮೈಲಿಗಳ ವರೆಗೆ ಪ್ರಸರಿಸಿದೆ. ಅರಿಸ್ಟಾರ್ಕಸ್ಸನು ರೂಪಿಸುವ ಮರಳ ಕಣಗಳನ್ನು ಈ ವಿಶ್ವದಲ್ಲಿ ಅಡಗಿಸಬೇಕಾದರೆ $10^{120}$ ರಷ್ಟು ಕಣಗಳು ಬೇಕಾಗುತ್ತವೆ.

ಭಾರತೀಯ ರಾಜನಾಗಿದ್ದ ಷೆರ್‌ಹಮ್‌ನಿಗೆ ಅವಿಚ್ಛಿನ್ನ ಸಂಖ್ಯೆಗಳ ಗೀಳು ತುಂಬ ಇತ್ತು; ಇದರ ಬಗ್ಗೆ ಒಂದು ದಂತ ಕಥೆ ಇದೆ. ಆತನ ಪ್ರಧಾನ ಸಚಿವನಾದ ಸಿಸ್ಸಾಬೆನ್ ದಹೀರ್‌ನಿಗೆ ಒಳ್ಳೆಯ ಬಹುಮಾನ ಕೊಡಬೇಕೆನಿಸಿತಂತೆ. ದಹೀರನ ಆಸೆ, ಆಕಾಂಕ್ಷೆಗಳು ಇತಿ ಮಿತಿ ಉಳ್ಳವು; ಅವನು ಸ್ವಾಭಿಮಾನಿ. ಧನಿಕನಾಗಬೇಕೆಂಬ ಆಸೆ ಅವನಿಗೇನಿಲ್ಲ. ಷೆರ್‌ಹಮ್ ರಾಜನಿಗೆ ತನ್ನ ಮಿತಾಕಾಂಕ್ಷೆಯ ಪರಿಚಯ ಮಾಡಿಕೊಡಬೇಕೆನಿಸಿತು ಆತನಿಗೆ. ಚದುರಂಗದ ಮಣೆಯೊಂದನ್ನು ಅವನು ಸಂಪಾದಿಸಿದ. ಅದನ್ನು ತೆಗೆದುಕೊಂಡು ಮಹಾರಾಜ ಷೆರ್‌ಹಮ್ಮನ ಮುಂದೆ ಮೊಳಕಾಲೂರಿ ಕುರಿತು "ಮಹಾರಾಜ, ಈ ಚದುರಂಗದ ಮೊದಲನೆಯ ಚದುರದ ಮೇಲೆ ಇಡಲು ಒಂದು ಕಾಳು ಗೋಧಿ ಕೊಡು; ಎರಡನೆಯ ಚದುರದಲ್ಲಿಡಲು

[1] ಗ್ರೀಕರ ಅಳತೆಯಲ್ಲಿ ಒಂದು ಸ್ಟೇಡಿಯಂಗೆ ೬೦೬ ಅಡಿ ೬ ಅಂಗುಲಗಳು ಅಥವಾ ೧೮೫ ಮೀಟರುಗಳು; ಎಂದರೆ ಸುಮಾರು ೧,೦೦೦,೦೦೦,೦೦೦ ಮೈಲಿಗಳು ಎನ್ನಬಹುದು.

ಎರಡು ಕಾಳು ಗೋಧಿ, ಮೂರನೆಯದಕ್ಕೆ ನಾಲ್ಕು ಕಾಳು; ಹೀಗೆ ಮುಂದಿನ ಒಂದೊಂದು ಚದುರದ ಮೇಲಿಡಲು ದ್ವಿಗುಣವಾಗಿ ಹೆಚ್ಚು ಕಾಳುಗಳನ್ನು ಕೊಡು. ಅವುಗಳನ್ನು ಈ 64 ಚದುರಗಳ ಮೇಲೂ ಇಡುತ್ತೇನೆ: ನನಗಿರುವ ಆಸೆ ಅಷ್ಟೆ" ಎಂದು ಹೇಳಿದ.

ಷೆರ್‌ಹಮ್‌ನಿಗೆ ಇದು ತೀರ ಸರಳವೆನಿಸಿತು. ತನ್ನ ಪ್ರಧಾನಿಯ ಅಲ್ಪ ತೃಪ್ತಿಗೆ ಸಮಾಧಾನಪಟ್ಟುಕೊಂಡ. ಒಂದು ಮೂಟೆ ಗೋಧಿ ತರಿಸಿದ. ಎಣಿಕೆಗೆ ಮೊದಲಾಯಿತು. ಮೊದಲನೆಯ ಚದುರದಲ್ಲಿ ಒಂದು ಕಾಳು, ಎರಡನೆಯದರಲ್ಲಿ ಎರಡು, ಮೂರನೆಯದರಲ್ಲಿ ನಾಲ್ಕು, ಹೀಗೆ ಎಣಿಕೆ ನಡೆಯಿತು .... ಇಪ್ಪತ್ತನೆಯ ಚದುರದ ಎಣಿಕೆಯ ವೇಳೆಗೆ ಒಂದು ಮೂಟೆ ಧಾನ್ಯ ಮುಗಿಯಿತು! ಇನ್ನೂ ಹೆಚ್ಚು ಹೆಚ್ಚು ಧಾನ್ಯ ತರಿಸಿದ ದೊರೆ; ಆದರೆ, ಚದುರಗಳು ಮುಂದೆ ಬಂದಂತೆಲ್ಲ ಮೂಟೆಗಳು ಬೇಗನೆ ಮುಗಿಯುತ್ತ ಹೋದುವು. ದೊರೆಗೆ ಸಂಶಯ ಹೆಚ್ಚಾಯಿತು. ಸಿಸ್ಸಬೆನ್ನನ ಆಕಾಂಕ್ಷೆ ತಾನು ತಿಳಿದಷ್ಟು ಸರಳವಲ್ಲ, ಅದು ತೀರದ ಆಕಾಂಕ್ಷೆ ಎಂದು ವೇದ್ಯವಾಯಿತು. ಅವನ ಆಸೆ ಈಡೇರಲು, 18, 446, 744, 073 709, 511, 615 ಧಾನ್ಯದ ಕಾಳುಗಳು ಬೇಕಾಗುತ್ತಿತ್ತು

ಮಹಾಮತಿ ಸಿಸ್ಸಾಬೆನ್ನನು ಕೇಳಿದ ಧಾನ್ಯದ ಬೇಡಿಕೆಯನ್ನು ಗಣಿತ ರೀತ್ಯಾ ಹೀಗೆ ರೂಪಿಸಬಹುದು:

$1 + 2 + 2^2 + 2^3 + 2^4 \ldots\ldots 2^{62} + 2^{68} \ldots$ ಇತ್ಯಾದಿ.

ಜಗತ್ತಿನ ಸೃಷ್ಟಿಯೇ ಅನಂತವಾಗಿದೆ, ಅವಿಚ್ಛಿನ್ನವಾಗಿದೆ. ಯುಗಯುಗಾಂತರಗಳಲ್ಲಿ ಜಗತ್ಪ್ರಳಯವಾಗುತ್ತದೆ ಎಂಬುದನ್ನೂ, ಆದರೆ ಈ ನಡುವಿನ ಕಾಲ ಪ್ರಮಾಣ ಅಗಾಧವಾಗಿದೆ ಎಂಬುದನ್ನೂ ಕಾಶಿಯಲ್ಲಿರುವ ವಿಶ್ವೇಶ್ವರನ ದೇವಾಲಯದಲ್ಲಿ ರೂಪಿಸಲಾಗಿದೆ. ಇದನ್ನು ಪರಿಶೀಲಿಸಿದರೆ ಪೂರ್ವಕಾಲದ ಭಾರತೀಯರಿಗೆ ಜಗತ್ತಿನ ಅವಿಚ್ಛಿನ್ನತೆಯಲ್ಲಿ ಎಷ್ಟರಮಟ್ಟಿಗೆ ನಂಬಿಕೆ ಇತ್ತು ಎಂಬುದು ಸ್ಪಷ್ಟವಾಗುತ್ತದೆ. ಶ್ರೀ ವಿಶ್ವೇಶ್ವರನ ದೇವಾಲಯದ ಒಳ ಪ್ರಾಕಾರದಲ್ಲಿ ಕಂಚಿನ ತಟ್ಟೆಯೊಂದಿದೆ. ಈ ತಟ್ಟೆಗೆ ಇಪ್ಪತ್ತು ಅಂಗುಲ ಎತ್ತರದ ಮೂರು ವಜ್ರದ ದಬ್ಬಳಗಳನ್ನು ನೆಡಲಾಗಿದೆ. ಇವು ಒಂದೊಂದೂ ಸುಮಾರು ಕಾಲು ಅಂಗುಲ ದಪ್ಪವಾಗಿವೆ. ಜಗತ್ತಿನ ಸೃಷ್ಟಿಯಾದಾಗ ಭಗವಂತನು ಒಂದು ವಜ್ರದ ದಬ್ಬಳದಲ್ಲಿ 64 ಚಿನ್ನದ ತಟ್ಟೆಗಳನ್ನು ಸಿಕ್ಕಿಸಿದನಂತೆ. ಇವುಗಳಲ್ಲಿ ತೀರ ದೊಡ್ಡ ತಟ್ಟೆ ಕೆಳಗಿದ್ದು ಮೇಲಿನ ತಟ್ಟೆಗಳು ಒಂದೊಂದೂ ಚಿಕ್ಕದಾಗುತ್ತ ಹೋಗುತ್ತವೆ. ಅತಿ ಮೇಲಿನ 64 ನೆಯ ತಟ್ಟೆ ತೀರ ಚಿಕ್ಕದಾಗಿರುತ್ತದೆ. ದೇವಾಲಯದ ಪೂಜಾರಿ, ಬ್ರಹ್ಮನೆಟ್ಟ ದಬ್ಬಳದಿಂದ ಚಿನ್ನದ ತಟ್ಟೆಗಳನ್ನು ಮಿಕ್ಕೆರಡು ದಬ್ಬಳಗಳಲ್ಲಿ ಯಾವುದಾದ

ದೊಂದಕ್ಕೆ ವರ್ಗಾಯಿಸಬೇಕು ; ಆದರೆ ಹಾಗೆ ಮಾಡುವಾಗ, ಕೆಳಗೆ ದೊಡ್ಡ ತಟ್ಟೆಗಳಿರಬೇಕೇ ಹೊರತು, ಮೇಲಿನ ತಟ್ಟೆ ಕೆಳಗಿನ ತಟ್ಟೆಗಿಂತ ದೊಡ್ಡದಾಗಿರಬಾರದು—ಒಂದೊಂದು ವೇಳೆಗೆ ಒಂದೊಂದೇ ತಟ್ಟೆಯನ್ನು ವರ್ಗಾಯಿಸಬೇಕು. ಹೀಗೆ ಮಾಡುತ್ತ ಚಿನ್ನದ ತಟ್ಟೆಗಳನ್ನು ಸಂಪೂರ್ಣವಾಗಿ ಪಕ್ಕದ ವಜ್ರದ ದಬ್ಬಳಕ್ಕೆ ವರ್ಗಾಯಿಸಿದಾಗ, ಆ ದಿನ ಪ್ರಳಯ ಸಿದ್ಧ ಎಂದು ಬ್ರಹ್ಮ ನಿರ್ಧರಿಸಿದನಂತೆ. ಇದನ್ನು ರೂಪಿಸಿದವರು ಯಾರೇ ಇರಲಿ, ಇದು ಅವಿಚ್ಛಿನ್ನತೆಯ ಸಾಪೇಕ್ಷ ತತ್ತ್ವವಾಗಿದೆ. ತಟ್ಟೆಗಳ ವರ್ಗಾವಣೆ ಪೂರ್ಣವಾಗುವುದೇ ಇಲ್ಲ. ಏಕೆಂದರೆ, ಮೊದಲನೆಯ ತಟ್ಟೆಯು ವರ್ಗವಾದಮೇಲೆ ಮುಂದಿನ ಒಂದೊಂದು ತಟ್ಟೆಗೂ ವರ್ಗೀಕರಣ ದ್ವಿಗುಣವಾಗುತ್ತ ಹೋಗುತ್ತದೆ, ಏಕೆಂದರೆ, ದೊಡ್ಡ ತಟ್ಟೆ ಚಿಕ್ಕ ತಟ್ಟೆಯ ಮೇಲಿರಬಾರದು.

ಇದು ಮುಗಿಯದ ಕಾರ್ಯ- ಅಂತೆಯೇ ಜಗತ್ತಿನ ಸೃಷ್ಟಿಯೂ.

## ಅವಿಚ್ಛಿನ್ನ ವಿಶ್ವ, ಕಾಲ — ಐನ್‌ಸ್ಟೀನನ ವಾದ

ವಿಶ್ವದ ಬಗ್ಗೆ ಈಗಾಗಲೇ ನಮಗೆ ಎಷ್ಟೋ ವಿಚಾರಗಳು ತಿಳಿದುಬಂದಿವೆ. ಅಂತರಗ್ರಹ ಪ್ರದೇಶಗಳ, ಅಂತರ ತಾರಾ ಪ್ರದೇಶಗಳ ನಿಶ್ಚಿತ ಗುಣಗಳು ನಿಖರವಾಗಿ ತಿಳಿಯದಿದ್ದರೂ ಇವುಗಳ ಸ್ಥಾನ, ರಚನೆ, ಪರಸ್ಪರ ದೂರಗಳ ಬಗ್ಗೆ ಸ್ಥೂಲವಾದ ಅಂಶಗಳು ತಿಳಿದಿವೆ. ಆದರೂ, ಈ ವಿಶ್ವವನ್ನು ವಿವರಿಸುವುದು ಅಸಾಧ್ಯವಾದ ಕಾರ್ಯ. ನಮ್ಮೆಲ್ಲರನ್ನೂ ಸುತ್ತುವರಿದು, ಎಲ್ಲೆಲ್ಲೂ ತಾನೇ ತಾನಾಗಿರುವ ಈ ಅಗೋಚರ 'ಶೂನ್ಯ' ವೇ ವಿಶ್ವ ಎನ್ನಬಹುದು. ಈ ವಿಶ್ವದಲ್ಲಿ ಯಾವರೀತಿಯಲ್ಲಾದರೂ ಸಂಚರಿಸಬಹುದು. ಮೇಲೆ, ಕೆಳಗೆ, ಪಕ್ಕಗಳಿಗೆ, ಮುಂದಕ್ಕೆ, ಹಿಂದಕ್ಕೆ, ಯಾವರೀತಿಯಲ್ಲಾದರೂ ಸಂಚಾರಮಾಡಲು ಇಲ್ಲಿ ತಡೆ ಇಲ್ಲ. ಇದುವರೆಗೆ ಈ ಸಂಚಾರ ಸ್ವಾತಂತ್ರ್ಯಕ್ಕೆ ಮೂರು ಭೌತ ಗುಣಗಳು ಕಾರಣಗಳೆಂದು ತಿಳಿದಿದ್ದೆವು. ಇವು ಉದ್ದ, ಎತ್ತರ, ಅಗಲ; ಈ ಗುಣಗಳು ಒಂದು ವಸ್ತು ವಿಶೇಷದ ರೂಪವನ್ನು ನಿರ್ಧರಿಸುತ್ತವೆ. ಈ ವಸ್ತು ವಿಶೇಷ ಮೂರು ದಿಕ್ಕುಗಳಿಗೆ ಪ್ರಸರಿಸುವುದರಿಂದ ಅದಕ್ಕೆ ರೂಪ ಬರುತ್ತದೆ, ಆಕಾರ ಬರುತ್ತದೆ; ಅದು ಬುದ್ಧಿ ಗ್ರಹಣಕ್ಕೆ ಒಳಗಾಗುತ್ತದೆ. ನಮಗೆ ತಿಳಿದಂತೆ, ವಸ್ತುಗಳಿಗಾಗಲಿ, ಪ್ರದೇಶಗಳಿಗಾಗಲಿ ಪರಸ್ಪರ ಪ್ರಮಾಣಗಳಿರುತ್ತವೆ; ಯಾವುದಾದರೊಂದು ವಸ್ತುವಿನ ವಿಶೇಷ ಗುಣಗಳನ್ನು ನಾನು ವಿವರಿಸುವಾಗ, ಯಾಂತ್ರಿಕವಾಗಿಯೇ ಅದನ್ನು ಇತರ ಸುತ್ತಮುತ್ತಲ ವಸ್ತುಗಳಿಗೆ ಹೋಲಿಸಿಬಿಟ್ಟಿರುತ್ತೇನೆ. ಆದುದರಿಂದಲೇ ವಸ್ತುಪ್ರಮಾಣ ಪರಸ್ಪರ ಹೋಲಿಕೆಯಿಂದಾಗುತ್ತದೆ.— Three Dimensional Materials are defined in relative terms — ಎಂದು ಹೇಳಬಹುದು.

ಹೊಸ ಊರಿಗೆ ಹೋದಾಗ ನನಗೆ ತಿಳಿಯದ ಪ್ರದೇಶದ ಗುರುತು

ಹೇಳಲು ಇತರರು ಪರಸ್ಪರ ಕಟ್ಟಡಗಳ, ವರ್ಗಗಳ ಗುರುತುಗಳನ್ನು ಹೇಳುತ್ತಾರೆ; ಆದರೆ, ನನಗೆ ಬೇಕಾದ ಆ ಪ್ರದೇಶದ ಪರಿಚಯವನ್ನು ಮಾಡಿಕೊಡಲು ಇತರ ಸಮಸ್ಥಾನ (co-ordinates) ಗಳನ್ನು ಬೇಕಾದರೂ ಬಳಸಿಕೊಳ್ಳಬಹುದು.

ಭೂಮಿಯ ಮೇಲೇ ಆಗಲಿ, ಅಂತರಿಕ್ಷದಲ್ಲೇ ಆಗಲಿ ವಸ್ತು ವಿಶೇಷಗಳನ್ನೂ ಅವುಗಳ ದೂರಗಳನ್ನೂ ತಿಳಿಯಬೇಕಾದರೆ 3 ಸಮಸ್ಥಾನಗಳು ಬೇಕಾಗುತ್ತವೆ. ಇವು ಪರಸ್ಪರ ದೂರಗಳಾದರೂ ಆಗಬಹುದು, ಕೋನಗಳಾದರೂ ಆಗಬಹುದು. ಈ ಮೂರು ಸಮಸ್ಥಾನಗಳನ್ನೇ ನಾವು 'ತ್ರಿಪ್ರಮಾಣ ಸಾಪೇಕ್ಷ ತತ್ತ್ವ' (Three Dimensional Visual Theory) ಎನ್ನಬಹುದು.

### ಒಂದು ನಿರ್ದಿಷ್ಟ ವಸ್ತುವಿನ ನಿಲುವನ್ನು ಗೊತ್ತುಪಡಿಸಬಹುದಾದ ಸಮಸ್ಥಾನ ವಿಧಾನಗಳು




| ಅ | ಆ | ಇ |
|---|---|---|
| ಚತುರ್ದಳ ಸಮಸ್ಥಾನಗಳು (ಎಲ್ಲ ಭೌಗೋಳಿಕ ನಿಲುವುಗಳಿಗೂ ಇದನ್ನು ಉಪಯೋಗಿಸಬಹುದು.) | ವರ್ತುಳ ಸಮಸ್ಥಾನ (ಇವುಗಳ ಉಪಯೋಗ ಧ್ರುವ ವಲಯದ ಅಂತರಿಕ್ಷದ ವಸ್ತುವಿಶೇಷಗಳನ್ನು ಗುರುತಿಸುವುದು) | ಸಮಶೀತೋಷ್ಣ ವಲಯಗಳ ಅಂತರಿಕ್ಷವನ್ನು ಗುರುತಿಸಲು ಈ ಸಮಸ್ಥಾನ ಉಪಕಾರಿ |

ಚಿತ್ರ ೧

ಪ್ರಥಮತಃ ನಾವೆಲ್ಲ ತ್ರಿಗಾತ್ರ ಪ್ರಮಾಣದ ಜೀವಿಗಳು. ಆದುದರಿಂದ ನಮಗೆ ಗೋಚರಿಸುವುವೆಲ್ಲ ತ್ರಿಗಾತ್ರ ಪ್ರಮಾಣದವುಗಳಾಗಿಯೇ ಕಾಣುತ್ತವೆ. ಆದುದರಿಂದ ದ್ವಿಗಾತ್ರ, ಏಕಗಾತ್ರವುಳ್ಳ ವಸ್ತುಗಳನ್ನು ನಾವು ಸುಲಭವಾಗಿ ಗುರುತಿಸುತ್ತೇವೆ. ನಮ್ಮ ಊಹಾ ಶಕ್ತಿಗೆ ಮೀರಿದ್ದು ಚತುರ್ಗಾತ್ರ ವಸ್ತುಗಳು. ಈ ಚತುರ್ಗಾತ್ರ, ವಿಶ್ವದಲ್ಲಿ— ಆದಿ ಸೃಷ್ಟಿಯಲ್ಲಿ-ಮಾತ್ರ ಉಳಿದಿದೆ. ನಮಗೆ ಗೋಚರಿಸುವ ಯಾವ ವಸ್ತುವಿನಲ್ಲೂ ಚತುರ್ಗಾತ್ರ ಪ್ರಮಾಣ ರೂಪಿತವಾಗುವುದಿಲ್ಲ. ಒಂದು ಸಮತಲ (plane) ವಾಗಲಿ, ವರ್ತುಲ (sphere) ವಾಗಲಿ, ದ್ವಿಗಾತ್ರ ಪ್ರಮಾಣದ ಯಾವ ವಸ್ತುವೇ ಆಗಲಿ, ಅದು ಪ್ರಮಾಣ ಪೂರಕ (definable)

ವಾಗಿರುತ್ತದೆ. ಅದನ್ನು ಎರಡು ಸಂಕೇತಗಳಿಂದ ಪ್ರಮಾಣಮಾಡಬಹುದು— ದೂರ, ಕೋನ ಇವೆರಡು ಈ ಸಂಕೇತಗಳು.

## ಚತುರ್ಗಾತ್ರ ಸಾಪೇಕ್ಷ ಪ್ರಮಾಣ

ದೃಗ್ಗೋಚರವಾಗುವ ಎಲ್ಲ ವಸ್ತುಗಳಿಗೂ ಮೂರು ಗಾತ್ರಗಳ ಪ್ರಮಾಣ ವಿರುವುದು ನಿರ್ವಿವಾದ. ಇವನ್ನು ಉದ್ದ, ಅಗಲ, ಎತ್ತರ ಎಂದು ಪ್ರತಿಪಾದಿಸಿದ್ದೇವೆ. ಐನ್‌ಸ್ಟೀನನ ಚತುರ್ಗಾತ್ರ ಪ್ರಮಾಣ ವಾದವಿವಾದಗಳಿಗೂ ಸಂಶಯಕ್ಕೂ ರಹಸ್ಯ ಪ್ರಕ್ರಿಯೆಗಳಿಗೂ ಎಡೆ ಕೊಟ್ಟಿದೆ. ತ್ರಿಗಾತ್ರಜೀವಿಗಳಾದ ನಾವು ತ್ರಿಗಾತ್ರ ಸನ್ನಿವೇಶಗಳಲ್ಲೇ ಇದ್ದುಕೊಂಡು, ನಾಲ್ಕನೆಯ ಗಾತ್ರದ ಗುಣಾವಗುಣಗಳನ್ನು ತಿಳಿಯಲಾರೆವು ಎಂಬ ವಾದ ಬೇರೆ ಇದೆ.

ಚತುರ್ಗಾತ್ರ ಊಹಾ ಶಕ್ತಿಗೆ ನಿಲುಕುವಂತಹುದು ಎಂಬ ವಾದವೂ ಇದೆ. ಇದನ್ನು ಮೊದಲನೆಯ ಬಾರಿಗೆ ವಿವರಿಸಿದವನು ಐನ್‌ಸ್ಟೀನ್; ಇವನ ಪ್ರಮಾಣಗಳನ್ನು ತಿಳಿದಿದ್ದೇವೆ (?) ಎಂದು ಹೇಳುವ ವಿಜ್ಞಾನಿಗಳಿದ್ದಾರೆ. ಆದರೆ, ಇಷ್ಟು ಮಾತ್ರ ನಿಜ. ತ್ರಿಗಾತ್ರ ಪ್ರಮಾಣದ ವಸ್ತುಗಳನ್ನು ದ್ವಿಗಾತ್ರ ರೂಪಗಳಾಗಿ ಪರಿವರ್ತಿಸಬಹುದು :



ಚಿತ್ರ ೨

ಗೋಳಾಕಾರದ ವಸ್ತು ಒಂದನ್ನು ತೆಗೆದುಕೊಳ್ಳಿ. ಅದು ಭೂಮಿಯ ಗೋಳವೇ (Globe) ಆಗಿರಲಿ (ಚಿತ್ರ 2); ಅದು ಗಾಜಿನಿಂದ ಮಾಡಲ್ಪಟ್ಟಿದ್ದಾದರೆ

ಇನ್ನೂ ಉತ್ತಮ. ಇದು ತ್ರಿಗಾತ್ರ ಪ್ರಮಾಣದ ಗೋಳ. ಇದಕ್ಕೆ ಉದ್ದ, ಅಗಲ, ಎತ್ತರಗಳಿವೆ. ಈ ಪಾರದರ್ಶಕ ಗೋಳದ ಮೇಲೆ, ಭೂ ಖಂಡಗಳನ್ನು ಬರೆಯ ಲಾಗಿದೆ ಎನ್ನೋಣ; ಒಂದೆಡೆಯಲ್ಲಿ ತೆರೆಯೊಂದನ್ನಿಟ್ಟು, ಇನ್ನೊಂದೆಡೆಯಿಂದ ಬೆಳಕು ಬಿಟ್ಟರೆ, ಈ ಗೋಳದ ನೆರಳು ತೆರೆಯ ಮೇಲೆ ಬೀಳುತ್ತದೆ. ಹೀಗೆ ಬಿದ್ದ ನೆರಳಿನಲ್ಲಿ ಕೆಲವು ಆಕರ್ಷಕ ಸನ್ನಿವೇಶಗಳಿರುತ್ತವೆ. ತೆರೆಯ ಮೇಲಿನ ನೆರಳು ದ್ವಿಗಾತ್ರ ಪ್ರಮಾಣದ್ದು; ಅದಕ್ಕಿರುವುದು ಎರಡೇ ಗುಣಗಳು. ಉದ್ದ+ಅಗಲ, ಅಥವಾ ಆ ನೆರಳಿನ ಆಕಾರದ ಕ್ಷೇತ್ರಫಲ. ಈಗ ತ್ರಿಗಾತ್ರ ವಸ್ತುವನ್ನು ದ್ವಿಗಾತ್ರ ಪ್ರಮಾಣಕ್ಕಿಳಿಸಿದ್ದಾಯಿತು; ಆದರೆ, ಇಂತಹ ದ್ವಿಗಾತ್ರ ಪ್ರಮಾಣದ ನೆರಳಿನಲ್ಲೂ ತ್ರಿಗಾತ್ರದ ಮೂಲ ರೂಪದ ಗುಣಗಳನ್ನು, ಸೂಕ್ಷ್ಮಮತಿಯಾದವನು ಕಾಣಬಹುದು.

ನನ್ನ ಉದಾಹರಣೆಯನ್ನೇ ತೆಗೆದುಕೊಳ್ಳಿ: ಪಾರದರ್ಶಕ ಭೂಗೋಳದ ಮೇಲೆ ದೇಶಗಳು, ಖಂಡಗಳು ರೂಪಿತವಾಗಿವೆ. ಈ ಗೋಳ ತ್ರಿಗಾತ್ರದ್ದು. ಈ ಗೋಳದ ಮೇಲೆ ನ್ಯೂಯಾರ್ಕ್ ನಗರದಿಂದ ಚೈನಾದ ಹಾಂಕಾಂಗ್ ನಗರಕ್ಕೆ ಒಂದು ಬಿಂದು ಚಲಿಸಬೇಕು. ನ್ಯೂಯಾರ್ಕ್ ನಗರದಿಂದ ಹೊರಟ ಬಿಂದು ಭೂ ಪ್ರದಕ್ಷಿಣೆ ಮಾಡುತ್ತ, ಆ ಗೋಳದ ಸುತ್ತ ತಿರುಗುತ್ತ, ಪ್ರತಿ ಭಾಗದ ಹಾಂಕಾಂಗಿಗೆ ಬರುತ್ತದೆ. ಆದರೆ ಇದೇ ಬಿಂದು, ನೆರಳಿನಲ್ಲಿ ಒಂದು ಅಂಗುಲ ಕೂಡ ಮುಂದೆ ಹೋಗುವುದಿಲ್ಲ. ಇದಕ್ಕೆ ಕಾರಣ ಇಷ್ಟೆ— ಗೋಳ ಪಾರದರ್ಶಕವಾದುದರಿಂದ ಒಂದು ಭಾಗದ ನೆರಳು ಇನ್ನೊಂದು ಭಾಗದ ನೆರಳಿನ ಮೇಲೇ ಬಿದ್ದಿದೆ. ಆದುದ ರಿಂದ, ಮೂಲ ರೂಪದ ಗೋಳದಲ್ಲಿ ಬಿಂದು ಒಂದು ಕಡೆಯಿಂದ ಇನ್ನೊಂದೆಡೆಗೆ ಹೋಗಿದ್ದರೂ ನೆರಳಿನಲ್ಲಿ ಕೇವಲ ½ ಅಂಗುಲ ಚಲಿಸುತ್ತದೆ. ಇಷ್ಟಾದರೂ, ಗೋಳದ ಒಂದು ಭಾಗ ಬೆಳಕಿಗೆ ಹತ್ತಿರವಾಗಿದ್ದು, ಇನ್ನೊಂದು ಭಾಗ ದೂರವಾಗಿ ರುವುದರಿಂದ ಈ ಎರಡು ಭಾಗಗಳ ನೆರಳಿನಲ್ಲಿ ವ್ಯತ್ಯಾಸ ಕಂಡುಬರುತ್ತವೆ; ಬೆಳಕಿಗೆ ಸಮೀಪವಾಗಿರುವ ಗೋಳದ ಭಾಗ ನಿಸ್ಪಷ್ಟವಾಗಿಯೂ, ದೂರವಾಗಿರುವ ಭಾಗ ಮಸುಕಾಗಿಯೂ ಕಾಣುತ್ತದೆ. ಊಹಾಶಕ್ತಿಯುಳ್ಳವನು ಹೀಗೆ ನೆರಳಿನ ಸೂಕ್ಷ್ಮ ಪರೀಕ್ಷೆಯಿಂದಲೇ ಮೂಲ ರೂಪದ ತ್ರಿಗಾತ್ರವನ್ನು ಗ್ರಹಿಸಿಕೊಳ್ಳುತ್ತಾನೆ.

ಇದೇ ಪ್ರಯೋಗವನ್ನು ಚತುರ್ಗಾತ್ರದ ವಿಶ್ವಕ್ಕೂ ಅನ್ವಯಿಸಬಹುದು ಎಂಬುದು ಐನ್‌ಸ್ಟೀನನ ವಾದ.

ಎಂದ ಮೇಲೆ, ವಿಶ್ವಸೃಷ್ಟಿ ಚತುರ್ಗಾತ್ರವುಳ್ಳದಾದ್ದರಿಂದ ಅದರಲ್ಲಿ ಅಡಕ ವಾಗಿರುವ ತ್ರಿಗಾತ್ರ ವಸ್ತು ವಿಶೇಷಗಳ (ಉದಾ. ಭೂಮಿ, ಇತರ ಗ್ರಹಗಳು, ನಕ್ಷತ್ರಗಳು ಇತ್ಯಾದಿ.) ಮೇಲೆ ಅದರ ಪ್ರಭಾವ, ಪರಿಣಾಮಗಳಿದ್ದೇ ಇರುತ್ತವೆ.

ಸೂಕ್ಷ್ಮಮತಿ ಇವುಗಳನ್ನು ಕಂಡುಕೊಳ್ಳುವುದೊಂದೇ ಉಳಿದಿದೆ ಎಂದು ಐನ್‌ಸ್ಟೀನನು ವಾದಿಸುತ್ತಾನೆ.

### ವಿಶ್ವ ವಿಕಾಸ

ಚತುರ್ಗಾತ್ರವುಳ್ಳ ಇಂತಹ ಬೃಹದ್ ವಿಶ್ವ 'ವಿಕಾಸ' ವಾಗುತ್ತಿದೆ ಎಂಬ ಮತ್ತೊಂದು ಸಿದ್ಧಾಂತ ಈ ಸಮಸ್ಯೆಯನ್ನು ಮತ್ತಷ್ಟು ತೊಡಕಾಗಿ ಮಾಡಿದೆ. ಇಂದಿನ ವಿಶ್ವ ನಾಳೆ ಎರಡರಷ್ಟು ವಿಕಾಸವಾಗಿ, ಬೆಳೆದಿರುತ್ತದೆ. ವಿಶ್ವ ವಿಕಾಸ ವಾದಕ್ಕೆ ಪುಷ್ಟಿಕೊಡುವ ನಾಲ್ಕಾರು ಸನ್ನಿವೇಶಗಳು ಖಗೋಳ ವಿಜ್ಞಾನಿಗಳಿಗೆ ತಿಳಿದುಬಂದಿವೆ. ಈ ಅಂಶ ನಮಗೆ ಸ್ಪಷ್ಟವಾಗಬೇಕಾದರೆ, ಇಂದಿನ ವಿಶ್ವದ ಆಯ ಕಟ್ಟು ನಿರ್ಧಾರವಾಗಬೇಕು. ಅದರ ಅಂತರಗಳ ಅಳತೆಯಾಗಬೇಕು. ಇದೇ ಇನ್ನೂ ದೊಡ್ಡ ಸಮಸ್ಯೆಯಾಗಿ ಕುಳಿತಿದೆ.

ವಿಶ್ವದ ಜಗತ್ತುಗಳ, ತಾರೆಗಳ (ಒಂದೊಂದು ತಾರೆಯೂ ಒಂದೊಂದು ಮಹಾ ನಕ್ಷತ್ರ ಎಂಬುದು ಸಿದ್ಧಪಟ್ಟಿದೆ) ನಡುವಿನ ದೂರಗಳನ್ನು ಅಳೆಯುವುದು ಖಗೋಳ ವಿಜ್ಞಾನದ ಒಂದು ಮುಖ್ಯ ಪರಿಶೋಧನೆ. ಇವುಗಳ ದೂರಗಳನ್ನು ಅಳೆಯಬೇಕೆಂಬ ಮಹತ್ವಾಕಾಂಕ್ಷೆ ಬಹಳಕಾಲದಿಂದಿದ್ದರೂ, ಇದು 1838 ರಲ್ಲಿ ಜರ್ಮನ್ ವಿಜ್ಞಾನಿಯಾದ ಬೆಸ್ಸೆಲ್ಲನ ಕಾಲದಲ್ಲಿ ಪ್ರಯೋಗರೂಪಕ್ಕೆ ಬಂತು. 'ಎರಡು ಕೋನ ಒಂದು ಬಾಹುವಿನಿಂದ ತ್ರಿಭುಜ ಒಂದು ರಚಿತವಾದರೆ, ಮಿಕ್ಕೆರಡು ಬಾಹುಗಳನ್ನು ತಿಳಿಯಬಹುದು' ಎಂಬ ಅಂಶವನ್ನು ಉಪಯೋಗಿಸಿಕೊಂಡು ಬೆಸ್ಸೆಲ್ ಅತಿ ದೂರದ ನಕ್ಷತ್ರಗಳ ದೂರವನ್ನು ಅಳೆಯಲು ಪ್ರಯತ್ನಿಸಿದ.

ಚಿತ್ರ ೩
ಬೆಸ್ಸೆಲ್ಲನ ವಸ್ತು ಸ್ಥಾನಾಂತರ ಚಲನೆಯಿಂದ (Parallax) ದೂರಗಳನ್ನು ಅಳೆಯುವ ವಿಧಾನ



ಬೆಸ್ಸೆಲ್ಲನ ಪ್ರಯೋಗಕ್ಕೆ ಇಡಿಯ ಅಂತರಿಕ್ಷವೇ, ಸೂರ್ಯ ಭೂಮಿಗಳೇ ಪ್ರಯೋಗಶಾಲೆಯಾಗಬೇಕಾಯಿತು ( ಚಿತ್ರ 3 ) ; ಭೂಮಿ ಸೂರ್ಯನಿಂದ ಇರುವ ಅಂತರವನ್ನೂ ಅದು ಸೂರ್ಯನ ಸುತ್ತ ಚಲಿಸುವ ಕ್ಷೇತ್ರಫಲವನ್ನೂ ಸಮತಲ ಬಾಹುವಾಗಿಟ್ಟುಕೊಂಡು (Plane of the Ecliptic taken as the side of the triangle), ಜೂನ್ ಮತ್ತು ಜನವರಿ ತಿಂಗಳುಗಳಲ್ಲಿ ನಕ್ಷತ್ರ ಒಂದರ ಕೋನವನ್ನು ಅಳೆದನು. ಜೂನ್ ತಿಂಗಳಿನ ಭೂಮಿಯ ನಿಲುವಿಗೆ ಜನವರಿ ತಿಂಗಳ ನಿಲುವು ಅಭಿಮುಖವಾಗಿರುತ್ತದೆ (Opposite). ಆದುದರಿಂದ ಈ ಎರಡು ತಿಂಗಳುಗಳಲ್ಲಿ ನಕ್ಷತ್ರ ಒಂದರ ಕೋನವನ್ನು ಅಳೆದರೆ, ಒಂದೇ ಬಾಹುವಿನಿಂದ ಅಳೆದ ಎರಡು ಕೋನಗಳಾಗುತ್ತವೆ. ಇವಿಷ್ಟು ವಿವರದಿಂದ ತ್ರಿಭುಜ ಒಂದು ರಚಿತವಾಗುತ್ತದೆ; ಅಲ್ಲದೆ ಭೂಮಿಯ ವಾರ್ಷಿಕ ಚಲನೆಯಿಂದಾಗಿ ನಕ್ಷತ್ರ ಸ್ಥಾನಾಂತರ ಹೊಂದುತ್ತದೆ.

ಬೆಸ್ಸೆಲ್ ತನ್ನ ಪ್ರಯೋಗವನ್ನು ' ಮಹಾಶ್ವಾನ ' ಎಂಬ ನಕ್ಷತ್ರ ರಾಶಿಯಲ್ಲಿ ಇರುವ ಸಿಗ್ನಿ 61 ಎಂಬ ನಕ್ಷತ್ರದ ಮೇಲೆ ನಡೆಸಿದ. 6 ತಿಂಗಳ ಅಂತರದಲ್ಲಿ ಸಿಗ್ನಿ 61 ಅದರ ಹಿಂಬದಿಯ ಮೇಲೆ 0.6 ಸೆಕೆಂಡುಗಳಷ್ಟು ಸ್ಥಾನ ಪಲ್ಲಟ ಹೊಂದಿತ್ತು. ಈ ಸ್ಥಾನಪಲ್ಲಟದ ಮೇಲೆ, ಸಿಗ್ನಿ 61 ಎಂಬ ಈ ನಕ್ಷತ್ರ ಅಂತರಿಕ್ಷದಲ್ಲಿ ಸೌರವ್ಯೂಹದಿಂದ 103,000000000000 ಕಿಲೋಮೀಟರುಗಳ ದೂರದಲ್ಲಿ ಇರುವುದೆಂದು ಸಿದ್ಧಪಡಿಸಿದ.

ಭೂಮಿಯಿಂದ ಸೂರ್ಯ ಸರಾಸರಿ 93,000,000 ಮೈಲಿಗಳ ದೂರದಲ್ಲಿದ್ದಾನೆ; ಸಿಗ್ನಿ ಸೂರ್ಯನಿಗೆ 690,000 ರಷ್ಟು ಪಾಲು ದೂರದಲ್ಲಿದೆ ಎಂಬುದು ನಿರ್ಧಾರವಾಯಿತು. ಈ ಅಂತರ ಊಹೆಗೆ ನಿಲುಕದು.

ಹೀಗಾಗಿ ಅಂಕಿಗಳಿಗೆ ನಿಲುಕದ ವಿಶ್ವವನ್ನು ಕಾಲ ಪ್ರಮಾಣದಲ್ಲಿ ನಿಷ್ಕೃಷ್ಟಗೊಳಿಸುವುದು ಪ್ರಯೋಗಕ್ಕೆ ಬಂತು. ಬೆಳಕಿನ (ವಿದ್ಯುತ್) ಕಿರಣಗಳು ಪ್ರಚಂಡ ವೇಗದಲ್ಲಿ ಚಲಿಸುತ್ತವೆ. ಇವು ಒಂದು ಸೆಕೆಂಡಿಗೆ 1,86,000 ಮೈಲಿಗಳ ಅಂತರವನ್ನು ದಾಟಬಲ್ಲುವು. ಹೀಗೆ ಅಲ್ಪ ಕಾಲದಲ್ಲಿ ಮಹತ್ತಾದ ದೂರಗಳನ್ನು ಸಂಚರಿಸಬಲ್ಲವಾದುದರಿಂದ, ವಿದ್ಯುತ್ ವೇಗವನ್ನೇ ಅಳತೆ ಕೋಲಾಗಿ ಇಟ್ಟುಕೊಂಡು ಮಹಾಂತರಗಳನ್ನು ಕಾಲ ಪ್ರಮಾಣದಲ್ಲಿ ಹೇಳಬಹುದಾಗಿದೆ. ಈ ಕಾಲ ಪ್ರಮಾಣವನ್ನು ' ಜ್ಯೋತಿರ್ವರುಷ ' ಎಂದು ಕರೆಯುತ್ತೇವೆ.

ಸೂರ್ಯನಿಗೂ ಭೂಮಿಗೂ ಇರುವ 93,000,000 ಮೈಲಿಗಳ ಅಂತರವನ್ನು ಜ್ಯೋತಿ ಕೇವಲ 8 ನಿಮಿಷಗಳಲ್ಲಿ ದಾಟ ಬಲ್ಲುದು; ಇದೇ ಜ್ಯೋತಿ ಸೌರವ್ಯೂಹಕ್ಕೆ ತೀರ ಸಮೀಪವರ್ತಿಯಾದ ಸಿಗ್ನಿ 61 ರಿಂದ, 11 ವರುಷಗಳ ಕಾಲದ


ಅತಿ ಸಮೀಪದ ಬ್ರಹ್ಮಾಂಡ 680,000 ಜ್ಯೋತಿರ್ವರ್ಷ
ಅತಿ ಸಮೀಪದ ನಕ್ಷತ್ರ 4.3 ಜ್ಯೋತಿರ್ವರ್ಷ
ಸೂರ್ಯ - 8 ನಿಮಿಷ
ಚಂದ್ರ 1.3 ಸೆಕೆಂಡು
ಭೂಮಿ

ಚಿತ್ರ ೪

ಮೇಲೆ ಭೂಮಿಗೆ ತಲಪುತ್ತದೆ.

ಇದು ಸಮೀಪವರ್ತಿಯಾದ 'ಸಿಗ್ನಿಯ' ಮಾತು. ಸಿಗ್ನಿಯಂತಹ ಅತಿ ಸಮೀಪದ ನಕ್ಷತ್ರಗಳು ಕೆಲವು ಮಾತ್ರ ಇವೆ. ತೀರ ದೂರದಲ್ಲಿರುವ ನಕ್ಷತ್ರಗಳೇ ಹೆಚ್ಚು.

ಕಳೆದ ಶತಮಾನದಲ್ಲಿ ಹೆಸರಾಂತ ಬ್ರಿಟಿಷ್ ಖಗೋಳ ವಿಜ್ಞಾನಿ ವಿಲಿಯಂ ಹರ್ಷಲನು, ತಾನೇ ರಚಿಸಿದ ದೂರದರ್ಶಕ ಯಂತ್ರದಲ್ಲಿ ಅಂತರಿಕ್ಷವನ್ನು ವೀಕ್ಷಿಸಿದ. ನೂರಾರು ನಕ್ಷತ್ರಗಳು ಅಂತರಿಕ್ಷದಲ್ಲಿ ಮಬ್ಬಾಗಿ ಪ್ರಸರಿಸಿಕೊಂಡಿರುವ 'ಆಕಾಶ ಗಂಗೆ' (The Milky Way) ಗೆ ತೀರ ಸಮೀಪವಾಗಿರುವುದನ್ನು ಕಂಡುಕೊಂಡ. 'ಆಕಾಶ ಗಂಗೆ' ಎಂಬುದು ನಕ್ಷತ್ರಗಳ ಮಹಾ ಗುಚ್ಛವೆಂದೂ ಸೂರ್ಯ ಈ ಮಹಾಗುಚ್ಛದ ಒಂದೆಡೆಯಲ್ಲಿ ಇರುವನೆಂದೂ ಇಂತಹ ಕೋಟ್ಯಂತರ ಗುಚ್ಛಗಳೂ ಬ್ರಹ್ಮಾಂಡಗಳೂ ವಿಶ್ವದಲ್ಲಿ ಮೂಲೆ ಮೂಲೆಯಲ್ಲೂ ಪ್ರಸರಿಸಿಕೊಂಡಿವೆ ಎಂದೂ ಇತ್ತೀಚಿನ ಪರಿಶೋಧನೆಗಳಿಂದಲೂ ಬೃಹದ್ ಚಕ್ಷುಷ ಯಂತ್ರಗಳಿಂದಲೂ ಸ್ಪಷ್ಟವಾಯಿತು.

ಇಂತಹ ಬ್ರಹ್ಮಾಂಡಗಳು ತಂಡೋಪತಂಡವಾಗಿ ವಿಕಾಸವಾಗುತ್ತಿವೆ; ಈ ಬ್ರಹ್ಮಾಂಡಗಳಲ್ಲಿ ಒಂದಾದ 'ಆಕಾಶ ಗಂಗೆ' ತನ್ನಲ್ಲಡಕವಾಗಿರುವ ಮಹಾತಾರೆಗಳೊಡನೆ ಸೂರ್ಯನನ್ನೂ, ಸೌರವ್ಯೂಹವನ್ನೂ (ಇದರೊಡನೆ ಭೂಮಿಯೂ ನಾವೂ ಸೇರುತ್ತೇವೆ) ಹೊತ್ತು ತಿರುಗುತ್ತಿದೆ. ಈ ಬ್ರಹ್ಮಾಂಡಗಳ, ತಾರಾಗುಚ್ಛಗಳ ಸೃಷ್ಟಿಯ ಬಗ್ಗೆ ನಮಗೆ ಇನ್ನೂ ಏನೂ ತಿಳಿಯದು.

ಡಾ|| ಹಬ್ಬಲ್ ಅವರ ತತ್ತ್ವದ ಪ್ರಕಾರ ಅವಿಚ್ಛಿನ್ನ ವಿಶ್ವದಲ್ಲಿ ತಾರಾಗುಚ್ಛಗಳು ಒಂದೇ ಬಗೆಯಲ್ಲಿ, ಸಮಾನಾಂತರಗಳಲ್ಲಿ ಚೆದುರಿಹೋಗಿವೆ; ಇವುಗಳ ಪೈಕಿ ಸೂರ್ಯನಿರುವ 'ಆಕಾಶ ಗಂಗೆ' ತೀರ ಸಣ್ಣ ತಾರಾಗುಚ್ಛ ಎಂದು ಪರಿಗಣಿಸಲಾಗಿವೆ. ಇತ್ತೀಚಿನ ಪರಿಶೋಧನೆಗಳಿಂದ ಇವುಗಳ ನಡುವೆ 500,000,000 ಜ್ಯೋತಿರ್ವರುಷಗಳ ಅಂತರ ಇರುವುದು ತಿಳಿಯಬಂದಿದೆ.

ಇದು ಚಾಕ್ಷುಷ ಯಂತ್ರಗಳಿಂದ ದೃಗ್ಗೋಚರವಾಗುವ ವಿಶ್ವದ ವಿಭಾಗದ ಮಾತಾಯಿತು; ಇನ್ನು ಈ ಯಂತ್ರಗಳ ಶಕ್ತಿಯನ್ನೂ ಮೀರಿದ ಅಂತರಗಳು ಎಷ್ಟೋ!

ಈ ಅವಿಚ್ಛಿನ್ನ ಜಗತ್ತಿನಲ್ಲಿ ಮಾನವಕೋಟಿ, ಅವನ ವೇದಿಕೆ — ಭೂಮಿ, ತೃಣಸಮಾನವಾಗುತ್ತವೆ.

—ಐ. ಶ್ರೀ. ಪ್ರಸಾದ್.

# ಪ್ರಾಚೀನ ಭಾರತೀಯರಲ್ಲಿ ಶಸ್ತ್ರ ಚಿಕಿತ್ಸೆ

ಕ್ರಿ. ಶ. 400 ರ ಸುಮಾರಿನಲ್ಲಿದ್ದ ಪ್ರಖ್ಯಾತ ಶಸ್ತ್ರ ಚಿಕಿತ್ಸಜ್ಞ ಶುಶ್ರುತ ವರ್ಣಿಸಿರುವ ಸಿಂಹಮುಖ ಸ್ವಸ್ತಿಕದ ಯಥಾವತ್ತಾದ ಮಾದರಿಯಲ್ಲೇ ರಚಿತ ವಾಗಿದೆ, ಆಧುನಿಕ ಐರೋಪ್ಯ ಶಸ್ತ್ರ ಶಾಸ್ತ್ರಜ್ಞರು ಉಪಯೋಗಿಸುವ ಶಸ್ತ್ರ ಚಿಕಿತ್ಸೆಯ ಚಿಮ್ಮಟ. ಶಸ್ತ್ರ ಚಿಕಿತ್ಸೆನಡೆಸುವಾಗ ನರಗಳನ್ನು ಬಲವಾಗಿ ಹಿಡಿಯಲು ಇದು ಅತ್ಯಗತ್ಯ. ಆಧುನಿಕ ಶಸ್ತ್ರ ವೈದ್ಯರು ಕೂಡ ಇದನ್ನು 'ಲಯನ್ ಫಾರ್ಸೆಪ್ಸ್' (ಸಿಂಹ ಮುಖದ ಚಿಮ್ಮಟ) ಎಂದೇ ಕರೆಯುತ್ತಾರೆ.

ಪ್ರಾಚೀನ ಭಾರತದ ಕೀರ್ತಿ ಕಳಶವಾಗಿದ್ದ ಶುಶ್ರುತ 127 ಬಗೆಯ ಶಸ್ತ್ರ ಚಿಕಿತ್ಸಾ ಉಪಕರಣಗಳನ್ನು ಹೆಸರಿಸಿದ್ದಾನೆ! ಅವುಗಳಲ್ಲಿ ಒಂದು, ಕೂದಲನ್ನು ಮೇಲಿನಿಂದ ಕೆಳಕ್ಕೆ ಸೀಳಬಲ್ಲಂತಹುದು! ಪ್ರಾಚೀನ ಭಾರತೀಯರು ಯಶಸ್ವಿಯಾಗಿ ನಡೆಸುತ್ತಿದ್ದ 'ರ್‍ಹಿನಾ ಪ್ಲಾಸ್ಟಿ' ಎಂಬ ಶಸ್ತ್ರ ಚಿಕಿತ್ಸೆಯನ್ನು ಆಧುನಿಕ ವೈದ್ಯರು ಈಗ ಅನುಸರಿಸುತ್ತಿದ್ದಾರೆ. ವಿರೂಪ ಹೊಂದಿದ ಮೂಗು, ಕಿವಿಗಳನ್ನು ಸರಿಪಡಿಸುವುದು ಅಥವಾ ಹೊಸದನ್ನು ಮಾಡಿ ಸೇರಿಸುವುದು ಈ ಶಸ್ತ್ರ ಚಿಕಿತ್ಸೆಯಿಂದ ಸಾಧ್ಯ.

—ಜಾನ್ .ಓ. ಲಂಡನ್ ಪತ್ರಿಕೆ

# ಸಂಪಾದಕೀಯ

ಕಳೆದ ವರ್ಷದಂತೆ ಈ ಸಲವೂ ವಿಜ್ಞಾನ ವಿಶೇಷಾಂಕ ಪ್ರಕಟವಾಗುತ್ತಿದೆ- ಇನ್ನೂ ಪುಷ್ಟವಾಗಿ. ವಿದ್ವಾಂಸರೆಲ್ಲರೂ ಕೃಪೆಯಿಟ್ಟು ಸಹಕರಿಸಿ ಹೆಚ್ಚು ಸಂಖ್ಯೆಯಲ್ಲಿ ಲೇಖನಗಳನ್ನು ಕೊಟ್ಟಿದ್ದಾರೆ; ಕನ್ನಡ ಭಾಷೆ ಎಂತಹ ಗಹನವಾದ ವಿಜ್ಞಾನ ವಿಷಯಕ್ಕಾದರೂ ಯಶಸ್ವಿಯಾದ ಮಾಧ್ಯಮವಾಗಬಹುದು ಎಂಬುದನ್ನು ಸಾಧಿಸಿ ತೋರಿಸಿದ್ದಾರೆ. ಈ ಮಹನೀಯರಿಗೆಲ್ಲರಿಗೂ ಸಂಪಾದಕ ಮಂಡಲಿ ಅತ್ಯಂತ ಕೃತಜ್ಞವಾಗಿದೆ.

ಕೆಲವು ಲೇಖನಗಳನ್ನು ಸ್ಥಳಾಭಾವದಿಂದಾಗಿ ಈ ಸಂಚಿಕೆಯಲ್ಲಿ ಪ್ರಕಟಿಸಲಾಗಲಿಲ್ಲ. ಪ್ರಬುದ್ಧ ಕರ್ಣಾಟಕದ ಮುಂದಿನ ಸಂಚಿಕೆಗಳಲ್ಲಿ ಅವುಗಳನ್ನು ಕ್ರಮವಾಗಿ ಪ್ರಕಟಿಸುತ್ತೇವೆ.

ಮುಂದೆ 'ಪ್ರಬುದ್ಧ ಕರ್ಣಾಟಕ'ವು ಸಾಹಿತ್ಯಾಂಕ ಮತ್ತು ವಿಜ್ಞಾನಾಂಕ ಎಂದು ಎರಡು ಬೇರೆ ಸಂಚಿಕೆಗಳಲ್ಲಿ ಪ್ರಕಟವಾಗಬೇಕೆಂಬ ಯೋಜನೆ ಇದೆ. ಆ ಯೋಜನೆ ಬೇಗನೆ ಕಾರ್ಯರೂಪಕ್ಕೆ ಬರುವಂತಾಗಲೆಂದು ಹಾರೈಸುತ್ತೇವೆ.